

ಡಾಕ್ಟರ್ ಹೆಚ್. ನರಸಿಂಹಶಾಸ್ತ್ರಿ.

**Dr. H. Narasimha Sastry,**

*Kaviratna Ayurveda Vidwan "(Mysore Govt.)"*
*Ayurveda Vidya Vachaspathi,*
*Examiner Mysore Govt., Ayurveda Vidwat Exams, etc.,*
*Ex-President, Karnataka Ayurvedic conference at Humpi.*

# INTRODUCTION.

I feel quite happy to comply with the request made to me to write an Introduction to the work "ಹಿಂದು-ಯುನಾನಿ ಅನುಭವ ವೈದ್ಯರತ್ನ" A Practical Compendium of Hindu Medicine with Unani Remedies by PANDIT B. R. GOVINDARAJULU NAIDU who needs no introduction to the public and much less from me as he is already very popular throughout the Kannada Country, for a number of years, through his former Vaidyaki and other publications.

I know this gentleman from my boyhood. He, having studied his subject-Indigenous medicine thoroughly well under eminent Vaidyas and Hakims, has been practising it for about three decades. He is very popular not only here in the City of Bangalore and Cantonment but also in great demand in hundreds of villages all-round this place. He is very much devoted to this science. In his collection of books, he has got numerous other publications on the Science of Ayurveda and Unani in Kannada, Telugu and Tamil. As a Vaidya, he is very well maintaining the tradition in the line being skilful, persevering, painstaking and being very kind towards the patients.

As for the present work, it richly deserves its name. Here, he has treated briefly the subject on the Human Body and its functions to such extent only as would be useful to the practitioner in the

country. He has described the system of pulse and allied subjects as to the knowledge of disease and the methods of treatment as understood and practised by the successful followers of this system. Then, he has described in extenso the art and science of pharmacy—the art of the preparation of medicine, both mineral and vegetable, on sastric and practical lines which will be found very useful by the practitioner.

Under diseases, treated in separate chapters following on the lines of standard sastric works, numerous, popular, useful, effective and rare prescriptions have been given. These "ಅನುಭೂತ ಪ್ರಯೋಗ" 's or the recipes have been tried and tested and found efficacious and quite harmless, for a number of generations by eminent Vaidyas and Hakims in their extensive practice. This able compiler deserves every praise for having brought out this volume revealing the medicaments used successfully in their practice by our Vaidyas, although much maligned by our adversaries as "Native Nostrums" "Secret Remedies" "Quack Medicines"

In these days of "Revival of India and Her Culture" "Economic Reconstruction of India", "Rural Reconstruction in India" "Swaraj for India", the health of the Nation like that of a person is the most important of all the matters of human concern and in determining "The National Health Policy for India", "Ayurveda" should play a most important part.

I opine, this publication serves a very useful purpose in fighting out the demon of disease-our common enemy, in every country and climate.

I wish this book a wide popularity as a practical guide of medicine in every home and with every practitioner and as a hand book for students of the Schools of Indian Medicine. I congratulate once more the learned author PANDIT B R. GOVINDARAJULU NAIDU for his valuable work.

Dr. H. NARASIMHA SASTRY,

*Kaviratna Ayurveda Vidwan "(Mysore Govt.)"*
*Ayurveda Vidya Vachaspathi,*
*Examiner Mysore Govt., Ayurveda Vidwat Examinations, etc.*
*Ex-President, Karnataka Ayurvedic conference, Humpi.*





ಪಂಡಿತ ಸಿ. ಸುಬ್ಬಣ್ಣಾಚಾರ್ಯ.

**Pandit C. Subbanna Charya**



# ಉಪೋದ್ಘಾತ.

ಮ॥ ರಾ॥ ಬೆಂಗಳೂರು ಹಲಸೂರು ಪೇಟೆ ಪಂಡಿತ ಬಿ. ಆರ್. ಗೋವಿಂದ ರಾಜುಲು ನಾಯುಡುರವರು ಈಚೆಗೆ ಬರೆದು ಮುದ್ರಿಸಿ ನನ್ನ ಅಭಿಪ್ರಾಯಕ್ಕಾಗಿ ಕಳುಹಿಸಿರುವ "ಹಿಂದು-ಯುನಾನಿ ಅನುಭವ ವೈದ್ಯರತ್ನ" ವೆಂಬ ಪುಸ್ತಕ ವನ್ನು ಆಮೂಲಾಗ್ರವಾಗಿ ಓದಿದೆನು.

ಇದಕ್ಕೆ ಮಹಾರಾಜಶ್ರೀ ಡಾಕ್ಟರ್ H. ನರಸಿಂಹ ಶಾಸ್ತ್ರಿಗಳು ಈ ಪುಸ್ತಕ ಬರೆಯುವ ಕಾಲದಲ್ಲಿ ಅನೇಕ ಸಲಹೆಗಳನ್ನು ಕೊಟ್ಟದ್ದಲ್ಲದೆ ಈ ಪುಸ್ತಕವನ್ನು ಪರಿಶೋಧಿಸಿರುವುದಾಗಿಯೂ, ಗ್ರಂಥಕರ್ತರು—ತಮ್ಮ ಪೀಠಿಕೆಯಲ್ಲಿ ಉದಹರಿ ಸಿರುತ್ತಾರೆ.

ಇದರಲ್ಲಿ ಅನುಭವದಿಂದ ಕೂಡಿದ ಉಪಯುಕ್ತವಾದ ಆಯುರ್ವೇದ ವಿಷ ಯಗಳು ಶೇಖರಿಸಲ್ಪಟ್ಟಿವೆ. ಅನುಭವಕ್ಕೆ ಬಂದಿರುವ ಅನೇಕ ಔಷಧಯೋ ಗಗಳು ಮತ್ತೊಬ್ಬರಿಗೆ ತಿಳಿಸದೆಯೂ ಪುಸ್ತಕರೂಪದಲ್ಲಿ ಶೇಖರಿಸಲ್ಪಡದೆಯೂ, ಪ್ರಜಾವಲಂಬನಕ್ಕೆ ಬಾರದೆ ಆಯುರ್ವೇದ ವಿಚಾರವು ಖಿಲವಾಗಿ ಹೋಗುತ್ತಿ ರುವುದು ಎಲ್ಲರಿಗೂ ವಿದಿತವಾದ ವಿಷಯವೆ. ಆಯುರ್ವೇದವೆಂಬ ವೈದ್ಯಶಾಸ್ತ್ರ ದಲ್ಲಿ ಹೇಳಲ್ಪಟ್ಟಿರುವ ಅನೇಕ ಸ್ಥೂಲವಾದ ಯೋಗಗಳು ಅನುಭವ ವೈದ್ಯ ದಲ್ಲಿ ಸೂಕ್ಷ್ಮದಲ್ಲಿಯೇ ಸಿದ್ಧಿಸಲ್ಪಡುತ್ತವೆ. ಹೇಗೆಂದರೆ:—ಜ್ಯೋತಿಷ್ಯ, ವೈದ್ಯ, ಯೋಗ ಇವುಗಳು ಅನುಭವಸ್ಥರ ಮುಖದಿಂದ ಬರುವುದು ಶ್ರೇಷ್ಠತಮ ವೆಂತ ಹಿರಿಯರು ಹೇಳುವರು.

ಈ ಗುರಿಗಳನ್ನು ತಮ್ಮ ಗಮನದಲ್ಲಿಟ್ಟುಕೊಂಡು ಈ ಗ್ರಂಥಕರ್ತರು ಆಯುರ್ವೇದ ಪ್ರಪಂಚದಲ್ಲಿ "ಅಳಿಲು ಭಕ್ತಿ ಮಳಲು ಸೇವೆ" ಎಂಬಂತೆ ತಮ್ಮ ಸೇವೆಯನ್ನು ಭಕ್ತಿಯಿಂದ ಸಲ್ಲಿಸಿರುವ ಮ॥ ರಾ॥ ನಾಯುಡುಯವರು ತುಂಬಾ ಸ್ತೋತ್ರಾರ್ಹರು. ಈ ಪುಸ್ತಕದ ವಿಚಾರದಲ್ಲಿ ನನ್ನ ಅಭಿಪ್ರಾಯವನ್ನು ಕೇಳಿರುವುದನ್ನು ನೋಡಿದರೆ, ಇವರಿಗೆ ಸಂಸ್ಕೃತ ಮತ್ತು ಆಂಗ್ಲ ಭಾಷಾ ಪರಿ ಚಯಸ್ಥರು, ಭಿಷಕ್‌ಚೂಡಾಮಣ್ಯೇತ್ಯಾದಿ ಬಿರುದಾವಳಿ ವಿರಾಜಮಾನರಾದ, ಡಾ॥ H. N. ಶಾಸ್ತ್ರಿಗಳವರ ಸಹಾನುಭೂತಿಯು ದೊರೆತಿರುವುದೊಂದೆ ಈ

ಪುಸ್ತಕ ಪ್ರಕಾಶಕ್ಕೆ ಸಾಕಾಗಿತ್ತು. ಇಂತಹುದರಲ್ಲಿ ಸಾಮಾನ್ಯ ವೈದ್ಯನಾದ ನನ್ನ ಅಭಿಪ್ರಾಯವನ್ನು ಕೋರಿರುವುದು, ಇವರ ಸೌಜನ್ಯತೆಯನ್ನು ತೋರ್ಪಡಿಸುತ್ತದೆ. ಇವರು ಆಯುರ್ವೇದ ಮತ್ತು ಯೂನಾನಿ ವೈದ್ಯ ಅನುಭವ ಪ್ರಕ್ರಿಯೆಗಳನ್ನು ಸಂಗ್ರಹಿಸಿ ಕರ್ಣಾಟಕಕ್ಕೆ ದಾನಮಾಡಿರುವುದು ಆಯುರ್ವೇದದ ಈಗಿನ ಪುನರುಜ್ಜೀವನಕ್ಕೆ ತಳಹದಿಯಾಗಿರುತ್ತದೆ.

ಈ ಪುಸ್ತಕಕ್ಕೆ ಇವರು "ಹಿಂದು-ಯುನಾನಿ ಅನುಭವ ವೈದ್ಯರತ್ನ" ಎಂಬ ನಾಮಕರಣ ಮಾಡಿದ್ದರೂ ಇದನ್ನು **"ಆಯುರ್ವೇದಾನುಭವಸಾರ"** ಎಂದು ಕರೆದಿದ್ದರೆ ಏನೂ ಆಕ್ಷೇಪಕರವಾಗಿರಲಿಲ್ಲ.

ಆಂಗ್ಲ ಯೂನಾನಿ ವೈದ್ಯಗಳಿಗೂ ಸಹಾ ಮಾತೃಕೆಯಾದ ಆಯುರ್ವೇದವು ಪ್ರಾಚೀನಕಾಲದಲ್ಲಿ ಯಾವ ಸ್ಥಿತಿಯಲ್ಲಿತ್ತು? ಈಗಿನ ಕಾಲದಲ್ಲಿ ಯಾವ ಸ್ಥಿತಿಗೆ ಬಂತು? ಹಿಂದೂ ಯೂನಾನಿ ವೈದ್ಯ ಶಬ್ದಗಳಿಗೆ ಮಾತೃಕೆಯು ಆಯುರ್ವೇದವೋ? ಎಂಬುದನ್ನು ನಿರ್ಧರಿಸಲೇ ಬೇಕಾಗುವುದು. ಆದರೆ ಪ್ರಾಚೀನಕಾಲದ ಆಯುರ್ವೇದದ ತೌರೂರು—ಹಿಂದೂ ದೇಶವೆಂಬ ಈ ಭರತಖಂಡವೇ ಆಗಿದ್ದುದರಿಂದ ಹಿಂದೂ ವೈದ್ಯವೆಂಬುವುದು ಆಯುರ್ವೇದವೇ ಎಂತ ಸಿದ್ಧವಾಗುವುದು. ಯೂನಾನ್ ದೇಶದವರು ಆದಿಯಲ್ಲಿ ಭರತಖಂಡದ ಸಂಬಂಧ ಒದಗಿಸಿಕೊಂಡಾಗ ಹಿಂದೂ ವೈದ್ಯ ಅಥವಾ ಭಾರತವೈದ್ಯ ಇಲ್ಲವೆ ಆಯುರ್ವೇದ ವೈದ್ಯವೆಂಬ ನಮ್ಮ ವೈದ್ಯಗಳನ್ನ ತಮ್ಮ ಭಾಷೆಗೆ ಪರಿವರ್ತನೆ ಮಾಡಿಕೊಂಡು ತಮ್ಮ ದೇಶದ ಹೆಸರನ್ನು ಇಟ್ಟುಕೊಂಡು "ಯೂನಾನ್" ಎಂತ ಕರೆದುಕೊಂಡಾಕ್ಷಣವೇ ಅದು ಪ್ರತ್ಯೇಕ ವೈದ್ಯವಾಗುವುದಿಲ್ಲ. ಹೀಗಿರುವಲ್ಲಿ ಲೋಕದ ವಿಶಿಷ್ಟ ವೈದ್ಯಪದ್ಧತಿಗಳಿಗೂ ಬುಡವಾದ ಆಯುರ್ವೇದವು ಶಾಖೋಪಶಾಖೆಗಳಾಗಿ ಪ್ರತ್ಯೇಕ ಪ್ರತ್ಯೇಕ ಹೆಸರುಗಳಿಂದ ಕರೆಸಿಕೊಳ್ಳಲ್ಪಡುತ್ತಾ "ನಾವು ಕಂಡು ಹಿಡಿದೆವು, ತಾವು ಕಂಡು ಹಿಡಿದೆವು" ಎಂದು ಅನ್ನಿಸಿಕೊಂಡಿರುವುದಾದರೂ ವಿಚಾರಮಾಡುವುದಾದರೆ ಇವೆಲ್ಲವೂ ಆಯುರ್ವೇದದಿಂದಲೇ ಉದ್ಧರಿಸಲ್ಪಟ್ಟಿತೆಂತ ಹೇಳಲು ಯಾವ ಸಂಶಯವೂ ಇಲ್ಲ.

ಆದರೆ ಪ್ರಸಕ್ತ ಸಂದರ್ಭದಲ್ಲಿ ಪ್ರಾಚೀನಾಯುರ್ವೇದದ (Ayurvedic ancient science) ಔನ್ನತ್ಯದಶೆಗೂ, ಈಗಿನ ಖಂಡಮಂಡಲಗಳಿಗೂ ನಾನಾ ವಿಧದ ರೂಪನಾಮ ಕ್ರಿಯಾ ಭೇದಗಳಿಗೂ ಅವಕಾಶವುಂಟಾಗಿ ಮೊದಲಿನ ಆಯುರ್ವೇದವೆಂಬುದರ ಚರಿತ್ರೆ ಅಥವ ಸ್ವರೂಪಜ್ಞಾನವನ್ನೇ ನಮ್ಮ ಜನರು ಮರೆತು ವಿವಿಧ ಹೆಸರುಗಳ ಮಾತ್ರಕ್ಕೇನೇ ಮೋಹಿತರಾಗಿ ನಿಜಸ್ವರೂಪವನ್ನರಿಯದೆ ತಾಯಿಯನ್ನೇ ಮರೆತುಹೋಗುವ ಕಾಲ ಒದಗಿತು. ಮ|| ರಾ|| ನಾಯುಡುಯವರು ಕಾಲಾನುಗುಣ್ಯವಾಗಿ "ಹಿಂದು-ಯುನಾನಿ" ಎಂಬ ದ್ವಂದ್ವ ಶಬ್ದಗಳನ್ನು ಪ್ರಯೋಗಮಾಡಿ ತಮ್ಮ ಹಿಂದಿನ ಪುಸ್ತಕದ ಪದ್ಧತಿ

ಯಂತೆ ಇದನ್ನುದ್ಧರಿಸಿದರೂ ನಾವು ಇದನ್ನು ನಿಜಸ್ವರೂಪವಾದ ಆಯುರ್ವೇದ ವೆಂತಲೇ ಕರೆಯಬೇಕಾಗಿದೆ

ಆಯುರ್ವೇದವೆಂದರೆ "ಆಯುಸ್ಸಿನ ಜ್ಞಾನ" ಎಂಬ ಅರ್ಥಸೂಚನೆ ಯಾಗುತ್ತದೆ. ಇಲ್ಲವೆ ವೇದಗಳಿಗೆ ಸಂಬಂಧಿಸಿದಂತೆ ಅರ್ಥವಾಗುತ್ತವೆ. ಹೀಗಿರುವಲ್ಲಿ ಆಯುರ್ವೇದವೆಂಬುದರ ನಿಜಸ್ವರೂಪ, ಆ ಹಿಂದಿನ ಕಾಲದ ಔನ್ನತ್ಯ ದಶೆ, ಮಧ್ಯಕಾಲದ ಹೀನದಶೆ, ಈಗಿನ ಪುನರುಜ್ಜೀವನ ಕಾಲದಶೆ, ಎಂಬ ವಿವರಗಳನ್ನೊಳಗೊಂಡ ಸಂಗ್ರಹ ಚರಿತ್ರೆಯನ್ನೇ ಇಲ್ಲಿ ಉದಹರಿಸಬೇಕಾಗುವುದು. ಹಾಗಿಲ್ಲದ ಪಕ್ಷಕ್ಕೆ ಇದು ಆಯುರ್ವೇದೋಕ್ತವಲ್ಲವೆಂಬ ಭೇದಭಾವನೆಯು ಹೋಗುವುದಿಲ್ಲ

ಈ ಪುಸ್ತಕ ಕರ್ತರು ಪ್ರಸಿದ್ಧ ಆಯುರ್ವೇದ ಶಾಸ್ತ್ರಿಯರಾದ ಬ್ರಂ|| ಶ್ರೀ|| H. N. ಶಾಸ್ತ್ರಿಗಳವರ ಪರಿಶೋಧನೆಗೊಳಪಡಿಸಿ ವೈದ್ಯಾನುಭವಗಳನ್ನು ಜೋಡಿಸಿ ಆಯುರ್ವೇದ ಶಾಸ್ತ್ರಾಧಾರದ ವ್ಯಾಧಿ, ನಿದಾನ, ಶಾರೀರ, ನಾಡಿ, ಪರಿಭಾಷಾದಿಗಳನ್ನ ಇದಕ್ಕೆ ಸೇರಿಸಿ ಬರೆದಿರುವುದರಿಂದ, ಇದಕ್ಕೆ ಮಾತೃಕೆಯಾವುದೆಂಬುದನ್ನ ವಿವರಗೊಳಿಸಿ ಅಲ್ಪಜ್ಞನಾದ ನನ್ನ ಅಭಿಪ್ರಾಯವೆಂಬ ಉಪೋದ್ಘಾತವನ್ನು ಮಹಾಜನಗಳ ಮುಂದಿಡುವುದರ ಮೂಲಕ ಗ್ರಂಥಕರ್ತರ ಉದಾರಭಾವಕ್ಕೂ, ಶ್ರಮಕ್ಕೂ ಪ್ರಾಶಸ್ತ್ಯವನ್ನು ಕೊಡಲೇಬೇಕಾಗಿರುವುದು ನನ್ನ ಧರ್ಮವಾಗಿದೆ. ಏತಕ್ಕೆಂದರೆ — ಅನೂಚಾನವಾಗಿ ಬಂದ ಆಯುರ್ವೇದ ಶಾಸ್ತ್ರದ ಬೋಧಾಚರಣ ಪರಾಯಣತೆಯೇ ನನ್ನ ವಂಶದ ಮತ್ತು ನನ್ನ ಧ್ಯೇಯವಾಗಿರುವುದರಿಂದ ಈ ಕಷ್ಟವನ್ನರಿತ ನಾನು ಇಂತಹ ಗ್ರಂಥಕರ್ತರುಗಳ ವಿಷಯದಲ್ಲಿ ಆಯುರ್ವೇದ ಚರಿತ್ರೆಗಳನ್ನೊಳಗೊಂಡಿರುವ ಈ ಉಪೋದ್ಘಾತವನ್ನ ಅತಿ ಕುತೂಹಲದಿಂದ ಬರೆಯಲು ಉದ್ಯುಕ್ತನಾಗಿರುತ್ತೇನೆ. ಆದುದರಿಂದ ಪ್ರಥಮದಲ್ಲಿ ಆಯುರ್ವೇದ ಪ್ರಾದುರ್ಭಾವ, ಔನ್ನತ್ಯ, ಹೀನಸ್ಥಿತಿ, ಪುನರುಜ್ಜೀವನ ಈ ಅಂಶಗಳನ್ನು ಸಂಗ್ರಹವಾಗಿ ಹೇಳತೊಡಗುವೆನು :—

"ಋಗ್ವೇದಸ್ಯೋಪವೇದೋಽಯಂ" ಎಂದು ಚರಣವ್ಯೂಹದಲ್ಲಿ ಹೇಳಿರುವುದರಿಂದಲೂ, ಋಗ್ವೇದದಲ್ಲಿ ಅಲ್ಲಲ್ಲಿ ನಾನಾ ವಿಧಗಳಾದ ಚಿಕಿತ್ಸೆಗಳನ್ನು ಪ್ರತಿಪಾದಿಸತಕ್ಕ ಶೃತಿವಾಕ್ಯಗಳು ಕಂಡುಬರೋಣದರಿಂದಲೂ ಈ ಆಯುರ್ವೇದವು, ವೈದ್ಯಕ ತಂತ್ರಗಳೆಲ್ಲಕ್ಕಿಂತಲೂ ಮೊದಲು ಉತ್ಪನ್ನವಾದುವೆಂತಲೇ ಸ್ಪಷ್ಟವಾಗಿ ತಿಳಿಯಬರುತ್ತವೆ. ಹೀಗೆ ಪ್ರಾಚೀನವಾದ ಈ ಆಯುರ್ವೇದವು ಪರಾತ್ಪರನಿಂದ ಹೊರಹೊರಟು ಬ್ರಹ್ಮ, ದಕ್ಷ, ಅಶ್ವಿನೇಯರು, ಇಂದ್ರ, ಆತ್ರೇಯರು, ಭರದ್ವಾಜ, ಅಗ್ನಿವೇಶ, ಭೇಡ, ಜಾತುಕರ್ಣ, ಪರಾಶರ, ಧನ್ವಂತರಿ, ಚರಕ, ಸುಶೃತ, ವಾಗ್ಭಟ್ಟರೇ ಮೊದಲಾದವರಿಗೆ ಒಬ್ಬರಿಂದೊಬ್ಬರಿಗೆ ಉಪದೇಶಿಸಲ್ಪಟ್ಟಂತೆ ಗ್ರಂಥರಾಜಗಳಿಂದ ತಿಳಿಯಲ್ಪಡುತ್ತವೆ. ಈ ಋಷಿಶ್ರೇಷ್ಠರು

ಗಳು ಈ ಆಯುರ್ವೇದ ವೈದ್ಯವನ್ನಭ್ಯಸಿಸಿ ಅವರವರಿಗುಂಟಾದ ಅನುಭವಗಳಿಂದ ಬೇರೆಬೇರೆ ಗ್ರಂಥಗಳನ್ನು ರಚಿಸಿ ಲೋಕೋಪಕಾರ ಮಾಡಿ ಕೀರ್ತಿಯನ್ನು ಪಡೆದರು. ಈ ರೀತಿ ಅಧ್ಯಾಯ ಸಹಸ್ರಪರಿಮಿತಿಯಾಗಿ ಅಭಿವೃದ್ಧಿಯಾದ ಆಯುರ್ವೇದವು ಪ್ರಜಾಸೌಲಭ್ಯಕ್ಕೋಸ್ಕರ ವಿಪುಲವಾಗಿಯೂ ಎಂಟು ಭಾಗಗಳಿಂದ ಕೂಡಿ ವಿಭಜನೆ ಮಾಡಲ್ಪಟ್ಟಿರುತ್ತದೆ. ಹೀಗೆ ಅಷ್ಟವಿಧಗಳಾದ ಚಿಕಿತ್ಸಾ ವಿಧಾನಗಳಿಗೆ ಋಗ್ವೇದದಲ್ಲಿ ಅನೇಕ ಪ್ರಮಾಣ ವಚನಗಳು ಕಾಣಿಸಲ್ಪಡುತ್ತಲಿವೆ.

ಪ್ರಥಮಾಷ್ಟಕದಲ್ಲಿ:—"ಸದ್ಯೋ ಜಂಘಾಂ ಆಯಸೀಂ ವಿಶ್ಪಲಾಯೈ" ಎಂದು ಶಸ್ತ್ರಚಿಕಿತ್ಸಾ ವಿಷಯದಲ್ಲಿಯೂ, "ತಸ್ಮಾ ಅಕ್ಷಿಣಾ ನಸತ್ಯ ವಿಚಕ್ಷ ಆಧತ್ತಂ" ಎಂದು ಶಾಲಾಕ್ಯ ತಂತ್ರಕ್ಕೆ ಸೇರಿದ ಊರ್ಧ್ವಾಂಗ ಚಿಕಿತ್ಸಾ ವಿಷಯದಲ್ಲಿಯೂ, "ಯುವಂಚ್ಯವಾನ ಮಶ್ವಿನಾ ಜರಂತಂ ಪುನರ್ಯುವಾನಂ ಚಕ್ರ ದುಶ್ಯಚೀಭಿಃ" ಎಂದು ರಸಾಯನ ತಂತ್ರದ ವಿಷಯದಲ್ಲಿಯೂ, "ತ್ರಿಧಾತು ಶರ್ಮರವಹತಂ ಶುಭ ಸ್ಪತಿಃ" ಎಂದು ತ್ರಿದೋಷ ಶಾಮಕತಾರೂಪವಾದ ಕಾಯಚಿಕಿತ್ಸಾ ವಿಷಯದಲ್ಲಿಯೂ, ಪ್ರಮಾಣಗಳು ಋಗ್ವೇದದಲ್ಲಿ ಉದಹರಿಸಲ್ಪಟ್ಟಿದೆ.

ಈ ಕಾರಣವನ್ನು ಹಿಡಿದು ವಿಚಾರಮಾಡಿ ನೋಡಿದಲ್ಲಿ ಈಗಿನ ಪಾಶ್ಚಾತ್ಯ ವೈದ್ಯವಿದ್ಯೆಗಳಲ್ಲಿ ಪ್ರಸಿದ್ಧಗಳಾದ ಶಸ್ತ್ರ (Surgery) ಚಿಕಿತ್ಸೆಗಳೂ ಕೂಡ ಆಯುರ್ವೇದ ತಂತ್ರದಲ್ಲಿ ವಿಸ್ತಾರವಾಗಿ ವಿವರಿಸಿರುವುದೆಂದು ಸ್ಪಷ್ಟವಾಗಿ ತೋರುತ್ತದೆ. ಹೀಗೆ ಸರ್ವವಿಧಗಳಾದ ಚಿಕಿತ್ಸೆಗಳೂ ಈ ಎಂಟು ತರಗತಿಗಳಲ್ಲಿ ಅಂತರ್ಭೂತಗಳಾಗಿ, ಆಯುರ್ವೇದದಿಂದ ತಿಳಿಯಲ್ಪಡತಕ್ಕದ್ದಾಗಿರುತ್ತದೆ. ಹೀಗೆ ವೈದಿಕ ಕಾಲಾಂತದವರಿವಿಗೂ ಋಷಿಪರಂಪರೆಯಲ್ಲಿ ವ್ಯಾಪ್ತವಾಗಿ ಈ ಆಯುರ್ವೇದವು ಅಭಿವೃದ್ಧಿಹೊಂದಿದ್ದಿತು. ಈರೀತಿ ಅಭಿವೃದ್ಧಿಹೊಂದಿದ್ದ ಆಯುರ್ವೇದ ಪುರಾತನ ಗ್ರಂಥಕರ್ತರುಗಳ ಹೆಸರುಗಳನ್ನು ಹೇಳುವುದು ಈ ಸಂದರ್ಭದಲ್ಲಿ ಸ್ತೋತ್ರರೂಪವಾಗಿಯೂ ಉಚಿತವಾಗಿಯೂ ಇರುತ್ತದೆ.

## ಆಯುರ್ವೇದ ಪುರಾತನ ಗ್ರಂಥಕರ್ತರು ಮತ್ತು ಅವರ ಕಾಲ.

**ಅಶ್ವಿನೀದೇವತೆಗಳು—** ಇವರು ದೇವ ವೈದ್ಯರಾಗಿರುತ್ತಾರೆ, ಕಾಯಚಿಕಿತ್ಸೆಯ ಮೇಲೂ, ಶಸ್ತ್ರಚಿಕಿತ್ಸೆಯ ಮೇಲೂ, "ಚಿಕಿತ್ಸಾತಂತ್ರ"ವೇ ಮೊದಲಾದ ಅನೇಕ ವೈದ್ಯಗ್ರಂಥಗಳನ್ನು ರಚಿಸಿ ತುಂಬ ಪ್ರಖ್ಯಾತಿಯನ್ನು ಪಡೆದರೆಂತಲೂ ಈ ಪೈಕಿ "ಅಶ್ವಿನೇಯ ಸಂಹಿತೆ"ಯು ಬಹಳ ಶ್ರೇಷ್ಠವಾದುದೆಂತಲೂ ಎಂತಹ ಭಯಂಕರವಾದ ವ್ಯಾಧಿಗಳನ್ನಾದರೂ ಚಮತ್ಕಾರವಾಗಿ ಚಿಕಿತ್ಸಿಸುತ್ತಿದ್ದರೆಂತ ಋಗ್ವೇದದಲ್ಲಿ ಪ್ರಕಾಶವಾಗಿ ಹೇಳಲ್ಪಟ್ಟಿರುತ್ತದೆ.

(೧) **ಆತ್ರೇಯರು**— ಈ ಋಷಿಶ್ರೇಷ್ಠರು ರಚಿಸಿರುವ ಗ್ರಂಥಗಳಲ್ಲೊಂದಾದ "ಆತ್ರೇಯ ಸಂಹಿತೆ" ಎಂಬ ಗ್ರಂಥವು ಐದು ಭಾಗಗಳಿಂದ ಕೂಡಿ ಸುಮಾರು ನಲವತ್ತಾರುಸಾವಿರ ಶ್ಲೋಕಗಳಿಂದ ಪ್ರಕಾಶಿಸುತ್ತದೆಂತಲೂ ಈಗಿರುವ ವೈದ್ಯಗ್ರಂಥರಾಜಗಳಲ್ಲೆಲ್ಲಾ ಈ ಆತ್ರೇಯ ಸಂಹಿತೆಯು, ತುಂಬಾ ಪ್ರಾಚೀನತೆಯು ಹೊಂದಿತ್ತೆಂತಲೂ ಹೇಳುತ್ತಾರೆ

(೨) **ಅಗ್ನಿವೇಶರು**— ಈ ಋಷಿವರ್ಯರು ರಚಿಸಿರುವ ಗ್ರಂಥರಾಜವು ವೈದ್ಯದಲ್ಲಿ ಅಸಮಾನ ಪ್ರಜ್ಞೆಯುಳ್ಳ ಚರಕಮಹಾಮುನಿಯವರಿಂದ ಸಂಗ್ರಹಿಸಲ್ಪಟ್ಟು ಈಗಿನವರಿಗೂ "ಚರಕ ಸಂಹಿತೆ" ಯಂತೆ ತುಂಬಾ ಪ್ರಸಿದ್ಧಿ ಹೊಂದಿರುತ್ತದೆ.

(೩) **ಚರಕ ಮಹಾಮುನಿಗಳು**—ವಿಶುದರೆಂಬ ಮುನಿಕುಮಾರರಾಗಿ ಕ್ರಿ. ಪೂ. ೩೨೦ ಸಂವತ್ಸರಗಳಿಗೆ ಪೂರ್ವದಲ್ಲಿ ವಾರಣಾಶಿ (ಕಾಶಿ) ನಗರದಲ್ಲಿ ಜನ್ಮಿಸಿದರೆಂದು ಹೇಳುವರು. ಆ ಕಾಲದಲ್ಲಿ ಈ ಚರಕರಿಗಿಂತ ಮಿಂಚಿದ ವೈದ್ಯಶ್ರೇಷ್ಠರು ಇರಲಿಲ್ಲವೆಂಬುದು ನಿರ್ವಿವಾದಾಂಶವು. ಇವರನ್ನು ಸಕಲಶಾಸ್ತ್ರವೇತ್ತನಾದ ಆದಿಶೇಷನ ಅವತಾರವೆಂತ ಆಕಾಲದಲ್ಲಿ ಕರೆದರು. ಇವರು ರಚಿಸಿರುವ ವೈದ್ಯ ಗ್ರಂಥವಾದ ಚರಕಸಂಹಿತೆಯು ಶ್ಲೋಕಸ್ಥಾನ (ಸೂತ್ರಸ್ಥಾನ), ನಿದಾನಸ್ಥಾನ, ಚಿಕಿತ್ಸಾಸ್ಥಾನ, ವಿಮಾನಸ್ಥಾನ, ಶಾರೀರಸ್ಥಾನ, ಸಿದ್ಧಸ್ಥಾನ, ಇಂದ್ರಿಯಸ್ಥಾನ, ಕಲ್ಪಸ್ಥಾನ, ಎಂಬ ಎಂಟು ಭಾಗಗಳಿಂದ ಕೂಡಿ ೧೨೦ ಅಧ್ಯಾಯಗಳಾಗಿರುವಂತೆ ಬರೆದರು. ಚಿಕಿತ್ಸೆಯನ್ನು ಬೋಧಿಸಲು ಅತ್ಯುತ್ತಮವಾದುದು. ಶ್ರೀ ಚರಕಾಚಾರ್ಯರವರು ಕ್ರಿಸ್ತಶಕ ೩೦೦ ಸಂವತ್ಸರಗಳಲ್ಲಿ (300 B. C.) ಪಂಚನದ (ಪಂಜಾಬ್) ಪ್ರಾಂತ್ಯದಲ್ಲಿರುವ ತಕ್ಷಶಿಲಾ ನಗರದ ಸಕಲವಿದ್ಯಾಕಲಾಶಾಲೆ(University)ಯಲ್ಲಿ ಕಾಯಚಿಕಿತ್ಸಾ ವಿಧಾನವನ್ನ ಅನೇಕ ಜನ ಶಿಷ್ಯರಿಗೆ ಉಪದೇಶಿಸುತ್ತಾ ಆಯುರ್ವೇದವನ್ನು ಅಭಿವೃದ್ಧಿಗೆ ತಂದರು. ಅಲ್ಲದೆ ಇದನ್ನ ಸಂಸ್ಕೃತದಲ್ಲಿ ಬರೆದಿರುತ್ತಾರೆ. ಅನೇ ಶತಮಾನದಲ್ಲಿ ಇದನ್ನು ಅರೇಬಿಯಾ ದೇಶಸ್ಥರು ತಮ್ಮ ಭಾಷೆಗೆ ಪರಿವರ್ತನೆ ಮಾಡಿಕೊಂಡರು. ಅನಂತರ ಅವಿಸನ್ನ ರಾಜಸ್ ಸರ್ಪಿಯಸ್, ಮೊದಲಾದವರು ಲ್ಯಾಟಿನ್ ಭಾಷೆಗೆ ಪರಿವರ್ತಿಸಿದರು. ಇದರಿಂದ ಅವರ ಹೆಸರು ಆ ಪುಸ್ತಕದಲ್ಲಿ ಅಲ್ಲಲ್ಲಿ ಕಾಣಿಸುತ್ತಾ ಇಧೆ. ಈ ಚರಕ ಸಂಹಿತೆಯನ್ನು ಕಲ್ಕತ್ತಾದ "**ವಿಶ್ವಾಸ ಚಂದ್ರ ಕವಿರತ್ನ**" ರವರು ಆಂಗ್ಲೇಯ ಭಾಷೆಗೆ ತರ್ಜುಮೆ ಮಾಡಿದರು. ಈ ಚರಕ ಮಹರ್ಷಿಗಳ ಅನಂತರದವರು ಸುಶೃತಾಚಾರ್ಯರು.

(೪) **ಸುಶೃತಾಚಾರ್ಯರು**—ಈ ಮಹನೀಯರು ಶ್ರೀರಾಮರ ಕಾಲದವರಾದ ವಿಶ್ವಾಮಿತ್ರರ ಕುಮಾರರವಂಶದವರೆಂತಲೂ, ತಂದೆಯ ಅನುಮತಿಯ ಮೇಲೆ ತನ್ನ ಏಳುಮಂದಿ ಸಹೋದರರು ಸಹಿತ ಕಾಶಿರಾಜರಾದ ಎರಡನೇ

ಧನ್ವಂತರಿಯುವರೆಂಬ "ದಿವೋದಾಸರ" ಬಳಿ (400 A. D.) ವೈದ್ಯಶಾಸ್ತ್ರವನ್ನು ಅಭ್ಯಸಿಸಿದರೆಂತಲೂ ಹೇಳುವರು. ದಿವೋದಾಸರು ಶಸ್ತ್ರವೈದ್ಯದಲ್ಲಿ ಅಸಮಾನ ಪ್ರಜ್ಞೆಯುಳ್ಳ ದೇವ ವೈದ್ಯರಾದ ಧನ್ವಂತರಿ ಅವತಾರವೆಂತ ಹೇಳುತ್ತಲಿದ್ದರು. ಇವರ ಶಿಷ್ಯರಾದ ಸುಶ್ರುತರು ಗುರುವಿನ ಉಪದೇಶದಿಂದ "ಸುಶ್ರುತ ಸಂಹಿತೆ" ಎಂಬ ಗ್ರಂಥರಾಜವನ್ನು ರಚಿಸಿದರು. ಈ ಗ್ರಂಥದಲ್ಲಿ ಶಸ್ತ್ರಚಿಕಿತ್ಸಾದಿ ವಿಷಯಗಳನ್ನು ಶಾರೀರ ಶಾಸ್ತ್ರ ವಿಷಯಗಳು ಇವುಗಳನ್ನು ಬೋಧಿಸುವುದರಲ್ಲಿ ಅತ್ಯುತ್ತಮವೆಂತ ಕರೆಯಲ್ಪಡುತ್ತಲಿಧೆ. ಇದು ಮುಖ್ಯವಾಗಿ ಶಸ್ತ್ರವೈದ್ಯಕ್ಕೆ ದೊಡ್ಡ ಪ್ರಮಾಣ ಗ್ರಂಥವೆಂತ ಹಿಂದೂ ವೈದ್ಯರಿಂದ ಕೊಂಡಾಡಲ್ಪಡುತ್ತಲಿಧೆ. ಈ ಗ್ರಂಥದಲ್ಲಿ ರೋಗಾದಿಗಳು ಒಡನೆಯೇ ಆರೋಗ್ಯ ಹೊಂದುವುದಕ್ಕಾಗಿ ಅನೇಕವಿಧಗಳಾದ ಯಂತ್ರಸಾಧನೆಗಳು ವಿಶೇಷವಾಗಿ ಹೇಳಲ್ಪಟ್ಟಿವೆ. ಈ ಸಂಹಿತೆಯು ಕ್ರಿಸ್ತಶಕ ನಂತರ (800 A. D ) ಸಂವತ್ಸರಗಳಲ್ಲಿ ಅರೇಬಿಯಾ ಭಾಷೆಗೆ ತರ್ಜುಮೆ ಮಾಡಲ್ಪಟ್ಟಿತು. ಈ ಸುಶ್ರುತಾಚಾರ್ಯರವರು ಕಾಶೀನಗರದ ಆಗಿನ ಸಕಲವಿದ್ಯಾ ಕಲಾಶಾಲೆಯ (University) ಅಧ್ಯಕ್ಷರಾಗಿದ್ದು ಆಯುರ್ವೇದವನ್ನು ಉದ್ಧರಿಸಿದರು.

(೩) **ವಾಗ್ಭಟಾಚಾರ್ಯರು**—ಈ ಮಹನೀಯರು ಕ್ರಿ. ಪೂ. ಎರಡು ಶತಾಬ್ದಗಳಲ್ಲಿ (200. B. C.) ಪ್ರಸಿದ್ಧಿಹೊಂದಿದ್ದರು. ಇವರು ಸಿಂಧೂದೇಶ ನಿವಾಸಿಗಳು. ಅಲ್ಲಿ ಹುಟ್ಟಿದವರು "**ವೈದಿಕ ವೈದ್ಯ ಗ್ರಂಥ ಶಿರೋಭೂಷಣ**" ವೆನ್ನತಕ್ಕದ್ದಾಗಿ ಅಸೇತು ಸೀತಾಚಲವನ್ನು "ವಾಗ್ಭಟ" ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ "ಅಷ್ಟಾಂಗಹೃದಯ" ಎಂಬ ಗ್ರಂಥವನ್ನು ಇನ್ನೂ ಕೆಲವು ಗ್ರಂಥಗಳನ್ನೂ ವೈದ್ಯವಿದ್ಯಾ ವಿಷಯದಲ್ಲಿ (500. A. D.) ರಚಿಸಿ ಪ್ರಸಿದ್ಧಿ ಹೊಂದಿದರು. ತನಗೆ ಪೂರ್ವೀಕರಾದ ಚರಕ, ಸುಶ್ರುತ, ಅಗ್ನಿವೇಶ, ಭೇಡ ಮೊದಲಾದ ಋಷಿಶ್ರೇಷ್ಠರು ರಚಿಸಿರುವ ಗ್ರಂಥರಾಜಗಳನ್ನನುಸರಿಸಿ ಕ್ರಮ ಸಿದ್ಧಾಂತಗಳಿಂದ ಹಿಂದಿನವರ ಗ್ರಂಥಗಳಿಗೂ ಖ್ಯಾತಿ ತಂದರು. ಮತ್ತು ಇವರು ಅಷ್ಟಾಂಗ ಸಂಗ್ರಹವೆಂಬ ಮತ್ತೊಂದು ಗ್ರಂಥವನ್ನೂ ಕೂಡ ರಚಿಸಿರುತ್ತಾರೆ. ಹೀಗೆ ಆಯಾ ಗ್ರಂಥಗಳ ರಚನಾ ಕಾಲವನ್ನು ಪರಿಶೀಲಿಸಿ ನೋಡಿದರೆ, "ಸ್ವತಂತ್ರ ವೈದಿಕ ವೈದ್ಯ" ಗ್ರಂಥ ರಚನೆಗೆ ವಾಗ್ಭಟರ ಕಾಲವೇ ಅಂತ್ಯದಶೆ ಎಂದು ಊಹಿಸಬೇಕಾಗಿಧೆ.

ವೈದಿಕ ಕಾಲಾನಂತರ ನಾಗಾರ್ಜುನ, ಕಾಪಾಲಿ, ಭಾಲುಕಿ, ಅಗಸ್ತ್ಯ, ಪ್ರಭೃತಿಗಳಾದ ವಾರ್ತಿಕರು ಸ್ವಲ್ಪ ಪರಿಮಿತಿಯುಳ್ಳ ಔಷಧಿಗಳಿಂದಲೇ ರೋಗಗಳನ್ನು ನಾಶಗೊಳಿಸುವ ಉಪಾಯ (Ayurvedic research work) ವನ್ನ ಅನ್ವೇಷಣಮಾಡಿ ಉಪದೇಶಿಸಲು ತಿಳಿಯಿಟ್ಟು ಅಭ್ರಕ, ಸ್ವರ್ಣ, ರಸ ಗಂಧಕಾದಿಗಳು (Minerals) ಮೊದಲಾದ ವಸ್ತುಗಳಲ್ಲಿರುವ ಹೆಚ್ಚಿನ ಗುಣ

ಗಳನ್ನು ಕಂಡುಕೊಂಡು ಜಾರಣಮಾರಣಾದಿ ಪ್ರಕ್ರಿಯಾ ವಿಶೇಷಗಳಿಂದ ಅವು ಗಳಿಗೆ ಭಸ್ಮ, ಸಿಂಧೂರ, ಸತ್ವ, ಪಾತನ, ಧೃತಿ, ಬದ್ಧಗಳೆಂಬ ರೂಪಾಂತರ ಪರಿಣತಿಗಳನ್ನ ಕಲ್ಪಿಸಿ "ಸಿದ್ಧ ವೈದ್ಯ" (Siddhas system) ಎಂತ ಹೆಸರಿಟ್ಟು ಆಯಾ ರೋಗಗಳಲ್ಲಿ ಉಪಯೋಗಿಸಲ್ಪಡತಕ್ಕ ಪ್ರಕ್ರಿಯೆಗಳನ್ನೇರ್ಪಡಿಸಿ ಅತ್ಯಲ್ಪ ಪ್ರಮಾಣ ಔಷಧ ಸೇವನೆಗಳಿಂದಲೇ ರೋಗಗಳನ್ನಡಗಿಸುವ ಉಪಾಯಗಳನ್ನು ಉಪದೇಶ ಮಾಡಿದರು. ಕ್ರಿಸ್ತಶಕ ಎರಡುಮೂರು ಶತಾಬ್ದಗಳಿಗೆ ಪೂರ್ವದವರಾದ ಚಂದ್ರಗುಪ್ತ, ಅಶೋಕ, ಮೊದಲಾದ ಚಕ್ರವರ್ತಿಗಳ ಕಾಲದಲ್ಲಿ ಈ ತಾಂತ್ರಿಕಮತ ಪ್ರಕಾಶಕರಾದ ಸಿದ್ಧನಾಗಾರ್ಜುನ, ನಿತ್ಯನಾಥ, ಮಹಾನಂದಿ, ಅಗಸ್ತ್ಯ, ಭೋಗ, ಮತ್ಸ್ಯೇಂದ್ರನಾಥ ಸಿದ್ಧಾದಿಗಳಿಂದ ಈ ಆಯುರ್ವೇದದಲ್ಲಿನ ರಸತಂತ್ರಗಳೆಲ್ಲವೂ ಅಭಿವೃದ್ಧಿಗೆ ತರಲ್ಪಟ್ಟವು. ಆಲಾಗಾಯಿತು ಈ ಆಯುರ್ವೇದವು "ತಾಂತ್ರಿಕ" ವೆಂತ ಪ್ರಸಿದ್ಧಿ ಹೊಂದಿತು.

ಹೀಗೆ ಹೆಚ್ಚಿನ ಅಭಿವೃದ್ಧಿ ಹೊಂದಿ ಸಂಸ್ಕೃತಭಾಷಾಮಯವಾಗಿದ್ದ ಈ ಆಯುರ್ವೇದ ವಿದ್ಯೆಯನ್ನು ಗ್ರೀಕರು, ಅರಬ್ಬೀಯವರು, ಇಂಗ್ಲೀಷರು, ಕ್ರಿಸ್ತಶಕ ಎಂಟನೇ ಶತಮಾನಕ್ಕೆ ಪೂರ್ವವೇ ತಮ್ಮ ಭಾಷೆಗಳಿಗೆ ಪರಿವರ್ತನೆ ಮಾಡಿಕೊಂಡರು.

ನಂತರ ಕೆಲವುಕಾಲ ಕಳೆಯುತ್ತಲೆ ಅನೇಕ ಕಾರಣಗಳಿಂದ ಸಂಸ್ಕೃತ ಭಾಷಾ ವ್ಯಾಪ್ತಿಯು ತಗ್ಗಿ ಈ ಆಯುರ್ವೇದ ವಿದ್ಯೆಯು "ಲುಪ್ತಾವಸ್ಥೆ" ಹೊಂದುತ್ತಲೂ ಆಗಾಗ್ಯೆ ಚಕ್ರಪಾಣಿ, ಪೂಜ್ಯಪಾದ, ಭಾವಮಿಶ್ರ, ಮಾಧವಾಚಾರ್ಯ, ಶಾರ್ಙ್ಗಧರಮಿಶ್ರ, ಮಾಧವಕರ, ವಲ್ಲಭೇಂದ್ರಮಿಶ್ರ, ಬಸವರಾಜ ಮೊದಲಾದ ವೈದ್ಯಾಚಾರ್ಯರುಗಳು ಗ್ರಂಥಾದಿ ರಚನಾಮುಖದಿಂದ ಸ್ವಲ್ಪ ಉತ್ತೇಜನ ಕೊಡುತ್ತಾ ಬರುವುದು ಸಂಭವಿಸಿದ್ದುದರಿಂದಲೂ, ಪಾಠಕರುಗಳು, ಅಧ್ಯೇತೃಗಳು, ತಗ್ಗುತ್ತ ಬಂದುದರಿಂದಲೂ ಯಥಾಕ್ರಮವಾಗಿ ಈ ಆಯುರ್ವೇದವು "ಮಂದ ಪ್ರಚಾರ" ವಾಗುತ್ತ ಒಟ್ಟನಮೇಲೆ ನಶಿಸುವ ಅವಸ್ಥೆಗೆ ಬರುವ ರೀತಿಯಾಯಿತು. ಅಂತಹ ತರುಣದಲ್ಲಿಯೂ ಕೂಡ ನಮ್ಮ ಹಿಂದಿನ ರಾಜರುಗಳು ಪ್ರಾಚೀನ ಮಾರ್ಗಗಳನ್ನನುಸರಿಸಿ ವೇದಗಳನ್ನುದ್ಧರಿಸಿದಂತೆಯೇ ವೇದಾಂತರ್ಗತವಾದ ಈ ಆಯುರ್ವೇದವನ್ನೂ ಕೂಡ ರಕ್ಷಿಸುತ್ತಾ ಅತಿ ಪ್ರಯತ್ನಗಳಿಂದ ಪೋಷಣೆ ಮಾಡುತ್ತಲಿದ್ದರು. ಆ ಕಾಲದಲ್ಲಿ ಆಯುರ್ವೇದ ಗ್ರಂಥಗಳನ್ನು ಬರೆದು ವೇದೋದ್ಧಾರ ಕಾರ್ಯಮಾಡಿದ ಕೆಲ ಮಹನೀಯರ ಹೆಸರುಗಳನ್ನು ಹೇಳದೆ ಬಿಡುವುದು ಉಚಿತವಲ್ಲ.

(೧) **ಮಾಧವಾಚಾರ್ಯ**—ಈ ಮಹನೀಯರು ಪ್ರಸ್ತುತ ಹಂಪೆ, ಆನೆಗೊಂದಿ ಎಂದು ಕರೆಯಲ್ಪಡುವ ಕಿಷ್ಕಿಂಧೆಯಲ್ಲಿ ಹನ್ನೆರಡನೇ ಶತಾಬ್ದದಲ್ಲಿದ್ದರೆಂತಲೂ, ವಿದ್ಯಾನಗರದ ರಾಜನಾದ ವೀರಬುಕ್ಕ ರಾಜನಿಗೆ ಪ್ರಧಾನ ಮಂತ್ರಿ

ಯಾಗಿದ್ದರೆಂತಲೂ ತಿಳಿಯಬರುತ್ತದೆ. ಋಗ್ವೇದಕ್ಕೆ ವ್ಯಾಖ್ಯಾನಕರ್ತರಾದ, "ಸಾಯಣಾಚಾರ್ಯರ" ಸಹೋದರರಾದ ಈ ಮಾಧವಾಚಾರ್ಯರು ಹಿಂದೂ ವೇದಾಂತದ ಮೇಲೆ "ಮಾಧವ ವೇದಾರ್ಥ ಪ್ರಕಾಶ"ವೆಂಬ ಗ್ರಂಥವನ್ನೂ, ಭಾಷಾವಿಷಯವಾಗಿ "ಮಾಧವ ವೃತ್ತಿ" ಎಂಬ ಗ್ರಂಥವನ್ನೂ, ವೈದ್ಯ ವಿಷಯವಾಗಿ "ಮಾಧವನಿದಾನ" ವೆಂಬ ಗ್ರಂಥವನ್ನೂ, ಜ್ಯೋತಿಷ್ಯ ವಿಷಯವಾಗಿ "ಕಾಲಮಾಧವ" ವೆಂಬ ಗ್ರಂಥವನ್ನೂ ರಚಿಸಿ ತುಂಬಾ ಕೀರ್ತಿಯನ್ನು ಪಡೆದರು. ಈ ಮಾಧವ ನಿದಾನದಲ್ಲಿ ರೋಗೋತ್ಪತ್ತಿ, ತಲ್ಲಕ್ಷಣಗಳು, ವಿವರವಾಗಿ ಬರೆಯಲ್ಪಟ್ಟಿರುತ್ತವೆ. ಇದು ರೋಗನಿದಾನದಲ್ಲಿ ಪ್ರಬಲ ಪ್ರಮಾಣ ಗ್ರಂಥವೆಂಬುದು "ನಿದಾನೇ ಮಾಧವ ಶ್ರೇಷ್ಠಃ" ಎಂಬಂತೆ ನಿರ್ವಿವಾದಾಂಶವಾಗಿದೆ (೧) ರೋಗನಿದಾನದಲ್ಲಿ ಮಾಧವಾಚಾರ್ಯರಿಗೂ (೨) ರೋಗಿಯನ್ನು ಯಾವ ಅವಸ್ಥೆಯಲ್ಲಿ ಯಾವ ಪ್ರಕಾರದಲ್ಲಿ ಕಾಪಾಡಬೇಕೋ ಆ ವೈದ್ಯಶಾಸ್ತ್ರ ವಿಧಿಗಳನ್ನು ಬೋಧಿಸುವುದರಲ್ಲಿ ವಾಗ್ಭಟಾಚಾರ್ಯರಿಗೂ (೩) ಚಿಕಿತ್ಸಾ ವಿಷಯವಾಗಿ ಚರಕಾಚಾರ್ಯರಿಗೂ ಸಮವಾದವರಾರೂ ಇಲ್ಲವೆಂದು ಸಿದ್ಧಾಂತಗೊಳಿಸಲ್ಪಟ್ಟಿದೆ. ಈ ಮಾಧವಾಚಾರ್ಯರು ತಮ್ಮ ವಾರ್ಧಿಕ್ಯದಶೆಯಲ್ಲಿ "ಸನ್ಯಶಿಸಿ ವಿದ್ಯಾರಣ್ಯ" ರೆಂಬ ಪ್ರಖ್ಯಾತಿಯನ್ನು ಹೊಂದಿದರು.

(೭) **ಭಾವಮಿಶ್ರ** — ಈ ವೈದ್ಯಶ್ರೇಷ್ಠರು ೧೫೫೦ ನೇ ಸಂ|| ದಲ್ಲಿ ಮಧ್ಯದೇಶದಲ್ಲಿದ್ದುಕೊಂಡು, ತುಂಬಾ ಪ್ರಖ್ಯಾತಿಯನ್ನು ಪಡೆದು "ಭಾವಪ್ರಕಾಶ" ವೆಂಬ ವೈದ್ಯಗ್ರಂಥವನ್ನು ರಚಿಸಿ ತನಗಿಂತ ಪೂರ್ವದವರಾದ ವೈದ್ಯಶ್ರೇಷ್ಠರ ಅನುಭವಗಳನ್ನು ತನ್ನ ಗ್ರಂಥದಲ್ಲಿ ಸಂಗ್ರಹವಾಗಿ ಸಂಸ್ಕೃತದಲ್ಲಿ ವಿವರಿಸಿ ಬರೆದಿರುವರು. ಹಿಂದೂದೇಶದ ವೈದ್ಯರಲ್ಲಿ ಈ ಭಾವಪ್ರಕಾಶವೆಂಬ ಗ್ರಂಥವು ಅತ್ಯಂತೋಪಯುಕ್ತವೆಂತಲೂ, ಬಾಹುಳ್ಯವಾದ ಆರ್ಯವೈದ್ಯ ಗ್ರಂಥ ಸಮುದಾಯದಿಂದ ಉಪಯುಕ್ತವಾದ ವಿಶೇಷಾಂಶಗಳನ್ನು ಇದರಲ್ಲಿ ಸೇರಿಸಿದರು. ಈ ಭಾವಮಿಶ್ರರವರು ಕಾಶಿಯಲ್ಲಿ ವಾಸಮಾಡಿ ಇದ್ದರೆಂತಲೂ ಹೆಚ್ಚುಮಂದಿ ವಿದ್ಯಾರ್ಥಿಗಳು ಇವರ ಬಳಿ ಇದ್ದರೆಂತಲೂ ತಿಳಿಯಬರುವುದು.

(೮) **ಶಾರ್ಙ್ಗಧರಮಿಶ್ರ** — ಈ ಮಹನೀಯರು ಇಪ್ಪತ್ತು ಅಧ್ಯಾಯಗಳನ್ನುಳ್ಳ "ಶಾರ್ಙ್ಗಧರ ಸಂಹಿತೆ" ಎಂಬ ಗ್ರಂಥರಾಜವನ್ನ ಉಪಯುಕ್ತವಾದ ವಿಶೇಷ ವಿಷಯಗಳನ್ನು ಸೂಚಿಸುತ್ತಾ ರಚಿಸಿರುವರು.

ಮತ್ತು "ವೈದ್ಯಾಮೃತ" ವನ್ನು ರಚಿಸಿದ ಬಟವೋಕೇಶ್ವರರೆಂಬುವರು, "ವೈದ್ಯ ಜೀವನ" ವನ್ನು ರಚಿಸಿದ "ಲೋಲಂಬರಾಜನೂ," "ಚಿಕಿತ್ಸಾ ಸಂಗ್ರಹ"ವನ್ನು ರಚಿಸಿದ "ಚಕ್ರದತ್ತ" ನೂ, "ಚಕ್ರದತ್ತ ಮುಕ್ತಾವಳಿ" ಯನ್ನು ರಚಿಸಿದ "ಚಕ್ರಪಾಣಿಯು," "ಚಿಕಿತ್ಸಾಸಾರ" ವನ್ನು ರಚಿಸಿದ

ಗೋಪಾಲದಾಸರೂ "ಅಗ್ನಿಪುರಾಣವನ್ನು" ರಚಿಸಿದ ವ್ಯಾಸರೂ, "ಅಮೃತ ಸಾರವನ್ನು" ರಚಿಸಿದ ಪ್ರತಾಪಸಿಂಹ್ಮನೂ, ಇನ್ನೂ ಲೆಕ್ಕವಿಲ್ಲದಷ್ಟು ವೈದ್ಯ ಗ್ರಂಥಕರ್ತರುಗಳೂ ರಚಿಸಿದ ಗ್ರಂಥರಾಜಗಳೂ ಅನೇಕವಾಗಿರ ವವೆಂತ ಕಾಣಿ ಸುತ್ತವೆ.

ಒಂದೊಂದು ವಿಷಯವನ್ನೇ ಕುರಿತು ವಿಶೇಷವಾಗಿ ಬೋಧಿಸಲ್ಪಡುತ್ತ ಲಿರುವುದು. ಶಸ್ತ್ರ ಚಿಕಿತ್ಸಾದಿ ವಿಷಯಗಳನ್ನು ಬೋಧಿಸುವುದಕ್ಕೆ "ಸುಶ್ರುತ ಸಂಹಿತೆ"ಯು ಉತ್ತಮವಾದುದು. ಕಾಯಚಿಕಿತ್ಸಾದಿ ವಿಷಯಗಳನ್ನು ಬೋಧಿಸು ವುದಕ್ಕೆ "ಚರಕ ಸಂಹಿತೆ"ಯು ಉತ್ತಮವಾದುದು. ಶಾಸ್ತ್ರರಹಸ್ಯಗಳನ್ನು ಬೋಧಿಸುವುದರಲ್ಲಿ "ಅಷ್ಟಾಂಗ ಹೃದಯ, ಅಷ್ಟಾಂಗ ಸಂಗ್ರಹ" ಎಂಬುವು ಗಳೂ; ರೋಗಲಕ್ಷಣ, ನಿದಾನಗಳನ್ನು ತಿಳಿಸುವುದರಲ್ಲಿ "ಮಾಧವ ನಿದಾನ" ವೂ; ರಸಗಳನ್ನೂ ಉಪರಸಗಳನ್ನೂ ಲೋಹಗಳನ್ನೂ ನವರತ್ನಗಳನ್ನು ಅವು ಗಳ ಭೇದಗಳನ್ನೂ ಸಮ್ಮೇಳನಗಳನ್ನೂ ಮಾರಣಾದ್ಯುಪಾಯಗಳನ್ನೂ ಬೋಧಿ ಸುವುದರಲ್ಲಿ "ರಸರತ್ನಾಕರ, ರಸರತ್ನಸಮುಚ್ಚಯ, ನಾಗಾರ್ಜುನೀಯ" ಮೊದ ಲಾದ ಗ್ರಂಥಗಳು ಪ್ರಸಿದ್ಧಿಹೊಂದಿರುತ್ತವೆ

ಹೀಗೆ ಬಾಹುಳ್ಯವಾದ ಈ ವೈದ್ಯಶಾಸ್ತ್ರವು ಗ್ರಂಥಕರ್ತರುಗಳೂ, ಸ್ಮರಣೆ ಮಾಡಮಾಡುತ್ತ ಗ್ರಂಥಗಳೂ ಬಹಿರ್ಗತವಾಗಿವೆ. ಈ ವೈದ್ಯಗ್ರಂಥಗಳೆಲ್ಲವೂ ಸಂಸ್ಕೃತ ಭಾಷೆಯಲ್ಲಿರುವುದರಿಂದ ಅಂತಹ ಸಂಸ್ಕೃತ ಭಾಷೆಯನ್ನ ಕ್ರಮವಾಗಿ ಅಭ್ಯಾಸಮಾಡುವವರು ಸಾವಿರಕ್ಕೆ ಒಬ್ಬರಾದರೂ ಇಲ್ಲದಿರುವುದರಿಂದ ಅತ್ಯಂ ತೋಪಯುಕ್ತವಾದ ಆಯುರ್ವೇದ ವೈದ್ಯ ಗ್ರಂಥರಾಜಗಳ ಹೆಸರುಗಳನ್ನಾದರೂ ತಿಳಿದುಕೊಳ್ಳಲಾರದೆ ಅಸಮರ್ಥರಾದ ನಾವುಗಳು ಚಿಂತಾವಸ್ಥೆಯಲ್ಲಿರಬೇಕಾ ಗಿದೆ.

ಹೀಗಾದ ಕೆಲವುಕಾಲದ ಮೇಲೆ ಈ ಆಯುರ್ವೇದವು ಸ್ಮರಣೀಯಾ ವಸ್ಥೆಗೆ ಬರಲು ಈ ಕಾಲದವರಲ್ಲಿ ಕಲಕತ್ತಾ ನಗರದಲ್ಲಿದ್ದ ಸರ್ವತಂತ್ರ ಸ್ವತಂ ತ್ರರೂ ಆಯುರ್ವೇದೋದ್ಧಾರಕರೂ ಆದ ಚರಕ ಚತುರಾನನ ಗಂಗಾಧರ ಕವಿ ರಾಜವರ್ಯರವರಿಂದ ಚರಕ ಸುಶ್ರುತಗಳಿಗೆ ವ್ಯಾಖ್ಯಾನಗಳು ಬರೆದು ಪ್ರಚಾರ ಗೊಳಿಸಿದುದರಿಂದಲೂ, ಭಿಷಜ್ಕುಲಚೂಡಾಮಣಿ ಮಹಾಮಹೋಪಾಧ್ಯಾಯ ವಿಜಯರತ್ನ ಕವಿರಂಜನರೇ ಮೊದಲಾದ ಪ್ರಭೃತಿಗಳೂ ಅವರ ಶಿಷ್ಯರನೇಕರುಗ ಳಿಂದ ಈ ಆಯುರ್ವೇದವು ಲಕ್ಷ್ಯ, ಲಕ್ಷಣ, ವಿಜ್ಞಾನಪುರಸ್ಸರವಾಗಿ ಉಪದೇಶ ಹೊಂದುತ್ತಲಿರುವುದರಿಂದಲೂ "ವಂಗ" ದೇಶದಲ್ಲಿಯೂ ಆ ಸುತ್ತಮುತ್ತಲೂ ಸಹ ಈ ವಿದ್ಯೆಯು ಮತ್ತೆ ಮೊಳೆಯುವುದಕ್ಕೆ ಆರಂಭವಾಯಿತು.

ಬೊಂಬಾಯಿ ನಗರದಲ್ಲಿ ಭಾರತಭೂಷಣ ಆನರಬಲ್ ಡಾಕ್ಟರ್ ಸರ್ ಬಾಲಚಂದ್ರ ಕೃಷ್ಣ, ಕೆ. ಟಿ. ಎಲ್. ಎಂ. ಜೇ. ಪಿ., ಭಾರತ ಭೂಷಣ ಡಾಕ್ಟರ್

ದೇಶಮುಖ್ ಎಂ. ಎ. ಎಂ ಡಿ. ಮೊದಲಾದವರಿಂದ ಈಗ್ಯೆ ೨೦ ವರ್ಷಗಳ ಮುಂಚೆ ಒಂದು ಆಯುರ್ವೇದ ವಿದ್ಯಾಲಯವು ಸ್ಥಾಪಿಸಲ್ಪಟ್ಟು ಲಕ್ಷ್ಯ ಲಕ್ಷಣಾತ್ಮಕವಾಗಿ ಆಯುರ್ವೇದ ವಿದ್ಯವು ಉಪದೇಶಿಸಲ್ಪಡುತ್ತಲಿರುವುದರಿಂದ ಆ ಪ್ರಾಂತ್ಯದಲ್ಲಿ ಈ ವಿದ್ಯವು ಚಿಗುರಲು ಮೊದಲಾಯಿತು.

ಮತ್ತು ಶ್ರೀ ಶ್ರೀ ಶ್ರೀ ದರ್ಭಂಗಾ ಮಹಾರಾಜರವರು ಸರ್ ಬಾಲಚಂದ್ರ ಕೃಷ್ಣ ಆಯುರ್ವೇದ ಮಹಾಮಹೋಪಾಧ್ಯಾಯ ಶಂಕರ ದಾಜೀಪತೇ ಪ್ರಭೃತಿಗಳ ಪ್ರೋತ್ಸಾಹಬಲದಿಂದ ಶ್ರೀ ಶ್ರೀ ಶ್ರೀ ಬರೋಡಾ ಮಹಾರಾಜರವರ ಪೋಷಣೆಯಲ್ಲಿ ನಾಸಿಕಾಪುರದಲ್ಲಿ ಶ್ರೀ ಸಯ್ಯಾಜೀ ಆಯುರ್ವೇದ ವಿದ್ಯಾಪೀಠವೆಂಬ ಒಂದು ಸಭೆಯನ್ನೇರ್ಪಡಿಸಿ ಅದರ ಮೂಲಕವಾಗಿ ಆಯುರ್ವೇದ ವಿದ್ಯಾಭಿಮಾನಿಗಳಿಗೆ ಕುತೂಹಲವನ್ನೂ, ಪ್ರೋತ್ಸಾಹವನ್ನೂ ಕೊಡುತ್ತ ಬಂದಿರುವುದರಿಂದ ಬೊಂಬಾಯಿ ಪ್ರಾಂತ್ಯದಲ್ಲಿಯೂ, ಮಧ್ಯರಾಷ್ಟ್ರದಲ್ಲಿಯೂ ಈ ವಿದ್ಯವು ವ್ಯಾಪಿಸಿ ಹೊಸೆದುಕೊಳ್ಳುತ್ತಿರುವುದು ನಮಗೆ ಕಾಣಿಸುತ್ತಲೇ ಇದೆ.

ಮದ್ರಾಸಿನಲ್ಲಿದ್ದ ಪಂಡಿತ ಡಿ. ಗೋಪಾಲಾಚಾರ್ಯರವರು ಈಗ್ಯೆ ೨೦ ವರುಷಗಳ ಹಿಂದೆ ಕನ್ಯಕಾಪರಮೇಶ್ವರೀ ಸಭಾಸದರ ಪ್ರೋತ್ಸಾಹದಿಂದ ಒಂದು ಆಯುರ್ವೇದ ಕಲಾಶಾಲೆಯನ್ನು ಸ್ಥಾಪಿಸಿ ಶಾಸ್ತ್ರಾನುಭವಗಳೊಡನೆ ಆಯುರ್ವೇದಾಧ್ಯಯನವನ್ನು ಮಾಡಿಸುತ್ತ ಮುಂದುವರಿದರು.

ಮತ್ತು ಗೌರವಾರ್ಹರಾದ ಕೃಷ್ಣಸ್ವಾಮ್ಯಯ್ಯರ್, ಸಿ. ಎಸ್. ಐ, ರವರು ಮದ್ರಾಸಿನ ಮೈಲಾಪುರದಲ್ಲಿ ಒಂದು ಆಯುರ್ವೇದ ಪಾಠಶಾಲೆಯನ್ನು ವೈದ್ಯಶಾಲೆಯನ್ನು ಸ್ಥಾಪಿಸಿ ವಿದ್ಯಾಭ್ಯಾಸವನ್ನು ಜರುಗಿಸುತ್ತ ಬಂದರು.

ಆರ್ಯ ವಿದ್ಯೆಗಳಿಗೆ ಪ್ರಧಾನ ನಿಕೇತನವಾಗಿ ವಿರಾಜಿಸುತ್ತಲಿರುವ ನಮ್ಮ ಮೈಸೂರು ನಗರದಲ್ಲಿ ಸಕಲ ಕಲೆಗಳನ್ನು ಅಧ್ಯಾಯಪಡಿಸುವ ಒಂದು ಮಹಾಕಲಾಶಾಲೆಯನ್ನು ನಮ್ಮ ಶ್ರೀಮನ್ಮಹಾರಾಜರವರು ಸ್ಥಾಪಿಸಿ ಅಲ್ಲಿ ಆಯುರ್ವೇದವನ್ನು ಉಪದೇಶಿಸುವುದಕ್ಕೆ ಪ್ರತ್ಯೇಕ ಕಲಾಶಾಲೆಯನ್ನು ಸ್ಥಾಪಿಸಿರುವುದು ಸರ್ವರಿಗೂ ವಿದಿತವಾಗಿಯೇ ಇದೆ. ಹೀಗೆ ಈ ಪ್ರಾಂತ್ಯದಲ್ಲಿಯೂ ಈ ವಿದ್ಯವು ಪಲ್ಲವಿತ ಪುಷ್ಪಿತ, ಫಲಿತಾವಸ್ಥೆಯನ್ನು ಹೊಂದುತ್ತಲಿದೆ.

ಮೇಲೆ ಹೇಳಿದಂತೆ ಕೆಲವುಕಾಲ ಕ್ಷೀಣದಶೆಯನ್ನು ಹೊಂದಿ ಪುನಃ ವೃದ್ಧಿ ಹೊಂದುತ್ತಲಿರುವ ಈ ಆಯುರ್ವೇದವನ್ನು ತಕ್ಕ "ದೋಹದವನ್ನು" ಕೊಟ್ಟು ಯಥಾಕ್ರಮವಾಗಿ ವೃದ್ಧಿಹೊಂದಿಸಲಿಕ್ಕೆ ಪ್ರಯತ್ನಗಳನ್ನಾಚರಿಸುತ್ತ ಬರುವುದು ಆರ್ಯಪುತ್ರರೆಲ್ಲರಿಗೂ ಸಾಧಾರಣ ಸರಣಿಯಲ್ಲವೆ!

ಈ ಆಯುರ್ವೇದವನ್ನು ವೃದ್ಧಿ ಹೊಂದಿಸಲಿಕ್ಕೆ ಬೇಕಾದ ಮಾರ್ಗಗಳಲ್ಲಿ ಕೆಲವನ್ನು ಸೂಚಿಸಬೇಕೆಂದಿರುವೆನು.

[೧] ಆಯುರ್ವೇದ ಸಮ್ಮೇಳನಗಳು.

[೨] ದೇಶಭಾಷೆಯಲ್ಲಿ ಕಾಲಾನುಗುಣ್ಯವಾಗಿ ವೈದ್ಯಶಾಸ್ತ್ರವನ್ನು ಸುಲಭಶೈಲಿಯಲ್ಲಿ ಬರೆದು ವೈದ್ಯ ಮತ್ತು ವೈದ್ಯಾಭಿಮಾನಿಗಳಿಗೂ ದೇಶಾಭಿಮಾನಿಗಳಿಗೂ ಹಂಚುವುದು.

[೩] ಸಾಧ್ಯವಾದಷ್ಟು ರೋಗಗಳಿಗೆ ತಕ್ಕ ಸ್ವಾನುಭವ ಔಷಧಗಳನ್ನು ಶುದ್ಧವಾಗಿ ತಯಾರಿಸಿ ದೇಶಾಭಿಮಾನದಿಂದ ರೋಗಾತುರರಿಗೆ ಸುಲಭ ಬೆಲೆಗೆ ಸಿಗುವಂತೆ ಮಾಡುವುದು.

[೪] ಸಾಧ್ಯವಾದಷ್ಟು ವೈದ್ಯವಿದ್ಯೆಯನ್ನು ಕಲಿತುಕೊಳ್ಳಲಿಚ್ಛೆಯುಳ್ಳವರಿಗೆ ಮುಫತ್ತಾಗಿ ಮನೋಲುಬ್ಧವಿಲ್ಲದೆ ಪಾಠಪ್ರವಚನಗಳನ್ನು ಬೋಧಿಸುವುದು.

[೫] ಸಾಧ್ಯವಾದಷ್ಟು ಆಯುರ್ವೇದ ವೈದ್ಯಶಾಲೆಗಳನ್ನು ವೃದ್ಧಿಪಡಿಸುವುದು ದೇಶಾಭ್ಯುದಯವೆಂತ ಭಾವಿಸಿ ವೈದ್ಯಶಾಲೆಗಳನ್ನಿಡಲು ಶ್ರೀಮಂತರಿಗೂ, ರಾಜರುಗಳಿಗೂ, ಜನಸಂಸ್ಥೆಗಳವರಿಗೂ (Local Boards) ಪ್ರೋತ್ಸಾಹಪಡಿಸುವುದು

[೬] ಆಯುರ್ವೇದೀಯ ಸಂಘ ಯಾನೆ ಅಸೋಸಿಯೇಷನ್ನನ್ನು ಮಾಡಿ ತನ್ಮೂಲಕ ರಾಜಕೀಯ ಸಂಸ್ಥೆಗಳಿಗೆ ಈ ಮೂಲಕ ಮೆಂಬರುಗಳನ್ನು ಕಳುಹಿಸಿ ಅವರ ಮೂಲಕ ಆಯುರ್ವೇದೋದ್ಧಾರ ಕಾರ್ಯ ಜರುಗಲು ರಾಜಾವಲಂಬನಕ್ಕೆ ಬರುವಂತೆ ಮಾಡಿಸುವುದು.

[೭] ಪ್ರಿಂಟಿಲ್ಲದ ಆಯುರ್ವೇದ ಗ್ರಂಥಗಳನ್ನು, ಕುಪ್ಪಿಪಾತ್ರೆಗಳನ್ನು ಪ್ರಾಚೀನಕಾಲದ ಶಸ್ತ್ರಶಲಾಕ್ಯ ಸಾಮಗ್ರಿಗಳನ್ನು, ವೈದ್ಯಶಾಸನಗಳನ್ನು ತಲಾಷೆಮಾಡಿ ಅದನ್ನು ಸರ್ವತೋಮುಖವಾಗಿ ಎಲ್ಲರಿಗೂ ತಿಳಿಯುವಂತೆ ರಕ್ಷಣೆಮಾಡಿಡುವುದು

[೮] ದೇಶಭಾಷೆಯಲ್ಲಿ ಆಯುರ್ವೇದ ಪತ್ರಿಕೆಯನ್ನು ಹೊರಡುವಂತೆ ಮಾಡಿ ಅದರ ಮೂಲಕ ತಮ್ಮ ತಮ್ಮ ಸ್ವಾನುಭವಗಳನ್ನು ಮತ್ತೊಬ್ಬ ವೈದ್ಯರಿಗೆ ತಿಳಿಯುವಂತೆ ಪ್ರಚುರಪಡಿಸುವುದರ ಮೂಲಕ ವೈದ್ಯಾಭಿವೃದ್ಧಿಯನ್ನು ಮಾಡುವುದು.

[೯] ಕರ್ಣಾಟಕ ದೇಶದಲ್ಲಿ ವೈದ್ಯಾಭಿವೃದ್ಧಿಗಾಗಿ ಸರ್ವೇ ಯಾನೆ ಗ್ರೂಪುಗಳನ್ನಾಗಿ ಹಳ್ಳಿಗಳು, ಗ್ರಾಮಗಳು, ನಗರಗಳು, ಇವುಗಳನ್ನು ವಿಂಗಡಿಸಿ ಆಯಾಯ ಮಧ್ಯಪ್ರದೇಶದಲ್ಲಿ ಅಸೋಶಿಯೇಷನ್ ಮೂಲಕ, ಆಯುರ್ವೇದ ಮಂದಿರಗಳನ್ನು ಮೂಲಿಕಾ ತೋಟಗಳನ್ನು ಸ್ಥಾಪಿಸುವುದು.

[೧೦] ಆಯುರ್ವೇದ ಪ್ರತಿಭೆಯನ್ನು ಸಾಧ್ಯವಾದಷ್ಟು ಮಾತ್ರ ಜನಗಳಲ್ಲಿ ಹಬ್ಬಿಸಿ ಆಯುರ್ವೇದ ಔನ್ನತ್ಯಕ್ಕೆ ತಕ್ಕಂತೆ ಕೆಲಸಮಾಡಿ, ಪ್ರಜಾವಲಂಬನ,

ರಾಜಾವಲಂಬನವಾಗುವಂತೆ ಏರ್ಪಡಿಸುವುದು. ವೈದ್ಯರಲ್ಲಿರುವ ಪರಸ್ಪರ ದ್ವೇಷಾಸೂಯಾದಿಗಳನ್ನು ನಾಶಪಡಿಸಿ ಸೌಜನ್ಯವನ್ನು ವೃದ್ಧಿಪಡಿಸಿ ಕೊಳ್ಳುವುದು.

[೧೧] ಪ್ರತಿಯೊಬ್ಬ ವೈದ್ಯನು "ಧನ್ವಂತರಿ ಭಿಕ್ಷ" ವನ್ನು ಮಾಡಿ ತನ್ಮೂಲಕ ಬಂದ ಹಣವನ್ನು ಅಸೋಶಿಯೇಷ ನಿಧಿಗೆ ಕೊಡುವುದು.

[೧೨] ಮೂಲಿಕೆಗಳ ಪ್ರಸ್ಥಾನ (ಓಷಧಿ ಪ್ರಸ್ಥಾನ) ಕ್ಕೆ ವೈದ್ಯರುಗಳು ತಕ್ಕ ತರದೂದು ನಡಿಸುವುದು, ಸಂಸ್ಕೃತ ಮತ್ತು ಆಂಗ್ಲೇಯಭಾಷೆ ಪರಿಚಯ ವಿಲ್ಲದ ವಿದ್ಯಾರ್ಥಿಗಳಿಗೆ ದೇಶಭಾಷೆಯಲ್ಲಿಯೇ ಆಯುರ್ವೇದವನ್ನು ಕಲಿಸಲು ಏರ್ಪಡಿಸುವುದೇ ಮೊದಲಾದ ಆಯುರ್ವೇದ ಅಭಿವೃದ್ಧಿಯ ಕೆಲಸಗಳನ್ನು ಕೈಗೊಳ್ಳುವಿಕೆ, ಶ್ರೇಷ್ಠವಾದ ಮೂಲಿಕ ಮತ್ತು ಪದಾರ್ಥಗಳನ್ನು ಎಲ್ಲಾ ವೈದ್ಯರುಗಳಿಗೂ ಸಿಗುವಂತೆ ಅಸೋಸಿಯೇಷನಿಂದ ಎಲ್ಲಾ ಊರುಗಳಲ್ಲ ಯೂ ಅಂಗಡಿಗಳನ್ನು ಇಡಿಸುವುದು.

ಇಂತಹ ಉಪಾಯಗಳಿಂದಲೂ, ಪ್ರಯತ್ನಗಳಿಂದಲೂ ಆಯುರ್ವೇದ ವಿದ್ಯೆಯು ಅನುದಿನದಲ್ಲಿಯೂ ಅಭಿವೃದ್ಧಿಹೊಂದುತ್ತ ಬರುವುದಾದರೆ ಸಕಲ ಜನಗಳಿಗೂ ತುಂಬಾ ಉಪಕಾರವಾಗಿ ದೇಶೀಯರ ಉಪಯೋಗಕ್ಕೆ ತುಂಬಾ ಅವಶ್ಯಕಹೊಂದುತ್ತೆಂತ ದೃಢವಾಗಿ ನಂಬತಕ್ಕದ್ದಾಗಿದೆ.

ಇಷ್ಟೇ ಹೇಳುವುದರಿಂದ ಪ್ರಾಚೀನಾಯುರ್ವೇದ ಚರಿತ್ರೆಯನ್ನು ಅದು ಅಭಿವೃದ್ಧಿ ಹೊಂದುವ ಮಾರ್ಗಗಳನ್ನು ತಕ್ಕಷ್ಟು ಹೇಳಿದಂತಾಯಿತೇ ಹೊರತು ಈ ಆಯುರ್ವೇದದಲ್ಲಿರುವ ವಿಷಯಗಳೇನು ? ಇದರ ತತ್ವವೇನು ? ಇದರ ಅವ ಶ್ಯಕವೇನು ? ಎಂಬ ವಿವರಗಳನ್ನು ಹೇಳಿದಂತಾಗಲಿಲ್ಲಾ. ಆದುದರಿಂದ ಆಯು ರ್ವೇದದ ಪ್ರಾಶಸ್ತ್ಯವನ್ನು ಕುರಿತು ಸಂಗ್ರಹವಾಗಿ ಹೇಳಿಯೇ ತೀರಬೇಕಾಗಿದೆ ಹೀಗೆ ಹೇಳುವುದು ಪುನರುಕ್ತಿ ಎಂದೆನ್ನಿಸಿಕ್ಕೊಳ್ಳಲಾರದೆಂಬುದೆ ನನ್ನ ಭಾವನೆ.

## ಆಯುರ್ವೇದ ಪ್ರಾಶಸ್ತ್ಯ.

"ಆಯುರ್ಹಿತಾ ಹಿತಂ ವ್ಯಾಧೇರ್ನಿದಾನಂ ಶಮನಂ ತಥಾ । ವಿದ್ಯತೇ ಯತ್ರ ವಿದ್ವದ್ಭಿರಾಯುರ್ವೇದಸ್ಸ ಉಚ್ಯತೇ" ಆಯುಸ್ಸನ್ನೂ, ಅದರ ಹಿತಾ ಹಿತಗಳನ್ನೂ ವ್ಯಾಧಿಗಳ ಕಾರಣಾದಿ ವಿಜ್ಞಾನಗಳನ್ನೂ ವ್ಯಾಧಿಗಳ ಚಿಕಿತ್ಸೆಗ ಳನ್ನೂ ಯಾವುದು ಬೋಧಿಸುವುದೊ ಅದು ಆಯುರ್ವೇದವೆಂದೆನ್ನಿಸಿಕೊಳ್ಳು ವುದು.

"ಅನೇನ ಪುರುಷೋಯಸ್ಮಾ ದಾಯುರ್ವಿಂದತಿ ವೇತ್ತಿಚ । ತಸ್ಮಾನ್ಮುನಿ ವರ್ರೈರೇಷ ಆಯುರ್ವೇದಃ ಪ್ರಕೀರ್ತಿತಃ ॥" ಇದರಿಂದ ಮನುಷ್ಯರು ದೀರ್ಘಾ ಯುರ್ಲಾಭವನ್ನು ತತ್ವಜ್ಞಾನವನ್ನು ಹೊಂದುವರು. ಆದುದರಿಂದ ಇದು

ಆಯುರ್ವೇದವೆಂದೆನಿಸುವುದು ಎಂದು ಹೇಳಲ್ಪಡುವ ಪ್ರಮಾಣಗಳಿಂದಲೇ ಆಯುಸ್ಸಿಗೆ ಹಿತಾಹಿತಗಳಾದುವುಗಳನ್ನು ರೋಗಜ್ಞಾನ ಚಿಕಿತ್ಸೆಗಳನ್ನೂ, ದೀರ್ಘಜೀವನ ಸಾಧನೆಗಳನ್ನೂ, ತದ್‌ಜ್ಞಾನವನ್ನೂ ತಿಳಿಸತಕ್ಕದ್ದು ಆಯುರ್ವೇದವೆಂತ ನಿರ್ಣಯಿಸಲಾಗುತ್ತದೆ. ರೋಗನಿದಾನ ಚಿಕಿತ್ಸಾದಿಗಳು ಸರ್ವ ಚಿಕಿತ್ಸಾ ಶಾಸ್ತ್ರಗಳಲ್ಲಿಯೂ ಹೇಳಿದ್ದಾಗ್ಯೂ ದೀರ್ಘ ಜೀವನ ಸಾಧನೆಗಳನ್ನು, ತದ್‌ಜ್ಞಾನವನ್ನು, ರಸಾಯನಾದಿ ಪ್ರಕ್ರಿಯೆಗಳನ್ನೂ, ಆಯುರ್ವೇದದಂತೆ ಮತ್ತೆಲ್ಲಿಯೂ ಹೇಳದೆಯಿರುವುದರಿಂದ ಇದರಲ್ಲಿ ಚಿಕಿತ್ಸಾದಿ ಸರ್ವ ವಿಷಯಗಳನ್ನೂ ತ್ರಿಕಾಲ ಜ್ಞಾನಸಂಪನ್ನರಾದ ಋಷಿಗಳು ಸರಿಯಾಗಿ ಸೇರಿಸಿರುವುದರಿಂದಲೇ ಇದು ವೈದ್ಯ ವಿಜ್ಞಾನ ವಿಷಯದಲ್ಲಿ ಸಮಸ್ತ ವಿಷಯಗಳನ್ನು ತಿಳಿಸುತ್ತಾ ಕಲ್ಪವೃಕ್ಷದಂತೆ ವಿರಾಜಿಸುತ್ತಲಿದೆ ಮತ್ತು ಅಮೃತಪ್ರಾಶ, ಚ್ಯವನಪ್ರಾಶ, ಅಮೃತಭಲ್ಲಾತಕ, ವಸಂತಕುಸುಮಾಕರ, ಪೂರ್ಣಚಂದ್ರೋದಯಾದಿ ರಾಸಾಯನಿಕ ಔಷಧಗಳ ಪ್ರಭಾವದಿಂದ ಮುದುಕರು ಕೂಡ ಯೌವ್ವನವಂತರಾಗುವರೆಂಬುವುದು ಈ ಆಯುರ್ವೇದದ ಗೌರವವನ್ನೂ ಸಹಸ್ರಮುಖಗಳಿಂದ ಘೋಷಿಸುತ್ತಲಿದೆಯಲ್ಲದೆ ಏತದ್ಭಿನ್ನ ಸಂಪ್ರದಾಯಕ್ಕೆ ಸೇರಿದ ವೈದ್ಯರಿಗೂ ಕೂಡ ತುಂಬಾ ಆಶ್ಚರ್ಯವನ್ನುಂಟುಮಾಡುತ್ತಲಿದೆ.

ಈ ಆಯುರ್ವೇದಕ್ಕಿರುವ ವೈಶಾಲ್ಯವನ್ನೂ ಆಯುರ್ವೇದ ಶಬ್ದದ ಅವಯವಾರ್ಥವನ್ನೂ ವಿಚಾರಮಾಡಿ ನೋಡಿದರೆ ಇದು ಕೇವಲ ಮಾನವಕೋಟಿಗೆ ಉಪಯೋಗಿಸತಕ್ಕದ್ದಲ್ಲದೆ ಪಶು, ಪಕ್ಷಿ, ಗಜ, ತುರಗ, ತರುಲತಾದಿಗಳಿಗೂ ಸಂಬಂಧಿಸಿದ ವೈದ್ಯಶಾಸ್ತ್ರಕ್ಕೂ ಕೂಡ ಅಂಗವಾಗಿದೆಯೆಂತಲೆ ತಿಳಿಯಬರುತ್ತದೆ. ಆದುದರಿಂದಲೇ ಗಜಾಯುರ್ವೇದವೆಂತಲೂ, ಅಶ್ವಾಯುರ್ವೇದವೆಂತಲೂ, ವೃಕ್ಷಾಯುರ್ವೇದವೆಂತಲೂ, ಆಯಾಭಾಗಗಳಿಗೆ ಸೇರಿದ ವೈದ್ಯಶಾಸ್ತ್ರಗಳೆಲ್ಲವೂ ಆಯುರ್ವೇದಾಂಗಗಳೆಂತ ಹೇಳಲ್ಪಟ್ಟಿರುತ್ತದೆ. ಆಯುರ್ವೇದವೇತ್ತರಾದ ನಮ್ಮ ಪೂರ್ವಿಕರು ತರುಲತಾದಿಗಳನ್ನೂ ಕೂಡ ಜೀವರಾಶಿಗಳಲ್ಲಿ ಸೇರಿಸಿ ಅವುಗಳನ್ನೂ, ಸ್ಥಾವರ ಪ್ರಾಣಿಗಳನ್ನಾಗಿ ಪರಿಗಣಿಸಿರುತ್ತಾರೆ.

ಈ ವಿಷಯವನ್ನು ಕುರಿತು ಸುಪ್ರಸಿದ್ಧ ರಾಸಾಯನಿಕ ಶಾಸ್ತ್ರಜ್ಞರಾದ **ಡಾಕ್ಟರ್ ಜಗಧೀಶಚಂದ್ರ ಬೋಸರವರು** ಅವರ ರಾಸಾಯನಿಕಶಾಸ್ತ್ರ ವಿಮರ್ಶನಗಳಿಂದ ತರುಲತಾದಿಗಳು ಸ್ಥಾವರ ಪ್ರಾಣಿಕೋಟಿಗಳಿಗೆ ಸೇರಿರುವುದೆಂದು ದೃಢಪಡಿಸುತ್ತಾ, ನಮ್ಮ ಮಹರ್ಷಿಗಳು ಇಂತಹ ಜ್ಞಾನವನ್ನು ಬಹಳ ಕಾಲಕ್ಕೆ ಮುಂಚೆಯೇ ಹೊಂದಿದ್ದರಲ್ಲವೇ ! ಎಂಬ ತಮ್ಮ ಪರಮಾನಂದವನ್ನು ತಿಳಿಸಿರುವರು.

ಭಾರತೀಯರ ದುರದೃಷ್ಟದಿಂದ ಆಯುರ್ವೇದ ವಿಷಯಗಳನ್ನು ವಿವರಿಸುವ ಅನೇಕ ಉತ್ತಮ ಗ್ರಂಥಗಳು ವಿಲುಪ್ತಗಳಾಗಿ ಹೋಗಿರುತ್ತವೆ. ಈಗ ಅಗ್ನಿ

ಪುರಾಣ, ಶಾಲಿಹೋತ್ರ ಮೊದಲಾದ ಗ್ರಂಥಗಳಿಂದ ಆಯುರ್ವೇದಾಂಗಗಳ ವಿವರಣಗಳು ಮಾತ್ರವೇ ತಿಳಿಯಲ್ಪಡುತ್ತವೆ. ಈ ಕಾರಣಗಳಿಂದ ಅನೇಕಾಂಗಳಿಂದೊಡಗೂಡಿದ ಆಯುರ್ವೇದವು ಮನುಜಕೋಟಿಗೆ ಮಾತ್ರ ಉಪಯೋಗಿಸಲ್ಪಡುವ ಚಿಕಿತ್ಸಾಶಾಸ್ತ್ರ ಮಾತ್ರವಾಗಿ ಈಗ ಲೋಕಪ್ರಸಿದ್ಧಿ ಹೊಂದಿರುವದೆ. ಅಂತಹ ಪ್ರಸಿದ್ಧಿಯನ್ನು ಅನುಸರಿಸಿಯೇ ಈಗ ವಿಷಯಗಳು ಹೇಳಲ್ಪಡುವುದು

## ಆಯುರ್ವೇದವೂ ಮತ್ತು ಅದರ ಅನಾದಿತ್ವವು.

ವೈದಿಕಕಾಲದಲ್ಲಿದ್ದ ಆಯುರ್ವೇದೀಯ ಚಿಕಿತ್ಸೆಗಳನ್ನು ಬೋಧಿಸತಕ್ಕ "ಯುವಂಚ್ಯವಾನ ಮಶ್ವಿನಾಜರಂತಂ" "ಅಸ್ಯ ಅಶ್ವಿನಾ ಪತ್ಯಾಪಿಚಕ್ಷ ಆಥತ್ತಂ ಧಸ್ರಾಭಿಷಜಾವನರ್ವ" "ಸದ್ಯೋಜಂಘಾಂ ಆಯಸೀಂ ವಿಶ್ಪಲಾಯೈ" "ಅಥೇನುಂದಸ್ರಾಸ್ತ್ರರ್ಯಂ ವಿಷಕ್ತಾಮಪಿನ್ವತಂ ಶಯವೇ ಅಶ್ವಿನಾಗಾಂ" ಎಂದೆನ್ನುವುದೇ ಮೊದಲಾದ ಕೆಲವು ವಾಕ್ಯಗಳು ಋಗ್ವೇದದಲ್ಲಿ ಕಾಣಸುವದರಿಂದಲೂ, ಋಗ್ವೇದಕ್ಕೆ "ಋಗ್ವೇದಸ್ಯೋಪವೇದಃ ಆಯುರ್ವೇದಃ" ಎಂತ ಚರಣವ್ಯೂಹದಲ್ಲಿ ಶ್ರೀ ವೇದವ್ಯಾಸರು ಉಪವೇದವೆಂತ ಹೇಳಿರುವದರಿಂದಲೂ "ಋಗ್ವೇದೋಪವೇದಾಂಗಂ ಕಾಶ್ಯಪಂರಜತಂಪುರಾ" ಎಂತು ಕಾಶ್ಯಪ ಸಂಹಿತೆಯಲ್ಲಿಯೂ ಕೂಡ ಹೇಳಿರುವದರಿಂದಲೂ "ಇಹಖಲ್ವಾಯುರ್ವೇದೋ ನಾಮಯದುಪಾಂಗಮಥರ್ವವೇದಸ್ಯ" ಎಂತ ಸುಶ್ರುತ ಸಂಹಿತೆಯಲ್ಲಿಯೂ "ಭಿಷಜಾಪೃಷ್ಟೈ ನೈವಚತುರ್ಣಾಂ ವೇದಾನಾಂ ಆತ್ಮನೋಥರ್ವವೇದೇ ಭಕ್ತಿರಾದೇಶ್ಯಾ" ಎಂದು ಚರಕ ಸಂಹಿತೆಯಲ್ಲಿಯೂ, ಅಥರ್ವವೇದೋಪವೇದವಾಗಿ ಹೇಳಿರೋಣದರಿಂದಲೂ, ವೇದಾದಿಗಳಂತೆ ಆಯುರ್ವೇದವೂ ಅನಾದಿಯಂತಲೇ ಸಿದ್ಧವಾಗುತ್ತದೆ. ಇಲ್ಲಿ ವ್ಯಾಸ ಕಶ್ಯಪಾದಿಗಳಿಗೂ, ಚರಕ ಸುಶ್ರುತಾದಿಗಳಿಗೂ ಕೂಡಾ ಇದರ ಉಪವೇದತ್ವದ ವಿಷಯದಲ್ಲಿ ಪರಸ್ಪರಭೇದಗಳು ತೋರುತ್ತಿದ್ದರೂ, ಋಗ್ವೇದದಲ್ಲಿ ಆಯುರ್ವೇದ ಚಿಕಿತ್ಸೆಗಳು ಚರಿತ್ರಾಂತರ್ಗತಗಳಾಗಿ ಹೇಳಿರುವುದರಿಂದ ವ್ಯಾಸಾದಿಗಳು ಋಗ್ವೇದಸ್ಯೋಪವೇದವಾಗಿಯೂ, ಮೇಲ್ಕಂಡಂತೆ "ಪ್ರತೇಭಿನದ್ಮಿಮೇಹನಂ ವರ್ತ್ರಂ ವೇಶಂತ್ಯಾ ಇವ" "ಏವಾತೇ ಮೂತ್ರ ಮುಚ್ಯತಾಂಬಹಿಃ ಬಾಲಿಃ ಸರಕಂ" "ನಕ್ತಂಜಾತಾ ಸ್ಯೋಷಧೆ ರಾಮೇ ಕೃಷ್ಣೆ ಅಸಿಕ್ನಿಚ । ಇದಂ ರಜನಿರಜಯಕಿಲಾಸಂ ಪಲಿತಂ ಚ ಯತು ॥" "ಸುಪರ್ಣೋರ್ಜಾತಃ ಪ್ರಥಮಸ್ತ ಸ್ಯತ್ವಂ ಪಿತ್ತಂ ಆಸೀಧ। ತದಾಸುರೀಯ ರಾಜತಾರೂಪಂಚ ವನಸ್ಪತಿಂ ॥" "ಶತಾವರೋ ಅನಿನಶತು ಯಕ್ಷ್ಮಾಂ ರಕ್ಷಾಂಸಿ ತೇಜಸಾ । ಆರೋಹರ್ ವರ್ಜಸಾಸಹ ಮಣಿಂ ದುರ್ನಾಮ ಚಾತನಃ" ಎಂಬಿವೇ ಮೊದಲಾದ ಅಥರ್ವವೇದವಾಕ್ಯಗಳಂತ, ಅಶ್ಮರಿ, ಮೂತ್ರಕೃಛ್ರ, ಮೂಢಗರ್ಭ, ಕುಷ್ಠ, ಶ್ವಿತ್ರ, ಯಕ್ಷ್ಮ, ಅತಿಸಾರ, ಜ್ವರಾತಿ

ಸಾರಾದಿವ್ಯಾಧಿಗಳಿಗೆ ಲೋಹಶಲಾಕಾದಿಗಳಿಂದ "ವಿದಾರುಣ" (ರಕ್ಷೆ) ವನ್ನ ಹೇಳಿಯೂ ಶತಾವರ್‍ಯಾದಿ ಯೋಗಗಳನ್ನು ಹೇಳಿಯೂ ಚಿಕಿತ್ಸೆಗಳನ್ನು ವಿಪುಲ ವಾಗಿ ಬೋಧಿಸಲ್ಪಟ್ಟಿರೋಣದರಿಂದ ಸುಶ್ರುತಾದಿಗಳು ಅಥರ್ವಣವೇದಕ್ಕೆ ಆಯುರ್ವೇದವು ಅಂಗವೆಂತ ಹೇಳಿರುವುದು ದೋಷವಲ್ಲ

ಆಯುರ್ವೇದದ ಪ್ರಾಚೀನತೆ ಮತ್ತು ಪ್ರಾಶಸ್ತ್ಯವನ್ನು ಕುರಿತು ಪಾಶ್ಚಾತ್ಯ ವೈದ್ಯಪುಂಗವರ ಸಮ್ಮತಿಯನ್ನು ಕುರಿತು "ಡಾಕ್ಟರ್ ರಾಯಿಲ್, ಡಾ|| ವೈಸ್, ಸರ್ ವಿಲಿಯಂ ಹಂಟರ್, ಕರ್ನಲ್ ಲೂಕೀಸ್, ಕರ್ನಲ್ ಕಿಂಗ್, ಗೊಂಡಾಲ್‌ದೇಶದ ಮಹಾರಾಜರು, ಡಾ|| ಪ್ರಫುಲ್ಲ ಚಂದ್ರರಾಯ್" ಮೊದ ಲಾದ ವಿದ್ವದ್ವೈದ್ಯ ಪುಂಗವರು ತಮ್ಮ ತಮ್ಮ ಗ್ರಂಥಗಳಲ್ಲಿಯೂ, ಚರಿತ್ರೆ ಗಳಲ್ಲಿಯೂ, ಚನ್ನಾಗಿ ನಿರೂಪಿಸಿರೋಣದರಿಂದಲೂ, ಚರಕ, ಸುಶ್ರುತ ಸಂಹಿತೆ ಗಳು, ಮಾಧವ ನಿದಾನವೂ, ಕ್ರಿಸ್ತಶಕ ಅಷ್ಟಮ ಶತಾಬ್ದದಲ್ಲಿ "ಬಾಗ್ ದಾದ್" ನಗರದಲ್ಲಿ "ಕಾಲಿಫ್ ಎಂಬ ಮಹಮ್ಮದೀಯ ಪ್ರಭುವರನ ಪರಿ ಪಾಲನಾ ಕಾಲದಲ್ಲಿ ತದಾಸ್ಥಾನ ವಿದ್ವಾಂಸರುಗಳಿಂದ ಅರಬ್ಬೀಭಾಷೆಗೆ ಪರಿವರ್ತನೆ ಮಾಡಲ್ಪಟ್ಟಿದ್ದರಿಂದಲೂ, ಈ ವಿಷಯಗಳನ್ನು ಕುರಿತು ವಿಶೇಷ ವಾಗಿ ಹೇಳುವುದು ಚರ್ವಿತಚರ್ವಣವಾಗಬಹುದೆಂದು ಈ ವಿಷಯವನ್ನ ಇಲ್ಲಿಗೆ ನಿಲ್ಲಿಸಲಾಗಿದೆ.

## ಆಯುರ್ವೇದ ವಿಭಾಗಗಳ ವಿವರ.

ಕೃತ್ಯಾಕೃತ್ಯವಾದ ಆಯುರ್ವೇದವು ವಿವಿಧ ಚಿಕಿತ್ಸೆಗಳ ಸೌಕರ್ಯಕ್ಕಾಗಿ ಆದಿಯಲ್ಲಿ :—

[೧] ಶಲ್ಯತಂತ್ರ-(Science of surgery)

[೨] ಶಾಲಾಕ್ಯತಂತ್ರ-(Science of Eye, Nose, Throat etc, diseases)

[೩] ಕಾಯಚಿಕಿತ್ಸಾ-(General treatment)

[೪] ಭೂತವಿದ್ಯಾ-(Demoniacal diseases)

[೫] ಕೌಮಾರಭೃತ್ಯ-(Management of children)

[೬] ಅಗದತಂತ್ರ ಅಥವ ಜಾಂಗುಲಿಕವೈದ್ಯ-(Texicology)

[೭] ರಸಾಯನತಂತ್ರ-(Science of Revigouration)

[೮] ವಾಜೀಕರಣ ತಂತ್ರ- (Science of Aphrodisiac) ಎಂದು ಎಂಟು ವಿಧಗಳಾಗಿ ವಿಭಾಗಿಸಲ್ಪಟ್ಟಿದೆ.

(೧) **ಶಲ್ಯತಂತ್ರ**—ಶಲ್ಯತಂತ್ರದಲ್ಲಿ ಶಲ್ಯವಿಷಯಗಳನ್ನು, ಯಂತ್ರಶಸ್ತ್ರ ಗಳು, ತನ್ನಿರ್ಮಾಣಗಳು, ವಿಭಾಗಗಳು, ತತ್ಕೃತ್ಯಗಳು, ತದ್ವಿಧಾನಗಳು, ಸಹಾ

ತೋರಿಸಲ್ಪಡುತ್ತವೆ ಅದರಲ್ಲಿ ತೋರಿಸಲ್ಪಡುವ ಸಿಂಹಮುಖಾದಿ ಎಂತ್ರಗಳೂ, ಆ ಎಂತ್ರ ನಿರ್ಮಾಣದ ವಿಷಯವಾಗಿ ಸಿಂಹಾದ್ಯಾದಿ ಮುಖಸಾಮ್ಯಕ್ಕೆ ಹೇಳಲ್ಪಟ್ಟ ಯುಕ್ತಿಯು, ಅರ್ಶೋ (Piles) ರೋಗಾದಿಗಳಲ್ಲಿ ಯಂತ್ರಗಳನ್ನು ಉಪಯೋಗಿಸುವ ಪದ್ಧತಿಗಳು, ಶಸ್ತ್ರಕರ್ಮಗಳೂ, ತದ್ವಿಧಾನವೂ ಅದರಲ್ಲಿನ ನಿಪುಣತೆಯು ಆಧುನಿಕಾಂಗ್ಲೇಯ ಶಸ್ತ್ರಚಿಕಿತ್ಸಕರಿಗೂ ಕೂಡ ಆಶ್ಚರ್ಯಕರವಾಗಿದೆಯೆಂದು ಹೇಳಿದರೂ ಅತಿಶಯೋಕ್ತಿಯಾಗಲಾರದು.

(೨) ಶಾಲಾಕ್ಯ ತಂತ್ರವು—ಈ ತಂತ್ರದಲ್ಲಿ ಕಂಠದಿಂದ ಮೇಲಕ್ಕಿರುವ ಕಣ್ಣು, ಕಿವಿ, ಮೂಗು, ಹಲ್ಲುಗಳು, ನಾಲಿಗೆ, ತುಟಿಗಳೂ, ಕೊರಳೂ, ಶಿರಸ್ಸು ಮೊದಲಾದ ಅವಯವಗಳಿಗುಂಟಾಗುವ ವ್ಯಾಧಿಗಳು, ಅವುಗಳ ನಿದಾನಾ (ಪೂರ್ವಕಾರಣ) ದಿಗಳೂ, ನೈಪುಣ್ಯಗಳಾದ ಶಸ್ತ್ರಚಿಕಿತ್ಸೆಗಳೂ, ಸಾಮಾನ್ಯ ಚಿಕಿತ್ಸೆಗಳೂ ಸಹಾ ಪ್ರತ್ಯೇಕವಾಗಿಯೂ, ವಿಪುಲವಾಗಿಯೂ, ನಿರೂಪಿಸುತ್ತದೆ. ಮತ್ತು ಈತಂತ್ರದಲ್ಲಿ ಹೇಳಿರುವ ನೇತ್ರರೋಗದಲ್ಲಿ ಲಿಂಗನಾಶನಕ್ಕಾಗಿ ಮಾಡುವ ಶಸ್ತ್ರಚಿಕಿತ್ಸೆಗಳನ್ನು ಗಳರೋಗದಲ್ಲಿ ರೋಹಿಣೀವ್ಯಾಧಿಗಾಗಿ ನಿಯಮಿತಗಳಾದ ಶಸ್ತ್ರಚಿಕಿತ್ಸೆಗಳನ್ನು ಪರಿಶೀಲಿಸಿ ನೋಡುವುದಾದರೆ ಈ ಕಾಲದಲ್ಲಿ ಪ್ರಸಿದ್ಧಿ ಹೊಂದಿದ ಪಾಶ್ಚಾತ್ಯ ಶಸ್ತ್ರಚಿಕಿತ್ಸೆಗಳಿಗೆ ಹಿಂತೆಗೆಯಲಾರದೆಂತ ಹೇಳುವುದು ಆನಂದಮಾಡದೆ ಇರಲಾರದು ಮತ್ತು ಈ ತಂತ್ರದಲ್ಲಿ ನಿರೂಪಿತವಾಗಿರುವ ಶಿರೋವಸ್ತಿ ವಿಧಗಳು ಈಗಿನ ನಾಗರೀಕ ವೈದ್ಯವಿದ್ಯಾವೇತ್ತರಿಗೂ ಕೂಡ ಆಶ್ಚರ್ಯವನ್ನೇ ಉಂಟುಮಾಡುವುದು. ಈರೀತಿಯಾಗಿ ಪ್ರತ್ಯೇಕ ಚಿಕಿತ್ಸಾ ಭಾಗವಾದ ಚಿಕಿತ್ಸಾ ತಂತ್ರಗಳು ಪ್ರಕೃತಕಾಲದಲ್ಲಿ ವಿರಳಪ್ರಚಾರಗಳಾಗಿ ಆಯುರ್ವೇದದಲ್ಲಿ ಹೀಗೆ ಪ್ರತ್ಯೇಕ ಚಿಕಿತ್ಸಾತಂತ್ರಗಳು ಉಂಟೇ? ಎಂದೆನ್ನುವಂತೆ ಸಂದೇಹಾಸ್ಪದವಾಗಿರುವುದು.

(೩) ಕಾಯಚಿಕಿತ್ಸೆ—ಅಂದರೆ ಯಂತ್ರಶಸ್ತ್ರಾದಿಗಳ ಅವಶ್ಯವಿಲ್ಲದೆ ಕೇವಲ ಔಷಧಗಳಿಂದಲೇ ರೋಗನಿವಾರಣವನ್ನು ಮಾಡುವ ವಿಧಾನವು. ಈ ತಂತ್ರದಲ್ಲಿ ಸಾಮತ್ವ, ನಿರಾಮತ್ವ, ಭೇದದಿಂದ ರೋಗಗಳನ್ನರಿತು ಔಷಧವನ್ನು ಪಯೋಗಿಸುವ ವಿದಾನಗಳು ನಿರೂಪಿಸಲ್ಪಟ್ಟಿರುತ್ತವೆ. "ಜ್ವರಸ್ಯಪೂರ್ವರೂಪೇ ಲಘ್ವಶನ ಅಪತರ್ಪಣಂವಾ" "ಜ್ವರಿತಂ ಷಡಹೇತೀತೇಲಘ್ವನ್ನಂ ಪ್ರತಿಭೋಜಯೇತ್" ಇತ್ಯಾದಿಗಳಿಂದ ಚರಕದಲ್ಲಿ ಜ್ವರಿತನಿಗೆ ಆರುದಿನಗಳು ಲಂಘನಾನಂತರ ಲಘ್ವಶನವನ್ನು (ಸುಲಭವಾಗಿ ಜೀರ್ಣವಾಗುವ ಗಂಜಿ ಮೊದಲಾದ ಆಹಾರಗಳನ್ನು) ಹೇಳಿರುತ್ತದೆ "ಶೋಫ" ರೋಗದಲ್ಲಿ ಅದಕ್ಕೆ ಹೇತುಗಳಾದ ಜಲಪಾನ ಲವಣ ಭಕ್ಷಣಾದಿಗಳನ್ನ ನಿಷೇಧಿಸಿ ಕ್ಷೀರಪಾನಾದಿಗಳನ್ನು ಪದೇಶಿಸಿರುತ್ತದೆ. ಅರ್ಶೋರೋಗ, ಗ್ರಹಣಿ, ವಾತ, ಕಫ, ಜ್ವರಾದಿಗಳಲ್ಲಿ

ಮಜ್ಜಿಗೆಯನ್ನುಪಯೋಗಿಸುವುದಕ್ಕಿಂತ ಉತ್ತಮ ಚಿಕಿತ್ಸೆಯಿಲ್ಲವೆಂತ ಚರಕಾಚಾರ್ಯರು ಹೇಳಿರುತ್ತಾರೆ.

ಇಂಗ್ಲೆಂಡ್, ಜರ್ಮನಿ ಮೊದಲಾದ ಪಾಶ್ಚಾತ್ಯ ದೇಶಗಳಲ್ಲಿ ತಕ್ರ (ಮಜ್ಜಿಗೆ) ನಿರ್ಮಾಣವನ್ನು ಅದರ ಗುಣಗಳನ್ನು ಈಗೀಗ ತಿಳಿದುಕೊಳ್ಳುತ್ತಿರುವರು. ವಮನ, ವಿರೇಚನ, ಧೂಮಪಾನಾದಿ ಶೋಧನ ಚಿಕಿತ್ಸೆಗಳನ್ನು, ಅತಿಕ್ರೂರವಾದ ಪಕ್ಷವಾತಾದಿ ವ್ಯಾಧಿಗಳಲ್ಲಿ ವಸ್ತಿ ಪ್ರಯೋಗಗಳನ್ನು, ತದ್ವಿಶೇಷಗಳನ್ನು ಆಯುರ್ವೇದದಲ್ಲಲ್ಲದೆ ಇನ್ನೆಲ್ಲಿಯೂ ಇಷ್ಟು ಚೆನ್ನಾಗಿ ವಿವರಿಸಿರುವುದಿಲ್ಲ. ಈಗಿನವರ ವಸ್ತಿ (Enema) ವಿಧಾನವೂ ಬಿಸಿನೀರಿನಲ್ಲಿ ಮಾತ್ರವೇ ನಿವರ್ತಿಆಗುತ್ತದೆ. ಹೀಗೆ ಕಾಯಚಿಕಿತ್ಸೆಯಲ್ಲಿನ ಪೂರ್ವಕಾಲದವರ ನಿಪುಣತೆಯನ್ನು ತಿಳಿಸುವ ವಿಷಯಗಳು ಅಸಂಖ್ಯಾತಗಳಾಗಿರುತ್ತವೆ. ಅವೆಲ್ಲವೂ ವೈದ್ಯಪುಂಗವರೆಲ್ಲರೂ ತಿಳಿದ ವಿಷಯವೇ. ಆದುದರಿಂದ ಇಷ್ಟಕ್ಕೆ ಅದನ್ನು ವಿರಮಿಸಲಾಗಿದೆ. ಕಾಯಚಿಕಿತ್ಸೆಗೆ ಸಂಬಂಧಿಸಿದ ಅದ್ಭುತ ವಿಷಯಗಳನೇಕಗಳು ಪೂರ್ವದವರಿಂದ ಬಹಳಕಾಲಕ್ಕೆ ಹಿಂದೆಯೇ ತಿಳಿಸಲ್ಪಟ್ಟಿರುತ್ತವೆ. ಆದರೂ ಆ ವಿಷಯಗಳು ಪಾಶ್ಚಾತ್ಯರೀಗೀಗ ಕಂಡುಕೊಳ್ಳುತ್ತಿರುವರೆಂತ ಅನೇಕರು ಅಂದುಕೊಳ್ಳುವರು.

(೪) **ಭೂತವಿದ್ಯ**—ಅಪಸ್ಮಾರವು, ಉನ್ಮಾದವು, ಭೂತೋನ್ಮಾದವೇ ಮೊದಲಾದ ಮಾನಸಿಕರೋಗಗಳನ್ನು ಅವುಗಳ ಚಿಕಿತ್ಸೆಗಳನ್ನು ಈ ತಂತ್ರವು ತಿಳಿಸುವುದು. ಈ ತಂತ್ರಕ್ಕೆ ಸೇರಿದ ಗ್ರಂಥಗಳು ಈ ಕಾಲದಲ್ಲಿ ಅಷ್ಟಾಗಿ ಕಾಣಿಸುವುದಿಲ್ಲ. ಇಂಥಹ ಮಾನಸಿಕರೋಗಗಳಿಗೆ "ಪಂಚಗವ್ಯ" ಪ್ರಯೋಗದಂತಹುದು ಮತ್ತೆಬೇರೆ ಕಾಣಿಸುವುದೇಯಿಲ್ಲ. ಮಾಂಸಿ, ಬ್ರಾಹ್ಮಿ, ಮಾತುಲುಂಗ ಮೊದಲಾದ ಓಷಧಿಗಳು ಈ ವಿಷಯದಲ್ಲಿ ಒಳ್ಳೆಯ ಫಲವನ್ನು ಕೊಡತಕ್ಕದ್ದಾಗಿರುತ್ತವೆ. ಇವುಗಳ ಸಂಬಂಧವಾದ ಸಾಮಾನ್ಯಾಂಜನಗಳಿಂದಲೂ ಕೂಡ ಪ್ರತಿಯೊಬ್ಬರೂ ಮಾನಸಿಕ ರೋಗಗಳನ್ನ ನಿವೃತ್ತಿಮಾಡುತ್ತಿರುವುದು ತುಂಬಾ ಆಶ್ಚರ್ಯಕರವಾಗಿದೆ.

(೫) **ಕೌಮಾರಭೃತ್ಯ**—ಈ ಭಾಗದಲ್ಲಿ ಮುಖ್ಯವಾಗಿ ವಿವರಿಸುವ ವಿಷಯಗಳು ಸಂತಾನೋತ್ಪತ್ತಿ ವಿಷಯವಾಗಿ ತಂದೆತಾಯಿಗಳ ವರ್ತನವನ್ನು ಗರ್ಭಧಾರಣ ಮೊದಲು ಪ್ರಸವದವರೆಗೂ ತಾಯಿಯ ವರ್ತನವನ್ನೂ; ಉತ್ಪನ್ನವಾದ ಶಿಶುವಿನ ರಕ್ಷಣೆಯೆ ಮೊದಲಾದ ವಿಷಯಗಳನ್ನು ತುಂಬಾ ಬುದ್ಧಿವಂತಿಕೆಯಿಂದ ತೋರಿಸುತ್ತದೆ. ಸುಶ್ರುತ ಶಾರೀರದಲ್ಲಿ "ಗದಾಸಂಜೀವನ್ಯಾಧಿ" ಗ್ರಂಥಗಳಲ್ಲಿ ಪ್ರಸವವಾಗುವವರೆಗೂ ಗರ್ಭಿಣಿಗಳಿಗುಂಟಾಗುವ ವ್ಯಾಧಿಗಳಿಗಾಗಿ ನಿರೂಪಿಸಿರುವ "ಮಾಸಾನುಮಾಸಿಕ" ಗಳಾದ ಚಿಕಿತ್ಸೆಗಳು ಪರಮಾಹ್ಲಾದವ

ನ್ನುಂಟುಮಾಡುವುದು. "ಸುಶ್ರುತಚಿಕಿತ್ಸೆ" ಹದಿನೈದನೆಯ ಅಧ್ಯಾಯದಲ್ಲಿ "ಮೂಢಗರ್ಭ" ಚಿಕಿತ್ಸೆಯನ್ನು ಕುರಿತು ಹೇಳಿರುವ "ಉತ್ಕರ್ಷಣಾ ಕರ್ಷಣ ಸ್ಥಾಪನಾಪವರ್ತನೋತ್ಕರ್ತ ಛೇದನ ಭೇದನ ಪೀಡನ ಋಜೂಕರ್ಣ ಧಾರಣಾನಿ" ಎಂಬ ವಚನವನ್ನು ವಿಮರ್ಶಿಸಿ ನೋಡಿದರೆ ಪ್ರಸೂತಿಚಿಕಿತ್ಸೆ ಕೌಮಾರಭೃತ್ಯಗಳಲ್ಲಿ ಆರ್ಯರಿಗಿರುವ ಅಮೇಯ ಕೌಶಲ್ಯವು ತಾನಾಗಿಯೇ ತಿಳಿಯಬರುವುದು.

**(೬) ಅಗದತಂತ್ರವು**—ಸ್ಥಾವರಗಳು, ಜಂಗಮಗಳು, ಕೃತ್ರಿಮಗಳು ಆದ ವಿಷಗಳಿದುಂಟಾಗುವ ವ್ಯಾಧಿಗಳನ್ನು ಕಂಡುಹಿಡಿದು ಅವುಗಳ ಚಿಕಿತ್ಸೆಗಳನ್ನು ಕುರಿತು ಈ ಅಗದತಂತ್ರದಲ್ಲಿ ಚೆನ್ನಾಗಿ ವಿವರಿಸಲ್ಪಡುತ್ತವೆ. ಸರ್ಪಾದಿಗಳಿಂದ ದಷ್ಟಗಳಾದ ಭಾಗಗಳಲ್ಲಿ ಮೇಲೆಮೇಲೆ ಮೂರು ಸ್ಥಳಗಳಲ್ಲಿ "ಅರಿಷ್ಟಂಬಂಧನ" ವನ್ನು ಮಾಡುವುದು. "ಆಚೂಷಣ" (ದುಷ್ಟರಕ್ತವನ್ನು ಹೀರುವುದ) ವನ್ನು, "ಛೇದನ" (ವಿಷವಿರುವ ಪ್ರದೇಶವನ್ನು ಕುಯ್ಯುವುದು.) "ದಾಹ" (ವಿಷವುಳ್ಳಸ್ಥಳದಲ್ಲಿ ಸುಡುವುದು) "ಶಿರಾವ್ಯಧೆ" (ವಿಷಮಯವಾದ ನರಗಳನ್ನು ವೇಧಿಸುವುದು) ಎಂಬುವುದೇ ಮೊದಲಾದ ವಿಷವ್ಯಾಪ್ತಿನಿರೋಧಕ ಹೇತುಭೂತಗಳಾದ ಉಪಾಯಗಳು ಚೆನ್ನಾಗಿ ಬೋಧಿಸಲ್ಪಟ್ಟಿರುತ್ತದೆ. "ಹೃದಯರಕ್ಷಣ" ಮೊದಲಾದ ವ್ಯಾಪಾರಗಳನ್ನು ಚೆನ್ನಾಗಿ ಹೇಳಿರುತ್ತದೆ. ಚರಕಸಂಹಿತೆಯಲ್ಲಿ "ಗಂಧಹಸ್ತಿ" "ಮಹಾಗಂಧಹಸ್ತಿ" ಮೊದಲಾದ ಔಷಧಗಳು ಹೇಳಿರುತ್ತದೆ. ಈ ತಂತ್ರಕ್ಕೆ ಸೇರಿದ ವಿಷಯಗಳು ವಿಧಿವಿಚಾರಪೂರ್ವಕವಾಗಿ ಪ್ರಚಾರದಲ್ಲಿ ಇಲ್ಲದೇ ಹೋದರೂ, ಪಾಮರರಿಂದಲೂ ಕೂಡ ಸರ್ಪದಷ್ಟರು ಚೆನ್ನಾಗಿ ಚಿಕಿತ್ಸೆಹೊಂದುತ್ತಲಿಧಾರೆಂದು ಸರ್ವಜನವಿದಿತವಾಗಿಯೇ ಇಧೆ.

ಆಂಧ್ರದೇಶದ ಗೋದಾವರಿತೀರದಲ್ಲಿ ರಾಜಮಹೇಂದ್ರನಗರದ ರಾಜನಾದ ವೀರಭದ್ರಾರೆಡ್ಡಿಯವರ ಹೆಂಡತಿಯಾದ ಅನಿತಲ್ಲಿ ಎಂಬ ಒಬ್ಬ ಸಾಧ್ವೀಮಣಿಯು ತಮ್ಮ ಆಸ್ಥಾನಪಂಡಿತನಾದ ಸರ್ವವೈದ್ಯ ಶಿಖಾಮಣಿಯಾದ ಭಾರದ್ವಾಜಗೋತ್ರೋತ್ಪನ್ನನಾದ ಒಬ್ಬ ಬ್ರಾಹ್ಮಣನಿಗೆ 1345ನೇ ಶಾಲಿವಾಹನಶಕ ಸಂವತ್ಸರದಲ್ಲಿ "ಕಲುವಜೇರು" ಎಂಬ ಗ್ರಾಮವನ್ನು ದಾನವಾಗಿ ಕೊಟ್ಟಂತೆ ತಾಂಬ್ರಶಾಸನದಿಂದ ತಿಳಿಯಬರುತ್ತದೆ ಇಂತಹ ಶಾಸನವನ್ನು ಸಂಪಾದಿಸಿ ಪ್ರಯತ್ನಪೂರ್ವಕವಾಗಿ ಪರೀಕ್ಷಿಸುವುದಾದರೆ ವೈದ್ಯಸಂಬಂಧವಾದ ಪುರಾತನ ವಿಷಯಗಳು ತಿಳಿಯಬರುತ್ತವೆ.

(೭) **ರಸಾಯನ ತಂತ್ರವು**—ಇದು ಈ ಶಾಸ್ತ್ರಗಳೆಲ್ಲಕ್ಕೂ ಪ್ರಧಾನವಾದ ಭಾಗವು. ಈ ಭಾಗಕ್ಕೆ ವ್ಯಾಧಿಗಳನ್ನಡಗಿಸಿ, ಮುದಿತನವನ್ನು ಹೋಗಲಾಡಿಸಿ ರೋಗಗಳುಂಟಾಗದಂತೆ ಶರೀರವನ್ನು ಕಾಪಾಡುವುದು. ಇದರ ಮುಖ್ಯ ಪ್ರಯೋಜನವು. ಶಾಸ್ತ್ರವನ್ನನುಸರಿಸಿ ವಾತಾತಪಿಕ (ಇಚ್ಛಾ ಪಥ್ಯ) ಕುಟೀ ಪ್ರವೇಶಕ (ಕಠಿಣ ಪಥ್ಯ) ರಸಾಯನಗಳನ್ನ (ಕಲ್ಪ ಚಿಕಿತ್ಸಾ) ಸೇವನೆಮಾಡಿದವರನೇಕರು ಅನಂತ ಫಲವನ್ನನುಭವಿಸಿದವರೂ ನಮ್ಮಿಂದ ಕಾಣಿಸುತ್ತಿದ್ದಾರೆ. ನೆನ್ನೆ ಮೊನ್ನೆ ಇದೇ ಆಯುರ್ವೇದೋಕ್ತವಾದ ಕಾಯಕಲ್ಪ ಚಿಕಿತ್ಸೆಗೆ ಕಾಶಿಯಲ್ಲಿ ಹಿಂದು ಮಹಾಕಲಾಶಾಲೆಯನ್ನ ಸ್ಥಾಪಿಸಿದವರೂ, ಹಿಂದು ಮಹಾ ಸಭಾಧ್ಯಕ್ಷರೂ ಆದ ಶ್ರೀಯುತ ಪಂಡಿತ ಮದನಮೋಹನ ಮಾಳವ್ಯರವರೇ Baba Bishun Das alias Tapsi Baba ಬಾಬಾ ಬಿರ್ಷದಾಸ್ ತಪಸಿ ಬಾಬಾಯವರಿಂದ ಕಾಯಕಲ್ಪ ಚಿಕಿತ್ಸೆ ಹೊಂದಿರುವುದು ಪ್ರತ್ಯಕ್ಷ ಸಾಕ್ಷಿಯಾಗಿರುವರು. ಈ ಕಾಲದಲ್ಲಿಯೇ ಆಯುರ್ವೇದ ಶಾಸ್ತ್ರಾನುಸಾರ ಕಾಯಕಲ್ಪ ಚಿಕಿತ್ಸೆಯು ನಡೆದು ಜಯಶೀಲತೆಯನ್ನು ಹೊಂದಿರುವಲ್ಲಿ ನಮ್ಮ ಪೂರ್ವೀಕರ ಶಾಸ್ತ್ರವಿಧಿಗಳ ವಿಷಯದಲ್ಲಿ ನಾವೇಕೆ ಹೆಮ್ಮೆಪಡಬಾರದು? ಇದೇ ವಿಚಾರದಲ್ಲಿ "ಆಸ್ಟ್ರಿಯಾ ದೇಶದ ವಿಯನ್ನಾ" ನಗರದ ಡಾ|| Vorniloff ವಾರ್ನಿಲಾಫ್ ಎಂಬುವರು ರಸಾಯನ ತಂತ್ರವಿಷಯದಲ್ಲಿ "ಮಂಕಿಗ್ಲಾಂಡ್ ಇಂಜೆಕ್ಷನ್" ಕಂಡುಹಿಡಿದರೆಂತಲೂ ಹೇಳಿಕೊಂಡು ಆಶ್ಚರ್ಯಪಡುತ್ತಿದ್ದೇವಲ್ಲವೆ? ಏತರಿಂದ—ಹಿಂದಿನ ನಮ್ಮ ಆಯುರ್ವೇದವನ್ನ ಪರಿಶೋಧಿಸುವವರೂ, ಆಚರಿಸುವವರೂ, ಇಲ್ಲದಿರುವುದರಿಂದಲೂ, ಮೂಲಿಕಾಯೋಗಗಳಲ್ಲಿಯೂ, ಆಯುರ್ವೇದ ವೈದ್ಯರಲ್ಲಿಯೂ ನಂಬಿಕೆಯಿಲ್ಲದೆ ಆಶ್ಚರ್ಯಪಡಬೇಕಾಯಿತು. ಪ್ರಾಣಿಯನ್ನು ಕೊಂದು ಅದರ ಜೀವರಸವನ್ನ ತೆಗೆದು ನಮ್ಮ ರಕ್ತದಲ್ಲಿ ಸೇರಿಸಿಕೊಂಡುಬರುವ ಬಲಕ್ಕಿಂತಲೂ ಮಾನವ ಧರ್ಮಕ್ಕೆ ಭಗವಂತನಿಂದ ನಿಯಮಿತವಾದ "ಓಷಧಿಭ್ಯೋಽನ್ನಮ್" ಎಂಬ ತೈತ್ತಿರಿಯೋಪನಿಷತ್ತಿನ ಆಧಾರದಂತೆ ಶಾಕಾಹಾರಿಯಾದ ಮನುಷ್ಯನ ಸ್ವಭಾವಕ್ಕೆ ವಿರುದ್ಧವಾದ ನಿರ್ಜೀವ ಪ್ರಾಣಿಯ ಅಂಡರಸವನ್ನ ರಕ್ತದಲ್ಲಿ ಸೇರಿಸುವಿಕೆಯು ಧರ್ಮವೊ? ಮಾನವಕೋಟಿಗೆ ಉಕ್ತವಾದ ಸ್ವಾಭಾವಿಕ ವಸ್ತುಗಳಿಂದ ತಯಾರಿಸಲ್ಪಟ್ಟ ಕಲ್ಪವು ಶ್ರೇಷ್ಠವೊ? ಮೇಲ್ಕಂಡ ಶವಕಲ್ಪವು ಶ್ರೇಷ್ಠವೊ? ವಾಚಕರೇ ಊಹಿಸಿಕೊಳ್ಳಲಿ. ನಮ್ಮ ಹಿರಿಯರು ಸಂಪಾದಿಸಿರುವ ವಸ್ತುಗಳನ್ನ ತಿಳಿದುಕೊಳ್ಳದೆ ಅಥವ ಅನುಭವಿಸಲಿಕ್ಕೆ ಕಾರಣಾಂತರದಿಂದ ಇಷ್ಟಪಡದೆ ಇತರರ ಸ್ವತ್ತನ್ನ ಅಪಹರಿಸುವುದು ನ್ಯಾಯವೋ? ಯೋಚಿಸತಕ್ಕದ್ದಾಗಿದೆ. ಚರಕಾಚಾರ್ಯರವರಿಂದ ಈ ತಂತ್ರದ ಮಹಿಮೆ ವಿಪುಲವಾಗಿ ವರ್ಣಿಸಲ್ಪಟ್ಟಿರುತ್ತದೆ.

ರಸಾಯನ ಪಾದದಲ್ಲಿ ಕಾಣಿಸಲ್ಪಡುವ ಅನೇಕ ರಸಾಯನಯೋಗಗಳು ರಸತಂತ್ರಗಳಲ್ಲಿ ಕಾಣಿಸುವ ಪೂರ್ಣಚಂದ್ರೋದಯ, ವಸಂತಕುಸುಮಾಕರ, ತ್ರೈಲೋಕ್ಯ ಚಿಂತಾಮಣಿ, ಹಾರೀತಕ ಸಂಹಿತೆಯಲ್ಲಿ ಉಕ್ತವಾಗಿರುವ (ಹಾರೀತ) ಅಳಲೇ ಕಾಯಿ ಮತ್ತು ತ್ರಿಫಲಗಳೇ ಮೊದಲಾದವುಗಳು ವಿಧ್ಯುಕ್ತವಾಗಿ ಮಾಡುವ ಸೇವನೆಯು ಕಾಯಕಲ್ಪವಾಗಿರುವಲ್ಲಿ ಪ್ರಾಣಿಗಳನ್ನು ಕೊಲ್ಲುವುದೇತಕ್ಕೆ ? ಇದೇ ಆಯುರ್ವೇದ ಮತ. ಈ ವಿಷಯದಲ್ಲಿ "ಹಾರೀತಮಹರ್ಷಿಗಳೂ ಇವರು ಹಾರೀತವೆಂದರೆ ಅಳಲೇಕಾಯಿನ ವಿಷಯದಲ್ಲಿ ಪರಿಶೋಧಿಸಿ ದೊಡ್ಡ ಸಂಹಿತೆಯನ್ನೇ ಬರೆದಿರುವರು. ಇದರಲ್ಲಿ ಅಳಲೇಕಾಯಿ ಸೇರದಿರುವ ಔಷಧ ಯೋಗಗಳೇ ಇರುವುದಿಲ್ಲಾ. ಇದು ಮಹಾಕಲ್ಪವೆಂತಕಂಡು ಪ್ರಥಮ ಮಂಗಳಶ್ಲೋಕದಲ್ಲಿಯೇ "ಹರಿಂ ಹರೀತಕೀಂಚೈವ ಗಾಯತ್ರೀಂಚ ಮುಹುರ್ಮುಹುಃ। ಮೋಕ್ಷಾರೋಗ್ಯತಪಃಕಾಮಿ ಚಿಂತಯೇ ತದ್ಭಕ್ಷಯೇಜ್ಜಪೇತ್ ॥" ಎಂದು ಉದಹರಿಸಿರುವುದಲ್ಲದೆ 4444 ವ್ಯಾಧಿಗಳಿಗೆ ಹರೀತಕೀ (ಅಳಲೇಕಾಯಿ) ಯೋಗದಿಂದಲೇ ಚಿಕಿತ್ಸೆಮಾಡಿ ಜಯಶೀಲರಾಗಿ ತಮ್ಮ ಅನುಭವವನ್ನ ಸಂಹಿತೆರೂಪವಾಗಿ ಬರೆದು ನಮ್ಮಗಳಿಗೆ ಕೊಟ್ಟು ಅಳಲೇಕಾಯಿ ಪಂಡಿತರೆಂದು ಪ್ರಸಿದ್ಧಿ ಪಡೆದರು. ಈಗಿನ ಆಯುರ್ವೇದ ವೈದ್ಯರನ್ನು ಏತದ್ಭಿನ್ನ ಸಂಪ್ರದಾಯಸ್ಥರು ಅವಹೇಳನ ಸಂದರ್ಭದಲ್ಲಿ ಇವರು "ಅಳಲೇಕಾಯಿ ಪಂಡಿತರೊ" ಎಂತಲು ಆಂಗ್ಲೇಯ ಭಾಷೆಯಲ್ಲಿ "Ayurvedic quaks" ಎಂತಲೂ ಕರೆಯುವರು. ಇದರಿಂದ ನಮ್ಮಗಳಿಗೇನೂ ಅವಮಾನವಾಗಲಿಲ್ಲ. ಆಯುರ್ವೇದ ಶಾಸ್ತ್ರದಲ್ಲಿ ಇನ್ನೂ ಅನೇಕ ವಿಧವಾದ ಮಹಾ ಯೋಗಗಳು ಇರುವುವು. ಇಂತಹ ಯೋಗಗಳು ಇತರ ಸಂಪ್ರದಾಯಗಳ ಯಾವ ವೈದ್ಯಗ್ರಂಥಗಳಲ್ಲಿಯಾಗಲಿ ಇರುವುದಿಲ್ಲಾ. "ಜರಾಮರಣ ನಾವರಣೆ"ಗೆ ಯೋಗಶಾಸ್ತ್ರದ ಹಾಗೆ ಈ ತಂತ್ರವನ್ನು ಪೂರ್ವಕಾಲದವರಿಂದ ಅಭಿವೃದ್ಧಿ ಹೊಂದಿಸಲ್ಪಟ್ಟಿತು. "ಸಿದ್ಧ ಜೀವನತಂತ್ರ" ವೇ ಮೊದಲಾದ ಅನೇಕ ಗ್ರಂಥಗಳು ಈ ವಿಷಯದಲ್ಲಿ ಬರೆಯಲ್ಪಟ್ಟಿರುತ್ತವೆ.

(೮) **ವಾಜೀಕರಣ ತಂತ್ರ**—ಈ ತಂತ್ರದಲ್ಲಿ ಅಲ್ಪ, ದುಷ್ಟ, ಕ್ಷೀಣ ರೇತಸ್ಸು (Sperm) ನವರ ದುರವಸ್ಥೆಗಳನ್ನು ದೂರಮಾಡಿ ಸಂತಾನಕಾರಣ ವಾದ ಶುಕ್ರವನ್ನು ಶುದ್ಧಮಾಡಿ ವೃದ್ಧಿಹೊಂದಿಸುವ ಅನೇಕಗಳಾದ ಮೋದಕಾದಿ "ವೃಷ್ಯಾ" ಯೋಗಗಳು ಹೇಳಿರುತ್ತವೆ. "ಆತ್ಮಗುಪ್ತ" (ನಸುಗುನ್ನಿ) "ಇಕ್ಷುರ" (ಕೊಳವಳಿಕೆ ಬೇರು) "ಗೋಕ್ಷುರ" (ನೆಗ್ಗಲು), ಅಶ್ವಗಂಧ (ಹಿರೀಮದ್ದಿನ ಬೇರು) ಮುಸಲಿ (ನೆಲತಾಳೆಗಡ್ಡೆ) ಅಥವ ವಾರಾಹಿಕಂದ. ಶತಾವರಿ (ಮಜ್ಜಿಗೆಗಡ್ಡೆ ಅಥವ ಹಲವುಮಕ್ಕಳತಾಯಿ) ಮೊದಲಾದ ಮೂಲಿಕಾ ವಿಶೇಷ

ಗಳನ್ನು, ಬಸ್ತಾಂಡೆ, ಚಟಕಾಂಡಾದಿಗಳು ಶುಕ್ರವೃದ್ಧಿಯನ್ನು ಹೊಂದಿಸುತ್ತ ದೆಂತಲೂ ಬಹಳಕಾಲಕ್ಕೆ ಮುಂಚೆಯೇ ಇದನ್ನು ನಮ್ಮ ಮಹರ್ಷಿಗಳು ಉಪಯೋಗಿಸುತ್ತಿದ್ದರೆಂದು ತಿಳಿಯಬರುತ್ತದೆ ಈಗಿನ ವೈದ್ಯಶಾಸ್ತ್ರಗಳಲ್ಲಿ ಈ ವಿಷಯಗಳು ಇಲ್ಲವೇ ಇಲ್ಲಾ. ವೈದ್ಯರು ಇಂತಹ ವಿಷಯಗಳನ್ನರಿತು ತುಂಬಾ ಆಶ್ಚರ್ಯ ಹೊಂದುವರು.

ಹಿಂದೂ ದೇಶವಾಸಿಗಳಾದ ಅಲ್ಲದೆ ಕರ್ಣಾಟಕದೇಶವರಾದ ನಾವೆಲ್ಲರೂ ಸಮಸ್ತವಾದುವೆಲ್ಲವನ್ನೂ ಇಟ್ಟುಕೊಂಡು ಅನುಭವಿಸಬೇಕಾದರೀತಿಯಾಗಿ ಅನುಭವಿಸಲು ಶಕ್ತಿಯಿಲ್ಲದವರಾಗಿರುತ್ತೇವೆ. ಪರೋಪಕಾರ ಪಾರೀಣರಾದ ಧನ ವಂತರಾದ ಮಹಾರಾಜರುಗಳು, ಜಮೀನ್ದಾರರುಗಳು ಹಿಂದೂವೈದ್ಯರಿಗೆ ತಕ್ಕ ಸಹಾಯವನ್ನೊದಗಿಸಿ ಈ ಆಯುರ್ವೇದವನ್ನು ಎಲ್ಲಾ ಸ್ಥಳಗಳಲ್ಲಿಯೂ ಪ್ರಕಾಶ ವಾಗುವಂತೆಮಾಡಿ ಹಿಂದೂದೇಶದಲ್ಲಿ ಆರೋಗ್ಯದೇವತೆ ತಾಂಡವಾಡುವಂತೆಮಾಡಿ ಈ ಆಯುರ್ವೇದವು ಪೂರ್ವಕಾಲದ ಮಹೋನ್ನತದೆಶೆಗೆ ಬರುವಂತೆ ಪ್ರಯತ್ನಿ ಸುವಂತಹ ಸದ್ಬುದ್ಧಿಯನ್ನು ಭಗವಂತನು ಉಂಟುಮಾಡಲಿ !!

ಈರೀತಿಯಾಗಿ ಅಷ್ಟಾಂಗಗಳಿಂದ ಕೂಡಿ ಉಪವೇದವೆನ್ನಿಸಿಕೊಂಡು ಸಂಸ್ಕೃತಭಾಷಾಮಯವಾಗಿದ್ದು ಪ್ರಾಣಿಕೋಟಿಗಳಿಗೆ ಆರೋಗ್ಯಭಾಗ್ಯವನ್ನೀ ಯುವ ಆಯುರ್ವೇದ ಸಮುದ್ರವನ್ನಮಥನಮಾಡಿ ಕಾಲಾನುಗುಣ್ಯವಾಗಿ ಜನಗಳ ಆರೋಗ್ಯಕ್ಕೆ ಸುಲಭಖರ್ಚಿನಿಂದ ತಾವುತಾವೇ ತಯಾರ್ಮಾಡಿಕೊಳ್ಳಬಹುದಾದಷ್ಟು ಸೌಲಭ್ಯವನ್ನು ಕಲ್ಪಿಸಿದ ಅನುಭವಯೋಗಗಳನ್ನು ರೋಗನಿದಾನಾದಿ ಲಕ್ಷಣ ಗಳಿಂದೊಡಗೂಡಿಸಿ ಕರ್ಣಾಟಕ ದೇಶದವರಿಗೆ ಅನುಕೂಲಿಸುವಂತೆ ಶಾಸ್ತ್ರಸಮ್ಮತ ವಾಗಿಯೂ ಸಂಗ್ರಹರೂಪವಾಗಿಯೂ ಬರೆದಿರುವ ಈ "ಹಿಂದು-ಯುನಾನಿ ಅನುಭವ ವೈದ್ಯರತ್ನವೆಂಬ ಆಯುರ್ವೇದಾನುಭವಸಾರವಾದ ಈ ಪುಸ್ತಕವು ಕರ್ಣಾಟಕವೈದ್ಯರ ಕೈಪಿಡಿಯಾಗಿಯೂ ಸಂಸ್ಕೃತಗಂಥವಿಲ್ಲದ ಆಯುರ್ವೇದ ವೈದ್ಯವಿದ್ಯಾರ್ಥಿಗಳಿಗೆ ಹಸ್ತಾಮಲಕವಾಗಿಯೂ, ವೈದ್ಯಾಭಿಮಾನಿಗಳು, ಮತ್ತು ದೇಶಾಭಿಮಾನಿಗಳಿಗೂ ಸಹಾ ಭಾರತಾಯುರ್ವೇದ ಸಂಪ್ರದಾಯವನ್ನು ತಿಳಿಸತಕ್ಕದ್ದಾಗಿಯೂ ಇರುತ್ತದೆ. ಗ್ರಂಥಕರ್ತರು ತಮ್ಮ ಅನುಭವ ಮತ್ತು ಇತರ ಮಹಾವೈದ್ಯರುಗಳ ಅನುಭವಗಳನ್ನ ಶೇಖರಿಸಿ ಬರೆದಿರುವ ಈ ಪುಸ್ತಕ ದಿಂದ ಭಾರತೀಯರಿಗೆ ಅಥವ ಕರ್ಣಾಟಕರಿಗೆ ಅನುಕೂಲವಾಗಲೆಂದು ಹಾರೈ ಸುವೆನಲ್ಲದೆ ಸರ್ವರೂ ತಮ್ಮ ಮನೆಗಳ ಪುಸ್ತಕಾಭಂಡಾರಗಳಲ್ಲಿ ಈ ಪುಸ್ತಕ ವನ್ನು ತೆಗೆದಿಟ್ಟುಕೊಂಡು ಬೋಧಾಚರಣ ಪರಾಯಣತೆಯಿಂದ ಆಯುರ್ವೇದ ಪ್ರಚಾರಮಾಡಿ ಹಿಂದಿನ ಋಷಿಗಳ ಋಣಪರಿತ್ಯಾಗಮಾಡಿಕೊಂಡು ಗ್ರಂಥಕರ್ತರ

ಆಯುರ್ವೇದ ಪುನರುಜ್ಜೀವನ ಕೆಲಸದ ಕಷ್ಟಕ್ಕೆ ಈಮೂಲಕ ಪ್ರತಿಫಲ ವೀಯುವಿರೆಂದು ಪ್ರಾರ್ಥಿಸುವ.

ವಿದ್ವಜ್ಜನ ಶ್ರೇಯೋಭಿಲಾಷಿ,

**ಪಂಡಿತ ತತ್ವವಾದಿ ಸಿ. ಸುಬ್ಬಣ್ಣಾಚಾರ್ಯ,**

ಆಯುರ್ವೇದ ವೈದ್ಯ ಶಾಲಾಧ್ಯಕ್ಷ,

**Ex-Dt. Secretary to second All Karnataka**

**Ayurvedic Conference held at Bangalore**

**and Dt. Secretary to**

**21st All India Ayurvedic Conference held at Mysore**

ಸುಲ್ತಾನ್‌ಪೇಟೆ, ಮತ್ತು ನಂದಿಬೆಟ್ಟ,

(ಚಿಕ್ಕಬಳ್ಳಾಪುರ ತಾಲ್ಲೂಕು, ಕೋಲಾರ ಡಿಸ್ಟ್ರಿಕ್ಟ್),

**ಮೈಸೂರು ಸ್ಟೇಟ್.**





ಪಂಡಿತ ಬಿ. ಆರ್. ಗೋವಿಂದರಾಜುಲು ನಾಯುಡು.

Pandit B. R. Govindarajulu Naidu.

# ಮುನ್ನುಡಿ.

ಸರ್ವಶಕ್ತಿ ಸಂಪನ್ನನಾದ ಭಗವಂತನು ತನ್ನ ಲೀಲಾವಿಭೂತಿಯಿಂದ ಸ್ವರ್ಗ ಮರ್ತ್ಯ ಪಾತಾಳಾದಿ ಲೋಕಗಳನ್ನು ಸೃಷ್ಟಿಸಿ ಅವುಗಳಲ್ಲಿ ದೇವತೆಗಳೂ ಮನುಷ್ಯರೂ ಪಶ್ವಾದಿಗಳೂ ವಾಸಮಾಡುವಂತೆ ನಿಯಮಿಸಿರುವುದು ಸರ್ವಜನ ವಿದಿತವಾಗಿದೆ. ಇದರಲ್ಲಿ ಮಧ್ಯಮವಾದ ಭೂಲೋಕದಲ್ಲಿ ಮನುಷ್ಯನೇ ಪ್ರಧಾನವಾದ ಅನೇಕ ಪ್ರಾಣಿವರ್ಗಗಳನ್ನು ಸೃಷ್ಟಿಸಿ ಅವುಗಳ ಅಭಿವೃದ್ಧಿಗೆ ಬೇಕಾದ ಆಹಾರ ಔಷಧ ಆಯುಷ್ಕರ ವಸ್ತುಗಳನ್ನು ಆ ಭಗವಂತನೆ ನಿರ್ಮಿಸಿ ಕೊಟ್ಟಿರುವನು. ಪ್ರಾಣಿಕೋಟಿಗಳಲ್ಲಿ ಶ್ರೇಷ್ಠವಾದ ಈ ಮಾನುಷ ದೇಹಕ್ಕೆ ಸಂತೋಷಜನಕವಾದ ಮೂರು ವಸ್ತುಗಳುಂಟು ಅವುಗಳಲ್ಲಿ ಮೊದಲನೆಯದು ಆರೋಗ್ಯ, ಎರಡನೆಯದು ಐಶ್ವರ್ಯ, ಮೂರನೆಯದು ಆಯುಷ್ಯ, ಇವುಗಳನ್ನು ವಿದ್ಯೆ ವಿವೇಕ ಧೈರ್ಯ ಬಲಗಳೆಂಬ ಗುಣಗಳು ಪ್ರಕಾಶಗೊಳಿಸುತ್ತಿವೆ. ಅಲ್ಲದೆ ದೇಶ, ಕಾಲ, ಜನ, ವ್ಯವಸಾಯಾದಿ ಸಾಮಾನ್ಯ ವಿಷಯಗಳು ಕೂಡ ಮೇಲೆ ಹೇಳಿದ ಮುಖ್ಯ ವಿಷಯಗಳಿಗೆ ಸಹಾಯಭೂತಗಳಾಗಿವೆ. ಹೀಗೆ ಸಹಾಯ ವಸ್ತುಗಳಿಂದ ವೃದ್ಧಿಹೊಂದಿ, ಪ್ರಕಾಶ ವಿಷಯಗಳಿಂದ ಪ್ರಭಾಮಯವಾಗಿ ಬೆಳಗುತ್ತಿರುವ ಮುಖ್ಯವಿಷಯಗಳು ಸಕಲ ಜನರಿಗೂ ಪ್ರಾರ್ಥನೀಯಗಳಾಗಿವೆ ಎಂದು ಹೇಳಬಹುದು. ಹೀಗೆ ಲೌಕಿಕ ಸ್ಥಿತಿಯಲ್ಲಿ ಮನುಷ್ಯನ ಸುಖಸಂತೋಷ ಭೋಗ ಭಾಗ್ಯಗಳಿಗೆ ಕಾರಣಗಳಾದ ಸರ್ವಾಂಶಗಳನ್ನೂ ಅವುಗಳ ತಾರತಮ್ಯ ಗಳನ್ನೂ ಪ್ರಯೋಜ್ಯ ಪ್ರಯೋಜಕ ಭಾವಗಳನ್ನೂ ಪ್ರಧಾನೋಪಸರ್ಜನ ಭಾವವನ್ನೂ ಪರಿಶೀಲಿಸಿ ನೋಡಿದರೆ ಆರೋಗ್ಯವೆ ಮುಖ್ಯವಾದುದೆಂದು ಹೇಳ ಬೇಕಾಗುತ್ತದೆ. ಆದಕಾರಣ ಮುಖ್ಯವಾದ ಆರೋಗ್ಯಭಾಗ್ಯವಿದ್ದರೆ ಅದರಿಂದ ಉಳಿದ ಎಲ್ಲಾ ಗುಣಗಳನ್ನೂ ಪಡೆಯಬಹುದು. ಆರೋಗ್ಯವಿಲ್ಲದಿದ್ದರೆ ಉಳಿದ ಎಲ್ಲಾ ಗುಣಗಳೂ ನಿಬಿಡವಾಗಿ ತುಂಬಿದ್ದರೂ ನಿರರ್ಥಕಗಳಾಗಿ ನಿಷ್ಪ್ರಯೋಜನ ಗಳಾಗುವುದೆಂದು ಅಭಿಜ್ಞರು ತಿಳಿದುಕೊಂಡಿರುವರು. ಇಷ್ಟು ವಿಶೇಷವಾಗಿ ಪ್ರಖ್ಯಾತಿಯನ್ನು ಪಡೆದಿರುವ ಆರೋಗ್ಯವೆಂದರೆ ಏನು ಎಂಬ ಪ್ರಶ್ನೆಯು ಜಿಜ್ಞಾಸುಗಳಿಗೆ ಹುಟ್ಟಬಹುದು. ಇದಕ್ಕಾಗಿ ವ್ಯಾಖ್ಯಾನಕರ್ತರು "ನಾಸ್ತಿ ರೋಗೋಯಸ್ಯಸಃ ಅರೋಗಃ, ತಸ್ಯ ಅರೋಗಸ್ಯಭಾವಂ ಆರೋಗ್ಯಂ" ಎಂದು ಹೇಳಿರುವರು. ಇದರಿಂದ ಆರೋಗ್ಯವೆಂದರೆ ರೋಗವಿಲ್ಲದಿರುವುದು ಎಂದು ಅರ್ಥವಾಯಿತು. ಇಂಥ ಆರೋಗ್ಯವು ದೈವಿಕಾರೋಗ್ಯವೆಂತಲೂ, ಪೌರುಷಾರೋಗ್ಯವೆಂತಲೂ ಎರಡು ವಿಧವಾಗಿದೆ. ಮನುಷ್ಯನು ಜನ್ಮಪ್ರಭೃತಿದೇ

ಹಾಂತ್ಯದವರೆಗೂ ದೈವಾನುಗ್ರಹದಿಂದ ಆರೋಗದೃಢಕಾಯನಾಗಿರುವುದೆ ದೈವಿಕಾರೋಗ್ಯವೆನ್ನಲ್ಪಡುವುದು. ಕಾಲ ದೇಶ ಪದಾರ್ಥಗಳ ಗುಣಸಂಸರ್ಗದಿಂದ ಮನುಷ್ಯನ ಶರೀರದಲ್ಲಿ ವಾತಾದಿದೋಷಗಳು ಪ್ರಕೋಪವಾಗಿ ಅದರ ದೆಶೆಯಿಂದ ನಾನಾವಿಧಗಳಾದ ರೋಗಗಳು ಹುಟ್ಟಿ ಅವುಗಳ ಸ್ವರೂಪಸ್ವಭಾವಗಳನ್ನು ಮರ್ಮಸಹಿತವಾಗಿ ತಿಳಿದಿರುವ ಸಮರ್ಥರಾದ ವೈದ್ಯರಿಂದ ಕೊಡಲ್ಪಡುವ ಯೋಗ್ಯವಾದ ಔಷಧಸೇವನೆಯಿಂದ ಲಭಿಸತಕ್ಕುದೆ ಎರಡನೆಯದಾದ ಪೌರುಷಾರೋಗ್ಯವು. ಇದೂಕೂಡ ಪುರುಷಪ್ರಯತ್ನದಿಂದ ಲಭಿಸತಕ್ಕದ್ದು. ಇದರ ವಿಚಾರದಲ್ಲಿ ಅವಶ್ಯಕವಾದ ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ. ಪ್ರಪಂಚದಲ್ಲಿ ದೈವಿಕಾರೋಗ್ಯವು ದುರ್ಲಭವೆಂದೇ ಹೇಳಬಹುದು. ಆದರೂ ವಿಚಾರಮಾಡಿ ನೋಡಿದರೆ ವಿರೋಧಿಭೂಯಿಷ್ಠವಾದ ಮನುಷ್ಯನ ಶರೀರದ ಮನಸ್ಸುಗಳ ಸ್ಥಿತಿಗಳಿಂದ ಆ ದೈವಿಕಾರೋಗ್ಯವೂ ಕೂಡ ಪುರುಷಪ್ರಯತ್ನ ಸಾಧ್ಯವಾಗಿಯೆ ಕಾಣುತ್ತಿರುವುದು. ಇನ್ನು ಪೌರುಷಾರೋಗ್ಯವಾದರೋ ಸರ್ವಪ್ರಕಾರದಿಂದಲೂ ಮನುಷ್ಯನ ಬುದ್ಧಿಗೆ ಸಾಧ್ಯವಾದದ್ದು ಇದರಿಂದಲೆ "ದೈವಂಪುರುಷಕಾರಂಚ ಭವೇತಾಂ ಫಲದಾಯಕೌ" ಎಂಬ ಪ್ರಮಾಣವಚನವು ಹುಟ್ಟಿರುವಂತೆ ಭಾವಿಸಬೇಕಾಗಿದೆ. ಇದರಿಂದ ಪ್ರಾಯಶಃ ಪುರುಷಪ್ರಯತ್ನವೂ ಅದರ ಫಲಗಳೂ ದೈವಕೃತವಾಗಿಯೂ, ಪುರುಷಪ್ರಯತ್ನವಿಲ್ಲದೆ ದೈವವು ಅಪ್ರಯೋಜಕವಾಗಿಯೂ ಇರುವುದರಿಂದ ಮನುಷ್ಯನ ಆರೋಗ್ಯಕ್ಕೆ ದೈವಸಹಾಯವೂ ಪುರುಷಪ್ರಯತ್ನವೂ ಮೂಲಕಾರಣವಾಗಿದೆ ಎಂದು ಹೇಳಬೇಕಾಗಿದೆ.

ಇನ್ನು ಆರೋಗ್ಯದ ಸ್ವರೂಪ ವಿಚಾರವನ್ನು ವಿಮರ್ಶಿಸಿನೋಡಿದರೆ ಅದು "ಲೋಕೋಭಿನ್ನರುಚಿಃ" ಎಂಬಂತೆ ಪ್ರತಿಮನುಷ್ಯನ ಬುದ್ಧಿಯೂ ಅಪೇಕ್ಷೆಯೂ ಅಭಿರುಚಿಯು ನಾನಾ ಪ್ರಕಾರವಾಗಿರುವುದರಿಂದಲೂ, ಪ್ರಾಯಶಃ ಮನಸ್ಸು ಚಪಲವಾಗಿ ರೋಗಕಾರಕಗಳಾದ ವಿಷಯಗಳು ಆಗಾಗ್ಗೆ ಅನಿವಾರ್ಯವಾಗಿಯೂ, ಪ್ರಾಮಾದಿಕವಾಗಿಯೂ ಪ್ರಾಪ್ತವಾಗುವುದರಿಂದ ರೋಗಗಳು ಆ ಕಾರಣಗಳನ್ನು ಅನುವರ್ತಿಸುತ್ತ ಮೊದಲು ಅಪಥ್ಯಾದಿಗಳಿಂದ ಹುಟ್ಟಿ ಕ್ರಮವಾಗಿ ಶರೀರವನ್ನು ವ್ಯಾಪಿಸಿ ಮೊದಲು ಮನಸ್ಸನ್ನು ಕೆಡಿಸಿ ಬುದ್ಧಿಯನ್ನು ನಾಶಮಾಡುವುವು. ಬಳಿಕ "ನಿರ್ಬುದ್ಧಿಃ ಕ್ಷಯಮೇತಿ" ಎಂಬಂತೆ ಬುದ್ಧಿಹೀನನನ್ನು ಸರ್ವಾಪತ್ತುಗಳೂ ಸಂದರ್ಶಿಸುತ್ತಿರುವುವು.

ಹೀಗೆ ನಾನಾವಿಧವಾದ ಆಪತ್ತುಗಳಿಗೊಳಗಾಗಿ ಬಗೆಬಗೆಯಾದ ರೋಗಗಳಿಂದ ನರಳುತ್ತಿರುವ ಪ್ರಾಣಿಗಳ ಹಿತಚಿಂತನೆಗಾಗಿ ಭವರೋಗ ವೈದ್ಯನಾದ ಭಗವಂತನು ಅಮೃತಸ್ವರೂಪವಾದ ನಾನಾ ವನಸ್ಪತಿಗಳನ್ನು ಸೃಷ್ಟಿಸಿ ಅವುಗಳನ್ನು ಕಾಪಾಡುತ್ತಿರುವುದು ಲೋಕಪ್ರಸಿದ್ಧವಾಗಿದೆ. ಇಂಥ ಗಿಡಮೂಲಿಕೆ

ಗಳ ಸಂಯೋಗ ಪ್ರಯೋಗ ಸಂಸರ್ಗಗಳಿಂದ ಅನೇಕಾನೇಕ ವ್ಯಾಧಿಗಳು ನಾಶವಾಗಿ ವಿಷಪದಾರ್ಥಗಳೂ ಕೂಡ ಅಮೃತಪ್ರಾಯವಾಗುವುದುಂಟು. ಈ ರಹಸ್ಯವನ್ನು ತಿಳಿದು ಆರ್ಯಮಹರ್ಷಿಗಳು ತಮ್ಮ ತಪಸ್ಸಿದ್ಧಿಗಾಗಿ ವನಮೂಲಿಕಾರಸಗಳನ್ನು ಸೇವಿಸುತ್ತ ಇಷ್ಟಾರ್ಥವನ್ನು ಪಡೆದು ಲೋಕಹಿತಾರ್ಥವಾಗಿ ತಮ್ಮ ಅನುಭವವನ್ನು ಗ್ರಂಥರೂಪದಲ್ಲಿ ಬರೆದಿಟ್ಟು ಆಯುರ್ವೇದವನ್ನು ಅಭಿವೃದ್ಧಿಗೊಳಿಸಿದರು. ಇಂಥವರಿಗೆಲ್ಲ ಆದಿಪುರುಷರಾದವರು ಆತ್ರೇಯ ಮಹರ್ಷಿಗಳು ಇವರ ಶಿಷ್ಯರಾದ ಅನೇಕ ಮಹನೀಯರು ಬೇರೆ ಬೇರೆ ಹೆಸರಿನಿಂದ ಕರೆಯಲ್ಪಡುವ ಅನೇಕಾನೇಕ ವೈದ್ಯ ಗ್ರಂಥಗಳನ್ನು ಬರೆದು ಪ್ರಸಿದ್ಧರಾದರು. ಆಯುರ್ವೇದಕ್ಕೆ ಮೂಲಪುರುಷನಾದ ಧನ್ವಂತರಿಯ ಅಂಶಸಂಭೂತರಾದ ಅನೇಕ ಮಹನೀಯರು ವೈದ್ಯಶಾಸ್ತ್ರವನ್ನು ಅಭ್ಯಾಸಮಾಡಿ ಅದರಿಂದ ಜೀವನಮಾಡುತ್ತ ರೋಗಗ್ರಸ್ತರಾದವರನ್ನು ಉದ್ಧರಿಸುತ್ತಿರುವುದು ಸರ್ವರಿಗೂ ತಿಳಿದ ವಿಷಯವಾಗಿದೆ ನಾನು ಬಾಲ್ಯದಿಂದಲೂ ಈ ವೈದ್ಯಶಾಸ್ತ್ರದಲ್ಲಿ ಆಸಕ್ತಿಯುಳ್ಳವನಾಗಿ ಪರಿಪೂರ್ಣ ಪಾಂಡಿತ್ಯವುಳ್ಳವರಾಗಿ ಯಶೋವಂತರಾದ ಬಹು ಮಂದಿ ಆಯುರ್ವೇದೀಯ ಮತ್ತು ಯುನಾನಿ ಹಕೀಮರುಗಳ ಸೇವೆಮಾಡಿ ಅವರ ಅನುಭವ ಅಭ್ಯಾಸಗಳನ್ನು ತಿಳಿದುಕೊಂಡು ನಾನೇ ಸ್ವತಃ ವೈದ್ಯವೃತ್ತಿಗೆ ನಿಂತೆನು. ದಿನಕ್ಕೆ ನೂರಾರು ರೋಗಿಗಳು ನನ್ನ ಬಳಿಗೆ ಬಂದು ಔಷಧವನ್ನು ಸೇವಿಸಿ ಗುಣಮುಖರಾಗಿ ಸಂತೋಷಪಟ್ಟು ನನ್ನನ್ನು ಪ್ರೋತ್ಸಾಹಿಸಿದರು. ಅವರ ಪ್ರೋತ್ಸಾಹಬಲದಿಂದ ನಾನು ಇದಕ್ಕೆ ಮೊದಲೆ ಅಂದರೆ ಈಗ್ಗೆ ಇಪ್ಪತ್ತು ವರ್ಷಗಳಿಗೆ ಮುಂಚೆ ಹಿಂದು-ಯುನಾನಿ ವೈದ್ಯ ಯಂತ್ರ-ಮಂತ್ರ ಸುಗಂಧ ಬೋಧಕವೆಂಬ ಗ್ರಂಥವನ್ನು ಬರೆದು ಮುದ್ರಿಸಿ ಪ್ರಕಟಿಸಿದೆನು. ಅದೂ ಕೂಡ ಕೇವಲ ಹರ್ಷಕರವಾಗಿ ಜನರಲ್ಲಿ ಪ್ರಚಾರವಾಗಿ ಕನ್ನಡಿಗರಿಂದ ಬಹು ಆದರ ಪ್ರೋತ್ಸಾಹಗಳನ್ನು ಪಡೆಯಿತು. ಇದನ್ನು ನೋಡಿ ನನ್ನ ಆಪ್ತಮಿತ್ರರೂ ಹಿತಚಿಂತಕರೂ ಆದ ಅನೇಕ ವಿದ್ಯಾಭಿಮಾನಿಗಳು, ಸ್ವಾಮೀ! ವೈದ್ಯರೆ, ಬಂದವರಿಗೆ ಬರಿಯ ಔಷಧವನ್ನು ಕೊಟ್ಟು ಕಳುಹಿಸಿದರೆ ಪ್ರಯೋಜನವಿಲ್ಲ, ನಿಮ್ಮ ಅನುಭವವನ್ನು ಸಂತೋಷವನ್ನು ಆತ್ಮತೃಪ್ತಿಯೆಂಬ ಅಮೃತವನ್ನು ಕೂಡಿಸಿ ಒಂದು ವೈದ್ಯ ಗ್ರಂಥವನ್ನು ಬರೆದಿಟ್ಟರೆ ಅದರಿಂದ ಬಹು ಜನಗಳಿಗೆ ಉಪಕಾರವಾದೀತೆಂದು ಹೇಳಿ ಪ್ರೋತ್ಸಾಹಿಸತೊಡಗಿದರು. ಹಾಗೆ ಮಾಡುವುದು ಉತ್ತಮವೆಂದು ನನ್ನ ಬುದ್ಧಿಗೂ ತೋರಿಬಂದ ಕಾರಣ ನಾನು ಅಭ್ಯಾಸಮಾಡಿದ ಮಹನೀಯರ ಬಳಿಯಲ್ಲಿ ಸಂಗ್ರಹಿಸಿಟ್ಟಿದ್ದ ಅನುಭವ ವೈದ್ಯ ವಿದ್ಯೆಯನ್ನು ಈ ಗ್ರಂಥರೂಪವಾಗಿ ನಿರ್ಮಿಸಿ ಅದಕ್ಕೆ “ಹಿಂದು-ಯುನಾನಿ ಅನುಭವ ವೈದ್ಯರತ್ನ” ಎಂದು ಹೆಸರಿಟ್ಟಿರುವೆನು.

ಈ ಪುಸ್ತಕದಲ್ಲಿ ಒಟ್ಟು ಐವತ್ತೆಂಟು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯದಲ್ಲಿ ಮನುಷ್ಯನ ದೇಹ ಮತ್ತು ದೇಹಾಂಗಗಳೂ ಅವುಗಳನ್ನೂ ಕಾರ್ಯಗಳನ್ನೂ ಚೆನ್ನಾಗಿ ವಿವರಿಸಿದೆ. ಎರಡನೆಯ ಅಧ್ಯಾಯದಲ್ಲಿ ಸಪ್ತಧಾತುಗಳ ಲಕ್ಷಣಗಳನ್ನು ಅವುಗಳ ದೋಷಗಳನ್ನು ವಿವರಿಸಿ ಹೇಳಿದೆ ಮೂರನೆಯ ಅಧ್ಯಾಯದಲ್ಲಿ ಅಷ್ಟಸ್ಥಾನ ಪರೀಕ್ಷೆ, ನಾಡಿಜ್ಞಾನ, ನಾಡಿ ಲಕ್ಷಣಾದಿಗಳನ್ನು ವಿಸ್ತರಿಸಿ ಬರೆದಿದೆ. ನಾಲ್ಕನೆಯ ಅಧ್ಯಾಯದಲ್ಲಿ ಔಷಧಗಳ ವಿಭಾಗಗಳ ವಿವರಣೆಯು ವಿಸ್ತಾರವಾಗಿ ಸಂಗ್ರಹಿಸಲ್ಪಟ್ಟಿದೆ. ಐದನೆಯ ಅಧ್ಯಾಯದಲ್ಲಿ ಪ್ರತಿ ಔಷಧಗಳ ಯುಕ್ತಾಯುಕ್ತ ವಿವರಣೆಯು ಹೇಳಲ್ಪಟ್ಟಿದೆ. ಹಾಗೆಯೆ ಆರನೆಯ ಅಧ್ಯಾಯದಲ್ಲಿ ಚಿಕಿತ್ಸಾ ಸೂಚನೆಯೂ, ಏಳನೆಯ ಅಧ್ಯಾಯದಲ್ಲಿ ಸಂಕೇತ ನಾಮಗಳೂ, ಎಂಟನೆಯ ಅಧ್ಯಾಯದಲ್ಲಿ ಅಲಬ್ಧ ವಸ್ತುಗಳ ಪ್ರತಿನಿಧಿ ದ್ರವ್ಯಗಳ ವಿವರಣೆಗಳೂ, ಒಂಭತ್ತನೆಯ ಅಧ್ಯಾಯದಲ್ಲಿ ಪುಟಪಾಕ ವಿಧಾನವೂ, ಹತ್ತನೆಯ ಅಧ್ಯಾಯದಲ್ಲಿ ಯಂತ್ರಗಳ ವಿವರಣೆಯೂ, ಹನ್ನೊಂದನೆಯ ಅಧ್ಯಾಯದಲ್ಲಿ ವಿಷವಸ್ತುಗಳ ಶುದ್ಧಿ ಕ್ರಮವನ್ನು ಸಂಪೂರ್ಣವಾಗಿ ವಿವರಿಸಲಾಗಿದೆ. ಹನ್ನೆರಡನೆಯ ಅಧ್ಯಾಯದಲ್ಲಿ ಭಸ್ಮ ಸಿಂಧೂರಾದಿಗಳನ್ನು ಮಾಡುವ ಕ್ರಮವು ವಿವರಿಸಲ್ಪಟ್ಟಿದೆ. ಹದಿಮೂರನೆಯ ಅಧ್ಯಾಯದಲ್ಲಿ ಭಸ್ಮಗಳೂ, ಹದಿನಾಲ್ಕನೆಯ ಅಧ್ಯಾಯದಲ್ಲಿ ಸಿಂಧೂರಗಳೂ, ಹದಿನೈದನೆಯ ಅಧ್ಯಾಯದಲ್ಲಿ ವಿಷಗಳಿಗೆ ಪ್ರತಿ ವಿಷಗಳೂ, ಹದಿನಾರನೆಯ ಅಧ್ಯಾಯದಲ್ಲಿ ಜ್ವರ ಮತ್ತು ಅದರ ಔಷಧಗಳೂ ಸಂಗ್ರಹಿಸಲ್ಪಟ್ಟಿವೆ. ಹದಿನೇಳನೆಯ ಅಧ್ಯಾಯದಲ್ಲಿ ಅತಿಸಾರ, ಸಂಗ್ರಹಿಣಿ ಅದಕ್ಕೆ ತಕ್ಕ ಔಷಧಗಳೂ, ಹದಿನೆಂಟನೆಯ ಅಧ್ಯಾಯದಲ್ಲಿ ಮೂಲವ್ಯಾಧಿ ಮತ್ತು ಅದರ ಔಷಧಗಳೂ, ಹತ್ತೊಂಭತ್ತನೆಯ ಅಧ್ಯಾಯದಲ್ಲಿ ಅಜೀರ್ಣರೋಗ ಅದಕ್ಕೆ ತಕ್ಕ ಔಷಧಗಳೂ, ಇಪ್ಪತ್ತನೆಯ ಅಧ್ಯಾಯದಲ್ಲಿ ಕ್ರಿಮಿರೋಗ ಮತ್ತು ಅದರ ಔಷಧಗಳೂ ವಿವರಿಸಿ ಬರೆಯಲ್ಪಟ್ಟಿದೆ. ಇಪ್ಪತ್ತೊಂದನೆಯ ಅಧ್ಯಾಯದಲ್ಲಿ ಪಾಂಡುರೋಗ ಲಕ್ಷಣ ಅದರ ಚಿಕಿತ್ಸಾಕ್ರಮವೂ, ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ರಕ್ತಪಿತ್ಥ ರೋಗಗಳೂ ಮತ್ತು ಅದರ ಔಷಧಗಳೂ, ಇಪ್ಪತ್ತಮೂರನೆಯ ಅಧ್ಯಾಯದಲ್ಲಿ ರಾಜಯಕ್ಷ್ಮರೋಗವೂ ಅದಕ್ಕೆ ತಕ್ಕ ಔಷಧಗಳೂ ಬರೆಯಲ್ಪಟ್ಟಿವೆ. ಇಪ್ಪತ್ತನಾಲ್ಕನೆಯ ಅಧ್ಯಾಯದಲ್ಲಿ ಕಾಸರೋಗ ಲಕ್ಷಣ ಮತ್ತು ಅದಕ್ಕೆ ತಕ್ಕ ಔಷಧಗಳೂ, ಇಪ್ಪತ್ತೈದನೆಯ ಅಧ್ಯಾಯದಲ್ಲಿ ಶ್ವಾಸರೋಗ ಮತ್ತು ಅದರ ಚಿಕಿತ್ಸೆಯೂ, ಇಪ್ಪತ್ತಾರನೆಯ ಅಧ್ಯಾಯದಲ್ಲಿ ಹಿಕ್ಕಾ ಎಂಬ ಬಿಕ್ಕಳಿಕೆ ರೋಗವೂ ಅದಕ್ಕೆ ತಕ್ಕ ಔಷಧಗಳೂ, ಇಪ್ಪತ್ತೇಳನೆಯ ಅಧ್ಯಾಯದಲ್ಲಿ ಮೂರ್ಛಾರೋಗವೂ ಅದರ ಔಷಧಗಳೂ, ಇಪ್ಪತ್ತೆಂಟನೆಯ ಅಧ್ಯಾಯದಲ್ಲಿ ಉನ್ಮಾದರೋಗ ಮತ್ತು ಅದಕ್ಕೆ ಆಗುವ ಔಷಧಗಳೂ, ಇಪ್ಪತ್ತೊಂಭತ್ತ

ನೆಯ ಅಧ್ಯಾಯದಲ್ಲಿ ಅಪಸ್ಮಾರವೂ ಅದರ ಔಷಧಗಳೂ, ಮೂವತ್ತನೆಯ ಅಧ್ಯಾಯದಲ್ಲಿ ವಾತರೋಗ ಲಕ್ಷಣಗಳೂ ಅದಕ್ಕೆ ತಕ್ಕ ಔಷಧಗಳೂ, ಮೂವತ್ತೊಂದನೆಯ ಅಧ್ಯಾಯದಲ್ಲಿ ಶೂಲೆರೋಗ ಅದರ ಔಷಧಗಳೂ, ಮೂವತ್ತೆರಡನೆಯ ಅಧ್ಯಾಯದಲ್ಲಿ ಗುಲ್ಮರೋಗ ಅದಕ್ಕೆ ತಕ್ಕ ಔಷಧಗಳೂ, ಮೂವತ್ತಮೂರನೆಯ ಅಧ್ಯಾಯದಲ್ಲಿ ಮೂತ್ರರೋಗ ಮತ್ತು ಅದರ ಚಿಕಿತ್ಸಾ ಕ್ರಮಗಳೂ, ಮೂವತ್ತನಾಲ್ಕನೆಯ ಅಧ್ಯಾಯದಲ್ಲಿ ಪ್ರಮೇಹರೋಗ ಮತ್ತು ಅದಕ್ಕೆ ತಕ್ಕ ಔಷಧಗಳೂ ಚೆನ್ನಾಗಿ ವಿವರಿಸಿ ಬರೆಯಲ್ಪಟ್ಟಿದೆ. ಮೂವತ್ತೈದನೆಯ ಅಧ್ಯಾಯದಲ್ಲಿ ಶೋಭೆ ಮತ್ತು ಅದರ ಔಷಧಗಳೂ, ಮೂವತ್ತಾರನೆಯ ಅಧ್ಯಾಯದಲ್ಲಿ ಅಂಡವೃದ್ಧಿರೋಗ ಮತ್ತು ಅದರ ಔಷಧಗಳೂ, ಮೂವತ್ತೇಳನೆಯ ಅಧ್ಯಾಯದಲ್ಲಿ ಕುರಂಡವೆಂಬ ತೊಡೆವಾಳೆರೋಗವೂ ಅದರ ಔಷಧಗಳೂ, ಮೂವತ್ತೆಂಟನೆಯ ಅಧ್ಯಾಯದಲ್ಲಿ ಗಂಡಮಾಲೆರೋಗ ಮತ್ತು ಅದಕ್ಕೆ ತಕ್ಕ ಔಷಧಗಳೂ, ಮೂವತ್ತೊಂಭತ್ತನೆಯ ಅಧ್ಯಾಯದಲ್ಲಿ ವ್ರಣರೋಗ ಮತ್ತು ಅದರ ಚಿಕಿತ್ಸಾಕ್ರಮವೂ, ನಲವತ್ತನೆಯ ಅಧ್ಯಾಯದಲ್ಲಿ ಕುಷ್ಠರೋಗ ಅದಕ್ಕೆ ತಕ್ಕ ಔಷಧಗಳೂ ವಿವರವಾಗಿ ಬರೆಯಲ್ಪಟ್ಟಿವೆ. ನಲವತ್ತೊಂದನೆಯ ಅಧ್ಯಾಯದಲ್ಲಿ ಪಿತ್ಥರೋಗ ಅದರ ಔಷಧಗಳೂ, ನಲವತ್ತೆರಡನೆಯ ಅಧ್ಯಾಯದಲ್ಲಿ ಪ್ಲೀಹರೋಗ ಮತ್ತು ಅದರ ಔಷಧಗಳೂ, ನಲವತ್ತಮೂರನೆಯ ಅಧ್ಯಾಯದಲ್ಲಿ ಹೃದಯರೋಗ ಮತ್ತು ಅದರ ಔಷಧಗಳೂ, ನಲವತ್ತನಾಲ್ಕನೆಯ ಅಧ್ಯಾಯದಲ್ಲಿ ವಿಸರ್ಪರೋಗ ಅದರ ಚಿಕಿತ್ಸೆಗೆ ತಕ್ಕ ಔಷಧಗಳೂ ವಿಸ್ತರಿಸಲ್ಪಟ್ಟಿದೆ. ನಲವತ್ತೈದನೆಯ ಅಧ್ಯಾಯದಲ್ಲಿ ಮಸೂರಿಕಾ, ಖಜ್ಜಿ, ವಿಷಪುರಿರೋಗಗಳೂ ಅದರ ಔಷಧಗಳೂ, ನಲವತ್ತಾರನೆಯ ಅಧ್ಯಾಯದಲ್ಲಿ ವಿದ್ರಧಿ ಮತ್ತು ಉಪದಂಶರೋಗಗಳೂ ಅದಕ್ಕೆ ತಕ್ಕ ಔಷಧಗಳೂ, ನಲವತ್ತೇಳನೆಯ ಅಧ್ಯಾಯದಲ್ಲಿ ಶುಕ್ರರೋಗ ಮತ್ತು ಅದರ ಔಷಧಗಳೂ, ನಲವತ್ತೆಂಟನೆಯ ಅಧ್ಯಾಯದಲ್ಲಿ ಷರಬತ್ತುಗಳು ಮತ್ತು ಮುರಬ್ಬಗಳನ್ನು ಮಾಡುವ ಕ್ರಮಗಳೂ ಚೆನ್ನಾಗಿ ವಿವರಿಸಲ್ಪಟ್ಟಿವೆ. ನಲವತ್ತೊಂಭತ್ತನೆಯ ಅಧ್ಯಾಯದಲ್ಲಿ ವಿರೇಚನೌಷಧಗಳನ್ನು ವಿಸ್ತರಿಸಿ ಹೇಳಲಾಗಿದೆ. ಐವತ್ತನೆಯ ಅಧ್ಯಾಯದಲ್ಲಿ ಶಿರೋರೋಗಗಳೂ ಅದರ ಔಷಧಗಳೂ ಸಂಗ್ರಹಿಸಲ್ಪಟ್ಟಿವೆ. ಐವತ್ತೊಂದನೆಯ ಅಧ್ಯಾಯದಲ್ಲಿ ಕರ್ಣರೋಗ ಮತ್ತು ಅದರ ಚಿಕಿತ್ಸೆಯ ಔಷಧಗಳೂ ವಿವರಿಸಲ್ಪಟ್ಟಿವೆ. ಐವತ್ತೆರಡನೆಯ ಅಧ್ಯಾಯದಲ್ಲಿ ನೇತ್ರರೋಗ ಮತ್ತು ಅದರ ಔಷಧಗಳೂ, ಐವತ್ತಮೂರನೆಯ ಅಧ್ಯಾಯದಲ್ಲಿ ನಾಸಾರೋಗ ಅದರ ಔಷಧಗಳೂ, ಐವತ್ತನಾಲ್ಕನೆಯ ಅಧ್ಯಾಯದಲ್ಲಿ ದಂತರೋಗ ಅದರ ಚಿಕಿತ್ಸೆಗಳೂ, ಐವತ್ತೈದನೆಯ ಅಧ್ಯಾಯದಲ್ಲಿ ಜಿಹ್ವಾರೋಗ ಕಂಠರೋಗಗಳೂ ಮತ್ತು ಅದರ ಔಷಧಗಳೂ, ಐವತ್ತಾರ

ನೆಯ ಅಧ್ಯಾಯದಲ್ಲಿ ಜಂಗಮವಿಷ ಮತ್ತು ಅದರ ಚಿಕಿತ್ಸಾಕ್ರಮಗಳೂ ಐವತ್ತೇಳನೆಯ ಅಧ್ಯಾಯದಲ್ಲಿ ಭೂತಚಿಕಿತ್ಸೆ ವಿಚಾರಗಳೂ ಸವ್ಯಾಕ್ಯಾಗಿ ವಿಸ್ತೃತಗಳಾಗಿವೆ. ಕೊನೆಯದಾದ ಐವತ್ತೆಂಟನೆಯ ಅಧ್ಯಾಯದಲ್ಲಿ ವಿವಿಧ ಔಷಧಗಳನ್ನು ವಿವರಿಸಿ ಬರೆಯಲಾಗಿದೆ. ಈ ಗ್ರಂಥದಲ್ಲಿ ಪ್ರಚುರಪಡಿಸಿರುವ ಲಕ್ಷಣಗಳೂ, ಯೋಗಗಳೂ ಅತಿ ರಹಸ್ಯವಾದವುಗಳೂ ಅನುಭವವೇದ್ಯಗಳೂ ಆಗಿ ಅಭ್ಯಾಸಿಗಳಿಗೂ ಅನುಭವಸ್ಥರಿಗೂ ಕುಟುಂಬಿಗಳಿಗೂ ಉಪಯೋಗಕಾರಕ ಗಳಾಗಿರುವುದರಿಂದ ಕರ್ಣಾಟಕ ದೇಶದವರು ಈ ಸದ್ಗ್ರಂಥವನ್ನು ಪ್ರೋತ್ಸಾಹಿಸಿ ಇದರಿಂದ ಕನ್ನಡ ನಾಡಿಗೆ ಮೇಲ್ಮೆಯುಂಟಾದರೆ ಅದೇ ನನ್ನ ಶ್ರಮಕ್ಕೆ ತಕ್ಕ ಪ್ರತಿಫಲವೆಂದು ಭಗವಂತನನ್ನು ಪ್ರಾರ್ಥಿಸುತ್ತೇನೆ.

ಈ ಗ್ರಂಥರಚನೆಯ ಕಾಲದಲ್ಲಿ ಸಂಪೂರ್ಣ ಸಹಾನುಭೂತಿಯಿಂದ ನನ್ನೊಡನೆ ಸಹಕರಿಸಿ ಉತ್ತಮವಾದ ಅನೇಕ ಸಲಹೆಗಳನ್ನು ಕೊಟ್ಟು ಆಮೂಲಾಗ್ರವಾಗಿ ಇದನ್ನು ಪರಿಶೋಧಿಸಿದ ಮಹನೀಯರಾದ "ಭಿಷಕ್ ಚೂಡಾಮಣಿ, ವೈದ್ಯಶಿರೋಮಣಿ, ವಿದ್ಯಾಭೂಷಣ, ಕವಿರತ್ನ, ಆಯುರ್ವೇದ ನಿಧಿ" ಮೊದಲಾದ ಮಹಾಬಿರುದಾಂಕಿತರಾದ ಮೈಸೂರು ಸಂಸ್ಥಾನದ ಸ್ಪೆಷಲ್‌ಸ್ಕಾಲರಾಗಿ ಮೈಸೂರು ಸರ್ಕಾರದ ಆಯುರ್ವೇದ ಪರೀಕ್ಷೆಗಳ ಪರೀಕ್ಷಕರಾಗಿರುವ ಶ್ರೀವರ್ಮಾ ರಾಜ ರಾಜಶ್ರೀ ಡಾಕ್ಟರ್ ಹೆಚ್. ನರಸಿಂಹ ಶಾಸ್ತ್ರಿಗಳವರಿಗೂ ಮತ್ತು ಈ ಪುಸ್ತಕವನ್ನು ಆಮೂಲಾಗ್ರವಾಗಿ ಓದಿನೋಡಿ ಆಯುರ್ವೇದದ ಅಷ್ಟಾಂಗಗಳಿಗೂ ಸಂಬಂಧಿಸಿರುವಂತೆ ಈ ಪುಸ್ತಕಕ್ಕೆ ಶ್ರೇಷ್ಠವಾದ ಆಯುರ್ವೇದ ಉಪೋದ್ಘಾತವನ್ನು ಸಹೃದಯದಿಂದ ಬರೆದುಕೊಟ್ಟಿರುವ ನಂದಿ ಆಯುರ್ವೇದ ವೈದ್ಯಶಾಲಾಧ್ಯಕ್ಷರು ಬ್ರಂ॥ಶ್ರೀ॥ ಪಂಡಿತ ತತ್ವವಾದಿ ಸಿ. ಸುಬ್ರಣ್ಯಾಚಾರ್ಯರವರಿಗೂ ಈ ಪುಸ್ತಕದ ಪ್ರೂಫು ವಗೈರೆಗಳನ್ನ ಪರಿಶೋಧಿಸಿ ಬರವಣಿಗೆಯನ್ನ ಸರಿಪಡಿಸಿಕೊಟ್ಟ ಟವರ್ ಪ್ರೆಸ್ ಲೇಟ್ ಪ್ರೊಪ್ರೈಟರಾದ ಹರಿರಾಮಮಿಶ್ರರವರ ಕುಮಾರ ಮ॥ರಾ॥ ಹೆಚ್. ಶುಭಕರಣ ಮಿಶ್ರರಿಗೂ ಈ ಪುಸ್ತಕದ ಮುದ್ರಣ ಸಹಾಯವನ್ನು ಮಾಡಿದ ಪವರ್ ಪ್ರೆಸ್ ಮಾಲೀಕರಾದ ಮ॥ರಾ॥ ವಿ. ನೈಡ್ ಅಂಡ್ ಕಂಪನಿಯವರುಗಳಿಗೂ ಸಹಾ ನಾನು ಚಿರಋಣಿಯಾಗಿರುವೆನು. ಅಲ್ಲದೆ ಚಿರಸ್ಮರಣೀಯವಾದ ಅವರ ಮಹೋಪಕಾರ ಗಳಿಗಾಗಿ ಹೃತ್ಪೂರ್ವಕವಾದ ನನ್ನ ಅನಂತಾನಂತ ವಂದನೆಗಳನ್ನು ಈ ಮೂಲಕ ಸಮರ್ಪಿಸಿ ನಮಸ್ಕರಿಸುವೆನು.

ಇತಿ, ವಿದ್ವಜ್ಜನ ವಿಧೇಯ,

ಪಂಡಿತ ಬಿ. ಆರ್. ಗೋವಿಂದರಾಜುಲು ನಾಯುಡು,

ಹಲಸೂರು ಪೇಟೆ, **ಬೆಂಗಳೂರು ಸಿಟಿ.**

# ಹಿಂದು-ಯುನಾನಿ ಅನುಭವ ವೈದ್ಯರತ್ನ

## ವಿಷಯಾನುಕ್ರಮಣಿಕೆ.

ಪುಟ ಸಂಖ್ಯೆ.

ಪುಟ ಸಂಖ್ಯೆ.

ಪುಟ ಸಂಖ್ಯೆ.

ವಿಷಯಾನುಕ್ರಮಣಿಕೆ.

ಪುಟ ಸಂಖ್ಯೆ.

ಪುಟ ಸಂಖ್ಯೆ.

ಪುಟ ಸಂಖ್ಯೆ.

ಪುಟ ಸಂಖ್ಯೆ.

ಪುಟ ಸಂಖ್ಯೆ.





ಶ್ರೀರಸ್ತು.

# ಹಿಂದು-ಯುನಾನಿ ಅನುಭವ ವೈದ್ಯರತ್ನ.

ಕಂ॥ ಶ್ರೀವರ ನಮೃತಾಂಭೋಧಿನಿ ।
ಜಾವಾಸಂ ಸಕಲ ಲೋಕ ಸೌಖ್ಯವಿಕಾಸಂ ॥
ಶ್ರೀವೇಂಕಟಾಚಲೇಶ್ವರ ।
ನಾವಗ ಮೊಲಿದೀಗೆ ಜಗಕೆ ಸನ್ಮಂಗಳಮಂ ॥

## ಮೊದಲನೆಯ ಅಧ್ಯಾಯ.



ಅಸ್ಥಿವಂಜರ.

### ಮಾನವ ದೇಹದ ಅಸ್ಥಿಪಂಜರ.

ಭಗವಂತನಿಂದ ಸೃಷ್ಟಿಸಲ್ಪಟ್ಟ ನಮ್ಮ ದೇಹವು ಎಲುಬುಗಳಿಂದ ಕಟ್ಟಲ್ಪಟ್ಟ ಒಂದು ಪಂಜರವಾಗಿದೆ. ಒಂದು ಮನೆಗೆ ತೊಲೆಗಳು, ಗಳಗಳು, ಕಂಭಗಳು ಮೊದಲಾದುವು ಇರುವಂತೆಯೇ ನಮ್ಮ ದೇಹದಲ್ಲಿ ಎಲುಬುಗಳು ಇರುವುವು. ಇವು ದೃಢವಾಗಿದ್ದು ಭಾರವನ್ನು ಹೊರುವವುಗಳಾಗಿ ಶಿರಸ್ಸು, ಎದೆ ಇವುಗಳಲ್ಲಿರುವ ಮೆದಳು ಹೃದಯ ಶ್ವಾಸಕೋಶ ಮೊದಲಾದ ಅತಿ ಸೂಕ್ಷ್ಮವಾದ ಭಾಗಗಳನ್ನು ಕಾಪಾಡುತ್ತಾ ಇರುವುವು.

### ದೇಹದಲ್ಲಿರುವ ಎಲುಬುಗಳ ವಿವರಣೆ.

ಕುತ್ತಿಗೆಯಿಂದ ಮೇಲಕ್ಕೆ ೬೩, ಮುಂಡದಲ್ಲಿ ೫೩, ಭುಜ ತೋಳು ಕೈಗಳು ಇವುಗಳಲ್ಲಿ ೬೪, ತೊಡೆ ಮತ್ತು ಪಾದಗಳಲ್ಲಿ ೬೦, ಈ ಪ್ರಕಾರ ಒಟ್ಟಿಗೆ ೨೪೦ ಎಲುಬುಗಳು ಮನುಷ್ಯನ ದೇಹದಲ್ಲಿವೆ. ಆದರೆ ವಯಸ್ಸಾದ ಮುದುಕರ ಕೈಕಾಲುಗಳ ಹೆಬ್ಬೆಟ್ಟಿನಲ್ಲಿ ೮ ಚಿಕ್ಕ ಎಲುಬುಗಳು ಹೆಚ್ಚಾಗಿರುವುವು.

## ಶರೀರ ವಿವರಣೆ.

---

ಮನುಷ್ಯನ ಶರೀರವು ಬಹು ಸೂಕ್ಷ್ಮವಾದ ಅಣುಕೋಶಗಳ ಪದಾರ್ಥವಾಗಿದೆ ಇವು ಸಜೀವವಾಗಿವೆ. ನಾವು ತೆಗೆದುಕೊಳ್ಳುವ ಆಹಾರ ಪದಾರ್ಥಗಳಿಂದ ಇವು ತಮಗೆ ಬೇಕಾದ ಪೋಷಕ ದ್ರವ್ಯಗಳನ್ನು ತೆಗೆದುಕೊಂಡು ವೃದ್ಧಿಯಾಗುತ್ತಲೂ ಕ್ರಮೇಣ ನಶಿಸುತ್ತಲೂ ಇರುವುವು. ದೇಹದ ಪ್ರತಿಯೊಂದು ಅವಯುವಗಳಲ್ಲಿಯೂ ಇರುವ ಅಣುಕೋಶಗಳು ಆಯಾ ಅವಯುವದ ಸ್ವಾಭಾವಿಕ ಕಾರ್ಯಗಳನ್ನು ಮಾಡುತ್ತಿರುವುದು. ಹೇಗೆಂದರೆ:— ಮಾಂಸ ಖಂಡಗಳಲ್ಲಿರುವ ಅಣುಕೋಶಗಳು ಸಂಕೋಚನಾ ಸ್ವಭಾವ (ಉಬ್ಬುವದು, ತಗ್ಗುವದು) ಗಳಾಗಿರುವುದರಿಂದ ಚಲನೆಗೆ ಸಹಕಾರಿಗಳಾಗಿರುವುವು. ಅಣು ಕೋಶಗಳು ಕೆಲಸಮಾಡುತ್ತಿರುವಾಗ ಶಾಖವೂ ಶಕ್ತಿಯೂ ಮತ್ತು ಜೀರ್ಣರಸವನ್ನು ಸಹ ಉತ್ಪತ್ತಿ ಮಾಡುತ್ತಿರುವುವು. ಹೀಗೆ ಅವು ಕೆಲಸ ಮಾಡುವುದರಿಂದ ಯಾವಾಗಲೂ ಕ್ಷೀಣಿಸುತ್ತಲೂ ಕ್ಷೀಣಿಸಿದ ಭಾಗವು ನಾವು ತೆಗೆದುಕೊಳ್ಳುವ ಆಹಾರದಿಂದ ವೃದ್ಧಿಯಾಗುತ್ತಲೂ ಇರುವುವು. ದೇಹದಲ್ಲಿ ಆಗುತ್ತಿರುವ ನಷ್ಟವು ಈ ಅಣುಗಳ ವೃದ್ಧಿಯು ಒಂದೇಸಮನಾಗಿದ್ದರೆ ದೇಹವು ಸಮಸ್ಥಿತಿಯಲ್ಲಿರುವುದು. ಹಾಗಿಲ್ಲದೆ ನಷ್ಟಕ್ಕಿಂತಲೂ ಅವುಗಳ ವೃದ್ಧಿಯು ಹೆಚ್ಚಾದರೆ ದೇಹವು ಪುಷ್ಟಿಯಾಗಿ ಬೆಳೆಯುವುದು. ಕಡಿಮೆಯಾದರೆ ದೇಹವು ಕ್ಷೀಣವಾಗುವುದು. ಆದ್ದರಿಂದ ನಾವು ಕೆಲಸ ಮಾಡುತ್ತಾ ಇರುವಾಗಲೂ ಸುಮ್ಮನಿರುವಾಗಲೂ ದೇಹದ ಅವಯುವಗಳು ನಶಿಸುವುದರಿಂದ ನಮ್ಮ ಶರೀರದ ಪೋಷಣೆಗಾಗಿ ಆಹಾರವನ್ನು ತೆಗೆದುಕೊಳ್ಳಬೇಕು.

## ರಕ್ತ ಪರಿಚಲನೆ ಮತ್ತು ಅದರ ಅವಯುವಗಳು.

ನಮ್ಮ ದೇಹದಲ್ಲಿರುವ ರಕ್ತವು ಎಲ್ಲಾ ಅವಯುವಗಳ ಪೋಷಣೆಗೂ ಬೆಳವಣಿಗೆಗೂ ಶಾಖೋತ್ಪತ್ತಿಗೂ ಅವಶ್ಯಕವಾಗಿದೆ. ಹೀಗೆ ಕ್ಷೀಣಿಸಿರುವ ಅವಯುವಗಳಲ್ಲಿರುವ ಅಣುಗಳಿಗೆ ಬೇಕಾದ ಪೋಷಕ ದ್ರವ್ಯವನ್ನು ಕೊಟ್ಟು ಅವುಗಳಲ್ಲಿ ಉತ್ಪತ್ತಿಯಾಗುವ ಇಂಗಾಲಾಮ್ಲವನ್ನು ರಕ್ತವು ರಕ್ತಕೋಶದ ಬಲಭಾಗದಲ್ಲಿ

ರುವ ಬಲಹೃತ್ಕರಣಕ್ಕೆ ಬಂದು ಸೇರಿ ಅಲ್ಲಿಂದ ಅದರ ಕೆಳಗಿರುವ ಬಲಹೃತ್ಕುಕ್ಷಿಗೆ ಬಂದು ಶೇರಿ ಅಲ್ಲಿಂದ ಅಶುದ್ಧ ರಕ್ತನಾಳಮಾರ್ಗವಾಗಿ ಈ ಕೆಟ್ಟ ರಕ್ತವು ಶ್ವಾಸ ಕೋಶಗಳನ್ನು ಸೇರಿ ಲೋಮನಾಳಗಳಲ್ಲಿ ಹರಿದು ಶ್ವಾಸಕೋಶದ ಗೂಡುಗಳಲ್ಲಿ ರುವ ಆಮ್ಲಜನಕವನ್ನು ತೆಗೆದುಕೊಂಡು ತನ್ನಲ್ಲಿರುವ ಇಂಗಾಲಾಮ್ಲವನ್ನು



ಬಿಟ್ಟು ಶುದ್ಧವಾಗಿ ಶುದ್ಧ ರಕ್ತನಾಳಗಳ ಮೂಲಕ ಎಡಹೃತ್ಕರಣದ ಎಡೆ ಹೃತ್ಕುಕ್ಷಿಗೆ ಬಂದು ಸೇರಿ ಶುದ್ಧ ರಕ್ತನಾಳದ ಮಾರ್ಗವಾಗಿ ಎಲ್ಲಾ ಶುದ್ಧ ರಕ್ತ ನಾಳಗಳ ಕವಲುಗಳಲ್ಲಿಯೂ ಹರಿದು ಲೋಮನಾಳಗಳನ್ನು ಸೇರಿ ತನ್ನಲ್ಲಿರುವ ಪೋಷಕ ದ್ರವ್ಯವಾದ ಆಮ್ಲಜನಕವನ್ನೂ ಆ ಅವಯವಗಳಲ್ಲಿರುವ ಅಣು ವಿಶೇಷಗಳಿಗೆ ಕೊಟ್ಟು ಅವು ವಿಸರ್ಜಿಸಿದ ಇಂಗಾಲಾಮ್ಲಾದಿ ಕಶ್ಮಲಗಳನ್ನು ತೆಗೆದುಕೊಂಡು ಮಲಿನ ರಕ್ತನಾಳಗಳಲ್ಲಿ ಸೇರಿ ಪುನಃ ಬಲ ಹೃತ್ಕರಣಕ್ಕೆ


ಶ್ವಾಸಕೋಶ.

ಬಂದು ಬಲ ಹೃತ್ಕುಕ್ಷಿಯ ಮಾರ್ಗವಾಗಿ ಅಶುದ್ಧ ರಕ್ತನಾಳಗಳಲ್ಲಿ ಹರಿದು ಶ್ವಾಸಕೋಶಗಳಿಗೆ ಸೇರುವುದು. ಹೀಗೆ ರಕ್ತವು ನಮ್ಮ ದೇಹದಲ್ಲೆಲ್ಲಾ ಯಾವಾಗಲೂ ಸಂಚರಿಸುತ್ತಲೇ ಇರುವುದರಿಂದ ಶ್ವಾಸಕೋಶವು ರಕ್ತ ಶುದ್ಧಿಗಾಗಿ ಹೊರಗಿನ ವಾಯುವನ್ನು ಶ್ವಾಸನಾಳದ ಮಾರ್ಗವಾಗಿ ತೆಗೆದುಕೊಂಡು ಒಳಗಿನ ವಾಯುವಾದ ಇಂಗಾಲಾಮ್ಲವನ್ನು ಹೊರಪಡಿಸುವುದು. ಈ ಶ್ವಾಸಕೋಶಗಳು ನಮ್ಮ ರಕ್ತವನ್ನು ಶುದ್ಧಮಾಡುವುದಕ್ಕಾಗಿ ಸಹಕಾರಿಯಾಗಿದೆ.

## ಹೃದಯ.

ಹೃದಯವು ಮಾಂಸಖಂಡಗಳಿಂದ ಮಾಡಲ್ಪಟ್ಟ ಒಂದು ಚೀಲವಾಗಿದೆ. ಇದು ಶ್ವಾಸಕೋಶಗಳ ನಡುವೆ ಎದೆಯ ಪಂಜರದ ಎಡಭಾಗದಲ್ಲಿರುವುದು.



ಇದರ ಕೆಳಭಾಗವು ಪವೆಗೆ ತಗಲಿರುವುದು. ಹೃದಯವು ಮಾವಿನ ಕಾಯಿಯಂತೆ ಆಕಾರವುಳ್ಳದ್ದಾಗಿ ನಾಲ್ಕು ಭಾಗಗಳುಳ್ಳದ್ದಾಗಿದೆ ಎಡಭಾಗದಲ್ಲಿರುವ ಮೇಲಿನ ಭಾಗಕ್ಕೆ ಎಡ ಹೃತ್ಕರಣವೆಂತಲೂ, ಕೆಳಭಾಗಕ್ಕೆ ಎಡಹೃತ್ಕುಕ್ಷಿಯೆಂತಲೂ ಹೆಸರಾಗಿದೆ. ಬಲಭಾಗದಲ್ಲಿರುವ ಮೇಲಿನ ಭಾಗಕ್ಕೆ ಬಲಹೃತ್ಕರಣವೆಂತಲೂ, ಕೆಳಭಾಗಕ್ಕೆ ಬಲಹೃತ್ಕುಕ್ಷಿಯೆಂತಲೂ ಹೆಸರು ಎಡಹೃತ್ಕರಣ, ಎಡ ಹೃತ್ಕುಕ್ಷಿಗಳಿಂದ ಶುದ್ಧ ರಕ್ತನಾಳವು ಅನೇಕ ಕವಲುಗಳಾಗಿ ನಮ್ಮ ದೇಹದ ಪ್ರತಿಯೊಂದು ಭಾಗಕ್ಕೂ ಸೇರುವುವು. ಶರೀರದಲ್ಲಿ ಕವಲುಗಳಾಗಿ ಹೊರಟಿರುವ ಅಶುದ್ಧ ರಕ್ತನಾಳಗಳು ಒಂದಾಗಿ ಸೇರಿ ಬಲಹೃತ್ಕರಣ, ಬಲಹೃತ್ಕುಕ್ಷಿಗೆ ಸೇರಿ ಅಲ್ಲಿಂದ ಹೊರಟು ಶ್ವಾಸಕೋಶಗಳಿಗೆ ಸೇರುವುದು.

ರಕ್ತಕ್ಕೆ ಶುದ್ಧತ್ವವೂ ಬಲವೂ ನಾವು ಶ್ವಾಸಿಸುವ ಹೊಸ ಗಾಳಿಯಿಂದಲೂ, ತಿನ್ನುವ ಆಹಾರದಿಂದಲೂ ಉಂಟಾಗುತ್ತದೆ.

ಎದೆಯಮೇಲೆ ಎಡಗಡೆಯಲ್ಲಿ ಕೈಯಿಟ್ಟು ನೋಡಿದರೆ ಹೃದಯದಲ್ಲಿ ಆಗುವ ಕೆಲಸವು ಸ್ವಲ್ಪ ತಿಳಿಯುವುದು. ಅದು ಬಡಿದುಕೊಳ್ಳುವುದು ಗೊತ್ತಾಗುತ್ತದೆ. ಒಂದೊಂದು ಸಾರಿ ಬಡಿದುಕೊಂಡಾಗಲೆಲ್ಲಾ ರಕ್ತವು ದೇಹದಲ್ಲೆಲ್ಲಾ ವ್ಯಾಪಿಸುವುದು. ಶುದ್ಧ ರಕ್ತನಾಳಗಳಲ್ಲಿ ರಕ್ತವು ಯಾವಾಗಲೂ ತುಂಬಿ ಹರಿಯುತ್ತಾ ಇರುತ್ತದೆ. ಆ ನಾಳಗಳು ದೇಹದ ಮೇಲ್ಗಡೆಯಲ್ಲಿದ್ದರೆ ಸ್ವಲ್ಪ ನೋಯಿಸಿದಾಗ್ಯೂ ಸೂಕ್ಷ್ಮವಾದ ಗಾಯದಿಂದ ಬಹಳ ರಕ್ತವು ಸುರಿದುಹೋಗುವದು. ಆದರೆ ಇಂಥಾ ಅಪಾಯಕ್ಕೆ ಸುಲಭವಾಗಿ ಸಿಕ್ಕದಂತೆ ಅವುಗಳೆಲ್ಲವೂ ಮಾಂಸಖಂಡಗಳ ಒಳಗಡೆ ಬಚ್ಚಿಡಲ್ಪಟ್ಟಿವೆ. ಹಸ್ತದ ಕೆಳಗಣ ಭಾಗದಲ್ಲಿ ಹೆಬ್ಬೆಟ್ಟಿನ ಕಡೆ ಮುಟ್ಟಿದರೆ ಒಂದು ಶುದ್ಧ ರಕ್ತನಾಳವು ಬಡಿದುಕೊಳ್ಳುತ್ತಿರುವದನ್ನು ಕಾಣಬಹುದು

## ಆಹಾರವು ಜೀರ್ಣವಾಗಿ ರಕ್ತಗತವಾಗುವ ವಿಧಾನ.

ನಾವು ಆಹಾರವನ್ನು ಬಾಯಿಯಲ್ಲಿ ಹಾಕಿಕೊಳ್ಳುತ್ತೇವೆ. ಅದು ಹೊರಗೆ ಬೀಳದಹಾಗೆ ಹಲ್ಲುಗಳೂ ತುಟಿಗಳೂ ಕಾಪಾಡುತ್ತವೆ. ನಮ್ಮ ಬಾಯಿಯಲ್ಲಿ ಯಾವಾಗಲೂ ಒಂದು ವಿಧವಾದ ದ್ರವವು ಬಾಯಿಯಲ್ಲಿರುವ ಲಾಲಾಗ್ರಂಥಿಗಳಿಂದ ಉತ್ಪತ್ತಿಯಾಗುತ್ತದೆ. ಈ ದ್ರವವು ನಾವು ತೆಗೆದುಕೊಂಡ ಆಹಾರಗಳಲ್ಲಿರುವ ಶರ್ಕರಾದಿ ಪದಾರ್ಥಗಳನ್ನು ಅಲ್ಲಿಯೇ ಜೀರ್ಣಿಸಿ ರಕ್ತಗತವಾಗುವಂತೆ ಮಾಡಿ ಮಿಕ್ಕ ಭಾಗವನ್ನು ಬಾಯಲ್ಲಿ ಚನ್ನಾಗಿ ತಿರುನಿಹಾಕಿ ಹಲ್ಲಿನಿಂದ ಅಗಿಯಲು ಮತ್ತು ಗಂಟಲೊಳಕ್ಕೆ ನೂಕಲು ಸಹಕಾರಿಯಾಗಿ ಗಂಟಲಿನ ಮಾರ್ಗವಾಗಿ ಅನ್ನನಾಳಕ್ಕೆ ಇಳಿಯುತ್ತದೆ.

ಗಾಳಿಯು ಅಂತರಿಕ್ಷದಿಂದ ಶ್ವಾಸಕೋಶಕ್ಕೆ ಶ್ವಾಸಕೋಶದಿಂದ ಅಂತರಿಕ್ಷಕ್ಕೂ ಗಂಟಲಿನ ಮುಂಭಾಗದಲ್ಲಿರುವ ಶ್ವಾಸನಾಳದ ಮುಖಾಂತರ ಸಂಚರಿಸುತ್ತಿರುವುದು. ಗಂಟಲು ಅನ್ನಪಾನಗಳನ್ನು ಅನ್ನಕೋಶಕ್ಕೆ ಸೇರಿಸುವ ದ್ವಾರವಾಗಿಯೂ ಗಂಟಲಿನ ಮುಂಭಾಗದಲ್ಲಿರುವ ಶ್ವಾಸನಾಳವು ವಾಯುದ್ವಾರವಾಗಿಯೂ ಇದೆ ಎಂಬುವದನ್ನು ಚೆನ್ನಾಗಿ ಜ್ಞಾಪಕದಲ್ಲಿಡಬೇಕು. ವಾಯುದ್ವಾರದ ಶ್ವಾಸನಾಳಕ್ಕೆ ಅನ್ನವಾಗಲಿ ಪಾನವಾಗಲಿ ಸೇರಕೂಡದು. ಅಕಸ್ಮಾತ್ ಸೇರದ ಹಾಗೆ ಆಹಾರವು ಬಾಯಿಯಿಂದ ಗಂಟಲಿಗೆ ಹೋಗುವಾಗ ಒಂದು ಬಾಗಿಲು ಶ್ವಾಸನಾಳದ ದ್ವಾರವನ್ನು ಮುಚ್ಚಿಕೊಳ್ಳುವದು

ಆಹಾರವು ಬಾಯಿಯಲ್ಲಿರುವಾಗ ಮಾತನಾಡುವದಕ್ಕಾಗುವದಿಲ್ಲ. ಮಾತನಾಡಿದರೆ ಮುಚ್ಚಿರುವ ಶ್ವಾಸನಾಳದ ಬಾಗಿಲು ತೆರೆಯಲ್ಪಟ್ಟು ಆಹಾರವು ಶ್ವಾಸನಾಳಕ್ಕೆ ನೇರುವದು ಶ್ವಾಸನಾಳದಲ್ಲಿ ಸೇರಿದ ಆಹಾರವನ್ನು ಹೊರಗೆ ಹೊರಡಿಸುವ ಪರ್ಯಂತರ ಬಹಳ ಕಷ್ಟವಾಗಿ ಕೆಮ್ಮು ಉಂಟಾಗುವದು. ಆಹಾರವು ಅನ್ನನಾಳದ ಮಾರ್ಗವಾಗಿ ಎದೆಯಲ್ಲಿ ಇಳಿದು ಅನ್ನಾಶಯಕ್ಕೆ ಹೋಗುವುದು. ಈ ಅನ್ನಾಶಯವೆಂಬ ಜಠರವು ಮಾಂಸಖಂಡಗಳ ಸಂಕೋಚವಿಕಾಸಗಳಿಂದ ಚಿಕ್ಕದಾಗಿಯೂ ದೊಡ್ಡದಾಗಿಯೂ ಆಗಿ ತನ್ನಲ್ಲಿರುವ ಆಹಾರವನ್ನು ಚನ್ನಾಗಿ ತಿರುವಿಹಾಕುತ್ತದೆ. ಇವುಗಳಲ್ಲಿ ಜಠರ ಸಾರವೆಂಬ ಒಂದು ರಸವಿಶೇಷವು ಆಹಾರಕ್ಕೆ ನೇರಿ ಆಹಾರದಲ್ಲಿರುವ ಸಸಾರಜನಕ ಪದಾರ್ಥಗಳನ್ನು ಕರಗಿಸಿ ಜೀರ್ಣವಾಗುವ ಹಾಗೆ ಮಾಡಿ ಜಠರದ ಒಳಪೊರೆಯ ಲೋಮನಾಳಗಳ ಮೂಲಕ ರಕ್ತಕ್ಕೆ ನೇರುತ್ತದೆ. ಇವಲ್ಲದೆ ಜಠರದಲ್ಲಿ ಜೀರ್ಣವಾಗದೆ ಇರುವ ಆಹಾರಪದಾರ್ಥಗಳನ್ನು ಸಣ್ಣಕರುಳಿಗೆ ನೂಕುತ್ತದೆ. ಅಲ್ಲಿ ಪಿತ್ಥರಸವು ಆಹಾರದಲ್ಲಿರುವ ಮೇದೋಭಾಗವನ್ನು ಮತ್ತು ಪಿಷ್ಟಭಾಗವನ್ನೂ ಜೀರ್ಣಿಸಿ ರಕ್ತಕ್ಕೆ ಸೇರಿಸಲು ಸಹಕಾರಿಯಾಗಿರುವುದು. ಆದರೆ ಚಿಕ್ಕ ಕರುಳಿನಲ್ಲಿಯೂ ಜೀರ್ಣಿಸಲ್ಪಡದೆ ಇರುವ ಆಹಾರಾಂಶವು ಮುಂದಕ್ಕೆ ತಳ್ಳಲ್ಪಟ್ಟು ದೊಡ್ಡ ಕರುಳಿಗೆ ಸೇರುತ್ತದೆ. ಈ ಕರುಳು ಕೆಲವು ಆಹಾರಾಂಶಗಳನ್ನು ಮತ್ತು ನೀರನ್ನೂ ತುಂಬ ಹೀರಿಕೊಂಡು ರಕ್ತಗತವಾಗುವಂತೆ ಮಾಡಿಕೊಳ್ಳುತ್ತದೆ. ದೇಹಪೋಷಣೆಗೆ ಬೇಡವಾದ ಉಳಿದ ಅಂಶಗಳನ್ನು ಒಟ್ಟುಗೂಡಿಸಿ ಮಲವಿಸರ್ಜನೆಯನ್ನು ಮಾಡಿಸುತ್ತದೆ.



## ಪಿತ್ತ ಜನಕಾಂಗ ಅಥವಾ ಯಕೃತ್ತು.

ಇದು ಹೊಟ್ಟೆಯಲ್ಲಿ ಬಲಭಾಗದ ಕೆಳಗೆ ಇರುವ ಪಕ್ಕೆಲಬುಗಳ ಒಳಗಡೆಯೂ ವಪೆಯ ಒಳಗಡೆಯೂ ಇದೆ. ಇದರ ಕೆಳಗಡೆಯಲ್ಲಿ ಕರುಳುಗಳು ಬಲಭಾಗದಲ್ಲಿ ಮೂತ್ರ ಜನಕಾಂಗವೂ ಇವೆ. ಇದು ಸ್ವಲ್ಪ ಕಪ್ಪು ಬೆರಸಿದ ಕೆಂಪು ಬಣ್ಣವಾಗಿ ಎಡಬಲ ಭಾಗಗಳಾಗಿ ವಿಭಾಗಿಸಲ್ಪಟ್ಟಿದೆ. ಈ ಎರಡು ಭಾಗಗಳಲ್ಲಿಯೂ ಸೂಕ್ಷ್ಮವಾದ ಅನೇಕ ಗೂಡುಗಳಿವೆ. ಇವುಗಳಲ್ಲಿ ಅನೇಕ ಲೋಮನಾಳಗಳು ತುಂಬಿವೆ. ಈ ನಾಳಗಳಲ್ಲಿ ಹರಿಯುವ ರಕ್ತದಿಂದ ಈ ಸಣ್ಣ ಗೂಡುಗಳು ಬೇಕಾದ ಸಾಮಗ್ರಿಗಳನ್ನು ತೆಗೆದುಕೊಂಡು ಪಿತ್ತರಸವನ್ನು ಮಾಡುತ್ತವೆ. ಪಿತ್ತರಸವು ಹಳದಿಯಾಗಿಯೂ ಕಹಿಯಾಗಿಯೂ ಕ್ಷಾರ ಸ್ವಭಾವವುಳ್ಳದ್ದಾಗಿಯೂ ಇದೆ. ಇದು ಸದಾಕಾಲದಲ್ಲಿಯೂ ಯಕೃತ್ತಿನಲ್ಲಿ ಉತ್ಪತ್ತಿಯಾಗುತ್ತಲೇ ಇರುವುದು. ಆಹಾರವು ಜಠರದಿಂದ ಸಣ್ಣ ಕರುಳಿಗೆ ಬಂದು ಸೇರುವಾಗ ಪಿತ್ತರಸವು ಯಕೃತ್ತಿನ ಒಂದು ದೊಡ್ಡ ನಾಳದ ಮಾರ್ಗವಾಗಿ ಹರಿದುಬಂದು ಆಹಾರದೊಡನೆ ಸೇರುತ್ತದೆ. ಕರುಳಿನಲ್ಲಿ ಆಹಾರವಿಲ್ಲದಿದ್ದರೆ ಉತ್ಪತ್ತಿಯಾದ ಪಿತ್ತರಸವು ಪಿತ್ತಕೋಶದಲ್ಲಿಯೇ ಸೇರುತ್ತದೆ. ಪಿತ್ತರಸವು ಆಹಾರದಲ್ಲಿರುವ ಮೇದೋಭಾಗವನ್ನು ಕರಗಿಸಿ ಅತೀ ಸೂಕ್ಷ್ಮವಾಗಿ ಮಾಡಿ ಮೇಲೆ ಹೇಳಿದ ರಸಾಯನೀನಾಳಗಳ ಮಾರ್ಗವಾಗಿ ರಕ್ತಕ್ಕೆ ಸೇರಿಸುವುದಲ್ಲದೆ ಕರುಳಿನಲ್ಲಿರುವ ಆಹಾರವನ್ನು ಕೊಳೆಯದಂತೆ ಮಾಡುತ್ತದೆ ಮತ್ತು ಮಲವಿಸರ್ಜನೆಗೆ ಸಹಕಾರಿಯಾಗಿದೆ. ಜೀರ್ಣಕೋಶದಿಂದ ಹೊರಟ ರಕ್ತನಾಳಗಳು ಆಹಾರದಲ್ಲಿರುವ ಸಾರಾಂಶವನ್ನೆಲ್ಲಾ ತೆಗೆದುಕೊಂಡು ಪಿತ್ತಕೋಶಕ್ಕೆ ಹೋಗುವಾಗ ಹೆಚ್ಚಾದ ಸಕ್ಕರೆ ಪಿಷ್ಟಾದಿಗಳನ್ನು ಪಿತ್ತಜನಕಾಂಗದಲ್ಲಿರುವ ಗೂಡುಗಳಲ್ಲಿ ಮತ್ತೊಂದು ವಿಧವಾದ ಸಕ್ಕರೆಯಾಗಿಟ್ಟುಕೊಂಡು ಪುನಃ ಶರೀರಕ್ಕೆ ಅವಶ್ಯಬಿದ್ದಾಗ ಅದನ್ನು ಸುಲಭವಾಗಿ ಕರಗತಕ್ಕ ಸಕ್ಕರೆಯಾಗಿ ಮಾಡಿ ಶರೀರದ ಎಲ್ಲಾ ಭಾಗಗಳಿಗೂ ಕೊಡುತ್ತದೆ. ಇದು ಪಿತ್ತಜನಕಾಂಗದ ಮತ್ತೊಂದು ಮುಖ್ಯವಾದ ಕೆಲಸವಾಗಿದೆ.

**ಮೇದೋಜೀರಕ :—** ಇದು ಅನ್ನಾಶಯದ ಹಿಂಭಾಗದಲ್ಲಿರುವ ಒಂದು ಗ್ರಂಥಿಯಾಗಿದೆ. ಈ ಗ್ರಂಥಿಯಲ್ಲಿ "ಮೇದೋಜೀರಕ ರಸ" ಎಂಬ ಜೀರ್ಣರಸವು ಉತ್ಪತ್ತಿಯಾಗುವುದು. ಸಣ್ಣ ಕರುಳಿಗೆ ಪಿತ್ತರಸವು ಬಂದು ಸೇರುವ ಸ್ಥಳದಲ್ಲಿಯೇ ಈ ರಸವು ಒಂದು ನಾಳದ ಮಾರ್ಗವಾಗಿ ಬಂದು ಸೇರುವುದು. ಈ ರಸವು ಸಸಾರಜನಕ, ಮೇದಸ್ಸು, ಸರ್ಕರೆ, ಪಿಷ್ಟಾದಿಗಳನ್ನು ಮತ್ತು ಮೇದಃಪದಾರ್ಥಗಳನ್ನು ಕರಗಿಸಿ ಜೀರ್ಣಮಾಡಿ ಮೇದೋವಾಹಿನಿ ನಾಳಗಳ ಮಾರ್ಗವಾಗಿ ರಕ್ತಗತವಾಗುವಂತೆ ಮಾಡುತ್ತದೆ.

ಗುಲ್ಮ :—ಇದು ಹೊಟ್ಟೆಯ ಎಡಭಾಗದಲ್ಲಿ ಜಠರದ ಕೆಳಗಡೆ ಇರುವ ಒಂದು ಗ್ರಂಥಿಯಾಗಿದೆ. ಇದು ಬಹು ಸುಲಭವಾಗಿ ಒಡೆಯುವ ಸ್ವಭಾವವುಳ್ಳದ್ದಾಗಿದೆ ದೇಹಕ್ಕೆ ಅತ್ಯವಶ್ಯಕವಾದ ಒಂದು ವಿಧವಾದ ರಸವಿಶೇಷವನ್ನು ಉತ್ಪತ್ತಿಮಾಡಿ ರಕ್ತಕ್ಕೆ ಸೇರಿಸುವುದು. ಬಿಳಿಯ ರಕ್ತಕಣಗಳನ್ನು ಕೆಂಪು ರಕ್ತಕಣಗಳನ್ನು ಉತ್ಪತ್ತಿ ಮಾಡಿ ರಕ್ತಕ್ಕೆ ಸೇರಿಸುವುದು. ಇದು ಮುಖ್ಯವಾಗಿ ಬಿಳಿಯ ರಕ್ತಕಣಗಳನ್ನು ಅಧಿಕವಾಗಿ ಉತ್ಪತ್ತಿ ಮಾಡುವುದು.

## ಶುದ್ಧೀಕರಣಾಂಗಗಳು.

ನಮ್ಮ ಶರೀರದಲ್ಲಿ ಉತ್ಪತ್ತಿಯಾದ ಕಶ್ಮಲಗಳನ್ನು ಶರೀರದಿಂದ ಹೊರಗೆ ವಿಸರ್ಜನೆ ಮಾಡಲು ಶ್ವಾಸಕೋಶಗಳು ಮೂತ್ರಜನಕಾಂಗಗಳು ಮತ್ತು ಚರ್ಮ ಇವೇ ಮುಖ್ಯವಾದವುಗಳು. ಅದರೆ ಒಂದನೆಯ ಶ್ವಾಸಕೋಶಗಳು ನಮ್ಮ ಶರೀರದಲ್ಲಿ ಉತ್ಪತ್ತಿಯಾದ ಇಂಗಾಲಾಮ್ಲಾದಿ ಕಶ್ಮಲಗಳನ್ನು ಹೊರಗೆ ವಿಸರ್ಜನೆಮಾಡುವ ಕ್ರಮವು ಹಿಂದೆಯೇ ತಿಳಿಸಿದ್ದೇವಷ್ಟೆ.

ಎರಡನೆಯದು ಮೂತ್ರಜನಕಾಂಗಗಳು ಇವಕ್ಕೆ ಮೂತ್ರಪಿಂಡಗಳೆಂದು ಹೇಳುತ್ತಾರೆ. ಇವು ಹೊಟ್ಟೆಯ ಹಿಂಭಾಗದಲ್ಲಿ ಬೆನ್ನುಮೂಳೆಗೆ ತಗುಲಿದಹಾಗೆ ಆ ಮೂಳೆಯ ಮುಂಭಾಗದಲ್ಲಿವೆ ಇವುಗಳಲ್ಲಿ ಒಂದು ಎಡಗಡೆಯೂ ಒಂದು ಬಲಗಡೆಯೂ ಇವೆ. ಇವುಗಳಿಗೆ ಒಂದು ದೊಡ್ಡ ಶುದ್ಧ ರಕ್ತನಾಳವು ರಕ್ತವನ್ನು ತೆಗೆದುಕೊಂಡು ಒಂದು ಇವುಗಳಲ್ಲಿ ಸಂಚರಿಸುವುದು. ಅಲ್ಲಿ ಬಂದು ಸೇರುವ ರಕ್ತದಲ್ಲಿರುವ ಕಲ್ಮಷಗಳನ್ನು ಮತ್ತು ನೀರನ್ನೂ ಮೂತ್ರಪಿಂಡಗಳು ಬೇರೆಬೇರೆ ಮಾಡುವುವು. ಮೂತ್ರಜನಕಾಂಗಗಳಿಂದ ಪ್ರತ್ಯೇಕಿಸಲ್ಪಟ್ಟ ನೀರೂ ಮತ್ತು ಕಶ್ಮಲಸಂಬಂಧವಾದ ಲವಣಗಳೂ ಮೂತ್ರನಾಳಗಳಲ್ಲಿ ಹರಿದು ಮೂತ್ರಕೋಶಕ್ಕೆ ಬಂದು ಸೇರುವುದು. ಮೂತ್ರಕೋಶವು ತುಂಬಿದ ಕೂಡಲೆ ಮೂತ್ರಕೋಶದ ಸಂಕೋಚನಾಶಕ್ತಿಯಿಂದ ಮೂತ್ರವು ವಿಸರ್ಜಿಸಲ್ಪಡುವುದು.

ಮೂರನೆಯದು ಚರ್ಮ, ಇದನ್ನು ಮುಟ್ಟಿನೋಡಿದರೆ ತಿಳಿವಳಿಕೆಯನ್ನುಂಟು ಮಾಡುವ ಸ್ಪರ್ಶೇಂದ್ರಿಯವಾಗಿದೆ. ಇದು ಅಂಗಗಳಿಗೆ ಅಪಾಯಬಾರದಂತೆ ಮುಚ್ಚಿಕೊಂಡಿರುವುದು. ಚರ್ಮದಲ್ಲಿ ಮೇಲಿನ ಪೊರೆ ಕೆಳಗಿನ ಪೊರೆ ಎಂಬದಾಗಿ ಎರಡು ಪೊರೆಗಳಿರುವುವು. ಇವುಗಳಲ್ಲಿ ಮೇಲ್ಪೊರೆಯು ಸಣ್ಣಗೆ ತೆಳುವಾದ ಹುರುಪೆಗಳಿಂದ ಮಾಡಲ್ಪಟ್ಟಿದೆ. ಈ ಹುರುಪೆಗಳನ್ನು ಕೆರೆದಾಗ ಬೆಳ್ಳಗೆ ಬೂದಿಯ ಹಾಗೆ ಉದುರುತ್ತದೆ. ಇತರ ಕಾರಣಗಳಿಂದಲೂ ಉದುರುವುದುಂಟು. ಇವು ಹೀಗೆ ಉದುರಿಹೋದಾಗಲೆಲ್ಲಾ ಬೇರೆ ಹೊಸ ಹುರುಪೆಯು ಉತ್ಪತ್ತಿಯಾಗುತ್ತಲೆ ಇರುತ್ತದೆ.

ಕೆಳಗಿನ ಪೊರೆಯು ಬಲವಾಗಿಯೂ ಸ್ಥಿತಿಸ್ಥಾಪಕ ಶಕ್ತಿಯುಳ್ಳದ್ದಾಗಿಯೂ ಇರುವುದು. ಇದು ತನ್ನ ಕಡೆಯಲ್ಲಿರುವ ಅಂಗಗಳನ್ನು ಅಪಾಯವಿಲ್ಲದಂತೆ ಕಾಪಾಡುವುದು. ಈ ಪೊರೆಯಲ್ಲಿ ಅನೇಕ ಸೂಕ್ಷ್ಮವಾದ ರಕ್ತನಾಳಗಳೂ ನರದ ಕವಲುಗಳೂ ಮೇದೋವಾಹಿನಿಗಳೂ ಮತ್ತು ಹಲವು ಬಗೆಯ ಗ್ರಂಥಿಗಳೂ ಇರುವುವು. ಈ ಗ್ರಂಥಿಗಳಲ್ಲಿ ಒಂದು ಬಗೆಯ ಗ್ರಂಥಿಗಳು ಜಿಡ್ಡನ್ನುಂಟುಮಾಡಿ ನಮ್ಮ ಚರ್ಮವೂ ಕೂದಲೂ ಮೃದುವಾಗಿಯೂ ಹೊಳುವಾಗಿಯೂ ಇರುವಂತೆ ಮಾಡುವುದು. ಇನ್ನೊಂದುಬಗೆಯ ಗ್ರಂಥಿಗಳು ಲೋಮನಾಳಗಳಲ್ಲಿ ಹರಿಯುತ್ತಿರುವ ರಕ್ತದಿಂದ ಬೆವರನ್ನುಂಟುಮಾಡಿ ಸಣ್ಣ ನಾಳಗಳ ಮಾರ್ಗವಾಗಿ ಚರ್ಮದ ಮೇಲ್ಭಾಗಕ್ಕೆ ಹೊರಡಿಸುತ್ತಿರುವುದು. ಇವುಗಳಲ್ಲಿ ಬೆವರು ಯಾವಾಗಲೂ ಉತ್ಪತ್ತಿಯಾಗುತ್ತಿರುವುದು. ಈ ಬೆವರಿನ ಮೂಲಕ ನೀರು, ಇಂಗಾಲಾಮ್ಲ, ಕೆಲವು ಲವಣಗಳು, ಜಿಡ್ಡು ಮುಂತಾದ ಕಶ್ಮಲಗಳು ಹೊರಬೀಳುವುವು. ಬೆವರಿನಿಂದ ಶರೀರದಲ್ಲಿ ಹೆಚ್ಚಾದ ಶಾಖವು ತಗ್ಗುತ್ತಿರುವುದು. ಈ ಕೆಳಗಿನ ಪೊರೆಯಲ್ಲಿ ಬಹು ಸೂಕ್ಷ್ಮವಾದ ಒಂದು ಬಗೆಯ ಮೊಳಕೆಗಳಿರುವುವು. ಇವುಗಳಿಂದಲೇ ನಮಗೆ ಸ್ಪರ್ಶಜ್ಞಾನವುಂಟಾಗುವುದು. ಈ ಮೊಳಕೆಗಳಲ್ಲಿ ಹರಿಯುತ್ತಿರುವ ರಕ್ತವು ರೋಮಕೂಪಗಳ ಬೆಳವಣಿಗೆಗೆ ಸಹಕಾರಿಯಾಗಿರುವುದು. ಚರ್ಮದ ಪೊರೆಯ ಕೆಳಗಡೆ ಕೊಬ್ಬಿನ ಹೊದಿಕೆಯು ಇರುವುದು. ಈ ಕೊಬ್ಬಿನ ಹೊದಿಕೆಯು ದೇಹದ ಶಾಕವನ್ನು ಹೆಚ್ಚಾಗಿ ಹೊರಪಡದಂತೆ ಕಾಪಾಡುವುದು.

ಅಶುದ್ಧ ರಕ್ತನಾಳಗಳು ಚರ್ಮದ ಒಳಗಡೆ ದೇಹದ ಮೇಲ್ಭಾಗದಲ್ಲೇ ಇರುತ್ತವೆ. ಹಸ್ತದ ಮೇಲ್ಭಾಗದಲ್ಲಿ ಅಶುದ್ಧ ರಕ್ತನಾಳಗಳು ಚನ್ನಾಗಿ ಕಾಣಿಸುತ್ತವೆ. ಈ ಅಶುದ್ಧ ರಕ್ತನಾಳಗಳಲ್ಲಿ ರಕ್ತವು ಬಹು ಸಾವಕಾಶವಾಗಿ ಸಂಚರಿಸುತ್ತಿರುವದು. ಶುದ್ಧ ರಕ್ತನಾಳಗಳು ದೇಹದ ಒಳಗಡೆಯಲ್ಲಿಯೂ ಅಶುದ್ಧ ರಕ್ತನಾಳಗಳು ಚರ್ಮದ ಒಳಗಡೆ ದೇಹದ ಮೇಲ್ಭಾಗದಲ್ಲಿಯೂ ಇರುತ್ತವೆ.

## ಮಿದುಳು ಮತ್ತು ಅದರಿಂದ ಹೊರಡುವ ನರಗಳು.

ಶರೀರದ ಬೇರೆಬೇರೆ ಅವಯವಗಳು ಮಾಡುವ ಮುಖ್ಯ ಕಾರ್ಯಗಳನ್ನು ಹಿಂದೆಯೇ ತಿಳಿಸಿದ್ದೇವಷ್ಟೆ. ಈ ಕಾರ್ಯಗಳೆಲ್ಲಾ ನರಗಳಿಂದ ಉಂಟಾಗುತ್ತವೆ ಮತ್ತು ಅವುಗಳ ಆಧೀನದಲ್ಲಿರುತ್ತವೆ. ನರಗಳು ಶರೀರದ ರಕ್ಷಣೆಗೂ ಶರೀರದ ಎಲ್ಲಾ ಐಚ್ಛಿಕ-ನೈಚ್ಛಿಕ ವ್ಯಾಪಾರಗಳಿಗೂ ಕಾರಣವಾಗಿರುವುದರಿಂದ ಶರೀರದಲ್ಲಿ ಉಚ್ಚಸ್ಥಾನವನ್ನು ಹೊಂದಿವೆ.

ಮಿದುಳು ಶರೀರಕ್ಕೆ ಮುಖ್ಯವಾದ ಅವಯುವವಾದುದರಿಂದ ಘಟ್ಟಿಯಾಗಿರುವ ತಲೆಬುರುಡೆಯಲ್ಲಿ ಕಾಪಾಡಲ್ಪಟ್ಟಿದೆ. ಇದಕ್ಕೆ ಸಂಬಂಧಪಟ್ಟ ಮಿದುಳು ಬಳ್ಳಿಯು, ಬೆನ್ನು ಮೂಳೆಗಳೊಳಗಿರುವ ನಳಿಕೆಯಿಂದ ಕಾಪಾಡಲ್ಪಟ್ಟಿದೆ.



ನರಗಳು, ಮಿದುಳು ಮತ್ತು ಮಿದುಳು ಬಳ್ಳಿಯಿಂದ ಹೊರಟು ಕವಲು ಕವಲುಗಳಾಗಿ ಒಡೆದು ದೇಹದ ಸಕಲ ಅವಯುವಗಳಲ್ಲಿಯೂ ಹರಡಿಕೊಂಡಿದೆ. ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮಗಳೆಂಬ ಪಂಚೇಂದ್ರಿಯಗಳಲ್ಲಿ ವ್ಯಾಪಿಸಿರುವ ಒಂದು ಬಗೆಯ ನರಗಳು ಅನುಕ್ರಮವಾಗಿ ನೋಟ, ಶಬ್ದ, ವಾಸನೆ, ರುಚಿ, ಸ್ಪರ್ಶಗಳೆಂಬ ತಿಳಿವಳಿಕೆಗಳನ್ನು ಒಯ್ಯುತ್ತವೆ. ಈ ಬಗೆಯ ನರಗಳಿಗೆ ಜ್ಞಾನವಾಹಿಕೆ ನರಗಳು ಎಂದು ಹೆಸರು. ಇನ್ನೊಂದು ಬಗೆಯ ನರಗಳು ಮಿದುಳಿನ ಆಜ್ಞೆಯನ್ನು ಮಾಂಸಖಂಡಗಳಿಗೆ ತಲಪಿಸುವುವು. ಆಗ ಮಾಂಸಖಂಡಗಳ ಚಲನೆಯಿಂದ ನಮಗೆ ಬೇಕಾದ ಕೆಲಸಗಳು ನೆರವೇರುವುವು. ಈ ಬಗೆಯ ನರಗಳೇ ರಸವಿಶೇಷಗಳ ಉತ್ಪತ್ತಿಗೂ ಕಾರಣವಾಗಿರುವುವು. ಇವುಗಳಿಗೆ ಕ್ರಿಯಾವಾಹಕ ನರಗಳು ಎಂದು ಹೆಸರು. ಮಿದುಳು ಕ್ರಿಯಾವಾಹಕ ನರಗಳ ಮೂಲಕವಾಗಿ ಕೈಯಲ್ಲಿರುವ ಮಾಂಸಖಂಡಗಳಿಗೆ ಕೈಯನ್ನು ಹಿಂದಕ್ಕೆ ಎಳೆದುಕೊಳ್ಳುವಂತೆ ಆಜ್ಞಾಪಿಸುವುದು. ಆಗ ನಾವು ಕೈಯನ್ನು ಹಿಂದಕ್ಕೆ ಎಳೆದುಕೊಳ್ಳುವೆವು ಹೀಗೆಯೇ ಆಹಾರ ಪದಾರ್ಥಗಳ ನೋಟದಿಂದಾಗಲೀ ಅಥವಾ ಅವುಗಳ ವಾಸನೆಯಿಂದಾಗಲೀ ಬಾಯಲ್ಲಿ ದ್ರವವು ಊರುವುದು. ಕಣ್ಣು ಮತ್ತು ಮೂಗಿನಲ್ಲಿರುವ ಜ್ಞಾನವಾಹಕ ನರಗಳು ನೋಟ ಮತ್ತು ವಾಸನೆಯ ತಿಳುವಳಿಕೆಯನ್ನು ಮಿದುಳಿಗೆ ಒಯ್ಯುವುವು. ಮಿದುಳು ಲಾಲಾಗ್ರಂಥಿಗಳಲ್ಲಿರುವ ಕ್ರಿಯಾವಾಹಿಕ ನರಗಳಿಗೆ ಗ್ರಂಥಿಗಳಲ್ಲಿ ರಸವನ್ನುತ್ಪತ್ತಿ ಮಾಡುವಂತೆ ಆಜ್ಞಾಪಿಸುವುದು. ಆಗ ರಸವಿಶೇಷಗಳು ಉತ್ಪತ್ತಿಯಾಗುವುವು.

ಮಿದುಳು ಆಲೋಚನೆ, ಬುದ್ಧಿ, ನೆನಪು, ನೋವು, ವಾಸನೆ, ರುಚಿ ಮುಂತಾದ ತಿಳಿವಳಿಕೆಗಳಿಗೆ ಆಧಾರವಾದ ಮಾನಸೇಂದ್ರಿಯವಾಗಿದೆ. ಇದು

ಮೃದುವಾಗಿ ಅಪಾಯ ಬಾರದಹಾಗೆ ಭದ್ರವಾದ ತಲೆಬುರುಡೆಯಲ್ಲಿ ಕಾಪಾಡಲ್ಪಟ್ಟಿದೆ. ಇದು ಮುಖದಕಡೆಯಿಂದ ತಲೆಯ ಹಿಂದುಗಡೆಯಲ್ಲಿ ಉದ್ದಕ್ಕೂ ಎರಡು ಹೋಳಾಗಿ ಭಾಗಿಸಲ್ಪಟ್ಟಿರುವುದು. ಮಿದುಳಿನ ಒಳಭಾಗವು ಬಿಳುಪಾದ ಒಂದು ಜಿಗೆಯ ಪದಾರ್ಥವಾಗಿದೆ. ಇದರ ಹೊರಭಾಗವೆಲ್ಲಾ ಬುದ್ಧಿಯ ಉತ್ಪತ್ತಿಗೆ ಕಾರಣವಾದ ಬೂದುಬಣ್ಣದ ಪದಾರ್ಥದಿಂದ ಕೂಡಿರುವುದು. ಈ ಪದಾರ್ಥವು ಮಡಿತೆಮಡಿತೆಯಾಗಿರುವುದು. ಈ ಬೂದುಬಣ್ಣದ ಪದಾರ್ಥದ ಗಾತ್ರವು ಮಡಿತೆಗಳ ಸಂಖ್ಯೆಯೂ ಹೆಚ್ಚಿದ ಹಾಗೆಲ್ಲಾ ಬುದ್ಧಿ ಶಕ್ತಿಗಳು ಹೆಚ್ಚುವುವು.

ಮಿದುಳಿನ ಸಹಾಯವು ಪಂಚೇಂದ್ರಿಯಗಳಿಗೆ ಇಲ್ಲದಿದ್ದರೆ ಆರೋಗ್ಯವನ್ನು ಕಾಪಾಡಿಕೊಳ್ಳುವುದಕ್ಕೆ ಬಹಳ ದುಸ್ತರವಾಗುವುದು. ಆದ್ದರಿಂದ ಮಿದುಳು, ಮಿದುಳುಬಳ್ಳಿಗಳೂ, ಐಚ್ಛಿಕ-ನೈಚ್ಛಿಕ ವ್ಯಾಪಾರಗಳಲ್ಲಿ ಉಚ್ಚಸ್ಥಾನವನ್ನು ಪಡೆದಿರುವುದು.

## ಎರಡನೆಯ ಅಧ್ಯಾಯ.

## ಧಾತುಗಳು ಮತ್ತು ದೋಷಗಳ ನಿವರಣೆ.

### ಸಪ್ತಧಾತುಗಳ ನಿವರಣೆ.

ಅಸ್ಥಿ, ಮಜ್ಜ, ಮೇದಸ್ಸು, ಮಾಂಸ, ರಕ್ತ, ತ್ವಚ, ಶುಕ್ಲ ಇವುಗಳಲ್ಲಿ ಅಸ್ಥಿ, ಮಜ್ಜ, ಮೇದಸ್ಸುಗಳು ವಾತಾಶ್ರಯಗಳಾಗಿವೆ. ಪಿತ್ತಕ್ಕೆ ಮಾಂಸ, ರಕ್ತಗಳು ಆಶ್ರಯಗಳು, ತ್ವಕ್ಕು ಶುಕ್ಲಗಳನ್ನು ಶ್ಲೇಷ್ಮವು ಆಶ್ರಯಿಸಿಕೊಂಡಿದೆ. ಈ ಸಪ್ತಧಾತುಗಳು ಪಿತ್ತದ ತೇಜಸ್ಸಿನಿಂದ ಪಾಚಿತವಾಗಿವೆ. ಇವುಗಳು ರಸದಿಂದ ರಕ್ತವು, ರಕ್ತದಿಂದ ಮಾಂಸವು, ಮಾಂಸದಿಂದ ಮೇದಸ್ಸು ಈ ಪ್ರಕಾರವಾಗಿ ಒಂದರಿಂದ ಮತ್ತೊಂದು ಉತ್ಪತ್ತಿಯಾಗಿವೆ.

### ಸಪ್ತಧಾತುಗಳಿಂದ ಹುಟ್ಟುವ ಸಪ್ತ ಉಪಧಾತುಗಳು.

ಸ್ತನಗಳಲ್ಲುತ್ಪತ್ತಿಯಾಗುವ ಹಾಲು ರಸಧಾತುವಿನ ಉಪಧಾತುವು. ಸ್ತ್ರೀಯರುಗಳು ಋತುವಾಗುವ ರಜೋಧಾತುವು ರಕ್ತದ ಉಪಧಾತುವು. ಇವು ಎರಡೂ ಸ್ತ್ರೀಯರಿಗೆ ಕಾಲವಿಶೇಷದಿಂದ ಉಂಟಾಗುತ್ತವೆ. ಸರ್ವದಾ ಇಲ್ಲದೇ ಇರುವದೂ ಉಂಟು. ವಸಾ ಎಂಬ ಸ್ನೇಹವು ಮಾಂಸಕ್ಕೆ ಉಪಧಾತುವು. ಸ್ವೇದವು ಮೇದಸ್ಸಿನ ಉಪಧಾತುವು. ದಂತಗಳು ಅಸ್ಥಿಯ ಉಪಧಾತುವು. ಕೇಶಗಳು ಮಜ್ಜೆಯ ಉಪಧಾತುವು. ಓಜಸ್ಸು ಶುಕ್ಲದ ಉಪಧಾತುವು.

## ಸಪ್ತಧಾತುಗಳಿಂದ ಹುಟ್ಟುವ ಸಪ್ತಮಲಗಳ ವಿವರ.

೧ನೇ ರಸ ಧಾತುವಿನಿಂದ ಉಂಟಾಗುವ ಮಲವು ನಾಲಿಗೆ, ಕಣ್ಣು, ನೇತ್ರ, ಕೆನ್ನೆಗಳ ಸಮೀಪದಲ್ಲಿರುತ್ತೆ. ೨ನೆಯದು ಈರಸಧಾತುವಿಗೆ ಕಾಂತಿಯನ್ನು ಹೆಚ್ಚಿಸುವ ಪಿತ್ತವು, ರಕ್ತ ಧಾತುವಿನ ಮಲವಾಗಿರುತ್ತೆ. ೩ನೆಯದು ನಾಲಿಗೆ, ದಂತ, ಬಗಲು, ಶಿಶ್ನ ಇವುಗಳ ಮಲಗಳು ಮೇಧೋ ಧಾತುವಿನಿಂದ ಉಂಟಾಗಿರುತ್ತವೆ. ೪ನೆಯದು ನಖ, ಕೇಶ, ಲೋಮಗಳು, ಅಸ್ಥಿ ಧಾತು ಸಂಬಂಧ ಮಲಗಳೆಂದು ತಿಳಿಯತಕ್ಕದ್ದು. ೫ನೆಯದು ಮುಖದಸ್ನಿಗ್ಧತಾ, ಕಣ್ಣಿನ ಮಲ ಇವುಗಳು ಮಜ್ಜಾ ಧಾತುವಿನಿಂದ ಉಂಟಾಗಿರುತ್ತವೆ. ೬ನೇ ಮೊಡವೆ, ಮೀಶೆ ಇವು ಶುಕ್ಲಧಾತುವಿನ ಮಲಗಳು ೭ನೇ ಕಿವಿಗಳಲ್ಲಿರುವ ಮಲವು ಮಾಂಸ ಧಾತುವಿನ ಮಲವು

## ಸಪ್ತಾಶಯುಗಳಿಗೆ ವಿವರ.

ರಕ್ತಾಶಯ, ಆಮಾಶಯ, ಪಿತ್ತಾಶಯ, ಪಕ್ವಾಶಯ, ವಾಯುವಾಶಯ, ಮೂತ್ರಾಶಯ, ಮಲಾಶಯ ಈ ೭ ಆಶಯುಗಳು ಒಂದರ ಕೆಳಗೆ ಒಂದು ಇರುತ್ತವೆ. ಆದರೆ ಪಿತ್ತಾಶಯ, ಪಕ್ವಾಶಯುಗಳಿಗೆ ಉತ್ತರೋತ್ತರವಾಗಿ ಗರ್ಭಾಶಯುವಿರುತ್ತೆ. ಸ್ತ್ರೀಯರುಗಳಿಗೆ ಸ್ತನ ಎರಡು, ಗರ್ಭಾಶಯ ಒಂದು ಸಹ ಅಧಿಕವಾಗಿರುತ್ತೆ.

## ತ್ರಿದೋಷಗಳಿಗೆ ವಿವರ.

ತ್ರಿದೋಷಗಳು ಅಂದರೆ ವಾತ, ಪಿತ್ಥ, ಶ್ಲೇಷ್ಮ ಇವು ವಿಕಾರವಾದರೆ ರೋಗವೆಂದು ಕರೆಸಿಕೊಳ್ಳುತ್ತೆ.

## ಅಪಸ್ತವಸಿರಾ ಮರ್ಮ.

ಹೊಟ್ಟೆಯ ಎರಡು ಪಾರ್ಶ್ವಗಳಲ್ಲಿಯು ವಾತವಾಹಕ ನಾಡಿ ಇದೆ. ಈ ಮರ್ಮವು ಅರ್ಧಾಂಗುಲ ಪ್ರಮಾಣವಾದದ್ದು. ಇದಕ್ಕೆ ವಿಕಾರವಾದರೆ ಕಾಸಶ್ವಾಸ ಹುಟ್ಟುತ್ತೆ.

## ಕಟಿತರುಣ ಮರ್ಮ.

ಪೃಷ್ಠವಂಶದ ಉಭಯ ಪಾರ್ಶ್ವದಲ್ಲಿ ಟೊಂಕದ ಅಸ್ಥಿಯಿರುತ್ತೆ ಇವುಗಳಿಗೆ ಕಟಿತರುಣ ಮರ್ಮವೆಂಬ ಸಂಜ್ಞೆಯು. ಇವುಗಳಿಗೆ ಬಾಧಕವುಂಟಾದರೆ ರಕ್ತಕ್ಷಯದಿಂದ ವಿವರ್ಣವಾಗುತ್ತೆ.

## ಸಿರಾಶ್ರಿತ ವಾತಾದಿಗಳ ಕಾರ್ಯ.

ವಾತವು ತನ್ನ ಸಿರೆಗಳಲ್ಲಿ ಸರಿಯಾಗಿ ಚಲಿಸುವುದರಿಂದ ಶರೀರವನ್ನು ಬಗ್ಗಿಸುವುದಕ್ಕೂ ಮತ್ತು ವಿಸ್ತರಿಸುವುದಕ್ಕೂ ಮತ್ತು ಧಾತು ಸರಿಯಾಗಿ ಆಡುವದಕ್ಕೂ ಸುಲಭವಾಗಿರುತ್ತೆ. ಮತ್ತು ಇಂದ್ರಿಯ, ಬುದ್ಧಿ, ಮನಸ್ಸುಗಳ ಶಕ್ತಿಯು ಚನ್ನಾಗಿರುತ್ತೆ ಮತ್ತು ಪ್ರಸ್ಪಂದನ, ಉದ್ವಹನ, ಪೂರಣ ಮುಂತಾದವುಗಳನ್ನು ಮಾಡುತ್ತೆ.

## ವಾತವಾಹಕ ಸಿರಾಗತವಾದ ವಾಯುವು ಕುಪಿತವಾದರೆ ಉಂಟಾಗತಕ್ಕ ವಿಕಾರಗಳು.

ಯಾವಾಗ ವಾತವು ನಿಬಂಧನೆ ತಪ್ಪಿ ಚಲಿಸುತ್ತದೋ ಆಗ ಶರೀರಕ್ಕೆ ನಾನಾ ವಿಧವಾದ ರೋಗಗಳು ಹುಟ್ಟುತ್ತವೆ.

## ಪಿತ್ತವು ಕುಪಿತವಾದರೆ ಉಂಟಾಗತಕ್ಕ ವಿಕಾರಗಳು.

ಪಿತ್ತವು ಇದೇ ಪ್ರಕಾರ ತನ್ನ ಸಿರೆಗಳಲ್ಲಿ ಸರಿಯಾಗಿ ಚಲಿಸುತ್ತಿದ್ದರೆ ಕಾಂತಿಯನ್ನೂ, ಅನ್ನದಮೇಲೆ ಅಪೇಕ್ಷೆಯನ್ನೂ, ರುಚಿಯನ್ನೂ, ಜಠರಾಗ್ನಿ ದೀಪ್ತಿಯನ್ನೂ, ನಿರೋಗತ್ವವನ್ನೂ, ಮತ್ತು ರಾಗ ಪ್ರವೃತ್ತಿತವೇ ಮೊದಲಾಗಿ ಅನೇಕ ಗುಣಗಳನ್ನೂ ಉಂಟುಮಾಡುತ್ತದೆ ಇದು ವ್ಯತ್ಯಾಸವಾಗಿ ನಡೆದರೆ ನಾನಾ ವಿಧವಾದ ಪಿತ್ತರೋಗಗಳನ್ನುಂಟುಮಾಡುತ್ತೆ.

## ಕಫವು ಕುಪಿತವಾದರೆ ಉಂಟಾಗತಕ್ಕ ವಿಕಾರಗಳು.

ಈ ಮೇರಿಗೇನೆ ಕಫವು ತನ್ನ ಸಿರೆಗಳಲ್ಲಿ ಸಂಚರಿಸುತ್ತಿದ್ದರೆ, ಮೈನುಣುಪಾಗಿ ಸ್ಥೈರ್ಯ ಬಲ ಮುಂತಾದವುಗಳನ್ನುಂಟುಮಾಡುತ್ತೆ. ಇಲ್ಲವಾದರೆ ಕೆಮ್ಮು ಸಿರೆಗಳ ಸ್ಫುರಣ, ಸ್ಪರ್ಶಜ್ಞಾನಾದಿಗಳ ವಿಕಾರ ಮುಂತಾದವು ಆಗುತ್ತೆ.

## ರಕ್ತವು ಕೆಟ್ಟು ವಾಯುವು ಅಧಿಕವಾದರೆ.

ರಕ್ತವು ಕೆಂಪು, ನೊರೆ, ಕಠಿಣ, ರೂಕ್ಷ, ಲಘು, ಶೀಘ್ರಗಾಮಿ, ಚಲನರಾಹಿತ್ಯ, ಸೂಜೀಯಿಂದ ಚುಚ್ಚಿದಂತೆ ನೋವು ಸಹ ಉಂಟಾಗುತ್ತೆ. ಇದರಿಂದ ಶರೀರ ಕೃಶತ್ವ, ಕಠಿಣತ್ವ, ಉಷ್ಣಾಪೇಕ್ಷೆ, ಮಲಕಟ್ಟುವಿಕೆ, ಅಶಕ್ತತ್ವ, ಸ್ಫುರಣ, ನಿದ್ರೆ ತಪ್ಪೋಣ ಸಹ ಉಂಟಾಗುತ್ತೆ. ಇದು ಕ್ಷಯವಾದರೆ ಅಲ್ಪ ಚೇಷ್ಟಾ, ಮೆಲ್ಲಗೆ ಮಾತನಾಡುವಿಕೆ, ಅಚೈತನ್ಯ ಇವುಗಳು ಉಂಟಾಗುತ್ತೆ. ಇದೇ ಕ್ಷೀಣವಾಯು ವೃದ್ಧಿಯಾದರೆ ಒಗರು, ಕಹಿ, ಖಾರ, ರೂಕ್ಷ, ಶೀತ, ಲಘು, ಯವೆ, ಹೆಸರು ಇವುಗಳಲ್ಲಿ ಅಪೇಕ್ಷೆಯುಂಟಾಗುತ್ತೆ.

## ರಕ್ತವು ಕೆಟ್ಟು ಪಿತ್ತ ಅಧಿಕವಾದರೆ.

ರಕ್ತವು ಪೀತ, ಹರಿತ, ಶ್ಯಾಮವರ್ಣಗಳಾಗುತ್ತೆ ; ಆಮಗಂಧಿ, ಅಚಾಂಚಲ್ಯ, ಉಷ್ಣ ಮತ್ತು ಆ ರಕ್ತಕ್ಕೆ ನೊಣ ಇರುವೆಗಳು ಬೀಳುವದಿಲ್ಲ. ಈ ವೃದ್ಧಿಯಿಂದ ಮಲ, ಮೂತ್ರ, ನೇತ್ರ, ಗಾತ್ರ ಇವು ಪೀತವರ್ಣವು. ಇಂದ್ರಿಯಕ್ಷೀಣ, ಶೀತೇಚ್ಛಾ, ತಾಪ, ಮೂರ್ಛೆ, ಅಲ್ಪನಿದ್ರೆಗಳುಂಟಾಗುತ್ತವೆ ಇದು ಕ್ಷಯವಾದರೆ ಶ್ಲೇಷ್ಮವೃದ್ಧಿ, ಅಗ್ನಿಮಂದ, ಕಾಂತಿ, ಕ್ಷಯಗಳಾಗುತ್ತವೆ. ಈ ಕ್ಷೀಣಪಿತ್ತವು ವೃದ್ಧಿಯಾದರೆ ಎಳ್ಳು, ಉದ್ದು, ಹುರಳಿ, ಪಿಷ್ಟಾನ್ನ, ಹಶಿಹಿಟ್ಟಿನ ಪದಾರ್ಥ, ಕಟ್ಟುಮೊಸರು, ಗಂಜೀ, ಹುಳಿ, ಮಜ್ಜಿಗೆ, ಮೊಸರು, ಕಹಿ, ಉಪ್ಪು, ಉಷ್ಣ, ತೀಕ್ಷ್ಣ ಇವುಗಳಲ್ಲಿ ಅಪೇಕ್ಷೆ ಶಿಟ್ಟು ಉಂಟಾಗುತ್ತೆ. ಮತ್ತು ಬಾಯಾರಿಕ ಸಮಯದಲ್ಲಿ ಶಾಂತೋದಕದಲ್ಲಿ ಅಥವಾ ಶಾಂತಪದಾರ್ಥಗಳಲ್ಲಿ ಇಚ್ಛೆಯುಂಟಾಗುತ್ತೆ.

## ರಕ್ತವು ಕೆಟ್ಟು ಕಫ ಅಧಿಕವಾದರೆ.

ರಕ್ತವು ಸ್ಪರ್ಶಕ್ಕೆ ಅಧಿಕವಾಗಿ ಕಾಣುತ್ತೆ. ಸ್ನಿಗ್ಧ, ಕಾವೀರಂಗು, ಮತ್ತು ಮಾಂಸದ ಸಣ್ಣ ಗ್ರಂಥಿಗಳಂತೆಯೂ ಸಹ ಆಗುತ್ತೆ. ಮತ್ತು ಭಾರವು, ಮಂದಗಮನವು ಉಂಟಾಗುತ್ತೆ. ಇದರಿಂದ ಮಲ, ಮೂತ್ರ, ತ್ವಚ, ನಖ, ನೇತ್ರ ಇವುಗಳು ಬಿಳುಪು, ಶೈತ್ಯ, ಅತಿನಿದ್ರೆ, ಗ್ಲಾನಿ, ಸಂಧಿ, ಶೈಥಿಲ್ಯ, ಬಾಯಿಯಲ್ಲಿ ನೀರುಸುರಿಯುವಿಕೆ ಸಹ ಆಗುತ್ತೆ. ಇದು ಕ್ಷಯವಾದರೆ ಸಂಧಿಶೈಥಿಲ್ಯ, ಮೂರ್ಛೆ, ರೂಕ್ಷತ್ವ, ದಾಹಗಳು ಉಂಟಾಗುತ್ತವೆ. ಈ ಕ್ಷೀಣಕಫವು ವೃದ್ಧಿಯಾದರೆ ಸೀ, ಜಿಡ್ಡು, ಶೀತಲ, ಉಪ್ಪು, ಹುಳಿ, ಜಡೆಪದಾರ್ಥಗಳ ಭೋಜನಾಪೇಕ್ಷೆ, ಮೊಸರು, ಹಾಲು, ದಿವಾ—ನಿದ್ರೆಗಳಲ್ಲಿ ಆಸಕ್ತಿ ಸಹ ಉಂಟಾಗುತ್ತೆ.

## ರಕ್ತವು ಕೆಟ್ಟು ದ್ವಿದೋಷ ಮತ್ತು ತ್ರಿದೋಷಗಳು ಅಧಿಕವಾದರೆ.

೧. ದ್ವಿದೋಷದಿಂದ ರಕ್ತವು ಆದರ ಲಕ್ಷಣವನ್ನೇ ಹೊಂದಿರುತ್ತೆ.

೨ ತ್ರಿದೋಷದಿಂದ ರಕ್ತವು ಕೀವಿನ ಹಾಗೆ ಆಗಿ ದುರ್ಗಂಧವುಂಟಾಗುತ್ತೆ. ಸಮಸ್ತ ದೋಷಯುಕ್ತವಾಗಿದ್ದರೆ ಗಂಜೀ ಹಾಗೆ ಆಗುತ್ತೆ.

## ರಕ್ತವು ಕೆಟ್ಟು ವಿಷ ಅಧಿಕವಾಗಿದ್ದರೆ.

ಆ ರಕ್ತವು ಕಪ್ಪಾಗಿ ಊರ್ಧ್ವಭಾಗಕ್ಕೆ ಹೋಗಿ ಮೂಗಿನಿಂದ ಬೀಳುತ್ತೆ ಮತ್ತು ಆಮಗಂಧಿಯಾಗಿ ಗಂಜೀಹಾಗೆ ಕಾಣುತ್ತೆ ಮತ್ತು ಸರ್ವಕುಷ್ಠಗಳನ್ನು ಬಹಳವಾಗಿ ಹುಟ್ಟಿಸುತ್ತೆ.

## ರಸವೃದ್ಧಿಯಾದರೆ.

ಅನ್ನದ್ವೇಷ, ಅಂಗಜಡತ್ವ, ಬಾಯಿಯಲ್ಲಿ ನೀರು, ವಮನ, ಮೂರ್ಛೆ, ಗ್ಲಾನಿ, ಭ್ರಮೆ ಮತ್ತು ಕಫ ಸಹ ಉಂಟಾಗುತ್ತೆ.

ಇದೇ ಕ್ಷೀಣವಾದರೆ:—ಕಂಠಶೋಷೆ, ಅರುಚಿ, ತೃಷೆ, ಚರ್ಮ, ನಿಸ್ಸತ್ವ, ಹೃತ್ಪೀಡೆಗಳಾಗುತ್ತವೆ.

ಈ ಕ್ಷೀಣರಸವು ವೃದ್ಧಿಯಾದರೆ :—ರಾತ್ರಿಯಲ್ಲಿ ನಿದ್ರೆ, ಚಂದ್ರೋದಯಸೇವನೆ, ಅತಿಶೀತಳ, ತಣ್ಣೀರನ್ನು ಪದೇಪದೇ ಕುಡಿಯೋಣ, ಮಧುರ ಪದಾರ್ಥಾಪೇಕ್ಷೆ, ಮೊಸರು ಕುಡಿಯುವ ಇಚ್ಛೆ ಸಹ ಉಂಟಾಗುತ್ತೆ.

## ರಕ್ತದುಷ್ಟವಾದರೆ.

ವೇದನೆ, ಅಂಗಪಕ್ಷ, ದಾಹಗಳಾಗುತ್ತವೆ. ರಕ್ತಮಂಡಲದಲ್ಲಿ ಕಂಡೂ, ಶೋಭೆ, ಪಿಟಿಕಾಗಳು ಉಂಟಾಗುತ್ತವೆ.

ರಕ್ತವು ವೃದ್ಧಿಯಾದರೆ :—ಆ ರಕ್ತಗಾತ್ರ ನೇತ್ರಗಳು, ಶಿರಾವುಬ್ಬೋಣ, ವಿಸರ್ಪಿ, ಪ್ಲೀಹೆ, ವಿದ್ರಧಿ, ಕುಷ್ಟ, ವಾತರಕ್ತ, ಗುಲ್ಮ, ಕಾಮಿಲ, ಅಂಗ ಜಡತ್ವ, ನಿದ್ರೆ, ಮದ, ದಾಹ, ಮುಖದಲ್ಲಿ ಬಂಗು, ಅಗ್ನಿಮಾಂದ್ಯ, ಮೋಹ ಮತ್ತು ತ್ವಚ, ನೇತ್ರ, ಮೂತ್ರ, ಮಲ ಇವುಗಳು ಕೆಂಪು, ಗುದ, ಶಿಶ್ನ, ಮುಖ ಇವುಗಳು ಪಾಕ, ಪಿಟಿಕಾ, ಮಸೆ, ಶರೀರ ಕಪ್ಪು, ಅಂಗ ಮುರಿಯೋಣ, ಪ್ರದರ, ಕೈಕಾಲುಗಳಲ್ಲಿ ಉರಿಗಳಾಗುತ್ತವೆ. ರಕ್ತವೃದ್ಧಿಯಾಗಿ ಸ್ರಾವವಾಗುತ್ತಿದ್ದರೆ ಶಾಂತವಾಗಿ ಪ್ರವರ್ತಿಯಾಗುವಂತೆ ಔಷಧಿಕೊಡಬೇಕು.

ರಕ್ತವು ಕ್ಷೀಣವಾದರೆ :—ಆಮ್ಲ, ಮಧುರಪದಾರ್ಥಾಪೇಕ್ಷೆ, ಮೂರ್ಛೆ, ವಾತದಿಂದ ತ್ವಚಕ್ಕೆ ರೂಕ್ಷತ್ವ, ಸಿರೆಗಳಲ್ಲಿ ಶಿಥಿಲತೆ, ಶೈತ್ಯ, ನಿಸ್ಸಾರ, ಅಂಗ ಕಾಠಿಣ್ಯಗಳಾಗುತ್ತವೆ.

ಈ ಕ್ಷೀಣರಕ್ತವು ವೃದ್ಧಿಯಾದರೆ :—ಮಾಂಸರಸ, ಸಕ್ಕರೆ, ದ್ರಾಕ್ಷಿ, ಕಬ್ಬಿನಹಾಲು, ಜೇನುತುಪ್ಪ, ಬೆಲ್ಲದ ಪಾನಕ, ಈಚಲಹಣ್ಣು, ದಾಳಿಂಬ್ರ, ಗಂಜಿ, ಮದ್ಯ, ಕಂದ, ಮೂಲ, ಫಲ, ಸ್ನೇಹ, ಲವಣ, ರಕ್ತಸಿದ್ಧಪದಾರ್ಥ, ಮಾಂಸ ಇವುಗಳಲ್ಲಿ ಇಚ್ಛೆ ಉಂಟಾಗುತ್ತೆ.

## ಮಾಂಸವು ವೃದ್ಧಿಯಾದರೆ.

ಕೆನ್ನೆ, ತುಟಿ, ಟೊಂಕದ ಹಿಂಭಾಗ ಮತ್ತು ಯೋನಿ, ತೊಡೆ, ಬಾಹು, ಜಂಘಾ ಇವುಗಳು ಸ್ಥೂಲವಾಗುತ್ತೆ ಮತ್ತು ಗ್ರಾಹ, ಜಡತ್ವ ಸಹ ಉಂಟಾಗುತ್ತೆ.

ಇದು ಕ್ಷೀಣವಾದರೆ:—ನಾಡಿ, ಕೆನ್ನೆ, ಓಷ್ಠ, ಸ್ಕಂಧ, ಮನ್ಯಾ ಇವುಗಳ ಶೈಥಿಲ್ಯ, ಯೆದೆ, ಯೋನಿ, ನಾಸಿಕ, ಹೊಟ್ಟೆ, ಸಂಧಿ ಇವುಗಳಲ್ಲಿ ಶುಷ್ಕತ್ವ, ಹೊಟ್ಟೆ ಗುಂಡು ಅಂದರೆ ಉದರಾವರ್ತ, ಗಾತ್ರರೂಕ್ಷತ್ವ ಮತ್ತು ನೋವುಗಳಾಗುತ್ತವೆ.

ಈ ಕ್ಷೀಣಮಾಂಸವು ವೃದ್ಧಿಯಾದರೆ:—ದಧಿ, ಸಿದ್ಧಾನ್ನ, ಶ್ರೀಖಂಡ, ಶೀಕರಣೆ ಇತ್ಯಾದಿ ಪದಾರ್ಥಗಳಲ್ಲಿ ಇಚ್ಛೆ, ಸ್ಥೂಲ, ಜಡ ಇತ್ಯಾದಿ ಕ್ರವ್ಯಾದ ಮಾಂಸಾಪೇಕ್ಷೆ ಸಹ ಆಗುತ್ತೆ.

## ಮೇದೋವೃದ್ಧಿಯಾದರೆ.

ಹೊಟ್ಟೆಪಾರ್ಶ್ವಗಳ ವೃದ್ಧಿ ಮತ್ತು ಕೆಮ್ಮು, ಶ್ವಾಸ, ಅಂಗದುರ್ಗಂಧ, ಜಡ್ಡು, ಸ್ವಲ್ಪ ಕೆಲಸಮಾಡುವುದರಿಂದ ಬಹಳ ಶ್ರಮವಾಗೋಣ, ತೃಷೆ, ಜೆವರು, ಗಳಗಂಡ, ಓಷ್ಠರೋಗ, ಮೇಹ ಇವುಗಳಾಗುತ್ತವೆ. ಮತ್ತು ಬೆನ್ನು, ಹೊಟ್ಟೆ, ಮನ್ಯಾ, ಸ್ತನ ಇವು ನೋಯುತ್ತವೆ.

ಇದು ಕ್ಷೀಣವಾದರೆ:— ಪ್ಲೀಹವೃದ್ಧಿ, ಅಂಗಸಂಧಿಗಳ ಶೂನ್ಯತ್ವ, ಶರೀರರೂಕ್ಷತ್ವ, ಸ್ನಿಗ್ಧತ್ವ ಮಾಂಸಾಪೇಕ್ಷೆಗಳಾಗುತ್ತವೆ.

ಈ ಕ್ಷೀಣ ಮೇದಸ್ಸು ವೃದ್ಧಿಯಾದರೆ:—ಮಧುರಪದಾರ್ಥ, ಅಮ್ಲಾದಿಗಳ ಸಂಯೋಗದ ಪದಾರ್ಥ, ಮೇಧೋವೃದ್ಧಿಕರ ಗ್ರಾಮ್ಯಮಾಂಸ, ಜಲಮಾಂಸ ಮತ್ತು ವಿಶೇಷವಾಗಿ ಕ್ಷಾರಮಾಂಸಗಳಲ್ಲಿಚ್ಛೆ ನಹ ಉಂಟಾಗುತ್ತೆ.

## ಮಜ್ಜಾವೃದ್ಧಿಯಾದರೆ.

ಸಂಪೂರ್ಣವಾಗಿ ಅಂಗದಲ್ಲೂ ನೇತ್ರದಲ್ಲೂ ಸಹ ಜಡತ್ವ ಉಂಟಾಗುತ್ತೆ.

ಇದು ಕ್ಷೀಣವಾದರೆ:—ಅಲ್ಪಶುಕ್ರತ್ವ, ಸಂಧಿಗಳು ವಡಿಯೋಣ, ಅಸ್ತಿಗಳಲ್ಲಿ ನೋವು ಸಹ ಉಂಟಾಗುತ್ತೆ.

ಈ ಕ್ಷೀಣಮಜ್ಜೆಯು ವೃದ್ಧಿಯಾದರೆ:—ಸೀ, ವಗರು ಪದಾರ್ಥಗಳು ಕೂಡಿದ ಅನ್ನಾಪೇಕ್ಷೆಯಾಗುತ್ತೆ.

## ಶುಕ್ರ ವೃದ್ಧಿಯಾದರೆ.

ಶುಕ್ರಾಶ್ಮರಿಯು ಮತ್ತು ಶುಕ್ರಧಾತುಸ್ರಾವವು ಸಹ ಆಗುತ್ತೆ.

ಇದು ಕ್ಷೀಣವಾದರೆ:—ರತಿ ವಿಷಯದಲ್ಲಿ ಅಶಕ್ತತ್ವ, ಶಿಶ್ನ ಮತ್ತು ವೃಷಣಗಳಲ್ಲಿ ಪೀಡೆ, ರತಿಕಾಲದಲ್ಲಿ ಬಹಳ ಹೊತ್ತಿನಮೇಲೆ ಅಲ್ಪ ಶುಕ್ರ ಮತ್ತು ರಕ್ತಬೀಳೋಣ ಸಹ ಉಂಟಾಗುತ್ತೆ.

ಈ ಕ್ಷೀಣಶುಕ್ರವು ವೃದ್ಧಿಯಾದರೆ :—ನವಿಲು, ಕೋಳಿ, ಹಂಸ, ಸಾರಗ ಇವುಗಳ ಮೊಟ್ಟೆ ಮತ್ತು ಮಾಂಸಗಳಲ್ಲಿ ಇಚ್ಛೆ, ಗ್ರಾಮ್ಯಮಾಂಸ, ಜಲಸ್ಥ ಅಜಮಾಂಸ ಮತ್ತು ಇತರ ಮಾಂಸಗಳಲ್ಲಿ ಅಪೇಕ್ಷೆ ಉಂಟಾಗುತ್ತೆ.

### ಮೂತ್ರ ವೃದ್ಧಿಯಾದರೆ.

ಹೊಟ್ಟೆಯುಬ್ಬೋಣವು, ವಸ್ತಿವೇದನೆಯು ಆಗುತ್ತೆ.

ಇದು ಕ್ಷೀಣವಾದರೆ :—ಅಲ್ಪಮೂತ್ರ, ಕಿಕ್ಕುಮೂತ್ರ, ವಸ್ತಿವೇದನೆಯು ಸಹ ಆಗುತ್ತೆ.

ಈ ಕ್ಷೀಣಮೂತ್ರ ವೃದ್ಧಿಯಾದರೆ :—ಕಬ್ಬಿನರಸ, ಹಾಲು, ಮದ್ಯ ಇವುಗಳ ಪಾನಾಪೇಕ್ಷೆ, ಬೆಲ್ಲ, ಬದರೀನೀರು, ಸೌತೇಕಾಯಿ, ಮುಳ್ಳುಸೌತೆ ಇವುಗಳಲ್ಲಿಚ್ಛೆ ಸಹ ಆಗುತ್ತೆ.

### ಮಲ ವೃದ್ಧಿಯಾದರೆ.

ಗುಲ್ಮ, ಉದಾವರ್ತ, ಕೋಷ್ಠಶೂಲೆ, ಬಳಲಿಕೆ, ವಾತಸಂಗ, ಮೂತ್ರಸಂಗ, ಶಕೃತ್ಸಂಗ, ದೃಷ್ಟಿನಾಶ, ಅಗ್ನಿಮಂದ, ಹೃದ್ರೋಗವೆ ಮೊದಲಾದುವು ಆಗುತ್ತವೆ.

ಇದು ಕ್ಷೀಣವಾದರೆ :—ಪಾರ್ಶ್ವ ಹೃದಯಗಳಲ್ಲಿ ವ್ಯಥೆ, ಸಶಬ್ದವಾಯು ವಿನ ಊರ್ಧ್ವಗತಿ, ಎರಡು ಪಾರ್ಶ್ವಗಳು ಉಬ್ಬೋಣ ಸಹ ಆಗುತ್ತೆ.

ಈ ಕ್ಷೀಣಮಲವು ವೃದ್ಧಿಯಾದರೆ :—ಯವೆ, ಗೋಧುವೆಗಳ ಪಿಷ್ಟಾನ್ನ, ಅನೇಕವಿಧ ಶಾಕ, ಮೊಸರು, ಉದ್ದು ಇವುಗಳ ಯೂಷದಲ್ಲಿ ಅಪೇಕ್ಷೆ ಸಹ ಉಂಟಾಗುತ್ತೆ.

### ಸ್ವೇದೋ ವೃದ್ಧಿಯಾದರೆ.

ದೇಹದಲ್ಲಿ ದುರ್ಗಂಧವೂ ನವೆಯೂ ಸಹ ಉಂಟಾಗುತ್ತವೆ.

ಇದು ಕ್ಷೀಣವಾದರೆ :—ನೇತ್ರ, ತ್ವಚ ಇವುಗಳಲ್ಲಿ ರೂಕ್ಷತ್ವ ಮತ್ತು ರೋಮ ಚುಂಗರಿಸುವದು ಸಹ ಆಗುತ್ತೆ.

ಈ ಕ್ಷೀಣಸ್ವೇದ ವೃದ್ಧಿಯಾದರೆ :—ಅಭ್ಯಂಗ, ತಿಕ್ಕೋದು, ಮದ್ಯಾಪೇಕ್ಷೆ, ಗಾಳಿಬೀಸಿದ ಸ್ಥಳದಲ್ಲಿ ಮಲಗುವದರಲ್ಲಿ ಇಚ್ಛೆ, ಉಷ್ಣಾಸನಾಪೇಕ್ಷೆ, ಮಂದವಾದ ಬಟ್ಟೆ ಹೊದಿಯುವದರಲ್ಲಿ ಆಸಕ್ತಿ ಸಹ ಉಂಟಾಗುತ್ತೆ.

### ಓಜೋ ವೃದ್ಧಿಯಾದರೆ.

ಮನೋಹರಗಳಾದಂಥ ರುಚಿಕರಗಳಾದಂಥಾ ವೃದ್ಧಿಕರವಾದಂಥ ಮಾಂಸರಸ, ಕ್ಷೀರ ಇತ್ಯಾದಿ ಪದಾರ್ಥಗಳಲ್ಲಿ ಅಪೇಕ್ಷೆಯುಂಟಾಗುತ್ತೆ.

ಇದು ಕ್ಷೀಣವಾದರೆ :—ಕ್ರೋಧ, ಕ್ಷುತ್, ಚಿಂತೆ, ಶೋಕ, ಶ್ರಮ, ರೂಕ್ಷ, ತೀಕ್ಷ್ಣ, ಉಷ್ಣ, ಖೈ, ದೌರ್ಬಲ್ಯ, ಭಯ, ಇಂದ್ರಿಯ ವ್ಯಥೆ, ಕಾಂತಿನಾಶ, ಶರೀರ ಮಾಲಿನ್ಯ, ಕೃಶತ್ವಗಳುಂಟಾಗುತ್ತೆ.

## ಬಲ ಲಕ್ಷಣ.

ರಸಧಾತು ಮೊದಲುಗೊಂಡು ಶುಕ್ಲಧಾತುವರಿವಿಗೂ ಯಾವಯಾವ ಧಾತು ಪುಷ್ಟಿಯಾಗಿ ಅದರ ನಿಮಿತ್ತದಿಂದ ಕುಶಲತ್ವ ಉಂಟಾಗುತ್ತೊ ಅದರ ಹೆಸರು ಬಲವೆಂದು ತಿಳಿಯಬೇಕು.

ಬಲವು ವೃದ್ಧಿಯಾದರೆ :—ದೋಷ, ಅಗ್ನಿ ಇವುಗಳು ಸಮನಾಗಿರುತ್ತೆ ಮತ್ತು ಧಾತುವೃದ್ಧಿಕರವಾದ ಪುಷ್ಟಿಕರಗಳಾದ ಪದಾರ್ಥಾಪೇಕ್ಷೆಯಾಗುತ್ತೆ.

ಇದು ಕ್ಷಯವಾದರೆ :—ಅಭಿಘಾತ, ಭಯ, ಶೋಕ, ಕ್ರೋಧ, ಚಿಂತೆ, ಪರಿಶ್ರಮಗಳು ಮತ್ತು ಧಾತುಕ್ಷಯವು, ಅಂಗದಲ್ಲಿ ಜಡತ್ವವು, ಸ್ತಬ್ಧತ್ವವು, ಗಾತ್ರಮ್ಲಾನವು, ಗ್ಲಾನಿ, ವಿವರ್ಣತಾ, ತಂದ್ರ, ನಿದ್ರೆ, ವಾತದಿಂದ ಶೋಭೆ ಇವು ಉಂಟಾಗುತ್ತವೆ. ಈ ಕ್ಷೀಣಬಲವು ವೃದ್ಧಿಯಾದರೆ ಮೇಲೆ ಹೇಳಿದ ರೋಗ ಗಳೆಲ್ಲಾ ತಪ್ಪುತ್ತೆ.

## ಮಲವನ್ನು ವಿಸರ್ಜಿಸುವುದರಿಂದ ಉಂಟಾಗುವ ಗುಣ ಮತ್ತು ವಿಸರ್ಜನೆ ಮಾಡದೆಯಿರುವದರಿಂದ ಆಗುವ ದುರ್ಗುಣಗಳು.

ಪ್ರಾತಃಕಾಲದಲ್ಲಿ ಮಲಮೂತ್ರ ವಿಸರ್ಜನೆ ಮಾಡಿದರೆ ಆಯುರ್ವೃದ್ಧಿ ಯಾಗುತ್ತೆ. ಹೊಟ್ಟೆಯುಬ್ಬರ, ಜಡತ್ವ, ಕೂಗೋಣ ಇವುಗಳು ಪರಿಹಾರವಾ ಗುತ್ತೆ. ವಿಸರ್ಜನೆ ಮಾಡದಿರುವುದರಿಂದ ಮೇಲೆ ಹೇಳಿದ ರೋಗಗಳಲ್ಲದೆ ಶೂಲೆ, ನಡುಕ, ಮಲರೋಧ, ಉದ್ಗಾರ, ಮುಖವಿಟ್ಪ್ರವರ್ತಿ, ವಾಯು ಮತ್ತು ಮೂತ್ರರೋಧ, ನೆಗಡಿ, ಬಳಲಿಕೆ ಸಹ ಉಂಟಾಗುತ್ತೆ.

## ಮೂತ್ರ ತಡದರೆ ಉಂಟಾಗುವ ದುರ್ಗುಣಗಳು.

ಮೂತ್ರ ತಡದದ್ದೇ ಆದರೆ ವಸ್ತಿ, ಮೂತ್ರದ್ವಾರ ಇವುಗಳಲ್ಲಿ, ಶೂಲೆ, ಮೂತ್ರಕೃಚ್ಛ್ರ, ಮಸ್ತಕಶೂಲೆ ಸಹ ಉಂಟಾಗುತ್ತೆ.

## ಅಭ್ಯಂಗದ ಗುಣ.

ಕಫ ನಾಶವಾಗುತ್ತೆ. ಧಾತು, ಬಲ, ರಕ್ತವೃದ್ಧಿಗಳಾಗುತ್ತವೆ. ಚರ್ಮಕ್ಕೆ ಮೃದುತ್ವ, ನಿರ್ಮಲತ್ವ ಸಹ ಉಂಟಾಗುತ್ತದೆ

## ಭೋಜನ, ನಿದ್ರೆ, ನೀರಡಿಕೆ, ಸುರತ ಇವುಗಳಿಗೆ ವಿಘ್ನವುಂಟಾದರೆ ಉಂಟಾಗುವ ದುರ್ಗುಣ.

ಭೋಜನ ವಿಘಾತದಿಂದ ಮೈನೋವು, ಅರುಚಿ, ಶ್ರಮ, ತೂಕಡಿಕೆ, ನೇತ್ರ ದೌರ್ಬಲ್ಯ, ಧಾತುಶೋಷೆ, ಬಲಕ್ಷಯ ಇವುಗಳು ಆಗುತ್ತವೆ.

ಹಸಿವೆಯಾದಕಾಲದಲ್ಲಿ ಆಹಾರವನ್ನು ತಿನ್ನದೇ ಇರೋಣದರಿಂದ ಜಠ ರಾಗ್ನಿ ನಷ್ಟವಾಗುತ್ತೆ. ಜಠರಾಗ್ನಿಗೆ ಆಹಾರ ಕೊಡದೆ ಹೋದರೆ ಧಾತುಗತ ದೋಷವನ್ನು ತಿನ್ನುತ್ತೆ. ಧಾತುಗಳಲ್ಲಿ ದೋಷವಿಲ್ಲದೇ ಹೋದರೆ ಕಫಾದಿ

ದೋಷವನ್ನು ತಿನ್ನುತ್ತೆ. ಆ ದೋಷವು ಇಲ್ಲದೇ ಇದ್ದರೆ ಧಾತುವನ್ನೇ ತಿನ್ನುತ್ತೆ. ಅದೂ ಇಲ್ಲದೇ ಹೋದರೆ ಪ್ರಾಣವನ್ನು ಭಕ್ಷಿಸುತ್ತೆ.

ನೀರಡಿಕೆ ವಿಘಾತದಿಂದ ಗಂಟಲು ಬಾಯಿ ಒಣಗುತ್ತವೆ, ಸ್ವಲ್ಪ ಕಿವಿ ಕೇಳದೆ ಇರೋಣ, ರಕ್ತಶೋಷೆ, ಹೃದಯ ಸ್ಥಾನದಲ್ಲಿ ನೋವು ಉಂಟಾಗುತ್ತವೆ.

ನಿದ್ರೆ ವಿಘಾತದಿಂದ ಆಕಳಿಕೆ, ತಲೆ ಕಣ್ಣುಗಳಲ್ಲಿ ಜಡತ್ವ, ಮೈಮುರಿಯುವಿಕೆ, ತೂಕಡಿಕೆ, ಅನ್ನವಿಪಾಕ ಸಹ ಆಗುತ್ತೆ.

ಸುರತ ವಿಘಾತದಿಂದ ಧಾತುಕ್ಷಯ, ಶುಕ್ರಾಶ್ಮರಿ ಆಗುವುದು.

## ಅತ್ಯಾಹಾರ ಸ್ವಲ್ಪಾಹಾರ ದೋಷಗುಣಗಳು.

ಅನ್ನವನ್ನು ಹೆಚ್ಚಾಗಿ ತಿಂದರೆ ಹೊಟ್ಟೆಯುಬ್ಬರ, ಆಲಸ್ಯ, ಹೊಟ್ಟೆಯಲ್ಲಿ ಗುಡಬಡ ಶಬ್ದ ಸಹ ಉಂಟಾಗುತ್ತೆ. ಕಮ್ಮಿಯಾಗಿ ಊಟಮಾಡಿದರೆ ಕೃಶತ್ವವು, ಬಲಕ್ಷಯವು ಸಹ ಉಂಟಾಗುತ್ತೆ.

## ಭೋಜನಕಾಲದಲ್ಲಿ ನೀರುಕುಡಿಯುವ ಕ್ರಮ.

ಹೊಟ್ಟೆಗೆ ಎರಡು ಭಾಗ ಆಹಾರವನ್ನು ತುಂಬಿ ಮೂರನೇ ಭಾಗದಲ್ಲಿ ನೀರನ್ನು ತುಂಬಬೇಕು. ನಾಲ್ಕನೇ ಭಾಗವನ್ನು ವಾಯು ಸಂಚಾರಕ್ಕೆ ಬಿಡಬೇಕು. ಅತಿ ನೀರು ಕುಡಿಯುವುದರಿಂದ ಅನ್ನ ಜೀರ್ಣಿಸುವುದಿಲ್ಲ. ನೀರು ಕುಡಿಯದೇ ಇರುವುದರಿಂದಲೂ ಅದೇ ದೋಷ ಉಂಟಾಗುತ್ತೆ. ಅಗ್ನಿವೃದ್ಧಿಗೋಸ್ಕರ ಆಗಿಂದಾಗ್ಯೆ ಸ್ವಲ್ಪ ಸ್ವಲ್ಪವಾಗಿ ನೀರು ಕುಡಿಯುತ್ತಿರಬೇಕು. ಶ್ಲೇಷ್ಮ ಪ್ರಕೃತಿಯುಳ್ಳವನು ಊಟಕ್ಕೆ ಮುಂಚೆ ನೀರುಕುಡಿದರೆ ಮಂದಾಗ್ನಿಯನ್ನು ಕೃಶತ್ವವನ್ನು ಸಹ ಉಂಟುಮಾಡುತ್ತೆ. ಮತ್ತು ಊಟದ ಮಧ್ಯದಲ್ಲಿ ನೀರು ಕುಡಿದರೆ ಸ್ಥೂಲತ್ವವನ್ನು ಕಫವನ್ನು ಸಹ ಉಂಟುಮಾಡುತ್ತೆ. ಬಾಯಾರಿಕೆಯಾದಾಗ ಊಟವನ್ನು ಮಾಡಬಾರದು. ಹಸಿವಾದಾಗ ನೀರನ್ನು ಕುಡಿಯಬಾರದು. ಬಾಯಾರಿಕೆಯಲ್ಲಿ ಅನ್ನವನ್ನು ತಿಂದರೆ ಗುಲ್ಮರೋಗವು, ಹಸಿವಾದಾಗ ನೀರು ಕುಡಿದರೆ ಜಲೋದರವು ಸಹ ಉಂಟಾಗುತ್ತೆ.

ಅಗ್ನಿದೀಪ್ತಿಯಾದ ಸಮಯದಲ್ಲಿ ಹೊಟ್ಟೆತುಂಬಾ ಊಟಮಾಡಿದ ನಂತರ ಅದು ಜೀರ್ಣವಾಗುವ ಪರ್ಯಂತರ ಬೇರೆ ಯಾವ ಪದಾರ್ಥವನ್ನೂ ತಿನ್ನಲೇ ಕೂಡದು.

## ಸರ್ವ ದಿಕ್ಕುಗಳಿಂದ ಬರುವ ವಾಯುಗುಣ.

ಪೂರ್ವದಿಕ್ಕಿನ ವಾಯು ಸೀ, ಕ್ಷಾರ, ಗುರು, ಉಷ್ಣ, ಜಿಡ್ಡು ಈ ಗುಣಗಳುಳ್ಳದ್ದು. ದಾಹ, ರಕ್ತ, ವಾತ, ಪಿತ್ತ, ಶೀತ, ಕಟು, ಪುಷ್ಟಿ, ತ್ವಗ್ದೋಷ, ಆರ್ಶ, ದಂತಕ್ರಿಮಿ, ಸನ್ನಿವಾತಜ್ವರ, ಶ್ವಾಸ, ಆಮವಾತ ಇವುಗಳ ಪ್ರಕೋಪವಂ ಮಾಡುವುದು. ಶ್ರಮಪಟ್ಟವನಿಗೆ, ಕಫರೋಗಿಗೆ, ಶೋಷರೋಗಿಗೆ ಸಹಾ

ಹಿತವನ್ನುಂಟುಮಾಡುತ್ತೆ. ದಕ್ಷಿಣದಿಕ್ಕಿನ ವಾಯುವು ಸೀ, ಲಘು, ತಂಪು, ವೀರ್ಯಕಾರಿ, ಬಲಕಾರಿ, ಕಣ್ಣಿಗೆ ಹಿತಕರ, ರಕ್ತ ಪಿತ್ತನಾಶಕ, ವಾತಹರ, ಪಶ್ಚಿಮದಿಕ್ಕಿನ ವಾಯುವು ತೀಕ್ಷ್ಣ, ರಕ್ತಶೋಷಕ, ಬಲಕಾರಿ, ಲಘು, ಮೇದಸ್ಸು, ಪಿತ್ತ, ಕಫಗಳ ನಾಶವಾಗಿ ವಾಯುವನ್ನು ಹೆಚ್ಚಿಸುತ್ತೆ. ಉತ್ತರದ ವಾಯುವು ಶೀತಳ ಜಿಡ್ಡು, ತ್ರಿದೋಷಕಾರಿ, ವಾತಪ್ರಕೃತಿಗೆ ಆಲಸ್ಯವನ್ನುಂಟುಮಾಡುತ್ತೆ; ಮತ್ತು ಬಲಕರ, ಸೀ, ಮೃದುವಾಗಿರುತ್ತೆ. ಆಗ್ನೇಯದಿಕ್ಕಿನ ಗಾಳಿ ದಾಹಕಾರಕ, ಜಿಡ್ಡು. ನೈಋತ್ಯದಿಕ್ಕಿನ ವಾಯು ದಾಹಶಾಮಕ. ವಾಯುವ್ಯದಿಕ್ಕಿನ ವಾಯು ಖೈ. ಈಶಾನ್ಯದಿಕ್ಕಿನ ವಾಯು ಭಾರ. ಅದೇ ದಿಕ್ಕಿನ ಮಿಶ್ರವಾದ ವಾಯು ಆಯುಷ್ಯನಾಶಕ, ಅನೇಕ ರೋಗಗಳನ್ನುಂಟುಮಾಡುತ್ತೆ.

## ಅಜೀರ್ಣಕ್ಕೆ ಕಾರಣ.

ಹೆಚ್ಚಾಗಿ ನೀರು ಕುಡಿಯುವಿಕೆ, ಭೋಜನದಮೇಲೆ ಭೋಜನ, ಮಲ ಮೂತ್ರ ನಿರೋಧ, ಕಾಲತಪ್ಪಿ ನಿದ್ರೆಮಾಡೋಣ, ಈರ್ಷ್ಯ, ಭಯಪಟ್ಟವನು, ಕ್ರೋಧಿ, ಲೋಭಿ, ಭಿಕಾರಿ, ದ್ವೇಷಿ ಇವರುಗಳಿಗೆ ಅನ್ನಪಚನವಾಗುವುದಿಲ್ಲ. ಕಾಲತಪ್ಪಿ ಊಟಮಾಡಿದರೆ ಅನ್ನ ಜೀರ್ಣವಾಗುವುದಿಲ್ಲ.

## ಅತಿ ಮೈಥುನದಿಂದುಂಟಾಗುವ ದೋಷಗಳು.

ಶೂಲೆ, ಕಾಸ, ಜ್ವರ, ಶ್ವಾಸ, ಕಾರ್ಶ್ಯ, ಪಾಂಡು, ಕ್ಷಯ ಇತ್ಯಾದಿ ರೋಗಗಳು ಉಂಟಾಗುತ್ತವೆ.

## ಬಿಸಿನೀರನ್ನು ಕ್ರಮವಾಗಿ ಸಾಧಿಸಿದರೆ ಉಂಟಾಗುವ ಗುಣ.

ಅಗ್ನಿ ಸಮವಂ ಮಾಡುತ್ತೆ, ಜೀರ್ಣಕಾರಿ, ಕಂಠಸಮನಾಗುತ್ತೆ, ಶರೀರ ಲಾಘವ ಹುಟ್ಟುವುದು, ಶೈತ್ಯವಂ ಪರಿಹರಿಸುವುದು, ಉಷ್ಣಭಾವವಂ ಕೊಡುವುದು, ವಸ್ತಿ ದೋಷಹರ, ಮೂತ್ರವನ್ನು ಸರಿಯಾಗಿ ಮಾಡುವುದು ಮತ್ತು ಸಕಲ ರೋಗಗಳನ್ನೂ ಪರಿಹರಿಸುವುದು.

## ದೇಹದಲ್ಲಿ ಅಗ್ನಿ ಲಕ್ಷಣ.

ಅಗ್ನಿ ಕ್ಲಿಪ್ತವಾಗಿರತಕ್ಕದ್ದು ಕಮ್ಮಿಯಾಗುವುದರಿಂದ ಮಂದಾಗ್ನಿಯೆನ್ನಿಸಿಕೊಳ್ಳುತ್ತೆ ಮತ್ತು ಶ್ಲೇಷ್ಮರೋಗವನ್ನು ಹೆಚ್ಚಿಸುತ್ತೆ, ಅಗ್ನಿ ಹೆಚ್ಚುವುದರಿಂದ ತೀಕ್ಷ್ಣಾಗ್ನಿಯೆನ್ನಿಸಿಕೊಳ್ಳುತ್ತೆ, ಇದು ಪಿತ್ತರೋಗವನ್ನು ಹೆಚ್ಚಿಸುತ್ತೆ. ವಿಷಮಾಗ್ನಿ ಅಂದರೆ ವಾಯುವಿನಿಂದ ಅಗ್ನಿ ಹೆಚ್ಚುಕಡಮೆಯಾಗತಕ್ಕದ್ದು. ಇದು ವಾತರೋಗವನ್ನು ಹೆಚ್ಚಿಸುತ್ತೆ. ಸಮಾಗ್ನಿ ಅಂದರೆ ಮನುಷ್ಯ ಶರೀರಕ್ಕೆ ಉಕ್ತವಾದ ಅಗ್ನಿಯು ಶರೀರವನ್ನು ರಕ್ಷಿಸುತ್ತೆ.

ಗ್ಲಾನಿ ಲಕ್ಷಣ:—ಓಜಸ್ಸು ನಶಿಸುವುದರಿಂದಲೂ, ದುಃಖದಿಂದಲೂ, ಅಜೀರ್ಣದಿಂದಲೂ, ಶ್ರಮೆಯಿಂದಲೂ ಬಳಲಿಕೆ ಹುಟ್ಟುವುದು.

## ಚತುರ್ದಶವೇಗಗಳು ಅವುಗಳಿಂದುಂಟಾಗುವ ರೋಗಗಳು.

೧ ಮೂತ್ರವೇಗದಿಂದ—ಮೈನೋವು, ಮೂತ್ರದಲ್ಲಿ ಕಲ್ಲುಕಟ್ಟುವುದು, ವಸ್ತಿನೋವು, ಪ್ರಧಾನನೋವು, ತೊಡೆಸಂದುನೋವು ಇವುಗಳುಂಟಾಗುತ್ತವೆ.

೨. ಮಲವೇಗದಿಂದ—ಗುಲ್ಮ, ಉದಾವರ್ತ, ಕೋಷ್ಠಶೂಲೆ, ಬಳಲಿಕೆ, ವಾತಸಂಗ, ಮೂತ್ರಸಂಗ, ಶಕೃತ್ಸಂಗ, ದೃಷ್ಟಿನಾಶ, ಅಗ್ನಿಮಾಂದ್ಯ, ಹೃದ್ರೋಗ, ಪಿಂಡಿಕೋದ್ವೇಷ್ಟ, ನೆಗಡಿ, ಶಿರೋರೋಗ, ಮಲಮೂತ್ರಗಳೆರಡೂ ಕಟ್ಟುವಿಕೆ, ಮುಖವಿಟ್ಪ್ರವರ್ತಿ ಈ ರೋಗಗಳುಂಟಾಗುತ್ತವೆ.

೩. ಅಧೋವಾತವೇಗದಲ್ಲಿ—ಮಲವೇಗದ ಲಕ್ಷಣಗಳೇ ಉಂಟಾಗುತ್ತವೆ.

೪. ಸೀನಿನವೇಗದಿಂದ—ಶಿರೋರೋಗ, ದಶೇಂದ್ರಿಯಬಲವು ಕಡಮೆಯಾಗುವಿಕೆ, ಮನ್ಯಾಸ್ತಂಭ ಈ ರೋಗಗಳುಂಟಾಗುತ್ತವೆ.

೫. ಶುಕ್ಲವೇಗದಿಂದ—ಮೂತ್ರಸಂಗ, ಮೈನೋವು, ಹೃದ್ರೋಗ, ಜ್ವರ, ಶೋಭೆ, ಶುಕ್ಲಸ್ರಾವ, ಆಸನನೋವು, ನಪುಂಸಕತ್ವ ಮೊದಲಾದ ರೋಗಗಳುಂಟಾಗುತ್ತವೆ.

೬. ಜೃಂಭಾವೇಗದಿಂದ — ಶಿರೋರೋಗ, ಇಂದ್ರಿಯ ದೌರ್ಬಲ್ಯ, ಮನ್ಯಾಸ್ತಂಭ ಮೊದಲಾದವು ಉತ್ಪತ್ತಿಯಾಗುತ್ತೆ.

೭. ನಿದ್ರಾವೇಗದಿಂದ—ದೃಷ್ಟಿಮಂದ, ಅಗ್ನಿಮಂದ, ಬಳಲಿಕೆ, ಶಿರೋರೋಗ, ಅಜ್ಞಾನ, ಬುದ್ಧಿವಿಕಾರ, ಆಕಳಿಕೆ, ಜಡತ್ವ, ತೂಕಡಿಕೆಗಳುಂಟಾಗುತ್ತವೆ.

೮. ಉದ್ಗಾರವೇಗದಿಂದ—ಹೃದ್ರೋಗ, ನೆಗಡಿ, ಅರುಚಿ, ನಡುಕ, ಕೆಮ್ಮು, ಬಿಕ್ಕಳಿಕೆ ಈ ರೋಗಗಳುಂಟಾಗುತ್ತವೆ.

೯. ಶ್ವಾಸವೇಗದಿಂದ—ಗುಲ್ಮ, ಹೃದ್ರೋಗ, ಅಜ್ಞಾನ ಇವುಗಳು ಉಂಟಾಗುತ್ತವೆ.

೧೦. ಛರ್ದಿವೇಗದಿಂದ—ದೃಷ್ಟಿಮಂದ, ಕೆಮ್ಮು, ಕಾಸ, ವಿಸರ್ಪ, ಕೋಷ್ಠರೋಗ, ಕುಷ್ಠ, ಕಂಡೂ, ಪಾಂಡು, ಜ್ವರ, ಹೃಲ್ಲಾಸ, ಬಂಗು, ಶೋಭೆ ಈ ರೋಗಗಳುಂಟಾಗುವುವು.

೧೧. ಕಾಸವೇಗದಿಂದ—ಹೃದ್ರೋಗ, ಕೆಮ್ಮು, ಅರುಚಿ, ಬಿಕ್ಕಳಿಕೆ, ನೀರಡಿಕೆ, ಶ್ವಾಸ ಈ ರೋಗಗಳುಂಟಾಗುತ್ತವೆ.

೧೨. ರಕ್ತವೇಗದಿಂದ—ಗುಲ್ಮ, ಹೃದ್ರೋಗ, ದೃಷ್ಟಿಮಂದ, ಶಿರೋರೋಗ, ಅರುಚಿ, ಮನ್ಯಾಸ್ತಂಭ, ಬುದ್ಧಿವಿಕಾರ, ಪೀನಸಜಾಡ್ಯ ಇವುಗಳುಂಟಾಗುತ್ತವೆ.

೧೩. ತೃಷ್ಣಾವೇಗದಿಂದ—ಹೃದ್ರೋಗ, ಮುಖ ಒಣಗುವದು, ದೇಹ ಕಾರ್ಶ್ಯ, ಕಿವುಡು, ಅಜ್ಞಾನ, ಬುದ್ಧಿವಿಕಾರ ಇವುಗಳುಂಟಾಗುತ್ತವೆ.

೧೪. ಕ್ಷುದ್ವೇಗದಿಂದ—ಬಳಲಿಕೆ, ಮೈನೋವು, ಅರುಚಿ, ಬುದ್ಧಿವಿಕಾರ, ಪಾರ್ಶ್ವಶೂಲೆ ಈ ರೋಗಗಳುಂಟಾಗುತ್ತವೆ.

ನಿದ್ರೋತ್ಪತ್ತಿ :—ತಮೋಗುಣವು ಕಫವು ಇವುಗಳಿಂದ ನಿದ್ರೆ ಹುಟ್ಟುವುದು ಪಿತ್ತವು, ತಮೋಗುಣವು ಇವುಗಳಿಂದ ಮೂರ್ಛೆ ಹುಟ್ಟುವುದು. ರಜೋಗುಣವು ಪಿತ್ತವು ವಾತವು ಇವುಗಳಿಂದ ಭ್ರಮೆ ಹುಟ್ಟುವುದು. ಶ್ಲೇಷ್ಮವು ತಮೋಗುಣವು ವಾತವು ಇವುಗಳಿಂದ ನಿದ್ರೆ ಜನಿಸುತ್ತದೆ

ಚತುರ್ವಿಂಶತಿ ತತ್ವ ವಿವರಣೆ.—ಅವ್ಯಕ್ತ, ಮಹತ್ತು, ಅಹಂಕಾರ ಪಂಚತನ್ಮಾತ್ರೆಗಳು, ದಶೇಂದ್ರಿಯಗಳು, ಮನಸ್ಸು, ಪಂಚಭೂತಗಳು ಎಂಬ ಈ ಇಪ್ಪತ್ತುನಾಲ್ಕು ತತ್ವಗಳಿಂದ ಕೂಡಿರುವ ಶರೀರವೆಂಬ ಗೃಹದಲ್ಲಿ ನಿತ್ಯನಾದ ಜೀವಾತ್ಮನು ಸ್ವಾಂತವೆಂಬ ಸೇವಕನೊಡನೆ ವಾಸಿಸುತ್ತಿರುವನು. ಈ ಚತುರ್ವಿಂಶತಿ ತತ್ವಾತ್ಮಕವಾಗಿ ಈ ಶರೀರದಲ್ಲಿ ವಾಸಿಸುವ ಜೀವನು ಪಾಪ, ಪುಣ್ಯ, ಸುಖ, ದುಃಖ, ಕಾಮ, ಕ್ರೋಧ, ಲೋಭ, ಮೋಹ, ಮದ, ಅಹಂಕಾರ, ಕರ್ಮೇಂದ್ರಿಯಗಳು, ಜ್ಞಾನೇಂದ್ರಿಯಗಳು, ಬುದ್ಧಿ, ಮನಸ್ಸು ಇವುಗಳಿಂದ ಬದ್ಧನಾಗಿ ದೇಹಿಯನ್ನಲೊಪ್ಪುತ್ತಿರುವನು. ಹೀಗೆ ಜ್ಞಾನದಿಂದ ಬದ್ಧನಾದ ದೇಹಿ ಜ್ಞಾನ ಸಂಪತ್ತಿಯಿಂದ ಮುಕ್ತನಾಗುತ್ತಿರುವನು. ಈ ದೇಹಿಗೆ ಪಾಪಗಳಿಂದ ರೋಗಗಳು ಹುಟ್ಟುತ್ತಿರುವುದು. ಆದಕಾರಣ ಆ ರೋಗಗಳಿಗೆ ಚಿಕಿತ್ಸೆಮಾಡಬೇಕು.

ಮಾನವಶರೀರದಲ್ಲಿ ರೋಗವು ತಲೆದೋರಿದೊಡನೆಯೇ ಚಿಕಿತ್ಸೆಯನ್ನು ಮಾಡದಿದ್ದರೆ ಆ ರೋಗವು ಸುಖಸಾಧ್ಯವಾದದ್ದಾದರೂ ಯಾಪ್ಯವಾಗುವುದು. ಯಾಪ್ಯವಾದನಂತರ ಅಸಾಧ್ಯವಾಗುವುದು ಮತ್ತು ಪ್ರಾಣವನ್ನು ಹರಿಸುವುದು.

---

## ಮೂರನೆಯ ಅಧ್ಯಾಯ.

### ಅಷ್ಟಸ್ಥಾನ ಪರೀಕ್ಷೆ.

ರೋಗಗಳಿಂದ ಆಕ್ರಮಿಸಲ್ಪಟ್ಟ ದೇಹವುಳ್ಳ ರೋಗಿಯ ನಾಡಿಯನ್ನೂ, ಮೂತ್ರವನ್ನೂ, ಮಲವನ್ನೂ, ನಾಲಗೆಯನ್ನೂ, ಧ್ವನಿಯನ್ನೂ, ಉಷ್ಣ-ಶೀತ-ಮೃದು-ಕಠಿನ ಸ್ಪರ್ಶಗಳನ್ನೂ, ದೃಷ್ಟಿಯನ್ನೂ, ಆಕಾರವನ್ನೂ ಈ ಎಂಟು ಸ್ಥಾನಗಳನ್ನು ಪರೀಕ್ಷಿಸಬೇಕು.

## ನಾಡೀನಿದಾನ ಪ್ರಾರಂಭ.

ವಾತ - ಪಿತ್ತ - ಶ್ಲೇಷ್ಮಗಳ ಔಲ್ಬಣ್ಯವು ಹೆಚ್ಚಾಗಿದ್ದರೂ, ಕೊಂಚವಾಗಿದ್ದರೂ ಮೊದಲು ನಾಡಿಯನ್ನು ಪರೀಕ್ಷಿಸಿ ಅದರ ಕೊನೆಯಲ್ಲೂ, ಮೊದಲಿನಲ್ಲೂ ಇರುವ ಸ್ಥಿತಿಯು ನಿಸ್ಸಂಶಯವಾಗಿ ತಿಳಿದುಕೊಳ್ಳಬೇಕು.

ಕೈಯ್ಯಲ್ಲಿರುವ ನಾಡಿಯು ಸಕಲ ರೋಗಗಳನ್ನೂ ಹೇಳುವುದು.

ಪ್ರಕೋಪವನ್ನು ಹೊಂದಿದ ವಾತ-ಪಿತ್ತ-ಶ್ಲೇಷ್ಮಗಳೇ ಸಮಸ್ತವಾದ ರೋಗಗಳಿಗೂ ಕಾರಣವು, ಆ ವಾತಾದಿ ದೋಷಗಳ ಪ್ರಕೋಪಗಳಿಗೆ ನಾನಾ ವಿಧವಾದ ಅಪಥ್ಯವಾದ ಆಹಾರವಿಹಾರಾದಿಗಳ ಸೇವನೆಯೇ ಕಾರಣವು.

ಜ್ವರವು ರಕ್ತಪಿತ್ತಕ್ಕೆ ಕಾರಣವಾಗುವಂತೆ ಒಂದು ರೋಗವು ಮತ್ತೊಂದು ರೋಗಕ್ಕೆ ಕಾರಣವಾಗುವದೆಂದು ತಿಳಿಯುವುದು.

ರೋಗಿಯ ದೇಶವು ಯಾವದೆಂಬುದನ್ನೂ, ಕಾಲವು ವಾತ-ಪಿತ್ತ-ಶ್ಲೇಷ್ಮ ಕಾಲಗಳಲ್ಲಿ ಯಾವದೆಂಬುದನ್ನೂ ನೋಡಿಕೊಂಡು ರೋಗದ ಬಲಾಬಲಗಳನ್ನು ಅರಿತು ರೋಗ ಪ್ರತೀಕಾರವನ್ನು ಉಪಕ್ರಮಿಸಬೇಕು.

ಪ್ರಕೃತಿ ಲಕ್ಷಣಂ :— ಪ್ರಕೃತಿಯೆಂತೆಂದೊಡೆ — ವಾತ ಪ್ರಕೃತಿ, ಪಿತ್ತ ಪ್ರಕೃತಿ, ಶ್ಲೇಷ್ಮ ಪ್ರಕೃತಿ, ಮಿಶ್ರ ಪ್ರಕೃತಿ ಎಂದು ಪ್ರಕೃತಿಯು ನಾಲ್ಕುತೆರನಾಗಿರುವುದು.

ವಾತಪ್ರಕೃತಿಯೆಂತೆಂದೊಡೆ —ಕೃಶನಾಗಿಯೂ, ದೇಹ ರೂಕ್ಷಿಸಿಕ್ಕೊಂಡವನಾಗಿಯೂ, ಮಂಡೆಯಕೂದಲು ವಿರಳವಾಗಿಯೂ, ಚಪಲಚಿತ್ತನಾಗಿಯೂ, ಒಂದು ಘಳಿಗೆಯಾದರೂ ಒಂದು ಸ್ಥಳದಲ್ಲಿ ನಿಲುಕಡೆಯಿಲ್ಲದವನಾಗಿಯೂ, ಬಹಳ ವಾಚಾಳಕನಾಗಿಯೂ, ಸ್ವಪ್ನದೊಳು ಆಕಾಶದಲ್ಲಿ ತಾನು ಹಾರಿಯಾಡುವದಂ ಕಾಣುವವನಾಗಿಯೂ ಇರುವವನು ವಾತಪ್ರಕೃತಿಕನೆಂದು ತಿಳಿಯುವುದು.

ಪಿತ್ತಪ್ರಕೃತಿಯೆಂತೆಂದೊಡೆ—ವೃದ್ಧತ್ವವಿಲ್ಲದೆಯೇ ಮಂಡೆ ನರೆತೂ, ಕೆಂಪಾಗಿಯೂ, ಯಾವಾಗಲು ಮೈ ಬೆವರುತ್ತಲೂ, ಮುಂಗೋಪಿಯಾಗಿಯೂ, ಬುದ್ಧಿಯುಳ್ಳವನಾಗಿಯೂ, ಸ್ವಪ್ನದಲ್ಲಿ ಕಿಚ್ಚುಕಿಡಿ ಮೊದಲಾದ ಜ್ಯೋತಿಗಳಂ ಕಾಣುವವನಾಗಿಯೂ ಇರುಪವನು ಪಿತ್ತಪ್ರಕೃತಿಕನೆಂದು ತಿಳಿಯುವುದು.

ಶ್ಲೇಷ್ಮಪ್ರಕೃತಿಯೆಂತೆಂದೊಡೆ — ಸ್ಥಿರಚಿತ್ತನು, ಪುಷ್ಟಾಂಗನು, ಒಳ್ಳೆಯ ಮಕ್ಕಳುಳ್ಳವನು, ಮಿಂಚುವ, ನಯವಾದ ಕೇಶಗಳುಳ್ಳವನು, ಸ್ವಪ್ನದಲ್ಲಿ ನೀರನ್ನೂ ಬಿಳೀದಾದ ವಸ್ತುಗಳನ್ನೂ ಕಾಣುವವನೂ ಶ್ಲೇಷ್ಮಪ್ರಕೃತಿಕನೆಂದು ತಿಳಿಯುವುದು.

ಮಿಶ್ರಪ್ರಕೃತಿಯೆಂತೆಂದೊಡೆ—ವಾತ-ಪಿತ್ತ-ಲಕ್ಷಣವಾದರೂ, ವಾತ-ಪಿತ್ತ-ಶ್ಲೇಷ್ಮ ಲಕ್ಷಣವಾದರೂ ಇವುಗಳಿಂದ ಕೂಡಿಕೊಂಡಿರುವಾತನೇ ಮಿಶ್ರ ಪ್ರಕೃತಿಯುಳ್ಳವನೆಂದರಿಯುವುದು.

೧. ವಾತಪ್ರಕೃತಿಯಾಗಿ ಅಗ್ನಿಸ್ಥಾನದಲ್ಲಿ ಮೊದಲು ವಾತಗತಿ ಕಂಡರೆ ಅದು ಸ್ವಾಭಾವಿಕ ಗತಿಯೆಂದು ತಿಳಿಯಬೇಕು. ಇದಲ್ಲದೆ ದೇಶಕಾಲಾದಿಗಳಿಂದ ಉಂಟಾದ ವೈಷಮ್ಯವನ್ನು ಆಲೋಚನೆಯಿಂದ ಗೊತ್ತುಮಾಡಿಕೊಳ್ಳಬೇಕು.

ಅಗ್ನಿಸ್ಥಾನದಲ್ಲಿ ಪ್ರಕೃತಿ ಬೇರೆಯುಳ್ಳವನಿಗೆ ವಾತಗತಿ ಮೊದಲು ಕಂಡರೆ ವಾತರೋಗವೆಂದು ತಿಳಿಯಬೇಕು. ಈ ರೋಗಕ್ಕೆ ಆಗುವ ಲಕ್ಷಣ:—ರೋಮಾಂಚವಾಗುವುದು, ನಡುಗುವುದು, ಭ್ರಮೆ, ಪ್ರಲಾಪ, ಆಕಳಿಕೆಗಳು ತೋರುವವು: ತಲೆ, ನಡುವು, ಪೇದೊಂಡೆ, ಪಾರ್ಶ್ವ ಇವುಗಳಲ್ಲಿ ನೋವು; ಕಿರಿದೊಡೆಯಲ್ಲಿ ಹಗ್ಗದಿಂದ ಬಿಗಿದಂತೆ ಇರುವುದು; ನೀರಡಿಕೆಯಾಗುವುದು; ಕಣ್ಣು, ಚರ್ಮ, ಮುಖ, ಮಲ, ಮೂತ್ರ ಇವುಗಳು ಕಪ್ಪಾಗಿರುವುವು; ಬಾಯಿ ವಗರು, ಹಲ್ಲಿನಲ್ಲಿ ನೋವು, ಪುಡಿಕೆಮ್ಮು ಸಹ ಆಗುವುದು.

೨. ಪಿತ್ತಪ್ರಕೃತಿಯಾಗಿ ಅಗ್ನಿಸ್ಥಾನದಲ್ಲಿ ಪಿತ್ತಗತಿ ಕಂಡರೆ ಅದು ಸ್ವಾಭಾವಿಕ ಗತಿ—ಇದಲ್ಲದೆ ದೇಶಕಾಲಾದಿಗಳಿಂದ ವೈಷಮ್ಯವನ್ನು ತಿಳಿಯಬೇಕು. ಪ್ರಕೃತಿ ಬೇರೆಯಾಗಿ ಅಗ್ನಿಸ್ಥಾನದಲ್ಲಿ ಪಿತ್ತಗತಿ ಮೊದಲು ಕಂಡರೆ ಪಿತ್ತರೋಗವೆಂದು ತಿಳಿಯಬೇಕು. ಅದಕ್ಕೆ ಉಂಟಾಗುವ ಲಕ್ಷಣಗಳು:— ಮೈಯಲ್ಲಿ ತಾಪ, ನೀರಡಿಕೆ, ಹಂವೈಸುವಿಕೆ, ಅರುಚಿ, ಭ್ರಮೆ, ಕಳವಳಗಳು ಹುಟ್ಟುವವು; ಮೂಗು, ಕೊರಳು, ತುಟಿ, ಬಾಯಿ ಇವುಗಳಲ್ಲಿ ಹೊಪ್ಪಳೆಗಳು ಆಗುವವು; ತಂಪು ಪದಾರ್ಥಗಳಲ್ಲಿ ಇಚ್ಛೆ; ಮಲ, ಕಣ್ಣು, ಉಗರು, ಚರ್ಮ ಇವುಗಳಲ್ಲಿ ಹಳದೀ ಬಣ್ಣ ಉಂಟಾಗುವುದು; ಹುಳಿತೇಗು, ಅತಿಸಾರ ಇವೆಲ್ಲಾ ಇರುವುವು.

೩. ಶ್ಲೇಷ್ಮಪ್ರಕೃತಿಯಾಗಿ ಮೊದಲು ಅಗ್ನಿಸ್ಥಾನದಲ್ಲಿ ಶ್ಲೇಷ್ಮಗತಿ ಕಂಡರೆ ಅದು ಸ್ವಾಭಾವಿಕಗತಿ. ಇದಲ್ಲದೆ ದೇಶಕಾಲಾದಿಗಳಿಂದ ವೈಷಮ್ಯವನ್ನು ಗೊತ್ತುಮಾಡಿಕೊಳ್ಳಬೇಕು. ಇದಕ್ಕೆ ಉಂಟಾಗುವ ಲಕ್ಷಣಗಳು:—ಉಬ್ಬಸ, ಕೆಮ್ಮು, ನೆಗಡಿ, ಬಾಯಿಯಲ್ಲಿ ನೀರುಬರುವದು, ಅರುಚಿ, ವಮನ, ನಿದ್ರೆ, ಮೈಭಾರ, ಎದೆಯಲ್ಲಿ ಚುಚ್ಚುವುದು, ಮತ್ತು ದಪ್ಪವಾಗುವುದು; ಬಾಯಿಯಲ್ಲಿ ಸೀ, ಛಳಿ, ರೋಮಾಂಚ ಇವುಗಳು ತೋರುವುವು; ಮಲ, ಕಣ್ಣು, ಚರ್ಮ, ಉಗುರು ಇವುಗಳು ಬಿಳುಪಾಗಿ ಇರುವುವು; ಉಷ್ಣಪದಾರ್ಥದಲ್ಲಿ ಇಚ್ಛೆ.

ದ್ವಂದ್ವಜ, ಸಂಕಲಿತ, ತ್ರಿದೋಷ ಇಂಥಾ ಪ್ರಕೃತಿಯಾಗಿ ಅಗ್ನಿಸ್ಥಾನದಲ್ಲಿ ಮೊದಲು ಆಯಾ ಗತಿಗಳು ಕಂಡರೆ ಅದು ಸ್ವಾಭಾವಿಕ ಗತಿಯೆಂದು ತಿಳಿಯಬೇಕು. ಇದಲ್ಲದೆ ವೈಷಮ್ಯ ಗತಿಗಳನ್ನು ವಿವರಿಸುತ್ತೆ.

೪. ಪ್ರಕೃತಿ ಬೇರೆಯಾಗಿ ಅಗ್ನಿಸ್ಥಾನದಲ್ಲಿ ಮೊದಲು ವಾತ-ಪಿತ್ತ ಗತಿ ಕಂಡರೆ ಅದು ವಾತ ಪಿತ್ತರೋಗವೆಂದು ತಿಳಿಯಬೇಕು. ಇದಕ್ಕೆ ಉಂಟಾಗುವ

ಲಕ್ಷಣಗಳು:—ನೀರಡಿಕೆ, ಮರುಗುವದು, ಕೊರಳು ಬಾಯಿ ಸಹ ಒಣಗುವುದು, ರೋಮಾಂಚವಾಗುವುದು, ಅನಿದ್ರೆ, ವಮನ, ಕೀಲು, ತಲೆ ಇವುಗಳಲ್ಲಿ ನೋವು, ಆಕಳಿಕೆ, ಹೊಟ್ಟೆಯುಬ್ಬರ ಸಹ ಆಗುವುವು.

೫ ಪ್ರಕೃತಿ ಬೇರೆಯಾಗಿ ಅಗ್ನಿಸ್ಥಾನದಲ್ಲಿ ಮೊದಲು ಶ್ಲೇಷ್ಮವಾತ ಗತಿ ಕಂಡರೆ ಅದು ಶ್ಲೇಷ್ಮವಾತರೋಗವೆಂದು ತಿಳಿಯಬೇಕು. ಇದಕ್ಕೆ ಆಗುವ ಲಕ್ಷಣ:—ಮತ್ತಾಗಿ ಮಲಗುವುದು, ಸಂತಾಪ, ನೆತ್ತಿ, ಸಂಧಿಗಳಲ್ಲಿ ನೋವು, ಭಾರ, ನೆಗಡಿ, ಕೆಮ್ಮು, ಅರುಚಿ, ಶ್ವಾಸ, ನಿದ್ರೆ, ಬೆವರುಯಿಲ್ಲದಿರುವಿಕೆ ಸಹ ಉಂಟಾಗುವವು

೬. ಪ್ರಕೃತಿ ಬೇರೆಯಾಗಿ ಅಗ್ನಿಸ್ಥಾನದಲ್ಲಿ ಮೊದಲು ಪಿತ್ತಶ್ಲೇಷ್ಮ ಗತಿ ಕಂಡರೆ ಅದು ಪಿತ್ತಶ್ಲೇಷ್ಮರೋಗವೆಂದು ತಿಳಿಯಬೇಕು. ಈ ರೋಗಕ್ಕೆ ಆಗುವ ಲಕ್ಷಣ:—ದೇಹದಲ್ಲಿ ಶೈತ್ಯ, ಜ್ವಾಲೆ, ಬೆವರು, ಜಡತ್ವಗಳು ತೋರುವುವು; ನಾಲಿಗೆಯಲ್ಲಿ ಅರುಚಿ, ಕೆಮ್ಮು, ಬಾಯಾರಿಕೆ, ತೂಕಡಿಕೆ ಸಹ ಆಗುವುವು.

೭. ಪ್ರಕೃತಿ ಬೇರೆಯಾಗಿ ಅಗ್ನಿಸ್ಥಾನದಲ್ಲಿ ವಿಷಮಗತಿ ಕಂಡರೆ ವಿಷಮ ರೋಗವೆಂದು ತಿಳಿಯಬೇಕು. ಇದರ ಲಕ್ಷಣ:—ಸರ್ವಕಾಲದಲ್ಲೂ ಅಂತರ್ವೇಗ, ಅಸ್ಥಿಯೊಳಗೆ ನೋವು, ಗುಹೆಯೊಳಗೆ ಮಾತಾಡಿದಂತೆ ಕೇಳುವುದು, ಕಣ್ಣುಗಳು ಒಳಕ್ಕೆ ಎಳದುಕೊಳ್ಳುವುದು, ನಾಲಿಗೆ ಒಳಕ್ಕೆ ಎಳಿಯುವುದು; ಮತ್ತು ಬಹಿರ್ವೇಗ ಲಕ್ಷಣ, ಸರ್ವಕಾಲದಲ್ಲೂ ಒಂದೇ ರೀತಿಯಾಗಿ ರೋಗವು ಕಾಣಿಸುವುದು, ದಿನದಿನಕ್ಕೆ ರೋಗಾಧಿಕ್ಯವಾಗುವುದು, ಕೆಲವು ಕಾಲದಲ್ಲಿ ಪ್ರಕೃತಿ ಸರಿಯಾಗಿರುವುದು, ಪುನಃ ಪೂರ್ವದಂತೆ ಕಾಣಿಸುವುದು ಈರೀತಿ ಆಗುತ್ತೆ.

೮. ಪ್ರಕೃತಿ ಬೇರೆಯಾಗಿ ಅಗ್ನಿಸ್ಥಾನದಲ್ಲಿ ತ್ರಿದೋಷಗತಿ ಕಂಡರೆ ಅದು ತ್ರಿದೋಷರೋಗವೆಂದು ತಿಳಿಯಬೇಕು. ಇದರ ಲಕ್ಷಣ:—ಅಂಗ, ಸಂಧಿ, ಅಸ್ಥಿ, ನೆತ್ತಿಗಳಲ್ಲಿ ನೋವು, ನೀರಡಿಕೆ ಸಹ ಒಂದು ಕಾಲದಲ್ಲಿ ತೋರಿ ಮತ್ತೊಂದು ಕಾಲದಲ್ಲಿ ನೀರಡಿಕೆ ಇಲ್ಲದೆ ಇರೋದು, ತೂಕಡಿಕೆ, ಅರುಚಿ, ಪ್ರಲಾಪ, ಗಂಟಲೊಳಗೆ ಕೆರೆಯುವಿಕೆ, ಕಿವಿಯಲ್ಲಿ ನೋವು, ಕಣ್ಣುಗಳು ಕೆಂಪಾಗಿರುವುದು ಮತ್ತು ಹಳದೀರಂಗು, ಗಂಟಲಲ್ಲಿ ರಕ್ತಮಿಶ್ರವಾಗಿ ಕಫ ಬೀಳುವಿಕೆ, ಕಫದಲ್ಲಿ ಹಳದೀ ವರ್ಣವು ಮತ್ತು ನಾನಾ ವರ್ಣವು, ಮೂರ್ಛೆ, ರಾತ್ರಿಯಲ್ಲಿ ನಿದ್ರಾಭಾವ, ನಾಲಿಗೆ ಬೆಂದಂತೆಯಿರುವಿಕೆ, ಬೆರಳಿನಿಂದ ಮುಟ್ಟಿ ನೋಡಲು ನಾಲಿಗೆಯಲ್ಲಿ ಕಠಿಣಭಾವ, ಮೈಯಲ್ಲಿ ಶಾಮವರ್ಣ, ಮೈವಡೆದಹಾಗೆ ಇರುವುದು, ಬಾಯಿಯಲ್ಲಿ ಹುಣ್ಣುಗಳು, ಮುಖದಲ್ಲಿ ಕಾಂತಿ, ಕಪ್ಪು, ದೌರ್ಬಲ್ಯ, ಶ್ವಾಸಕಾಸ ಸಹ ತೋರುವುವು.

ಆರೋಗ್ಯಕಾಲದಲ್ಲಿರುವ ನಾಡಿ ವಿಧಾನವೇ ರೋಗಪೀಡಿತಕಾಲದಲ್ಲಿರುವುದಿಲ್ಲ. ವಯಸ್ಸು, ಕಾಲ ಮತ್ತು ರೋಗಗಳ ಭೇದದಿಂದ ನಾಡಿಯು ವ್ಯತ್ಯಾಸವನ್ನು ಹೊಂದಿರುತ್ತದೆ.

ಹೃದಯವನ್ನು ಆಶ್ರಯಿಸಿರುವ ನಾಡಿಗಳು ಶರೀರವೆಲ್ಲಾ ವ್ಯಾಪಿಸಿ ರಕ್ತಪ್ರವಾಹಗಳನ್ನು ವಹಿಸುತ್ತಾ ಶರೀರವನ್ನು ಪೋಷಿಸುತ್ತಿರುತ್ತವೆ.

ಹೃದಯದ ಚಲನೆಯಿಂದ ಕೊಂಚಕೊಂಚವಾಗಿ ಎರಚಲ್ಪಟ್ಟ ರಕ್ತವು ನಾಡಿಗಳಲ್ಲಿ ಪ್ರವೇಶಿಸುವುದು. ಆ ನಾಡಿಗಳಿಂದ ಗ್ರಹಿಸಲ್ಪಟ್ಟ ರಕ್ತವು ಅವುಗಳಿಂದ ಇತರ ನಾಡಿಗಳಲ್ಲಿ ಪ್ರವೇಶಿಸುವುದು.

ರಕ್ತವು ಈ ವಿಧವಾಗಿ ಸಕಲ ದೇಹವನ್ನೂ ವ್ಯಾಪಿಸಿ ಪುಪ್ಪುಸವನ್ನು ಹೊಂದುವುದು. ಆ ಪುಪ್ಪುಸದಿಂದ ಹೃದಯವನ್ನು ಹೊಂದುವುದು. ಈ ವಿಧವಾಗಿ ಆಗಾಗ್ಗೆ ನಾಡಿಗೆ ಚಲನೆಯಾಗುತ್ತಿರುವುದು.

ರಕ್ತವು ಎರಚಲ್ಪಡುವುದರಿಂದುಂಟಾಗುವ ವೇಗದಿಂದ ನಾಡಿಯು ಮಾತುಮಾತಿಗೂ ಕದಲುತ್ತಿರುವುದು. ಆ ರಕ್ತವು ಎರಚಲ್ಪಡುವಿಕೆಯ ಭೇದದಿಂದ ನಾಡೀ ಚಲನವೂ ಸಹ ಭೇದವನ್ನು ಹೊಂದುತ್ತದೆ.

## ನಾಡೀ ಭೇದಗಳು.

ಶರೀರದಲ್ಲಿರುವ ನಾಡಿಗಳು ಮೂರು ವಿಧವಾಗಿವೆ ಅವು ಯಾವುವೆಂದರೆ :—ವಾಯು ವಾಹಿನಿಯೆಂತಲೂ, ಮೂತ್ರಪುರೀಷ ನಿರ್ಗಮನ ವಾಹಿನಿಯೆಂತಲೂ, ಆಹಾರ ವಾಹಿನಿಯೆಂತಲೂ ಮೂರು ವಿಧ.

ನಾಭಿಯ ಮಧ್ಯದಲ್ಲಿರುವ ನಾಡಿಯು ಗೋಪುಚ್ಛ (ಹಸುವಿನ ಬಾಲ)ದ ಆಕೃತಿಯುಳ್ಳದ್ದಾಗಿರುತ್ತದೆ ಮತ್ತು ಆ ನಾಡಿಯನ್ನಾಶ್ರಯಿಸಿ ಅನೇಕ ನಾಡಿಗಳಿರುತ್ತವೆ, ಆ ನಾಡಿಗಳು ಶರೀರವನ್ನೆಲ್ಲಾ ವ್ಯಾಪಿಸಿರುತ್ತವೆ.

ಶರೀರದಲ್ಲಿರುವ ಮೂರುಕೋಟಿ ಐವತ್ತುಲಕ್ಷ ನಾಡಿಗಳಲ್ಲಿ ೧೦೭೨ ನಾಡಿಗಳು ಸ್ಥೂಲ ನಾಡಿಗಳಾಗಿವೆ. ಆ ಸ್ಥೂಲ ನಾಡಿಗಳು ಪಂಚೇಂದ್ರಿಯಂಗಳ ಗುಣಗಳನ್ನು ವಹಿಸುತ್ತವೆ.

ಮೂಲಾಧಾರವನ್ನಾಶ್ರಯಿಸಿ ಕಾಲುಗಳಿಂದ ತಲೆಯವರೆಗೂ ವ್ಯಾಪಿಸಿರುವ ಏಳುನೂರು ನಾಡಿಗಳಿಂದ ಮನುಷ್ಯ ದೇಹವು ಬಂಧಿಸಲ್ಪಟ್ಟಿದೆ.

ಪ್ರಾಣಿಗಳ ಸಕಲ ದೇಹಗಳಲ್ಲಿಯೂ ಸ್ತ್ರೀಯರಿಗೆ ವಾಮ ಭಾಗದಲ್ಲಿಯೂ, ಪುರುಷರಿಗೆ ದಕ್ಷಿಣ ಭಾಗದಲ್ಲಿಯೂ ನಾಡಿಯು ಪ್ರವಹಿಸುತ್ತದೆ.

ಕೈಗಳ ಹೆಬ್ಬೆರಳಿನ ಬುಡದಲ್ಲಿಯೂ ಪಾದಗಳ ಹಿಮ್ಮಡಿಗಳಲ್ಲಿಯೂ, ಕಪಾಲ ಪಾರ್ಶ್ವಗಳಲ್ಲಿಯು ಇರುವ ಆರು ನಾಡಿಗಳಿಂದ ವ್ಯಾಧಿಯನ್ನು ನಿರ್ಣಯಿಸಬೇಕು

ಹೊಕ್ಕಳು, ತುಟಿಗಳು, ಕೈಗಳು, ಕಾಲುಗಳು, ಕುತ್ತಿಗೆ, ಮೂಗು ಎಂಬ ಅವಯುವಗಳ ಸಮೀಪ ಪ್ರದೇಶಗಳಲ್ಲಿರುವ ನಾಡಿಗಳಲ್ಲಿ ಪ್ರಾಣಸಂಚಾರವಿದೆ ಯೆಂದು ಪ್ರತ್ಯೇಕಿಸಿ ತಿಳಿದುಕೊಳ್ಳಬೇಕು.

ಕೈಗಳು, ಕಾಲುಗಳು, ಕುತ್ತಿಗೆ, ಮೂಗು, ಕಣ್ಣುಗಳು, ಕಿವಿಗಳು, ನಾಲಿಗೆಯ ಕೊನೆ, ಮೇಢ್ರವು (ಪುರುಷ) ಎಂಬವುಗಳನ್ನಾಶ್ರಯಿಸಿ ಉಭಯ ಪಾರ್ಶ್ವಗಳಲ್ಲಿಯೂ ಹದಿನಾರು ನಾಡಿಗಳಿರುತ್ತವೆ. ಮತ್ತು ಈ ಹದಿನಾರು ನಾಡಿಗಳು ಪ್ರಾಣಬೋಧಕವಾದವುಗಳೆಂದು ತಿಳಿಯುವುದು.

**ಕಂಠ ನಾಡಿ :**—ಆಗಂತುಕಜ್ವರ, ದಾಹ, ಆಯಾಸ, ಭಯ, ಶೋಕ, ಕೋಪ ಇವುಗಳನ್ನು ಕಂಠನಾಡಿ ತಿಳಿಸುವುದು.

**ನಾಸಾ ನಾಡಿ :**—ಮರಣವು, ಜೀವನವು, ಕಾಮವು, ಕಂಠರೋಗವು, ಶಿರೋವೇದನೆ; ಶ್ರವಣ ವಾಯುಗಳಿಂದ ಹುಟ್ಟಿದ ರೋಗ ಇವುಗಳನ್ನು ನಾಸಾ ನಾಡಿ ತಿಳಿಯಪಡಿಸುವುದು.

ವಾತ, ಪಿತ್ಥ, ಕಫ, ಮಿಶ್ರ, ಸನ್ನಿಪಾತ, ಸಾಧ್ಯಾಸಾಧ್ಯ ಇವುಗಳೆಲ್ಲ ವನ್ನು ನಾಡಿಯು ತಿಳಿಸುತ್ತದೆ.

ಆಗಲೇ ಸ್ನಾನಮಾಡಿದವರಿಗೂ, ಊಟಮಾಡಿದವರಿಗೂ, ಹಸಿವು ಬಾಯಾರಿಕೆಯುಳ್ಳವರಿಗೂ, ಬಿಸಿಲಿನಿಂದ ಬಂದವರಿಗೂ, ಕಸರತ್ತು ಮೊದಲಾದುವನ್ನು ಮಾಡಿ ಆಯಾಸಗೊಂಡವರಿಗೂ ನಾಡಿಯು ಚನ್ನಾಗಿ ಪ್ರಕಾಶಿಸುವುದಿಲ್ಲ.

ಅಭ್ಯಂಗನ ಸ್ನಾನವಾದನಂತರ, ಸಂಭೋಗಾನಂತರ, ಭೋಜನಾನಂತರ ನಾಡಿಯು ಚನ್ನಾಗಿ ಪ್ರಕಾಶಿಸುವುದಿಲ್ಲ.




**ಪರೀಕ್ಷಾ ಪ್ರಕಾರವು :**— ವೈದ್ಯನು ರೋಗಿಯ ಹಸ್ತವನ್ನು ಹಿಡಿದುಕೊಂಡು ತನ್ನ ಬಲಗೈ ಮೂರು ಬೆರಳುಗಳಿಂದ ರೋಗಿಯ ಹೆಬ್ಬೆರಳಿನ ಮೂಲವನ್ನು ಅದು ಮುತ್ತಾ ನಾಡೀಗತಿಯನ್ನು ಪರೀಕ್ಷಿಸಬೇಕು.

ಮೊದಲು ಕೊಂಚ ಕೈಯನ್ನು ಬಗ್ಗಿಸಿ ಆಮೇಲೆ ಬೆರಳುಗಳನ್ನು ವಿಸ್ತರಿಸಿ ನಂತರ ಬಾಹು ಪ್ರಸಾರವಿಲ್ಲದಂತೆ ಮಾಡಿ, ನಂತರ ಕೊಂಚವಾಗಿ ಬಗ್ಗಿಸಲ್ಪಟ್ಟ ಮುಂಗೈಯನ್ನು ಸರಿಪಡಿಸಿ ಬೆರಳುಗಳ ಸಂಧಿಗಳು, ಕೈಯು ಪ್ರಸಾರಮಾಡಿ ಅಂಗುಷ್ಠ ಮೂಲದಲ್ಲಿ ನಾಡಿಯನ್ನು ಪ್ರಾತಃಕಾಲದಲ್ಲಿ ಪರೀಕ್ಷಿಸಬೇಕು.

ವೈದ್ಯನು ಪುರುಷರ ಬಲಗೈಯಲ್ಲಿಯೂ, ಸ್ತ್ರೀಯರ ಎಡಗೈಯಲ್ಲಿಯೂ ಶಾಸ್ತ್ರಾನುಸಾರವಾಗಿಯೂ ಮತ್ತು ಸಂಪ್ರದಾಯಾನುಸಾರವಾಗಿಯೂ ಅಭ್ಯಾಸ ಮಾಡಿ ನಾಡಿಯನ್ನು ಪರೀಕ್ಷಿಸಬೇಕು.

ಹಿಡಿದು ಹಿಡಿದೂ ಬಿಟ್ಟು ಬಿಟ್ಟೂ ಮೂರುಸಾರಿ ನಾಡಿಯನ್ನು ಪರೀಕ್ಷಿಸ ಬೇಕು. ಹೀಗೆ ಅನೇಕ ತೆರನಾಗಿ ಬುದ್ಧಿಪೂರ್ವಕವಾಗಿ ಆಲೋಚಿಸಿ ರೋಗವನ್ನು ನಿಶ್ಚಯಿಸಬೇಕು.

ಕ್ರಮವಾಗಿ ಮೂರು ಬೆರಳುಗಳಿಂದ ದೋಷತ್ರಯದಿಂದುಂಟಾದ ವಾತ-ಪಿತ್ಥ-ಶ್ಲೇಷ್ಮಗಳ ಮಂದ, ಮಧ್ಯ ಮತ್ತು ತೀಕ್ಷ್ಣ ಗತಿಗಳನ್ನು ತಿಳಿಯಬೇಕು.

ರೋಗವಿಲ್ಲದವನ ನಾಡಿಯು ಭೂಲತೆಯಂತೆಯೂ, ಸರ್ಪದಂತೆಯೂ ಸ್ಥಿರ ವಾಗಿ, ಬಲಿಷ್ಠವಾಗಿ ಚಲಿಸುವುದು

ಪಿತ್ಥನಾಡಿ ಉಷ್ಣಸ್ಪರ್ಶವುಳ್ಳದ್ದಾಗಿಯೂ, ಕಫನಾಡಿಯು ಶೀತಸ್ಪರ್ಶವುಳ್ಳ ದ್ದಾಗಿಯೂ, ವಾತನಾಡಿಯು ಸಮಶೀತೋಷ್ಣಸ್ಪರ್ಶವುಳ್ಳದ್ದಾಗಿಯೂ ಇರುವುದು.

ನಾಡಿಯು ಪ್ರಾತಃಕಾಲದಲ್ಲಿ ಸ್ನಿಗ್ಧಮಯವಾಗಿಯೂ, ಮಧ್ಯಾಹ್ನದಲ್ಲಿ ಉಷ್ಣದಿಂದೊಡಗೂಡಿದ್ದಾಗಿಯೂ, ಸಾಯಂಕಾಲದಲ್ಲಿ ವೇಗವುಳ್ಳದ್ದಾಗಿಯೂ, ರಾತ್ರಿಯಲ್ಲಿ ವೇಗರಹಿತವಾಗಿಯೂ ಇರುತ್ತದೆ.

ಮೊದಲನೆ ಬೆರಳಿಗೆ ತಿಳಿಯುಬರುವುದು ವಾತನಾಡಿಯೆಂತಲೂ, ಮಧ್ಯ ಬೆರಳಿಗೆ ತಿಳಿಯುಬರುವುದು ಪಿತ್ಥನಾಡಿಯೆಂತಲೂ, ಕಡೆಯ ಬೆರಳಿಗೆ ತಿಳಿಯುಬರು ವುದು ಶ್ಲೇಷ್ಮನಾಡಿಯೆಂತಲೂ ತಿಳಿಯುಬೇಕು.

ಗಾಳಿಯು ಬೀಸುವಾಗ ಅದಕ್ಕೆದುರಾಗಿರುವ ಹುಲ್ಲು ವೇಗವಾಗಿಯೂ ಹಿಂದುಗಡೆಯಿರುವ ಹುಲ್ಲು ಮಂದವಾಗಿಯೂ ಚಲಿಸುವಂತೆ ಮಧ್ಯದ ಬೆರಳಿಗೆ ತಿಳಿಯುಬರುವ ವಾತವು, ಮೊದಲನೆ ಬೆರಳಿಗೆ ಸ್ಪರ್ಶಿಸುವ ಪಿತ್ಥವನ್ನು ವಿಶೇಷ ವಾಗಿ ಚಲಿಸುವಂತೆ ಮಾಡುವುದಲ್ಲದೆ, ಮೂರನೆಯ ಬೆರಳಿಗೆ ಸ್ಪರ್ಶಿಸುವ ಶ್ಲೇಷ್ಮ ವನ್ನು ಮಂದವಾಗಿಯೂ ಚಲಿಸುವಂತೆ ಮಾಡುತ್ತದೆ.

ಮೇಲೆ ಹೇಳಲ್ಪಟ್ಟ ಕಾರಣದಿಂದ ಪಿತ್ಥನಾಡಿಯ ಗತಿಯು ಚಪಲ ವಾಗಿಯೂ, ವಾತನಾಡಿಯ ಗತಿಯು ವಕ್ರವಾಗಿಯೂ, ಕಫನಾಡಿಯ ಗತಿಯು ಮಂದವಾಗಿಯೂ ಇರುತ್ತದೆ.

ಪಿತ್ಥನಾಡಿಯ ಮೇಲ್ಭಾಗದಲ್ಲ ಹುಲ್ಲಿನ ಕೊನೆಯ ಭಾಗದಂತೆಯೇ ಶೀಘ್ರ ಗತಿಯುಂಟಾಗಿರುತ್ತದೆ. ವಾತನಾಡಿಯ ಮೇಲ್ಭಾಗದಲ್ಲಿ ಮಂದಗತಿಯುಂಟಾ ಗಿರುತ್ತದೆ

ವಾತ - ಪಿತ್ಥ-ಶ್ಲೇಷ್ಮಗಳೆಂಬ ತ್ರಿದೋಷಗಳಿಂದಲು ಈಗ ಹೇಳಲ್ಪಟ್ಟ ಪ್ರಕಾರ ನಾಡಿಗಳ ಗತಿಗಳನ್ನು ತಿಳಿಯುಬೇಕು. ಈ ಕ್ರಮವನ್ನು ಬಿಟ್ಟು ಬೇರೇ ವಿಧವಾಗಿ ನಾಡೀ ಗತಿಗಳು ತಿಳಿಯಲಾರವು.

ಪಿತ್ಥದಿಂದುಂಟಾದ ರೋಗವು ವೃದ್ಧಿಹೊಂದುತ್ತಿರುವಾಗ ಬುದ್ಧ್ಯತಿಕ್ರಮವಾದದ್ದೇ ಆದರೆ, ಆ ವೃದ್ಧಿಯು ವಾತಪ್ರಕೋಪದಿಂದುಂಟಾದುದೆಂದು ತಿಳಿಯಬೇಕು. ಮತ್ತು ಅಂಥಾ ದೋಷವು ನಿವಾರಣೆಯಾಗುವುದಕ್ಕಾಗಿ ಉಷ್ಣವಾದ ಔಷಧವನ್ನು ಕೊಡಬೇಕು. ಹಾಗೆ ಆಗದಿದ್ದರೆ ಆಗಲೇ ಪಿತ್ಥೋದ್ರೇಕದಿಂದ ಮೃತ್ಯುವುಂಟಾಗುವುದು.

ವಾತರೋಗವುಂಟಾಗುತ್ತಿರುವಲ್ಲಿ ಬುದ್ಧಿಯತಿಕ್ರಮಿಸಿದ್ದಾದರೆ ಪಿತ್ಥನಾಡಿಯ ಮೂಲಕ ನಾಡೀಗತಿಯನ್ನು ತಿಳಿದುಕೊಳ್ಳಬೇಕು. ಅನಂತರ ಆ ದೋಷದ ನಿವಾರಣೆಗಾಗಿ ಶೀತಲೌಷಧಗಳನ್ನು ಕೊಡಬೇಕು. ಹೀಗೆ ಮಾಡದಿದ್ದರೆ ವಾತಪ್ರಕೋಪದಿಂದ ನಿಶ್ಚಯವಾಗಿ ಮರಣವುಂಟಾಗುವುದು.

ಏಕಾಗ್ರಚಿತ್ತದಿಂದ ಆಯಾ ವಿಧಾನಗಳನ್ನು ಚೆನ್ನಾಗಿ ತಿಳಿದುಕೊಳ್ಳಬೇಕು.

ಅಗ್ನಿಶಕ್ತಿ ಕಡಿಮೆಯಾದವನಿಗೂ, ಧಾತುಪುಷ್ಟಿ ಕಡಿಮೆಯಾದವನಿಗೂ ನಾಡಿಯು ಬಹಳ ನಿದಾನವಾದುದಾಗಿ ಆಗುವುದು ರಕ್ತತುಂಬಿದ ನಾಡಿಯು ಬಿಸಿಯಾದುದಾಗಿಯೂ, ಗುರುತ್ವವುಳ್ಳದ್ದಾಗಿಯೂ ಆಗುವುದು. ಅಪಕ್ವವಾದ ಅನ್ನರಸವುಳ್ಳ ನಾಡಿಯು ಬಹಳ ಗುರುವಾಗಿ ಇರುವುದು

ಅಗ್ನಿಶಕ್ತಿ ಹೆಚ್ಚಿದವನಿಗೆ ಲಘುವಾಗಿ ಚಲಿಸುವುದು, ಹಾಗೆಯೇ ವೇಗವುಳ್ಳದ್ದಾಗಿರುವದು. ಸ್ವಸ್ಥನಾಗಿರುವವನಿಗೆ ಸ್ಥಿರವಾಗಿರುವದೆಂದು ತಿಳಿಯತಕ್ಕದ್ದು. ಹಾಗೆಯೇ ಬಲವುಳ್ಳದೆಂದು ಸಮ್ಮತವು. ಹಸಿದವನಿಗೆ ಅಸ್ಥಿರವಾಗಿಯೂ, ಊಟಮಾಡಿ ತೃಪ್ತನಾಗಿರುವವನಿಗೆ ಸ್ಥಿರವಾಗಿಯೂ ನಡೆಯುವುದು.

ತ್ರಿದೋಷದಲ್ಲಿ ನಾಡಿಯು ಚಲಿಸುತ್ತಿರುವುದು. ಮರಣಕಾಲದಲ್ಲಿ ನಾಡಿಯು ನಿಶ್ಚಲವಾಗಿರುವುದು.

ನಾಡಿಗಳಿಗೆ ಸ್ಥಾನಚಲನೆಯು ಎಲ್ಲಿವರೆಗಿರುತ್ತದೋ ಆ ವರಿವಿಗೂ ಚಿಕಿತ್ಸೆಯನ್ನು ಮಾಡುತ್ತಿರಬೇಕೇ ಹೊರತು ಅಸಾಧ್ಯವೆಂದು ತಿಳಿಯಕೂಡದು.

ಕೆಲಸಮಾಡುವುದು, ಸಂಚರಿಸುವುದು, ವ್ಯಸನಪಡುವುದು, ಧನನಷ್ಟದಿಂದ ದುಃಖಿಸುವುದು ಇವುಗಳಲ್ಲಿ ನಾಡಿಯು ಜ್ವರದಲ್ಲಿದ್ದಂತೆಯೇ ನಾನಾ ಪ್ರಭಾವಗಮನಗಳುಳ್ಳದ್ದಾಗಿರುತ್ತದೆ.

## ಅಜೀರ್ಣ ನಾಡೀ ಲಕ್ಷಣವು.

ಅಜೀರ್ಣರೋಗದಲ್ಲಿ ನಾಡಿಯು ಕಠಿನವಾಗಿಯೂ, ಸರ್ವಸ್ಥಲಗಳಲ್ಲಿಯೂ ಜಡವಾಗಿಯೂ, ತ್ವರಿತವಾಗಿಯೂ, ಅಪರಿಶುದ್ಧವಾಗಿಯೂ, ವೇಗವುಳ್ಳದ್ದಾಗಿಯೂ ಇರುತ್ತದೆ.

## ಪಕ್ವಾಜೀರ್ಣದಲ್ಲಿ ನಾಡೀ ವಿಶೇಷ.

ಪಕ್ವಾಜೀರ್ಣದಲ್ಲಿ ನಾಡಿಯು ಪುಷ್ಟಿರಹಿತವಾಗಿಯೂ, ಮೆಲ್ಲಮೆಲ್ಲಗೂ ನಡೆಯುತ್ತಿರುವುದು. ಶರೀರದಲ್ಲಿ ರಕ್ತವಧಿಕವಾಗಿರುವಾಗ ಉಷ್ಣಯುಕ್ತವಾಗಿ ಗುರುತ್ವವುಳ್ಳದ್ದಾಗಿಯು ನಡೆಯುತ್ತದೆ.

ದೀಪ್ತಾಗ್ನಿಯಿರುವವನ ನಾಡಿಯು ಲಘುಗತಿಯುಳ್ಳದ್ದಾಗಿಯೂ ಮತ್ತು ವೇಗವುಳ್ಳದ್ದಾಗಿಯೂ ಇರುತ್ತದೆ

ಮಂದಾಗ್ನಿಯಿರುವವನ ನಾಡಿಯು ಕ್ಷೀಣಧಾತುವುಳ್ಳವನ ನಾಡಿಯು ಸಹ ಹೆಚ್ಚು ಮಂದವುಳ್ಳದ್ದಾಗಿ ಸಂಚರಿಸುವುದು ಅಗ್ನಿಮಾಂದ್ಯವುಳ್ಳ ಕಾಲದಲ್ಲಿ ನಾಡಿಯು ಕ್ಷೀಣತ್ವವನ್ನು ಹೊಂದಿ ಹಂಸೆಯಂತೆ ಮಂದಗಮನವುಳ್ಳದ್ದಾಗಿರುತ್ತದೆ.

## ಗ್ರಹಣಿರೋಗ ನಾಡೀ ಲಕ್ಷಣವು.

ಗ್ರಹಣಿರೋಗದಲ್ಲಿ ನಾಡಿಯು ಪಾದದಲ್ಲಿ ಹಂಸಗತಿಯುಳ್ಳದ್ದಾಗಿಯೂ, ಹಸ್ತದಲ್ಲಿ ಕಪ್ಪೆಯಂತೆ ಹಾರುತ್ತಾ ಅಗ್ನಿಮಾಂದ್ಯವುಳ್ಳದ್ದಾಗಿರುತ್ತದೆ.

## ವಿಷೂಚಿಕಾ ನಾಡೀ ಜ್ಞಾನವು.

ಮಲಮೂತ್ರಗಳನ್ನು ನಿರೋಧಿಸಿದವನ ನಾಡಿಯು ಅತಿವೇಗವಾಗಿ ನಡೆಯುತ್ತಿರುವುದು ಮತ್ತು ವಿಷೂಚಿಕಾರೋಗದಲ್ಲಿ ನಾಡಿಯು ಕಪ್ಪೆಯಂತೆ ನಡೆಯುತ್ತಿರುವುದು

## ಆನಾಹ ಮೂತ್ರಕೃಚ್ಛ್ರರೋಗಗಳ ನಾಡೀ ಲಕ್ಷಣವು.

ಆನಾಹಕವೆಂಬ ರೋಗದಲ್ಲಿಯೂ, ಮೂತ್ರಕೃಚ್ಛ್ರದಲ್ಲಿಯೂ ನಾಡಿಯು ಗರಿಷ್ಠವಾಗಿ ನಡೆಯುತ್ತಿರುವುದು

## ಶೂಲರೋಗ ನಾಡೀ ಲಕ್ಷಣವು.

ವಾತಶೂಲೆಯಲ್ಲಿ ನಾಡಿಯು ಹೆಚ್ಚು ವೇಗವುಳ್ಳದ್ದಾಗಿಯೂ, ವಕ್ರವಾಗಿಯೂ ಸಂಚರಿಸುವುದು. ಪಿತ್ತಶೂಲೆಯಲ್ಲಿ ನಾಡಿಯು ಜ್ವಾಲೆಯಂತೆಯೂ, ಮತ್ತು ಪುಷ್ಟಿಯಾಗಿಯೂ ಇರುವುದು ಇಂಥ ನಾಡಿಯು ಅಸಾಧ್ಯವೆಂದು ತಿಳಿಯಬೇಕು.

## ಪ್ರಮೇಹ ನಾಡೀ ಜ್ಞಾನವು.

ಅಧಿಕವಾದ ಮೇಹರೋಗದಲ್ಲಿ ನಾಡಿಯು ಗ್ರಂಥಿರೂಪವಾಗಿರುವುದು. ಆಮದೂಷಣದಲ್ಲಿ ಹೆಚ್ಚು ತಾಪವುಳ್ಳದ್ದಾಗಿರುವುದು.

## ವಿಷಾಕ್ರಾಂತ ಗುಲ್ಮ ನಾಡೀ ಜ್ಞಾನವು.

ವಿಷಮದೋಷದಲ್ಲಿ ನಾಡಿಯು ಊರ್ಧ್ವಗತಿಯಾಗಿಯೂ, ವಿಷ್ಟಂಭ ಗುಲ್ಮ ರೋಗದಲ್ಲಿ ಬಹಳ ಅಧೋಭಾಗವಾಗಿಯೂ, ವಾಯುಸಮಾಪ್ತಿಕಾಲದಲ್ಲಿ ಊರ್ಧ್ವ

ಭಾಗದಲ್ಲಿ ಹಾರಿಬೀಳುವಂತೆಯೂ ನಡೆಯುತ್ತಿರುವುದು ಗುಲ್ಮರೋಗವಿರುವವನ ನಾಡಿಯು ಕಂಪವುಳ್ಳದ್ದಾಗಿಯೂ, ಪಾರಿವಾಳದ ಗತಿಯುಳ್ಳದ್ದಾಗಿಯೂ ಇರುತ್ತದೆ

## ಭಗಂಧರ ನಾಡೀ ಜ್ಞಾನವು.

ವ್ರಣದಿಂದ ದೇಹವು ಕಠಿಣವಾಗಿರುವವನ ನಾಡಿಯು ಪಿತ್ತೋದ್ರೇಕವುಳ್ಳದ್ದಾಗಿ ನಡೆಯುತ್ತಿರುವುದು. ಭಗಂಧರರೂಪದಿಂದ ವ್ರಣವೇದನೆಯಲ್ಲಿ ನಾಡಿಯು ವಾಯುರೂಪದಿಂದ ಸಂಚರಿಸುತ್ತಿರುತ್ತದೆ.

## ವಾಂತಿ ನಾಡೀ ಜ್ಞಾನವು.

ವಮನ ಮಾಡಿಕೊಂಡವನು, ಶಲ್ಯ ಮುಂತಾದ್ದು ಮೈಗೆ ತಗಲಿದವನು, ವೇಗಾವರೋಧನು ಇವರ ನಾಡಿಯು ಮದಿಸಿದ ಆನೆ, ಹಂಸ ಇವುಗಳಂತೆ ನಡೆಯುತ್ತಾ ಶ್ಲೇಷ್ಮವಧಿಕವಾಗಿ ಪ್ರಕೋಪಿಸಿರುವುದು ಸ್ತ್ರೀರೋಗಾದಿಕವೂ ಸಹ ರಕ್ತಾದಿ ಜ್ಞಾನಕ್ರಮದಿಂದ ತಿಳಿಯಬೇಕು

ಹೃದಯದ ಅಧಿಕ ಭಾಗವು ಸಂಕೋಚವಾದಾಗ ವಾಯುವಿನಿಂದ ರಕ್ತವಾಹಿನಿಯಾದ ನಾಡಿಯು ಪ್ರಸರಿಸಲ್ಪಡುತ್ತದೆ.

ಮಲ ವಿಭೇದದಲ್ಲಿ ನಾಡಿಯ ಗತಿಯು ಬಹಳ ಕ್ಷೀಣವಾದದ್ದಾಗಿರುತ್ತದೆ. ಜೀರ್ಣಜ್ವರದಲ್ಲಿಯೂ, ದುರ್ಬಲತ್ವದಲ್ಲಿಯೂ, ಅಲ್ಪ ರಕ್ತವುಳ್ಳದ್ದಾಗಿರುತ್ತದೆ.

ವ್ಯಾಘಾತಗಳಿಂದಲೂ, ಗತಿಭೇದಗಳಿಂದಲೂ ದೇಹದಲ್ಲಿ ರಕ್ತವನ್ನು ತೃಪ್ತಿಹೊಂದಿಸುತ್ತವೆ ಮತ್ತು ನಾಡಿಯು ಅಧಿಕವಾದ ತೇಜಸ್ಸುಳ್ಳದ್ದಾಗಿಯೂ ಚಪಲವುಳ್ಳದ್ದಾಗಿಯೂ, ದುರ್ಬಲವಾದದ್ದಾಗಿಯೂ ಆಗಿರುತ್ತದೆ.

ರಕ್ತೋಷ್ಣದಲ್ಲಿ ನಾಡಿಯು ಶೀಘ್ರಗತಿಯುಳ್ಳದ್ದಾಗಿಯೂ, ಜ್ವರದಲ್ಲಿ ನಾಡಿಯು ಚಂಚಲವಾದದ್ದಾಗಿಯೂ, ಜ್ವರಾರಂಭದಲ್ಲಿಯೂ ಸಹ ಹಾಗೆಯೇ ಇರುತ್ತದೆ. ಮತ್ತು ವಾತದಲ್ಲಿ ತೇಜಃಪುಂಜವುಳ್ಳದ್ದಾಗಿರುತ್ತದೆ.

## ದುರ್ಬಲವಾಗಿಯೂ, ಕ್ಷೀಣವಾಗಿಯೂ, ಇರುವ ನಾಡೀ ಲಕ್ಷಣವು.

ದುರ್ಬಲದಲ್ಲಿಯೂ, ಜ್ವರ ರೋಗದಲ್ಲಿಯೂ, ಅತಿಸಾರದಲ್ಲಿಯೂ, ಪ್ರವಾಹಿಕದಲ್ಲಿಯೂ ನಾಡಿಯು ದುರ್ಬಲವೂ, ಕ್ಷೀಣವೂ, ಆಗಿರುತ್ತದೆ. ಮತ್ತು ಪ್ರಬಲವೂ ಪ್ರಾಣಘಾತಿಯೂ ಆಗಿರುತ್ತದೆ.

ಅನೇಕ ಕಾಲಗಳಿಂದಲೂ ಇರುವ ರೋಗಗಳಲ್ಲಿ ನಾಡಿಯು ಧೀರವಾಗಿ ನಡೆಯುತ್ತದೆಂದು ತಿಳಿಯಬೇಕು.

**ನಾಡಿಯ ಪರಿಜ್ಞಾನ :—** ಭಾರ ಹೊರವುದು, ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುವುದು, ಮೂರ್ಛೆಹೊಂದುವುದು, ಭಯಪಡುವುದು, ದುಃಖಪಡುವುದು ಈ ಮೊದಲಾದ ಕಾಲಗಳಲ್ಲಿ ನಾಡಿಯು ಬಹಳ ಗಾಢವಾಗಿಯೂ,

ಸ್ತಬ್ಧವಾಗಿಯೂ ಇರುವುದು. ಆದರೆ ಇಂಥಾ ನಾಡೀಗತಿಯುಳ್ಳವನು ಜೀವಂತ ನಾಗಿರುವನು

ವೃಕ್ಷಾದಿ ಉನ್ನತಪ್ರದೇಶಗಳಿಂದ ಕೆಳಗೆ ಬಿದ್ದವನಿಗೂ, ಅಸ್ತ್ರಾದಿಗಳಿಂದ ಮರ್ಮಭೇದಿಸಲ್ಪಟ್ಟವನಿಗೂ, ಭೇದಿಗಳಾಗುತ್ತಿರುವವರಿಗೂ, ಶುಕ್ಲ ನಷ್ಟವಾಗಿರು ವವರಿಗೂ ಆಗ ನಾಡಿಯು ನಿಶ್ಚಲವಾಗಿರುವುದು. ಹಾಗಿದ್ದರೂ ಮೃತ್ಯು ಭಯ ವಿಲ್ಲವೆಂದು ತಿಳಿಯಬೇಕು.

ಭೂತಾಭಿಸಂಗವುಳ್ಳವನ ನಾಡಿಯು ತ್ರಿದೋಷನಾಡಿಯಂತೆ ವಾತ-ಪಿತ್ಥ-ಶ್ಲೇಷ್ಮಗಳು ಸಂಕಲಿತವಾಗಿ ಸಮಾಕಾರವಾಗಿ ನಡೆಯುತ್ತಿರುವುದು. ಮತ್ತು ರೋಗವಿಲ್ಲದೆ ಅಪಮೃತ್ಯುವನ್ನು ಹೊಂದುವಂಥಾವನ ನಾಡಿಯು ಸನ್ನಿವಾತ ನಾಡಿಯ ಹಾಗಿರುವುದು.

ಪಿತ್ಥನಾಡಿಯು ಕೊಂಚವಾಗಿ ವಾತ-ಶ್ಲೇಷ್ಮಗಳಲ್ಲಿ ಪ್ರವೇಶಿಸಿ ದಾರುಣವನ್ನು ಹೊಂದುತ್ತದೆ ಆದ್ದರಿಂದ ಪಿತ್ತಸ್ಥಾನವನ್ನು ತಿಳಿದುಕೊಂಡು ಅನಂತರ ಚಿಕಿತ್ಸೆಯನ್ನು ಮಾಡಬೇಕು.

ಎಣ್ಣೆಯನ್ನು ಸೇವಿಸಿರುವವನ ನಾಡಿಯು ಪುಷ್ಟಿಯಾಗಿಯೂ; ಬೆಲ್ಲ, ಉದ್ದು ಇವುಗಳನ್ನು ಭುಜಿಸಿರುವವನ ನಾಡಿಯು ದೊಣ್ಣೆಯಂತೆ ನೆಟ್ಟಗೂ ನಡಿಯುತ್ತಿರುವುದು

ಹಾಲು ಕುಡಿದಿರುವವನ ನಾಡಿಯು ಸ್ತಿಮಿತವಾಗಿಯೂ ವೇಗವಾಗಿಯೂ ನಡೆಯುವುದು. ಜೇನುತುಪ್ಪ ಕುಡಿದಿರುವವನ ನಾಡಿಯು ಕಪ್ಪೆಯಂತೆ ನಡೆ ಯುತ್ತಿರುವುದು.

ಉಪವಾಸ ಮಾಡಿರುವವನ ನಾಡಿಯು ಕ್ಷೀಣಿಸಿದ್ದಾಗಿಯೂ, ಶೀಘ್ರ ಗಮನವುಳ್ಳದ್ದಾಗಿಯೂ ಇರುತ್ತದೆ. ಸಂಭೋಗ ಮಾಡಿದವನ ನಾಡಿಯೂ ಕೂಡ ಕ್ಷೀಣಿಸಿದ್ದಾಗಿಯೂ, ಶೀಘ್ರಗತಿಯುಳ್ಳದ್ದಾಗಿಯೂ ಇರುತ್ತದೆ.

ನಾಡಿಗಳಿಗೆ ಅಂಗಗ್ರಹಣದಿಂದ ಮಂದವಾದರೆ ಕಪ್ಪೆಯಂತೆಯೂ, ನೀರು ಕೋಳಿಯಂತೆಯೂ ಗತಿಯನ್ನುಂಟಾಗಿರುತ್ತದೆ ಮತ್ತು ನಾಡಿಯು ಸನ್ನಿಪಾತಕ್ಕೆ ಸಮಾನವಾಗಿ ಹೆಚ್ಚು ತಾಪಯುಕ್ತ ಜ್ವರವಿರುವ ರೋಗಿಗೆ ಹೆಚ್ಚು ಬೆವರು ಸುರಿ ಯುತ್ತಯಿರುವುದು. ಮೇಲೆ ಹೇಳಲ್ಪಟ್ಟ ಲಕ್ಷಣವುಳ್ಳ ಜ್ವರವು, ದಾಹವು ಇವು ಸನ್ನಿಪಾತದಿಂದ ಹುಟ್ಟಿದ್ದೇ ಆದರೆ ಅನೇಕವಿಧವಾಗಿ ಥಳುಕುಗಳು ಉಂಟಾ ಗುವುವೆಂದು ತಿಳಿಯುವುದು.

ನಾಡಿಯು ಯಾವಾಗ ತನ್ನ ಸ್ಥಾನದಿಂದ ಮೂವತ್ತು ಸಲ ಒಂದೇ ಪ್ರಮಾಣದಿಂದ ಚಲಿಸುವುದೋ ಆಗ ರೋಗಿಯು ಬದುಕುತ್ತಾನೆ. ಹಾಗೆ ಚಲಿಸ ದಿದ್ದರೆ ಬದುಕುವುದಿಲ್ಲ ನಿಜವು.

## ವಾತಾದಿ ನಾಡಿಗಳ ಸಹಜಗತಿ.

ವಾತನಾಡಿಯು ವಕ್ರಗತಿಯುಳ್ಳದ್ದಾಗಿಯೂ, ಪಿತ್ಥನಾಡಿಯು ಚಪಲಗತಿಯುಳ್ಳದ್ದಾಗಿಯೂ, ಶ್ಲೇಷ್ಮನಾಡಿಯು ಸ್ಥಿರಗತಿಯುಳ್ಳದ್ದಾಗಿಯೂ, ಮಿಶ್ರನಾಡಿಯು ಮಿಶ್ರಗತಿಯುಳ್ಳದ್ದಾಗಿಯೂ ಇರುತ್ತದೆ.

**ವಾತಾದಿಗಳ ವಿಶೇಷಗತಿ :—**ವಾತನಾಡಿಯಲ್ಲಿ ನಾಡೀಗತಿಯು ಹಾವು, ಜಿಗಣಿಗಳಂತಿರುವುದೆಂದು ತಿಳಿಯಬೇಕು.

ಪಿತ್ಥನಾಡಿಯಲ್ಲಿ ನಾಡೀಗತಿಯು ಕಾಗೆ, ಗುಬ್ಬಚ್ಚಿ, ಕಪ್ಪೆಗಳ ಗತಿಯಂತಿರುವುದು.

ಶ್ಲೇಷ್ಮರೋಗದಲ್ಲಿ ನಾಡಿಯು ಹಂಸೆ, ನವಿಲು, ಪಾರಿವಾಳ, ಗುಬ್ಬಚ್ಚಿ. ಕೋಳಿ ಇವುಗಳ ಗತಿಯಂತೆ ನಡಿಯುವುದು.

ವಾತರೋಗದಲ್ಲಿ ನಾಡಿಯು ಹಾವು ಜಿಗಣಿಗಳ ಗತಿಯುಂಟಾಗಿರುವುದು ಆದ್ದರಿಂದ ಈ ವಿಷಯದಲ್ಲಿ ಯಾರೂ ಪಿತ್ತಶ್ಲೇಷ್ಮಗಳೆಂಬ ಭ್ರಮೆಯನ್ನು ಹೊಂದಕೂಡದು.

ಪೈತ್ಯರೋಗದಲ್ಲಿ ನಾಡಿಯು ಗುಬ್ಬಚ್ಚಿ, ಕಾಗೆ, ಕಪ್ಪೆಗಳ ಗತಿಯುಂಟಾಗಿರುವುದು. ಈ ವಿಷಯದಲ್ಲೊಬ್ಬರೂ ವಾತ-ಶ್ಲೇಷ್ಮಗಳೆಂಬ ಭ್ರಾಂತಿಯನ್ನು ಹೊಂದಕೂಡದು.

ಕಫರೋಗದಲ್ಲಿ ನಾಡಿಯು ಪಾರಿವಾಳ, ನವಿಲು, ಹಂಸೆ, ಕುಕ್ಕುಟಗಳ ಗತಿಯುಂಟಾಗಿರುವುದು. ಈ ಗತಿಗಳಲ್ಲಿ ವಾತ-ಪಿತ್ಥವೆಂಬ ಭ್ರಾಂತಿಯನ್ನು ಹೊಂದಕೂಡದು.

**ದ್ವಂದ್ವ ನಾಡೀ ಚಲನ ಲಕ್ಷಣವು :—**ವಾತ-ಪಿತ್ಥರೋಗದಲ್ಲಿ ನಾಡಿಯು ಅನೇಕಸಾರಿ ಹಾವಿನ ಗತಿಯುಳ್ಳದ್ದಾಗಿಯೂ, ಕಪ್ಪೆಯ ಗತಿಯುಳ್ಳದ್ದಾಗಿಯೂ ಚಲಿಸುವುದು.

ವಾತ-ಶ್ಲೇಷ್ಮಗಳು ಮಿಶ್ರವಾಗಿರುವಾಗ ನಾಡಿಯು ಸರ್ಪ ಮತ್ತು ರಾಜಹಂಸೆಗಳ ಗತಿಯನ್ನುಂಟಾಗಿರುವುದು.

ಪಿತ್ಥ-ಶ್ಲೇಷ್ಮಗಳು ಮಿಶ್ರವಾಗಿರುವಾಗ ನಾಡಿಯು ಕಪ್ಪೆ ಮತ್ತು ನವಿಲುಗಳ ಗತಿಯನ್ನುಂಟಾಗಿರುವುದು.

ವಾತವು ಅಧಿಕವಾಗಿರುವಾಗ ನಾಡಿಯು ಮೊದಲನೆಯ ಬೆರಳಿನಲ್ಲಿ ಸ್ಪಷ್ಟವಾಗಿ ಚಲಿಸುವುದು. ಪಿತ್ಥವು ಅಧಿಕವಾಗಿರುವಾಗ ನಾಡಿಯು ಎರಡನೆಯ ಬೆರಳಿನಲ್ಲಿ ಸ್ಪಷ್ಟವಾಗಿ ಚಲಿಸುವುದು. ಕಫವು ಅಧಿಕವಾಗಿರುವಾಗ ನಾಡಿಯು ಮೂರನೆಯ ಬೆರಳಿನಲ್ಲಿ ಸ್ಪಷ್ಟವಾಗಿ ಚಲಿಸುವುದು.

ವಾತ-ಪಿತ್ಥಗಳು ಅಧಿಕವಾಗಿರುವಾಗ ನಾಡಿಯು ಒಂದನೆಯ ಮತ್ತು ಎರಡನೆಯ ಬೆರಳುಗಳ ಮಧ್ಯದಲ್ಲಿ ಸ್ಪಷ್ಟವಾಗಿ ಚಲಿಸುವುದು. ವಾತ ಕಫಗಳು ಅಧಿಕವಾಗಿರುವಾಗ ನಾಡಿಯು ಒಂದನೇ ಮತ್ತು ಮೂರನೇ ಬೆರಳುಗಳಲ್ಲಿ ಸ್ಪಷ್ಟವಾಗಿ ಕಾಣಿಸುವುದು.

ಪಿತ್ಥ ಕಫವು ಅಧಿಕವಾಗಿರುವಾಗ ಎರಡನೇ ಮತ್ತು ಮೂರನೇ ಬೆರಳುಗಳ ಮಧ್ಯದಲ್ಲಿ ನಾಡಿಯು ಸ್ಪಷ್ಟವಾಗಿ ಕಾಣುತ್ತದೆ. ಸನ್ನಿಪಾತದಲ್ಲಿ ಮೂರು ಬೆರಳುಗಳಲ್ಲಿಯೂ ನಾಡಿಯು ಸ್ಪಷ್ಟವಾಗಿ ಕಾಣುತ್ತದೆ.

ಮರಕುಟುಕನ ಹಕ್ಕಿಯು ಹೇಗೆ ಬಹು ವೇಗದಿಂದ ಮರವನ್ನು ನಿಂತು ನಿಂತು ಕುಟುಕುವುದೋ ಹಾಗೆ ನಾಡಿಯು ದೋಷತ್ರಯ ಸನ್ನಿಪಾತದಲ್ಲಿ ನಡೆಯುವುದು ನಿಶ್ಚಯವು.

ವಾತ-ಪಿತ್ಥಗಳು ಅಧಿಕವಾಗಿರುವಾಗ ನಾಡಿಯು ವಕ್ರವಾಗಿ ಹಾರುತ್ತಾ ಸಂಚರಿಸುವುದು. ವಾತ-ಶ್ಲೇಷ್ಮಗಳು ಅಧಿಕವಾಗಿರುವಾಗ ನಾಡಿಯು ವಕ್ರವಾಗಿಯೂ, ಮಂದವಾಗಿಯೂ ಸಂಚರಿಸುತ್ತಿರುತ್ತದೆ. ಪಿತ್ಥ-ಕಫಗಳಧಿಕವಾಗಿರುವಾಗ ಹಾರುತ್ತಾ ಮಂದವಾಗಿ ಸಂಚರಿಸುತ್ತದೆ.

**ತ್ರಿದೋಷ ನಾಡೀ ಲಕ್ಷಣವು** :—ವಾತಾದಿ ನಾಡಿಗಳು ಮೂರನ್ನೂ ಕ್ರಮವಾಗಿ ಸರ್ಪದಂತೆಯೂ, ಲಾವಗೆ ಹಕ್ಕಿಯಂತೆಯೂ, ಹಂಸದಂತೆಯೂ ಸಮವಾಗಿ ಸಂಚರಿಸುತ್ತಿದ್ದರೆ ತ್ರಿದೋಷವೆಂದು ತಿಳಿಯುವುದು.

ತ್ರಿದೋಷ ಮಿಶ್ರಿತವಾದ ನಾಡಿಯು ಲಾವಗೇ ಹಕ್ಕಿಯಂತೆಯೂ, ತಿತ್ತಿರಿ (ವೇದದ) ಪಕ್ಷಿಯಂತೆಯೂ, ಕೆಂದೆಲೇ ಹಕ್ಕಿಯಂತೆಯೂ ಚಲಿಸುವುದಲ್ಲದೆ ಒಂದೊಂದು ಸಮಯದಲ್ಲಿ ಮಂದಗತಿಯಾಗಿಯೂ, ಮತ್ತೊಂದುವೇಳೆ ಶೀಘ್ರವಾಗಿಯೂ ನಡಿಯುವುದು. ಈ ರೀತಿಯಾಗಿ ನಾಡಿಯು ಸಂಚರಿಸುತ್ತಿರುವಾಗ ಸನ್ನಿಪಾತರೋಗವೆಂತಲೂ, ತ್ರಿದೋಷರೋಗವೆಂತಲೂ ತಿಳಿಯುವುದು.

**ಸಾಮಾನ್ಯವಾಗಿ ಸುಖಸಾಧ್ಯ ನಾಡೀ ಲಕ್ಷಣವು** :—ನಾಡಿಯು ಯಾವಾಗ ಯಾವ ಧಾತುವನ್ನು ಹೊಂದುತ್ತದೆಯೋ ಆಗ ಅದಕ್ಕೆ ತಕ್ಕ ಗತಿಯನ್ನುಂಟಾಗಿರುತ್ತದೆ. ಅಂಥಹ ವ್ಯಾಧಿಯನ್ನು ಸುಖಸಾಧ್ಯವೆಂಬದಾಗಿ ತಿಳಿಯಬೇಕು.

ಜ್ವರವು ಪ್ರಕೋಪಿಸಿರುವ ಸಮಯದಲ್ಲಿ ನಾಡಿಯು ಹೆಚ್ಚು ಉಷ್ಣವುಳ್ಳದ್ದಾಗಿಯೂ ವೇಗವುಳ್ಳದ್ದಾಗಿಯೂ ಇರುತ್ತದೆ.

ಜ್ವರದಲ್ಲಿ ನಾಡಿಯು ವಕ್ರವೂ ವೇಗವೂ ಉಷ್ಣವೂ ಉಳ್ಳದ್ದಾಗಿರುತ್ತದೆ.

ಸಂಭೋಗಾಂತ್ಯದಲ್ಲಿಯೂ, ರಾತ್ರಿಯಲ್ಲಿಯೂ, ಪ್ರಾತಃಕಾಲದಲ್ಲಿಯೂ ನಾಡಿಯು ದೀಪಶಿಖಿಯಂತಿರುವುದು.

ವಾತದಲ್ಲಿ ನಾಡಿಯು ಸಹಜವಾಗಿ ಸೌಮ್ಯವಾಗಿಯೂ, ಸೂಕ್ಷ್ಮವಾಗಿಯೂ, ಸ್ಥಿರವಾಗಿಯೂ, ಮಂದವಾಗಿಯೂ ಇರುತ್ತದೆ. ವಾಯುವು ತೀವ್ರವಾಗಿರುವಾಗ ಸ್ಥೂಲವಾಗಿಯೂ, ಶೀಘ್ರವಾಗಿಯೂ ಮತ್ತು ವಾತಜ್ವರದಲ್ಲಿ ನಾಡಿಯು ವಕ್ರಗತಿಯುಳ್ಳದ್ದಾಗಿಯೂ ಚಪಲವಾದದ್ದಾಗಿಯೂ, ಶೀತಸ್ಪರ್ಶವುಳ್ಳದ್ದಾಗಿಯೂ ಇರುತ್ತದೆ

ಪಿತ್ಥಜ್ವರದಲ್ಲಿ ನಾಡಿಯು ಶೀಘ್ರಗತಿಯುಳ್ಳದ್ದಾಗಿಯೂ, ಸರಳವಾದದ್ದಾಗಿಯೂ, ದೀರ್ಘವಾದದ್ದಾಗಿಯೂ ಇರುತ್ತದೆ. ಮತ್ತು ಶೀಘ್ರವಾಗಿ ಹೋಗುವುದಾಗಿಯೂ ಕಾಠಿಣ್ಯವುಳ್ಳದ್ದಾಗಿಯೂ, ಬಿಸಿಯಾದದ್ದಾಗಿಯೂ ಇರುತ್ತದೆ.

ಶ್ಲೇಷ್ಮಜ್ವರದಲ್ಲಿ ಮೆಲ್ಲಗೆ ನಡೆಯುವುದಾಗಿಯೂ, ದೃಢವಾದದಾಗಿಯೂ, ತಣ್ಣಗಿರುವುದಾಗಿಯೂ, ನುಣುಪಾಗಿರುವುದಾಗಿಯೂ ಆಗುವುದು.

ಶ್ಲೇಷ್ಮದೋಷದಿಂದ ನಾಡಿಯು ತಂತುಸಮಾನವಾಗಿಯೂ, ಮಂದವಾಗಿಯೂ, ಶೀತಲವಾಗಿಯೂ ಇರುತ್ತದೆ. ಮಲಾಜೀರ್ಣದಲ್ಲಿ ನಾಡಿಯು ಅಧಿಕವಾಗಿ ಚಲಿಸುತ್ತದೆ.

ವಾತ-ಪಿತ್ಥಗಳ ದೋಷವುಂಟಾದಾಗ ನಾಡಿಯು ಚಂಚಲವು, ತರಳವು, ಸ್ಥೂಲವು, ಕಠಿನವು ಆಗಿರುತ್ತದೆ.

ಶ್ಲೇಷ್ಮ-ವಾತಗಳ ದೋಷವುಂಟಾಗಿರುವ ನಾಡಿಯು ತಣ್ಣಗೂ, ಸ್ವಲ್ಪ ಸ್ಪಷ್ಟವಾಗಿಯೂ, ಮಂದಗತಿಯಾಗಿಯೂ ಇರುವುದು.

ಮಂದಶ್ಲೇಷ್ಮಾತಿ ವಾತಗಳಿಂದ ಕೂಡಿದ ನಾಡಿಯು ಯಾವಾಗಲೂ ಕಠಿನವಾದದ್ದಾಗಿಯೂ, ಬಿಸಿಯಾದದ್ದಾಗಿಯೂ ಇರುತ್ತದೆ.

ರೂಕ್ಷವಾತದಲ್ಲಿ ನಾಡಿಯು ಪಿತ್ಥನಾಡಿಗೆ ಸಮಾನವಾಗಿರುತ್ತದೆ.

ಪಿತ್ಥಶ್ಲೇಷ್ಮಗಳ ನಾಡಿಯು ಸೂಕ್ಷ್ಮವಾಗಿಯೂ, ಶೀತಲವಾಗಿಯೂ, ಚಂಚಲವಾಗಿಯೂ ಇರುತ್ತದೆ.

ದುಷ್ಟ ರಕ್ತನಾಡೀ ಲಕ್ಷಣವು:—ದುಷ್ಟ ರಕ್ತವು ದೇಹದಲ್ಲಿ ವೃದ್ಧಿ ಹೊಂದಿದರೆ ಆ ರಕ್ತವು ಪಚ್ಯಮಾನಾಶಯದಲ್ಲಿ ಮಲದೊಂದಿಗೆ ಸೇರುವುದು. ಆಗ ನಾಡಿಯು ಸಂತಾಪಯುಕ್ತವಾಗಿ ಮಧ್ಯ ಹಸ್ತದಲ್ಲಿ ಚಲಿಸುವುದು.

ಭೂತಜ್ವರದಲ್ಲಿ ನಾಡಿಗಳು ಸಮುದ್ರವನ್ನು ಸೇರುವ ನದಿಗಳಂತೆ ಬಹಳ ವೇಗವುಳ್ಳದ್ದಾಗಿರುತ್ತವೆ.

ಏಕಾಹಿಕಜ್ವರದಲ್ಲಿಯೂ ಮತ್ತು ವಿಷಮಜ್ವರದಲ್ಲಿಯೂ ನಾಡಿಯು ಹಾಗೆಯೇ ವೇಗವುಳ್ಳದ್ದಾಗಿರುತ್ತದೆ.

ದ್ವಿತೀಯ, ತೃತೀಯ, ಚಾತುರ್ಥಿಕ ಜ್ವರಗಳಲ್ಲಿ ನಾಡಿಯು ಭ್ರಮರದಂತೆ ಸಂಚರಿಸುತ್ತಿರುತ್ತದೆ.

ಜ್ವರ ಪ್ರಕೋಪವುಂಟಾದಾಗ ನಾಡಿಯು ಉಷ್ಣವೇಗವನ್ನು ಹೊಂದಿರುವುದಾಗಿ ತಿಳಿಯಬೇಕು. ಮತ್ತು ಉದ್ವೇಗ, ಕ್ರೋಧ, ಕಾಮ, ಚಿಂತಾ, ಶ್ರಮ, ಜ್ವರಗಳಲ್ಲಿ ನಾಡಿಯು ಕ್ಷೀಣಗತಿಯುಳ್ಳದ್ದಾಗಿರುತ್ತದೆಂದು ತಿಳಿಯಬೇಕು.

ಅಸಾಧ್ಯ ನಾಡೀ ಲಕ್ಷಣವು:—ನಾಡಿಯು ಮಂದಮಂದವಾಗಿಯೂ, ಶಿಥಿಲವಾಗಿಯೂ, ಅತಿ ಚಂಚಲವಾಗಿಯೂ, ನಿಂತು ನಿಂತು ದೃಶ್ಯಾದೃಶ್ಯವಾಗಿದ್ದದ್ದಾದರೆ ಸನ್ನಿವಾತ ರೋಗವೆಂತಲೂ, ಅಸಾಧ್ಯವೆಂತಲೂ ತಿಳಿಯಬೇಕು.

ಯಾವ ಮನುಷ್ಯನ ನಾಡಿಯು ಅತ್ಯುಷ್ಣವಾಗಿರುವ ಕಾಲದಲ್ಲಿ ಅತಿ ಶೀತಲವಾಗಿಯೂ, ಅತಿ ಶೀತವಾಗಿರುವ ಕಾಲದಲ್ಲಿ ಅತಿ ತಾಪವಾಗಿಯೂ ನಾನಾವಿಧ ಗತಿಗಳುಳ್ಳದ್ದಾಗಿ ಸಂಚರಿಸುವುದೋ ಅಂಥವನು ಮೃತ್ಯುವಶನಾಗುವನು.

ಯಾವ ರೋಗಿಯ ನಾಡಿಯು ಮಂದಗತಿಯನ್ನು ಹೊಂದಿ ನಡೆಯುತ್ತಾ ಮಧ್ಯಮಾಂಗುಳಿಯಲ್ಲಿ ವಾತ-ಶ್ಲೇಷ್ಮಗಳ ಗತಿಗಳನ್ನು ಹೊಂದಿ ಆಗಾಗ್ಗೆ ಅನೇಕ ವಿಧಗಳಾಗಿ ಗಾಲಿಯಮೇಲೆ ಕುಳಿತುಕೊಂಡವನು ಹೇಗೆ ತಿರುಗುತ್ತಾನೆಯೋ ಹಾಗೆ ಸ್ವಸ್ಥಾನವನ್ನು ಬಿಟ್ಟು ಅಷ್ಟರಲ್ಲಿಯೇ ಭಯಂಕರವಾಗಿ ಒಂದೊಂದು ವೇಳೆ ಸೂಕ್ಷ್ಮತ್ವವನ್ನು ಹೊಂದುವದಾದರೆ ಅಂಥಹ ರೋಗಿಯು ಜೀವಿಸಲಾರನೆಂದು ತಿಳಿಯುವುದು.

ನಾಡೀಗತಿಯು ವೇಗವಾಗಿ ಹಾರುತ್ತಾ ಅತ್ಯಂತ ಸ್ಥಿರವಾಗಿಯೂ, ಮಾಂಸಾಹಾರಿ ಮನುಷ್ಯನ ನಾಡಿಯಂತೆ ಕಠಿಣವಾಗಿಯೂ, ಅತಿ ಸೂಕ್ಷ್ಮವಾಗಿಯೂ, ಅತಿ ಡೊಂಕಾಗಿಯೂ ಇದ್ದದ್ದೇ ಆದರೆ ಅದು ಅಸಾಧ್ಯವೆಂದು ತಿಳಿಯಬೇಕು.

ಯಾವ ಮನುಷ್ಯನ ನಾಡಿಯು ಜೇನುಹುಳದಂತೆ ಸಂಚರಿಸುತ್ತಿರುವುದೋ ಅಂಥ ಮನುಷ್ಯನು ಒಂದು ದಿನಕ್ಕೇ ಮರಣವನ್ನು ಹೊಂದುವನು.

ನಾಡಿಯು ಭುಜಗಳಲ್ಲಿ ಚಲಿಸುತ್ತಲೂ, ಬೆರಳುಗಳಲ್ಲಿ ಚಲಿಸದೆಯೂ ಇರುತ್ತದೋ ಅಂಥಾ ಮನುಷ್ಯನು ಒಂದು ದಿನದೊಳಗಾಗಿ ಮರಣವನ್ನು ಹೊಂದುವನು. ಮತ್ತು ಮರಣಕಾಲದಲ್ಲಿ ನಾಡಿಯು ಡಮರುಗಾಕಾರವನ್ನು ಹೊಂದುತ್ತದೆ.

ಪಾದದಲ್ಲಿ ನಾಡಿಯು ಕಾಣಿಸುತ್ತಾ, ಹಸ್ತದಲ್ಲಿ ಕಾಣಿಸದೆಹೋಗಿ, ಮುಖವು ವಿಕಸಿತವಾಗಿ ಇದ್ದದ್ದೇ ಆದರೆ ಅಂಥವನು ಮರಣವನ್ನು ಹೊಂದುವನು.

ವಾತನಾಡಿಯು ಒಂದೊಂದುವೇಳೆ ಅತಿ ಶೀಘ್ರಗತಿಯನ್ನುಂಟಾಗುತ್ತಲೂ ಒಂದೊಂದುವೇಳೆ ಶೀತಳಗತಿಯನ್ನುಂಟಾಗುತ್ತಲೂ ಇರಲು ಮೈ ಜಿಗುಟಾಗಿ

ಬಿವರುತ್ತಿದ್ದದ್ದೇ ಆದರೆ ಅಂಥಾ ರೋಗಿಯು ಏಳು ದಿನಗಳಲ್ಲಿ ಮರಣವನ್ನು ಹೊಂದುವನು.

ವಾತನಾಡಿಯು ಚಲಿಸದೆ ಒಳಗಡೆ ಶೀತಲವಾಗಿದ್ದು ಮೇಲ್ಭಾಗದಲ್ಲಿ ನಾಡಿಯು ಮಂದಮಂದವಾಗಿ ಚಲಿಸಿದ್ದೇ ಆದರೆ ಅಂತಹ ರೋಗಿಯು ಮೂರು ದಿನಗಳೊಳಗಾಗಿ ಮರಣವನ್ನು ಹೊಂದುವನು.

ಯಾವ ರೋಗಿಯ ನಾಡಿಯು ಸ್ವಸ್ಥಾನವನ್ನು ಬಿಟ್ಟು ಕಾಣಿಸಿದೆ ಎಂದು ಹೇಳುವುದಕ್ಕೂ, ಕಾಣಿಸಲಿಲ್ಲವೆಂದು ಹೇಳುವುದಕ್ಕೂ ಆಗುವುದಿಲ್ಲವೋ ಮತ್ತು ಹೃದಯದಲ್ಲಿ ತಾಪವಧಿಕವಾಗಿರುತ್ತದೋ ಅಂಥವನು ಕ್ಷಣದೊಳಗಾಗಿ ಮರಣ ವನ್ನು ಹೊಂದುವನು.

ಹೆಬ್ಬೆರಳಿನ ಮೂಲದಲ್ಲಿರುವ ನಾಡಿಗಳು ಆ ಸ್ಥಾನವನ್ನು ಬಿಟ್ಟು ಕೊಂಚ ಕೆಳಭಾಗದಲ್ಲಿ ಅಂದರೆ ಎರಡನೆ ಮೂರನೆ ಬೆರಳುಗಳ ಕೆಳಗೆ ಸಂಚರಿಸಿದರೆ ಅಂಥ ಮನುಷ್ಯನು ಒಂದೂವರೆ ಘಂಟೆಯೊಳಗಾಗಿ ಮರಣವನ್ನು ಹೊಂದುವನು.

ಯಾವ ರೋಗಿಯ ನಾಡಿಯು ಒಂದನೇ, ಎರಡನೇ ಬೆರಳುಗಳಲ್ಲಿ ಸಂಚ ರಿಸುವುದನ್ನು ಬಿಟ್ಟು ಮೂರನೇ ಬೆರಳಿನಲ್ಲಿ ಮಾತ್ರ ಸಂಚರಿಸುತ್ತಿದ್ದರೆ ಅಂಥ ವನು ಮೂರು ಘಂಟೆಹೊತ್ತು ಜೀವಿಸುವನು.

ಯಾವನಿಗೆ ಶರೀರದಲ್ಲಿ ಶೀತಸ್ಪರ್ಶವು ಇರುವುದೋ, ಬಾಯಲ್ಲಿ ಉಸಿರು ಹೊರಡುವುದೋ, ನಾಡಿಯು ವೇಗವಾಗಿರುವುದೋ, ಸುಡುತ್ತಿರುವುದೋ, ಅವನ ಜೀವಮಾನವು ಅರ್ಧ ತಿಂಗಳು ಎಂದು ನಾಡೀಶಾಸ್ತ್ರವನ್ನು ಬಲ್ಲವರು ಹೇಳು ವರು.

ಯಾವಾಗ ವಾತಸ್ಥಾನದಲ್ಲಿ ನಾಡಿಯು ಇಲ್ಲವೋ, ಪಿತ್ತಸ್ಥಾನದಲ್ಲಿ ಶೈತ್ಯ ವಿರುವುದೋ, ಹೊರಗೆ ಬಳಲಿಕೆಯುಂಟಾಗಿರುವುದೋ, ಯಾವಾಗ ನಾಡಿಯು ನಿದಾನವಾಗಿ ನಡೆಯುವುದೋ ಆಗ ರೋಗಿಯು ಮೂರು ರಾತ್ರಿಯವರೆಗೆ ಬದುಕು ವುದೇ ಇಲ್ಲ.

ನಾಡಿಯು ಬಹು ಸೂಕ್ಷ್ಮವಾದುದಾಗಿಯೂ, ಬಹು ವೇಗವುಳ್ಳದ್ದಾಗಿಯೂ, ತಣ್ಣಗಿರುವುದಾಗಿಯೂ ಆದರೆ ಆಗ ವೈದ್ಯನು ರೋಗಿಯನ್ನು ಆಯುಸ್ಸು ತೀರಿದವ ನೆಂದು ಅರಿಯಬೇಕು.

ಯಾವನ ನಾಡಿಯು ಅಡ್ಡಡ್ಡಲಾಗಿಯೂ, ಬಿಸಿಯಾಗಿಯೂ ಇರುವುದೋ, ಹಾವಿನಂತೆ ಹರಿಯುವುದೋ, ಬಹು ವೇಗವಾಗಿರುವುದೋ, ಶ್ಲೇಷ್ಮ ತುಂಬಿ ಕೊಂಡಿರುವ ಗಂಟಲುಳ್ಳ ಆ ರೋಗಿಯು ಬದುಕೋಣವು ದುರ್ಲಭವು

ಯಾವ ನಾಡಿಯು ಗಾಳಿಯಿಂದಾಡುವ ಧ್ವಜದ ಬಟ್ಟೆಯ ತುದಿಯಂತೆ ನಡುಗುವ ಗತಿಯುಳ್ಳದ್ದಾಗಿಯೂ, ಶ್ವಾಸದೊಡನೆ ಕೂಡಿರುವುದಾಗಿಯೂ, ತಣ್ಣ

ಗಿರುವುದಾಗಿಯೂ ಕಾಣಲ್ಪಡುವುದೋ ಆ ನಾಡಿಯು ಒಂದು ಜಾವದೊಳಗಾಗಿ ಮರಣವನ್ನು ಕೊಡುವುದು.

ಯಾವನ ನಾಡಿಯು ಸ್ಥಿರವಾಗಿರುವುದೋ, ಮತ್ತು ಮಿಂಚಿನ ಬೆಳಕಿನಂತೆ ಕಾಣುವುದೋ ಅವನ ಆಯುಸ್ಸು ಒಂದೇ ದಿವಸವು. ಮರುದಿವಸದಲ್ಲಿ ಮರಣವು.

ಯಾವನ ನಾಡಿಯು ವೇಗವಾಗಿಯೂ, ಸ್ವೇದಯುಕ್ತವಾಗಿಯೂ, ತಣ್ಣಗಿರುವುದಾಗಿಯೂ ಕಾಣುವುದೋ ಅವನಿಗೆ ಆ ಎರಡನೆಯ ದಿವಸದಲ್ಲೇ ಮರಣವುಂಟಾಗುವುದೆಂದು ತಿಳಿಯುವುದು.

ಯಾವ ನಾಡಿಯು ಮೆಲ್ಲಮೆಲ್ಲಗಾಗಲಿ ಬಹಳ ನಿಶ್ಶಕ್ತಿಯಾಗಿಯಾಗಲಿ, ಚೆದರಿಚೆದರಿಯಾಗಲಿ, ನಿಂತುನಿಂತಾಗಲಿ ನಡೆಯುವುದೋ ಬಹಳ ಸೂಕ್ಷ್ಮವಾದುದಾಗಿಯೂ ಇರುವುದೋ, ಯಾವಾಗಲೂ ಭುಜಮೂಲದಲ್ಲಿ ಚಲಿಸುವುದೋ, ತಿರಿಗಿ ಬೆರಳುಗಳನ್ನು ಮುಟ್ಟುವುದೋ ಹೀಗೆ ನಾನಾ ವಿಧವಾದ ಸ್ವಭಾವಗಳಿಂದ ಕೂಡಿರುವ ನಾಡಿಯು ದೋಷತ್ರಯ ಸನ್ನಿಪಾತದ ದೆಸೆಯಿಂದ ಹುಟ್ಟಿದುದು ಚಿಕಿತ್ಸೆಗೆ ಸಾಧ್ಯವಲ್ಲವು. ಈ ನಾಡೀ ಲಕ್ಷಣವು ಯಾವನಿಗಿರುವುದೊ ಅವನಿಗೆ ಮರಣವೆಂದು ತಿಳಿಯಬೇಕು.

ಯಾವ ನಾಡಿಯು ನಿಂತು ನಿಂತು ನಡೆಯುವುದೋ ಆ ನಾಡಿಯು ಪ್ರಾಣವನ್ನು ಕೊಲ್ಲುವುದೆಂದು ತಿಳಿಯತಕ್ಕದ್ದು.

## ಮೂತ್ರ ಪರೀಕ್ಷೆ.

ಯಾವಾಗಲೂ ರಾತ್ರಿಯ ಕಡೆಯ ಜಾವದಲ್ಲಿ ನಾಲ್ಕು ಘಳಿಗೆ ಇರುವಾಗ ವೈದ್ಯನು ರೋಗಿಯನ್ನು ಎಬ್ಬಿಸಿ ಗಾಜಿನ ಪಾತ್ರೆಯಲ್ಲಿ ಆ ರೋಗಿಯ ಮೂತ್ರವನ್ನು ತೆಗೆದು ಇಟ್ಟಿರಬೇಕು, ಹೊತ್ತು ಹುಟ್ಟುತ್ತಲೆ ಅದು ಪರೀಕ್ಷಿಸಲ್ಪಡಬೇಕು

ಆ ಮೂತ್ರದ ಮೊದಲು ಧಾರೆಯನ್ನು ಬಿಟ್ಟು ಮಧ್ಯ ಧಾರೆಯಲ್ಲಿ ಹುಟ್ಟಿದ ಆ ಮೂತ್ರವನ್ನು ತೆಗೆದಿಟ್ಟುಕೊಂಡು ಅದರಿಂದ ರೋಗದ ಕಾರಣವನ್ನು ಚೆನ್ನಾಗಿ ತಿಳಿದು ನಿರಂತರವಾಗಿ ಹಿತವಾಗುವುದಕ್ಕೋಸ್ಕರ ಚಿಕಿತ್ಸೆಯನ್ನು ಮಾಡಬೇಕು.

ಮೂತ್ರವು ವಾತರೋಗದಲ್ಲಿ ಬೆಳ್ಳಗಿರುವುದು, ಶ್ಲೇಷ್ಮರೋಗಿಗೆ ನೊರೆಗೂಡಿರುವುದು, ಪಿತ್ತರೋಗದಲ್ಲಿ ಕೆಂಪಾಗಿರುವುದು, ಎರಡೆರಡು ದೋಷಗಳು ಸೇರಿ ಹುಟ್ಟಿದ ವಾತ-ಪಿತ್ತ, ವಾತ-ಶ್ಲೇಷ್ಮ, ಪಿತ್ತ-ಶ್ಲೇಷ್ಮ ರೋಗಗಳಲ್ಲಿ ಆಯಾ ದೋಷಲಕ್ಷಣಗಳಿಂದ ಕೂಡಿರುವುದು. ಸನ್ನಿಪಾತ ವಾತ-ಪಿತ್ತ ಶ್ಲೇಷ್ಮಗಳು

ಮೂರೂ ಒಟ್ಟಿಗೆ ಸೇರಿರುವ ಜಾಡ್ಯದಲ್ಲಿ ಕಪ್ಪಗಿರುವುದು ಇದು ಮೂತ್ರದ ಲಕ್ಷಣವು.

ರೋಗಿಯ ಮೂತ್ರದ ಪರೀಕ್ಷೆಯು ಯತಾರ್ಥವಾಗಿ ಮುಂದೆ ಹೇಳುವ ವಿಧಿ ಪ್ರಕಾರ ಮಾಡಲ್ಪಡಬೇಕು. ಆ ಮೂತ್ರದಲ್ಲಿ ಒಂದು ಹುಲ್ಲುಕಡ್ಡಿಯಿಂದ ಒಂದು ಬೊಟ್ಟು ಎಣ್ಣೆಯನ್ನು ಬಲುಮೆಲ್ಲಗೆ ಹಾಕಿಸಬೇಕು

ಅನಂತರದಲ್ಲಿ ಬೇಗ ಎಣ್ಣೆಯು ಮೂತ್ರದಲ್ಲಿ ಹರಡಿಕೊಂಡರೆ ಆ ರೋಗಿಯು ಚಿಕಿತ್ಸೆಯಿಂದ ಸಾಧಿಸಲ್ಪಡುವುದಕ್ಕೆ ಯೋಗ್ಯನು. ಹರಡಿಕೊಳ್ಳದಿದ್ದರೆ ಶ್ರಮ ಸಾಧ್ಯನಾಗುವನು. ಆ ಎಣ್ಣೆಯ ಬೊಟ್ಟು ಮೂತ್ರದ ತಳಕ್ಕೆ ಇಳಿದು ಬಿಟ್ಟರಂತು ಸಾಧ್ಯವಾಗುವದಿಲ್ಲ. ಈ ಮೂತ್ರ ಪರೀಕ್ಷೆಯು ನಾಗಾರ್ಜುನನಿಂದಲೇ ಮಾಡಲ್ಪಟ್ಟಿದು.

ವಾತವು ಕೆರಳಿದ್ದರೆ ಮೂತ್ರವು ಕಪ್ಪಾಗಿಯೂ, ಜಿಡ್ಡಿಲ್ಲದುದಾಗಿಯೂ ಇರುವುದು. ಪಿತ್ತವು ಕೆರಳಿದ್ದರೆ ಹಳದಿ ಬಣ್ಣವಾಗಿಯೂ, ಕೆಂಪು ಬಣ್ಣವಾಗಿಯೂ, ಎಣ್ಣೆಯ ಹಾಗೂ ಇರುವುದು. ಶ್ಲೇಷ್ಮವು ಹೆಚ್ಚಿದ್ದರೆ ಜಿಗುಟಾದ್ದಾಗಿಯೂ, ಚಿಕ್ಕ ಕುಂಟೆಯ ನೀರಿನಂತೆ ಕಶ್ಮಲವಾಗಿಯೂ ಇರುವುದು. ರಕ್ತವು ಕೆರಳಿದ್ದರೆ ಜಿಗುಟುಳ್ಳದಾಗಿಯೂ, ಬಿಸಿಯಾದುದಾಗಿಯೂ, ಕೆಂಪಾಗಿಯೂ ಇರುವುದು.

ಆಹಾರ ಜೀರ್ಣಿಸದೆ ಇರುವವರ ಮೂತ್ರವು ಬಣ್ಣದಲ್ಲಿ ಮಾದಲದ ಹಣ್ಣಿನ ರಸದಂತೆಯೂ, ಕಲಗಚ್ಚಿನಂತೆಯೂ, ನೀರಿನಂತೆಯೂ, ಗಂಧದಂತೆಯೂ ಇರುವುದು.

ಅಜೀರ್ಣದಿಂದ ಹುಟ್ಟಿದ ರೋಗದಲ್ಲಿ ಮೂತ್ರವು ಅಕ್ಕಿ ತೊಳೆದ ನೀರಿನಂತೆ ಇರುವುದು. ಹೊಸ ಜ್ವರದಲ್ಲಿ ಮೂತ್ರವು ಹೊಗೆಯ ಬಣ್ಣವಾಗಿ ಬಹಳವಾಗುವುದು

ಮೂತ್ರವು ವಾತ-ಪಿತ್ತ ಪ್ರಕೋಪದಲ್ಲಿ ಹೊಗೆಯಬಣ್ಣವುಳ್ಳದಾಗಿಯೂ, ನೀರಿನಂತೆಯೂ, ಬಿಸಿಯಾದದಾಗಿಯೂ ಇರುವುದು ವಾತಶ್ಲೇಷ್ಮ ಪ್ರಕೋಪದಲ್ಲಿ ಬೆಳ್ಳಗೂ, ನೊರೆಯಂತೆಯೂ ಇರುವುದು. ಪಿತ್ತಶ್ಲೇಷ್ಮ ಪ್ರಕೋಪದಲ್ಲಿ ಆ ಮೂತ್ರವು ಬಗ್ಗಡವಾಗಿಯೂ, ರಕ್ತಮಿಶ್ರವಾಗಿಯೂ ಇರುವುದು. ಜ್ವರವು ಜೀರ್ಣವಾಗಿರುವಲ್ಲಿ ರಕ್ತದಂತೆಯೂ, ಹೊಂಬಣ್ಣವಾಗಿಯೂ ಇರುವುದು. ಸನ್ನಿಪಾತದಿಂದಲೂ ಅನೇಕ ಬಣ್ಣಗಳು ಕೂಡಿರುವುದಾಗಿ ಆಗುವುದು ಎಂದು ತಿಳಿಯಬೇಕು

ಮೂತ್ರದಲ್ಲಿ ಹಾಕಿದ ಎಣ್ಣೆಯ ಬೊಟ್ಟು ಯಾವಾಗ ಪೂರ್ವದಿಕ್ಕಿಗೆ ಹರಡಿಕೊಳ್ಳುವುದೊ ಆಗ ರೋಗಿಯು ಬೇಗನೆ ಆರೋಗ್ಯಶಾಲಿಯಾಗುವನು. ದಕ್ಷಿಣ

ದಿಕ್ಕಿಗೆ ಹರಡಿಕೊಂಡರೆ ರೋಗಿಗೆ ಜ್ವರವಿರುವುದೆಂದರಿಯತಕ್ಕುದು. ಹಾಗೆಯೇ ದಿನಕ್ರಮವಾಗಿ ರೋಗಿಗೆ ಆರೋಗ್ಯವಾಗುವುದು. ಮೂತ್ರದಲ್ಲಿ ಹಾಕಿದ ಎಣ್ಣೆಯ ಬೊಟ್ಟಿನ ಪ್ರಸರಣವು ಯಾವಾಗ ಉತ್ತರದಿಕ್ಕಿನಲ್ಲಿ ಉಂಟಾಗುವುದೊ ಆಗ ಮನುಷ್ಯನಿಗೆ ಆರೋಗ್ಯವುಂಟಾಗುವುದು. ಸಂದೇಹವಿಲ್ಲ. ಮೂತ್ರದಲ್ಲಿ ಹಾಕಿದ ಎಣ್ಣೆಯ ಬೊಟ್ಟು ಯಾವಾಗ ಪಶ್ಚಿಮ-ದಿಕ್ಕಿನಲ್ಲಿ ಹರಡಿಕೊಳ್ಳುವುದೊ ಆಗ ರೋಗಿಗೆ ಅನಾಯಾಸವಾಗಿ ರೋಗವು ವಾಸಿಯಾಗುವದೆಂದು ಹೇಳಬೇಕು.

ಮೂತ್ರದಲ್ಲಿ ಹಾಕಿದ ತೈಲಬಿಂದುವು ಈಶಾನ್ಯದಿಕ್ಕಿನಲ್ಲಿ ಪ್ರಸರಿಸಿದರೆ ರೋಗಿಯು ಒಂದು ತಿಂಗಳೊಳಗೆ ಸಾಯುವನು ನಿಶ್ಚಯವು. ಅಗ್ನಿಮೂಲೆಯಲ್ಲಿಯೂ ಹಾಗೆಯೇ ಎಂದರಿಯತಕ್ಕುದು. ನೈಋತ್ಯದಿಕ್ಕಿನಲ್ಲಿ ಹರಡಿಕೊಂಡರೂ ಮತ್ತು ತೈಲಬಿಂದುವು ಒಡೆದುಹೋದರೂ ಕೂಡಲೇ ನಿಜವಾಗಿ ಸಾವನ್ನು ಹೇಳಬೇಕು. ಮೂತ್ರದಲ್ಲಿ ಹಾಕಿದ ತೈಲಬಿಂದುವು ವಾಯುವ್ಯದಿಕ್ಕಿನಲ್ಲಿ ಹರಡಿಕೊಂಡರೆ ರೋಗಿಯು ಅಮೃತವನ್ನು ಕೊಟ್ಟರೂ ಬದುಕುವುದಿಲ್ಲ

ರೋಗಿಯ ಮೂತ್ರದಲ್ಲಿ ಹಾಕಲ್ಪಟ್ಟ ತೈಲಬಿಂದುವು ನೇಗಿಲಿನಂತೆಯೂ, ಆಮೆಯಂತೆಯೂ, ಕೋಣನ ಆಕಾರದಂತೆಯೂ, ಭರಣಿಯಹಾಗೆ ಗುಂಡಾಗಿಯೂ, ತಲೆಯಿಲ್ಲದ ಮನುಷ್ಯಾಕಾರವಾಗಿಯೂ, ಶರೀರಾವಯವಗಳ ಚೂರಿನಂತೆಯೂ, ಆಯುಧಾಕಾರವಾಗಿಯೂ, ಕತ್ತಿಯಂತೆಯೂ, ಒನಿಕೆ, ಪಟ್ಟಿಸವೆಂಬ ಆಯುಧಗಳಂತೆಯೂ, ಬಾಣದಂತೆಯೂ, ಭಿಂಡಿವಾಳ (ಸುತ್ತಲೂ ಅಲಗುಗಳುಳ್ಳಗದೆಯಂತೆ ಇರುವ ಆಯುಧ) ದಂತೆಯೂ, ಹಾಗೆಯೇ ಮೂರುನಾಲ್ಕು ದಾರಿಗಳು ಸೇರಿದ ಪ್ರದೇಶದಂತೆಯೂ ಹರಡಿಕೊಂಡರೆ ಆ ರೋಗಿಗೆ ಚಿಕಿತ್ಸೆಯನ್ನು ಮಾಡಬಾರದು.

ರೋಗಿಯ ಮೂತ್ರದಲ್ಲಿ ಹಾಕಿದ ತೈಲಬಿಂದುವು ಹಂಸಪಕ್ಷಿ, ನೀರುಕೋಳಿ (ಹಂಸಭೇದ), ಕೆರೆ ಇವುಗಳ ಆಕಾರವಾಗಿಯೂ, ಪದ್ಮಾಕಾರವಾಗಿಯೂ, ಆನೆ, ಚಮರೀಮೃಗ (ಅಥವಾ ಚಾಮರ) ಇವುಗಳಂತೆಯೂ, ಸತ್ತಿಗೆಯಂತೆಯೂ, ತೋರಣದಂತೆಯೂ, ಉಪ್ಪರಿಗೆಯಂತೆಯೂ ಕಂಡರೆ ಆಗ ರೋಗಿಗೆ ಆರೋಗ್ಯವಾಗುವುದು ನಿಜವೆಂದು ತಿಳಿದು ಚಿಕಿತ್ಸೆಯನ್ನು ಮಾಡಬೇಕು.

ಮೂತ್ರದಲ್ಲಿ ಎಣ್ಣೆಯಬೊಟ್ಟು ಯಾವಾಗ ಜಲ್ಲಡಿಯಂತೆ ತೂತುಗಳುಳ್ಳದ್ದಾಗಿ ಆಗುವುದೋ ಆಗ ರೋಗಿಗೆ ಪ್ರೇತಗ್ರಹದೋಷದಿಂದುಂಟಾದ ವಾಸಮಾಡುವ ಮನೆಯದೋಷವೆಂದು ನಿಶ್ಚಯವಾಗಿ ಅರಿಯತಕ್ಕುದು.

ರೋಗಿಯ ಮೂತ್ರದಲ್ಲಿ ಹಾಕಿದ ತೈಲಬಿಂದುವು ಮನುಷ್ಯಾಕಾರವಾಗಿ ಆದರೂ, ಅದಕ್ಕೆ ಎರಡು ತಲೆಗಳಿರುವಂತೆ ಆದರೂ ಆಗ ರೋಗಿಗೆ ಭೂತಹಿಡಿದ ದೋಷದಿಂದ ರೋಗಬಂದಿರುವುದೆಂದು ತಿಳಿಯುವುದಲ್ಲದೆ ಭೂತಚಿಕಿತ್ಸೆಯನ್ನು ಮಾಡಬೇಕು.

ಕುಶಲನಾದ ವೈದ್ಯನು ಮೂತ್ರವು ಮಂಜಿಷ್ಠೆಯ ಹಾಗೆ ಕೆಂಪಾಗಿಯೂ, ಹೊಗೆಯಂತೆ ಬೂದಗೂ, ಕರ್ರಗೂ, ಜಿಡ್ಡುಳ್ಳದಾಗಿಯೂ, ನೀರಿನಂತೆಯೂ ತಣ್ಣಗೂ ಇರುವುದನ್ನು ಮನಸ್ಸಿನಲ್ಲಿ ತಿಳಿದು ರೋಗವುಳ್ಳ ಮನುಷ್ಯರಿಗೆ ಚಿಕಿತ್ಸೆಯನ್ನು ಮಾಡಬೇಕು.

ಮೂತ್ರದಲ್ಲಿ ಹಾಕಿದ ತೈಲಬಿಂದುವು ವಾತದ ದೆಸೆಯಿಂದ ಹಾವಿನ ಆಕಾರವಾಗಿ ಆಗುವುದು. ಪಿತ್ತದ ದೆಸೆಯಿಂದ ಛತ್ರಿ (ಸತ್ತಿಗೆ) ಯಂತೆ ರೂಪವುಳ್ಳದ್ದಾಗುವುದು. ಶ್ಲೇಷ್ಮದ ದೆಸೆಯಿಂದ ಮುತ್ತಿನಾಕಾರವಾಗುವುದು ಇದು ಮೂತ್ರದ ಲಕ್ಷಣವು.

## ಮಲಪರೀಕ್ಷೆ.

ಮಲದಲ್ಲಿ ವಾತದ ದೆಸೆಯಿಂದ ಗಟ್ಟಿಯಾಗಿರುವಿಕೆಯೂ, ಒಣಗಿರುವಿಕೆಯೂ ಕಪ್ಪು ಬಣ್ಣವೂ ಹಿಕ್ಕೆಯೂ ಉಂಟಾಗುವುದು. ಪಿತ್ತದ ದೆಸೆಯಿಂದ ಹಳದಿ ಬಣ್ಣವು ಉಂಟಾಗುವುದು. ಕಫದ ದೆಸೆಯಿಂದ ಬಿಳಿಯ ಬಣ್ಣವು ಉಂಟಾಗುವುದು, ದೋಷತ್ರಯ ಸನ್ನಿಪಾತದಲ್ಲಿ ಎಲ್ಲದೋಷಗಳ ಲಕ್ಷಣಗಳೂ ಉಂಟಾಗುವುವು.

ಮಲವು ವಾಯು ಪ್ರಕೋಪದ ದೆಸೆಯಿಂದ ಚೂರುಚೂರಾಗಿಯೂ, ಹಿಕ್ಕೆಯಾಗಿಯೂ, ನೊರೆನೊರೆಯಾಗಿಯೂ, ಜಿಡ್ಡಿಲ್ಲದುದಾಗಿಯೂ, ಹೊಗೆ ಬಣ್ಣವಾಗಿಯೂ ಇರುವುದು. ವಾತ ಶ್ಲೇಷ್ಮಪ್ರಕೋಪದಲ್ಲಿಯೂ ಶ್ಯಾಮವರ್ಣವಾಗಿ ಆಗುವುದು. ವಾತಪಿತ್ತದ ದೆಸೆಯಿಂದ ಮಲವು ಕಟ್ಟಿದುದಾಗಿಯೂ, ಪುಡಿಪುಡಿಯಾಗಿಯೂ ಹಳದಿಬಣ್ಣ ಕಪ್ಪುಬಣ್ಣಗಳು ಬೆರೆದಿರುವುದಾಗಿಯೂ ಆಗುವುದು. ಕಫ ಪಿತ್ತದ ದೆಸೆಯಿಂದ ಹಳದಿ ಮಿಶ್ರವಾದ ಕಪ್ಪುಬಣ್ಣವುಳ್ಳದ್ದಾಗಿಯೂ, ಸ್ವಲ್ಪ ದ್ರವವುಳ್ಳದಾಗಿಯೂ, ಮಂದವಾಗಿಯೂ ಇರುವುದು. ಸನ್ನಿವಾತದ ದೆಸೆಯಿಂದ ಕರ್ರಗೂ, ಹಿಕ್ಕೆ ಹಿಕ್ಕೆಯಾಗಿಯೂ, ಹೆಚ್ಚಗೂ, ಕಟ್ಟಿಕೊಂಡಿರುವುದಾಗಿಯೂ, ಬೆಳ್ಳಗಿರುವುದಾಗಿಯೂ ಆಗುವುದು.

ಕೆಟ್ಟನಾತವುಳ್ಳ ತಣ್ಣಗಿರುವ ಒಡಕೊಡಕಾಗಿರುವ ಮಲದ ವಿಸರ್ಜನೆಯು ಯಾವಾಗ ಆಗುವುದೊ ಆಗ ಆ ಮಲವು ಅನ್ನವು ಅರಗದೆ ಇದ್ದುದರಿಂದ ಉಂಟಾದುದೆಂದು ತಿಳಿಯಬೇಕು.

ಮಲವು ಹಳದಿಯಾಗಿಯೂ, ಗಂಟು ಗಂಟಾಗಿಯೂ ಕಾಣಲ್ಪಟ್ಟರೆ, ಆ ರೋಗಿಯ ಮಲವು, ಕ್ಷಯಿಸಿಹೋದ ದೋಷವೆಂದು ತಿಳಿಯಬೇಕು.

ಜಲೋದರ ಜಾಡ್ಯದಲ್ಲಿ ಮಲವು ಬಿಳುಪಾಗಿಯೂ, ಬಹಳ ನಾತ ನಾರುವುದಾಗಿಯೂ ತಿಳಿಯತಕ್ಕದ್ದು.

ಕ್ಷಯರೋಗದಲ್ಲಂತು ಮಲವು ಕರ್ರಗಿರುವುದು. ಆಮವಾತ ಜಾಡ್ಯದಲ್ಲಿ ಹಳದಿಬಣ್ಣವಾಗಿಯೂ ಮಲವಿಸರ್ಜನೆಯಾಗುವಾಗ ನಡುವು ನೋವಿನಿಂದ ಕೂಡಿದುದಾಗಿಯೂ ಇರುವುದು.

ಬಹಳ ಕರ್ರಗೂ, ಬಹಳ ಬೆಳ್ಳಗೂ, ಬಹಳ ಹಳದಿಬಣ್ಣವಾಗಿಯೂ, ಬಹಳ ಕೆಂಪಗೂ ಇರುವ ಮಲವು ಮರಣವನ್ನುಂಟುಮಾಡುವುದು, ಮತ್ತು ಬಹಳ ಬಿಸಿಯಾದ ಮಲವು ಮರಣವನ್ನುಂಟುಮಾಡುವುದು ನಿಶ್ಚಯವು.

ವಾತಪ್ರಕೋಪಕ್ಕೆ ಮಲವು ಕರ್ರಗಾಗುವುದು, ಪಿತ್ತಪ್ರಕೋಪಕ್ಕೆ ಹಳದಿ ಬಣ್ಣದ ಮಲವು, ಶ್ಲೇಷ್ಮದಿಂದುಂಟಾದ ಮಲವು ಕೆಂಪಾಗಿರುವುದು, ಮಲವು ಸ್ವಲ್ಪವಾಗಿರುವುದು, ಬೆಳ್ಳಗಿರುವುದು, ಅಪಕ್ವವಾಗಿರುವುದನ್ನೂ ಕಫದಿಂದುಂ ಟಾದುದೆಂದು ಹೇಳಿರುವರು. ಮೇಲೆ ಹೇಳಿದ ಲಕ್ಷಣಗಳು ಬೆರೆದಿರುವ ಮಲವು ದ್ವಂದ್ವದೋಷಗಳಿಂದುಂಟಾದುದೆಂದು ಹೇಳಬೇಕು. ಆಹಾರವು ಅರಗದಿದ್ದ ರಂತೂ ಮಲವು ಪಕ್ವವಾಗಿರುವುದಿಲ್ಲ. ಆರೋಗ್ಯವಾಗಿರುವವನ ಮಲವು ಜೀರ್ಣ ವಾಗಿರುವುದು. (ಆಹಾರದಲ್ಲಿ ಸಾರವೆಲ್ಲ ದೇಹಕ್ಕೆ ಸೇರಿ ಕಿಟ್ಟವಮಾತ್ರವೇ ಉಳಿ ದಿರುವುದು ಪಕ್ವಮಲವು.)

ಅಗ್ನಿಯು ಅತಿಯಾಗಿದ್ದಲ್ಲಿ ಮಲವು ಹಿಪ್ಪೆಯಾಗಿಯೂ ಕೋಲಾಗಿಯೂ, ಒಣಗಿದುದಾಗಿಯೂ ಇರುವುದು. ಜೀರ್ಣಶಕ್ತಿಯು ಕಡಮೆಯಾಗಿದ್ದಲ್ಲಿ ಮಲವು ನೀರಾಗಿ ಇರುವುದು, ಕೆಟ್ಟನಾತವುಳ್ಳುದಾಗಿ ನವಿಲುಗರಿಯಂತೆ ಬಣ್ಣಬಣ್ಣ ವಾಗಿಯೂ ಗುಂಡುಗುಂಡಾಗಿಯೂ ಇರುವ ರೇಖೆಗಳಿಂದ ಮಿಂಚುತ್ತಿರುವುದು ಅಸಾಧ್ಯವಾದ ರೋಗವುಳ್ಳವನ ಮಲದ ಲಕ್ಷಣವು.

ರೂಪಪರೀಕ್ಷೆ :—ವಾತಕ್ಕೆ ಹೀನರೂಪ, ಪಿತ್ತಕ್ಕೆ ಸಮೀಚೀನರೂಪ, ಶ್ಲೇಷ್ಮಕ್ಕೆ ಸಾಮಾನ್ಯರೂಪವೆಂದು ತಿಳಿಯಬೇಕು.

## ಜಿಹ್ವಾ ಪರೀಕ್ಷೆ.

ನಾಲಗೆಯು ವಾಯುವು ಹೆಚ್ಚಿದ್ದರೆ ತಣ್ಣಗಿರುವುದು, ಮುಟ್ಟಿದರೆ ಗರಸು ಗರಸಾಗಿರುವುದು, ಬಿರಿದಿರುವುದು. ಪಿತ್ತವು ಹೆಚ್ಚಾಗಿದ್ದರೆ ಕೆಂಪಾಗಿಯೂ, ಕರ್ರಗೂ ಇರುವುದು. ಶ್ಲೇಷ್ಮವು ಹೆಚ್ಚಿದ್ದರೆ ಬೆಳ್ಳಗೂ, ಬಹಳ ಅಂಟಂಟಾಗಿ ಯೂ ಇರುವುದು.

ದ್ವಂದ್ವ ಜಾಡ್ಯದಲ್ಲಿ ಆಯಾ ದೋಷಲಕ್ಷಣಗಳು ಬೆರೆದಿರುವುದಾಗಿ ತಿಳಿಯತಕ್ಕುದು. ಸನ್ನಿಪಾತವು ಹೆಚ್ಚಿದ್ದರಂತು ನಾಲಗೆಯು ಯಾವ ಲಕ್ಷಣವೂ ಉಂಟಾಗದೆ ಕರ್ರಗಿರುವುದು, ಮುಳ್ಳಿನೊಡನೆ ಕೂಡಿರುವುದು, ಒಣಗಿಹೋ ಗಿರುವುದು.

ವಾತಪ್ರಕೋಪದಲ್ಲಿ ಬಾಯೆಲ್ಲ ಸಿಹಿಯಾಗಿರುವುದು. ಹಾಗೆಯೆ ಪಿತ್ತ ಪ್ರಕೋಪದಲ್ಲಿ ಕಹಿಯಾಗಿರುವುದು. ಶ್ಲೇಷ್ಮ ಪ್ರಕೋಪದಲ್ಲಿ ಸಿಹಿಯೂ ಹುಳಿಯೂ ಮಿಶ್ರವಾದಂತಿರುವುದು. ಸನ್ನಿಪಾತದಲ್ಲಿ ಎಲ್ಲ ಲಕ್ಷಣಗಳೂ ಕೂಡಿದು

ದಾಗುವುದು. ಆಹಾರ ಜೀರ್ಣಿಸದೆ ಇದ್ದರೆ ತುಪ್ಪತುಂಬಿಕೊಂಡಂತಿರುವುದು. ಅಗ್ನಿಶಕ್ತಿಯು ಕಡಿಮೆಯಾಗಿದ್ದಲ್ಲಿ ಒಗರಾಗಿರುವುದು.

ಧ್ವನಿಪರೀಕ್ಷೆ—ಧ್ವನಿಭಾರೈಸಿಕೊಂಡಿರುವವನು ಕಫರೋಗಿಯು ಆಗುವನು, ಸ್ಪಷ್ಟವಾಗಿ ಮಾತಾಡುವವನು ಪಿತ್ತರೋಗಿಯು, ಇವೆರಡೂ ಇಲ್ಲದವನು ವಾತರೋಗಿಯು ಎಂದು ಧ್ವನಿಯಿಂದ ತಿಳಿಯಬೇಕು.

ಸ್ಪರ್ಶಪರೀಕ್ಷೆ—ಮೈ ಬಿಸಿಯಾಗಿರುವವನು ಪಿತ್ತರೋಗವುಳ್ಳವನು ಆಗುವನು, ಮೈತಣ್ಣಗಿರುವವನು ದಪ್ಪವಾಗಿರುವವನು ವಾತರೋಗವುಳ್ಳವನಾಗುವನು. ಮೈಯು ಜಿನುಗುವಿಕೆ ಮತ್ತು ಮೃದುವಾಗಿದ್ದರೆ ಕಫರೋಗಿಯಾಗುವನು ಎಂದು ಮುಟ್ಟಿನೋಡುವದರಿಂದ ತಿಳಿಯತಕ್ಕುದು.

## ನೇತ್ರಪರೀಕ್ಷೆ.

ಯಾವಾಗ ಕಣ್ಣು ಜಿಡ್ಡಿಲ್ಲದಿರುವುದೋ, ಹೊಗೆಬಣ್ಣವಾಗಿರುವುದೋ ಹಾಗೆಯೆ ಭಯಂಕರವಾಗಿರುವುದೋ, ಚಂಚಲವಾಗಿರುವುದೋ ಒಳಗೆ ಉರಿಯುತ್ತಿರುವುದೋ ಆಗ ವಾತರೋಗವೆಂದು ಹೇಳುವರು.

ಕಣ್ಣು ಪಿತ್ತವಿಕಾರದಿಂದ ದೀಪವನ್ನುನೋಡಿ ಸಹಿಸಲಾರದು, ಉರಿಯುತ್ತಿರುವುದು ಹಳದಿಬಣ್ಣವಾಗಿರುವುದು ಕೆಂಪಗಿರುವುದು.

ಕಣ್ಣು ಶ್ಲೇಷ್ಮವಿಕಾರದಿಂದ ನೀರಾಡುತ್ತಿರುವುದು, ತೇಜಸ್ಸು ಕುಂದಿರುವುದು, ಜಿಡ್ಡಾಗಿರುವುದು, ಜೇಗ ಪ್ರಸರಿಸುವುದಿಲ್ಲ ಮಂಕಾಗುವುದು.

ಕಣ್ಣುದ್ವಂದ್ವ ಜಾಡ್ಯದಲ್ಲಿ ಆಯಾ ದೋಷಲಕ್ಷಣಗಳು ಬೆರೆದಿರುವುದಾಗಿಯೂ, ಬೇಗಬೇಗ ಚಲಿಸುವುದಾಗಿಯೂ ಆಗುವುದು.

ಸನ್ನಿಪಾತದ ದೆಸೆಯಿಂದ ನೇತ್ರವು ಕಪ್ಪುಬಣ್ಣವಾಗಿಯೂ, ಬಹು ವಕ್ರವಾಗಿಯೂ, ತೂಕಡಿಕೆ ಮೂರ್ಛೆ ಇವುಗಳಿಂದ ಕೂಡಿದುದಾಗಿಯೂ, ಭಯಂಕರವಾಗಿಯೂ, ಕೆಂಪುಬಣ್ಣವಾಗಿಯೂ ಆಗುವುದು.

ಯಾವಾಗ ರೋಗಿಯ ಒಂದು ಕಣ್ಣುಭಯಂಕರವಾಗಿಯೂ, ಮತ್ತೊಂದು ಕಣ್ಣು ಮುಚ್ಚಿಕೊಂಡುದಾಗಿಯೂ ಆಗುವುದೊ ಆಗ ಆ ರೋಗಿಯು ಮೂರು ದಿನಗಳೊಳಗಾಗಿ ಸಾಯುವನು.

ಯಾವ ರೋಗಿಯ ಕಣ್ಣು ಥಟ್ಟನೆ ತೇಜಶ್ಶೂನ್ಯವಾಗಿಯೂ, ಸ್ವಲ್ಪ ಕರ್ರಗೂ ಆಗುವುದೋ ಆ ರೋಗಿಯು ನಿಜವಾಗಿ ಯಮನ ಅಪ್ಪಣೆಯನ್ನು ಹೊಂದುವನು.

ಯಾವಾಗ ರೋಗಿಯ ಕಣ್ಣು ಕೆಂಪುಬಣ್ಣವುಳ್ಳುದಾಗಿಯೂ, ಕರ್ರಗೂ, ಭಯಂಕರವಾಗಿಯೂ ಕಾಣಲ್ಪಡುವುದೋ ಆಗ ಈ ಚಿಹ್ನೆಗಳಿಂದ ರೋಗಿಗೆ ಮರಣವೇ ಸರಿ ಸಂದೇಹವಿಲ್ಲವೆಂದು ತಿಳಿಯತಕ್ಕುದು.

ರೋಗಿಯು ರೆಪ್ಪೆಹಾಕದೆ ಒಂದೇಕಡೆ ನೋಡುತ್ತಲೂ, ಜ್ಞಾನವಿಲ್ಲದವನಾಗಿಯೂ, ಮನೋಭ್ರಾಂತಿಯಿಂದ ದುಡಿಯುತ್ತಿರುವ ಕಣ್ಣುಗುಡ್ಡೆಯುಳ್ಳವನಾಗಿಯೂ ಇದ್ದರೆ ಒಂದು ರಾತ್ರಿಯಲ್ಲೇ ನಿಶ್ಚಯವಾಗಿ ಪರಲೋಕ ಮಾರ್ಗವನ್ನು ಹೊಂದುವನು.

---

# ನಾಲ್ಕನೆಯ ಅಧ್ಯಾಯ.

## ಔಷಧ ವಿಭಾಗಗಳ ವಿವರಣೆ.

**ದೀಪನಪಾಚನೌಷಧವು:**—ಆಹಾರ ಪದಾರ್ಥಗಳನ್ನು ಮಾತ್ರ ಪಚನಗೊಳಿಸಿ ಅಗ್ನಿಯನ್ನು ವೃದ್ಧಿಹೊಂದಿಸದಿರುವ ನೋಪುಬೀಜ ಪಾಚನವೆಂತಲೂ, ಆಮವನ್ನು ಪಾಚನಗೊಳಿಸದೆ ಅಗ್ನಿಯನ್ನು ವೃದ್ಧಿಹೊಂದಿಸುವ ಹಾವುನಂಜಿನಸೊಪ್ಪು ದೀಪನವೆಂತಲೂ, ಈ ಎರಡು ಕಾರ್ಯಗಳನ್ನೂ ಮಾಡುವ ಚಿತ್ರಮೂಲವು ದೀಪನಪಾಚನವೆಂತಲೂ ಹೇಳಲ್ಪಡುವುದು.

**ಸಂಶಮನೌಷಧವು:**—ಸಮಾನಸ್ಥಿತಿಯಲ್ಲಿರುವ ವಾತಾದಿ ದೋಷಗಳಿಗೆ ವೈಕಲ್ಯವನ್ನು, ವಿರೋಧವನ್ನು ಉಂಟುಮಾಡದೆ ಪ್ರಬಲಗಳೂ, ವಿಷಮಗಳೂ ಆದ ದೋಷಗಳನ್ನು ಸಮವಾಗಿ ಮಾಡುವ ಅಮೃತಬಳ್ಳಿ ಮೊದಲಾದುವು ಸಂಶಮನೌಷಧಿಗಳೆಂದು ತಿಳಿಯುವುದು.

**ಅನುಲೋಮನೌಷಧವು:**—ಆಹಾರ ಪದಾರ್ಥಗಳನ್ನು ಪಚನಗೊಳಿಸಿ ಅವುಗಳ ಬಂಧವನ್ನು ಹೋಗಲಾಡಿಸಿ ಅಧೋಮಾರ್ಗದಲ್ಲಿ ಹೊರಡಿಸುವ ಅಳಲೇಕಾಯಿ ಮೊದಲಾದವುಗಳು ಅನುಲೋಮನೌಷಧಗಳೆನ್ನಲ್ಪಡುವುವು.

**ಸ್ರಂಸನೌಷಧವು:**—ಪಚನವಾಗಬೇಕಾದ ಪದಾರ್ಥಗಳನ್ನು ಪಚನಮಾಡಿಸಿ ಮಲವನ್ನು ಕೆಳಕ್ಕೆ ಹೊರಡಿಸುವ ಕಕ್ಕೆಬಂಕೆ ಮೊದಲಾದವು ಸ್ರಂಸನೌಷಧಗಳೆಂದು ಹೇಳಲ್ಪಡುವುದು.

**ಭೇದನೌಷಧವು:**—ಸ್ವಮಾರ್ಗದಲ್ಲಿ ಹೋಗುತ್ತಿರುವುದಾಗಿಯೂ, ಬಂಧಿಸಿರುವುದಾಗಿಯೂ ಇರುವ ಮಲಮೂತ್ರಾದಿಗಳನ್ನು ಭೇದಿಸಿ ಅಧೋಮಾರ್ಗವಾಗಿ ಹೊರಡಿಸುವ ಕಟುಕರೋಹಿಣಿ ಮೊದಲಾದುವು ಭೇದನೌಷಧಗಳೆನ್ನಲ್ಪಡುವುದು.

**ರೇಚನೌಷಧವು:**—ಪದಾರ್ಥಗಳು ಜೀರ್ಣವಾದರೂ, ಜೀರ್ಣವಾಗದಿದ್ದರೂ ದ್ರವರೂಪವಾಗಿ ಮಾರ್ಪಡಿಸಿ ಅಧೋಭಾಗಕ್ಕೆ ಹೊರಡಿಸುವ ಕರೀತಿಗಡೆ ಮೊದಲಾದುವು ರೇಚನೌಷಧವೆನ್ನಲ್ಪಡುವುದು.

ವಮನೌಷಧವು:—ಪಕ್ವವಾಗದ ಪಿತ್ತವನ್ನು ಶ್ಲೇಷ್ಮವನ್ನು ಊರ್ಧ್ವ ಮುಖವಾಗಿ ಹೊರಡಿಸುವ ಮಂಗಾರೆಕಾಯಿ ಮೊದಲಾದುವು ವಮನೌಷಧ ಗಳೆನ್ನಲ್ಪಡುವುವು.

ಸಂಶೋಧನೌಷಧವು:—ವಾತಾದಿ ದೋಷಗಳಿಂದ ಸ್ವಸ್ಥಾನದಲ್ಲಿರುವ ಮಲಾದಿಗಳು ಊರ್ಧ್ವಮುಖವಾಗಿಯಾದರೂ, ಅಧೋಮುಖವಾಗಿಯಾದರೂ ಹೊರಡಿಸುವ ದೇವದಾಳೀ ಮೊದಲಾದುವು ಸಂಶೋಧನೌಷಧಗಳೆನ್ನಲ್ಪಡುವುವು.

ಭೇದನೌಷಧವು:—ಒಂದರಲ್ಲೊಂದು ಕಲೆತಿರುವ ದೋಷಗಳ ಬಂಧ ವನ್ನು, ಬಲಾತ್ಕಾರವಾಗಿ ಪ್ರತ್ಯೇಕಿಸಿ ಬಿಡಿಸುವ ಕ್ಷಾರ, ಮೆಣಸು, ಶೊಂಠಿ, ಹಿಪ್ಪಲಿ, ಶಿಲಾಜಿತು ಮೊದಲಾದವು ಭೇದನೌಷಧಗಳೆನ್ನಲ್ಪಡುವುವು.

ಲೇಖನೌಷಧವು:—ಶರೀರದಲ್ಲಿರುವ ದೋಷಯುಕ್ತವಾದ ರಸಾದಿ ಧಾತುಗಳನ್ನು, ಮಲಗಳನ್ನು ಶುಷ್ಕಿಸಿ ಕತ್ತರಿಸುವ ಜೇನುತುಪ್ಪ, ಬಿಸಿನೀರು, ಬಜೆ, ಗೋಧವೆ ಮೊದಲಾದುವು ಲೇಖನೌಷಧವೆನ್ನಲ್ಪಡುವುವು.

ಗ್ರಾಹ್ಯೌಷಧವು:—ಯಾವದು ದೀಪನವಾಗಿಯೂ, ಪಾಚನವಾಗಿಯೂ ಉಷ್ಣವೀರ್ಯವಾದ್ದರಿಂದ ದ್ರವವನ್ನು ಶೋಷಿಸುತ್ತದೋ ಅಂತಹ ಶುಂಠಿ, ಜೀರಿಗೆ, ಹಿಪ್ಪಲಿ ಮೊದಲಾದುವು ಗ್ರಾಹ್ಯೌಷಧಗಳೆನ್ನಲ್ಪಡುತ್ತೆ.

ಸ್ತಂಭನೌಷಧವು:—ಯಾವುದು ರೂಕ್ಷವಾಗಿ, ಶೀತವಾಗಿ, ಕಷಾಯ ರಸದಿಂದೊಡಗೂಡಿ ಸುಲಭವಾಗಿ ಪಾಕವಾಗುವುದೋ, ವಾತಜನಕವಾದ ಅಂತಹ ಕೊಡಸಿಗೆಬೀಜ, ಹೆಮ್ಮರ ಮೊದಲಾದುವು ಸ್ತಂಭನೌಷಧಗಳೆನ್ನಲ್ಪಡುವುವು.

ರಸಾಯನೌಷಧವು:—ಶರೀರದಲ್ಲಿರುವ ರೋಗಗಳನ್ನು ನಾಶವಂಮಾಡಿ, ವೃದ್ಧತ್ವವನ್ನು (ಮುದುಕತನ) ಹೋಗಲಾಡಿಸುವ ಅಮೃತಬಳ್ಳಿ, ಕಾಡುಕಡಲೆ, ಅಳಲೇಕಾಯಿ ಮೊದಲಾದವು ರಸಾಯನೌಷಧಗಳೆನ್ನಲ್ಪಡುವುವು.

ವಾಜೀಕರಣೌಷಧವು:—ಯಾವದು ವೀರ್ಯವೃದ್ಧಿಯನ್ನುಂಟುಮಾಡಿ ಸಂಭೋಗಶಕ್ತಿಯನ್ನು ಹುಟ್ಟಿಸುತ್ತದೋ ಅಂಥ ಚಿಟ್ಟಾಮುಟ್ಟಿ, ಸಕ್ಕರೆ, ಮಜ್ಜಿಗೆಗಡ್ಡೆ, ನಸುಗುನ್ನಿಬೀಜ ಮೊದಲಾದುವು ವಾಜೀಕರಣೌಷಧಗಳೆನ್ನ ಲ್ಪಡುವುವು.

ಧಾತುವೃದ್ಧ್ಯೌಷಧವು:—ಯಾವದು ಶುಕ್ರವನ್ನು ವೃದ್ಧಿಮಾಡು ವುದೋ ಅಂಧ ಹಿರೀಮದ್ದಿನಗಡ್ಡೆ, ನೆಲತಾಟಿಗಡ್ಡೆ, ಮಜ್ಜಿಗೆಗಡ್ಡೆ, ಸಕ್ಕರೆ ಮೊದಲಾದುವು ಧಾತುವೃದ್ಧ್ಯೌಷಧಗಳೆನ್ನಲ್ಪಡುವುವು.

ಶುಕ್ರೋತ್ಪತ್ತ್ಯೌಷಧವು—ಶುಕ್ರವನ್ನು ಪ್ರವರ್ತನೆಮಾಡಿಸುವ ಹಾಲು, ಉದ್ದು, ಕರೀಗೇರುಬೀಜ, ನೆಲ್ಲೀಕಾಯಿ ಮೊದಲಾದುವು ಶುಕ್ರೋತ್ಪತ್ತ್ಯೌಷಧ ಗಳೆನ್ನಲ್ಪಡುವುವು.

ವಾಜೀಕರಣೌಷಧವು :—ಶುಕ್ರವನ್ನು ಪ್ರವರ್ತನೆಮಾಡುವದು ಸ್ತ್ರೀ ಎಂಬದಾಗಿಯೂ, ಹೆಗ್ಗುಳ್ಳದ ಹಣ್ಣು ಇಂದ್ರಿಯ ರೇಚನವನ್ನೂ, ಜಾಕಾಯಿ ಇಂದ್ರಿಯ ಸ್ತಂಭನವನ್ನೂ, ಅಳಲೀಕಾಯಿ ಇಂದ್ರಿಯವನ್ನು ಶೋಷಿಸುವದೆಂಬ ದಾಗಿಯೂ ತಿಳಿಯತಕ್ಕದ್ದು.

ಸೂಕ್ಷ್ಮೌಷಧವು :—ಶರೀರದಲ್ಲಿರುವ ಸೂಕ್ಷ್ಮ ರಂಧ್ರಗಳಲ್ಲಿ ಯಾವದು ಪ್ರವೇಶಿಸುತ್ತದೋ ಅಂಥ ಸೈಂಧವಲವಣ, ಜೇನುತುಪ್ಪ, ಬೇವಿನಯೆಣ್ಣೆ, ಎಳ್ಳಿನಯೆಣ್ಣೆ, ಚಿಟ್ಟರಳೆಣ್ಣೆ ಮೊದಲಾದುವುಗಳು ಸೂಕ್ಷ್ಮೌಷಧಗಳೆನ್ನಲ್ಪಡುತ್ತೆ.

ವ್ಯವಾಯ್ಯೌಷಧವು.—ಯಾವುದು ಭುಜಿಸಿದೊಡನೆಯೇ ಶರೀರಾದ್ಯಂತವೂ ವ್ಯಾಪಿಸಿ ನಂತರ ಪಚನವಾಗುವುದೋ ಅಂತಹ ಗಾಂಜಾ, ಅಫೀಂ ಮೊದಲಾದುವು ವ್ಯವಾಯ್ಯೌಷಧಗಳೆನ್ನಲ್ಪಡುವುವು.

ವಿಕಾಸ್ಯೌಷಧವು :—ಶರೀರದಲ್ಲಿ ಕೀಲುಗಳ ಬಲವನ್ನು ತಗ್ಗಿಸಿ, ಧಾತು ಸಾರವಾದ ಓಜಸ್ಸನ್ನು ತಗ್ಗಿಸುವ ಅಡಿಕೆ, ಹಾರಕ (ಮುಗ್ಗುಲು ಧಾನ್ಯ) ಮೊದಲಾದುವು ವಿಕಾಸ್ಯೌಷಧಗಳೆನ್ನಲ್ಪಡುವುವು.

ಮದಕಾರಿ ಪದಾರ್ಥಗಳು :—ಯಾವುದು ತಮೋಗುಣ ಪ್ರಧಾನವಾಗಿ ಬುದ್ಧಿಯನ್ನು ಲೋಪಗೊಳಿಸುವುದೋ ಅಂತಹ ಹೆಂಡ ಮೊದಲಾದುವು ಮದ ಪದಾರ್ಥಗಳೆನ್ನಲ್ಪಡುವುವು.

ಪ್ರಾಣಹರೌಷಧವು.—ಯಾವುದು ವಿಕಾಸಿ, ಸೂಕ್ಷ್ಮ, ಛೇದಿ, ಮದಕಾರಿ ಮೊದಲಾದ ಗುಣಗಳುಂಟಾಗಿ ಆಗ್ನೇಯವಾಗಿ ಪ್ರಾಣಗಳನ್ನು ಹರಿಸುವುದೋ ಅಂಥ ವಿಷವು, ವತ್ಸನಾಭಿ ಮೊದಲಾದುವು ಪ್ರಾಣಹರೌಷಧಗಳೆನ್ನಲ್ಪಡುವುವು.

ಪ್ರಮಾದ್ಯೌಷಧವು :—ಯಾವುದು ಸ್ವವೀರ್ಯದಿಂದ ಕರ್ಣ, ನಾಸಿಕ, ಮುಖ ಮೊದಲಾದ ರಂಧ್ರಗಳಂ ಪ್ರವೇಶಿಸಿ ಅಲ್ಲಿರುವ ದೋಷಗಳನ್ನು ಹೋಗಲಾಡಿಸುವುದೋ ಅಂಥಹ ಮೆಣಸು, ಬಜೆ ಮೊದಲಾದುವು ಪ್ರಮಾದ್ಯೌಷಧಗಳೆನ್ನಲ್ಪಡುವುವು.

ಅಭಿಷ್ಯಂದಿ ಪದಾರ್ಥಗಳು :—ಜಿಗುಟಾಗಿ ಗುರುಗುಣ ಉಳ್ಳದಾಗಿ ಯಾವುದು ರಸವಾಹಿ ಸ್ರೋತಸ್ಸುಗಳನ್ನು ಅಡ್ಡಗಿಸಿ ಶರೀರಕ್ಕೆ ಗೌರವವನ್ನು ಭಾರವನ್ನುಂಟುಮಾಡುವುದೋ ಅಂಥಹ ಮೊಸರು ಮೊದಲಾದುವು ಅಭಿಷ್ಯಂದಿ ಪದಾರ್ಥಗಳೆನ್ನಲ್ಪಡುವುವು.

ಔಷಧಾವಸ್ಥಾ ಸ್ವರೂಪವು :—ನಾವು ಭುಜಿಸುವ ಷಡ್ರಸಯುಕ್ತವಾದ ಅನ್ನವು ಜಠರಾಗ್ನಿ ಸಂಬಂಧದಿಂದ ಮೂರು ವಿಧವಾದ ರಸಗಳಾಗಿ ಪರಿಣಮಿಸಲ್ಪಡುವುದು. ಅದರಲ್ಲಿ ಮಧುರವು, ಲವಣವು, ಮಧುರ ರಸವಾಗಿಯೂ; ಅಮ್ಲ

ರಸವು ಅಮ್ಲರಸವಾಗಿಯೂ; ಕಹಿ, ಒಗರು, ಕಾರ ಇವು ಕಟು (ಕಾರ) ರಸವಾಗಿಯೂ ವಿಪಾಕ ಹೊಂದುತ್ತವೆ. ಮತ್ತು ಅಂತಹ ವಿಪಾಕಗಳಲ್ಲಿ ಮಧುರ ವಿಪಾಕದಿಂದ ಶ್ಲೇಷ್ಮವೂ, ಅಮ್ಲವಿಪಾಕದಿಂದ ಪಿತ್ತವೂ, ಕಟುವಿಪಾಕದಿಂದ ವಾತವೂ ಪ್ರಕೋಪಿಸುತ್ತಿರುವುದು.

## ಐದನೆಯ ಅಧ್ಯಾಯ.

## ಔಷಧ ಯುಕ್ತಾಯುಕ್ತ ವಿವರಣೆ.

ವಾತಪ್ರಕೋಪಕರ ದ್ರವ್ಯ ಮತ್ತು ಕಾರಣಗಳು:—ಖಾರ, ಕಹಿ, ಒಗರು, ರೂಕ್ಷಾಹಾರಗಳು, ಚಿಂತೆ, ಮೈಥುನ, ಭಯ ಲಂಘನ, ಶೀತ, ಶೋಕ ಇವುಗಳಿಂದಲೂ ವರ್ಷಾಕಾಲದಿಂದಲೂ ವಾತಪ್ರಕೋಪವಹುದು.

ವಾತಶಮನೋಪಾಯಂಗಳು:—ಸ್ನಿಗ್ಧಾಹಾರ, ಉಷ್ಣಾಹಾರ, ಬಹಳ ವೀರ್ಯವೃದ್ಧಿಕರದ್ರವ್ಯ, ಬಾಲ್ಯ, ಲವಣ, ಮಧುರ, ಹುಳಿ, ಯಣ್ಣೆ, ಬಿಸಿಲು, ಅಭ್ಯಂಜನ, ಸ್ನಾನ, ವಸ್ತಿ, ಮಾಂಸಾಹಾರ, ಮದ್ಯಪಾನ, ಅಂಗಮರ್ದನ, ಕಾಲುಗುದ್ದಿಸಿಕೊಳ್ಳೋಣ, ತೈಲವಿಧಿ, ಸ್ವೇದವಿಧಿ, ನಿರೂಹಣ, ಬೆಚ್ಚಗೆಯಿದ್ದ ಶಯನಸ್ಥಾನ, ಮೊದಲಾದ ಆಹಾರವಿಹಾರಗಳಿಂದ ವಾತಶಾಂತಿಯಹುದು.

ಪಿತ್ತಪ್ರಕೋಪಕರದ್ರವ್ಯ:—ಖಾರ, ಹುಳಿ, ಮದ್ಯ, ಉಪ್ಪು, ಉಷ್ಣ, ವಿದಾಹಿ, ವೆಗ್ಗಳವಾದ ಕೋಪ, ಬಿಸಿಲು, ಕಿಚ್ಚು, ಉದ್ಯೋಗದಿಂದುಂಟಾದ ಬಳಲಿಕೆ, ಒಣಗಿದಮಾಂಸ, ಕ್ಷಾರದ್ರವ್ಯ, ಬಹಳವಾದ ಅಜೀರ್ಣ, ವಿಷಮಾನ್ನ ಭೋಜನ ಇವುಗಳಿಂದಲೂ ಶರತ್ಕಾಲದಿಂದಲೂ ಪಿತ್ತಪ್ರಕೋಪವಹುದು.

ಪಿತ್ತಶಮನದ್ರವ್ಯ:—ಕಹಿ, ಸಿಹಿ, ಒಗರು, ಶೈತ್ಯವಾದಘಾಳಿ, ನೆಳಲು, ರಾತ್ರಿಕಾಲದಲ್ಲಿ ಬೀಸಿಕೊಂಬುದು, ಬೆಳದಿಂಗಳು, ನೆಲಮಾಳಿಗೆ, ಜಲಸೂತ್ರ, ಮೋಡೆ, ಸ್ತ್ರೀಯರ ಅಂಗಸಂಗ, ತುಪ್ಪ, ಹಾಲು, ವಿರೇಕ, ದುಷ್ಟವಾದ ರಕ್ತದ ಮೋಕ್ಷಣ, ಗಂಧಾನುಲೇಪನ, ಶೀತಳವಾದ ಪಾನಾಹಾರ ವಿಹಾರ ಇವುಗಳೆಲ್ಲ ಪಿತ್ತಶಮನದ್ರವ್ಯಂಗಳು.

ಶ್ಲೇಷ್ಮಪ್ರಕೋಪಕರ ದ್ರವ್ಯ:—ವಸಂತಕಾಲದೊಳು ಹಗಲುನಿದ್ರೆ, ಮಧುರಾಹಾರ, ಶೈತ್ಯ, ಮೀನಮಾಂಸ, ಗುರ್ವಾಹಾರ, ಹುಳಿ, ಸ್ನಿಗ್ಧಾಹಾರ, ಎಳ್ಳು, ಕಬ್ಬಿನಹಾಲು ಮೊದಲಾದ ವಸ್ತುಗಳು, ಹಾಲುಮೊಸರು ಮೊದಲಾದ ಪಯೋವಸ್ತುಗಳು, ಕಟ್ಟಿದ ಅನ್ನ, ಉಪ್ಪುನೀರು, ಪಾನದ್ರವ್ಯ, ಕಜ್ಜಾಯ ಇವುಗಳಿಂದಲೂ ಶ್ಲೇಷ್ಮಪ್ರಕೋಪವೆಂದರಿವುದು.

ಶ್ಲೇಷ್ಮಶಮನೋಪಾಯಗಳು:—ರೂಕ್ಷ, ಕ್ಷಾರ, ಒಗರು, ಕಹಿ, ಖಾರ ಇವುಗಳು ಸೇರಿದ ಆಹಾರ, ಸಂಚಾರ, ಕೇಕರಿಸಿ ಉಗುಳೋಣ, ಸ್ತ್ರೀಸಂಗ, ದಾರಿನಡೆಯೋಣ, ಬಾಹುಯುದ್ಧ, ನಿದ್ರೆತಡೆಯೋಣ, ವನಕ್ರೀಡೆ, ಕಾಲನ್ನು ತಿಕ್ಕಿಸಿಕೊಳ್ಳೋಣ, ಧೂಮಪಾನ, ಮಧುರಾಹಾರ, ನಸ್ಯ, ವಮನ, ಸೇಕ, ಉಪವಾಸ ಮೊದಲಾದ ಪಾನಾಹಾರ ವಿಹಾರಗಳೆಂಬ ಔಷಧಗಳಿಂದ ಅತ್ಯುಗ್ರವಾದ ಶ್ಲೇಷ್ಮ ಶಮನವಹುದು.

ಔಷಧಪ್ರಮಾಣ:—ಈ ಗ್ರಂಥದಲ್ಲಿರುವ ಯೋಗಗಳಲ್ಲಿ ಕೆಲವುಕಡೆ ಮಾತ್ರೆಯ ಪ್ರಮಾಣವನ್ನು ಹೇಳಲ್ಪಟ್ಟಿದೆ. ಕೆಲವೆಡೆಗಳಲ್ಲಿ ಹೇಳಲ್ಪಟ್ಟಿಲ್ಲ. ಹೇಗಾದರೂ ಔಷಧವನ್ನು ಪ್ರಯೋಗಿಸುವಾಗ ಕಾಲ, ಜಠರಾಗ್ನಿ, ವಯಸ್ಸು, ಬಲ, ಸ್ವಭಾವ, ದೋಷವು, ದೇಶವು ಇವುಗಳನ್ನು ಚೆನ್ನಾಗಿ ಆಲೋಚಿಸಿ ತತ್ತದನುಕೂಲವಾದ ಪ್ರಮಾಣಗಳುಳ್ಳ ಮಾತ್ರೆಗಳನ್ನು ಪ್ರಯೋಗಿಸಬೇಕು.

ಔಷಧ ಯುಕ್ತಾಯುಕ್ತ ವಿಚಾರ:—ಅಮೃತಬಳ್ಳಿ, ಕೊಡಸಿಗೆ ಬೇರಿನ ಬೊಬ್ಬಡೆ, ಆಡುಸೋಗೆ, ನೆಲಕುಂಬಳ, ಮಜ್ಜಿಗೆಗಡ್ಡೆ, ಹಿರೇಮದ್ದಿನಗಡ್ಡೆ, ಮುಳ್ಳುಗೋರಂಟಿ, ಹಾವುನಂಜಿನಸೊಪ್ಪು, ಕಳ್ಳನಚಾರಿ, (ಪ್ರಸಾರಿಣೀಗಿಡ) ಇವುಗಳನ್ನು ಯಾವಾಗಲೂ ಹಸಿಯಾದವುಗಳನ್ನೇ ಉಪಯೋಗಿಸಬೇಕು. ಇಂತವುಗಳನ್ನು ಪ್ರಯೋಗಿಸುವಾಗ ಹಸಿಯಾಗಿರುವವುಗಳನ್ನೇ ಪ್ರಯೋಗಿಸಬೇಕೆಂಬ ನಿಯಮವಿರುವುದರಿಂದ ದ್ವಿಗುಣವಾಗಿ ಪ್ರಯೋಗಿಸಕೂಡದು.

ಚೂರ್ಣಾದಿ ಚಂದನಮಿಳಿತ ಲಕ್ಷಣವು:—ಚೂರ್ಣ, ಘೃತ, ತೈಲ, ಆಸವ, ಲೇಹ ಇವುಗಳಲ್ಲಿ ಗಂಧವನ್ನು ಸೇರಿಸಬೇಕಾದರೆ ಬಿಳೀಚಂದನವನ್ನೂ; ಕಷಾಯ, ಲೇಪನ ಇವುಗಳಲ್ಲಿ ರಕ್ತಚಂದನವನ್ನು ಸೇರಿಸಬೇಕೆಂದು ತಿಳಿಯುವುದು.

ಔಷಧ ವೀರ್ಯ ಹೀನಕಾಲವು:—ಔಷಧಗಳನ್ನು ಹಾಗೆಯೇ ಇಟ್ಟಿದ್ದರೆ ಸಂವತ್ಸರಾನಂತರ ಗುಣಹೀನಗಳಾಗುವುವು. ಚೂರ್ಣಗಳು ಎರಡು ತಿಂಗಳಾದ ನಂತರವೂ; ಮಾತ್ರೆಗಳು, ಲೇಹ್ಯಗಳು ಒಂದು ಸಂವತ್ಸರಾನಂತರವೂ, ಘೃತವು, ತೈಲವು ಮೊದಲಾದುವು ನಾಲ್ಕುತಿಂಗಳ ನಂತರವೂ ಗುಣಹೀನಗಳಾಗುವುವು. ಆಸವಗಳು, ಭಸ್ಮಗಳು, ರಸಾಯನಗಳು ಹಳೆಯುವಾದಷ್ಟೂ ಗುಣವತ್ತರವಾಗಿರುವುವು.

ಯಾವ ಔಷಧಗಣದಲ್ಲಾದರೂ ಹೇಳಲ್ಪಟ್ಟ ದ್ರವ್ಯವು ಪ್ರಕೃತರೋಗಕ್ಕೆ ಅಯುಕ್ತವಾದದ್ದಾದರೆ ಅಂತಹ ದ್ರವ್ಯವನ್ನು ತ್ಯಜಿಸಬೇಕು. ಹೇಳಲ್ಪಡದಿದ್ದರೂ ಯೋಗ್ಯವಾದ ದ್ರವ್ಯವನ್ನು ಗ್ರಹಿಸಬೇಕು. ಇದು ಅನುಭವವುಂಟಾಗಿ ಚಿಕಿತ್ಸೆಮಾಡುವ ವೈದ್ಯನ ಅಧೀನವಾಗಿರುತ್ತದೆ.

ಓಷಧಿ ಗ್ರಹಣವಿಧಿ:—ಆಲಮೊದಲಾದವುಗಳಿಂದ ಬೊಬ್ಬಡಿಯನ್ನೂ, ಗೇರು ಗೊಬ್ಬಳಿಗಳಲ್ಲಿ ಇವುಗಳಲ್ಲಿರುವ ಸಾರವನ್ನೂ, ತಾಳೀಸಮರ ಮೊದಲಾದವುಗಳಿಂದ ಎಲೆಗಳನ್ನೂ; ಅಳಲೆ, ತಾರೆ, ನೆಲ್ಲಿ, ಅಡಿಕೆ, ಯಳಚಿ ಮೊದಲಾದುವುಗಳಿಂದ ಕಾಯಿಗಳನ್ನೂ; ಧಾತಕೀ, ಮುತ್ತುಗ, ಇಪ್ಪೆ, ಗುಲಾಬಿ ಮೊದಲಾದುವುಗಳಿಂದ ಹೂವುಗಳನ್ನೂ; ಎಕ್ಕದಗಿಡ, ಮುಂಡಗಳ್ಳಿ ಮೊದಲಾದವುಗಳಿಂದ ಹಾಲನ್ನೂ ಗ್ರಹಿಸತಕ್ಕದ್ದು.

# ಆರನೆಯ ಅಧ್ಯಾಯ.

## ಚಿಕಿತ್ಸಾ ಸೂಚನೆ.

ಔಷಧ ಸೇವನೆಗೆ ಪ್ರಥಮಕಾಲ—ಪಿತ್ಥ ಪ್ರಕೋಪವನ್ನು ನಿವಾರಿಸಲು ವಿರೇಚನೌಷಧವನ್ನು ಸೇವಿಷುವದಕ್ಕೂ, ಶ್ಲೇಷ್ಮ ಪ್ರಕೋಪವನ್ನು ಪರಿಹರಿಸುವುದಕ್ಕೆ ವಮನೌಷಧವನ್ನು ಗ್ರಹಿಸುವುದಕ್ಕೂ, ವಾತದೋಷದಿಂದ ಶರೀರವು ವೃದ್ಧಿಹೊಂದಿದಾಗ ಶಮನಾರ್ಥವಾಗಿ ಲೇಖನೌಷಧವನ್ನು ಸೇವಿಸುವುದಕ್ಕೂ ಪ್ರಾತಃಕಾಲವು ಶ್ರೇಷ್ಠವಾಗಿರುತ್ತೆ.

ದ್ವಿತೀಯಕಾಲ—ಅಪಾನವಾತವು ಪ್ರಕೋಪಿಸಿದಾಗ ಭೋಜನಮಾಡುವುದಕ್ಕೆ ಮುಂಚಿತವಾಗಿಯೂ, ಅರೋಚಕದಲ್ಲಿ ರುಚಿಸುವ ಚಿತ್ರಪದಾರ್ಥಗಳನ್ನು ಭುಜಿಸಿದಾಗ ಸಮಾನವಾತವು ಪ್ರಕೋಪಿಸಿ ಅಗ್ನಿಮಾಂದ್ಯವುಂಟಾದರೆ ಅಗ್ನಿದೀಪನೆಗಾಗಿ ಭೋಜನಮಧ್ಯದಲ್ಲಿಯೂ, ವ್ಯಾನವಾತವು ಪ್ರಕೋಪಿಸಿದಾಗ ಭೋಜನಾನಂತರವೂ; ಬಿಕ್ಕಳಿಕೆ, ಆಕ್ಷೇಪಕವಾತವು ಇವುಗಳಲ್ಲಿ ಭೋಜನಮಾಡುವುದಕ್ಕೆ ಮುಂಚೆಯೂ, ಭೋಜನಾನಂತರವೂ ಔಷಧವನ್ನು ಸೇವಿಸಬೇಕು. ಇದು ಎರಡನೆಕಾಲವಾದ ಮಧ್ಯಾಹ್ನಕಾಲವು.

ತೃತೀಯಕಾಲ—ಕಂಠಗತವಾದ ಉದಾನವಾಯುವು ಪ್ರಕೋಪಿಸುವುದರಿಂದುಂಟಾಗುವ ಸ್ವರಭಂಗಾದಿ ರೋಗಗಳಲ್ಲಿ ಸಾಯಂಕಾಲ ಭೋಜನದ ಮಧ್ಯದಲ್ಲಿಯೂ, ಹೃದಯವ್ಯಾಪ್ತವಾದ ಪ್ರಾಣವಾಯುವು ಪ್ರಕೋಪಿಸಿದಾಗ ಸಾಯಂಕಾಲ ಭೋಜನಾನಂತರವೂ ಔಷಧವನ್ನು ಸೇವಿಸಬೇಕು. ಇದು ಮೂರನೆಯ ಸಾಯಂಕಾಲವು.

ಚತುರ್ಥಕಾಲ—ದಾಹ, ವಾಂತಿ, ಬಿಕ್ಕಳಿಕೆ, ಶ್ವಾಸ, ವಿಷದೋಷ ಮೊದಲಾದ ರೋಗಗಳಲ್ಲಿ ಹಲವುಬಾರಿ ಔಷಧವನ್ನು ಸೇವಿಸಬೇಕು. ಇದು ಚತುರ್ಥಕಾಲವೆನ್ನಲ್ಪಡುವುದು.

ಪಂಚಮಕಾಲ—ಕರ್ಣರೋಗ, ನೇತ್ರರೋಗ, ಮುಖರೋಗ, ನಾಸಾರೋಗ ಮೊದಲಾದ ಊರ್ಧ್ವಜತ್ರುರೋಗಗಳಲ್ಲಿಯೂ ಪ್ರಕೋಪಿಸುವ ವಾತಾದಿ ದೋಷಗಳನ್ನು ಶಾಂತಿಪಡಿಸುವ ಲೇಖನ ಕರ್ಮದಲ್ಲಿಯೂ, ಕ್ಷೀಣಿಸಿದ ಧಾತುಗಳನ್ನು ವೃದ್ಧಿಹೊಂದಿಸುವ ಬೃಂಹಣ ಕರ್ಮದಲ್ಲಿಯೂ, ಪಾಚನೌಷಧಗಳನ್ನು ಶಮನೌಷಧಗಳನ್ನು ರಾತ್ರಿ ಸೇವಿಸಬೇಕು.

ಶೀಘ್ರಪ್ರತಿಕಾರ್ಯ—ಸ್ಥಾವಿರವಿಷ, ಜಂಗಮವಿಷ, ಕೃತ್ರಿಮವಿಷ, ಕುಷ್ಠ, ಅಪಸ್ಮಾರ, ಬೆರಗು (ಅಂದರೆ ಧನುರ್ವಾಯು), ಮಹೋದರ, ಕಾಮಾಲೆ ಇವುಗಳಿಗೆ ರೋಗಾರಂಭದಲ್ಲೇ ದಿನಜಾಪ್ಯವಮಾಡದೆ ಪ್ರತೀಕಾರವಂ ಮಾಡಬೇಕು. ದಿನಜಾಪ್ಯವಮಾಡಿದರೆ ಅಸಾಧ್ಯವಹವು.

ಪಂಚಕರ್ಮಗಳಂ ಪ್ರಯೋಗಿಸುವ ವಿಧಿಯೆಂತೆಂದೊಡೆ—ವಾತರೋಗಗಳಲ್ಲಿ ತೈಲ ಮುಂತಾದವುಗಳಿಂದ ಲೇಪನ, ಪಾನ ಮುಂತಾದ ಸ್ನೇಹ ವಿಧಿಗಳನ್ನೂ, ಕುಂಭಶಾಕ ಮುಂತಾದುದರಿಂದ ಸ್ವೇದನವಿಧಿಯನ್ನೂ ಪ್ರಯೋಗಿಸುವುದು. ಪಿತ್ತರೋಗಗಳಲ್ಲಿ ವಿರೇಚನವಿಧಿಯನ್ನು ಪ್ರಯೋಗಿಸುವುದು. ಶ್ಲೇಷ್ಮರೋಗದಲ್ಲಿ ವಮನವಿಧಿಯನ್ನು ಪ್ರಯೋಗಿಸುವುದು. ಸನ್ನಿಪಾತರೋಗಗಳಲ್ಲಿ ನಸ್ಯವಿಧಿಯನ್ನು ಪ್ರಯೋಗಿಸುವುದು.

ಈ ಪಂಚಕರ್ಮಗಳಿಗೆ ಕಾಲಭೇದವೆಂತೆನೆ—ಅಂಜನ, ನಸ್ಯ, ವಮನಗಳೆಂಬ ಈ ಮೂರು ವಿಧಿಯನ್ನೂ ಪ್ರಾತಃಕಾಲದಲ್ಲಿಯೇ ಮಾಡಿಸುವುದು. ಸೇಕವನ್ನು ಮಧ್ಯಾಹ್ನಕಾಲದಲ್ಲಿ ಮಾಡುವುದು, ವಸ್ತಿಕರ್ಮವನ್ನು ಸಾಯಂಕಾಲದಲ್ಲಿ ಮಾಡುವುದು.

ವಮನಯೋಗ್ಯರು—ಮಂದಾಗ್ನಿಯವರು, ಛಳಿಜ್ವರದವರು, ಶಿರೋರೋಗದವರು, ಮುಖರೋಗದವರು, ಶೋಭೆಯರೋಗದವರು, ಪ್ರಸೇಕ ರೋಗದವರು, ಶ್ವಾಸರೋಗದವರು, ಉನ್ಮಾದರೋಗದವರು, ಪೈತ್ಯಜ್ವರದವರು, ಶ್ಲೇಷ್ಮರೋಗದವರು, ಪೀನಸರೋಗದವರು, ಪ್ರಮೇಹಕುಷ್ಠರೋಗದವರು, ಮೆಟರುಗಂಟಿನ ರೋಗದವರು, ವಿಸರ್ಪ ರೋಗದವರು, ವಿಷೂಚಿರೋಗದವರು, ವಿಷದರೋಗದವರು ಇವರಿಷ್ಟೂ ವಮನಯೋಗ್ಯರೆಂದರಿವುದು.

ವಮನವರ್ಜಿತರು—(ವಮನ ಅಯೋಗ್ಯರು) ಕಜ್ಜಿಯವರಲ್ಲಿ, ಮಹೋದರದವರಲ್ಲಿ, ಗುಲ್ಮದವರಲ್ಲಿ, ಬಾಯಾರಿಕೆಯಿದ್ದವರಲ್ಲಿ, ಉದಾವರ್ತರೋಗದವರಲ್ಲಿ, ಗರ್ಭಿಣಿಯವರಲ್ಲಿ, ವಾತವ್ಯಾಧಿ ಇರುವವರಲ್ಲಿ, ಕಾಮಾಲೆ ಇರುವವರಲ್ಲಿ, ಪಾಂಡುರೋಗವಿರುವವರಲ್ಲಿ, ಹೃದಯರೋಗದವರು, ನೇತ್ರ ರೋಗದವರು,

ಪಾರ್ಶ್ವವಾತದವರು, ಕೃಶದೇಹದವರು ಕ್ಷಯ ವ್ಯಾಧಿಯವರು ಇಷ್ಟು ವಿಧವಾದ ಕಾಯಿಲೆಯವರಲ್ಲಿ ವಮನಕ್ರಿಯೆ ಮಾಡಲಾಗದು.

ವಮನ ಗುಣ—ವಮನದಿಂದ ಶ್ಲೇಷ್ಮರೋಗವೂ ಸರ್ವಶೀತಗಳೂ ಪರಿಹರಿಸಲ್ಪಡುವುದು. ವಮನಕ್ರಿಯೆ ಮಾಡುವುದರಿಂದ ಶೀಘ್ರವಾಗಿ ಅಗ್ನಿಬಲವುಂಟಾಗುವುದು. ಶ್ಲೇಷ್ಮದಿಂದುಂಟಾದ ದೋಷವೂ, ಪಿತ್ತದಿಂದುಂಟಾದ ದೋಷವೂ ವಿಷದೋಷಗಳು ಶಮನವಾಗುವುದು.

ವಿರೇಚನಕ್ಕೆ ಯೋಗ್ಯರು—ಅಪಸ್ಮಾರರೋಗದಲ್ಲಿಯೂ, ಮಹೋದರದಲ್ಲಿಯೂ, ವಾತವ್ಯಾಧಿಯಲ್ಲಿಯೂ, ಪಿತ್ತದಲ್ಲಿಯೂ, ನೇತ್ರರೋಗದಲ್ಲಿಯೂ, ಮಲಬದ್ಧವಾಗಿದ್ದವರಲ್ಲಿಯೂ, ಶಿರೋರೋಗದಲ್ಲಿಯೂ, ಶೋಭೆಯಲ್ಲಿಯೂ, ಕುಷ್ಠವ್ಯಾಧಿಯಲ್ಲಿಯೂ, ಜೀರ್ಣಜ್ವರದಲ್ಲಿಯೂ, ಅರೋಚಕದಲ್ಲಿಯೂ, ಕುಕ್ಷಿರೋಗದಲ್ಲಿಯೂ, ಇಲಿಯವಿಷದಲ್ಲಿಯೂ, ವಿಸರ್ಪವ್ಯಾಧಿಯಲ್ಲಿಯೂ, ಪ್ರಮೇಹದಲ್ಲಿಯೂ, ಮೂಲವ್ಯಾಧಿಯಲ್ಲಿಯೂ, ಪಾಂಡುವ್ಯಾಧಿಯಲ್ಲಿಯೂ, ಇವಿಷ್ಟರಲ್ಲಿ ವಿರೇಚನ ಮಾಡಿಸಬಹುದು.

ವಿರೇಚನಕ್ಕೆ ಅಯೋಗ್ಯರು—ನವಜ್ವರದಲ್ಲಿಯೂ, ಸನ್ನಿವಾತದಲ್ಲಿಯೂ, ಗರ್ಭಿಣಿಯರಲ್ಲಿಯೂ, ವೃದ್ಧರಲ್ಲಿಯೂ, ರೋಗಶೇಷವೆಂಬ ಅಜೀರ್ಣದಲ್ಲಿಯೂ, ಗ್ರಹಣಿಯಲ್ಲಿಯೂ, ಬಲರಹಿತವಾದವರಲ್ಲಿಯೂ, ಇವಿಷ್ಟರಲ್ಲಿಯೂ ವಿರೇಚನ ಮಾಡಿಸಲಾಗದು.

ವಿರೇಚನ ಗುಣ—ವಿರೇಚನದಿಂದ ಬುದ್ಧಿಪ್ರಸನ್ನವಹುದು. ಪಂಚೇಂದ್ರಿಯಗಳು ಬಲವಹುದು. ಸಪ್ತಧಾತುಗಳೂ ಸ್ಥಿರಪಡುವುವು. ಅಗ್ನಿಬಲವುಂಟಾಗುವುದು. ವಾತ, ಪಿತ್ತ, ಶ್ಲೇಷ್ಮ ರೋಗಗಳು ಶಮನವಾಗುವುವು.

ಅಂಜನ ಯೋಗ್ಯರು—ಬೇರೊಂದು ರೋಗವಿಲ್ಲದೆ ಶುದ್ಧದೇಹವುಳ್ಳವನ ನೇತ್ರರೋಗದಲ್ಲಿಯೂ, ಹೊಸದಾದ ನೇತ್ರರೋಗವಲ್ಲದೆ ಪಕ್ವವಾಗಿರುವ ನೇತ್ರರೋಗದಲ್ಲಿಯೂ, ಸ್ವಲ್ಪ ಬಾವು ಉಂಟಾದ ನೇತ್ರರೋಗದಲ್ಲಿಯೂ, ಅತ್ಯಂತ ತಿಮಿರಗಳುಂಟಾದ ಕಣ್ಣುಗಳಲ್ಲಿಯೂ, ಕನ್ನಡಿ ಬಹುಕದಡಿಯಿದ್ದ ಕಣ್ಣಿನಲ್ಲಿಯೂ, ಅಲ್ಪವಾದ ಛಾಯೆಯುಳ್ಳ ಕಣ್ಣಿನಲ್ಲಿಯೂ, ಕೆಂಪಾದ ಕಣ್ಣಿನಲ್ಲಿಯೂ, ಹೆಚ್ಚಾಗಿ ಚಾರುಗಟ್ಟಿದ ಕಣ್ಣಿನಲ್ಲಿಯೂ ಅಂಜನಕ್ರಿಯೆ ಪ್ರಯೋಗಿಸುವುದು.

ಅಂಜನ ವರ್ಜದವರು—ಬಹಳವಾಗಿ ಭಯಪಟ್ಟವನು, ವಮನ ಮಾಡಿಕೊಂಡವನು, ವಿರೇಚನಕ್ಕೆ ಔಷಧವಂ ತೆಗೆದುಕೊಂಡವನು, ಅತ್ಯಂತ ಶೀತಸ್ವಭಾವ ದೇಹವುಳ್ಳವನು, ಬಹಳವಾಗಿ ಕೋಪವಂ ತಾಳಿದವನು, ಹೊಸ

ದಾದ ಜ್ವರವೇಗವುಳ್ಳವನು, ಬಳಲಿದ ಕಣ್ಣುಗಳುಳ್ಳವನು, ಬಹಳವಾದ ಮಂಡೆನೋವು ಉಂಟಾದವನು, ಬಹುದುಃಖವುಂಟಾದವನು, ರಾತ್ರಿ ಜಾಗರಣೆ ಮಾಡಿದವನು, ಒಂದುವೇಳೆಯೂ ಸೂರ್ಯನ ಕಿರಣಗಳಂ ಕಾಣದವನು, ಆಗ ತಾನೆ ಅಭ್ಯಂಜನ ಸ್ನಾನವಮಾಡಿದವನು, ಧೂಮಪಾನ, ಮದ್ಯಪಾನಗಳಂ ಮಾಡಿದವನು, ಅಜೀರ್ಣವುಳ್ಳವನು, ಅಗ್ನಿಯಿಂದಲೂ, ಸೂರ್ಯನಿಂದಲೂ ಸಂತಾಪ ಪಟ್ಟಿರುವವನು, ಹಗಲು ನಿದ್ರೆಗೈದವನು, ಬಹಳ ಬಾಯಾರಿ ಇರುವವನು, ಚಳಿ ಜ್ವರ ಬಂದು ಅತ್ಯಂತ ಕಂಗೆಟ್ಟಿರುವವನು ಇವರುಗಳಿಗೆ ಅಂಜನಕ್ರಿಯೆಯನ್ನು ಮಾಡಲಾಗದು.

ಅಂಜನ ಗುಣ—ಅಂಜನವನ್ನು ಉಪಯೋಗಿಸುವುದರಿಂದ ಮೂರ್ಛೆ, ಭ್ರಮೆ, ಶೀತವಾತ, ಅಪಸ್ಮಾರ, ಉನ್ಮಾದ, ಅಭಿಘಾತ, ದೋಷತ್ರಯದಿಂದ ಹುಟ್ಟುವ ಸನ್ನಿವಾತ, ತಿಮಿರ, ನೀರು ಸುರಿಯೋಣ, ಮಂಡೆಯ ನೋವು, ಕಾಸ ಇವಷ್ಟನ್ನೂ ಪರಿಹರಿಸುವುದು. ದೃಷ್ಟಿಕಾಂತಿಯನ್ನುಂಟುಮಾಡುವುದು.

ಗಂಡೂಷ ಗುಣ—ಸಕಲವಾದ ಕಂಠರೋಗವನ್ನೂ, ಶ್ಲೇಷ್ಮರೋಗವನ್ನೂ, ಅಗ್ನಿಮಾಂದ್ಯವನ್ನೂ, ತೃಷೆಯನ್ನೂ, ಅರೋಚಕವನ್ನೂ, ಪೀನಸವನ್ನೂ, ಜ್ವರವನ್ನೂ, ಶ್ವಾಸವನ್ನೂ, ಶಿರೋವಾಯುವನ್ನೂ, ಕಣ್ಣುನೋವು, ಕಿವಿನೋವನ್ನೂ, ಕಪಾಲಶೂಲೆಯನ್ನೂ, ಕೆಮ್ಮನ್ನೂ, ಕಟವಾಯೊಳುಂಟಾದ ರೋಗವನ್ನೂ, ಸ್ವರಭಂಗವನ್ನೂ, ಹಲ್ಲುಕುರುವನ್ನೂ, ಹಲ್ಲುನೋವನ್ನೂ, ದಂತ ಚಲನ, ದವಡೆಯೊಳಾದ ವ್ರಣವಿದ್ರಧಿ ಇವೇ ಮುಂತಾದ ರೋಗಗಳಂ ಪರಿಹರಿಸಿ ದೃಷ್ಟಿಪ್ರಸನ್ನತೆಯನ್ನುಂಟುಮಾಡುವುದು.

ಧೂಮಪಾನ ಗುಣ—ಧೂಮಪಾನವಮಾಡಲು, ಶ್ವಾಸ, ಖಾಸ, ಮಲ ಬದ್ಧ, ಶ್ಲೇಷ್ಮವಿಷ, ಮೇಹ, ಸ್ವರಭಂಗ, ಅಗ್ನಿಮಾಂದ್ಯ, ಉದರವ್ಯಾಧಿ, ಜಲ ದೋಷ, ಪಾಂಡುರೋಗ, ಕಜ್ಜಿ, ದಂತಚಲನ, ದಂತಶೂಲೆ ಇವಿಷ್ಟೂ ಗುಣ ವಹುದು.

ನಸ್ಯದ ಗುಣ—ನಸ್ಯವಂ ಮಾಡಲು ದಾಡಾಬಂಧ, ಕಪೋಲಸ್ತಂಬ, ಆರ್ದಿತವಾತ, ಮಂಡೆಬೇನೆ, ನಡುಕ, ಮಂಡೆಕೂದಲು ಉದರುವುದು , ಮೂಗು, ಕಣ್ಣು, ಕಿವಿ ಇವುಗಳ ಬಂಧನೆ, ಪೀನಸ, ಜರೆ, ಸ್ವರಭಂಗ ಇವಿಷ್ಟನ್ನೂ ಪರಿಹರಿಸುವುದು. ಮಂಡೆಕೂದಲೂ ಗಡ್ಡೆ ಬವರಿಯೂ ವರ್ಧಿಸಿ ಕಾಂತಿಯುಂಟಾಗುವುದು, ಪಂಚೇಂದ್ರಿಯುಗಳು ಪಟುತರವಹುವು. ಸಂದುಸ್ನಾಯು ನರ ಗಳಿಗೆ ಬಲವುಂಟಾಗುವುದು.



## ಏಳನೆಯ ಅಧ್ಯಾಯ.

### ಸಂಕೇತ ನಾಮಗಳು.

ತ್ರಿಫಲೆ—ಅಳಲೇಕಾಯಿ ೧ ಭಾಗ, ತಾರೇಕಾಯಿ ೨ ಭಾಗ, ನೆಲ್ಲೀಕಾಯಿ ೪ ಭಾಗ ಇವು ಮೂರನ್ನು ಸೇರಿಸಿದರೆ ತ್ರಿಫಲೆ ಅನ್ನಿಸಿಕೊಳ್ಳುವದು. ಇದರಿಂದ ಗುಣ—ಶೋಭೆಯನ್ನೂ, ಮೇಹಜಾಡ್ಯವನ್ನೂ, ವಿಷಮಜ್ವರಗಳನ್ನೂ ಪರಿಹರಿಸುವುದು. ಮತ್ತು ಅಗ್ನಿದೀಪ್ತಿಯನ್ನುಂಟುಮಾಡುವದು, ಕಫವನ್ನೂ ಪಿತ್ತವನ್ನೂ ಹೊಡೆಯುವುದು, ಚರ್ಮರೋಗವನ್ನು ನಾಶಮಾಡುವುದು, ರಸಾದಿಧಾತುಗಳನ್ನು ಹೆಚ್ಚಿಸುವುದು. ತುಪ್ಪ, ಜೇನುತುಪ್ಪ ಇವುಗಳೊಡನೆ ಸೇವಿಸಿದರೆ ನೇತ್ರರೋಗಗಳನ್ನೆಲ್ಲ ಪರಿಹರಿಸುವುದು.

ತ್ರಿಕಟುಕ—ಶೊಂಠಿ, ಹಿಪ್ಪಲಿ, ಮೆಣಸು ಇವುಮೂರು ಸಮಭಾಗವಾಗಿ ಸೇರಿಸಿದರ ತ್ರಿಕಟುಕವೆಂದೂ, ತ್ರ್ಯೂಷಣವೆಂದೂ, ವ್ಯೋಷವೆಂದೂ, ಕಟುತ್ರಿಕವೆಂದೂ ಹೇಳಲ್ಪಡುವುದು. ಅಗ್ನಿಶಕ್ತಿಯನ್ನು ಹೆಚ್ಚಿಸುವುದು, ರುಚಿಕೊಡುವುದು; ವಾಯು, ಕಫ, ಅಗ್ನಿಮಾಂದ್ಯ, ಶೂಲೆ ಇವುಗಳನ್ನೆಲ್ಲ ಪರಿಹರಿಸುವುದು.

ಚತುರೂಷಣ—ಮೇಲ್ಕಂಡ ತ್ರಿಕಟುಕಕ್ಕೆ ಮೋಡಿಯನ್ನು ಸೇರಿಸಿದರೆ ಚತುರೂಷಣವೆನ್ನಿಸಿಕೊಳ್ಳುವುದು. ಇದರಿಂದ ಶ್ಲೇಷ್ಮ, ಅಗ್ನಿಮಾಂದ್ಯ, ಮಲಮೂತ್ರಬಂಧ, ಅರುಚಿ, ನೆಗಡಿ, ಕೆಮ್ಮು ಇವುಗಳನ್ನು ಪರಿಹಾರವಾಗುವುದು.

ತ್ರಿಜಾತಕ—ಲವಂಗಚಕ್ಕೆ, ಯಾಲಕ್ಕಿ, ಲವಂಗಪತ್ರೆ ಇವುಮೂರು ತ್ರಿಸುಗಂಧಿಯೆಂದೂ, ತ್ರಿಜಾತಕವೆಂದೂ ಹೇಳಲ್ಪಡುವುದು.

ಚಾತುರ್ಜಾತಕ—ಯಾಲಕ್ಕಿ, ಲವಂಗಪತ್ರೆ, ಲವಂಗಚಕ್ಕೆ, ನಾಗಕೇಸರಿ ಇವು ನಾಲ್ಕು ಕೂಡಿದರೆ ಚಾತುರ್ಜಾತಕವೆನ್ನಲ್ಪಡುವುದು. ಇದರಿಂದ ಗುಣ—ಸ್ವರಭೇದ, ಶ್ವಾಸ, ಧ್ವನಿಯೊಡೆದಿರುವುದು, ಉಬ್ಬಸ, ಕೆಮ್ಮು, ಬಾಯಿನಾತ ಇವುಗಳನ್ನು ಹೊಡೆಯುವುದು. ವೀರ್ಯವರ್ಧಕವು, ಬಲಕೊಡುವುದು, ರಸಾದಿಧಾತುಗಳನ್ನು ಹೆಚ್ಚಿಸುವುದು.

ಪಂಚಕೋಲ—ಹಿಪ್ಪಲಿ, ಮೋಡಿ, ಚವ್ಯ, ಚಿತ್ರಮೂಲ, ಶುಂಠಿ ಈ ಐದು ದ್ರವ್ಯಗಳು ಸೇರಿದರೆ ಪಂಚಕೋಲವೆನ್ನಿಸುವುದು. ಇದರಿಂದ ಗುಣ—ವಾತ, ಪಿತ್ತ, ಕಫ ಇವುಮೂರನ್ನು ಗುಣಪಡಿಸುವುದು. ರುಚಿಕರವು, ಅಗ್ನಿಶಕ್ತಿಯನ್ನು ಹೆಚ್ಚಿಸುವುದಲ್ಲದೆ ಆಮಾಂಶವನ್ನು ಪಚನಮಾಡುವುದು. ಧ್ವನಿದೋಷವನ್ನೂ, ಮೇದೋದೋಷವನ್ನೂ ಪರಿಹರಿಸುವುದು. ಶೂಲೆ, ಗುಲ್ಮರೋಗ ಇವುಗಳನ್ನು ಸಹ ಗುಣಪಡಿಸುವುದು.

ಷಡೂಷಣ—ಮೆಣಸು, ಹಿಪ್ಪಲಿ, ಮೋಡಿ, ಚವ್ಯ, ಚಿತ್ರಮೂಲ, ಶುಂಠಿ ಈ ಆರುದ್ರವ್ಯಗಳು ಸೇರಿದರೆ ಷಡೂಷಣವೆಂದು ಹೇಳಲ್ಪಡುವುದು. ಇದು ಪಂಚಕೋಲದ ಗುಣಗಳನ್ನುಳ್ಳದ್ದಾಗಿ ಮತ್ತಷ್ಟು ಅಗ್ನಿಶಕ್ತಿಯನ್ನು ಹೆಚ್ಚಿಸುವುದು.

ದಶಮೂಲ—ಬಿಲ್ಪತ್ರೆ, ನರುವಲು, ಹೆಮ್ಮರ, ಶಿವನಿ, ಪಾದರಿ, ಒಂದೆಲೆಹೊನ್ನೆ, ನೆಗ್ಗಿಲು, ಮೂರೆಲೆಹೊನ್ನೆ, ಹೆಗ್ಗುಳ್ಳ, ನೆಲಗುಳ್ಳ ಇವು ಹತ್ತುಕೂಡಿದರೆ ದಶಮೂಲವೆನ್ನಿಸಿಕೊಳ್ಳುವುದು. ಇದು ಉಬ್ಬಸ, ಸನ್ನಿಪಾತ, ಜ್ವರ ಇವುಗಳನ್ನು ಗುಣಪಡಿಸುವುದು.

ಲಘುಪಂಚಮೂಲ—ಒಂದೆಲೆಹೊನ್ನೆ, ಮೂದೆಲೆಹೊನ್ನೆ, ಹೆಗ್ಗುಳ್ಳ, ನೆಲಗುಳ್ಳ, ನೆಗ್ಗಿಲು ಇವು ಐದುಸೇರಿದರೆ ಲಘುಪಂಚಮೂಲವೆನ್ನಿಸಿಕೊಳ್ಳುವುದು.

ಮಹಾಪಂಚಮೂಲ—ಬಿಲ್ಪತ್ರೆ, ನರುವಲು, ಹೆಮ್ಮರ, ಸಿವನಿ, ಪಾದರಿ ಇವು ಐದುನೇರಿಸಿದರೆ ಮಹಾಪಂಚಮೂಲವೆನ್ನಿಸಿಕೊಳ್ಳುವುದು. ಮೇಲ್ಕಂಡ ಲಘುಪಂಚಮೂಲವೂ, ಮಹಾಪಂಚಮೂಲದೊಡನೆ ಸೇರಿಸಿದರೆ ದಶಮೂಲವೆನ್ನಿಸಿಕೊಳ್ಳುವುದು.

ಪಂಚಮೂಲದಗುಣ—ಪಂಚಮೂಲವು ವಾತಾದಿ ದೋಷತ್ರಯವನ್ನು ಹೊಡೆವುದು.

ಮಧ್ಯಮ ಪಂಚಮೂಲ—ಚಿಟ್ಟಾಮುಟ್ಟಿ, ಬಿಳೀಕೊಮ್ಮೆ, ಚಿಟ್ಟಿಹರಳು, ಕಾಡುಹೆಸರು, ಕಾಡುವುದ್ದು ಇವು ಐದು ಸೇರಿದರೆ ಮಧ್ಯಮ ಪಂಚಮೂಲವೆನ್ನಿಸಿಕೊಳ್ಳುವುದು. ಇದರ ಗುಣ—ಕಫವನ್ನೂ, ವಾಯುವನ್ನೂ, ಪರಿಹರಿಸುವುದು. ಇದು ಪಿತ್ತವನ್ನು ಹೆಚ್ಚಿಸುವುದಿಲ್ಲ, ಉತ್ತಮವಾದುದು.

ಪಂಚವಲ್ಕ—ಆಲ, ಅತ್ತಿ, ಅರಳಿ, ಬಸರಿ, ಹಬ್ಬೆ ಇವು ಐದು ಒಳನಾರುಗಳು ಪಂಚವಲ್ಕವೆಂದು ಹೇಳಲ್ಪಡುವುದು. ಇದರ ಗುಣ—ತಂಪು, ಮೈಗೆ ಒಳ್ಳೆಯ ಬಣ್ಣವನ್ನು ಕೊಡುವುದು; ಮೈ ಉರಿಯನ್ನೂ, ಬಾಯಾರಿಕೆಯನ್ನೂ ಪರಿಹರಿಸುವುದು. ಯೋನಿದೋಷವನ್ನೂ, ಶ್ಲೇಷ್ಮವನ್ನೂ, ಶೋಭೆಯನ್ನೂ ಹೋಗಲಾಡಿಸುವುದು.

ಪಂಚಭೃಂಗ—ದೇವತಾಳೆ, ಬನ್ನಿ, ಅತಿಬಜೆ, ಲಕ್ಕಿ, ಶಾಮುಕಂ ಇವು ಐದು ಪಂಚಭೃಂಗವೆನ್ನಿಸಿಕೊಳ್ಳುವುದು. ಇದು ರೋಗಪೀಡಿತರಿಗೆ ಸ್ನಾನಪಾನಗಳಿಗೆ ಯೋಗ್ಯವಾದುದು ಎಂದು ಹೇಳಲ್ಪಟ್ಟಿದೆ.

ಪಂಚಾಮ್ಲ—ಮಾದಲ, ನಿಂಬೆ, ಎಳಚಿಹಣ್ಣು, ಹುಣಿಸೇಹಣ್ಣು, ಹೇರಿಳೆಹಣ್ಣು, ಇವು ಐದು ಫಲ ಪಂಚಾಮ್ಲಕವೆಂದು ಹೇಳಲ್ಪಟ್ಟಿರುವುದು.

ಸಂತರ್ಪಣ—ದ್ರಾಕ್ಷಿ, ದಾಳಿಂಬದಹಣ್ಣು, ಖರ್ಜೂರ ಇವುಗಳೊಡನೆ ಕಿವುಚಲ್ಪಟ್ಟ ನೀರು ಸಕ್ಕರೆಯೊಡನೆ ಸೇರಿದುದಾಗಿ ಅರಳಹಿಟ್ಟು, ಜೇನುತುಪ್ಪ ಇವುಗಳೊಡನೆ ಕೂಡಿದ್ದು ಸಂತರ್ಪಣವೆಂದು ಹೇಳಲ್ಪಟ್ಟಿರುವುದು. ಇದರ ಗುಣ—ತಣ್ಣಗಿರುವುದು, ಕಣ್ಬೇನೆಗಳನ್ನು ಪರಿಹರಿಸುವುದು, ಬಲಕರವು, ರಸಾದಿ ಧಾತುಗಳನ್ನು ಹೆಚ್ಚಿಸುವುದು, ಹೃದಯಕ್ಕೆ ಹಿತವಾದುದು, ವೀರ್ಯವನ್ನು ಹೆಚ್ಚಿಸುವುದು.

ಯಕ್ಷಕರ್ದಮ—ಕೇಸರಿ, ಅಗಿಲು, ಪಚ್ಚಕರ್ಪೂರ, ಕಸ್ತೂರಿ, ಶ್ರೀಗಂಧ ಇವು ಐದು ಮಹಾ ಸುಗಂಧವೆಂದು ಯಕ್ಷಕರ್ದಮವೆಂದು ಹೇಳಲ್ಪಟ್ಟಿರುವುದು. ಇದರ ಗುಣ—ತಂಪು, ಚರ್ಮರೋಗವನ್ನು ಪರಿಹರಿಸುವುದು, ಒಳ್ಳೆಯ ಪರಿಮಳವುಳ್ಳದು, ಕಾಂತಿಯನ್ನು ಉಂಟುಮಾಡುವುದು, ತಲೇನೋವನ್ನೂ ವಿಷದೋಷವನ್ನೂ ಪರಿಹರಿಸುವುದು.

ಪಂಚಸುಗಂಧಿಕೆ ಅಥವಾ ಸುಗಂಧಿಪಂಚಕ—ಬಾಲಮೆಣಸು, ಅಡಕೆ, ಲವಂಗದಹುವ್ವ, ಜಾಕಾಯಿ, ಪಚ್ಚಕರ್ಪೂರ ಇವು ಐದು ಪಂಚಸುಗಂಧಿಕ ಅಥವಾ ಸುಗಂಧಿಪಂಚಕವೆನ್ನಿಸಿಕೊಳ್ಳುವುದು. ಇದರ ಗುಣ—ತಂಪು, ರಕ್ತಪಿತ್ತವನ್ನು ಪರಿಹರಿಸುವುದು ; ಬಾಯಸಾತವನ್ನು, ನೆಗಡಿಯನ್ನು, ಶ್ಲೇಷ್ಮರಕ್ತವನ್ನು ಪರಿಹರಿಸುವುದು.

ತ್ರಿಕ್ಷಾರ—ಸರ್ಜಕ್ಷಾರ, ಯವಕ್ಷಾರ, ಟಂಕಣಕ್ಷಾರ ಇವು ಮೂರು ಕ್ಷಾರತ್ರಯವಂದೂ, ತ್ರಿಕ್ಷಾರವೆಂದೂ ಹೇಳಲ್ಪಡುವುದು.

ಕ್ಷಾರಪಂಚಕ—ಮುತ್ತುಗ, ಎಳ್ಳುಕಡ್ಡಿ, ಮುಳ್ಳುಮುತ್ತುಗ ಇವುಗಳ ಕ್ಷಾರಗಳು ಸರ್ಜಿಕ್ಷಾರ, ಯವಕ್ಷಾರ ಇವು ಐದು ಕ್ಷಾರಪಂಚಕವೆಂದು ಹೇಳಲ್ಪಡುವುದು.

ಕ್ಷಾರಾಷ್ಟಕ—ಉತ್ತರಣೆ, ಮುತ್ತುಗ, ಎಕ್ಕ, ಎಳ್ಳುಕಡ್ಡಿ, ಮುಳ್ಳುಮುತ್ತುಗ, ಯವಾಗ್ರ (ಯವಧ್ಯಾನದ ಸೋಂಕು) ಇವುಗಳಿಂದ ಹುಟ್ಟಿದ ಕ್ಷಾರವು ಸರ್ಜಕ್ಷಾರ, ಟಂಕಣಕ್ಷಾರಗಳೊಡನೆ ಸೇರಿದರೆ ಕ್ಷಾರಾಷ್ಟಕವಾಗುವುದು.

ಕ್ಷಾರದ್ವಯ—ಸರ್ಜಕ್ಷಾರ, ಯವಕ್ಷಾರ ಇವು ಎರಡು ಕ್ಷಾರದ್ವಯವೆಂದು ಹೇಳಲ್ಪಡುವುದು. ಸರ್ಜಕ್ಷಾರ, ಯವಕ್ಷಾರಗಳೆರಡೂ ಅಗ್ನಿಗೆ ಸಮಾನವಾದುವು (ಅಂದರೆ ಅಷ್ಟು ತೀಕ್ಷ್ಣವು) ತಿಳಿಯಲ್ಪಡತಕ್ಕುದು. ಇವು ಮತ್ತು ಇತರ ಕ್ಷಾರಗಳೂ ಸಹ ಗುಲ್ಮ, ಮೂಲವ್ಯಾಧಿ, ಗ್ರಹಣಿರೋಗ ಇವನ್ನು ಪರಿಹರಿಸುವುವು. ಆಮಾಂಶವನ್ನು ಪಚನಮಾಡುವುವು, ಕ್ರಿಮಿಗಳನ್ನೂ ಗಂಡಸುತನವನ್ನೂ ನಾಶಮಾಡುವುವು, ಶರ್ಕರಾ ಎಂಬ ಮೂತ್ರದ್ವಾರದಲ್ಲಿ ಕಲ್‌ಹರಳು ಕಟ್ಟುವ ರೋಗವನ್ನೂ ಮೂತ್ರಕೃಚ್ಛ್ರವನ್ನೂ ಪರಿಹರಿಸುವುವು.

ತ್ರಿಲವಣ—ಸೈಂಧವಲವಣ, ಸೌವರ್ಚಲವಣ, ಬಿಡಾಲವಣ, ಇವು ಮೂರು ತ್ರಿಲವಣವೆಂದು ಹೇಳಲ್ಪಡುವುದು.

ಲವಣಪಂಚಕ—ಸೌವರ್ಚಲವಣ, ಸೈಂಧವಲವಣ, ಬಿಡಾಲವಣ, ಚೌಳುಪ್ಪು, ಸಮುದ್ರಲವಣ ಇವು ಐದು ಲವಣಪಂಚಕವೆಂದು ತಿಳಿಯತಕ್ಕದ್ದು. ಇವುಗಳಲ್ಲಿ ಮೊದಲನೆಯದು ಏಕಲವಣವೆಂದೂ, ಎರಡು ದ್ವಿಲವಣವೆಂದೂ, ಮೂರು ತ್ರಿಲವಣವೆಂದೂ, ನಾಲ್ಕು ಚತುರ್ಲವಣವೆಂದು, ಐದು ಪಂಚಲವಣವೆಂದು ಹೇಳಲ್ಪಡುವುದು.

ಪಂಚಲವಣವು ವಿಪಾಕದಲ್ಲಿ ಸಿಹಿಯಾಗುವುದು, ಮಲಮೂತ್ರಗಳ ವಿಸರ್ಜನೆ ಮಾಡಿಸುವುದು, ಅಂಟುಳ್ಳದ್ದು, ಸೂಕ್ಷ್ಮವಾದುದು, ಶಕ್ತಿಯನ್ನು ಕುಂದಿಸುವುದು, ಉಷ್ಣವೀರ್ಯವುಳ್ಳದು, ಅಗ್ನಿಶಕ್ತಿಯನ್ನು ಹೆಚ್ಚಿಸುವುದು, ತೀಕ್ಷ್ಣವಾದುದು, ಶ್ಲೇಷ್ಮಹರವು, ಪಿತ್ತವನ್ನು ಹೆಚ್ಚಿಸುವುದು.

ಧಾನ್ಯಪಂಚಕ—ಕೊತ್ತುಂಬರಿಬೀಜ, ಬಿಲ್ಪತ್ರೆ ಎಳೇಕಾಯಿ, ಲಾವಂಚ, ಶೊಂಠಿ, ತುಂಗೇಗಡ್ಡೆ.

ತಿಕ್ತಪಂಚಕ—ಬಿಲ್ಪತ್ರೆ, ಕಹಿಪಡವಲ, ರಾಮಗುಳ್ಳ, ಅಮೃತಬಳ್ಳಿ, ಆಡುಸೋಗೆ.

ತೃಣಪಂಚಮೂಲ—ಕುಶದರ್ಭೆ, ಭತ್ತದಬೇರು, ಲಾಳದಬೇರು, ಕಬ್ಬು, ಗರಿಕೆ.

ಪಂಚಸುಗಂಧಿ—ತಕ್ಕೋಲ, ಅಡಿಕೆ, ಲವಂಗ, ಜಾಕಾಯಿ, ಪಚ್ಚಕರ್ಪೂರ.

ಪಂಚಭದ್ರ—ಅಮೃತಬಳ್ಳಿ, ಪರ್ಪಾಟಕ, ತುಂಗೇಗಡ್ಡೆ, ನೆಲಬೇವು, ಕಟುಕರೋಹಿಣಿ.

ಪಂಚಮೂಲ—ಚಿತ್ರಮೂಲ, ಎಕ್ಕೆ, ನುಗ್ಗೆ, ಕಾಡುಮೆಣಸಿಗೆ ಬೇರು, ಜುಟ್ಟುವೇಸೊಪ್ಪು.

ಪಂಚಕ್ಷಾರ—ಸಜ್ಜಕ್ಷಾರ, ಯವಕ್ಷಾರ, ಬೆಳಗಾರಕ್ಷಾರ, ಉತ್ತರೇಣಿಕ್ಷಾರ, ಆಮ್ಲಕ್ಷಾರ.

ಷಡ್ರಸಗಳು—ಕಾರ, ಕಹಿ, ಒಗರು, ಉಪ್ಪು, ಹುಳಿ, ಮಧುರ.

---

## ಎಂಟನೆಯ ಅಧ್ಯಾಯ.

### ಅಲಬ್ಧ ಪ್ರತಿನಿಧಿ ವಸ್ತುಗಳು.

ಔಷಧಗಳಿಗೆ ಬೇಕಾದ ಕೆಲವು ಪದಾರ್ಥಗಳು ಕೆಲವುಕಾಲದಲ್ಲಿ, ಕೆಲವು ದೇಶಗಳಲ್ಲಿ ದೊರೆಯುವುದಿಲ್ಲವಾದುದರಿಂದ ಅಂತಹವುಗಳಿಗೆ ಪ್ರತಿನಿಧಿಯಾಗಿ

ತತ್ಸಮಾನಗುಣಗಳಾದ ದ್ರವ್ಯಗಳನ್ನು ಸೇರಿಸಬೇಕಾಗುವುದು. ಹಾಗೆ ಸೇರಿಸು ವುದರಲ್ಲಿ ಯಾವುದಕ್ಕೆ ಯಾವುದು ಪ್ರತಿನಿಧಿಯಾಗುವುದೆಂಬುದನ್ನು ಸಾಮಾನ್ಯ ವಾಗಿ ಇಲ್ಲಿ ವಿವರಿಸಿದೆ; ಹೇಗೆಂದರೆ—

ಅಮೃತಬಳ್ಳಿಯ ಸಕ್ಕರೆ ಇಲ್ಲದೆಹೋದರೆ ಅಮೃತಬಳ್ಳಿಯ ರಸ, ಚಿತ್ರ ಮೂಲಕ್ಕೆ ಪ್ರತಿನಿಧಿಯಾಗಿ ಜಾಪಾಳದ ಕ್ಷಾರವನ್ನಾಗಲಿ, ಉತ್ತರಣೆಯ ಕ್ಷಾರ ವನ್ನಾಗಲಿ; ತುರುಚೆಗೆ ಪ್ರತಿಯಾಗಿ ಬಳ್ಳಿದುರಚೆ, ಗ್ರಂಥಿಕತಗರಕ್ಕೆ ಪ್ರತಿಯಾಗಿ ಚಂಗಲಕೋಷ್ಠ, ಹಾಲುಕೊರಟಿಗೆಗೆ ಪ್ರತಿಯಾಗಿ ಲಿಂಗದೊಂಡೆತ್ವಕ್ಕು, ಚೇಳು ಬಾಲದ ಗಿಡಕ್ಕೆ ಪ್ರತಿಯಾಗಿ ಮಾನಕಂದಗೆಡ್ಡೆ, ಬಿಳಿಯಗುಳ್ಳಕ್ಕೆ ಪ್ರತಿಯಾಗಿ ಮಯೂರಶಿಖಿ ಅಥವಾ ಮೂಲಂಗಿ, ವಕುಳವೆಂಬ ಪಗಡೆಗೆ ಪ್ರತಿಯಾಗಿ ಸೌಗಂ ಧಿಕ, ನೈದಿಲೆ, ತಾವರೆ ; ಕನ್ನೈದಿಲೆಗೆ ಪ್ರತಿಯಾಗಿ ತಾವರೆಯಮಣಿ, ವಕುಳಕ್ಕೆ ಪ್ರತಿಯಾಗಿ ಗೊಬ್ಬುಳಿಚಕ್ಕೆ, ಜಾಪತ್ರೆಗೆ ಪ್ರತಿಯಾಗಿ ಲವಂಗವನ್ನಾಗಲಿ, ಜಾಜಿ ಕಾಯನ್ನಾಗಲಿ ಹಾಕಬೇಕು. ಎಕ್ಕವೇ ಮೊದಲಾದವುಗಳ ಹಾಲು ಸಿಕ್ಕದೆ ಹೋದರೆ ಅವುಗಳ ಎಲೆಯರಸ ಉಪಯೋಗಿಸಬೇಕು. ಪುಷ್ಕರಮೂಲಕ್ಕೆ ಪ್ರತಿ ಯಾಗಿ ಚಂಗಲಕೋಷ್ಠವನ್ನಾಗಲಿ, ಚಿಟ್ಟರಳು ಬೇರನ್ನಾಗಲಿ ಸೇರಿಸಬೇಕು. ಗ್ರಂಥಿಪರ್ಣಿ ಅಥವಾ ಮಾಚೀಪತ್ರೆ ಇಲ್ಲದೆಹೋದರೆ ಅದಕ್ಕೆ ಪ್ರತಿಯಾಗಿ ಚಂಗಲಕೋಷ್ಠವನ್ನೂ, ಮರದರಿಸಿನಕ್ಕೆ ಪ್ರತಿಯಾಗಿ ಅರಸಿನ, ರಸಾಂಜನಕ್ಕೆ ಪ್ರತಿಯಾಗಿ ಮರದರಿಸಿನ, ತಾಳೀಸಪತ್ರಕ್ಕೆ ಪ್ರತಿಯಾಗಿ ಕಿರುನೆಲ್ಲಿ, ಗಂಟು ಬಾರಂಗಿಗೆ ಪ್ರತಿಯಾಗಿ ತಾಳೀಸಪತ್ರೆ, ನೆಲಗುಳ್ಳಕ್ಕೆ ಪ್ರತಿಯಾಗಿ ರಾಮಗುಳ್ಳದ ಬೇರು, ಸೌವರ್ಚಲವಣಕ್ಕೆ ಪ್ರತಿಯಾಗಿ ಕಾಚಲವಣ, ಲವಣಗಳು ಐದು ಜಾತಿ ಯವು ಉಂಟಷ್ಟೆ; ಅವುಗಳಲ್ಲಿ ಯಾವುದೊಂದು ಇಲ್ಲದೇಹೋದರೂ ಅದಕ್ಕೆ ಪ್ರತಿ ನಿಧಿಯಾಗಿ ಸೈಂಧವಲವಣ, ಯಷ್ಟಿಮಧುಕಕ್ಕೆ ಪ್ರತಿಯಾಗಿ ಧಾತಕೀಕುಸುಮವು, ಆಮ್ಲವೇತಸಕ್ಕೆ (ಓಟೇಹುಳಿಗೆ) ಪ್ರತಿಯಾಗಿ ಪುಲ್ಲಂಬುರುಚೆ, ಪುಲ್ಲಂಬುರುಚೆಗೆ ಪ್ರತಿಯಾಗಿ ನಿಂಬೇಹಣ್ಣಿನರಸ, ದ್ರಾಕ್ಷೆಹಣ್ಣಿಗೆ ಪ್ರತಿಯಾಗಿ ಸಿವನಿಯಹಣ್ಣು, ನೆಲಗುಂಬಳದಗಡ್ಡೆಗೆ ಪ್ರತಿಯಾಗಿ ಹಾಲುನೆಲಗುಂಬಳದಗಡ್ಡೆ, ಓಮಕ್ಕೆ ಪ್ರತಿ ಯಾಗಿ ಅಜಾಮೋದ, ದೇವದಾರುವಿಗೆ ಪ್ರತಿಯಾಗಿ ಸರಳದೇವದಾರು, ಕಸ್ತೂರಿಗೆ ಪ್ರತಿಯಾಗಿ ತಕ್ಕೋಲ, ಗೌಳ, ಕಚೋರ ಅಥವಾ ರೇಣುಕವೆಂಬ ಸುಗಂಧದ್ರವ್ಯ ವನ್ನು ಉಪಯೋಗಿಸಬೇಕು. ಪಚ್ಚಕರ್ಪೂರಕ್ಕೆ ಪ್ರತಿಯಾಗಿ ಕೊನ್ನಾರಿಗಡ್ಡೆ, ಕುಂಕುಮದಹೂವಿಗೆ ಪ್ರತಿಯಾಗಿ ಕುಸುಮೆಯಹೂವು, ಹರಿಚಂದನಕ್ಕೆ ಪ್ರತಿ ಯಾಗಿ ರಕ್ತಚಂದನ, ರಕ್ತಚಂದನಕ್ಕೆ ಪ್ರತಿಯಾಗಿ ಲಾವಂಚ, ಅತಿಬಜೆಗೆ ಪ್ರತಿ ಯಾಗಿ ಕೊನ್ನಾರಿಗಡ್ಡೆ, ಕೊನ್ನಾರಿಗಡ್ಡೆಗೆ ಪ್ರತಿಯಾಗಿ ಅಳಲೆಯಕಾಯಿ, ಅಳ ಲೆಯಕಾಯಿಗೆ ಪ್ರತಿಯಾಗಿ ಕರ್ಕಾಟಕಶೃಂಗಿ, ನಾಗಕೇಸರಕ್ಕೆ ಪ್ರತಿಯಾಗಿ

ಕಮಲದಕೇಸರ, ಗೇರಿಗೆ ಪ್ರತಿಯಾಗಿ ಚಿತ್ರಮೂಲ ಉಪಯೋಗಿಸಬೇಕು; ಮೇದೆ, ಮಹಾಮೇದೆಗೆ ಪ್ರತಿಯಾಗಿ ಆಷಾಡಿಯುಬೇರು; ಜೀವಕ, ಋಷಭಕ್ಕೆ ಪ್ರತಿಯಾಗಿ ನೆಲಗುಂಬಳದಗಡ್ಡೆ; ಕಾಕೋಳಿ, ಕ್ಷೀರಕಾಕೋಳಿಗೆ ಪ್ರತಿಯಾಗಿ ಅಶ್ವಗಂಧಿ (ಹಿರೀಮದ್ದಿನ) ಬೇರು; ಋದ್ಧಿ, ವೃದ್ಧಿ ಇವೆರಡಕ್ಕೆ ಪ್ರತಿಯಾಗಿ ವಾರಾಹಿಕಂದ (ವಾರಾಹೀಕಂದ ಎಂದರೆ ಹಂದಿಯ ತಲೆಯಂತೆ ಇರುವ ಒಂದುಬಗೆಯ ಗಡ್ಡೆ) ನಮ್ಮ ಕರ್ಣಾಟಕದೇಶದಲ್ಲಿ ಇದನ್ನು ಹಂದೀಗಡ್ಡೆ ಎಂದು ಹೇಳುವರು. ಹೆಗ್ಗುಳ್ಳಕ್ಕೆ ಪ್ರತಿಯಾಗಿ ನೆಲಗುಳ್ಳ, ಒಂದೆಲೆ ಹೊನ್ನೆಗೆ ಪ್ರತಿಯಾಗಿ ಮೂರೆಲೆಹೊನ್ನೆ ಉಪಯೋಗಿಸುವುದು ಜೇನುತುಪ್ಪಕ್ಕೆ ಪ್ರತಿಯಾಗಿ ಹಳೆಯಬೆಲ್ಲ, ಕಲ್ಲುಸಕ್ಕರೆಗೆ ಪ್ರತಿಯಾಗಿ ಚೀಣಾಸಕ್ಕರೆ, ಕಾಮಕಸ್ತೂರಿಗೆ ಪ್ರತಿಯಾಗಿ ತುಲಸಿ, ಬಿಳಿಯಕೊಮ್ಮೆಗೆ ಪ್ರತಿಯಾಗಿ ಕೆಂಪುಕೊಮ್ಮೆ, ರಾಸ್ನೆಗೆ ಪ್ರತಿಯಾಗಿ ಆಗಳುಶುಂಠಿ ಉಪಯೋಗಿಸಬೇಕು.

---

## ಒಂಭತ್ತನೆಯ ಅಧ್ಯಾಯ.

---

### ಪುಟಪಾಕ ವಿಧಾನ.

---

ಮಹಾಪುಟ—ಮಹಾಪುಟ ಅಂದರೆ ಒಂದು ಗಜ ಆಳವೂ, ಒಂದು ಗಜ ಅಗಲವೂ, ಒಂದು ಗಜ ಉದ್ದವೂ ಉಳ್ಳ ಹಳ್ಳವನ್ನು ತೆಗೆದು ಮುಕ್ಕಾಲು ಭಾಗದ ವರೆಗೂ ಕಾಡುಬೆರಣಿಗಳನ್ನು ತುಂಬಿ ಪುಟವಿಡಬೇಕಾದ ಶರಾವವನ್ನಾಗಲೀ, ಮೂಸೆಯನ್ನಾಗಲಿ ಮಧ್ಯದಲ್ಲಿಟ್ಟು ಉಳಿದ ಬೆರಣಿಗಳನ್ನು ಹಳ್ಳ ತುಂಬುವವರೆವಿಗೂ ತುಂಬಿ ಪುಟವಿಡುವುದು. ಇದು ಮಹಾಪುಟವೆನ್ನಿಸಿಕೊಳ್ಳುವುದು.

ಗಜಪುಟ—ಗಜಪುಟವೆಂದರೆ ಒಂದೂವರೆ ಮೊಳ ಆಳವು, ಒಂದುವರೆ ಮೊಳ ಅಗಲವು, ಒಂದುವರೆ ಮೊಳ ಉದ್ದವು ಉಳ್ಳ ಹಳ್ಳವನ್ನು ತೋಡಿ ಮೇಲ್ಕಂಡಂತೆ ಪುಟವಿಡುವದು. ಇದು ಗಜಪುಟವೆನ್ನಿಸಿಕೊಳ್ಳುವುದು.

ವರಾಹಪುಟ—ವರಾಹಪುಟವೆಂದರೆ ಒಂದು ಮೊಳ ಆಳ, ಒಂದು ಮೊಳ ಅಗಲ, ಒಂದುಮೊಳ ಉದ್ದವೂ ಉಳ್ಳ ಹಳ್ಳವನ್ನು ತೋಡಿ ಮೇಲ್ಕಂಡಂತೆ ಪುಟವಿಡುವುದು. ಇದು ವರಾಹಪುಟವೆನ್ನಿಸಿಕೊಳ್ಳುವುದು.

ಕುಕ್ಕುಟಪುಟ—ಕುಕ್ಕುಟಪುಟವೆಂದರೆ ಒಂದು ಗೇಣು ಉದ್ದ, ಒಂದು ಗೇಣು ಅಗಲ, ಒಂದುಗೇಣು ಆಳವೂ ಉಳ್ಳ ಹಳ್ಳವನ್ನು ತೋಡಿ ಮೇಲ್ಕಂಡಂತೆ ಪುಟವಿಡುವದು. ಇದು ಕುಕ್ಕುಟಪುಟವೆನ್ನಿಸಿಕೊಳ್ಳುವುದು.

ಕಪೋತಪುಟ—ಕಪೋತಪುಟವೆಂದರೆ ಒಂದು ಗೇಣು ಉದ್ದ, ಒಂದು ಗೇಣು ಅಗಲ, ಒಂದುಗೇಣು ಆಳದ ಹಳ್ಳವನ್ನು ತೋಡಿ ೭-೮ ಬೆರಣಿಗಳಿಂದ ಲಘುಪುಟವಿಡುವುದು. ಇದು ಕಪೋತಪುಟವೆನ್ನಿಸಿಕೊಳ್ಳುವುದು.

ಗೋವರಪುಟ—ಗೋವರಪುಟವೆಂದರೆ ಸ್ವಲ್ಪ ಬೆರಣಿಗಳನ್ನು ತುಂಡು ತುಂಡುಗಳಾಗಿ ಮಾಡಿ ಭೂಮಿಯಮೇಲೆಯೇ ಇಟ್ಟು ಇದರ ಮಧ್ಯದಲ್ಲಿ ಔಷಧ ವನ್ನಿಟ್ಟು ಅದೇ ಬೆರಣಿಗಳಿಂದ ಮುಚ್ಚಿ ಲಘುವಾಗಿ ಪುಟವಿಡುವುದು. ಇದು ಗೋವರಪುಟವೆನ್ನಿಸಿಕೊಳ್ಳುವುದು.

## ಹತ್ತನೆಯ ಅಧ್ಯಾಯ.

## ಯಂತ್ರಗಳ ವಿವರಣೆ.

ವಾಲುಕಾ ಯಂತ್ರವು—ಒಂದು ಮಡಕೆಯಲ್ಲಿ ಒಂದು ಅಂಗಲ ಮರ ಳನ್ನು ಹರಡಿ, ಔಷಧ ತುಂಬಿದ ಒಂದು ಗಾಜಿನ ಸೀಸಾಯಿಗೆ ಕುತ್ತಿಗೆಯವರಿವಿಗೂ ಕೆಮ್ಮಣ್ಣು ಬಟ್ಟೆಯಿಂದ ಏಳು ಚೀಲುಗಳನ್ನು ಮಾಡಿ ಒಣಗಿಸಿ ಮೇಲ್ಕಂಡ ಮಡಕೆಯ ಮಧ್ಯದಲ್ಲಿ ಮರಳಿನ ಮೇಲಿಟ್ಟು ಪುನಃ ಸೀಸಾಯಿಯ ಕುತ್ತಿಗೆಯವರಿವಿಗೂ ಮರಳನ್ನು ತುಂಬಿ ಆಯಾ ಯೋಗಗಳಲ್ಲಿ ಹೇಳಲ್ಪಟ್ಟ ಕಾಲದವರೆವಿಗೆ ಆಯಾ ಅಗ್ನಿಗಳಿಂದ ಪಾಕಮಾಡು ವುದು. ಇದು ವಾಲುಕಾಯಂತ್ರವೆನ್ನಿಸಿಕೊಳ್ಳುವುದು.



ಇದೇ ಯಂತ್ರದಲ್ಲಿ ಮರಳಿಗೆ ಬದಲಾಗಿ ಲವಣವನ್ನು ತುಂಬಿದರೆ ಲವಣಯಂತ್ರ ವೆಂತಲೂ, ಭಸ್ಮವನ್ನು ತುಂಬಿದರೆ ಭಸ್ಮಯಂತ್ರವೆಂತಲೂ, ಕ್ಷಾರವನ್ನು ತುಂಬಿ ದರೆ ಕ್ಷಾರಯಂತ್ರವೆಂತಲೂ ಹೇಳಲ್ಪಡುವುದು.

ಭೂಧರ ಯಂತ್ರವು—ಒಂದು ಮಡಕೆಯನ್ನು ತಂದು ಭೂಮಟ್ಟಕ್ಕೆ ಸರಿಯಾಗಿಹೂಳಿ, ಅದರಲ್ಲಿ ಅರ್ಧಕ್ಕೆ ಮರಳನ್ನುಹಾಕಿ, ಒಂದುಮೂಸೆಯಲ್ಲಿ ಪಾದ ರಸವನ್ನುಹಾಕಿ ಬಾಯಿಗೆ ಚೀಲುಮಾಡಿ ಮೇಲ್ಕಂಡ ಮರಳಮೇಲಿಟ್ಟು ಉಳಿದಭಾಗವನ್ನು ಪುನಃ ಮರಳಿ ನಿಂದತುಂಬಿ ಅದರಮೇಲೆ ಬೆರಣಿಗಳನ್ನಿಟ್ಟು ಪುಟ ಹಾಕುವುದು. ಇದು ಭೂಧರ ಯಂತ್ರವೆನ್ನಲ್ಪಡು ವುದು.



**ಡೋಲಾ ಯಂತ್ರವು**—ಒಂದು ಮಡಕೆಯಲ್ಲಿ ಆಯಾ ಯೋಗಗಳಲ್ಲಿ ಹೇಳಿರುವ ದ್ರವವನ್ನು ಅರ್ಧದವರೆವಿಗೂ ಹಾಕಿ, ಡೋಲಾ ಯಂತ್ರದಲ್ಲಿ ಪಾಕ



ಮಾಡಬೇಕಾದ ಔಷಧವನ್ನು ಒಂದು ಬಟ್ಟೆಯಲ್ಲಿ ಗಂಟುಕಟ್ಟಿ ಅದಕ್ಕೆ ಒಂದು ದಾರವನ್ನು ಕಟ್ಟಿ ಆ ದಾರವನ್ನು ಬಿದಿರು ಕಡ್ಡಿಗೆ ಕಟ್ಟಿ ಮಡಕೆಯ ಕಂಠದಮೇಲೆ ಮಡಗುವುದು. (ಔಷಧದಗಂಟು ಮಡಕೆಯಲ್ಲಿರುವ ದ್ರವಕ್ಕಿಂತಲೂ ಒಂದು ಅಂಗುಲ ಮೇಲ್ಭಾಗದಲ್ಲಿ ನೇತಾಡುತ್ತಿರಬೇಕು.) ನಂತರ ಮಡಕೆಯನ್ನು ಒಲೆಯಮೇಲಿಟ್ಟು ಆಯಾ ಯೋಗಗಳಲ್ಲಿ ನಿರ್ಣಯಿಸಿದ ಕಾಲದವರೆಗೂ ಪಾಕಮಾಡಬೇಕು. ಇದು ಡೋಲಾ ಯಂತ್ರವೆನ್ನಲ್ಪಡುವುದು.

**ಸ್ವೇದನ ಯಂತ್ರವು**—ಒಂದು ಮಡಕೆಯಲ್ಲಿ ಅರ್ಧಭಾಗಕ್ಕೆ ಯೋಗದಲ್ಲಿ ಹೇಳಿರುವ ದ್ರವವನ್ನು ಹಾಕಿ ಮಡಕೆಯ ಬಾಯಿಗೆ ಬಟ್ಟೆಯನ್ನು ಕಟ್ಟಿ ಅದರಮೇಲೆ ಸ್ವೇದನಮಾಡಬೇಕಾದ ಔಷಧವನ್ನು ಇಟ್ಟು ಮತ್ತೊಂದು ಮಡಕೆಯನ್ನು ಬಾರಲಾಗಿಮುಚ್ಚಿ ಮಡಕೆಯ ಸಂಧಿಗೆ ಚೀಲುಮಾಡಿ ಒಣಗಿಸಿ ಒಲೆಯಮೇಲಿಟ್ಟು ಕ್ರಮವಾಗಿ ಉರಿಯನ್ನು ಹಾಕುವುದು. ಇದು ಸ್ವೇದನ ಯಂತ್ರವೆನ್ನಲ್ಪಡುವುದು.

**ವಿದ್ಯಾಧರ ಯಂತ್ರವು**—ಜಯರಸ ತೆಗೆಯುವ ವಿಧಾನ:—ಬಾಯಿ ಒಂದೇ ಸಮವಾಗಿರುವ ೨ ಗಡಿಗೆಗಳನ್ನು ತಂದು ಬಟ್ಟೆಯಿಂದ ಒಳಗಡೆ ಒರಸಿ,



ಅರ್ಧಸೇರು ಒಣಗಿದ ನೊಗದೇಬೇರನ್ನು ಸುಮಾರಾಗಿ ಕುಟ್ಟಿ ಒಂದು ಗಡಿಗೆಯಲ್ಲಿ ಹಾಕಿ ನಂತರ ೧ ಶೇರು ಇಂಗಳೀಕ ಸಣ್ಣಗೆ ಪುಡಿಮಾಡಿ ಹಾಕಿ ಕೈಯ್ಯಲ್ಲಿ ಚೆನ್ನಾಗಿ ಕಲೆಸುವುದು. ಮತ್ತೊಂದು ಗಡಿಗೆಯ ಒಳಭಾಗಕ್ಕೆ ಗರುಗದಸೊಪ್ಪಿನ ರಸವನ್ನು ಲೇಪಿಸಿ ಬಿಸಲಿನಲ್ಲಿ ಒಣಗಿಸಿ, ತರುವಾಯ ಸೊಗದೇಬೇರು ಇಂಗಳೀಕವಿರುವ ಗಡಿಗೆಯ ಮೇಲೆ ಬಾರಲಾಗಿ ಮುಚ್ಚಿ ಬಾಯಿ ಒಂದಾಗಿ ಸೇರಿಸಿ, ಕೆಮ್ಮಣ್ಣು ಬಟ್ಟೆಯಿಂದ ಏಳು ಚೀಲುಗಳನ್ನು ಮಾಡಿ, ಒಲೆಯಮೇಲಿಟ್ಟು ೪ ಜಾವ ಉರಿಹಾಕಿ ಮಾರನೇ ದಿನ ಉಪಾಯವಾಗಿ ಚೀಲನ್ನು ಒಡೆದು ಮೇಲಿನ ಗಡಿಗೆಯಲ್ಲಿ ಪತಂಗಿಸಿರುವ ರಸವನ್ನು ಕೂದಲಿನ ಕುಚ್ಚಿ (ಬ್ರಷ್ಷಿ) ನಿಂದ ಒರೆಸಿ ಬಟ್ಟೆಯಲ್ಲಿ ಹಾಕಿ ಶೋಧಿಸಿಕೊಳ್ಳಲು ರಸಬರುವುದು. ಕೆಳಭಾಗದ ಮಡಕೆಯಲ್ಲಿರುವ ಔಷಧವನ್ನು ನೀರಿನಿಂದ ಕಲೆಸಿ ಬಟ್ಟೆಯಲ್ಲಿ ಹಾಕಿ ಹಿಂಡಲು ರಸಬರುವುದು ೧ ಸೇರು ಇಂಗಳೀಕಕ್ಕೆ ಅರ್ಧಸೇರು ರಸಬರುವುದು.

ತೇಜೋಧರ ಯಂತ್ರವು—ಅರ್ಕವನ್ನು ತೆಗೆಯಬೇಕಾದರೆ ಮೊದಲು ಅರ್ಕವನ್ನು ತೆಗೆಯತಕ್ಕ ದ್ರವ್ಯಗಳನ್ನು ಸುಮಾರು ತೂಕದ ಸೇರು ದ್ರವ್ಯಕ್ಕೆ



ಅಳೆಯುವ ಸೇರು ನೀರನ್ನು ಹಾಕಿ, ಒಂದು ದಿನ ಊರಹಾಕಿ ನಂತರ ಒಂದು ಶುದ್ಧವಾದ ದೊಡ್ಡ ಗಡಿಗೆಯಲ್ಲಿ ಅರ್ಧಕ್ಕೆ ತುಂಬಿ ಅದರ ಬಾಯಿಗೆ ಸರಿಯಾಗಿ ದ್ವಿನಳಿಕಾ ಯಂತ್ರವೊಂದನ್ನು ದಪ್ಪವಾದ ಕಲಾಯಿ ರೇಕಿನಿಂದ ಪಕ್ಕದಲ್ಲಿರುವ ಚಿತ್ರದಲ್ಲಿರುವಂತೆ ತಯಾರು ಮಾಡಿಸಿ, ಗಡಿಗೆಯ ಮೇಲೆ ಸಿಕ್ಕಿಸಿ ಗಡಿಗೆಯ ಬಾಯಿಯ ಹತ್ತಿರ ಅಂದರೆ ದ್ವಿನಳಿಕಾ ಯಂತ್ರವು ಸೇರಿದ ಸಂಧಿಸ್ಥಾನದಲ್ಲಿ ಒದ್ದೆಯಬಟ್ಟೆಯನ್ನು ಸುತ್ತಿ ಬಿಗಿಯಾಗಿ ಮಾಡಿ ಒಲೆಯಮೇಲಿಡುವುದು. ದ್ವಿನಳಿಕಾಯಂತ್ರದ ಮೇಲ್ಭಾಗದಲ್ಲಿ ತಣ್ಣೀರನ್ನು ಹಾಕಿ ನೀರಿನ ನಾಳವನ್ನು ಕಾರ್ಕಿನಿಂದಲೂ, ಒದ್ದೆಬಟ್ಟೆಯಿಂದಲೂ ಮುಚ್ಚಿ ನೀರು ಬಿಸಿಯಾದ ಹಾಗೆಲ್ಲಾ ಆ ನೀರನ್ನು ಈ ನಾಳದ ಮೂಲಕ ಬಿಟ್ಟು ಪುನಃ ತಣ್ಣೀರನ್ನು ಹಾಕುತ್ತಿರಬೇಕು. ಅರ್ಕಬರುವ ನಳಿಕೆಯ ಕೊನೆಯನ್ನು ಒಂದು ಸೀಸಾಯಿನ ಬಾಯಿಯೊಳಕ್ಕೆ ಇಳಿಸಿ ಸಂಧಿಗೆ ಬಟ್ಟೆಯನ್ನು ಸುತ್ತಬೇಕು. ನಳಿಕೆಯ ಮೂಲಕ ಆವಿಯಾಗಿ ಬರುವ ಅರ್ಕದ ಕಾವಿನಿಂದ ಸೀಸಾಯಿಗೆ ಕೆಡುಕಾಗದಂತೆ ಸೀಸಾಯಿಯ ಕೆಳಗೆ ತಣ್ಣೀರಿನ ಪಾತ್ರೆಯನ್ನು ಇಟ್ಟಿರಬೇಕು. ಅರ್ಕಬರುವವರೆಗೂ ಕ್ರಮವಾಗಿ ಒಲೆಯನ್ನು ಉರಿಸುತ್ತಿರಬೇಕು. ಅರ್ಕ ನಿಂತಮೇಲೆ ಉರಿಯನ್ನು ತೆಗೆದುಹಾಕುವುದು. ಹೀಗೆ ಇದರಲ್ಲಿ ಓಮದ್ರಾವಕ, ಜೀರಿಗೆ ದ್ರಾವಕ, ಸೊಗದೇಬೇರು ದ್ರಾವಕ, ಗಾವುಜಬಾ಼ ಮೊದಲಾದ ಯಾವ ಅರ್ಕವನ್ನಾದರೂ ತಯಾರಿಸಬಹುದು ಇದು ತೇಜೋಧರ ಯಂತ್ರವೆನ್ನಲ್ಪಡುವುದು.

ಅಧಃಪಾತನ ಯಂತ್ರವು—(ಇದು ರಸವು ಕೆಳಭಾಗದ ಮಡಕೆಯಲ್ಲಿ ಅಧಃಪಾತನವಾಗಲು ಉಪಯೋಗಿಸಲ್ಪಡುವುದು) ರಸವನ್ನು ಇತರ ದ್ರವ್ಯಗಳೊಂದಿಗೆ ಸೇರಿಸಿ ಚೆನ್ನಾಗಿ ಅರೆದು ಒಂದು ಮಡಕೆಯ ಒಳಭಾಗಕ್ಕೆ ಸವರಿ ಮತ್ತೊಂದು ಮಡಕೆಯಲ್ಲಿ ಆಯಾ ಯೋಗೋಕ್ತ ಔಷಧ ದ್ರವ್ಯಗಳನ್ನು ಹಾಕಿ, ಅದರ ಮೇಲೆ ಔಷಧವನ್ನು ಸವರಿರುವ ಮಡಕೆಯನ್ನು ಬಾರ್ಲು ಮುಚ್ಚಿ ಸಂಧಿಬಂಧನವನ್ನು ಮಾಡಿ ಕೆಳಗಿನ ಮಡಕೆಯುವರಿಎಗೂ ಹಳ್ಳದಲ್ಲಿಟ್ಟು ಹೂಳಿ, ಮೇಲಿನ ಮಡಕೆಯಸುತ್ತಲೂ ಬೆರಣಿಗಳನ್ನಿಟ್ಟು ಬೆಂಕಿಯನ್ನು ಹಚ್ಚಬೇಕು.

ಈ ಬಿಸಿಗೆ ಮೇಲ್ಮಡಕೆಯಲ್ಲಿರುವ ರಸವು ಆವಿಯರೂಪವನ್ನುಹೊಂದಿ ಕೆಳಗಿನ ಮಡಕೆಯಲ್ಲಿರುವ ದ್ರವವನ್ನು ಸೇರಿ ರಸವಾಗಿ ಮಾರ್ಪಡುವುದು. ಸಾಂಗ ಶೀತಲವಾದಮೇಲೆ ರಸವನ್ನು ಗ್ರಹಿಸುವುದು. ಇದು ಅಧಃಪಾತನ ಯಂತ್ರ ವೆನ್ನಲ್ಪಡುವುದು.

ಪಾತಾಳ ಯಂತ್ರವು—ಭೂಮಿಯಲ್ಲಿ ಒಂದುಮೊಳ ಆಳವಾದ ಹಳ್ಳವನ್ನು ತೆಗೆದು ಅದರಲ್ಲಿ ಬಾಯಿ ಅಗಲವಾಗಿರುವ ಒಂದು ಬಟ್ಟಲನ್ನು ಇಡುವುದು. ಬೇರೊಂದು ಗಡಿಗೆಯನ್ನು ತಂದು ಔಷಧಗಳನ್ನು ಮಡಗಿ ಅದರಮೇಲೆ ರಂಧ್ರಗಳಿರುವ ಮುಚ್ಚಳವನ್ನು ಮುಚ್ಚಿ ಆ ಮುಚ್ಚಳದೊಂದಿಗೆ ಆ ಗಡಿಗೆಯನ್ನು ಹಳ್ಳದಲ್ಲಿರುವ ಬಟ್ಟಲಮೇಲೆ ಬಾರಲಾಗಿ ಮುಚ್ಚಿ ಸಂಧಿಗೆ ಚೀಲು ಮಾಡುವುದು. ಆ ಹಳ್ಳವನ್ನು ಮಣ್ಣಿನಿಂದ ಮುಚ್ಚಿ ಅದರಮೇಲೆ ಬೆರಣಿಗಳನ್ನಿಟ್ಟು ಉರಿಯನ್ನು ಹಾಕು



ವುದು. ಮುಚ್ಚಳದಲ್ಲಿರುವ ರಂಧ್ರಗಳ ಮೂಲಕ ತೈಲವಾದರು ದ್ರವವಾದರೂ ಕೆಳಗಿನ ಮಡಕೆಯಲ್ಲಿ ಇಳಿಯುವುದು. ಅದನ್ನು ಸಾಂಗಶೀತಲವಾದನಂತರ ಮೇಲಿನ ಗಡಿಗೆಯನ್ನು ತೆಗೆದು ಕೆಳಗಿನ ಬಟ್ಟಲಿನಲ್ಲಿರುವ ಔಷಧವನ್ನು ಗ್ರಹಿಸ ಬೇಕು. ಇದು ಪಾತಾಳ ಯಂತ್ರವು.

ಗರ್ಭಯಂತ್ರವು—ಒಂದು ದೊಡ್ಡ ಮಡಕೆಯನ್ನು ಒಲೆಯಮೇಲಿಟ್ಟು ಮಡಕೆಯೊಳಗೆ ಇಟ್ಟಿಗೆಯನ್ನು ಮಡಗಿ ಆ ಇಟ್ಟಿಗೆಯಮೇಲೆ ಗಾಜಿನ ಬಟ್ಟಲನ್ನಿಟ್ಟು ಅದರ ಕಂಠದವರೆಗೆ ಔಷಧ ದ್ರವ್ಯಗಳನ್ನಿಟ್ಟು ಗಡಿಗೆಯ ಬಾಯನ್ನು ಮತ್ತೊಂದು ಮಡಕೆಯ ಕೆಳಭಾಗ ದಿಂದ ಮುಚ್ಚಿ ಸಂಧಿಗೆ ಚೀಲುಮಾಡಿ ಮೇಲ್ಗಡೆ ಇರುವ ಮಡಕೆಯಲ್ಲಿ ನೀರನ್ನು ತುಂಬಿ ಒಲೆಯಲ್ಲಿ ಮಂದಾಗ್ನಿಯಾಗಿ ಉರಿಹಾಕಬೇಕು. ಮೇಲಿನ ಮಡಕೆಯಲ್ಲಿ ನೀರು ಬಿಸಿಯಾದರೆ ಆ ನೀರನ್ನು ತೆಗೆದುಬಿಟ್ಟು ಬೇರೆ ನೀರನ್ನು ಹಾಕುವುದು. ಗಾಜಿನ ಪಾತ್ರೆಯಲ್ಲಿ ತೈಲವು ಇಳಿಯುವುದು.



ತಿರ್ಯಕ್ಪಾತನ ಯಂತ್ರವು—ರಸವನ್ನು ಒಂದು ಮಡಕೆಯಲ್ಲಿಟ್ಟು ಅದರ ಬಾಯಿಗೆ ಮುಚ್ಚಳ ಮುಚ್ಚಿ ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಕಂಠದ ಪಕ್ಕದಲ್ಲಿ ಒಂದು ರಂಧ್ರಮಾಡಿ ಆ ರಂಧ್ರಕ್ಕೆ ಒಂದು ಉದ್ದವಾದ ಕೊಳವೆಯನ್ನು ಸಿಕ್ಕಿಸಿ ಸಂದುಬಿಡದಂತೆ ಗಟ್ಟಿಯಾಗಿ ಚೀಲುಮಾಡಿ, ಮತ್ತೊಂದು ಮಡಕೆಗೆ ಪಕ್ಕದಲ್ಲಿ ಒಂದು ರಂಧ್ರವನ್ನು ಮಾಡಿ ಮೇಲ್ಕಂಡ ಕೊಳವೆಯ ಮತ್ತೊಂದು ಕೊನೆಯನ್ನು

ಈ ರಂಧ್ರದಲ್ಲಿ ಸೇರಿಸಿ ಸಂದುಬಿಡದಂತೆ ಗಟ್ಟಿಯಾಗಿ ಚೀಲುಮಾಡಿ ಆ ಮಡಕೆಯ ತುಂಬ ನೀರನ್ನು ಹಾಕಿ, ರಸವಿರುವ ಮಡಕೆಯನ್ನು ಒಲೆಯಮೇಲಿಟ್ಟು ಉರಿ ಹಾಕಲು ರಸವು ಆವಿಯಾಗಿ ಕೊಳವೆಯಮೂಲಕ ಎರಡನೇ ನೀರಿನ ಮಡಕೆಯಲ್ಲಿ ಸೇರಿ ರಸದ ಆವಿಯು ರಸವಾಗುವುದು. ಇದು ತಿರ್ಯಕ್ಪಾತನ ಯಂತ್ರವೆನ್ನಿಸಿ ಕೊಳ್ಳುವುದು.

ಡಮರುಗ ಯಂತ್ರವು—ಒಂದನೇ ನಂಬರಿನ ದೊಡ್ಡ ಗಡಿಗೆಯಲ್ಲಿ ಕಾಲುಭಾಗಕ್ಕೆ ತೈಲವು ತೆಗಿಯಬೇಕಾದ ಔಷಧಗಳನ್ನು ಹಾಕಿ ಎರಡನೇ ನಂಬರಿನ ಚಿಕ್ಕ ಗಡಿಗೆಯನ್ನು ಮೇಲ್ಕಂಡ ದೊಡ್ಡ ಗಡಿಗೆಯ ಬಾಯೊಳಕ್ಕೆ ಚಿಕ್ಕಗಡಿಗೆಯ ಬಾಯನ್ನು ಸೇರಿಸಿ ಉದ್ದಿನ ಹಿಟ್ಟಿನಿಂದ ಚೀಲು ಮಾಡಿ, ಚಿಕ್ಕ ಗಡಿಗೆಯ ಹೊಟ್ಟೆಯ ಭಾಗದಲ್ಲಿ ಹಂಚಿಯ ಕಡ್ಡಿಗಳಷ್ಟು ಮೂರು ರಂಧ್ರಗಳನ್ನು ಮಾಡಿ, ಅದರಲ್ಲಿ ಹಂಚೀಕಡ್ಡಿಗಳನ್ನು ನೇತಾಡಹಾಕಿ ಪಕ್ಕದಲ್ಲಿರುವ ಚಿತ್ರದಂತೆ ದೊಡ್ಡ ಗಡಿಗೆಯನ್ನು ಒಲೆಯಮೇಲಿಟ್ಟು ದೀಪಾಗ್ನಿಯಿಂದ ಉರಿಸುತ್ತಾ, ಚಿಕ್ಕ ಗಡಿಗೆಯ ರಂಧ್ರಗಳಿಗೆ ಸರಿಯಾಗಿ ಒಂದು ಬಟ್ಟಲನ್ನಿಡಲು, ದೊಡ್ಡ ಗಡಿಗೆಯಲ್ಲಿರುವ ಔಷಧವು ಹೊಗೆಯರೂಪವಾಗಿ ಚಿಕ್ಕ ಗಡಿಗೆಗೆ ಬಂದು ತೈಲವಾಗಿ ಮಾರ್ಪಟ್ಟು ರಂಧ್ರದ ಹಂಚಿಕಡ್ಡಿಗಳ ಮೂಲಕ ಬಟ್ಟಲಿನಲ್ಲಿ ತೈಲವಿಳಿಯುವುದು. ತೈಲವು ಬರುವವರೆವಿಗೂ ಉರಿಯನ್ನು ಹಾಕುತ್ತಿರಬೇಕು. ಇದು ಡಮರುಗ ಯಂತ್ರವೆನ್ನಿಸಿಕೊಳ್ಳುವುದು.




ಉದಾಹರಣೆ :— ಬಿಳೀಧೂಪ ತೈಲ—ಬಿಳೀಧೂಪ ಅಥವಾ ಗುಗ್ಗುಳ ೧ ಸೇರು, ಹಸನು ಸಾಂಬ್ರಾಣಿ ಅರ್ಧ ಸೇರು, ಜೇನುಮೇಣ ೧ ಪಾವು, ಮುರು ದಾರುಶಿಂಗ್ ಅರ್ಧ ಪಾವು, ರಸಕರ್ಪೂರ ೧|| ತೊಲೆ, ಉಂಡೆಕರ್ಪೂರ ||| ತೊಲೆ, ಇವುಗಳನ್ನು ಸುಮಾರಾಗಿ ಪುಡಿಮಾಡಿ ದೊಡ್ಡ ಮಡಕೆಯಲ್ಲಿ ಹಾಕಿ, ಮೇಲ್ಕಂಡ ಯಂತ್ರದ ಮೂಲಕ ತೈಲವನ್ನಿಳಿಸಿ ಕರಪಾಣಿ, ಕತ್ತಿಗಾಯ, ಮೇಹಸಮ್ಬಂಧದ ಹುಣ್ಣುಗಳು, ಇತರ ಹುಣ್ಣುಗಳು, ವಿಷಪುರಿ, ವಾಯುವು, ವೊಡವೆ, ಮುಸುಕು ವೊದಲಾದ ಹುಣ್ಣುಗಳಿಗೆಲ್ಲಾ ಮೇಲೆ ದಿನಂಪ್ರತಿ ಸವರುತ್ತ ಬಂದರೆ ಗುಣವಾಗುವುದು.

ಶಂಖದ್ರಾವಕ ಯಂತ್ರ—ತಳದ ಮಧ್ಯಭಾಗವು ಎತ್ತರವಾಗಿರುವ ಒಂದು ದೊಡ್ಡ ಸೀಸಾಯಿಯನ್ನು ತಂದು ತಳದ ಮಧ್ಯದಲ್ಲಿ ಒಂದು ರಂಧ್ರವನ್ನು ಮಾಡಿ, ಒಂದು ಮಡಕೆಯಲ್ಲಿ ದ್ರಾವಕವು ತೆಗೆಯಬೇಕಾದ ಶಂಖು, ಲವಣ

ಮೊದಲಾದವುಗಳನ್ನು ಪುಡಿಮಾಡಿ ಮುಕ್ಕಾಲು ಭಾಗಕ್ಕೆ ಹಾಕಿ, ಮಡಕೆಯ ಬಾಯಿಗೆ ಸರಿಯಾಗಿ ಮೇಲ್ಕಂಡ ಸೀಸಾಯಿಯನ್ನು ಇಟ್ಟು ಸಂಧಿ ಬಂಧನಮಾಡಿ ಮಡಕೆಯನ್ನು ಒಲೆಯಮೇಲಿಟ್ಟು ಉರಿಯನ್ನು ಹಾಕಿದರೆ ಮಡಕೆಯಲ್ಲಿರುವ ಔಷಧಗಳು ಆವಿಯರೂಪವಾಗಿ ಸೀಸಾಯಿಯೊಳಕ್ಕೆ ಹೋಗಿ ಗಾಳಿಯ ಸಹಾಯದಿಂದ ಧೃತಿಯಾಗಿ ಮಾರ್ಪಟ್ಟು ಸೀಸಾಯಿಯ ತಳದ ಅಂಚುಗಳಲ್ಲಿರುವ ಹಳ್ಳದಲ್ಲಿ ನಿಲ್ಲುವುದು. ಹಳ್ಳ ತುಂಬಿದ ಕೂಡಲೇ ಧೃತಿಯನ್ನು ಮತ್ತೊಂದು ಸೀಸಾಯಿಯಲ್ಲಿ ಹಾಕಿಕೊಳ್ಳುವುದು. ಇದು ಶಂಖದ್ರಾವಕ ಯಂತ್ರವೆನ್ನಿಸಿಕೊಳ್ಳುವುದು



ಶಂಖದ್ರಾವಕ ಯಂತ್ರವು.

ಶಂಖದ್ರಾವಕ ತೆಗೆಯುವ ವಿಧಾನ — ಬಿಳೀ ಹಾಲು ಶಂಖುಗಳನ್ನು ಚೂರ್ಣಮಾಡಿದ್ದು ೬ ತೊಲೆ, ಪೆಟ್ಲುಪ್ಪು ೨ ಶೇರು, ಪಟಿಕೆ ೨ ಶೇರು, ತಿನ್ನುವವುಪ್ಪು ೧ ಶೇರು, ನವಾಸಾಗರ ೬ ತೊಲೆ, ಇವು ಪ್ರತಿಯೊಂದು ಬೇರೆಬೇರೆ ಕುಟ್ಟಿ ಎಲ್ಲವನ್ನೂ ಶೇರಿಸಿ ಮೇಲ್ಕಂಡ ಯಂತ್ರದಲ್ಲಿ ದ್ರಾವಕ ತೆಗೆಯುವುದು. ಈ ದ್ರಾವಕವನ್ನು ಮೂರು ಬೆರಳಿನಲ್ಲಿ ಬರುವಷ್ಟು ತಾಟೀಬೆಲ್ಲದ ಪುಡಿಯಲ್ಲಿ ೩-೪ ಬೊಟ್ಟುಗಳನ್ನು ಹಾಕಿ ಕಲಿಸಿ ಸೇವಿಸಿದರೆ ಪಾಂಡು, ಶೋಭೆ, ಕಾಮಾಲೆ, ಪ್ಲೀಹ, ಮಹೋದರ, ಗುಲ್ಮವಾಯು, ಕಲ್ಲುಕಟ್ಟು, ಹೊಟ್ಟೆವುಬ್ಬರ, ಸೂತಿಕಾವಾಯು ಈ ರೋಗಗಳು ಪರಿಹರವಾಗುವುವು.

## ಹನ್ನೊಂದನೆಯ ಅಧ್ಯಾಯ.

## ವಿಷವಸ್ತುಗಳ ಶುದ್ಧಿಗಳು.

ಪಾದರಸದ ವಿವರಣೆ—ಪಾದರಸವು ವರ್ಣಭೇದಗಳಿಂದ ನಾಲ್ಕು ವಿಧವಾಗಿರುತ್ತದೆ. ಇದರಲ್ಲಿ ಬೆಳ್ಳಗಿರುವದು ಬ್ರಹ್ಮಜಾತಿಯರಸ, ಕೆಂಪುಬಣ್ಣದ್ದು ಕ್ಷತ್ರಿಯಜಾತಿಯರಸ, ಹಳದಿಯಾಗಿರುವುದು ವೈಶ್ಯಜಾತಿಯರಸ, ಕಪ್ಪಾಗಿರುವುದು ಶೂದ್ರಜಾತಿಯರಸವೆಂದು ತಿಳಿಯತಕ್ಕದ್ದು.

ಬ್ರಹ್ಮಜಾತಿಯ ರಸವು ರಸಕಲ್ಪಸಾಧನೆಗೂ, ಕ್ಷತ್ರಿಯಜಾತಿಯ ರಸವು ಸಿದ್ಧಗುಟಿಕೆಗೂ, ವೈಶ್ಯಜಾತಿಯ ರಸವು ಧಾತುವಾದಕ್ಕೂ, ಶೂದ್ರಜಾತಿಯ ರಸವು ಇತರ ಕೆಲಸಗಳಿಗೂ ಉಪಯೋಗಿಸಲ್ಪಡುವುವು.

ಪಾದರಸವು ಒಳಗಡೆ ನೀಲವಾಗಿಯೂ, ಹೊರಗಡೆ ಚನ್ನಾಗಿ ಥಳಥಳಿಸುತ್ತಲೂ ಇದ್ದರೆ ರಸಕರ್ಮಸಿದ್ಧಿಗೆ ಉಪಯೋಗಿಸಬಹುದು. ಹಾಗಿಲ್ಲದೆ ಬೂದಿವರ್ಣವಾಗಿಯೂ ಬಹುಬೆಳ್ಳಗೂ ನಾನಾ ಬಣ್ಣಗಳುಳ್ಳದ್ದಾಗಿಯೂ ಇರುವ ಪಾದರಸವು ರಸಕರ್ಮಸಿದ್ಧಿಗೆ ಯೋಗ್ಯವಲ್ಲವು.

ಪಾದರಸದಲ್ಲಿ ನಾಗ, ವಂಗ, ಮಲ, ವಹ್ನಿ, ಚಾಂಚಲ್ಯ, ಗಿರಿ, ವಿಷ ಎಂಬ ಏಳು ದೋಷಗಳು ಸಹಜವಾಗಿವೆ.

ನಾಗದೋಷದಿಂದ ಹಲ್ಲುಗಳು ಉದುರುವುವು. ವಂಗದೋಷದಿಂದ ಕುಷ್ಠರೋಗವುಂಟಾಗುವುದು. ಮಲದೋಷದಿಂದ ಗಂಡಾವಮಾಲೆ ಹುಟ್ಟುವುದು. ವಹ್ನಿದೋಷದಿಂದ ದಾಹ ಮತ್ತು ಮೋಹ ಉಂಟಾಗುವುದು. ಚಾಂಚಲ್ಯದೋಷದಿಂದ ವೀರ್ಯನಷ್ಟವುಂಟಾಗುವುದು. ಗಿರಿದೋಷದಿಂದ ಮೇಹರೋಗಗಳುಂಟಾಗುವುವು. ವಿಷದೋಷದಿಂದ ಮರಣವುಂಟಾಗುವುದು. ಇತ್ಯಾದಿ ದೋಷಗಳು ಪಾದರಸದಲ್ಲಿರುವುದರಿಂದ ಇದನ್ನು ನಿರ್ಮಲವಾಗಿ ಶುದ್ಧಿಮಾಡಿಕೊಂಡು ಔಷಧಿಗಳಿಗೆ ಉಪಯೋಗಿಸಬೇಕು.

## ಪಾದರಸವನ್ನು ಶುದ್ಧಿಮಾಡುವ ಕ್ರಮ.

ಪಾದರಸದಲ್ಲಿರುವ ನಾಗದೋಷವು ಪರಿಹರವಾಗುವುದಕ್ಕೆ—ಪಾದರಸಕ್ಕೆ ೧೬ ಭಾಗ ಕೆಂಪು ಇಟ್ಟಿಗೆಪುಡಿ, ಅರಶಿನದಪುಡಿ, ಇಲ್ಲಣ, ಉಣ್ಣೆಯ ಬೂದಿ, ಸುಣ್ಣ ಇವುಗಳನ್ನು ತಪ್ತಖಲ್ವದಲ್ಲಿ ನಿಂಬೇಹುಳಿಯ ರಸಬಿಟ್ಟು ಒಂದು ದಿನ ಚೆನ್ನಾಗಿ ಅರೆದು ಅನಂತರ ಕಲಗಚ್ಚಿನಲ್ಲಿ ತೊಳೆಯುವುದರಿಂದ ನಾಗದೋಷವು ಪರಿಹರವಾಗುವುದು.

ವಂಗವೆಂಬ ದೋಷವು—ಹಾವುಮೆಕ್ಕೆ, ಅಂಕೋಲೆ ಇವುಗಳ ಬೇರಿನ ಚೂರ್ಣಗಳನ್ನು ಪಾದರಸವನ್ನು ತಪ್ತಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲಿ ಒಂದು ದಿನ ಚೆನ್ನಾಗಿ ಅರೆದು ಕಲಗಚ್ಚಿನಲ್ಲಿ ತೊಳೆಯುವುದರಿಂದ ವಂಗದೋಷವು ಪರಿಹಾರವಾಗುವುದು.

ಮಲದೋಷವು—ಕಕ್ಕೇಬೇರಿನ ಚೂರ್ಣ, ಲೋಳೆಸರದರಸ, ನಿಂಬೇಹಣ್ಣಿನರಸ, ಪಾದರಸ ಇವುಗಳನ್ನು ಖಲ್ವದಲ್ಲಿ ಒಂದು ದಿನ ಅರೆದು ಕಲಗಚ್ಚಿನಲ್ಲಿ ತೊಳೆಯುವುದರಿಂದ ಮಲದೋಷವು ಹೋಗುವುದು.

ವಹ್ನಿದೋಷವು—ಚಿತ್ರಮೂಲದ ಬೇರಿನ ಚೂರ್ಣವನ್ನು ಪಾದರಸವನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ಒಂದು ದಿನ ಚೆನ್ನಾಗಿ ಅರೆದು ಕಲಗಚ್ಚಿನಲ್ಲಿ ತೊಳೆಯುವುದರಿಂದ ವಹ್ನಿದೋಷವು ನಿವಾರಣೆಯಾಗುವುದು.

ಚಾಂಚಲ್ಯದೋಷವು—ಕರೀ ಉಮ್ಮತ್ತಿಬೇರಿನ ತಿರುಳಿನ ಚೂರ್ಣವನ್ನು ಪಾದರಸವನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ಒಂದು ದಿನ

ಚೆನ್ನಾಗಿ ಅರೆದು ಕಲಗಚ್ಚಿನಲ್ಲಿ ತೊಳೆಯುವುದರಿಂದ ಚಾಂಚಲ್ಯದೋಷವು ನಿವಾರಣೆಯಾಗುವುದು.

ಗಿರಿದೋಷವು—ತ್ರಿಕಟುಕ ಚೂರ್ಣವನ್ನೂ, ಪಾದರಸವನ್ನೂ ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ಒಂದು ದಿನ ಚನ್ನಾಗಿ ಅರೆದು ಕಲಗಚ್ಚಿನಲ್ಲಿ ತೊಳೆಯುವುದರಿಂದ ಗಿರಿದೋಷವು ನಿವಾರಣೆಯಾಗುವುದು.

ವಿಷದೋಷವು—ತ್ರಿಫಲೆಯ ಚೂರ್ಣವನ್ನೂ ಪಾದರಸವನ್ನೂ ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ಒಂದು ದಿನ ಚನ್ನಾಗಿ ಅರೆದು ಕಲಗಚ್ಚಿನಲ್ಲಿ ತೊಳೆಯುವುದರಿಂದ ವಿಷದೋಷವು ನಿವಾರಣೆಯಾಗುವುದು.

ಗಂಧಕ ವಿವರಣೆ—ಗಂಧಕವು ಕೆಂಪು, ಹಳದಿ, ಬಿಳುಪು, ಕಪ್ಪು ಎಂದು ನಾಲ್ಕು ವಿಧವಾಗಿರುತ್ತದೆ. ಇದರಲ್ಲಿ ಕೆಂಪುದು ಔಷಧಗಳಿಗೆ ಯುಕ್ತವಾದದ್ದಲ್ಲ. ಹಳದಿ ಬಣ್ಣವುಳ್ಳದ್ದು ರಸಾಯನಕ್ಕೆ ಉಪಯುಕ್ತವಾದದ್ದು. ಬಿಳಿಯದು ವ್ರಣಾದಿಗಳಿಗೆ ಲೇಪನಕ್ಕೆ ಯುಕ್ತವಾದದ್ದು. ಕರಿಯದು ಸಿಕ್ಕುವುದೇ ದುರ್ಲಭ.

ಗಂಧಕವನ್ನು ಶುದ್ಧಿಮಾಡುವ ಕ್ರಮ—ಒಂದು ಮಡಕೆಯಲ್ಲಿ ತಕ್ಕಷ್ಟು ಹಸುವಿನ ಹಾಲನ್ನು ಹಾಕಿ ಮಡಿಕೆಯ ಬಾಯಿಗೆ ಬಟ್ಟೆಯನ್ನು ಕಟ್ಟಿ ಗಂಧಕವನ್ನು ಪುಡಿಮಾಡಿ ಆ ಬಟ್ಟೆಯಮೇಲೆ ಹರಡಿ ಮೇಲೆ ಮುಚ್ಚಳವನ್ನು ಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಮಡಕೆಯನ್ನು ಭೂಮಟ್ಟಕ್ಕೆ ಸರಿಯಾಗಿ ಹಳ್ಳದಲ್ಲಿ ಮಡಗಿ ಸುತ್ತಲೂ ಮಣ್ಣಿನಿಂದ ದಟ್ಟಿಸಿ ಮಡಕೆಯ ಮುಚ್ಚಳದ ಮೇಲೆ ಕೂರ್ಮಪುಟ (ಗಂಧಕವು ಕರಗಿ ಮಡಕೆಯೊಳಗೆ ಇಳಿಯುವದಕ್ಕೆ ತಕ್ಕಷ್ಟು ಬೆರಣಿಗಳನ್ನಿಟ್ಟು ಪುಟ) ಹಾಕುವುದು. ಸಾಂಗಶೀತಳವಾದ ನಂತರ ಮಡಕೆಯಲ್ಲಿರುವ ಗಂಧಕವನ್ನು ತೆಗೆದು ತಣ್ಣೀರಿನಲ್ಲಿ ತೊಳೆದು ಒಣಗಿಸಬೇಕು. ಹೀಗೆಯೇ ಮೂರಾವರ್ತಿ ಮಾಡಬೇಕು. ನಂತರ ಆಡಿನ ಹಾಲಿನಲ್ಲಿ ಒಂದು ಸಲ, ಅಮೃತಬಳ್ಳಿ ಕಷಾಯದಲ್ಲಿ ಒಂದುಸಲ, ಜೇನುತುಪ್ಪದಲ್ಲಿ ಒಂದುಸಲ, ನೆಗ್ಗಿಲು ಬೇರಿನ ಕಷಾಯದಲ್ಲಿ ಒಂದುಸಲ, ಅತಿಮಧುರದ ಕಷಾಯದಲ್ಲಿ ಒಂದು ಸಲ, ಚಂಗಲಕೋಷ್ಟ ಕಷಾಯದಲ್ಲಿ ಒಂದುಸಲ, ತ್ರಿಫಲೆ ಕಷಾಯದಲ್ಲಿ ಒಂದು ಸಲ, ಗರುಗದಸೊಪ್ಪಿನ ರಸದಲ್ಲಿ ಒಂದುಸಲ, ಮಾದವಾಳದ ಹಣ್ಣಿನ ರಸದಲ್ಲಿ ಒಂದುಸಲ, ಲೋಳೀಸರದ ರಸದಲ್ಲಿ ಒಂದುಸಲ, ಕಿರುನೆಲ್ಲಿಸೊಪ್ಪಿನ ರಸದಲ್ಲಿ ಒಂದುಸಲ, ಮುಲ್ಲಂಗಿಸಮೂಲದ ರಸದಲ್ಲಿ ಒಂದುಸಲ ಕ್ರಮವಾಗಿ ಶುದ್ಧಿಮಾಡಿಕೊಳ್ಳಬೇಕು. ಹೀಗೆ ಶುದ್ಧಿಮಾಡಿದ ನಿರ್ಮಲವಾದ ಗಂಧಕವು ಔಷಧಗಳಲ್ಲಿ ಸೇರಿಸುವುದಕ್ಕೆ ಯುಕ್ತವಾದದ್ದು.

ಮತ್ತೊಂದು ವಿಧ—ಕರೇವುಮ್ಮತ್ತಿಸೊಪ್ಪಿನ ರಸ, ತಾಳೀವೊಳೇ ರಸ, ಗರುಗದಸೊಪ್ಪಿನ ರಸ, ಲೋಳೀಸರದ ರಸ, ಬಿಳೀಕೊಮ್ಮೇ ರಸ, ಬೆಲ್ಲದ ನೀರು,

ಹಸುವಿನ ಹಾಲು, ಹಸುವಿನ ತುಪ್ಪ ಇವುಗಳಲ್ಲಿ ಪ್ರತಿಒಂದರಲ್ಲಿಯೂ ಏಳೇಳು ಸಲ ಡೋಲಾಯಂತ್ರದಲ್ಲಿ ಬೇಯಿಸಲು ಗಂಧಕವು ಶುದ್ಧಿಯಾಗುವುದು.

ಶುದ್ಧಿಮಾಡದೆ ದೋಷವುಳ್ಳ ಗಂಧಕವನ್ನು ಔಷಧಗಳಲ್ಲಿ ಸೇರಿಸಬಾರದು. ಶುದ್ಧಿಮಾಡದ ಗಂಧಕವು ಕುಷ್ಠ, ತಾಪ, ಶುಕ್ರಕ್ಷಯ, ಓಜೋಹಾನಿ, ಅಶಕ್ತಿ, ಅರುಚಿ ಇವುಗಳನ್ನುಂಟುಮಾಡುವುದು.

ಶುದ್ಧವಾದ ಗಂಧಕವು ಕಾರವಾಗಿಯೂ, ಕಹಿಯಾಗಿಯೂ ಇರುವುದು, ಉಷ್ಣವೀರ್ಯವುಳ್ಳುದು, ಬಹುಬೇಗ ವ್ಯಾಪಿಸುವ ಶಕ್ತಿಯುಳ್ಳದ್ದು, ಪಿತ್ತವನ್ನು ಹೆಚ್ಚಿಸುವುದು, ಜಠರಾಗ್ನಿಯಿಂದ ಪಕ್ವವಾದಾಗ ಕಾರವಾಗುವುದು. ನವೆ, ವಿಸರ್ಪ ಜಾಡ್ಯ, ಜಂತುರೋಗ, ಕುಷ್ಠ, ಕ್ಷಯ, ಪ್ಲೀಹೆ, ಕಫ, ವಾಯು ಇವುಗಳನ್ನು ಪರಿಹರಿಸುವುದಲ್ಲದೆ ರಸಾಯನ ಪದಾರ್ಥವಾಗಿರುವುದು.

ಇಂಗಳೀಕದ ವಿವರಣೆ—ಇಂಗಳೀಕವು ಚರ್ಮಾರವೆಂದೂ, ಶುಕತುಂಡವೆಂದೂ, ಹಂಸಪಾದವೆಂದೂ ಮೂರು ವಿಧವಾಗಿರುವುದು.

ಚರ್ಮಾರವೆಂಬುವುದು ಬಹಳ ಕೆಂಪಾಗಿರುವುದು. ಇದು ಚರ್ಮಗಳಿಗೆ ಕೆಂಪು ಬಣ್ಣವನ್ನು ಕೊಡುವುದಕ್ಕೆ ಉಪಯೋಗಿಸಲ್ಪಡುವುದು. ಶುಕತುಂಡವೆಂಬ ಇಂಗಳೀಕವು ಗಿಣಿಯ ಕೊಕ್ಕಿನಂತೆ ಹಳದಿಯ ಬಣ್ಣ ಸೇರಿ ಕೆಂಪಾಗಿರುವುದು. ಹಂಸಪಾದವೆಂಬ ಇಂಗಳೀಕವು ಬಿಳಿಯ ಗೆರೆಗಳುಂಟಾಗಿ ಹವಳದ ಬಣ್ಣವುಳ್ಳದ್ದಾಗಿರುವುದು.

ಇಂಗಳೀಕವನ್ನು ಶುದ್ಧಿಮಾಡುವ ಕ್ರಮ—ಇಂಗಳೀಕವನ್ನು ಮೇಕೆ ಹಾಲಿನಲ್ಲಿ ಒಂದುದಿನ, ನಿಂಬೇಹಣ್ಣಿನ ರಸದಲ್ಲಿ ಒಂದುದಿನ ರಸ ಇಂಗುವವರೆಗೂ ಖಲ್ವದಲ್ಲಿ ಚನ್ನಾಗಿ ಮರ್ದಿಸಿದರೆ ಶುದ್ಧಿಯಾಗುವುದು

ತಾಳಕವನ್ನು ಶುದ್ಧಿಮಾಡುವ ಕ್ರಮ—ಪತ್ರೆತಾಳಕವನ್ನು ರೇಕು ರೇಕುಗಳಾಗಿ ಸುಲಿದು ಒಂದು ಬಟ್ಟೆಯಲ್ಲಿ ಗಂಟುಕಟ್ಟಿ ಕಲ್ಲು ಸುಣ್ಣದ ನೀರನ್ನು ಮಡಕೆಯಲ್ಲಿ ಹಾಕಿ ಡೋಲಾಯಂತ್ರದಲ್ಲಿ ಕ್ರಮವಾಗಿ ಒಂದು ಜಾವ ಉರಿಹಾಕಿ ತೆಗೆದು ತಾಳಕವನ್ನು ತಣ್ಣೀರಿನಲ್ಲಿ ತೊಳೆದು ಬೇರೆ ಬಟ್ಟೆಯಲ್ಲಿ ಗಂಟುಕಟ್ಟಿ ನಂತರ ಮೇಲ್ಕಂಡ ಪ್ರಕಾರವಾಗಿ ಗೋಮೂತ್ರದಲ್ಲಿ ಒಂದು ಜಾವವೂ, ಬೂದು ಕುಂಬಳ ರಸದಲ್ಲಿ ಒಂದು ಜಾವವೂ, ಎಳ್ಳೆಣ್ಣೆಯಲ್ಲಿ ಒಂದು ಜಾವವೂ, ತ್ರಿಫಲೆಯ ಕಷಾಯದಲ್ಲಿ ಒಂದು ಜಾವವೂ, ಅರಶಿನದ ನೀರಿನಲ್ಲಿ ಒಂದು ಜಾವವೂ, ನಿಂಬೇಹಣ್ಣಿನ ರಸದಲ್ಲಿ ಒಂದು ಜಾವವೂ ಈ ಪ್ರಕಾರವಾಗಿ ಪ್ರತಿಯೊಂದು ದ್ರವದಲ್ಲಿಯೂ ಎರಡೆರಡುಸಲ ಪ್ರತ್ಯೇಕವಾಗಿ ಡೋಲಾಯಂತ್ರದಲ್ಲಿ ಬೇಯಿಸಿದರೆ ತಾಳಕ ಶುದ್ಧಿಯಾಗುವುದು. ಈ ರೀತಿ ಶುದ್ಧಿಯಾದ ತಾಳಕವು ಔಷಧಗಳಿಗೆ ಉಪಯೋಗಿಸುವುದಕ್ಕೆ ಯುಕ್ತವಾದದ್ದು.

ತಾಳಕವು ಶುದ್ಧಿಮಾಡಲ್ಪಡದಿದ್ದರೆ ಆಯುಸ್ಸನ್ನು ಹರಿಸುವುದು. ಕಫ, ವಾಯು, ಮೇಹ, ಉರಿ, ಗುಳ್ಳೆಗಳು, ಕೈಕಾಲುಹಿಡಿತ ಇವುಗಳನ್ನುಂಟುಮಾಡು ವುದು.

ಶುದ್ಧವಾದ ತಾಳಕವು ಶ್ಲೇಷ್ಮ, ವಾತ, ವಿಷ, ರಕ್ತದೋಷ, ಶೀತದ ರೋಗ, ಕುಷ್ಠ ಇವುಗಳನ್ನು ಪರಿಹರಿಸಿ ಅಗ್ನಿದೀಪನವನ್ನುಂಟುಮಾಡುವುದು.

ಮಣಿಶಿಲೆ ಶುದ್ಧಿ—ಮಣಿಶಿಲೆಯನ್ನು ಬಟ್ಟೆಯಲ್ಲಿ ಗಂಟುಕಟ್ಟಿ ಆಡಿನ ಮೂತ್ರದಲ್ಲಿ ಮೂರು ದಿನ ಡೋಲಾಯಂತ್ರದಲ್ಲಿ ಬೇಯಿಸಿದರೆ ಶುದ್ಧಿಯಾಗುವುದು. ಅಥವಾ ನರುವಲು ಎಲೆ ರಸದಲ್ಲಿ ಆದರು, ಗರುಗದಸೊಪ್ಪಿನ ರಸದಲ್ಲಿಯಾದರು, ಅಗಸೇಸೊಪ್ಪಿನ ರಸದಲ್ಲಿಯಾದರು, ಹಸೀಶುಂಠಿ ರಸದಲ್ಲಾದರು ಮೇಲೆ ಹೇಳಿದ ಪ್ರಕಾರ ಡೋಲಾಯಂತ್ರದಲ್ಲಿ ಬೇಯಿಸಿದರೆ ಶುದ್ಧಿಯಾಗುವುದು.

ಇದರ ಗುಣ—ಮೂತ್ರಕೃಚ್ಛ್ರ, ವಿಷ, ಶ್ವಾಸ, ಕಾಸ, ಭೂತಬಾಧೆ, ಕಫ, ರಕ್ತದೋಷ ಇವುಗಳನ್ನು ಪರಿಹರಿಸುವುದು.

ಮೈಲತುತ್ತ ಶುದ್ಧಿ—ಮೈಲತುತ್ತ ೩ ತೊಲೆ, ಸೂರ್ತಿಬೆಳಗಾರ ೩ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ತಣ್ಣೀರಿನಿಂದ ಅರದು ಬಿಲ್ಲೆಮಾಡಿ ಎರಡು ಹಣತೆಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಲಘುವುಟ ವಿಟ್ಟರೆ ಮೈಲತುತ್ತವು ಶುದ್ಧಿಯಾಗುವುದು.

ಮತ್ತೊಂದು ವಿಧ—ಮೈಲತುತ್ತಕ್ಕೆ ಹತ್ತರಲ್ಲಿ ಒಂದು ಭಾಗ ಸೂರ್ತಿ ಬೆಳಗಾರವನ್ನು ಪಾರಿವಾಳದ ಹಿಕ್ಕೆಯನ್ನು ಸೇರಿಸಿ ಅರೆದು ಒಂದು ಲಘುಪುಟ ವಿಟ್ಟು ತೆಗೆದುಕೊಂಡು, ಆಕಳ ಮೊಸರಿನಿಂದ ಅರೆದು ಒಂದು ಪುಟವನ್ನೂ, ಜೇನುತುಪ್ಪದಿಂದ ಅರದು ಒಂದು ಪುಟವನ್ನೂ ಕೊಟ್ಟರೆ ಮೈಲತುತ್ತವು ಶುದ್ಧಿಯಾಗುವುದು.

ಪಾಲುತುತ್ತ ಶುದ್ಧಿ—ಪಾಲುತುತ್ತವನ್ನು ಮಕ್ಕಳ ಮೂತ್ರದಲ್ಲಿಯಾಗಲಿ, ಮನುಷ್ಯನ ಮೂತ್ರದಲ್ಲಾಗಲಿ, ಗೋಮೂತ್ರದಲ್ಲಾಗಲಿ, ಕುದುರೆಯ ಮೂತ್ರ ದಲ್ಲಾಗಲಿ ಏಳು ಜಾವ ಡೋಲಾಯಂತ್ರದಲ್ಲಿ ಬೇಯಿಸಿದರೆ ಪಾಲುತುತ್ತ ಶುದ್ಧಿ ಯಾಗುವುದು.

ಮಾಕ್ಷಿಕದ ವಿವರಣೆ—ಮಾಕ್ಷಿಕವು ಸ್ವರ್ಣಮಾಕ್ಷಿಕವೆಂದೂ, ತಾರ ಮಾಕ್ಷಿಕವೆಂದೂ ಎರಡು ವಿಧ. ಸ್ವರ್ಣಮಾಕ್ಷಿಕವು ಹೊಂಬಣ್ಣವಾಗಿಯೂ, ಭಾರವಾಗಿಯೂ, ಜಿಡ್ಡುಳ್ಳದಾಗಿಯೂ, ಸ್ವಲ್ಪ ನೀಲವರ್ಣದ ಕಾಂತಿಯುಳ್ಳ ದಾಗಿಯೂ, ಚಿನ್ನದ ಒರೆಕೊಡುವುದಾಗಿಯೂ ಇದ್ದರೆ ಅದು ಉತ್ತಮವಾದುದು.

ಸ್ವರ್ಣಮಾಕ್ಷಿಕ ಶುದ್ಧಿಮಾಡುವ ಕ್ರಮ—ಸ್ವರ್ಣಮಾಕ್ಷಿಕ ೩ ಭಾಗ, ಸೈಂಧವಲವಣ ೧ ಭಾಗ ಇವೆರಡನ್ನೂ ಒಂದು ಕಬ್ಬಿಣದ ಪಾತ್ರೆಯಲ್ಲಿ ಹಾಕಿ

ನಿಂಬೆಯ ಹುಳಿಯನ್ನಾಗಲಿ ಮಾದಲದ ಹುಳಿಯನ್ನಾಗಲಿ ಹಿಂಡಿ ಬೆಂಕಿಯಲ್ಲಿಟ್ಟು ಕಬ್ಬಿಣದ ಪಾತ್ರೆ ಕೆಂಪಗಾಗುವವರಿವಿಗು ಕುದಿಸಿದರೆ ಶುದ್ಧಿಯಾಗುವುದು.

ಮತ್ತೊಂದು ವಿಧ — ಹೇಮಮಾಕ್ಷಿಕವನ್ನು ಚಿಟ್ಟೆರಳೆಣ್ಣೆ, ಮಾದಲದ ಹುಳಿ ಇವುಗಳಲ್ಲಿ ಹಾಕಿ ಕುದಿಸಲು ಶುದ್ಧವಾಗುವುದು. ಅಥವಾ ಬಾಳೆಯ ಗಡ್ಡೆ ರಸದಲ್ಲಿ ೨ ಗಳಿಗೆ ಬೇಯಿಸಿದರೆ ಶುದ್ಧವಾಗುವುದು. ಅಥವಾ ಬೆಂಕಿಯಲ್ಲಿಟ್ಟು ಚೆನ್ನಾಗಿ ಕಾಯಿಸಿ ಅರಿಸಿನದ ಕಷಾಯದಲ್ಲಿ ಅದ್ದಿದರೆ ಶುದ್ಧವಾಗುವುದು.

ಅಗಸೇಸೊಪ್ಪಿನ ರಸದಲ್ಲಿ ನುಗ್ಗೆಯ ಬೇರನ್ನು ಅರೆದು ಅದರ ಮಧ್ಯದಲ್ಲಿ ಹೇಮಮಾಕ್ಷಿಕವನ್ನು ಇರಿಸಿ ಪುಟಹಾಕಿ ತೆಗೆದುಕೊಂಡು ನಿಂಬೆಯ ಹುಳಿಯಲ್ಲಿ ಕುದಿಸಿದರೆ ಶುದ್ಧವಾಗುವುದು.

ಹೇಮಮಾಕ್ಷಿಕ, ತಾರಮಾಕ್ಷಿಕ, ಕಾಕಮಾಕ್ಷಿಕ ಇವುಗಳಲ್ಲಿ ಯಾವದನ್ನಾದರೂ ಕೆಂಪಾಗಿ ಕಾಯಿಸಿ ಅಗಸೇಸೊಪ್ಪಿನ ರಸದಲ್ಲಿಯಾಗಲಿ, ನುಗ್ಗೇಬೇರಿನ ರಸದಲ್ಲಿಯಾಗಲಿ ಕೆಂಪಗೆ ಆಗುವವರಿವಿಗು ಹಾಕುತ್ತಾ ಇರುವುದು ಅಥವಾ ಮಾಕ್ಷಿಕವನ್ನು ಕೆಂಪಾಗಿ ಕಾಯಿಸಿ ನಿಂಬೇಹಣ್ಣಿನ ರಸದಲ್ಲಿ ಕೆಂಪಗೆ ಆಗುವವರಿವಿಗು ಹಾಕಬೇಕು. ಹೀಗೆ ಮಾಡಿದರೆ ಶುದ್ಧಿಯಾಗುವುದು.

ಕರ್ಪೂರ ಶಿಲಾಜಿತು ಶುದ್ಧಿ—ಕರ್ಪೂರ ಶಿಲಾಜಿತನ್ನು ಹಸುವಿನ ಹಾಲಿನಲ್ಲಿ ಒಂದು ದಿನ; ಅಳಲೇಕಾಯಿ, ತಾರೇಕಾಯಿ, ನೆಲ್ಲೀಕಾಯಿ ಇವುಗಳ ಕಷಾಯಗಳಿಂದ ಒಂದು ದಿನ, ಗರುಗದಸೊಪ್ಪಿನ ರಸದಲ್ಲಿ ಒಂದು ದಿನವು ರಸ ಹಿಂಗುವವರಿವಿಗು ಖಲ್ವದಲ್ಲಿ ಹಾಕಿ ಅರದು ಪ್ರತಿ ದಿನವು ಬಿಸಿಲಿನಲ್ಲಿ ಒಣಗಿಸಿದರೆ ಶುದ್ಧಿಯಾಗುವುದು.

ರಸಕರ್ಪೂರ ಶುದ್ಧಿ—ವೀಳ್ಯೆದೆಲೆ ರಸ, ತುಲಸೀ ರಸ, ಮೆಣಸು ಪುಡಿ ಮಾಡಿದ್ದು ಇವುಗಳನ್ನು ಒಂದು ಮಡಕೆಯಲ್ಲಿ ಹಾಕಿ ರಸಕರ್ಪೂರವನ್ನು ಒಂದು ಬಟ್ಟೆಯಲ್ಲಿ ಗಂಟುಕಟ್ಟಿ ಡೋಲಾಯಂತ್ರದಲ್ಲಿ ಒಂದು ಜಾವ ಬೇಯಿಸಲು ರಸಕರ್ಪೂರವು ಶುದ್ಧಿಯಾಗುವುದು.

ಮುರುದಾರುಸಿಂಗಿ ಶುದ್ಧಿ—ಮುರುದಾರುಸಿಂಗನ್ನು ಬೆಂಕಿಯಲ್ಲಿ ಕಾಯಿಸಿ ಮೇಕೆಯ ಮೂತ್ರದಲ್ಲಿ ಏಳುಸಲ ಅದ್ದಲು ಮುರುದಾರುಸಿಂಗು ಶುದ್ಧಿಯಾಗುವುದು.

ಮತ್ತೊಂದು ವಿಧಾನ—ಹಸೀಶುಂಠೀ ರಸ, ಮಾದವಾಳದ ಹಣ್ಣಿನ ರಸ ಇವು ಎರಡು ಶೇರಿಸಿ ಇದರಲ್ಲಿ ಮುರುದಾರುಸಿಂಗಿ ಹಾಕಿ ೩ ದಿನ ಭಾವನೆ ಮಾಡಲು ಶುದ್ಧಿಯಾಗುವುದು.

ವತ್ಸನಾಭಿ ಶುದ್ಧಿ—ವತ್ಸನಾಭಿಯನ್ನು ತುಂಡುತುಂಡುಗಳಾಗಿ ಕತ್ತರಿಸಿ ಒಂದು ಬಟ್ಟೆಯಲ್ಲಿ ಗಂಟುಕಟ್ಟಿ ಒಂದು ಮಡಕೆಯಲ್ಲಿ ಮೇಕೆ ಮೂತ್ರವಾಗಲಿ,

ಹಸುವಿನ ಮೂತ್ರವಾಗಲಿ ಹುಯಿದು ಮೇಲ್ಕಂಡ ಗಂಟು ಮಡಕೆಯಲ್ಲಿ ಹಾಕಿ ಬಿಸಲಿನಲ್ಲಿ ಮೂರು ದಿವಸ ಇಡಲು ವತ್ಸನಾಭಿ ಶುದ್ಧಿ ಆಗುವದು. ಪ್ರತಿದಿನವು ಹೊಸಮೂತ್ರವನ್ನೇ ಉಪಯೋಗಿಸಬೇಕು. ವತ್ಸನಾಭಿಯನ್ನು ಬಿಸಲಿನಲ್ಲಿ ಚನ್ನಾಗಿ ಒಣಗಿಸಿ ಭದ್ರವಾಗಿ ಇಟ್ಟುಕೊಳ್ಳುವುದು.

ವಿಷಮುಷ್ಟಿಬೀಜ ಶುದ್ಧಿ—ವಿಷಮುಷ್ಟಿ ಬೀಜಗಳನ್ನು ತಂದು ಹಸುವಿನ ಮೂತ್ರದಲ್ಲಿ ಒಂದುದಿನ ನೆನೆಯಿಟ್ಟು, ಎರಡನೆಯದಿನ ತೆಗೆದು ತಣ್ಣೀರಿನಲ್ಲಿ ತೊಳದು ಮೇಲಿನ ಪೊರೆಯನ್ನು ಕತ್ತಿಯಿಂದ ಗೀಚಿ ತುಂಡುತುಂಡುಗಳಾಗಿ ಕತ್ತರಿಸಿ ಚಿಲಕೀರೆಸೊಪ್ಪಿನ ರಸದಲ್ಲಿ ಒಂದುಜಾವ ಬೇಯಿಸಲು ವಿಷಮುಷ್ಟಿಬೀಜ ಶುದ್ಧಿಯಾಗುವುದು.

ಮತ್ತೊಂದು ವಿಧ—ವಿಷಮುಷ್ಟಿ ಬೀಜ ಏಳುದಿವಸ ಕಲಗಚ್ಚಿನಲ್ಲಿ ನೆನೆಹಾಕಲು ಶುದ್ಧಿಯಾಗುವುದು. ಅಥವಾ ಹಸುವಿನ ತುಪ್ಪದಲ್ಲಿ ಹುರಿಯಲು ಶುದ್ಧಿಯಾಗುವುದು

ಉನ್ಮತ್ತಿ ಬೀಜ ಶುದ್ಧಿ—ಕರೇವುನ್ಮತ್ತಿಬೀಜ ನಿಂಬೇಹಣ್ಣಿನ ರಸದಲ್ಲಿ ಒಂದುಜಾವ ನೆನೆಹಾಕಿ ಅನಂತರ ಮೇಲಿನ ಸಿಪ್ಪೆ ತೆಗೆದು ಪಪ್ಪನ್ನು ತೆಗೆದು ಒಣಗಿಸಿ ಮತ್ತೊಂದುಸಲ ನಿಂಬೇಹಣ್ಣಿನ ರಸದಲ್ಲಿ ಒಂದುಜಾವ ಭಾವನೆಮಾಡಿ ಒಣಗಿಸಿ ಇಟ್ಟುಕೊಳ್ಳಲು ಉನ್ಮತ್ತಿಬೀಜ ಶುದ್ಧಿಯಾಗುವುದು

ಮತ್ತೊಂದು ವಿಧ—ಉನ್ಮತ್ತಿಯ ಬೀಜವನ್ನು ಗೋಮೂತ್ರದಲ್ಲಿ ನಾಲ್ಕುಜಾವ ನೆನೆಸಿಟ್ಟಿದ್ದು ಆಮೇಲೆ ಚೆನ್ನಾಗಿ ಕುದಿಸಿ ಬಿಸಿನೀರಿನಿಂದ ತೊಳೆದು ಒಣಗಿಸಿ ಸಿಪ್ಪೆಯನ್ನು ತೆಗದುಹಾಕಿದರೆ ಶುದ್ಧಿಯಾಗುವುದು.

ತಿಗಡೆ ಶುದ್ಧಿ—ಕರೇತಿಗಡೆಯನ್ನಾದರೂ ಬಿಳೇತಿಗಡೆಯನ್ನಾದರು ಹಸುವಿನ ಹಾಲಿನಲ್ಲಿ ಬೇಯಿಸಿ ಒಣಗಿಸಿಕೊಂಡರೆ ಶುದ್ಧಿಯಾಗುವುದು

ಗೇರುಬೀಜ ಶುದ್ಧಿ-ಗೇರುಬೀಜಗಳ ಕೊನೆಯಲ್ಲಿರುವ ಗಂಟನ್ನು ತೆಗೆದು ಒಂದು ಮಡಕೆಯಲ್ಲಿ ಯಮ್ಮೆ ಸಗಣಿ ನೀರುಹಾಕಿ ಕಲಸಿ ಬೀಜಗಳನ್ನು ಅದರಲ್ಲಿ ಹಾಕಿ ಒಂದುಕುದಿ ಬರುವವರಿವಿಗು ಬೇಯಿಸಿ ತೆಗೆದು ತಣ್ಣೀರಿನಲ್ಲಿ ತೊಳದು ಬಿಸಲಿನಲ್ಲಿ ಒಣಗಿಸಿ ತೂಬರೆಚಕ್ಕೆ, ಹಸುವಿನ ಮೂತ್ರ ಒಂದು ಮಡಕೆಯಲ್ಲಿ ಹಾಕಿ ಆದರಲ್ಲಿ ಬೀಜಗಳನ್ನುಹಾಕಿ ಒಂದುಕುದಿ ಬರುವವರಿಗು ಬೇಯಿಸಿ ತೆಗೆದು ತಣ್ಣೀರಿನಲ್ಲಿ ತೊಳದು ಬಿಸಲಿನಲ್ಲಿ ಒಣಗಿಸಿ ಒಂದು ಮಡಕೆಯಲ್ಲಿ ಕಾಲುಭಾಗ ಹುಣಿಸೇಸೊಪ್ಪು ಹಾಕಿ ಆದರಮೇಲೆ ಗೇರುಬೀಜಗಳನ್ನು ಹಾಕಿ ಅದರಮೇಲೆ ಹುಣಿಸೇಸೊಪ್ಪುಹಾಕಿ ಹಸುವಿನ ಮಜ್ಜಿಗೆ ಹಾಕಿ ಒಂದುಕುದಿ ಬರುವವರಿವಿಗು ಬೇಯಿಸಿ ತಣ್ಣೀರಿನಲ್ಲಿ ತೊಳದು ಬಿಸಲಿನಲ್ಲಿ ಒಣಗಿಸಿಕೊಂಡರೆ ಗೇರುಬೀಜ ಶುದ್ಧಿಯಾಗುವುದು.

ಮತ್ತೊಂದುವಿಧ—ಹುಣಿಸೇಸೊಪ್ಪು, ತೂಬರೆಚಕ್ಕೆ ಚೆನ್ನಾಗಿ ಕುಟ್ಟಿ ಒಂದು ಮಡಿಕೆಯಲ್ಲಿ ಹಾಕಿ ಹಸುವಿನ ಮಜ್ಜಿಗೆ ಹಾಕಿ ಇದರಲ್ಲಿ ಗೇರುಬೀಜವನ್ನು ಹಾಕಿ ಕಲಸಿ ಎರಡು ದಿನ ನೆನೆಯಿಟ್ಟು ಮೂರನೆಯ ದಿನ ಒಂದು ಕುದಿ ಬರುವ ವರಿವಿಗು ಬೇಯಿಸಿ ಬೀಜಗಳನ್ನು ತೆಗೆದು ತಣ್ಣೀರಿನಲ್ಲಿ ತೊಳದು ಬಿಸಲಿನಲ್ಲಿ ಒಣಗಿಸಿ ಒಂದು ಮಡಕೆಯಲ್ಲಿ ಇಸಮುದಾರಿ ಸೊಪ್ಪಿನರಸ ಹಾಕಿ ಅದರಲ್ಲಿ ಗೇರು ಬೀಜಗಳನ್ನು ಹಾಕಿ ಒಂದು ಕುದಿ ಬರುವವರಿವಿಗು ಬೇಯಿಸಿ ತಣ್ಣೀರಿನಲ್ಲಿ ತೊಳದು ಬಿಸಲಿನಲ್ಲಿ ಒಣಗಿಸಿಕೊಂಡರೆ ಗೇರುಬೀಜ ಶುದ್ಧಿಯಾಗುವುದು.

ಅಫೀಮು ಶುದ್ಧಿ—ಬಲರಾಕ್ಷಸಿಯಲೆಯಲ್ಲಿ ಅಫೀಮನ್ನು ಇರಿಸಿ ಬಟ್ಟೆಯಲ್ಲಿ ಗಂಟುಕಟ್ಟಿ ಒಂದು ಮಡಕೆಯಲ್ಲಿ ಹಸುವಿನ ಹಾಲುಹಾಕಿ ಇದರಲ್ಲಿ ಮೇಲ್ಕಂಡ ಅಫೀಮನ್ನು ಡೋಲಾಯಂತ್ರದಿಂದ ೧ ಘಂಟೆ ಬೇಯಿಸಿಕೊಳ್ಳಲು ಶುದ್ಧಿಯಾಗುವುದು.

ಮತ್ತೊಂದು ವಿಧ— ಅಫೀಮನ್ನು ಹಸಿಶುಂಠಿಯ ರಸದಲ್ಲಿ ಇಪ್ಪತ್ತೊಂದುಸಲ ಭಾವನೆ ಮಾಡಿದರೆ ಶುದ್ಧಿಯಾಗುವುದು.

ಗೈರಿಕವೆಂದರೆ ಕಾವಿಕಲ್ಲು ಶುದ್ಧಿ—ಕಾವಿಕಲ್ಲನ್ನು ಸ್ವಲ್ಪ ಹಸುವಿನ ತುಪ್ಪದಲ್ಲಿ ಹುರಿದರೆ ಶುದ್ಧಿಯಾಗುವುದು.

ಸಮುದ್ರದನೊರೆ ಶುದ್ಧಿ— ಸಮುದ್ರದನೊರೆಯನ್ನು ನಿಂಬೇಹಣ್ಣಿನ ರಸದಿಂದ ಮರ್ದಿಸಲು ಶುದ್ಧಿಯಾಗುವುದು.

ಸಿಂಧೂರವೆಂದರೆ ಚಂದಿರ (ಚಂದ್ರ) ಶುದ್ಧಿ — ಸಿಂಧೂರವನ್ನು ನಿಂಬೆಯಹುಳಿಯಿಂದ ಅರೆದು ಬಿಸಿಲಿನಲ್ಲಿ ಒಣಗಿಸಿ ಮತ್ತೆ ಅಕ್ಕಿಯ ಕಲಗಚ್ಚಿನಿಂದ ಅರೆದು ಬಿಸಿಲಿನಲ್ಲಿ ಒಣಗಿಸಿದರೆ ಶುದ್ಧಿಯಾಗುವುದು.

ಜಾಪಾಳ ಶುದ್ಧಿ—ಜಾಪಾಳ ತಂದು ಮೇಲಿನ ಹೊಟ್ಟು ತೆಗೆದು ಒಂದು ಮಡಕೆಯಲ್ಲಿ ಎಮ್ಮೆಸಗಣಿ ಹಾಕಿ ನೀರು ಹಾಕಿ ಕಲಸಿ ಅದರಲ್ಲಿ ಜಾಪಾಳದ ಬೀಜಗಳನ್ನು ಹಾಕಿ ಒಂದು ಜಾವ ಬೇಯಿಸಿ ತೆಗೆದು ತಣ್ಣೀರಿನಲ್ಲಿ ತೊಳೆದು ಜಾಪಾಳದ ಬೀಜದ ವಳಗಿನ ಮೊಳಕೆಗಳನ್ನು ತೆಗೆದು ಹಾಕಿ ಬಿಸಲಿನಲ್ಲಿ ಒಣಗಿಸಿ ಒಂದು ಮಡಕೆಯಲ್ಲಿ ಹಸುವಿನ ಮಜ್ಜಿಗೆ ಹಾಕಿ ಒಂದು ಜಾವ ಬೇಯಿಸಿ ತೆಗೆದು ತಣ್ಣೀರಿನಲ್ಲಿ ತೊಳೆದು ಬಿಸಲಿನಲ್ಲಿ ಒಣಗಿಸಿ ಒಂದು ಮಡಕೆಯಲ್ಲಿ ನಿಂಬೇಹಣ್ಣಿನ ರಸ ಹಾಕಿ ಅದರಲ್ಲಿ ಜಾಪಾಳದ ಬೀಜಗಳನ್ನು ಹಾಕಿ ಮೂರು ದಿವಸ ನೆನಸಿ ನಾಲ್ಕನೆಯ ದಿನ ತಣ್ಣೀರಿನಲ್ಲಿ ತೊಳೆದು ಬಿಸಲಿನಲ್ಲಿ ಒಣಗಿಸಿ ಒಂದು ಬಾಂಡ್ಲಿಯಲ್ಲಿ ಚಿಟ್ಟೆರಳೆಣ್ಣೆ ಸ್ವಲ್ಪ ಹಾಕಿ ಅದರಲ್ಲಿ ಜಾಪಾಳದ ಬೀಜಗಳನ್ನು ಹಾಕಿ ಸುಮಾರಾಗಿ ಹುರಿದುಕೊಂಡರೆ ಜಾಪಾಳವು ಶುದ್ಧಿಯಾಗುವುದು.

ಗೋಮೂತ್ರ ಶಿಲಾಜಿತು ಶುದ್ಧಿ—ಗೋಮೂತ್ರ ಶಿಲಾಜಿತು ತಂದು ಒಂದು ಬಟ್ಟೆಗೆ ಸುಣ್ಣವನ್ನು ಲೇಪಿಸಿ ಈ ಬಟ್ಟೆಯಲ್ಲಿ ಗೋಮೂತ್ರ ಶಿಲಾಜಿತುವನ್ನು ಸುತ್ತಿ ಬೆಂಕಿಕೆಂಡಗಳ ಮಧ್ಯದಲ್ಲಿಟ್ಟು ಸುಟ್ಟು ತೆಗೆದುಕೊಂಡು ಬಟ್ಟೆಯನ್ನು ತೆಗೆದು ಶಿಲಾಜಿತುಗಳನ್ನು ತಣ್ಣೀರಿನಲ್ಲಿ ತೊಳೆದು ನೈದಿಲೆಗಡ್ಡೆ ರಸದಲ್ಲಿ ಏಳು ದಿನ ಭಾವನೆಮಾಡಲು ಗೋಮೂತ್ರ ಶಿಲಾಜಿತು ಶುದ್ಧಿಯಾಗುವುದು.

ಮುತ್ತು ಶುದ್ಧಿ—ಮುತ್ತಿನಲ್ಲಿ ಆಣಿಮುತ್ತುಯೆಂತಲೂ, ಸೋಗಮುತ್ತುಯೆಂತಲೂ ಎರಡು ಬಗೆ ಇರುವುದು. ಮುತ್ತನ್ನು ಬಿಳೇವ್ರುಪ್ಪಿಹಣ್ಣಿನ ರಸದಲ್ಲಿ ೨ ದಿನ ಭಾವನೆಮಾಡಿ ತಣ್ಣೀರಿನಲ್ಲಿ ತೊಳೆದು, ನಿಂಬೇಹಣ್ಣಿನ ರಸದಲ್ಲಿ ೧ ದಿನ ಭಾವನೆಮಾಡಿ ತಣ್ಣೀರಿನಲ್ಲಿ ತೊಳದುಕೊಂಡರೆ ಮುತ್ತು ಶುದ್ಧಿಯಾಗುವುದು.

ಮತ್ತೊಂದು ವಿಧ—ಮುತ್ತನ್ನು ತಗ್ಗಿಸೊಪ್ಪಿನ ರಸದಲ್ಲಿ ೨ ದಿನ, ನಿಂಬೇಹಣ್ಣಿನ ರಸದಲ್ಲಿ ೧ ದಿನವೂ ಭಾವನೆಮಾಡಿ ತಣ್ಣೀರಿನಲ್ಲಿ ತೊಳೆದು ತೆಗೆದುಕೊಂಡರೆ ಮುತ್ತು ಶುದ್ಧಿಯಾಗುವುದು.

ಮುತ್ತಿನಚಿಪ್ಪು ಶುದ್ಧಿ—ಒಳ್ಳೇ ಮುತ್ತಿನ ಚಿಪ್ಪುಗಳನ್ನು ಚೂರು ಚೂರಾಗಿ ಒಡೆದು ಒಂದು ಗಾಜಿನ ಪಾತ್ರೆಯಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲಿ ೮ ಜಾವ ನೆನೆಯಿಸಿ ನೀರಿನಿಂದ ತೊಳೆದುಕೊಂಡರೆ ಶುದ್ಧಿಯಾಗುವುದು.

ಗುಗ್ಗಿಲ (ಬಿಳೀಧೂಪ) ಶುದ್ಧಿ—ಗುಗ್ಗಿಲವನ್ನು ಬಟ್ಟೆಯಲ್ಲಿ ಗಂಟುಕಟ್ಟಿ ತ್ರಿಫಲೆಯ ಕಷಾಯದಲ್ಲಿ ಡೋಲಾಯಂತ್ರದಲ್ಲಿ ೨ ಜಾವ ಬೇಯಿಸಿ ತಣ್ಣೀರಿನಲ್ಲಿ ತೊಳೆದುಕೊಂಡರೆ ಗುಗ್ಗಿಲ ಶುದ್ಧಿಯಾಗುವುದು.

ಮೈಸಾಕ್ಷಿ ಗುಗ್ಗಿಲ ಶುದ್ಧಿ—ಎಮ್ಮೆಮೊಸರಿನಲ್ಲಿ ಅರಸಿನವನ್ನು ಕಲಸಿ ಅದರಲ್ಲಿ ಮೈಸಾಕ್ಷಿ ಗುಗ್ಗಿಲ ಹಾಕಿ ಮೂರುದಿನ ನೆನೆಹಾಕಿ ತಣ್ಣೀರಿನಲ್ಲಿ ತೊಳೆದು ಬಿಸಲಿನಲ್ಲಿ ಒಣಗಿಸಿಕೊಂಡರೆ ಮೈಸಾಕ್ಷಿ ಗುಗ್ಗಿಲ ಶುದ್ಧಿಯಾಗುವುದು.

ಯಣ್ಣೆಬೆಳಗಾರ ಶುದ್ಧಿ—ಯಣ್ಣೆಬೆಳಗಾರ ತಂದು ಹಸುವಿನ ಸಗಣಿ ನೀರಿನಿಂದ ತೊಳದು ಬೋಕಿಯಲ್ಲಿ ಹಾಕಿ ಅರಳುಮಾಡಿದರೆ ಯಣ್ಣೆಬೆಳಗಾರ ಶುದ್ಧಿಯಾಗುವುದು.

ಸೂರ್ತಿಬೆಳಗಾರ ಶುದ್ಧಿ—ಸೂರ್ತಿಬೆಳಗಾರ ತಂದು ಬೋಕಿಯಲ್ಲಿ ಹಾಕಿ ಅರಳುಮಾಡಿಕೊಂಡರೆ ಸೂರ್ತಿಬೆಳಗಾರ ಶುದ್ಧಿಯಾಗುವುದು.

ಪಟಿಕೆ ಶುದ್ಧಿ—ಪಟಿಕೆಯನ್ನು ಖಲ್ವದಲ್ಲಿ ಹಾಕಿ ಹಸುವಿನ ಹಾಲಿನಿಂದರದು ಬಿಲ್ಲೆಮಾಡಿ ಒಣಗಿಸಿಕೊಂಡರೆ ಪಟಿಕೆ ಶುದ್ಧಿಯಾಗುವುದು.

ಮತ್ತೊಂದು ವಿಧ—ಪಟಿಕೆ ತಂದು ಬೋಕಿಯಲ್ಲಿ ಹಾಕಿ ಅರಳುಮಾಡಿದರೆ ಪಟಿಕೆ ಶುದ್ಧಿಯಾಗುವುದು.

ಕಲ್ಲುನಾರು ಶುದ್ಧಿ—ಕಲ್ಲುನಾರನ್ನು ಸುಣ್ಣದ ನೀರಿನಲ್ಲಿ ಒಂದುದಿನ ಭಾವನೆಮಾಡಿ ತಣ್ಣೀರಿನಲ್ಲಿ ತೊಳೆದು ಎರಡನೇಸಲ ಆಗಸೇಸೊಪ್ಪಿನ ರಸದಲ್ಲಿ ಒಂದುದಿನ ಭಾವನೆಮಾಡಿ ತಣ್ಣೀರಿನಲ್ಲಿ ತೊಳೆದು ಬಿಸಲಿನಲ್ಲಿಟ್ಟುಕೊಂಡರೆ ಕಲ್ಲುನಾರು ಶುದ್ಧಿಯಾಗುವುದು.

ಕವಡೆ ಶುದ್ಧಿ—ಕವಡೆಯನ್ನು ಗೋಮೂತ್ರದಲ್ಲಿ, ಬೂದಿಕುಂಬಳಕಾಯಿ ರಸದಲ್ಲಿ, ನಿಂಬೇಹಣ್ಣಿನ ರಸದಲ್ಲಿ, ಕಲಗಚ್ಚಿನಲ್ಲಿ ಬೇರೆಬೇರೆ ಒಂದೊಂದುಸಲ ಡೋಲಾಯಂತ್ರದಲ್ಲಿ ಬೇಯಿಸಿದರೆ ಕವಡೆ ಶುದ್ಧಿಯಾಗುವುದು.

ಶಂಖು ಶುದ್ಧಿ—ಶಂಖನ್ನು ತುಂಡುತುಂಡುಗಳಾಗಿ ವಡೆದು ಒಂದು ಬಟ್ಟೆಯಲ್ಲಿ ಗಂಟುಕಟ್ಟಿ ಒಂದು ಮಡಕೆಯಲ್ಲಿ ನಿಂಬೇಹಣ್ಣಿನ ರಸ ಹುಯಿದು ಅದರಲ್ಲಿ ಈ ಗಂಟನ್ನು ಬಿಟ್ಟು ಡೋಲಾಯಂತ್ರದಲ್ಲಿ ಒಂದುಜಾವ ಬೇಯಿಸಲು ಶಂಖು ಶುದ್ಧಿಯಾಗುವುದು.

ಹವಳ ಶುದ್ಧಿ—ಹವಳವನ್ನು ತುಂಡುತುಂಡುಗಳಾಗಿ ಮಾಡಿ ಗಾಜಿನ ಪಾತ್ರೆಯಲ್ಲಿ ಹಾಕಿ ಅದು ಮುಣುಗುವಷ್ಟು ನಿಂಬೇಹಣ್ಣಿನ ರಸ ಹಾಕಿ ಮೂರು ದಿವಸ ಬಿಸಲಿನಲ್ಲಿಟ್ಟು ತಣ್ಣೀರಿನಲ್ಲಿ ತೊಳೆದು ಇದೇಮೇರಿಗೆ ರಾಮಗುಳ್ಳದ ರಸದಲ್ಲಿ ಮೂರುದಿವಸ ಭಾವನೆಮಾಡಿ ತಣ್ಣೀರಿನಲ್ಲಿ ತೊಳದುಕೊಂಡರೆ ಹವಳ ಶುದ್ಧಿಯಾಗುವುದು.

ಕಾಸೀಸವು (ಅನ್ನಭೇದಿ) ಶುದ್ಧಿ—ಅನ್ನಭೇದಿಯನ್ನು ನಿಂಬೇಹಣ್ಣಿನ ರಸದಲ್ಲಿ ಒಂದುದಿವಸ ನೆನೆಹಾಕಿ ತೆಗೆದು ಬಿಸಿನೀರಿನಲ್ಲಿ ತೊಳೆದು ಒಂದು ಬಟ್ಟೆಯಲ್ಲಿ ಗಂಟುಕಟ್ಟಿ ಒಂದು ಮಡಕೆಯಲ್ಲಿ ಗರುಗದಸೊಪ್ಪಿನ ರಸ ಹಾಕಿ ಡೋಲಾಯಂತ್ರದಲ್ಲಿ ೧ ಜಾವ ಬೇಯಿಸಿ ತೆಗೆದು ತಣ್ಣೀರಿನಲ್ಲಿ ತೊಳೆದುಕೊಂಡರೆ ಅನ್ನಭೇದಿ ಶುದ್ಧಿಯಾಗುವುದು.

ಪಂಚಲವಣ ಶುದ್ಧಿ—ಸೈಂಧವಲವಣವನ್ನು ಖಲ್ವದಲ್ಲಿ ಹಾಕಿ ಕಲಗಚ್ಚುಹಾಕಿ ಅರದು ಬಿಲ್ಲೆಮಾಡಿ ಬಿಸಲಿನಲ್ಲಿ ಒಣಗಿಸಿದರೆ ಶುದ್ಧಿಯಾಗುವುದು. ಸೌವರ್ಚಲವಣವನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ಅರದು ಬಿಲ್ಲೆಮಾಡಿ ಬಿಸಲಿನಲ್ಲಿ ಒಣಗಿಸಿದರೆ ಶುದ್ಧಿಯಾಗುವುದು. ಬಿಡಾಲವಣವನ್ನು ಖಲ್ವದಲ್ಲಿ ಹಾಕಿ ಕಲಗಚ್ಚಿನಲ್ಲಿ ಅರದು ಬಿಲ್ಲೆಮಾಡಿ ಬಿಸಲಿನಲ್ಲಿ ಒಣಗಿಸಿದರೆ ಶುದ್ಧಿಯಾಗುವುದು. ಕಾಚಲವಣವನ್ನು ಖಲ್ವದಲ್ಲಿ ಹಾಕಿ ಹುಣಿಸೇಯಲೆ ರಸದಲ್ಲಿ ಅರದು ಬಿಲ್ಲೆಮಾಡಿ ಒಣಗಿಸಿದರೆ ಶುದ್ಧಿಯಾಗುವುದು. ಸಮುದ್ರಲವಣವನ್ನು ಬೋಕಿಯಲ್ಲಿ ಹಾಕಿ ಮೂರು ಜಾವ ಹುರಿಯಲು ಶುದ್ಧಿಯಾಗುವುದು.

ಸರ್ಜಿಕ್ಷಾರ ಶುದ್ಧಿ—ಸರ್ಜಿಕ್ಷಾರವನ್ನು ಖಲ್ವದಲ್ಲಿ ಹಾಕಿ ಕಲಗಚ್ಚನ್ನಾದರೂ, ಗೋಮೂತ್ರವನ್ನಾದರೂ ಹಾಕಿ ೧ ಜಾವ ಅರದು ಬಿಲ್ಲೆಮಾಡಿ ಒಣಗಿಸಿದರೆ ಶುದ್ಧಿಯಾಗುವುದು.

ಯವಕ್ಷಾರ ಶುದ್ಧಿ—ಯವಕ್ಷಾರವನ್ನು ಖಲ್ವದಲ್ಲಿ ಹಾಕಿ ಕಲಗಚ್ಚಿನಲ್ಲಿ ಒಂದು ಜಾವ ಅರದು ಬಿಲ್ಲೆಮಾಡಿ ಒಣಗಿಸಿದರೆ ಶುದ್ಧಿಯಾಗುವುದು.

ಶೊಂಟಿ ಶುದ್ಧಿ—ಶೊಂಟಿ ತಂದು ಮೇಲಿನ ಹೊಟ್ಟನ್ನು ಕೆರೆದು ಹೊಸ ಸುಣ್ಣವನ್ನು ಲೇಪಿಸಿ ಒಂದು ದಿನ ಬಿಸಲಿನಲ್ಲಿ ಒಣಗಿಸಿ ಮೇಲಿನ ಸುಣ್ಣವನ್ನು ತೆಗೆದುಬಿಟ್ಟರೆ ಶೊಂಟಿ ಶುದ್ಧಿಯಾಗುವುದು.

ಹಿಪ್ಪಲಿ ಶುದ್ಧಿ—ಹಿಪ್ಪಲಿಯನ್ನು ಚಿತ್ರಮೂಲದ ರಸದಲ್ಲಿ ಒಂದು ದಿನ ಭಾವನೆಮಾಡಿ ಒಣಗಿಸಿಕೊಂಡರೆ ಶುದ್ಧಿಯಾಗುವುದು.

ಹಿಂಗು ಶುದ್ಧಿ—ಹಿಂಗನ್ನು ತಾವರೆಯೆಲೆಯ ರಸದಲ್ಲಿ ನೆನಸಿ ಒಂದು ಜಾವ ಬಿಸಿಲಿನಲ್ಲಿ ಇರಿಸಿದ್ದರೆ ಶುದ್ಧಿಯಾಗುವುದು.

ಮೆಣಸು ಶುದ್ಧಿ—ಮೆಣಸು ಹುಳಿಮಜ್ಜಿಗೆಯಲ್ಲಿ ಒಂದು ಜಾವ ಭಾವನೆ ಮಾಡಿ ಬೋಕಿಯಲ್ಲಿ ಹಾಕಿ ಸುಮಾರಾಗಿ ಹುರಿದುಕೊಂಡರೆ ಶುದ್ಧಿಯಾಗುವುದು.

ಮತ್ತೊಂದು ವಿಧ—ಮೆಣಸನ್ನು ಹುಳಿಮಜ್ಜಿಗೆಯಲ್ಲಿ ಮೂರು ಘಳಿಗೆ ಹೊತ್ತು ನೆನೆಸಿಟ್ಟದ್ದು ಮೇಲಿನ ಸಿಪ್ಪೆ ಸುಲಿವಂತೆ ಗೋಣಿಪಟ್ಟೆಯಿಂದ ಉಜ್ಜಿ ನೆರಳಿನಲ್ಲಿ ಒಣಗಿಸಿದರೆ ಮೆಣಸು ಶುದ್ಧಿಯಾಗುವುದು.

ಗಜಹಿಪ್ಪಲಿ ಶುದ್ಧಿ—ಗಜಹಿಪ್ಪಲಿಯನ್ನು ಕಲಗಚ್ಚು ಅಥವಾ ಮೇಕೆ ಮೂತ್ರದಲ್ಲಿ ಒಂದು ಜಾವ ಭಾವನೆಮಾಡಿ ಬಿಸಿಲಿನಲ್ಲಿಟ್ಟರೆ ಶುದ್ಧಿಯಾಗುವುದು.

ಜೀರಿಗೆ ಶುದ್ಧಿ—ಒಂದು ಗಾಜಿನ ಪಾತ್ರೆಯಲ್ಲಿ ಕಲಗಚ್ಚು ಹಾಕಿ ಅದರಲ್ಲಿ ಬಿಳೀ ಜೀರಿಗೆಯಾಗಲಿ ಅಥವಾ ಕರೀ ಜೀರಿಗೆಯಾಗಲಿ ಹಾಕಿ ೩ ಜಾವ ಬಿಸಲಿನಲ್ಲಿಡಲು ಶುದ್ಧಿಯಾಗುವುದು.

ಓಮ ಶುದ್ಧಿ—ಒಂದು ಮಡಕೆಯಲ್ಲಿ ಸುಣ್ಣದ ತಿಳಿನೀರು ಹಾಕಿ ಅದರಲ್ಲಿ ಓಮವನ್ನು ಒಂದು ಬಟ್ಟೆಯಲ್ಲಿ ಗಂಟುಕಟ್ಟಿ ಸುಣ್ಣದ ನೀರಿನಲ್ಲಿ ಒಂದು ಜಾವ ನೆನೆಹಾಕಿ ತೆಗೆದು ಬಿಸಲಿನಲ್ಲಿ ಒಣಗಿಸಿದರೆ ಶುದ್ಧಿಯಾಗುವುದು.

ಮಾಯಿಪಾಳದಕಾಯಿ ಶುದ್ಧಿ—ಮಾಯಿಪಾಳದಕಾಯಿಯನ್ನು ಹಸುವಿನ ತುಪ್ಪದಲ್ಲಿ ಹುರಿದರೆ ಶುದ್ಧಿಯಾಗುವುದು.

ಅರಗು ಶುದ್ಧಿ—ಅರಗನ್ನು ನೀರಿನಲ್ಲಿ ಹಾಕಿ ಮೂರುಸಲ ಬೇಯಿಸಿ ತೆಗೆದುಕೊಳ್ಳಲು ಶುದ್ಧಿಯಾಗುವುದು.

ಬಿಳೀಕೊಮ್ಮೆ ಶುದ್ಧಿ—ಬಿಳೀಕೊಮ್ಮೆಯನ್ನು ಹಸುವಿನ ಹಾಲಿನಲ್ಲಿ ಬೇಯಿಸಿ ಬಿಸಲಿನಲ್ಲಿಡಲು ಶುದ್ಧಿಯಾಗುವುದು.

ಗಾಂಜಾ ಶುದ್ಧಿ—ಗಾಂಜಾ (ಬಂಗಿ)ಯನ್ನು ಬಬ್ಬೂಲ ಅಂದರೆ ಬೊಬ್ಬಳಿ ಚಕ್ಕೆ (ಗೊಬ್ಬಳಿ ಚಕ್ಕೆ)ಯ ಕಷಾಯದಲ್ಲಿ ಬೇಯಿಸಿ ತೆಗೆದು ಒಣಗಿಸಿ ಬಳಿಕ ಆಕಳ ಹಾಲಿನಲ್ಲಿ ಭಾವನೆಮಾಡಿ ಒಣಗಿಸಿ ಇಟ್ಟುಕೊಂಡರೆ ಶುದ್ಧಿಯಾಗುವುದು.

ಗುರುಗಂಜಿ ಶುದ್ಧಿ—ಗುರುಗಂಜಿಯನ್ನು ಕಲಗಚ್ಚಿನಲ್ಲಿ ಒಂದು ಜಾವ ಭಾವನೆಮಾಡಲು ಗುರುಗಂಜಿಯು ಶುದ್ಧಿಯಾಗುವುದು.

ಆರತಿಕರ್ಪೂರ ಶುದ್ಧಿ—ಆರತಿಕರ್ಪೂರವನ್ನು ಸಮಾಂಶವಾದ ಆಕಳ ಹಾಲು, ತ್ರಿಫಲೆಯ ಕಷಾಯ, ಗರುಗದಸೊಪ್ಪಿನ ರಸ ಇವುಗಳಲ್ಲಿ ಯಾವದಾದರೂ ಒಂದರಲ್ಲಿ ಒಂದು ಜಾವ ಹೊತ್ತು ಅರದರೆ ಶುದ್ಧಿಯಾಗುವುದು.

ಸವ್ವೀರಪಾಷಾಣ ಶುದ್ಧಿ — ಒಂದು ಮಡಕೆಯಲ್ಲಿ ೩ ಶೇರು ಯಳನೀರು ಹಾಕಿ ಒಂದು ಬಟ್ಟೆಯಲ್ಲಿ ಪುಡಿಮಾಡಿದ ಆರತಿಕರ್ಪೂರವನ್ನು ಇಟ್ಟು ಅದರ ಮಧ್ಯದಲ್ಲಿ ಸವ್ವೀರವನ್ನು ಇಟ್ಟು ಅದರಮೇಲೆ ಆರತಿಕರ್ಪೂರದ ಪುಡಿಯನ್ನು ಹಾಕಿ ಬಟ್ಟೆಯನ್ನು ಗಂಟುಕಟ್ಟಿ ಮೇಲ್ಕಂಡ ಯಳನೀರಿನಲ್ಲಿ ಡೋಲಾಯಂತ್ರದ ಕ್ರಮದಂತೆ ಒಂದು ಘಂಟೆ ಬೇಯಿಸಿ ಸವ್ವೀರವನ್ನು ತೆಗೆದುಕೊಂಡರೆ ಶುದ್ಧಿಯಾಗುವುದು.

ನೀಲಾಂಜನ ಶುದ್ಧಿ—ನೀಲಾಂಜನ ಅಂದರೆ ಸುರ್ಮಾಕಲ್ಲು ಇದನ್ನು ನಿಂಬೇಹಣ್ಣಿನ ರಸದಲ್ಲಿ ಒಂದುದಿನ ಭಾವನೆಮಾಡಿ ಬಿಸಲಿನಲ್ಲಿ ಒಣಗಿಸಿಕೊಳ್ಳಲು ಶುದ್ಧಿಯಾಗುವುದು.

ಶಂಖಪಾಷಾಣ ಶುದ್ಧಿ—ಒಂದು ಮಡಕೆಯಲ್ಲಿ ಗಂಡು ಹುಡುಗರ ಮೂತ್ರ ೨ ಶೇರು ಹಾಕಿ ಅದರಲ್ಲಿ ಮೆಣಸು ೧॥ ತೊಲೆ, ಚಿಲಕೀರೆ ಬೇರು ೧॥ ತೊಲೆ ಇವು ಎರಡನ್ನು ನುಣ್ಣಗೆ ಅರದು ಮೇಲ್ಕಂಡ ಮೂತ್ರದಲ್ಲಿ ಹಾಕಿ ಶಂಖಪಾಷಾಣ ಬಟ್ಟೆಯಲ್ಲಿ ಗಂಟುಕಟ್ಟಿ ಮಡಕೆಯಲ್ಲಿ ಡೋಲಾಯಂತ್ರದ ಕ್ರಮದಂತೆ ಇಟ್ಟು ಮೂತ್ರ ಹಿಂಗುವವರಿವಿಗು ಸಣ್ಣದಾಗಿ ವುರಿಹಾಕಿ ಬಟ್ಟೆಯಲ್ಲಿರುವ ಶಂಖಪಾಷಾಣವನ್ನು ತೆಗೆದು ತಣ್ಣೀರಿನಲ್ಲಿ ತೊಳೆದು ಬಿಸಲಿನಲ್ಲಿಟ್ಟು ತೆಗೆದುಕೊಂಡರೆ ಶುದ್ಧಿಯಾಗುವುದು

ಮತ್ತೊಂದು ವಿಧ —ಮೂರು ಹಾಗಲಕಾಯಿತಂದು ಒಂದೊಂದು ಕಾಯಿಯಲ್ಲಿ ಬೀಜ ತೆಗೆದು ಒಂದೊಂದು ಕಾಯಿಯಲ್ಲಿ ೧-೧ ತೊಲೆ ಪ್ರಕಾರ ೩ ತೊಲೆ ಶಂಖಪಾಷಾಣವನ್ನು ಇಟ್ಟು ಅದರಮೇಲೆ ದಾರವನ್ನು ಕಟ್ಟಿ ಒಂದು ಮಡಕೆಯಲ್ಲಿ ೨ಶೇರು ಸುಣ್ಣಕಲ್ಲುಹಾಕಿ ನೀರುಹಾಕಿ ಕಲಸಿ ಮೇಲ್ಕಂಡ ಕಾಯಿಗಳನ್ನು ಡೋಲಾಯಂತ್ರದ ಕ್ರಮದಂತೆ ೩ ಘಂಟೆ ಬೇಯಿಸಿ ತೆಗೆದುಕೊಂಡರೆ ಶುದ್ಧಿಯಾಗುವುದು.

ಅಭ್ರಕದ ವಿವರಣೆ—ಬಿಳಿಯದು, ಕೆಂಪಿನದು, ಹಳದಿಯದು, ಕರಿಯದು ಎಂದು ನಾಲ್ಕು ವಿಧವು. ಇವುಗಳಿಗೆ ಕ್ರಮವಾಗಿ ಪಿನಾಕ, ದರ್ದುರ, ನಾಗ, ವಜ್ರ ಎಂಬಿವು ನಾಲ್ಕು ಹೆಸರುಗಳು.

ಪಿನಾಕವೆಂಬ ಬಿಳಿಯ ಅಭ್ರಕವು ಬೆಂಕಿಯಲ್ಲಿಟ್ಟರೆ ಪರೆ ಬಿಡುವುದು. ದರ್ದುರವೆಂಬ ಕೆಂಪಿನ ಅಭ್ರಕವು ಬೆಂಕಿಯಲ್ಲಿಟ್ಟರೆ ಕಪ್ಪೆಯಂತೆ ಕೂಗುವುದು. ನಾಗವೆಂಬ ಹಳದಿಯ ಅಭ್ರಕವು ಬೆಂಕಿಯಲ್ಲಿಟ್ಟರೆ ಹಾವಿನಂತೆ ಬುಸುಗುಟ್ಟು

ವುದು. ವಜ್ರವೆಂಬ ಕರಿಯ ಅಭ್ರಕವು ಬೆಂಕಿಯಲ್ಲಿಟ್ಟರೆ ಆವುದೊಂದು ವಿಕಾರವೂ ಇಲ್ಲದೆ ವಜ್ರದಂತೆ ನಿಲ್ಲುವುದು. ವಜ್ರಾಭ್ರಕವು ಸಕಲ ರೋಗಗಳನ್ನೂ ಪರಿಹರಿಸುವುದು.

ಕೃಷ್ಣಾಭ್ರಕ ಶುದ್ಧಿ—ಕೃಷ್ಣಾಭ್ರಕವನ್ನು ಏಳು ಸಲ ಕಾಯಿಸಿ ಕಾಯಿಸಿ ಕಲಗಚ್ಚು ಅಥವಾ ಗೋಮೂತ್ರ, ಅಥವಾ ತ್ರಿಫಲೆಯ ಕಷಾಯ, ಇಲ್ಲವೆ ಹಸುವಿನ ಹಾಲು, ಇವುಗಳಲ್ಲಿ ಅದ್ದಿದರೆ ನಿರ್ದೋಷವಾಗುವುದು. ಆಕಳ ಹಾಲಿನಲ್ಲಿ ಅದ್ದುವುದು ಉತ್ತಮ.

ಮತ್ತೊಂದು ವಿಧಾನ—ಕೃಷ್ಣಾಭ್ರಕವನ್ನು ತಂದು ಬೆಂಕಿಯಲ್ಲಿಟ್ಟು ಚೆನ್ನಾಗಿ ಕಾಯಿಸಿ ಆಕಳ ಹಾಲಿನಲ್ಲಿ ಅದ್ದಬೇಕು. ಆರಿದಮೇಲೆ ತೆಗೆದುಕೊಂಡು ಪರೆಪರೆಯಾಗಿ ಬಿಡಿಸಿ ಕಿರುಕುಸಾಲೆ, ಪುಲ್ಲಂಪುರಚೆ ಇವುಗಳ ರಸದಲ್ಲಿಯೂ ನಿಂಬೆ ಹುಳಿಯಲ್ಲೂ ೮ ಜಾವ ಅಂದರೆ ಒಂದು ದಿವಸವೆಲ್ಲ ನೆನೆಸಿಟ್ಟಿದ್ದರೆ ಶುದ್ಧಿಯಾಗುವುದು.

ಸ್ವರ್ಣ ಶುದ್ಧಿ—ಉತ್ತಮವಾದ ಅಪರಂಜಿ ಚಿನ್ನವನ್ನು ಬೆಂಕಿಯಲ್ಲಿಟ್ಟು ಕರಗಿಸಿ ಕಂಚಿವಾಳದಪಟ್ಟೆಯ ರಸದಲ್ಲಿ ಸುರಿಯುವುದು, ಹೀಗೆ ಮೂರು ಸಲ ಕರಗಿ ಕರಗಿ ಸುರಿದರೆ ಚಿನ್ನವು ಶುದ್ಧಿಯಾಗುವುದು.

ಮತ್ತೊಂದು ವಿಧ—ಅಪರಂಜಿಯನ್ನು ರೇಕುಗಳಾಗಿ ಮಾಡಿ, ಕಾವೀ ಕಲ್ಲನ್ನು ನಿಂಬೇಹಣ್ಣಿನ ರಸದಲ್ಲಿ ಅರದು ತಾಳೇಯಲೆಯ ಮಂದದಷ್ಟು ಚಿನ್ನದ ರೇಕಿಗೆ ಲೇಪಿಸಿ ಬೆಂಕಿ ಕೆಂಡದಲ್ಲಿ ಕೆಂಪಾಗಿ ಸುಟ್ಟುಕೊಳ್ಳುವುದು. ಈ ಪ್ರಕಾರ ನಾಲ್ಕು ಸಾರಿ ಕಾಯಿಸಲು ಚಿನ್ನವು ಶುದ್ಧಿಯಾಗುವುದು.

ರಜಿತ ಶುದ್ಧಿ—ಒಳ್ಳೆಯ ಬೆಳ್ಳಿಯನ್ನು ತಗಡುಮಾಡಿ ಬೆಂಕಿಯಲ್ಲಿ ಮೂರು ಸಲ ಕಾಯಿಸಿಕಾಯಿಸಿ ಅಗಸೇಸೊಪ್ಪಿನ ರಸದಲ್ಲಿ ಅದ್ದಿದರೆ ಅದು ಶುದ್ಧಿಯಾಗುವುದು.

ಮತ್ತೊಂದು ವಿಧ—ಸರಿಗೆ ಬೆಳ್ಳಿ ರೇಕುಗಳಾಗಿ ಮಾಡಿ ಕೊಲಮಿ ಬೆಂಕಿಯಲ್ಲಿ ಕೆಂಪಾಗಿ ಕಾಯಿಸಿ ೭ ಸಲ ಪಗಡೆಹುವ್ವಿನ ರಸದಲ್ಲಿ ನೆನೆಯಿಸಲು ಶುದ್ಧಿಯಾಗುವುದು.

ಮತ್ತೊಂದು ವಿಧ—ಬೆಳ್ಳಿಯನ್ನು ತಗಡುಗಳಾಗಿ ಮಾಡಿ ಕೆಂಪಾಗಿ ಕಾಯಿಸಿಕಾಯಿಸಿ ಗೊಡ್ಡುಹಾಗಲಗಡ್ಡೆ ರಸದಲ್ಲಿ ೭ ಸಲ ಅದ್ದಲು ಶುದ್ಧಿಯಾಗುವುದು.

ತಾಮ್ರ ಶುದ್ಧಿ—ಕಾಲಕೂಟವೇ ಮೊದಲಾದ ವಿಷವನ್ನು ವಿಷವೆನ್ನುವುದಿಲ್ಲ; ತಾಮ್ರವನ್ನು ಮುಖ್ಯವಾಗಿ ವಿಷವೆಂದು ಹೇಳುವರು. ಏಕಂದರೆ—ವಿಷದಲ್ಲಿರುವುದು ಒಂದು ದೋಷ; ಆದರೆ ತಾಮ್ರದಲ್ಲಿ ಅಂತಹ ದೋಷಗಳು ಎಂಟಿರುವುವು.

ತಲೆದಿರುಗು, ಮೂರ್ಛೆ, ಉರಿ, ಬೆವರು, ಸ್ರೋತಸ್ಸುಗಳು ಜಿನುಗುವುದು, ವಮನ, ಬಾಯಿರುಚಿ ಕೆಡುವುದು, ಸಂಕಟ ಈ ಎಂಟು ದೋಷಗಳು ತಾಮ್ರದಲ್ಲಿ ವಿಷಕ್ಕೆ ಸಮಾನವಾಗಿರುವುವು. ಆದುದರಿಂದ ಈ ದೋಷಗಳು ಹೋಗುವುದಕ್ಕಾಗಿ ತಾಮ್ರವನ್ನು ಶುದ್ಧಿಮಾಡಬೇಕು.

ಮುಂಡಗಳ್ಳಿಯ ಹಾಲಿಗೆ ಉಪ್ಪು ಹಾಕಿ ಅರದು ಅದನ್ನು ತಾಮ್ರದ ತಗಡಿಗೆ ಲೇಪಿಸಿ, ಆ ತಗಡನ್ನು ಬೆಂಕಿಯಲ್ಲಿ ಕಾಯಿಸಿ, ಕೆಂಪಗೆ ಕಾದ ತಗಡಿನ ಮೇಲೆ ಲಕ್ಕಲಿಯ ಸೊಪ್ಪಿನ ರಸವನ್ನು ಸುರಿದು ಆರಿಸಬೇಕು. ಹೀಗೆ ಮೂರು ಸಲ ಕಾಯಿಸಿಕಾಯಿಸಿ ಆರಿಸಿದರೆ ತಾಮ್ರವು ಶುದ್ಧಿಯಾಗುವುದು. ಲಕ್ಕಲಿಯ ಸೊಪ್ಪಿನ ರಸಕ್ಕೆ ಪ್ರತಿಯಾಗಿ ಕಳ್ಳಿಯ ಹಾಲು, ಎಕ್ಕದ ಹಾಲು ಇವುಗಳನ್ನು ಸುರಿದರೂ ತಾಮ್ರವು ಶುದ್ಧಿಯಾಗುವುದು.

ಮತ್ತೊಂದು ವಿಧಾನ—ಗೋಮೂತ್ರಕ್ಕೆ ಹುಳಿ, ಕ್ಷಾರ (ಕಾರ) ಇವುಗಳನ್ನು ಬೆರಸಿ ಅದರಲ್ಲಿ ತಾಮ್ರದ ತಗಡನ್ನು ಒಂದು ಜಾವ ಹೊತ್ತು ಬಲವಾಗಿ ಉರಿಯಹಾಕಿ ಕುದಿಸಿದರೆ ತಾಮ್ರವು ಚೆನ್ನಾಗಿ ಶುದ್ಧಿಯಾಗುವುದು.

ಮತ್ತೊಂದು ವಿಧಾನ—ತಾಮ್ರದ ತಗಡುಗಳನ್ನು ಬೆಂಕಿಯ ಕೆಂಡಗಳಲ್ಲಿ ಕಾಯಿಸಿ ಹುಳಿಮಜ್ಜಿಗೆ, ಒಳ್ಳೆಣ್ಣೆ, ಗೋಮೂತ್ರ ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಏಳೇಳುಸಲ ಅದ್ದುತ್ತಾ ಬರುವುದರಿಂದ ಅದರಲ್ಲಿರುವ ವಾಂತಿ ದೋಷವೂ; ಹುಳಿ, ಕಲಗಚ್ಚು, ಹುರಳಿಕಟ್ಟು ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಏಳೇಳು ಸಲ ಕಾಯಿಸಿ ಅದ್ದುವುದರಿಂದ ಅದರಲ್ಲಿರುವ ಭ್ರಾಂತಿ ದೋಷವೂ; ಮುಂಡಗಳ್ಳಿ ಹಾಲು, ಹಸುವಿನ ಹಾಲು, ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಏಳೇಳು ಸಾರಿ ಪ್ರತ್ಯೇಕವಾಗಿ ಕಾಯಿಸಿ ಅದ್ದುವುದರಿಂದ ಅದರಲ್ಲಿರುವ ಕ್ಷಮ ದೋಷವೂ; ಹುಳಿ, ನಿಂಬೇಹಣ್ಣಿನ ರಸ ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಏಳೇಳು ಸಲ ಕಾಯಿಸಿ ಅದ್ದುವುದರಿಂದ ಅದರಲ್ಲಿರುವ ತಾಪ ದೋಷವೂ; ಲೋಳೆಸರದ ರಸ, ಬಾಗೆಚಕ್ಕೆ ಇವುಗಳ ರಸಗಳಲ್ಲಿ ಪ್ರತಿಯೊಂದರಲ್ಲಿಯೂ ಏಳೇಳು ಸಲ ಕಾಯಿಸಿ ಅದ್ದುವುದರಿಂದ ಅದರಲ್ಲಿರುವ ಶೂಲದೋಷವೂ; ಆಕಳ ಹಾಲು, ಆಕಳ ತುಪ್ಪ ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಏಳೇಳು ಸಲ ಕಾಯಿಸಿ ಅದ್ದುವುದರಿಂದ ಅದರಲ್ಲಿರುವ ಕಂಡೂ ದೋಷವೂ; ಕಾಡುಚೂರ್ಣದ ಗಡ್ಡೆ, ಮೊಸರುಮೇಲಿನ ತಿಳಿನೀರು ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಏಳೇಳು ಸಲ ಕಾಯಿಸಿ ಅದ್ದುವುದರಿಂದ ಅದರಲ್ಲಿರುವ ವಿರೇಚನ ದೋಷವೂ; ಜೇನುತುಪ್ಪ, ದ್ರಾಕ್ಷಿಹಣ್ಣಿನ ರಸ ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಏಳೇಳು ಸಲ ಕಾಯಿಸಿ ಅದ್ದುವುದರಿಂದ ಅದರಲ್ಲಿರುವ ವೀರ್ಯಹಾನಿ ದೋಷವೂ ಪರಿಹರವಾಗಿ ತಾಮ್ರವು ಶುದ್ಧವಾಗುವುದು.

ವಂಗದ ವಿವರಣೆ—ವಂಗವೆಂದರೆ ತಗರ (ತವರ) ಇದು ಖುರಕವೆಂದೂ ಮಿಶ್ರಕವೆಂಷೂ ಎರಡು ವಿಧ. ಖುರಕವೆಂಬುದು ಗುಣದಲ್ಲಿ ಶ್ರೇಷ್ಠ. ಮಿಶ್ರಕವೆಂಬುದು ನಿಕೃಷ್ಟವೆಂದು ಅರಿಯುವುದು.

ಬೆಳ್ಳಗೂ ಮೃದುವಾಗಿಯೂ ನುಣ್ಣಗೂ ಬೇಗ ಕರುಗುವುದಾಗಿಯೂ ಭಾರವಾಗಿಯೂ ಸದ್ದಾಗದೆಯೂ ಇರುವ ತಗರವೇ ಖುರಕವೆಂಬುದು. ಮಿಶ್ರಕವೆಂಬುದು ಇದಕ್ಕೆ ವಿರುದ್ಧವಾದ ಗುಣಗಳುಳ್ಳದಾಗಿಯೂ ಬೂದಗೂ ಇರುವುದು.

ತಗರ ಶುದ್ಧಿ—ಖುರಕವೆಂಬ ವಂಗವನ್ನು ತಂದು ಕರಗಿಸಿ ಬಿಳೀಲಕ್ಕಲಿ ಸೊಪ್ಪಿನ ರಸ, ಅರಸಿನದ ಚೂರ್ಣ ಇವೆರಡು ಕಲಸಿ ಅದರಲ್ಲಿ ಕರಗಿದ ವಂಗವನ್ನು ಹಾಕುವದು. ಈರೀತಿ ಮೂರಾವರ್ತಿ ಮಾಡಲು ವಂಗವು ಶುದ್ಧಿಯಾಗುವುದು. ವಂಗಕ್ಕೆ ಮೇಲ್ಕಂಡ ರಸ ೧೦ ಭಾಗ ಹೆಚ್ಚಾಗಿರಬೇಕು. ರಸ ಕಡಿಮೆಯಾಗಿದ್ದರೆ ವಂಗವು ಮೇಲಕ್ಕೆ ಹಾರುವುದು. ಆದ್ದರಿಂದ ಒರಳಲ್ಲಿ ರಸವನ್ನು ಹಾಕಿ ವಂಗ ಕರಗಿ ಸುರಿದು ಒರಳನ್ನು ಮುಚ್ಚುವ ವಾಡಿಕೆ.

ನಾಗ (ಅಂದರೆ) ಸೀಸ—ಸೀಸವನ್ನು ಕರಗಿಸಿ ಹಿಪ್ಪೆಯಣ್ಣೆ, ಹುಳಿಮಜ್ಜಿಗೆ, ಗೋಮೂತ್ರ, ಕಲಗಚ್ಚು, ಹುರಳಿಕಟ್ಟು ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಏಳೇಳು ಸಲ ಹುಯ್ಯಲು ಸೀಸ ಶುದ್ಧಿಯಾಗುವುದು. ಇದೇರೀತಿಯಾಗಿ ತಗರವನ್ನು ಕೂಡ ಶುದ್ಧಿಮಾಡಬೇಕು. ಅಲ್ಲದೆ ಎಕ್ಕದ ಹಾಲಿನಲ್ಲಿ ಸಹ ಏಳು ಸಲ ಕರಗಿಸಿ ಹುಯ್ಯಲು ಶುದ್ಧಿಯಾಗುವುದು. ಇದೇರೀತಿಯಾಗಿ ತವರದಂತೆಯೇ ಸೀಸ ನಾಗವನ್ನು ಸಹ ಶುದ್ಧಿಮಾಡಿಕೊಳ್ಳುವುದು

ಕಬ್ಬಿಣ ಶುದ್ಧಿ—ಕಬ್ಬಿಣದ ತಗಡಿಗೆ ಮೊಲದ ರಕ್ತವನ್ನಾಗಲಿ, ಎಕ್ಕದ ಹಾಲನ್ನಾಗಲಿ ಲೇಪಿಸಿ ಬೆಂಕಿಯಲ್ಲಿ ಕಾಯಿಸಿ ತ್ರಿಫಲೆಯ ಕಷಾಯದಲ್ಲಿ ಏಳು ಸಲ ಅದ್ದುವುದು. ಹೀಗೆ ಮಾಡಿದರೆ ಕಬ್ಬಿಣವು ಶುದ್ಧಿಯಾಗುವುದು.

ಮತ್ತೊಂದು ವಿಧ—ಲೋಹದ ರೇಕುಗಳನ್ನು ಕಾಯಿಸಿ ಮೇಲ್ಕಂಡ ಸೀಸದ ಶುದ್ಧಿಗೆ ಬರೆದಿರುವ ದ್ರವಗಳಲ್ಲಿ ಏಳೇಳು ಸಲ ಅದ್ದುವದು. ಇದು ಸೀಸದ ಶುದ್ಧಿ ಕ್ರಮದಂತೆಯೇ ಮಾಡಿದರೆ ಲೋಹವು ಶುದ್ಧಿಯಾಗುವುದು.

ಶ್ರೇಷ್ಠವಾದ ಕಾಂತದ ಲಕ್ಷಣವು—೭ ಸೂಜಿಗಳನ್ನು ಆಕರ್ಷಿಸುವ ಶಕ್ತಿವುಳ್ಳ ಕಾಂತದಕಲ್ಲು ಔಷಧಗಳಿಗೆ ಉಪಯೋಗಿಸಲು ಯೋಗ್ಯವಾದದ್ದು.

ಕಾಂತ ಶುದ್ಧಿ—ಸೂಜಿಮುಕ್ಕದ ಕಲ್ಲು ಅಂದರೆ ಕಾಂತದಕಲ್ಲು ಇದನ್ನು ಪುಡಿಮಾಡಿ ಒಂದು ಕಬ್ಬಿಣದ ಸೌಟಿನಲ್ಲಿ ಹಾಕಿ ಕೊಲಿಮಿಯಲ್ಲಿ ಕೆಂಪಾಗಿ ಕಾಯಿಸಿ ನಿಂಬೇಹಣ್ಣಿನರಸ, ಕಲಗಚ್ಚು, ಹುಳಿಮಜ್ಜಿಗೆ, ಗೋಮೂತ್ರ ಇವುಗಳಲ್ಲಿ ಪ್ರತಿಯೊಂದರಲ್ಲು ಏಳೇಳುಸಲ ಹಾಕಲು ಶುದ್ಧಿಯಾಗುವುದು.

ಮಂಡೂರದ ವಿವರಣೆ—ಮಂಡೂರಕ್ಕೆ ಉಪಯೋಗಿಸುವ ಕಬ್ಬಿಣದ ಕಿಟ್ಟವು ೧೦೦ ವರ್ಷದಷ್ಟು ಹಳೆಯದಾದರೆ ಉತ್ತಮ. ೮೦ ವರ್ಷದ್ದಾದರೆ ಮಧ್ಯಮ. ೬೦ ವರುಷದ್ದಾದರೆ ಅಧಮ. ಅದಕ್ಕಿಂತಲೂ ವರ್ಷಗಳಲ್ಲಿ ಕಡಮೆ ಯಾದುದು ವಿಷಕ್ಕೆ ಸಮಾನವೇ ಸರಿ.

ಮಂಡೂರ ಶುದ್ಧಿ—ಕಿಟ್ಟವನ್ನು ಕೊಲಿಮೆಯಲ್ಲಿಟ್ಟು ತಾರೆಯ ಇದ್ದಲನ್ನು ಹಾಕಿ ತಿದಿಗಳಿಂದೊತ್ತಿ ಕಾಯಿಸಬೇಕು. ಚೆನ್ನಾಗಿ ಕೆಂಪಗೆ ಕಾದಮೇಲೆ ಅದನ್ನು ತಾರೇಮರದ ಪಾತ್ರದಲ್ಲಿಟ್ಟಿದ್ದ ಗೋಮೂತ್ರದಲ್ಲಿ ಅದ್ದಿ ಆರಿಸಬೇಕು. ಹೀಗೆ ಏಳುಸಲ ಕಾಯಿಸಿ ಅದ್ದಿದಮೇಲೆ ಕಿಟ್ಟವನ್ನು ಚೂರ್ಣಿಸಿ ಅದರೆರಡರಷ್ಟು ತ್ರಿಫಲೆಯ ಕಷಾಯದಲ್ಲಿ ಕಲೆಸಿ ಬೆಂಕಿಯಲ್ಲಿ ಹುರಿದರೆ ಶುದ್ಧವಾದ ಮಂಡೂರ ವಾಗುವುದು.

ಶೃಂಗಿ ಶುದ್ಧಿ—ದ-ಪ್ಪೇಕೊಂಬು ತುಂಡುತುಂಡುಗಳಾಗಿ ಹೊಡದು ಬಟ್ಟೆಯಲ್ಲಿ ಗಂಟುಕಟ್ಟಿ ಲಕ್ಕಲಿಸೊಪ್ಪಿನ ಕಷಾಯದಲ್ಲಾದರೂ ಅಥವಾ ನೆಲ್ಲೀಕಾಯಿ ಕಷಾಯದಲ್ಲಾದರೂ ಡೋಲಾ ಯಂತ್ರದ ಕ್ರಮದಂತೆ ಒಂದು ಜಾವ ಬೇಯಿಸಲು ಶುದ್ಧಿಯಾಗುವುದು.

ಕಂಕುಷ್ಠ ಶುದ್ಧಿ—ಶೊಂಠಿ ಕಷಾಯದಲ್ಲಿ ೩ ದಿನ ಭಾವನೆಮಾಡಲು ಕಂಕುಷ್ಠ ಶುದ್ಧಿಯಾಗುವುದು.

ಗೌರೀಪಾಷಾಣ ಶುದ್ಧಿ—(ಮಲ್ಲವೆಂದರೆ ಕೆಲವರು ಗೌರೀಪಾಷಾಣವೆಂದೂ, ಕೆಲವರು ಉಲ್ಲೀಪಾಷಾಣವೆಂದು ಹೇಳುವರು.) ಗೌರೀಪಾಷಾಣವನ್ನು ಕಿರುಕುಸಾಲೆಯಸೊಪ್ಪಿನ ರಸದಲ್ಲಿ ಡೋಲಾ ಯಂತ್ರ ಕ್ರಮದಿಂದ ಒಂದು ದಿನವೆಲ್ಲ ಏಕರೀತಿಯಾಗಿ ಮಂದಾಗ್ನಿಯನ್ನು ಕೊಟ್ಟು ಪಚನ ಮಾಡಿದರೆ ಗೌರೀಪಾಷಾಣವು ಶುದ್ಧಿಯಾಗುವುದು.

## ಹನ್ನೆರಡನೆಯ ಅಧ್ಯಾಯ.

## ಭಸ್ಮ-ಸಿಂಧೂರಗಳನ್ನು ಮಾಡುವ ಕ್ರಮ.

ಲೋಹಗಳನ್ನು ರಸಗಳನ್ನು ಉಪರಸಗಳನ್ನು ಪುಟಗಳನ್ನು ಹಾಕಿಯಾಗಲೀ, ಅಥವಾ ಪಾಕಮಾಡುವದರಿಂದಲಾಗಲೀ ಕೇವಲ ಮಾರಣಕ್ರಿಯಗಳಿಂದಲೇ ಅಲ್ಲದೆ ಮೂರ್ಛನಕ್ರಿಯೆಗಳಿಂದಲೂ ಕೂಡ ರೂಪಾಂತರಗಳನ್ನು ಹೊಂದಿಸಿ ಅವುಗಳನ್ನು ಭಸ್ಮವಾಗಿಯಾಗಲೀ, ಸಿಂಧೂರವಾಗಿಯಾಗಲೀ ಮಾಡುವ ಕ್ರಮಕ್ಕೆ ಭಸ್ಮಸಿಂಧೂರ ವಿಧಾನವೆನ್ನಲ್ಪಡುವುದು.

ಭಸ್ಮಗಳನ್ನಾಗಲೀ, ಸಿಂಧೂರಗಳನ್ನಾಗಲೀ ಮಾಡುವಾಗ ಮೊದಲಲ್ಲಿ ಇವುಗಳನ್ನು ಅನೇಕಸಲ ಮಾಡಿ ಅನುಭವವಾಗಿರುವ ನಿಪುಣರುಗಳಿಂದ ಒಂದೆರಡುಸಲ ಕಲಿತು ಅನುಭವವನ್ನು ಹೊಂದಿ ಮಾಡಬೇಕು.

ಭಸ್ಮ, ಸಿಂಧೂರಗಳಲ್ಲಿ—ರಸಸಿಂಧೂರವು, ಷಡ್ಗುಣಸಿಂಧೂರವು, ಪೂರ್ಣ ಚಂದ್ರೋದಯ ಸಿಂಧೂರವು, ಮಕರಧ್ವಜ ಸಿಂಧೂರವು ಇವುಗಳನ್ನು ಬಿಟ್ಟು ಉಳಿದವುಗಳೆಲ್ಲವೂ ಅತಿಸೂಕ್ಷ್ಮಗಳಾಗಿಯು, ರೇಖಾಪೂರ್ಣತಾ ಲಕ್ಷಣವುಳ್ಳವುಗಳಾಗಿಯೂ, ನೀರಿನಮೇಲೆ ತೇಲತಕ್ಕದ್ದಾಗಿಯು, ಕೆಲವು ಪುಟಗಳಿಂದ ಮಾಡತಕ್ಕದ್ದಾಗಿಯೂ ಇರುವುವು.

ಭಸ್ಮ ಸಿಂಧೂರಗಳನ್ನು ಮಾಡಲು ಉಪಯೋಗಿಸಲ್ಪಡುವ ರಸ, ಗಂಧಕ ಲೋಹ ಮೊದಲಾದವುಗಳು ಶುದ್ಧಿಕ್ರಮದಲ್ಲಿ ಹೇಳಿರುವಂತೆ ಕ್ರಮವಾಗಿ ಶುದ್ಧಿ ಮಾಡಿದವುಗಳನ್ನೇ ಉಪಯೋಗಿಸಬೇಕು. ಶುದ್ಧಿಮಾಡದ ಲೋಹಾದಿಗಳಿಂದ ತಯಾರಿಸಲ್ಪಟ್ಟ ಭಸ್ಮಸಿಂಧೂರಗಳಿಂದ ಹೊಸ ರೋಗಗಳು ಉತ್ಪನ್ನವಾಗುವುವು.

ಪುಟಹಾಕಬೇಕಾದ ಲೋಹಗಳನ್ನು ಎಷ್ಟು ಅಧಿಕವಾಗಿ ಅರೆದರೆ ಅಷ್ಟು ಶೀಘ್ರವಾಗಿ ಭಸ್ಮವಾಗುವುದು. ಕೆಲವು ಪುಟಗಳಲ್ಲಿಯೇ ಶೀಘ್ರವಾಗಿ ಭಸ್ಮವಾದಂತೆ ಕಂಡುಬಂದರೂ ಯೋಗಗಳಲ್ಲಿ ಹೇಳಲ್ಪಟ್ಟಿರುವಂತೆ ಪುಟಗಳೆಲ್ಲವನ್ನೂ ಹಾಕಲೇಬೇಕು.

ಸೀಸ, ತಗರ, ಸತ್ತು, ಅನ್ನಭೇದಿ ಇವುಗಳ ಭಸ್ಮಗಳನ್ನು ಮಾಡುವಾಗ ಒಂದು ಮೊಳಕ್ಕಿಂತಲೂ ಹೆಚ್ಚಾದ ಪುಟಗಳನ್ನು ಇಡಬಾರದು. ಕಾವು ಜಾಸ್ತಿಯಾದರೆ ಭಸ್ಮವು ಕರಗಿ ಪುನಃ ಲೋಹವಾಗಿ ಮಾರ್ಪಡುವುದು. ಆದಕಾರಣ ಹೆಚ್ಚು ಬೆರಣಿಗಳನ್ನಿಟ್ಟು ಪುಟ ಹಾಕಬಾರದು. ಇತರ ಲೋಹಗಳ ಭಸ್ಮಗಳನ್ನು ಮಾಡುವಾಗ ಹೆಚ್ಚು ಬೆರಣಿಗಳನ್ನಿಟ್ಟು ಪುಟ ಹಾಕಿದಾಗ್ಯೂ ಹಾನಿಯಿಲ್ಲ.

ಶರಾವ ಅಂದರೆ ಹಣತೆಗಳಲ್ಲಿಟ್ಟು ಪುಟವನ್ನು ಹಾಕಬೇಕಾದ ಸಂದರ್ಭದಲ್ಲಿ ಎರಡು ಹಣತೆಗಳು ಒಂದೇ ಸಮನಾಗಿರುವವುಗಳನ್ನು ಗ್ರಹಿಸಿ, ಒಂದರಲ್ಲಿ ಔಷಧವನ್ನಿಟ್ಟು ಮತ್ತೊಂದನ್ನು ಮುಚ್ಚಿ ಕೆಮ್ಮಣ್ಣನ್ನು ಅರೆದು ಬಟ್ಟೆಗೆ ಸವರಿ ಹಣತೆಗಳ ಸಂಧಿಗೆ ಚೆನ್ನಾಗಿ ಮೂರುಸಲ ಚೀಲುಮಾಡಿ ಒಣಗಿಸಿದ ನಂತರ ಪುಟಗಳಲ್ಲಿ ಇಡುವುದು.

ಪುಟಗಳಿಗೆ ಬೇಕಾದ ಹಳ್ಳವನ್ನು ಗಟ್ಟಿಯಾದ ನೆಲದಲ್ಲಿ ಆಯಾ ಪುಟಗಳ ಆಳತೆಯನ್ನನುಸರಿಸಿ ಹಳ್ಳವನ್ನು ತೆಗೆಯಬೇಕು.

ಪುಟಗಳನ್ನು ಇಡುವುದಕ್ಕೆ ಕಾಡು ಬೆರಣಿಗಳು ಶ್ರೇಷ್ಠವಾದದ್ದು. ಮಂದವಾಗಿರುವ ಬೆರಣಿಗಳು ಮಧ್ಯಮವು, ಮಾರಲ್ಪಡುವ ತೆಳುವಾದ ಬೆರಣಿಗಳಲ್ಲಿ ಮಣ್ಣು ಮೊದಲಾದವುಗಳು ಸೇರಿರುವುದರಿಂದ ಈ ಬೆರಣಿಗಳನ್ನು ಉಪಯೋಗಿ

ಸುವ ಸಂದರ್ಭದಲ್ಲಿ ಯೋಗಗಳಲ್ಲಿ ಹೇಳಿರುವ ಪ್ರಕಾರ ಹಳ್ಳತುಂಬುವಂತೆ ಬೆರಣಿಗಳನ್ನು ಹೆಚ್ಚಿಸಿಕೊಳ್ಳಬೇಕು.

ಕೆಲವು ಯೋಗಗಳಲ್ಲಿ ಬೆರಣಿಗಳ ಸಂಖ್ಯೆಯನ್ನು ಬರೆದಿರುವ ಸಂದರ್ಭದಲ್ಲಿ ತಿಳುವಾದ ಬೆರಣಿಗಳನ್ನು ದ್ವಿಗುಣವಾಗಿ ಉಪಯೋಗಿಸಬೇಕು.

ಪುಟದ ಹಳ್ಳದಲ್ಲಿ ಕೆಳಗಡೆ ಮೂರು ಭಾಗ ಬೆರಣಿಗಳನ್ನು ಇಟ್ಟು ನಂತರ ಔಷಧದ ಶರಾವವನ್ನಿಟ್ಟು ಮೇಲ್ಗಡೆ ಒಂದು ಭಾಗ ಬೆರಣಿಗಳನ್ನು ಇಟ್ಟು ಬೆಂಕಿಯನ್ನು ಹಚ್ಚಬೇಕು. ಸಾಂಗಶೀತಲವಾದ ನಂತರ ಶರಾವವನ್ನು ತೆಗೆದು ಚೀಲನ್ನು ಒಡೆದು ಔಷಧವನ್ನು ಗ್ರಹಿಸಬೇಕು.

ಸರಿಯಾಗಿ ತಯಾರಾದ ಭಸ್ಮವನ್ನು ಒಂದು ಚಿಟಿಕೆಯಷ್ಟು ನೀರಿನಲ್ಲಿ ಹಾಕಿದರೆ ಅದು ಮೇಲೆಯೇ ತೇಲುತ್ತಿರಬೇಕು. ಈ ಪರೀಕ್ಷೆಯು ಲೋಹಗಳ ಭಸ್ಮಗಳಲ್ಲಿ ಮುಖ್ಯವು.

ಭಸ್ಮವು ಚಿಟಿಕೆಯಲ್ಲಿ ತೆಗೆದುಕೊಂಡರೆ ಅದು ಬೆರಳುಗಳ ಗೆರೆಗಳಲ್ಲಿ ಸೇರಿಕೊಳ್ಳುವಷ್ಟು ನುಣ್ಣಗಿರಬೇಕು. ಭಸ್ಮವನ್ನು ಬೆರಳಿನಿಂದ ತೆಗೆದು ಗಟ್ಟಿಯಾಗಿ ಅದುಮಿ ನೋಡಿದರೆ ಬೆರಳಿನಲ್ಲಿರುವ ರೇಖೆಗಳು ಭಸ್ಮದಲ್ಲಿ ಕಾಣಬೇಕು.

ಭಸ್ಮವನ್ನು ನೀರಿನಮೇಲೆ ಹಾಕಿ ಅದರಮೇಲೆ ಒಂದು ಭತ್ತದ ಕಾಳನ್ನಾಗಲೀ ಹುರಳೀಕಾಳನ್ನಾಗಲೀ ಮೆಲ್ಲಗೆ ಇರಿಸಿದರೆ, ಕಾಳು ಮುಳುಗದೆ ಭಸ್ಮದ ಮೇಲೆಯೇ ನಿಂತಿರಬೇಕು.

ಭಸ್ಮವು ತಯಾರಾದನಂತರ ಮಿತ್ರಪಂಚಕದೊಡನೆ ಸೇರಿಸಿ ಮೂಸೆಯಲ್ಲಿ ಹಾಕಿ ಒಲೆಯಲ್ಲಿಟ್ಟು ಊದಿದರೆ ಭಸ್ಮವು ಕರಗಿ ಪುನಃ ಲೋಹವಾಗಿ ಮಾರ್ಪಡಕೂಡದು.

ಮಿತ್ರಪಂಚಕವೆಂದರೆ— ಬೆಲ್ಲ, ಗುರುಗಂಜಿಚೂರ್ಣ, ಗುಗ್ಗುಳವು, ಜೇನುತುಪ್ಪ, ತುಪ್ಪ ಇವುಗಳು.

ಆಯಾ ಭಸ್ಮಗಳು ಮತ್ತು ಸಿಂಧೂರಗಳು ಇರತಕ್ಕ ಬಣ್ಣಗಳು ಸರಿಯಾಗಿ ಇರಬೇಕಾದದ್ದನ್ನು ಅನುಭವದಿಂದಲೂ, ಅನುಭವಜ್ಞರಿಂದಲೂ ತಿಳಿದುಕೊಳ್ಳತಕ್ಕದ್ದು ಮುಖ್ಯವು.

ರಸಸಿಂಧೂರ, ಷಡ್ಗುಣ ಸಿಂಧೂರ, ಪೂರ್ಣಚಂದ್ರೋದಯ ಸಿಂಧೂರ ಮೊದಲಾದವುಗಳಲ್ಲಿ ರಸವು ಸಿಂಧೂರವಾಗುವುದು.

ರಸಸಿಂಧೂರ, ಷಡ್ಗುಣ ಸಿಂಧೂರ, ಪೂರ್ಣಚಂದ್ರೋದಯ ಸಿಂಧೂರಗಳನ್ನು ಪಾಕಮಾಡುವಾಗ ಮೂರು ಅವಸ್ಥೆಗಳು ಕಾಣಬರುವುವು

ಪ್ರಥಮಾವಸ್ಥೆ—ಗಂಧಕವು ದ್ರವವಾಗಿ ಕರಗುವ ಅವಸ್ಥೆ. ಕ್ರಮವಾಗಿ ರಸಗಂಧಕಗಳನ್ನು ಕಜ್ಜಲಿಮಾಡಿ ಆಯಾ ಸ್ವರಸಗಳಲ್ಲಿ ಅರೆದು ಒಣಗಿಸಿ ಪುಡಿ

ಮಾಡಿ ಗಾಜಿನ ಸೀಸಾಯಿಗೆ ಹಾಕಿ ಜೇಲುಗಳನ್ನು ಮಾಡಿ ಒಣಗಿಸಿ ಮೇಲ್ಕಂಡ ಪುಡಿಯನ್ನು ಹಾಕಿ ವಾಲುಕಾ ಯಂತ್ರದಲ್ಲಿಟ್ಟು ದೀಪಾಗ್ನಿ, ಕಮಲಾಗ್ನಿ, ಗಾಢಾಗ್ನಿ ಗಳಿಂದ ಕ್ರಮವಾಗಿ ಯೋಗಗಳಲ್ಲಿ ನಿಯಮಿಸಲ್ಪಟ್ಟ ಕಾಲದವರೆವಿಗೂ ಪಾಕ ಮಾಡುವಾಗ ಮೊದಲು ದೀಪಾಗ್ನಿಯಿಂದ ಕಜ್ಜಲೀ ಪಾಕವಾಗುವಾಗ ಒಂದು ಕಬ್ಬಿಣದ ಸಲಾಕಿಯನ್ನು ಹಾಕಿ ನೋಡಿದರೆ ಕಜ್ಜಲೀ ಚೂರ್ಣವು ಚನ್ನಾಗಿ ಕರಗದೇ ಇರುವಾಗ ಸಲಾಕಿಯು ಚೂರ್ಣದಲ್ಲಿಳಿದಂತೆಯೇ ಇಳಿಯುವುದಲ್ಲದೆ ಸಲಾಕಿಯನ್ನು ಮೇಲಕ್ಕೆತ್ತಿ ನೋಡಿದರೆ ಕರ್ರಗೆ ಕಾಣುವುದು. ಕಜ್ಜಲಿಯು ಕರಗಿದ ನಂತರ ಸಲಾಕಿಯನ್ನು ಹಾಕಲು ಕೆಸರಿನಲ್ಲಿ ಚುಚ್ಚಿದಂತಿರುವುದಲ್ಲದೆ ಸಲಾಕಿಯನ್ನು ಮೇಲಕ್ಕೆತ್ತಿ ನೋಡಲು ಕಪ್ಪುಬಣ್ಣವು ಬಳಿದಂತೆ ಔಷಧವು ಸಲಾಕಿಗೆ ಅಂಟಿಕೊಂಡು ಬರುವುದು. ಸಲಾಕಿಗೆ ಅಂಟಿಕೊಂಡಿರುವ ಔಷಧವನ್ನು ಕತ್ತಿಯಿಂದ ಗೀಚಿ ಪುನಃ ಸೀಸಾಯಿಯಲ್ಲಿಯೇ ಹಾಕಬೇಕು. ಸಲಾಕಿಯನ್ನು ಸೀಸಾಯಿಯಲ್ಲಿ ಹಾಕುವಾಗ ನಿಧಾನವಾಗಿ ಹಾಕಬೇಕು. ಸೀಸಾಯಿಯ ಕೆಳ ಭಾಗವು ಅಗ್ನಿತಾಪದಿಂದ ಬಹು ಮೃದುವಾಗಿರುವುದು. ಸೀಸೆಯ ತಳ ಒಡೆ ದೀತು. ಆದ್ದರಿಂದ ಸಲಾಕಿಯನ್ನು ಸೀಸಾಯಿಯ ಕೆಳಭಾಗಕ್ಕೆ ತಗಲದಂತೆ ಹಾಕಬೇಕು. ಪ್ರಥಮಾವಸ್ಥೆಯಲ್ಲಿ ಸೀಸಾಯಿಯಿಂದ ಹೊಗೆಯು ಸ್ವಲ್ಪವಾಗಿ ಬರುವುದು.

ದ್ವಿತೀಯಾವಸ್ಥೆ—ಈ ಅವಸ್ಥೆಯು ಗಂಧಕವು ಕರಗಿದ ಮೊದಲು ಸಿಂಧೂರವಾಗಲಾರಂಭಿಸುವವರೆವಿಗೂ ಇರುವುದು. ಗಂಧಕವು ಪೂರ್ತಿಯಾಗಿ ಕರಗಿದ ನಂತರ ಕಮಲಾಗ್ನಿಯ ತಾಪದಿಂದ ಕಜ್ಜಲಿಯಲ್ಲಿನ ಗಂಧಕವು ಹೊಗೆಯ ರೂಪವಾಗಿ ಹಾರಿಹೋಗುತ್ತಿರುವುದು ಪ್ರಮಾದದಿಂದ ಕಮಲಾಗ್ನಿಯ ಬಿಸಿ ಗಿಂತಲೂ ಹೆಚ್ಚು ಬಿಸಿಯು ತಗಲಿದರೆ ಒಳಗಿನ ದ್ರವವು ಉಕ್ಕಿ ಮೇಲಕ್ಕೆ ಬರು ವುದು. ಹೆಚ್ಚಾಗಿ ಉಕ್ಕಿ ಬರುವುದರಿಂದ ಔಷಧವು ಸೀಸಾಯಿಯ ಹೊರಭಾಗ ದಲ್ಲಿ ಬಿದ್ದುಹೋಗುವುದು. ಒಂದೊಂದುವೇಳೆ ಉಕ್ಕುವುದರ ಜೊತೆಯಲ್ಲಿ ಒಳಗಿನ ಉರಿಯೂ ಸಹ ಮೇಲಕ್ಕೆ ಬರುವುದು. ಹಾಗೆ ಉರಿಯೊಡನೆ ಉಕ್ಕಿ ಮೇಲಕ್ಕೆ ಬರುವಾಗ ಸಲಾಕಿಯಿಂದ ಒಳಕ್ಕೆ ತಳ್ಳಿದಾಗ್ಯೂ ಪ್ರಯೋಜನವಿಲ್ಲ. ಸಲಾಕಿಯೊಡನೆ ಔಷಧವು ಕೂಡ ಹೊರಕ್ಕೆ ಬಂದು ಬೀಳುವುದು. ಅಂತಹ ಸಮಯದಲ್ಲಿ ಒಲೆಯ ಉರಿಯನ್ನು ತಗ್ಗಿಸಲು ಸೀಸಾಯಿಯ ಒಳಗಿನಿಂದ ಹೊರ ಡುವ ಉರಿಯು ತಗ್ಗುವುದು. ಅಲ್ಲಿಗೂ ಉರಿಯು ಆರಿಹೋಗದಿದ್ದರೆ ಮಡಕೆಯ ಬಾಯಿಯನ್ನು ಮುಚ್ಚಳದಿಂದ ಮುಚ್ಚಬೇಕು. ತಕ್ಷಣವೇ ಉರಿಯು ಆರಿ ಹೋಗುವುದು. ಪುನಃ ಒಲೆಯನ್ನು ನಿದಾನವಾಗಿ ಉರಿಸುವುದರಿಂದ ಸೀಸಾ ಯಿಯ ಬಾಯಿಯವರೆವಿಗೆ ಬಂದಿರುವ ಔಷಧಿಯು ಕರಗಿ ಒಳಕ್ಕೆ ಜಾರಿಹೋಗು

ವುದು. ಆದುದರಿಂದ ನಿದಾನವಾಗಿ ಹದವಾಗಿರುವಂತೆ ಅಗ್ನಿತಾಪವನ್ನು ಕೊಡ ಬೇಕು.

ತೃತೀಯಾವಸ್ಥೆ—ಈ ಅವಸ್ಥೆಯು ಸಿಂಧೂರವಾಗುವುದಕ್ಕೆ ಆರಂಭ ವಾದ ಮೊದಲ್ಗೊಂಡು ಗಂಧಕವಿಲ್ಲದೆ ಹೋಗಿ ಸಿಂಧೂರವು ಪೂರ್ತಿಯಾಗಿ ನೆರ ವೇರುವವರೆವಿಗೂ ಇರುವುದು. ಇದರಲ್ಲಿ ಗಂಧಕವು ಚೆನ್ನಾಗಿ ಹೊಗೆಯಾಗಿ ಮೇಲಕ್ಕೆ ಹೋಗುತ್ತಿರುವುದು. ಗಂಧಕವೂ ರಸವೂ ಸೇರಿ ಸೀಸಾಯಿಯ ಕುತ್ತಿ ಗೆಯ ಒಳಗಡೆ ಮೇಲ್ಭಾಗದಲ್ಲಿ ಅಂಟಿಕೊಳ್ಳುವುದು. ರಸವು ಅಲ್ಲಿಯೇ ನಿಂತು ಗಂಧಕವು ಹೊಗೆಯರೂಪವಾಗಿ ಹೊರಕ್ಕೆ ಹೋಗುವುದು. ಉರಿಯು ಅಧಿಕ ವಾದರೆ ಗಂಧಕದೊಡನೆ ರಸವೂ ಕೂಡ ಹಾರಿಹೋಗುವುದು. ಆದುದರಿಂದ ಮೂರನೆಯ ದಿನ ಗಾಢಾಗ್ನಿ ಹಾಕುತ್ತಿದ್ದರೂ ಎಚ್ಚರಿಕೆಯಾಗಿ ಉರಿಯನ್ನು ಅಧಿಕವಾಗದಂತೆಯೂ ನೋಡಿಕೊಳ್ಳುತ್ತಿರಬೇಕು. ಹೀಗೆ ಗಂಧಕವೆಲ್ಲವೂ ಹಾರಿಹೋದ ನಂತರ ಸೀಸಾಯಿಯ ಒಳಗೆ ಮೇಲ್ಭಾಗದಲ್ಲಿ ರಸವು ಮಾತ್ರ ಸಿಂಧೂರವಾಗಿ ನಿಲ್ಲುವುದು. ಕೆಲವು ಸಮಯಗಳಲ್ಲಿ ರಸವೂ ಗಂಧಕವೂ ಇವೆ ರಡೂ ಕಲೆತಾಗಲೀ ಕೇವಲ ಗಂಧಕವೇ ಆಗಲಿ ಸೀಸಾಯಿಯ ಬಾಯಿಯಬಳಿ ಕಟ್ಟಿಕೊಳ್ಳುವುದು. ಗಂಧಕವು ಅಧಿಕವಾಗಿರುವ ಸಮಯದಲ್ಲಿ ಈರೀತಿಯಾಗಿ ಕಟ್ಟಿಕೊಂಡರೆ ಕಬ್ಬಿಣದ ಸಲಾಕಿಯನ್ನು ಕೆಂಪಾಗಿ ಕಾಯಿಸಿ ಈ ಸಲಾಕಿಯಿಂದ ಒಳಕ್ಕೆ ನೂಕುವುದು. ರಸವು ಗಂಧಕದೊಡನೆ ಸೇರಿ ಅಡ್ಡವಾಗಿ ಕಟ್ಟಿಕೊಂಡಿ ದ್ದರೆ ಅದನ್ನು ತಳ್ಳುವುದು ಸ್ವಲ್ಪ ಕಷ್ಟ. ಅಂತಹ ಸಮಯದಲ್ಲಿ ಕೆಂಪಾಗಿ ಕಾಸಿದ ಕಬ್ಬಿಣದ ಸಲಾಕಿಯಿಂದ ನಿದಾನವಾಗಿಯೂ ಜಾಗರೂಕತೆಯಿಂದಲೂ ಸೀಸಾಯಿಗೆ ಅಪಾಯಬಾರದಂತೆ ಔಷಧವನ್ನು ನೂಕಬೇಕು. ಒಂದುವೇಳೆ ಔಷಧವನ್ನು ಒಳಕ್ಕೆ ನೂಕುವುದಕ್ಕೆ ಆಗದಿದ್ದರೆ ಉರಿಯನ್ನು ನಿಲ್ಲಿಸಿ ಸಾಂಗ ಶೀತಲವಾದ ನಂತರ ಸೀಸಾಯಿಯನ್ನು ಈಚೆಗೆ ತೆಗೆದು ಸೀಸಾಯಿಯಲ್ಲಿರುವ ಔಷಧವನ್ನು ಈಚೆಗೆ ತೆಗೆದು ನೋಡಿ ಅದರಲ್ಲಿ ಗಂಧಕವು ಉಳಿದಿದ್ದರೆ ಪುನಃ ಔಷಧಕ್ಕೆ ಎರಡರಷ್ಟು ಗಂಧಕವನ್ನು ಸೇರಿಸಿ ಅರೆದು ಸೀಸಾಯಿಯಲ್ಲಿ ಹಾಕಿ ಪುನಃ ಪಾಕಮಾಡಬೇಕು. ಗಂಧಕವೆಲ್ಲವೂ ಹಾರಿಹೋದ ನಂತರ ರಸವೇ ಸಿಂಧೂರವಾಗಿ ಸೀಸಾಯಿಯ ಬಾಯಿಯ ಮಾರ್ಗವನ್ನು ಅಡ್ಡಗಟ್ಟಿದರೆ ಉರಿ ಯನ್ನು ತೆಗೆದುಹಾಕಿ ಸಾಂಗಶೀತಲವಾದ ನಂತರ ಸೀಸಾಯಿಯಲ್ಲಿರುವ ಸಿಂಧೂರ ವನ್ನು ಗ್ರಹಿಸಬೇಕು. ಹೀಗೆ ಸೀಸಾಯಿಯ ಬಾಯಿಯಬಳಿ ಅಡ್ಡಕಟ್ಟದೆ ಇರುವುದಕ್ಕೆ ಆಗಾಗ್ಗೆ ಸೀಸಾಯಿಯ ಕುತ್ತಿಗೆಯವರಿವಿಗೂ ಕಬ್ಬಿಣದ ಸಲಾಕಿ ಯನ್ನು ಹಾಕಿ ಬಾಯಿಯ ಮಾರ್ಗವನ್ನು ಸರಾಗವಾಗಿ ಮಾಡುತ್ತಿರಬೇಕು. ಇದಕ್ಕೆ ಮುಖ್ಯವಾಗಿ ಉರಿಯನ್ನು ಹಾಕುವುದರಲ್ಲಿ ಅನುಭವ ಇರಬೇಕು.

ಆಯಾ ಸಮಯಗಳಲ್ಲಿ ತಕ್ಕ ಹಾಗೆ ಉರಿಯನ್ನು ಗಮನಿಸಬೇಕು. ಹೀಗೆ ಮಾಡಿದರೆ ಯಾವ ವಿಧವಾದ ತೊಂದರೆಯೂ ಇಲ್ಲದೆ ಸಿಂಧೂರವು ಪಾಕವಾಗುವುದು.

### ಪಾಕವಾದಕೂಡಲೆ ನೋಡತಕ್ಕ ಪರೀಕ್ಷೆ.

೧. ಸೀಸಾಯಿಯ ಕೆಳಭಾಗವು ಕೆಂಪಾಗಿ ಕಾಣಿಸುವುದು.

೨. ಸೀಸಾಯಿಯ ಬಾಯಿಯ ಮೇಲೆ ಒಂದು ಜೋಕಿ ಬಿಲ್ಲೆಯನ್ನಿಟ್ಟು ತೆಗೆದು ನೋಡಿದರೆ ಬೆಳ್ಳಗೆ (ರಸದ) ಹೊಗೆ ಕಟ್ಟುವಿಕೆ.

೩. ಕಬ್ಬಿಣದ ಸಲಾಕಿಯನ್ನು ಹಾಕಿನೋಡಿದರೆ ಅದಕ್ಕೆ ಬೆಳ್ಳಗೆ ಹೊಗೆಯಂಟೆ ಗಂಧಕದ ವಾಸನೆಯಾಗಲೀ ಹೊಗೆಯಾಗಲಿ ಇಲ್ಲದಿರಬೇಕು.

೪. ಸೀಸಾಯಿಯಲ್ಲಿ ಉದ್ದವಾದ ಒಣಗಿದ ಹುಲ್ಲುಕಡ್ಡಿಯನ್ನು ಹಾಕಿ ಮೇಲಕ್ಕೆ ತೆಗೆದರೆ ಹೊಗೆಯಿಲ್ಲದೆ ಭಗ್ಗನೆ ಉರಿಯಬೇಕು

ಈ ಲಕ್ಷಣಗಳೆಲ್ಲವೂ ಕಂಡುಬಂದ ಕೂಡಲೇ ಉರಿಯನ್ನು ನಿಲ್ಲಿಸಿ ಸೈಂದರ ಲವಣವನ್ನೂ ವೀಭೂತಿಯನ್ನೂ ಕಲ್ವದಲ್ಲಿ ಹಾಕಿ ನೀರುಹಾಕಿ ಚನ್ನಾಗಿ ಅರೆದು ಬಟ್ಟೆಗೆ ಸವರಿ, ಸೀಸಾಯಿಯ ಬಾಯಿಗೆ ಹೆಂಚುಬಿಲ್ಲೆಯನ್ನು ಮುಚ್ಚಿ ಮೇಲ್ಕಂಡ ಬಟ್ಟೆಯಿಂದ ಚೀಲುಮಾಡಬೇಕು. ಹಾಗೆ ಮಾಡುವುದರಿಂದ ಒಳಗೆ ಆವಿಯರೂಪವಾಗಿರುವ ರಸವು ಮೇಲಕ್ಕೆ ಹಾರಿಹೋಗದೆ ಒಳಗಡೆಯೇ ನಿಂತು ಸಿಂಧೂರವಾಗುವುದು. ಸ್ವಾಂಗಶೀತಲವಾದನಂತರ ಸೀಸಾಯಿಯನ್ನು ತೆಗೆದು ಮೇಲಿನ ಚೀಲನ್ನು ಬಿಚ್ಚಿ ಸೀಸಾಯಿಯ ಮೇಲ್ಭಾಗವನ್ನು ಚೆನ್ನಾಗಿ ತೊಳೆದು ಗಾಜು ಚೂರುಗಳು ಔಷಧದಲ್ಲಿ ಬೀಳದಹಾಗೆ ಉಪಾಯವಾಗಿ ಸೀಸಾಯಿಯನ್ನು ಒಡೆದು ಔಷಧವನ್ನು ಗ್ರಹಿಸಿ ಇಟ್ಟುಕೊಳ್ಳಬೇಕು. ಸೀಸಾಯಿಯ ಕೆಳಭಾಗದಲ್ಲಿ ಉಳಿದ ಕಪ್ಪಾದ ಗಂಧಕಪಿಷ್ಟದಲ್ಲಿ ರಸ ನೇರಿದ್ದರೆ ಭಾರವಾಗಿಯೂ, ರಸವಿಲ್ಲದಿದ್ದರೆ ಹಗುರವಾಗಿಯೂ ಇರುವುದು. ಹಗುರವಾಗಿದ್ದರೆ ಅದನ್ನು ತೆಗೆದುಹಾಕಬೇಕು. ಹೀಗೆಯೇ ಒಂದೊಂದುಸಲ ಸೀದುಹೋದ ಗಂಧಕವು ಸೀಸಾಯಿಯ ಮೇಲ್ಭಾಗದಲ್ಲಿಯೂ ಸಹ ಇರುವುದು.

ಈ ಪಾಚನೌಷಧಗಳಲ್ಲಿ ರಸಗಂಧಕಗಳು ಮಾತ್ರವಲ್ಲದೆ ಅದರಲ್ಲಿ ಸ್ವರ್ಣ, ರಜಿತ ಮೊದಲಾದವುಗಳಾಗಲೀ; ಲೋಹ, ಕಾಂತಾದಿ ಭಸ್ಮಗಳನ್ನಾಗಲೀ ಸೇರಿಸಿದ್ದರೆ ಅದು ಸೀಸಾಯಿಯ ಕೆಳಭಾಗದಲ್ಲಿಯೇ ನಿಂತಿರುವುದು ಅದನ್ನೂ ಸಹ ಗ್ರಹಿಸಬೇಕು. ತಯಾರಾದ ನಂತರ ಅದರಲ್ಲಿ ಗಂಧಕವು ನಿಂತಿದೆಯೆಂದು ಅನುಮಾನವಾದರೆ ಅದನ್ನು ಒಂದು ಕಬ್ಬಿಣದ ಸೌಟಿನಲ್ಲಿ ಹಾಕಿ ಬೆಂಕಿಯ ಮೇಲಿಟ್ಟರೆ ಗಂಧಕವು ಹೊಗೆಯರೂಪವಾಗಿ ಹಾರಿಹೋಗುವುದು ನಂತರ ಉಳಿದ ಔಷಧವನ್ನು ಸಿಂಧೂರದೊಡನೆ ಬೆರಸಿಕೊಳ್ಳುವುದು.

ವಾಲುಕಾಯಂತ್ರದಿಂದ ಸಿಂಧೂರವನ್ನು ಮಾಡುವಸಂದರ್ಭದಲ್ಲಿ ಸೌದೆಯು ಒಂದೇ ದಪ್ಪನಾಗಿಯೂ, ಒಂದು ಮೊಳಕ್ಕೆ ಮೀರದ ಉದ್ದವುಳ್ಳದ್ದಾಗಿಯೂ ಇರಬೇಕು. ಅಧಿಕ ಉದ್ದವಾದ ಮತ್ತು ದಪ್ಪವಾದ ಸೌದೆಯನ್ನು ಉಪಯೋಗಿಸಬಾರದು. ಆಯಾ ಔಷಧಗಳು ನಿರ್ಣೀತ ಕಾಲಗಳಿಗೆ ಪಾಕವಾಗುವುದಕ್ಕೆ ಎಂತಹ ಅಗ್ನಿಯು ಬೇಕೋ ಅದಕ್ಕೆ ತಕ್ಕ ಸೌದೆ ಅಗ್ನಿಯನ್ನೇ ಉಪಯೋಗಿಸಬೇಕು. ಸಿಂಧೂರಗಳನ್ನು ಪಾಕಮಾಡುವಾಗ ಆಯಾ ಯೋಗಗಳಲ್ಲಿ ಹೇಳಲ್ಪಟ್ಟಿರುವ ಕಾಲಪರಿಮಿತಿಗಿಂತ ಶೀಘ್ರವಾಗಿಯಾಗಲೀ, ನಿಧಾನವಾಗಿಯಾಗಲೀ ಯಾವಾಗ ಪಕ್ವವಾಗುವುದೋ ಆಗಲೇ ಗ್ರಹಿಸಬೇಕು. ಅಲ್ಲದೆ ಸರಿಯಾಗಿ ಆ ಕಾಲಕ್ಕೇ ತೆಗಿಯಬೇಕೆಂದು ಹಾಗೆಯೇ ಬಿಟ್ಟಿರಬಾರದು. ಏಕೆಂದರೆ ಈ ಔಷಧಗಳು ಪಕ್ವವಾದಕೂಡಲೇ ಇಳಿಸತಕ್ಕದ್ದಾಗಿವೆ. ಆ ಪಾಕವು ಸೌದೆಯನ್ನೂ, ಉರಿಯನ್ನೂ ಅನುಸರಿಸಿರುವುದು. ಒಂದುವೇಳೆ ಅಜಾಗ್ರತೆಯಿಂದ ಅಗ್ನಿ ಅಧಿಕ್ಯದಿಂದ ಶೀಘ್ರವಾಗಿ ಪಾಕವಾದರೆ ಅದನ್ನು ಇಳಿಸಬೇಕು. ಶೀಘ್ರವಾಗಿ ಪಾಕವಾಗಬೇಕೆಂದು ಅಧಿಕವಾಗಿ ಉರಿಯನ್ನು ಹಾಕಬಾರದು. ಈ ಕ್ರಮವೆಲ್ಲವನ್ನೂ ಅದನ್ನು ತಿಳಿದವರಿಂದ ಮಾಡಿಸಿ ನೋಡಿ ಚೆನ್ನಾಗಿ ಅನುಭವವನ್ನು ಪಡೆಯಬೇಕು.

# ಹದಿಮೂರನೆಯ ಅಧ್ಯಾಯ.

## ಭಸ್ಮಗಳು.

ರಸಭಸ್ಮವನ್ನು ಮಾಡುವ ವಿಧಾನ— ಪಾದರಸವನ್ನು ಕ್ರಮದಂತೆ ಶುದ್ಧಿಮಾಡಿದ ನಂತರ ಸಿದ್ಧವಾದ ಪಾದರಸವನ್ನು ನಿಂಬೇಹುಳಿಯಿಂದ ಅರೆದು ಬಿಸಿಲಿನಲ್ಲಿ ಇರಿಸಿದರೆ ಆ ಕಾವಿನಿಂದ ರಸವು ಕರಗಿ ಬೇರೆ ನಿಲ್ಲುವದು. ಅಥವಾ ಒಳ್ಳೆಯ ಕೆನೆಯ ಸುಣ್ಣವನ್ನು ಮಡಕೆಗೆ ಬಳಿದು ಪಾತನಯಂತ್ರವಿಟ್ಟು ರಸವನ್ನು ಸುಟ್ಟರೆ ಮೇಲಿನ ಮಡಕೆಗೆ ಶುದ್ಧವಾದ ರಸವು ಹತ್ತಿಕೊಳ್ಳುವುದು. ಈ ಸಂಸ್ಕಾರಕ್ಕೆ ಉತ್ಥಾಪನವೆಂದು ಹೆಸರು. ಹೀಗೆ ಉತ್ಥಿತವಾದ ರಸವು ಪರಿಶುದ್ಧವಾದುದು.

ಬೆಳ್ಳುಳ್ಳಿಯನ್ನು ಅರೆದು ಮೂಸೆಮಾಡಿ ಉತ್ಥಿತವಾದ ರಸವನ್ನು ಅದರಲ್ಲಿ ಇರಿಸಿ ಬೆಳ್ಳುಳ್ಳಿ, ಸಾಸುವೆ ಇವುಗಳನ್ನು ನುಣ್ಣಗೆ ಅರೆದು ಬಟ್ಟೆಗೆ ಲೇಪಿಸಿ ಲೇಪಿಸಿ ನಾಲ್ಕುಮಡಿಕೆಯಾಗಿ ಮಡಿಸಿ ಇದರಲ್ಲಿ ಆ ಮೂಸೆಯನ್ನು ಕಟ್ಟಿ ಒಂದು ಮಡಿಕೆಯಲ್ಲಿ ತ್ರಿಕಟುಕ, ತ್ರಿಫಲೆ, ಚಿತ್ರಮೂಲ, ಲೋಳಿಸರ ಇವುಗಳ ಕಲ್ಕ

ದಿಂದ ಕೂಡಿದ ತುಷಾಂಬುವನ್ನು ತುಂಬಿ ಡೋಲಾಯಂತ್ರ ಕ್ರಮದಿಂದ ಆ ರಸ ಕಟ್ಟಿದ ಆರಿವೆಯನ್ನು ಈ ಮಡಕೆಯಲ್ಲಿ ತೂಗಕಟ್ಟಿ ಒಂದುದಿನವೆಲ್ಲ ಉರಿಹಾಕುವುದು ಈ ಸಂಸ್ಕಾರಕ್ಕೆ ಸ್ವೇದನವೆಂದು ಹೆಸರು. ಹಿಂದೆ ಹೇಳಿದ ಸಂಸ್ಕಾರಗಳಲ್ಲೆಲ್ಲ ಹೋಗದೆ ಉಳಿದಿದ್ದ ದೋಷಶೇಷಗಳೆಲ್ಲ ಈ ಸ್ವೇದನವೆಂಬ ಸಂಸ್ಕಾರದಿಂದ ನಿವೃತ್ತಿಯಾಗುವವು.

ಅಥವಾ ಇಂಗಲೀಕದಿಂದ ಇಳಿಸಿಕೊಂಡರಸವನ್ನು ಒಂದು ಮಡಿಕೆಯಲ್ಲಿ ಉಪ್ಪುನೀರನ್ನು ಹಾಕಿ ಹಿಂದೆ ಹೇಳಿದ ಕ್ರಮದಂತೆ ರಸವನ್ನು ಗಂಟುಕಟ್ಟಿ ಡೋಲಾಯಂತ್ರದಲ್ಲಿ ಸ್ವೇದನಮಾಡಿ ತೆಗೆದುಕೊಂಡು ಯಥೇಚ್ಛವಾಗಿ ಔಷಧಗಳಿಗೆ ಉಪಯೋಗಿಸಬಹುದು ಇದು ಭಸ್ಮಮಾಡುವದಕ್ಕೆ ಯೋಗ್ಯವಾದದ್ದು.

**ರಸಮಾರಣ ವಿಧಾನ—** (ಮಾರಣ ಕೊಲ್ಲುವುದು ಭಸ್ಮಮಾಡುವುದು ಇವು ಸಮಾನಾರ್ಥಕಗಳು)

೧ನೇ ವಿಧ –ಉತ್ತರಣೆಯ ಬೀಜವನ್ನು ನುಣ್ಣಗೆ ಅರೆದು ಎರಡುಮೂಸೆಗಳನ್ನು ಮಾಡಿಕೊಂಡು, ಪಾದರಸವನ್ನು ಕಲ್ಲತ್ತಿ(ಬ್ರಹ್ಮಮೇಡಿ)ಯ ಹಾಲಿನಿಂದ ಅರೆದು ತುಂಬೆಯಹೂವು, ವಾಯುವಿಳಂಗ, ಹುಚ್ಚು (ದುರ್ಗಂಧವುಳ್ಳ) ಕಗ್ಗಲಿ ಇವುಗಳ ಚೂರ್ಣವನ್ನು ಕೆಳಗೂ ಮೇಲೂ ಕವಚಕೊಟ್ಟು ಆ ಒಂದು ಮೂಷೆಯಲ್ಲಿರಿಸಿ ಮತ್ತೊಂದು ಮೂಷೆಯನ್ನು ಮುಗುಚಿಹಾಕಿ ಮುಚ್ಚಿ ಸಂದುಸೇರುವೆ ಮಾಡಿ ಆ ಉಂಡೆಯನ್ನು ತಕ್ಕ ಶರಾವೆಗಳೆರಡರ ನಡುವೆ ಇರಿಸಿ ಸಂಪುಟಿಸಿ ಚೀಲುಮಣ್ಣುಮಾಡಿ ಒಣಗಿಸಿ ಗಜಪುಟವಿಟ್ಟರೆ ಒಂದೇಪುಟದಲ್ಲಿ ರಸವು ಭಸ್ಮವಾಗುವುದು.

೨ನೇ ವಿಧ –ಶುದ್ಧ ಪಾದರಸಕ್ಕೆ ಸಮತೂಕ ಶುದ್ಧವಾದ ಗಂಧಕವನ್ನು ಸೇರಿಸಿ ಆಲದ ಹಾಲಿನಿಂದ ಅರೆದು ಒಂದು ಮಡಕೆಯಲ್ಲಿ ಹಾಕಿ ಒಲೆಯಮೇಲೆ ಇರಿಸಿ ಸೂಕ್ಷ್ಮಾಗ್ನಿ (ಸಣ್ಣ ಉರಿ) ಯಿಂದ ಒಂದುದಿನವೆಲ್ಲ ಉರಿಹಾಕುವುದು. ಉರಿಸುವಾಗ ಆಲದ ಕಡ್ಡಿಯಿಂದಲೇ ತೊಳಸುತ್ತಿರಲು ರಸವು ಭಸ್ಮವಾಗುವುದು. ಆ ಭಸ್ಮವನ್ನು ಒಂದು ಗುಂಜಿಯತೂಕ ತೆಗೆದುಕೊಂಡು ವೀಳೆಯದೆಲೆಯ ಚೂರಿನಲ್ಲಿ ಸುತ್ತಿ ತಿನ್ನಲು ಜೀರ್ಣಶಕ್ತಿಯನ್ನೂ ಪುಷ್ಟಿಯನ್ನೂ ಹೆಚ್ಚಿಸುವುದು.

೩ನೇ ವಿಧ — ಶುದ್ಧಿಮಾಡಿದ ಪಾದರಸ ೩ ತೊಲೆ, ಸೈಂದರಲವಣ ೩ ತೊಲೆ, ಗಾಜುಲವಣ ೩ ತೊಲೆ, ಪಟಿಕ ೩ ತೊಲೆ, ಶುದ್ಧಿಮಾಡಿದ ಅನ್ನಬೇದಿ ೩ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಲೋಳಿಸರದ ಒಳಗಿನ ತಿರುಳನ್ನು ಏಳು ಸಲ ತಣ್ಣೀರಿನಲ್ಲಿ ತೊಳದು ಮೇಲ್ಕಂಡ ಔಷಧಕ್ಕೆ ಸೇರಿಸಿ ಚನ್ನಾಗಿ ಅರದು ಒಂದು ಮಡಕೆಯಲ್ಲಿ ಹಾಕಿ ಮತ್ತೊಂದು ಮಡಕೆ ಬಾರಲಾಗಿ ಮುಚ್ಚಿ ಕೆಮ್ಮಣ್ಣು ಬಟ್ಟೆಯಿಂದ ೭ ಚೀಲುಮಾಡಿ ಒಣಗಿಸಿ ಒಲೆಯಮೇಲೆ ಇಟ್ಟು ಎರಡು ಜಾವ ಉರಿಹಾಕಲು ಮೇಲಿನ ಮಡಿಕೆಯಲ್ಲಿ ರಸಭಸ್ಮವು ಪತಂಗಿಸಿರುವುದು. ಸಾಂಗ

ಶೀತಲವಾದ ನಂತರ ತೆಗೆದು ಇಟ್ಟುಕೊಳ್ಳುವದು. ಹೊತ್ತಿಗೆ ಬೇಳೆತೂಕ, ಹಾಗತೂಕ ಹಸುವಿನ ತುಪ್ಪದಲ್ಲಿ ಕೊಡುವುದು. ಇದರಿಂದ ಸಮಸ್ತ ಮೇಹಗಳು, ಮೇಹಕಾರಕ, ಮೇಹವಾಯುಗಳು ಗುಣವಾಗುವದು. ಇದಕ್ಕೆ ಪತ್ಯ ಹಸುವಿನ ಹಾಲು ಅನ್ನ. ಉಪ್ಪಿಲ್ಲದ ಸಪ್ಪೆ, ತುಪ್ಪ ಅನ್ನ.

ರಸಭಸ್ಮವು ಕ್ರಮವಾಗಿ ಸೇವಿಸುವವರ ರೋಗಗಳನ್ನೂ, ಮುಪ್ಪನ್ನೂ, ಅಶಕ್ತಿಗಳನ್ನೂ ಸಹ ಪರಿಹರಿಸುವುದು; ದೃಷ್ಟಿ-ಪುಷ್ಟಿ-ಕಾಂತಿಗಳನ್ನು ಕೊಡುವುದು. ವೀರ್ಯವನ್ನು ವೃದ್ಧಿಮಾಡುವುದು; ಮೃತ್ಯುಹರವು; ಬಲಕರವು. ಅನುಪಾನವಿಶೇಷದಿಂದ ಕೊಡಲು ಸಕಲ ರೋಗಗಳು ಗುಣವಾಗುವುವು

## ಇಂಗಳೀಕ ಭಸ್ಮ.

೧ನೇ ವಿಧ—ಹಂಸಪಾದಿ ಸಮೂಲ ತಂದು ಕುಟ್ಟಿ ನಿಂಬೇಹಣ್ಣಿನಗಾತ್ರ ಉಂಡೇಮಾಡಿ ಅದರ ಮಧ್ಯದಲ್ಲಿ ಶುದ್ಧಿಮಾಡಿದ ಇಂಗಳೀಕದ ಗಡ್ಡೆಯಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೬ ಬೆರಣಿಗಳಲ್ಲಿ ಪುಟವಿಡಲು ಭಸ್ಮವಾಗುವುದು. ಈ ಭಸ್ಮ ಜ್ವರಗಳಿಗೆ ಶ್ರೇಷ್ಠವಾದುದು ಪ್ರಮಾಣ ಹೊತ್ತಿಗೆ ಅರ್ಧಗುಂಜಿ ತೂಕ, ಜೇನಿನೊಂದಿಗೆ ದಿನಕ್ಕೆ ಎರಡುವೇಳೆ ಕೊಡುವುದು.

೨ನೇ ವಿಧ—ಶುದ್ಧಿಮಾಡಿದ ೩ ತೊಲೆ ಇಂಗಳೀಕದ ಗಡ್ಡೆಯನ್ನು ತಂದು ಬಿಲ್ಪತ್ರೆ ಬೇರಿನ ತಿರುಳನ್ನು ಅರದು ಬ್ಯಾಲದಕಾಯಿಗಾತ್ರ ಉಂಡೇಮಾಡಿ ಇದರಲ್ಲಿ ಮೇಲ್ಕಂಡ ಇಂಗಳೀಕದ ಗಡ್ಡೆಯನ್ನು ಇಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಕುಕ್ಕುಟಪುಟ ಹಾಕಲು ಭಸ್ಮವಾಗುವುದು.

೩ನೇ ವಿಧ—೨ ತೊಲೆ ಪಟಕಿಯನ್ನು ಖಲ್ವದಲ್ಲಿ ಹಾಕಿ ಯಕ್ಕದಹಾಲು ೨ ತೊಲೆ ಹಾಕಿ ಚೆನ್ನಾಗಿ ಅರದು ಒಂದು ತೊಲೆ ಶುದ್ಧಿಮಾಡಿದ ಇಂಗಳೀಕದ ಗಡ್ಡೆಯ ಮೇಲೆ ಚೆನ್ನಾಗಿ ಲೇಪಿಸಿ ಒಣಗಿಸಿ ಏಳು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಒಣಗಿಸಿ ೬ ಬೆರಣಿಯಲ್ಲಿ ಪುಟವಿಡಲು ಇಂಗಳೀಕ ಭಸ್ಮವಾಗುವುದು. ಇದು ಜ್ವರಗಳಿಗೆ ಮತ್ತು ಮೇಹಶೂಲೆಗೆ ಕೊಡಬಹುದು. ಪ್ರಮಾಣ ೧ ರಿಂದ ೨ ನೆಲ್ಲುಕಾಳು ತೂಕ ತುಪ್ಪದೊಂದಿಗೆ ಕೊಡುವುದು.

## ಗಂಧಕ ಭಸ್ಮ.

೧ನೇ ವಿಧ—ಶುದ್ಧಿಮಾಡಿದ ಹವಳಸರಿ ಗಂಧಕವನ್ನು ಖಲ್ವದಲ್ಲಿ ಹಾಕಿ ಚಿತ್ರಮೂಲದ ರಸದಿಂದ ಅರದು ಬಿಲ್ಲೆಮಾಡಿ ಒಣಗಿಸಿ, ಮತ್ತಿಚಕ್ಕೆ ಸುಟ್ಟು ಬೂದಿಮಾಡಿ ಈ ಬೂದಿಯನ್ನು ಮಡಕೆಗೆ ಅರ್ಧತುಂಬಿ ಇದರಮೇಲೆ ಗಂಧಕದ ಬಿಲ್ಲೆಯನ್ನು ಇಟ್ಟು ಮೇಲೆ ಮಡಕೆಯ ತುಂಬ ಅದೇ ಬೂದಿಯನ್ನು ತುಂಬಿ ಮುಚ್ಚಳ ಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಒಲೆಯಮೇಲಿಟ್ಟು ಮೇಲೆ ಇರುವ ಮುಚ್ಚಳ ಕಾವು ಬರುವವರಿವಿಗು ಉರಿಯನ್ನುಹಾಕಿ ಸಾಂಗ

ಶೀತಲವಾದನಂತರ ಔಷಧವನ್ನು ತೆಗೆದುಕೊಳ್ಳುವುದು. ಈ ಭಸ್ಮವು ಅತಿಮೂತ್ರ ಜಾಡ್ಯಕ್ಕೆ ಉತ್ಕೃಷ್ಟವಾದದ್ದು ಮತ್ತು ಬೇರೆ ಔಷಧಗಳಲ್ಲಿ ಸೇರಿಸಿಕೊಳ್ಳುವುದಕ್ಕೆ ಯೋಗ್ಯವಾದದ್ದು.

೨ನೇ ವಿಧ—ಶುದ್ಧಿಮಾಡಿದ ಹವಳಸರಿ ಗಂಧಕವನ್ನು ಖಲ್ವದಲ್ಲಿ ಹಾಕಿ ದತ್ತೂರಿ ಸಮೂಲದ ರಸದಿಂದ ೭ ದಿನ ಅರದು ಬಿಲ್ಲೆಮಾಡಿ ಒಣಗಿಸಿ ಮೇಲ್ಕಂಡ ಮತ್ತಿಬೂದಿ ಕ್ರಮದಂತೆಯೇ ಮಾಡಿದರೆ ಗಂಧಕವು ಭಸ್ಮವಾಗುವುದು. ಇದು ಮೇಹರೋಗದ ಚಿಕಿತ್ಸೆಗೆ ಉತ್ಕೃಷ್ಟವಾದದ್ದು.

೩ನೇ ವಿಧ—೩ ತೊಲೆ ಶುದ್ಧಿಮಾಡಿದ ಹವಳಸರಿ ಗಂಧಕವನ್ನು ಖಲ್ವದಲ್ಲಿ ಹಾಕಿ ಒಲರಾಕ್ಷಸಿಗಡ್ಡೆಯ ರಸದಲ್ಲಿ ೭ ದಿನ ಅರೆದು ಬಿಲ್ಲೆಮಾಡಿ ಒಣಗಿಸಿ ಒಂದು ಮಡಕೆಯಲ್ಲಿ ಮತ್ತಿಬೂದಿ ಹಾಕಿ ಅದರಮೇಲೆ ಒಂದುವರೆ ತೊಲೆ ಪಟಿಕದ ಚೂರ್ಣಹಾಕಿ ಅದರಮೇಲೆ ಮೇಲ್ಕಂಡ ಗಂಧಕದ ಬಿಲ್ಲೆಯನ್ನು ಇಟ್ಟು ಅದರ ಮೇಲೆ ಒಂದುವರೆ ತೊಲೆ ಪಟಿಕದ ಚೂರ್ಣವನ್ನು ಹಾಕಿ ಮಡಕೆಯನ್ನು ಮತ್ತಿಯ ಬೂದಿಯಿಂದ ತುಂಬಿ ಮುಚ್ಚಳ ಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೩ ಜಾವ ಉರಿಹಾಕಲು ಗಂಧಕವು ಭಸ್ಮವಾಗುವುದು. ಈ ಭಸ್ಮವು ಮೇಹರೋಗಗಳಿಗೆ ಉತ್ಕೃಷ್ಟವಾದದ್ದು.

## ರಸಕರ್ಪೂರ ಭಸ್ಮ.

೧ನೇ ವಿಧ—ಶುದ್ಧಿಮಾಡಿದ ರಸಕರ್ಪೂರವನ್ನು ಖಲ್ವದಲ್ಲಿ ಹಾಕಿ ವೀಳಿದೆಲೆರಸ, ಬಿಳೇ ಎಕ್ಕದ ಬೇರಿನ ರಸ, ಹಾಲುಮಾಣಿದ ಸೊಪ್ಪಿನರಸ, ಕರೇವು ಮ್ಮತ್ತಿ ಸೊಪ್ಪಿನರಸ, ಅಂಕೋಲೆ ಬೇರಿನರಸ, ಚಿತ್ರಮೂಲದ ಬೇರಿನರಸ, ಬಿಳೇ ಕೊಮ್ಮರಸ, ಗಿರಿಕರ್ಣಿಕೆಬೇರಿನ ರಸ ಇವುಗಳಲ್ಲಿ ಪ್ರತಿಯೊಂದು ರಸದಲ್ಲಿಯೂ ಒಂದೊಂದು ಜಾವ ಅರದು ಬಿಲ್ಲೆಮಾಡಿ ಒಣಗಿಸಿ ಇಟ್ಟುಕೊಂಡು ಬಿಳೇ ಎಕ್ಕದ ಬೇರಿನ ಪಟ್ಟೆ, ಚಿತ್ರಮೂಲದ ಬೇರಿನ ಪಟ್ಟೆ, ಹುವ್ವರಸಿ ಬೇರಿನ ಪಟ್ಟೆ ಇವುಗಳನ್ನು ಚನ್ನಾಗಿ ಕುಟ್ಟಿ ಕರೇವುಮ್ಮತ್ತಿಸೊಪ್ಪಿನ ರಸದಲ್ಲಿ ನುಣ್ಣಗೆ ಅರದು ಮೂಸೆಯಂಮಾಡಿ ಒಣಗಿಸಿ ಈ ಮೂಸೆಯಲ್ಲಿ ಮೇಲ್ಕಂಡ ರಸಕರ್ಪೂರವನ್ನು ಇಟ್ಟು ಒಂದು ಮಡಿಕೆಯಲ್ಲಿ ಅರ್ಧಭಾಗಕ್ಕೆ ಒಂದು ಸೇರು ತಿನ್ನುವ ಉಪ್ಪನ್ನು ಹಾಕಿ ಅದರ ಮಧ್ಯದಲ್ಲಿ ಮೇಲ್ಕಂಡ ಮೂಸೆಯನ್ನು ಇಟ್ಟು ಮೂಸೆಯ ಮೇಲೆ ಎರಡು ಎಕ್ಕದಯಲೆ ಮುಚ್ಚಿ ಮೇಲೆ ಮುಚ್ಚಳ ಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಒಲೆಯಮೇಲೆ ಇಟ್ಟು ನಾಲ್ಕುಜಾವ ಕಮಲಾಗ್ನಿಯ ಉರಿಹಾಕಿ ಸ್ವಾಂಗಶೀತಲವಾದ ನಂತರ ಭಸ್ಮವನ್ನು ತೆಗೆದು ಇಟ್ಟುಕೊಳ್ಳುವುದು. ಈ ಭಸ್ಮವನ್ನು ಒಂದು ಅಥವಾ ಎರಡು ಅಕ್ಕೀಕಾಳು ಪ್ರಮಾಣ ತಾಟಿಬೆಲ್ಲದಲ್ಲಿಟ್ಟು ಸೇವಿಸುವದರಿಂದ ಸಕಲ ಮೇಹರೋಗಗಳು ಗುಣವಾಗುವವು. ಇದನ್ನು ಬೆಳಗಿನ

ಹೊತ್ತು ಮೂರು ದಿನ ತೆಗೆದುಕೊಳ್ಳಬೇಕು. ಸಾಯಂಕಾಲ ಕೊಡಕೂಡದು. ಇದಕ್ಕೆ ಪತ್ಯ ಹಸುವಿನ ಹಾಲು ಅನ್ನ.

೨ನೇ ವಿಧ—ಶುದ್ಧಿಮಾಡಿದ ರಸಕರ್ಪೂರವನ್ನು ಖಲ್ವದಲ್ಲಿ ಹಾಕಿ ಪರಂಗಿ ಗಿಡದ ಹಾಲಿನಿಂದ ಒಂದುಜಾವ ಅರದು ಬಿಲ್ಲೆಮಾಡಿ ಒಣಗಿಸಿ ಇಟ್ಟು ಕೊಂಡು ಪರಂಗಿ ಗಿಡದ ಯಲೆಯನ್ನು ಕುಟ್ಟಿ ರಸ ತೆಗೆದು ಒಂದು ಹೊಸ ಮಡ ಕೆಗೆ ಒಳಭಾಗಕ್ಕೆ ಒಂದುಸಲ ಬಳಿದು ಬಿಸಲಿನಲ್ಲಿ ಇಟ್ಟು ಒಣಗಿಸುವುದು. ಈ ರೀತಿ ನಾಲ್ಕುಸಲ ಬಳದು ಒಣಗಿಸಿ ನಂತರ ಮೇಲ್ಕಂಡ ರಸಕರ್ಪೂರದ ಬಿಲ್ಲೆ ಯನ್ನು ಇಟ್ಟು ಈ ಬಿಲ್ಲೆ ಮುಳುಗುವಷ್ಟು ಪರಂಗಿ ಗಿಡದ ಯಲೆಯ ರಸವನ್ನು ಹಾಕಿ ಮೇಲೆ ಮತ್ತೊಂದು ಮಡಕೆ ಬಾರಲುಹಾಕಿ ಕೆಮ್ಮಣ್ಣುಬಟ್ಟೆ ಚೀಲು ಮಾಡಿ ಒಣಗಿಸಿ ಒಲೆಯಮೇಲೆ ಇಟ್ಟು ಮೇಲಿನ ಮಡಕೆ ಕಾವು ಬರುವವರಿವಿಗು ಉರಿಹಾಕಿ ಸಾಂಗಶೀತಲವಾದನಂತರ ತೆಗೆದು ನೋಡಲು ಮೇಲಿನ ಮಡಕೆಯಲ್ಲಿ ರಸಕರ್ಪೂರವು ಪತಂಗಿಸಿ ಇರುವುದು. ಈ ಭಸ್ಮ ಮೇಹರೋಗಗಳಿಗೆ ಒಂದು ಅಥವಾ ಎರಡು ಅಕ್ಕೀಕಾಳು ಪ್ರಮಾಣ ತಾಟೀಬೆಲ್ಲದಲ್ಲಿ ಇಟ್ಟುಕೊಡುವುದು. ಈ ರೀತಿ ಬೆಳಿಗ್ಯೆ ಹೊತ್ತು ೩ ದಿನ ಕೊಡುವುದು. ಇದಕ್ಕೆ ಪತ್ಯ ಹಸುವಿನ ಹಾಲು ಅನ್ನ.

## ತಾಳಕೆ ಭಸ್ಮ.

೧ನೇ ವಿಧ--ಶುದ್ಧಿಮಾಡಿದ ತಾಳಕವನ್ನು ಖಲ್ವದಲ್ಲಿ ಹಾಕಿ ಬಿಳೀಕೊ ಮ್ಮೆಯ ರಸದಿಂದ ಒಂದುದಿನವೆಲ್ಲ ಅರೆದು ಉಂಡೆಮಾಡಿ ಒಣಗಿಸಿ ಇಟ್ಟು ಕೊಂಡು ಒಂದು ಮೊಗೆಯಲ್ಲಿ ಅರ್ಧದವರೆಗೆ ಕೊಮ್ಮೆಯ ಕ್ಷಾರವನ್ನು ಹಾಕಿ ಅದರಮೇಲೆ ಆ ತಾಳಕದ ಉಂಡೆಯನ್ನು ಇರಿಸಿ, ಮೇಲೆಯೂ ಅದೇ ಕ್ಷಾರ ವನ್ನು ತುಂಬಿ, ಬಾಯನ್ನು ಮುಚ್ಚಳದಿಂದ ಚೆನ್ನಾಗಿ ಮುಚ್ಚಿ, ಚೀರುಮಣ್ಣು ಮಾಡಿ ಒಲೆಯಮೇಲೆ ಇರಿಸಿ ಒಂದೇ ಸಮವಾಗಿ ಉರಿಹಾಕಿ ಕ್ಷಣವೂ ನಿಲ್ಲದಂತೆ ಐದುಜಾವ ಉರಿಸಬೇಕು. ಹೀಗೆ ಮಾಡಿದರೆ ತಾಳಕವು ಭಸ್ಮವಾಗುವುದು. ಅದನ್ನು ಸೇವಿಸುವ ಪರಿಮಾಣವು ಅರ್ಧಗುಂಜಿಯ ತೂಕ. ಆಯಾ ರೋಗಗಳಿಗೆ ತಕ್ಕ ಅನುಪಾನಗಳಲ್ಲಿ ಕೊಡುವುದು. ಇದು ಶೀತಜ್ವರಗಳಿಗೆ ಶ್ರೇಷ್ಠವಾದದ್ದು.

೨ನೇ ವಿಧ—ಶೀಗೇಕುಡಿಯನ್ನು ಅರದು ನಿಂಬೇಹಣ್ಣಿನಗಾತ್ರ ಉಂಡೇ ಮಾಡಿ ಅದರ ಮಧ್ಯದಲ್ಲಿ ಒಂದುತೊಲೆ ಶುದ್ಧಿಮಾಡಿದ ತಾಳಕವನ್ನು ಇಟ್ಟು ಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೨೦ ಬೆರಣಿಯಲ್ಲಿ ಪುಟವಿಟ್ಟರೆ ಭಸ್ಮವಾಗುವದು. ಈ ಭಸ್ಮವನ್ನು ಕಾಸಶ್ವಾಸ, ಕೆಮ್ಮಲು, ಮೇಹಾದಿಗಳಿಗೆ ಹಾಗ ತೂಕ ಜೇನುತುಪ್ಪದಲ್ಲಿ ಆಗಲಿ ಹಸುವಿನ ತುಪ್ಪದಲ್ಲಿಯಾಗಲಿ ಕೊಡುವುದು.

೩ನೇ ವಿಧ—ಶುದ್ಧಿಮಾಡಿದ ಪಾಲತುತ್ತ ಅರ್ಧತೊಲೆ, ಶೋಧಿಸಿದ ಸುಣ್ಣ ೧ ತೊಲೆ ಇವೆರಡನ್ನು ಖಲ್ವದಲ್ಲಿ ಹಾಕಿ ಲೋಳೆಸರದ ಒಳಗಿನ ತಿರುಳಿ

ನಲ್ಲಿ ಅರೆದು ಶುದ್ಧಿಮಾಡಿದ ತಾಳಕ ೧ ತೊಲೆಗೆ ಲೇಪಿಸಿ ಒಣಗಿಸಿ ಹಣತೆಯು ಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೨೫ ಬೆರಣಿಯಲ್ಲಿ ಪುಟವಿಡಲು ಭಸ್ಮವಾಗುವುದು. ಈ ಭಸ್ಮ ಹಾಗತೂಕ, ಬಿಳೇಜೀರಿಗೆ ಹುರಿದ ಚೂರ್ಣ ಅರ್ಧ ವರಹ ತೂಕ ಈ ಎರಡನ್ನೂ ಜೇನುತುಪ್ಪದಲ್ಲಿ ಕಲಸಿ ಗುಳಿಗೆ ಮಾಡಿಕೊಡಲು, ಏಕಾಹಿಕ, ದ್ವಿಯಾಹಿಕ, ಚಾತುರ್ಧಿಕ ಜ್ವರಗಳು ಗುಣವಾಗುವುವು.

೪ನೇ ವಿಧ—ಹುವ್ವರಸಿಚಕ್ಕೆ ಚನ್ನಾಗಿ ಕುಟ್ಟಿ ನುಣ್ಣಗೆ ಅರದು ಬೇಲದ ಕಾಯಿಗಾತ್ರ ಉಂಡೇಮಾಡಿ ಈ ಉಂಡೇ ಮಧ್ಯದಲ್ಲಿ ೧ ತೊಲೆ ಶುದ್ಧಿಮಾಡಿದ ತಾಳಕವನ್ನು ಇಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೨೦ ಬೆರಣಿಯಲ್ಲಿ ಪುಟಹಾಕಲು ಭಸ್ಮವಾಗುವುದು. ಈ ಭಸ್ಮವು ಮೇಹಕ್ಕು, ಶ್ವಾಸಖಾಸಗಳಿಗೂ ಹಾಗತೂಕ ಜೇನುತುಪ್ಪದಲ್ಲಿ ಕೊಡುವುದು.

೫ನೇ ವಿಧ—ಶುದ್ಧಿಮಾಡಿದ ತಾಳಕವನ್ನು ಖಲ್ವದಲ್ಲಿ ಹಾಕಿ ಹಸೀ ಅರಸಿನದ ರಸದಿಂದ ಅರೆದು ಬಿಲ್ಲೆಮಾಡಿ ಒಣಗಿಸಿ ಚಿತ್ರಮೂಲದ ಸಮೂಲವನ್ನು ಸುಟ್ಟು ಬೂದಿಮಾಡಿ ಈ ಬೂದಿಯನ್ನು ಒಂದು ಮಡಿಕೆಯಲ್ಲಿ ಅರ್ಧತುಂಬಿ ಅದರ ಮೇಲೆ ಮೇಲ್ಕಂಡ ತಾಳಕದ ಬಿಲ್ಲೆಯನ್ನು ಇಟ್ಟು ಅದರಮೇಲೆ ಚಿತ್ರಮೂಲದ ಬೂದಿಯನ್ನು ತುಂಬಿ ಮುಚ್ಚಳಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಒಲೆಯಮೇಲೆ ಇಟ್ಟು ೪ ಜಾವ ಉರಿಹಾಕಿ ಸಾಂಗಶೀತಲವಾದನಂತರ ತೆಗೆದು ನೋಡಲು ಭಸ್ಮವಾಗಿರುವುದು. ಈ ಭಸ್ಮವು ಕಾಲುತೊಲೆ, ಚಿತ್ರಮೂಲದ ಚೂರ್ಣ ೩ ತೊಲೆ ಇವು ಎರಡು ಕಲಸಿ ಇಟ್ಟುಕೊಂಡು, ಹೊತ್ತಿಗೆ ೨ ಆಣೆ ತೂಕ ಚೂರ್ಣ ಹಸುವಿನ ಬೆಣ್ಣೆಯಲ್ಲಾಗಲಿ, ಹಸುವಿನ ತುಪ್ಪದಲ್ಲಿಯಾಗಲಿ ಕಲಸಿ ೨೦ ದಿವಸ ಎರಡುಹೊತ್ತು ಸೇವಿಸಲು ೨೪ ಮೇಹ, ಅಂಗಾಲುನೂತಿ, ನಾಲ್ಕುವಿಧ ಪೀನಾಸಿ, ಭಗೇಂದ್ರಗಳು, ಸನ್ನಿಪಾತಕಗಳು, ಛಳಿಜ್ವರಗಳು, ಕಾಸಶ್ವಾಸ, ೮೪ ವಾಯು, ೮ ವಿಧ ಗುಲ್ಮ, ಗಂಡಾಮಾಲೆ, ಸರಮಾಲೆ, ಪಕ್ಕೆನೂತಿ, ಎಮುಕೆನೂತಿ, ಕಣ್ಣುನೂತಿ, ಪಿಕ್ಕವ್ರಣ, ದಂತಿಹುಣ್ಣು, ತೊಡೆಬಾಳೆ, ರಾಜಹುಣ್ಣು, ಹೆಡೆತಲೆ ಮೃತ್ಯು ಮೊದಲಾದ ಸಮಸ್ತ ವ್ರಣರೋಗಗಳು ಗುಣವಾಗುವುವು.

೬ನೇ ವಿಧ—೨ ತೊಲೆ ಶುದ್ಧಿಮಾಡಿದ ಪತ್ರಿ ತಾಳಕವನ್ನು ಖಲ್ವದಲ್ಲಿ ಹಾಕಿ ಚಿತ್ರಮೂಲದ ರಸದಿಂದ ಅರೆದು ಬಿಲ್ಲೆಮಾಡಿ ಒಣಗಿಸಿ ಇಟ್ಟುಕೊಂಡು ೫ ತೊಲೆ ಪಟಕಿ ಚೂರ್ಣಮಾಡಿ ಒಂದು ಮಗೆಯಲ್ಲಿ ೨॥ ತೊಲೆ ಪಟಿಕದ ಚೂರ್ಣವನ್ನು ಹಾಕಿ ಅದರಮೇಲೆ ಮೇಲ್ಕಂಡ ತಾಳಕದ ಬಿಲ್ಲೆಯನ್ನು ಇಟ್ಟು ಅದರ ಮೇಲೆ ಉಳಿದ ೨॥ ತೊಲೆ ಪಟಿಕದ ಚೂರ್ಣವನ್ನು ಹಾಕಿ ಮುಚ್ಚಳ ಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಒಂದುಮೊಳ ಪುಟ ಇಡುವುದು. ಸಾಂಗ ಶೀತಲವಾದನಂತರ ಔಷಧವನ್ನು ತೆಗೆದು ಖಲ್ವದಲ್ಲಿ ಹಾಕಿ ಮೊಲೆಹಾಲಿನಿಂದ

ಒಂದುಜಾವ ಅರೆದು ಬಿಲ್ಲೆಮಾಡಿ ಒಣಗಿಸಿ ಮೇಲ್ಕಂಡ ಪ್ರಕಾರವೇ ಮತ್ತೊಂದುಪುಟ ಇಟ್ಟು ಸಾಂಗಶೀತಲವಾದನಂತರ ಭಸ್ಮವನ್ನು ತೆಗೆದು ಇಟ್ಟುಕೊಳ್ಳುವುದು. ಈ ಭಸ್ಮ ಅರ್ಧ ಗುರುಗಂಜಿ ತೂಕ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ಛಳಿಜ್ವರಕ್ಕೆ ಹಸೀಶುಂಟಿ ರಸದಲ್ಲಿ ಕೊಡಬೇಕು. ಪಿತ್ತಜ್ವರಕ್ಕೆ ನಿಂಬೇಹಣ್ಣಿನ ರಸದಲ್ಲಿ ಕೊಡಬೇಕು ಇದರಿಂದ ಸಕಲ ಜ್ವರಗಳು ಗುಣವಾಗುವವು.

## ಮಣಿಶಿಲೆ ಭಸ್ಮ.

೧ ತೊಲೆ ಶುದ್ಧಿಮಾಡಿದ ಮಣಿಶಿಲೆಯನ್ನು ಖಲ್ವದಲ್ಲಿ ಹಾಕಿ ಸಹದೇವಿ ಬೇರಿನ ರಸವನ್ನು ಹಾಕಿ ಮೂರುಜಾವ ಅರದು ಬಿಲ್ಲೆಮಾಡಿ ಒಣಗಿಸಿ ಇಟ್ಟುಪ್ಪು ೧ ತೊಲೆ, ಗದ್ದೆಯಲ್ಲಿರುವ ಏಡಿಕಾಯಿಸಿಪ್ಪೆ ಇವು ಎರಡನ್ನು ಖಲ್ವದಲ್ಲಿಹಾಕಿ ಸಹದೇವಿಬೇರಿನ ರಸವನ್ನು ಹಾಕಿ ಮೂರುಜಾವ ಅರದು ಮೇಲ್ಕಂಡ ಮಣಿಶಿಲೆ ಬಿಲ್ಲೆಗೆ ಕವಚಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಬೀಲುಮಾಡಿ ಒಣಗಿಸಿ ೫೦ ಬೆರಣಿಗಳಿಂದ ಪುಟಹಾಕಲು ಭಸ್ಮವಾಗುವುದು. ಸಾಂಗಶೀತಲವಾದನಂತರ ತೆಗೆದುನೋಡಲು ಭಸ್ಮವಾಗಿರುವುದು. ಈ ಭಸ್ಮವನ್ನು ಅಕ್ಕೀಕಾಳಿನ ಪ್ರಮಾಣ ಜೇನುತುಪ್ಪದಲ್ಲಿ ಕಲಸಿ ಸೇವಿಸಲು ಚರ್ಮರೋಗಗಳು, ಮೇಹವ್ರಣಗಳು ಗುಣವಾಗುವವು.

## ಕೃಷ್ಣಾಭ್ರಕ ಭಸ್ಮ.

ಶುದ್ಧಿಮಾಡಿದ ಕೃಷ್ಣಾಭ್ರಕಕ್ಕೆ ನಾಲ್ಕರಲ್ಲಿ ಒಂದು ಭಾಗ ನೆಲ್ಲನ್ನು ಸೇರಿಸಿ ಒಂದು ಕಂಬಳಿಯಲ್ಲಿ ಕಟ್ಟಿ ಮೂರು ದಿವಸ ನೀರಿನಲ್ಲಿ ನೆನೆಸಿಟ್ಟು ಮೂರು ದಿನ ಚೆನ್ನಾಗಿ ಕೊಳೆತಮೇಲೆ ತೆಗೆದುಕೊಂಡು ರುಬ್ಬಿ ಕೈಯಿಂದ ಚೆನ್ನಾಗಿ ಹಿಸಕಿ ಆ ಕಂಬಳಿಯಿಂದ ಸೋರಿದ ಮರಳಿನಂತಿರುವ ರವೆಗಳನ್ನು ತೆಗೆದುಕೊಳ್ಳಬೇಕು. ಅದಕ್ಕೆ ಧಾನ್ಯಾಭ್ರಕವೆಂದು ಹೆಸರು. ಅದು ಭಸ್ಮವಾಗುವುದಕ್ಕೆ ಯೋಗ್ಯವಾದದ್ದು.

೧ನೇ ವಿಧ—ಧಾನ್ಯಾಭ್ರಕವನ್ನು ಚೆನ್ನಾಗಿ ಒಣಗಿಸಿ ಎಕ್ಕದ ಹಾಲಿನಿಂದ ಒಂದು ದಿನವೆಲ್ಲ ಖಲ್ವದಲ್ಲಿ ನುಣ್ಣಗೆ ಅರೆದು ಚಕ್ರದಂತೆ ಬಿಲ್ಲೆಮಾಡಿ, ಎಕ್ಕದೆಲೆಗಳಿಂದ ಸುತ್ತಿ ಗ ಜ ಪು ಟ ಹಾ ಕ ಬೇ ಕು. ಹೀಗೆ ಏಳುಸಲ ಪುನಃ ಪುನಃ ಅರೆದು ಪುಟಹಾಕಬೇಕು. ಬಳಿಕ ಆಲದ ಬಿಳಲಿನ ಕಷಾಯದಿಂದ ಅರೆದರೆದು ಮೂರು ಪುಟ ಹಾಕಬೇಕು. ಆಗ್ಗೆ ಅಭ್ರಕವು ಚೆನ್ನಾಗಿ ಭಸ್ಮವಾಗುವುದು. ಅದನ್ನು ಸಮಸ್ತ ರೋಗಗಳಲ್ಲೂ ಪ್ರಯೋಗಿಸಬಹುದು.

ಭಸ್ಮವಾದ ಅಭ್ರಕವನ್ನೂ ಅದರ ಸಮತೂಕ ತುಪ್ಪವನ್ನೂ ಸಹ ಒಂದು ಕಬ್ಬಿಣದ ಪಾತ್ರೆಯಲ್ಲಿ ಹಾಕಿ ಬೆಂಕಿಯಲ್ಲಿ ಕಾಯಿಸುವುದು. ಆಗ ಅಭ್ರಕ

ಭಸ್ಮವು ಆ ತುಪ್ಪವನ್ನೆಲ್ಲ ಹೀರಿಕೊಂಡರೆ, ಆ ಭಸ್ಮವನ್ನು ಉತ್ತಮವೆಂದು ತಿಳಿದು ಸಕಲ ರೋಗಗಳಿಗೂ ಉಪಯೋಗಿಸುವುದು.

೨ನೇ ವಿಧ—ಧಾನ್ಯಾಭ್ರಕವನ್ನು ಎಕ್ಕದ ಹಾಲಿನಿಂದಾಗಲಿ, ಎಕ್ಕದ ಬೇರಿನ ರಸದಿಂದಾಗಲಿ ಅರೆದರೆದು ಏಳುಸಲ ಪುಟಗಳನ್ನು ಹಾಕಿದರೆ ಅದು ಭಸ್ಮ ವಾಗುವುದು.

೩ನೇ ವಿಧ— ಧಾನ್ಯಾಭ್ರಕವನ್ನು ಸಮತೂಕ ಗಂಧಕದೊಡನೆ ಚಿಲುಕೀರೆಯ ರಸ, ಬಾಳೇಗಡ್ಡೆಯ ರಸ, ಕೊನ್ನಾರೆಗಡ್ಡೆಯ ಕಷಾಯ, ಬೆಳಗಾರದ ನೀರು, ಅಂಕೋಲೆಯ ಕಷಾಯ ಇವುಗಳಿಂದ ಖಲ್ವದಲ್ಲಿ ಚೆನ್ನಾಗಿ ಮರ್ದಿಸಿ ಬಿಲ್ಲೆ ಕಟ್ಟಿ ಗಜಪುಟ ಹಾಕುವುದು. ಹೀಗೆ ಹನ್ನೆರಡು ಸಲ ಅರೆದು ಅರೆದು ಪುಟಗಳನ್ನು ಹಾಕಬೇಕು. ಆ ಬಳಿಕ ಹೊನ್ನಗೊನೆಯ ರಸ, ಗರುಗದ ರಸ, ತ್ರಿಫಲೆಯ ಕಷಾಯ ಇವುಗಳಿಂದ ಮರ್ದಿಸಿ ಏಳೇಳು ಸಲ ಗಜಪುಟಗಳನ್ನು ಹಾಕಬೇಕು. ಇಷ್ಟು ಮಾಡಿದರೆ ಅಭ್ರಕವು ಭಸ್ಮವಾಗುವುದು.

೪ನೇ ವಿಧ—ದುಗ್ಧತ್ರಯ ಅಂದರೆ ಕೋಲುಕಳ್ಳಿಯ ಹಾಲು, ಮುಂಡ ಗಳ್ಳಿಯ ಹಾಲು, ಎಕ್ಕದ ಹಾಲು, ಲೋಳೆಸರದ ರಸ, ಆನೆಯ ಮೂತ್ರ, ಮನುಷ್ಯನ ಮೂತ್ರ, ಆಲದ ಬಿಳಲರಸ ಅಥವಾ ಕಷಾಯ, ಗರುಗದಸೊಪ್ಪಿನ ರಸ, ಆಡಿನ ರಕ್ತ ಇವುಗಳಿಂದ ಅಭ್ರಕವನ್ನು ಮರ್ದಿಸಿ ಮರ್ದಿಸಿ ನೂರು ಸಲ ಪುಟಗಳನ್ನು ಹಾಕುವುದರಿಂದ ಅಭ್ರಕವು ಪದ್ಮರಾಗದಂತಹ ಕಾಂತಿಯುಳ್ಳ ಭಸ್ಮವಾಗುವುದು.

೫ನೇ ವಿಧ—ಧಾನ್ಯಾಭ್ರಕವನ್ನು ತಂದು ಕೊನ್ನಾರಿಗಡ್ಡೆಯ ಕಷಾಯ ದಿಂದ ಅರೆದು ಮೂರು ಸಲ ಗಜಪುಟಗಳನ್ನು ಹಾಕಿ, ಹಾಗೆಯೇ ಕೊಮ್ಮೆ, ಕಾಸಮರ್ದ ಅಂದರೆ ಎಲಹುರಿ ಅಥವಾ ಸುರಸುರಿಕೆ, ವೀಳೆಯದೆಲೆ ಇವುಗಳ ರಸಗಳಿಂದಲೂ, ಆಲದ ಬಿಳಲಿನ ಕಷಾಯದಿಂದಲೂ, ಆಕಳತುಪ್ಪ ಹಾಲು ಇವುಗಳಿಂದಲೂ ಬೇರೆಬೇರೆ ಒಂದೊಂದು ದಿನದಂತೆ ಪುನಃ ಪುನಃ ಅರೆದರೆದು ಮೂರು ಮೂರುಸಲ ಗಜಪುಟಗಳನ್ನೂ, ಆ ಬಳಿಕ ನೆಲದಾಳೆಗಡ್ಡೆಯ ರಸ, ನೆಗ್ಗಿಲ ಕಷಾಯ, ನಸಗುನ್ನಿ ಅಥವಾ ಬಳ್ಳಿದುರುಚೆಯ ರಸ, ಬಾಳೆಗಡ್ಡೆಯ ರಸ, ಕೊಳವಳಿಕೆಯ ರಸ ಇವುಗಳೊಂದೊಂದರಿಂದ ಬೇರೆಬೇರೆ ಅರೆದರೆದು ಮೂರುಮೂರು ಗಜಪುಟಗಳನ್ನೂ, ಆ ಬಳಿಕ ಮೊಸರು, ತುಪ್ಪ, ಜೇನು ತುಪ್ಪ, ಬಿಳಿಯ ಸಕ್ಕರೆ ಇವುಗಳಿಂದ ಅರೆದು ಒಂದೊಂದು ಪುಟವನ್ನೂ ಹಾಕಿ ದರೆ ಅಭ್ರಕವು ಚೆನ್ನಾಗಿ ಭಸ್ಮವಾಗುವುದು.

ಚಂದ್ರಿಕವಿಲ್ಲದ ಅಂದರೆ ಮಿರುಗು ಉಳಿಯದಂತೆ ಚೆನ್ನಾಗಿ ಭಸ್ಮವಾದ ಅಭ್ರಕವನ್ನು, ಶೋಧನೌಷಧಗಳಿಂದ ದೇಹಶುದ್ಧಿ ಮಾಡಿಕೊಂಡು ಸೇವಿಸಿದರೆ

ಅದು ರಸಾದಿ ಧಾತುಗಳನ್ನು ವೃದ್ಧಿಮಾಡಿ, ಆಯುರಾರೋಗ್ಯಗಳನ್ನು ಉಂಟು ಮಾಡುವುದು. ಹಾಗಲ್ಲದೆ ಮಿರುಗುಳ್ಳ ಚೆನ್ನಾಗಿ ಭಸ್ಮವಾಗದ ಅಭ್ರಕವನ್ನು ತೆಗೆದುಕೊಂಡರೆ ಅದು ವಿಷಮವಾಗಿ ಪರಿಣಮಿಸುವುದು.

ಅರಸಿನದ ಕಷಾಯ ೧೬ ಭಾಗ, ಆಕಳತುಪ್ಪ ೬ ಭಾಗ, ಅಭ್ರಕ ಭಸ್ಮ ೪ ಭಾಗ ಇವುಗಳನ್ನೆಲ್ಲ ಸೇರಿಸಿ ಮೃದ್ವಗ್ನಿಯಿಂದ ಲೇಹ್ಯ ಪಾಕಮಾಡಿದರೆ ಅದು ಅಮೃತೀಕರಣವೆಂಬ ಮರಣವನ್ನು ತಪ್ಪಿಸುವಂತಹ ರಸಾಯನವಾಗುವುದು. ೨॥ ಅಣೆ ತೂಕ ವಾಯುವಿಳಂಗ ಚೂರ್ಣ ೫ ಅಣೆ ತೂಕ ತ್ರಿಕಟುಕ ಚೂರ್ಣ ಇವುಗಳೊಡನೆ ತುಪ್ಪವನ್ನು ಸೇರಿಸಿ ಅದಕ್ಕೆ ನಾಲ್ಕು ಗುಂಜಿಯತೂಕ ಒಳ್ಳೆಯ ಅಭ್ರಕ ಭಸ್ಮವನ್ನು ಹಾಕಿ ಹೊತ್ತಿಗೆ ೨ ಅಣೆ ತೂಕ ಸೇವಿಸಿದರೆ ಅದು ಕ್ಷಯ, ಪಾಂಡುರೋಗ, ಗ್ರಹಣಿ, ಶೂಲೆ, ಆಮಕೋಷ್ಠ, ಸಂಕಟ, ಶ್ವಾಸ, ಪ್ರಮೇಹ, ಅರುಚಿ, ತಡಿಯಲಾಗದಂತಹ ಕೆಮ್ಮು, ಅಗ್ನಿಮಾಂದ್ಯ, ಹೊಟ್ಟೆಯ ನೋವು ಇವುಗಳನ್ನೆಲ್ಲಾ ಪರಿಹರಿಸುವುದು. ಮುಖ್ಯವಾಗಿ ಅಭ್ರಕವು ಸಕಲ ರೋಗಗಳನ್ನೂ ಪರಿಹರಿಸುವುದು.

ಅಭ್ರಕವು ಗೌರಿಯ ತೇಜೋರೂಪವಾದುದು ; ಒಳ್ಳೆಯ ಅಮೃತದಂತಹುದು ; ವಾತ-ಪಿತ್ತಗಳನ್ನೂ, ಕ್ಷಯವನ್ನೂ ಹೊಡೆವುದು ; ಪ್ರಜ್ಞೆಯನ್ನು ಹೆಚ್ಚಿಸುವುದು ; ಮುಪ್ಪನ್ನು ಹರಿಸುವುದು ; ವೀರ್ಯಪುಷ್ಟಿ ಕೊಡುವುದು ; ಆಯುಸ್ಸನ್ನು ಹೆಚ್ಚಿಸುವುದರಲ್ಲೆಲ್ಲಾ ಉತ್ತಮವಾದುದು ; ಬಲಕರವು ; ಜಿಡ್ಡುಳ್ಳುದು ; ರುಚಿಕೊಡುವುದು , ಕಫಹರವು ; ಅಗ್ನಿಯನ್ನು ಹೆಚ್ಚಿಸುವುದು ; ಶೀತವೀರ್ಯವುಳ್ಳುದು ; ಆಯಾ ಅನುಪಾನಗಳ ಜತೆಯಲ್ಲಿ ಸೇರಿದರೆ ಸಕಲ ರೋಗಗಳನ್ನೂ ಪರಿಹರಿಸುವುದು.

ಅಭ್ರಕವನ್ನು ಸೇವಿಸುವ ಕಾಲದಲ್ಲಿ ಕ್ಷಾರ, ಹುಳಿ, ದ್ವಿದಳ ಧಾನ್ಯ, ಎಲಚಿ, ಸೌತೆ, ಹಾಗಲ, ಬದನೆ, ಬಿದಿರ ಕಳಲೆ, ಎಳ್ಳೆಣ್ಣೆ ಇವುಗಳನ್ನು ತ್ಯಜಿಸಬೇಕು.

ಅಭ್ರಕ ಭಸ್ಮಕ್ಕೆ ಅನುಪಾನಗಳು — ಅಭ್ರಕ ಭಸ್ಮವು ಅರಿಸಿನ, ಹಿಪ್ಪಲಿ, ಜೇನುತುಪ್ಪ ಇವುಗಳೊಡನೆ ಸೇರಿದರೆ ಇಪ್ಪತ್ತು ವಿಧವಾದ ಪ್ರಮೇಹಗಳನ್ನೂ ಹೊಡೆವುದು. ಸುವರ್ಣ ಭಸ್ಮದೊಡನೆ ಸೇರಿದರೆ ಕ್ಷಯರೋಗವನ್ನು ಹೊಡೆವುದು. ಬೆಳ್ಳಿಯ ಭಸ್ಮ, ಚಿನ್ನದ ಭಸ್ಮ ಇವುಗಳೊಡನೆ ಸೇರಿದರೆ ಧಾತುಗಳನ್ನು ಚೆನ್ನಾಗಿ ವೃದ್ಧಿಮಾಡುವುದು. ಅಳಲೆಯಕಾಯಿ, ಬೆಲ್ಲ ಅಥವಾ ಏಲಕ್ಕಿ, ಸಕ್ಕರೆ ಇವುಗಳೊಡನೆ ಸೇರಿದರೆ ರಕ್ತಪಿತ್ತವನ್ನು ಹೊಡೆವುದು. ತ್ರಿಕಟುಕ, ತ್ರಿಫಲೆ, ಚಾತುರ್ಜಾತಕ, ಸಕ್ಕರೆ ಇವುಗಳೊಡನೆ ಸೇರಿಸಿ ಜೇನುತುಪ್ಪದಲ್ಲಿ ಕಲೆಸಿ ನೆಕ್ಕಿದರೆ ಕ್ಷಯ, ಮೂಲವ್ಯಾಧಿ, ಪಾಂಡು ಇವುಗಳನ್ನು ಪರಿಹರಿಸುವುದು.

ಅಮೃತಬಳ್ಳಿಯ ಸತ್ತು, ಕಲ್ಲುಸಕ್ಕರೆ ಇವುಗಳೊಡನೆ ಸೇರಿದರೆ ಮೇಹವನ್ನು ನಾಶಮಾಡುವುದು. ಏಲಕ್ಕಿ, ನೆಗ್ಗಿಲು, ಕಿರುನೆಲ್ಲಿ, ಸಕ್ಕರೆ, ಆಕಳತುಪ್ಪ ಇವುಗಳೊಡನೆ ಸೇರಿಸಿ ನಿತ್ಯವೂ ಬೆಳಗ್ಗೆ ಸೇವಿಸಿದರೆ ಮೂತ್ರಕೃಚ್ಛ್ರಹರ. ಹಿಪ್ಪಲಿ, ಜೇನುತುಪ್ಪ ಇವುಗಳೊಡನೆ ಸೇವಿಸಿದರೆ ತಲೆದಿರುಗು, ಜೀರ್ಣಜ್ವರ ಇವುಗಳನ್ನು ಹೊಡೆವುದು. ತ್ರಿಫಲೆ, ಜೇನುತುಪ್ಪ ಇವುಗಳೊಡನೆ ಸೇರಿದರೆ ದೃಷ್ಟಿ ಪುಷ್ಟಿಕರ ಕೊರಟಿಗೆಯ ಸತ್ತ್ವದೊಡನೆ ಸೇರಿದರೆ ವ್ರಣಹರ. ಆಕಳಹಾಲು, ಕ್ಷೀರಕಂದ ಇವುಗಳೊಡನೆ ಸೇವಿಸಿದರೆ ಬಲವನ್ನು ಹೆಚ್ಚಿಸುವುದು. ಗೇರುಬೀಜದೊಡನೆ ಸೇರಿದರೆ ಮೂಲವ್ಯಾಧಿಯನ್ನು ಪರಿಹರಿಸುವುದು. ಶುಂಠಿ, ಪೌಷ್ಕರ ಅಂದರೆ ತಾವರೆಗಡ್ಡೆ ಗಂಟುಭಾರಂಗಿ, ಹಿರಿಯಮದ್ದು, ಜೇನುತುಪ್ಪ ಇವುಗಳೊಡನೆ ಸೇರಿಸಿ ತಿಂದರೆ ವಾತವ್ಯಾಧಿಗಳನ್ನು ಹೊಡೆವುದು, ಮತ್ತು ಧಾತುವೃದ್ಧಿ; ಚಾತುರ್ಜಾತಕ (ಏಲಕ್ಕಿ, ಲವಂಗಚಕ್ಕೆ, ಲವಂಗಪತ್ರೆ, ನಾಗಕೇಸರ) ಸಕ್ಕರೆ ಇವುಗಳೊಡನೆ ಸೇರಿದರೆ ಪಿತ್ತರೋಗವನ್ನು ಪರಿಹರಿಸುವುದು. ಸೀವನ್ನಿ (ಸಿವನಿ) ಹಿಪ್ಪಲಿ, ಜೇನುತುಪ್ಪ ಇವುಗಳೊಡನೆ ಸೇರಿದರೆ ಶ್ಲೇಷ್ಮರೋಗವನ್ನು ಹೊಡೆವುದು. ಯಾವುದೊಂದು ಕ್ಷಾರದೊಡನೆ ಸೇರಿದರೂ ಅಗ್ನಿಶಕ್ತಿಯನ್ನು ಉಂಟುಮಾಡುವುದು ಮತ್ತು ಮೂತ್ರದತಡೆ, ಮೂತ್ರಕೃಚ್ಛ್ರ, ಅಶ್ಮರಿ (ಮೂತ್ರ ದ್ವಾರದಲ್ಲಿ ಕಲ್ಲಿನಂತೆ ಹರಳೇಳುವುದು) ಇವುಗಳನ್ನು ಪರಿಹರಿಸುವುದು. ಭಂಗೀಸೊಪ್ಪಿನ ರಸದೊಡನೆ ಸೇರಿದರೆ ಶುಕ್ರಸ್ತಂಭನ ಮಾಡುವುದು. ಲವಂಗ, ಜೇನುತುಪ್ಪ ಇವುಗಳೊಡನೆ ಸೇರಿದರೆ ಚೆನ್ನಾಗಿ ಧಾತುವೃದ್ಧಿ ಮಾಡುವುದು ಆಕಳಹಾಲು, ಸಕ್ಕರೆ ಇವುಗಳೊಡನೆ ಸೇರಿದರೆ ಪಿತ್ತರೋಗಹರವು. ಈ ರೀತಿಯಾಗಿ ಅಭ್ರಕವನ್ನು ಅನುಪಾನ ವಿಧಾನಗಳಿಂದ ತಕ್ಕಂತೆ ಪಥ್ಯವಿಟ್ಟು ರೋಗಿಗಳಿಗೆ ಪ್ರಯೋಗಿಸಬೇಕು.

ಅಭ್ರಕಭಸ್ಮವನ್ನು ಸೇವಿಸುವವರಿಗೆ ಮುಪ್ಪಿನಸೋಂಕು ನರೆಗಳು ಮಾಣುವುವು. ನೂರುವರ್ಷ ಪೂರ್ಣಾಯುಸ್ಸು ಉಂಟಾಗುವುದು. ಜರೆಯನ್ನೂ ಅಕಾಲ ಮೃತ್ಯುವನ್ನೂ ನಿವಾರಣೆ ಮಾಡುವುದರಲ್ಲಿ ಅಭ್ರಕಭಸ್ಮವನ್ನು ಬಿಟ್ಟರೆ ಬೇರೆ ಯಾವುದೂ ಇಲ್ಲ.

೧ನೇ ವಿಧ—ಶುದ್ಧಿಮಾಡಲ್ಪಟ್ಟ ಚಿನ್ನಕ್ಕೆ ಹದಿನಾರರಲ್ಲೊಂದು ಭಾಗ ಶುದ್ಧಿಮಾಡಿದ ಸೀಸವನ್ನು ಸೇರಿಸಿ (ಚಿನ್ನವನ್ನು ಕರಗಿಸಿ ಸೀಸವನ್ನೂ ಬೆರಸಿ ಗಟ್ಟಿಯಾಗಿ ಹುಯಿದು) ಚೂರ್ಣಿಸಿಕೊಂಡು ಯಾವುದಾದರೊಂದು ಹುಳಿ ಹಿಂಡಿಕೊಂಡು ಅರೆದು ಉಂಡೆಮಾಡಿ, ಆ ಉಂಡೆಗೆ ಸಮತೂಕ ಗಂಧಕವನ್ನು ಪುಡಿಮಾಡಿ ಕೆಳಗೂ ಮೇಲೂ ಕವಚಕೊಟ್ಟು ಎರಡು ಶರಾವೆಗಳ ಮಧ್ಯದಲ್ಲಿಟ್ಟು ಚೀಲುಮಣ್ಣುಮಾಡಿ ಇಪ್ಪತ್ತು ಕಾಡುಬೆರಣಿಗಳಿಟ್ಟು ಪುಟಹಾಕಬೇಕು. ಹೀಗೆ ಏಳುಪುಟವಿಟ್ಟರೆ ಚಿನ್ನವು ಚೆನ್ನಾಗಿ ಭಸ್ಮವಾಗುವುದು.

## ಸುವರ್ಣ ಭಸ್ಮ.

೨ನೇ ವಿಧ—ಒಳ್ಳೆಯ ಚಿನ್ನವನ್ನು ಶೋಧಿಸಿ ತಗಡುಮಾಡಿ, ಅದರ ಸಮತೂಕ ಸೀಸಭಸ್ಮವನ್ನು ನಿಂಬೇಹುಳಿಯಲ್ಲಿ ಕಲೆಸಿ ಆ ತಗಡಿಗೆ ಲೇಪಿಸಿ ಗಜ ಪುಟ ಹಾಕಬೇಕು. ಇಂತಹ ಮೂರು ಪುಟದಲ್ಲಿ ಚಿನ್ನವು ಭಸ್ಮವಾಗುವುದು.

೩ನೇ ವಿಧ—ಒಳ್ಳೆಯ ಶೋಧಿಸಿದ ಚಿನ್ನದ ತಗಡಿಗೆ ಪಾರಿವಾಳದ ಹಕ್ಕಿಯ ಹಿಕ್ಕೆಯನ್ನಾಗಲಿ, ಕೋಳಿಯ ಹಿಕ್ಕೆಯನ್ನಾಗಲಿ ಲೇಪಿಸಿ, ಸಮತೂಕ ಗಂಧಕದ ಪುಡಿಯನ್ನು ಕವಚಕೊಟ್ಟು ಶರಾವಸಂಪುಟದಲ್ಲಿ ಚೀಲುಮಣ್ಣುಮಾಡಿ ಐದು ಕಾಡುಬೆರಣಿಗಳಿಂದ ಕುಕ್ಕುಟಪುಟ ಹಾಕಬೇಕು. ಹೀಗೆ ಒಂಭತ್ತುಸಲ ಪುಟ ಹಾಕಿ ತೆಗೆದುಕೊಂಡು ಹತ್ತನೆಯಸಲ ಮೂವತ್ತು ಕಾಡುಬೆರಣಿಗಳಿಟ್ಟು ದೊಡ್ಡಪುಟ ಹಾಕಿದರೆ ಚಿನ್ನವು ಚೆನ್ನಾಗಿ ಭಸ್ಮವಾಗುವುದು.

ಸುವರ್ಣಭಸ್ಮವು ತಂಪು; ಸಮಸ್ತಧಾತುಗಳ ಪರಿಶುದ್ಧಿಯನ್ನು ಉಂಟು ಮಾಡುವುದು; ಕ್ಷಯ, ವಮನ, ಕೆಮ್ಮು, ಉಬ್ಬಸ, ಮೋಹಜಾಡ್ಯ, ರಕ್ತಪಿತ್ತ, ವಿಷ, ಗಾಯ, ರಕ್ತಜಾಡ್ಯ, ಪ್ರದರ ಇವುಗಳನ್ನು ಪರಿಹರಿಸುವುದು; ಸಿಹಿ, ಕಹಿ, ಒಗರು ಈ ರಸಗಳುಳ್ಳುದು; ವೀರ್ಯಪುಷ್ಟಿ, ಜ್ಞಾಪಕಶಕ್ತಿ, ಜೀರ್ಣಶಕ್ತಿ, ಒಳ್ಳೆಯಕಾಂತಿ ಇವುಗಳನ್ನು ಕೊಡುವುದು; ಸಿಹಿಯಾಗಿರುವುದು; ಕಾರ್ಶ್ಯವನ್ನು ಹೊಡೆವುದು; ಸನ್ನಿಪಾತ, ಉನ್ಮಾದ (ಹುಚ್ಚು), ಅಪಸ್ಮಾರ, ಶೂಲೆ, ಜ್ವರ ಇವುಗಳನ್ನು ಹೊಡೆವುದು; ದೇಹವನ್ನು ಚೆನ್ನಾಗಿ ಬೆಳಸಿ ಪುಷ್ಟಿಕೊಡುವುದು. ಕಣ್ಣಿಗೆ ಬಹು ಹಿತವಾದದ್ದು.

ಚಿನ್ನದಭಸ್ಮವು ಕಾರವಾಗಿರುವುದು ಎರಡು ಗುಂಜಿಯತೂಕ ಭಸ್ಮವನ್ನು ಹಸುವಿನ ತುಪ್ಪದಲ್ಲಿ ಕಲೆಸಿ ತಿಂದರೆ ಕ್ಷಯ, ಅಗ್ನಿಮಾಂದ್ಯ, ಉಬ್ಬಸ, ಕೆಮ್ಮು, ಅರುಚಿ ಇವುಗಳನ್ನು ಪರಿಹರಿಸುವುದು; ಓಜಸ್ಸನ್ನೂ ರಸಾದಿಧಾತುಗಳನ್ನೂ ಹೆಚ್ಚಿಸುವುದು, ಶಕ್ತಿಯನ್ನು ಕೊಡುವುದು; ಪಾಂಡುರೋಗವನ್ನು ಹೊಡೆವುದು; ಪಥ್ಯವಾದುದು; ಸಕಲವಿಧವಾದ ವಿಷಗಳನ್ನೂ ಪರಿಹರಿಸುವುದು, ಗ್ರಹಣಿಯೇ ಮೊದಲಾದ ಸಕಲ ದುಷ್ಟರೋಗಗಳನ್ನೂ ಪರಿಹರಿಸುವುದು.

ಅಶುದ್ಧವಾಗಿಯೂ ಅಪಕ್ವವಾಗಿಯೂ ಇರುವ ಚಿನ್ನವು ಜನರ ಬಲವನ್ನೂ ವೀರ್ಯವನ್ನೂ ನಾಶಮಾಡುವುದು; ಸಕಲ ರೋಗಗಳನ್ನೂ ದೇಹದಲ್ಲಿ ಬೆಳೆಸುವುದು; ನಿರಂತರವಾಗಿ ರೋಗಗಳನ್ನು ಹುಟ್ಟಿಸುತ್ತಿರುವುದು.

ಶುದ್ಧವಾದ ಸುವರ್ಣಭಸ್ಮವು ಸಕಲ ವಿಷಗಳನ್ನೂ ಶೂಲೆ ಆಮ್ಲಪಿತ್ತ ಇವುಗಳನ್ನೂ ಪರಿಹರಿಸುವುದು; ಹೃದಯಕ್ಕೆ ಹಿತವಾದುದು; ಪುಷ್ಟಿಕರವು; ಕ್ಷಯ, ವ್ರಣ, ಅಗ್ನಿಮಾಂದ್ಯ, ಬಿಕ್ಕಳಿಕೆ, ಹೊಟ್ಟೆಯುಬ್ಬರ, ಕಫ ಇವುಗಳನ್ನು

ಹೊಡೆವುದು ; ದೇಹಕ್ಕೆ ಸರ್ವದಾ ಆರೋಗ್ಯಕರವು; ಅಯಾ ರೋಗಿಗಳಿಗೆ ತಕ್ಕ ಅನುಪಾನವಿಟ್ಟು ಕೊಟ್ಟರೆ ಸಮಸ್ತ ರೋಗಗಳನ್ನೂ ಪರಿಹರಿಸುವುದು.

### ಬೆಳ್ಳಿಯ ಭಸ್ಮ.

೧ನೇ ವಿಧ—ಶುದ್ಧಿಮಾಡಿದ ಒಳ್ಳೆಯ ಬೆಳ್ಳಿಯನ್ನು ತೆಳ್ಳಗೆ ತಗಡು ಮಾಡಿಕೊಂಡು ಆ ತಗಡಿನ ಸಮತೂಕ ಪಾದರಸ, ಸಮತೂಕ ಗಂಧಕ, ಇವೆರಡರ ಸಮತೂಕ ತಾಳಕ, ಇವು ಮೂರನ್ನೂ ಲೋಳಿರಸದ ರಸದಲ್ಲಿ ಅರೆದು ಕಲ್ಕದಂತೆ ಮಾಡಿಕೊಂಡು ಆ ತಗಡಿಗೆ ಲೇಪಿಸಿ, ಅದನ್ನು ಎರಡು ಶರಾವೆಗಳ ನಡುವೆ ಇರಿಸಿ ಚೀಲುಮಣ್ಣುಮಾಡಿ ೩೦ ಕಾಡುಬೆರಣಿಗಳನ್ನಿಟ್ಟು ಪುಟಹಾಕ ಬೇಕು. ಹೀಗೆ ಎರಡು ಪುಟ ಹಾಕಿದರೆ ಬೆಳ್ಳಿಯು ಭಸ್ಮವಾಗುವುದು.

೨ನೇ ವಿಧ—ಶುದ್ಧ ಬೆಳ್ಳಿಯನ್ನು ಅರಪುಡಿಮಾಡಿಕೊಂಡು, ಅದರ ಸಮ ತೂಕ ತಾಳಕವನ್ನೂ ಗಂಧಕವನ್ನೂ ಪಾದರಸವನ್ನೂ ಸೇರಿಸಿ, ನಿಂಬೆಯ ಹುಳಿ ಯಲ್ಲಿ ಮರ್ದಿಸಿ, ಮೇಲೆ ಹೇಳಿರುವಂತೆ ಎರಡುಮೂರು ಪುಟಹಾಕಿದರೆ ಬೆಳ್ಳಿಯು ಭಸ್ಮವಾಗುವುದು ; ಇದನ್ನು ರಸಾದಿ ಔಷಧಗಳಿಗೆ ಸೇರಿಸಬಹುದು.

೩ನೇ ವಿಧ—ಶುದ್ಧವಾದ ಬೆಳ್ಳಿಯ ಅರಪುಡಿಗೆ ಸಮತೂಕ ಶುದ್ಧವಾದ ಹೇಮಮಾಕ್ಷಿಕವನ್ನೂ ಶುದ್ಧವಾದ ಹಂಸಪಾದಿ ಇಂಗಲೀಕವನ್ನೂ ಸೇರಿಸಿ ನಿಂಬೆಯ ಹುಳಿಯಲ್ಲಿ ಮರ್ದಿಸಿ, ಶರಾವೆಯಲ್ಲಿಟ್ಟು ಚೀಲುಮಣ್ಣುಮಾಡಿ ಮೂರು ಸಲ ಪುಟಹಾಕಿದರೆ ಈಶ್ವರ ಸ್ಮರಣೆಯಿಂದ ಪಾಪಸಮುದಾಯವು ಭಸ್ಮವಾಗು ವಂತೆ ಬೆಳ್ಳಿಯು ಭಸ್ಮವಾಗುವುದು.

ಬೆಳ್ಳಿಯ ಭಸ್ಮವು—ತಂಪು ; ಒಗರು, ಹುಳಿ, ಸಿಹಿ ಈ ರಸಗಳುಳ್ಳದು ; ತ್ರಿದೋಷಹರವು; ಜಿಡ್ಡುಳ್ಳದು; ಅಗ್ನಿಶಕ್ತಿಯನ್ನು ಕೊಡುವುದು; ಕಣ್ಣು ನೋವು ಹೊಟ್ಟೇನೋವು ಮತ್ತು ಉರಿ ವಿಷ ಇವೇ ಮೊದಲಾದ ದೋಷಗಳನ್ನು ಪರಿಹರಿಸುವುದು ; ಮೇದಸ್ಸನ್ನು (ಕೊಬ್ಬನ್ನು) ಕರಗಿಸುವುದು ; ಮದಾತ್ಯಯ ರೋಗವನ್ನೂ ನಾಶಮಾಡುವುದು; ಕಾಂತಿ ಆಯುಸ್ಸು ಆರೋಗ್ಯ ಇವುಗಳನ್ನೂ ಕೊಡುವುದು ; ಕ್ಷಯ, ಅಪಸ್ಮಾರ, ಶೂಲೆ, ಪಾಂಡುರೋಗ, ನರೆ,- ಪ್ಲೀಹ, ಜ್ವರ ಇವುಗಳನ್ನೆಲ್ಲ ಹೊಡೆವುದು ; ಸರಗುಣವುಳ್ಳದು ಅಂದರೆ ಬಹುಬೇಗ ವ್ಯಾಪಿಸುವುದು.

ಅಶುದ್ಧವಾದ ಬೆಳ್ಳಿಯ ಭಸ್ಮವು—ಪಾಂಡುರೋಗ, ನವೆ, ಗಳಗ್ರಹ (ಗಂಟ್ಲು ಕಟ್ಟುವದ) ವೆಂಬ ಗಂಟಲಬೇನೆ, ಮಲಮೂತ್ರಗಳ ತಡೆ, ವೀರ್ಯ ನಾಶ, ಬಲಹಾನಿ, ತಲೆನೋವು ಇವುಗಳನ್ನು ಉಂಟುಮಾಡುವುದು.

### ತಾಮ್ರ ಭಸ್ಮ.

೧ನೇ ವಿಧ—ಶುದ್ಧಿಮಾಡಿದ ಹವಳಸರಿ ಗಂಧಕ ೧ ತೊಲೆ, ಶುದ್ಧಿ ಮಾಡಿದ ಪಾದರಸ ಕಾಲುತೊಲೆ ಇವೆರಡನ್ನು ಕಲ್ವದಲ್ಲಿ ಹಾಕಿ ನಿಂಬೇಹಣ್ಣಿನ

ರಸದಿಂದ ಅರೆದು, ೧ ತೊಲೆ ಶುದ್ಧಿಮಾಡಿದ ತಾಮ್ರದ ರೇಕುಗಳಿಗೆ ಮಂದವಾಗಿ ಲೇಪಿಸಿ ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಒಣಗಿಸಿ ಗಜ ಪುಟಹಾಕಿ ಸಾಂಗಶೀತಲವಾದನಂತರ ತೆಗೆದು ಔಷಧಕ್ಕೆ ಸಮ ಗಂಧಕವನ್ನು ಬೆರಸಿ ಲೋಳೀಸರದ ರಸದಿಂದ ಅರೆದು ಗಜಪುಟಹಾಕಿ ಸಾಂಗಶೀತಲವಾದ ನಂತರ ತೆಗೆದು ಔಷಧವನ್ನು ಲೋಳೀಸರದ ರಸದಿಂದ ಅರೆದು ಅರೆದು ಪುನಃ ಪುನಃ ೮ ಗಜಪುಟಗಳನ್ನು ಹಾಕಲು ಭಸ್ಮವಾಗುವುದು.

೨ನೇ ವಿಧ—ಶುದ್ಧಿಮಾಡಿದ ಹವಳಸರಿ ಗಂಧಕ ೧ ತೊಲೆ, ಶುದ್ಧಿ ಮಾಡಿದ ಪಾದರಸ ಕಾಲುತೊಲೆ, ಇವೆರಡನ್ನು ಕಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ಅರೆದು ೧ ತೊಲೆ ಶುದ್ಧಿಮಾಡಿದ ತಾಮ್ರದ ರೇಕುಗಳಿಗೆ ಮಂದವಾಗಿ ಲೇಪಿಸಿ ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಗಜಪುಟಹಾಕಿ ಸಾಂಗಶೀತಲವಾದನಂತರ ತೆಗೆದು ಔಷಧವನ್ನು ಗಿರಿಕರ್ಣಿಕೆ ಬೇರಿನ ರಸದಿಂದ ಅರೆದುಅರೆದು ಪುನಃಪುನಃ ೯ ಗಜಪುಟಗಳನ್ನು ಹಾಕಲು ಭಸ್ಮ ವಾಗುವುದು.

೩ನೇ ವಿಧ—ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ಪಾದರಸ ಕಾಲುತೊಲೆ ಇವೆರಡನ್ನು ಕಲ್ವದಲ್ಲಿಹಾಕಿ ನಿಂಬೇಹಣ್ಣಿನ ರಸದಿಂದ ಅರೆದು ೧ ತೊಲೆ ಶುದ್ಧಿಮಾಡಿದ ತಾಮ್ರದ ರೇಕುಗಳಿಗೆ ಮಂದವಾಗಿ ಲೇಪಿಸಿ ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ, ಗಜಪುಟ ಹಾಕಿ ಸಾಂಗಶೀತಲವಾದನಂತರ ತೆಗೆದು, ಬಂದರಿಗಿಡದ ಸಮೂಲವನ್ನು ಕಲ್ಲುಪ್ಪು ಬೆರಸಿ ಕುಟ್ಟಿ ರಸತೆಗೆದು, ಈ ರಸದಿಂಧ ಔಷಧವನ್ನು ಅರೆದು ಅರೆದು ಪುನಃಪುನಃ ೯ ಗಜಪುಟಗಳನ್ನು ಹಾಕಲು ಭಸ್ಮವಾಗುವುದು.

೪ನೇ ವಿಧ—ಶುದ್ಧಿಮಾಡಿದ ಹವಳಸರಿ ಗಂಧಕ ೧ ತೊಲೆ, ಶುದ್ಧಿಮಾಡಿದ ಪಾದರಸ ಕಾಲುತೊಲೆ ಇವೆರಡನ್ನು ಕಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ಅರೆದು ೧ ತೊಲೆ ಶುದ್ಧಿಮಾಡಿದ ತಾಮ್ರದ ರೇಕುಗಳಿಗೆ ಮಂದವಾಗಿ ಲೇಪಿಸಿ, ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಗಜಪುಟಹಾಕಿ ಸಾಂಗಶೀತಲವಾದನಂತರ ತೆಗೆದು ಔಷಧಕ್ಕೆ ಸಮಗಂಧಕವನ್ನು ಸೇರಿಸಿ ನಾರಂಬೇಳೆ ಸೊಪ್ಪಿನ ರಸದಿಂದ ಅರೆದು ಗಜಪುಟಹಾಕಿ ಸಾಂಗಶೀತಲ ವಾದನಂತರ ತೆಗೆದು ಔಷಧವನ್ನು ನಾರಂಬೇಳೆಸೊಪ್ಪಿನ ರಸದಿಂದ ಅರೆದು ಅರೆದು ಪುನಃಪುನಃ ೮ ಗಜಪುಟಗಳನ್ನು ಹಾಕಲು ಭಸ್ಮವಾಗುವುದು.

೫ನೇ ವಿಧ—ಶುದ್ಧಿಮಾಡಿದ ಹವಳಸರಿ ಗಂಧಕ ೧ ತೊಲೆ, ಶುದ್ಧಿಮಾಡಿದ ಪಾದರಸ ಕಾಲುತೊಲೆ ಇವೆರಡನ್ನು ಕಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ಅರೆದು ೧ ತೊಲೆ ಶುದ್ಧಿಮಾಡಿದ ತಾಮ್ರದ ರೇಕುಗಳಿಗೆ ಮಂದವಾಗಿ

ಲೇಪಿಸಿ, ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಒಣಗಿಸಿ ಗಜಪುಟಹಾಕಿ ಸಾಂಗಶೀತಲವಾದನಂತರ ತೆಗೆದು ಔಷಧಕ್ಕೆ ಸಮಗಂಧಕವನ್ನು ಬೆರಸಿ ಬಿಳೇ ಹಾಲುವಾಣದ ಸೊಪ್ಪಿನರಸದಿಂದ ಅರೆದು ಗಜಪುಟಹಾಕಿ ಸಾಂಗ ಶೀತಲವಾದನಂತರ ಔಷಧವನ್ನು ಬಿಳೇಹಾಲುವಾಣದ ಸೊಪ್ಪಿನ ರಸದಿಂದ ಅರೆದು ಅರೆದು ಪುನಃಪುನಃ ೮ ಗಜಪುಟಗಳನ್ನು ಹಾಕಲು ಭಸ್ಮವಾಗುವುದು.

೬ನೇ ವಿಧ—ಶುದ್ಧಿಮಾಡಿದ ಹವಳಸರಿ ಗಂಧಕ ೧ ತೊಲೆ, ಶುದ್ಧಿಮಾಡಿದ ಪಾದರಸ ಕಾಲುತೊಲೆ ಇವೆರಡನ್ನೂ ಕಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ಅರೆದು ೧ ತೊಲೆ ಶುದ್ಧಿಮಾಡಿದ ತಾಮ್ರದ ರೇಕುಗಳಿಗೆ ಮಂದವಾಗಿ ಲೇಪಿಸಿ, ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಗಜಪುಟಹಾಕಿ ಸಾಂಗಶೀತಲವಾದನಂತರ, ಔಷಧಕ್ಕೆ ಸಮಗಂಧಕವನ್ನು ಬೆರಸಿ, ಆಡುಸೋಗೆ ಬೇರಿನ ಬೊಬ್ಬಡೆಯನ್ನು ಕುಟ್ಟಿ ರಸತೆಗೆದು ಇದಕ್ಕೆ ಸಮ ಎಕ್ಕದ ಹಾಲನ್ನು ಬೆರಸಿ, ಇದರಿಂದ ಔಷಧವನ್ನು ಅರೆದು ಅರೆದು ಪುನಃಪುನಃ ೫ ಗಜಪುಟಗಳನ್ನು ಹಾಕಿ, ನಂತರ ಲಕ್ಕಿಲಿಬೇರಿನ ಬೊಬ್ಬಡೆಯ ರಸದಲ್ಲಿ ಸಮ ಎಕ್ಕದ ಹಾಲು ಬೆರಸಿ ಔಷಧವನ್ನು ಅರೆದು ಅರೆದು ಪುನಃಪುನಃ ೪ ಗಜಪುಟಗಳನ್ನು ಹಾಕಲು ಭಸ್ಮವಾಗುವುದು. ಈ ಯೋಗದಲ್ಲಿ ಮೊದಲಿನ ೨ ಪುಟಗಳಿಗೆ ಮಾತ್ರ ಗಂಧಕವನ್ನು ಸೇರಿಸುವುದು. ಉಳಿದ ಪುಟಗಳಿಗೆ ಗಂಧಕವು ಆವಶ್ಯಕವಿಲ್ಲ.

೭ನೇ ವಿಧ—ಶುದ್ಧಿಮಾಡಿದ ಹವಳಸರಿ ಗಂಧಕ ೧ ತೊಲೆ ಶುದ್ಧಿಮಾಡಿದ ಪಾದರಸ ಕಾಲುತೊಲೆ ಇವೆರಡನ್ನು ಕಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ಅರೆದು ೧ ತೊಲೆ ಶುದ್ಧಿಮಾಡಿದ ತಾಮ್ರದ ರೇಕುಗಳಿಗೆ ಮಂದವಾಗಿ ಲೇಪಿಸಿ, ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಗಜಪುಟಹಾಕಿ ಸಾಂಗಶೀತಲವಾದನಂತರ ಔಷಧವನ್ನು ತೆಗೆದು ಲೋಳೀಸರದ ರಸದಿಂದ ಅರೆದು ತೆಳುವಾದ ಬಿಲ್ಲೆಮಾಡಿ ಒಣಗಿಸಿ, ೨ ತೊಲೆ ಮರಿಮಾಡಿಬಿಟ್ಟ ಕೋಳೀಮೊಟ್ಟೆ ಚಿಪ್ಪುಗಳನ್ನು ಎಕ್ಕದ ಹಾಲಿನಿಂದ ನುಣ್ಣಗೆ ಅರೆದು ಮೇಲ್ಕಂಡ ಬಿಲ್ಲೆಗೆ ಲೇಪಿಸಿ ಒಣಗಿಸಿ ಗಜಪುಟವನ್ನು ಹಾಕಿ ಸಾಂಗಶೀತಲವಾದ ನಂತರ ಔಷಧವನ್ನು ಗ್ರಹಿಸಿ ಎಕ್ಕದ ಹಾಲಿನಿಂದ ಅರೆದು ಅರೆದು ಪುನಃಪುನಃ ೮ ಗಜಪುಟಗಳನ್ನು ಹಾಕಲು ಭಸ್ಮವಾಗುವುದು.

೮ನೇ ವಿಧ—೩ ತೊಲೆ ಶುದ್ಧಿಮಾಡಿದ ತಾಮ್ರವನ್ನು ಮೂಸೆಯಲ್ಲಿ ಹಾಕಿ ಕರಗಿಸಿ, ತಾಮ್ರವು ಕರಗಿದ ಕೂಡಲೇ ೧|| ತೊಲೆ ಶುದ್ಧಿಮಾಡಿದ ತಗರವನ್ನು ಬೆರಸಿ ಇದ್ದಲಿನಿಂದ ಚೆನ್ನಾಗಿ ತಿರುವಿ ಗಟ್ಟಿಹುಯ್ದು, ಕುಟ್ಟಿ ಚೂರ್ಣಮಾಡಿಕೊಳ್ಳುವುದು. ನಂತರ ಶುದ್ಧಿಮಾಡಿದ ಹವಳಸರಿ ಗಂಧಕ ೪|| ತೊಲೆ, ಶುದ್ಧಿಮಾಡಿದ ಪಾದರಸ ೧ ತೊಲೆ, ಇವೆರಡನ್ನೂ ಕಲ್ವದಲ್ಲಿ ಹಾಕಿ, ನಿಂಬೇಹಣ್ಣಿನ

ರಸದಿಂದ ಚನ್ನಾಗಿ ಅರದು ನಂತರ ಮೇಲ್ಕಂಡ ಚೂರ್ಣವನ್ನು ಸೇರಿಸಿ ನಿಂಬೇ ಹಣ್ಣಿನ ರಸವನ್ನು ಬಿಟ್ಟು ಚನ್ನಾಗಿ ಅರೆದು ಬಿಲ್ಲೆಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಗಜಪುಟವನ್ನು ಹಾಕಿ ಸಾಂಗಶೀತಲವಾದನಂತರ ಔಷಧವನ್ನು ಗ್ರಹಿಸಿ ಕ್ರಮವಾಗಿ ಎಕ್ಕದ ಹಾಲಿನಿಂದ ಅರದು ಅರದು ಪುನಃ ಪುನಃ ೯ ಗಜಪುಟಗಳನ್ನು ಹಾಕಲು ಭಸ್ಮವಾಗುವುದು.

೯ನೇ ವಿಧ—ಶುದ್ಧಿಮಾಡಿದ ಹವಳಸರಿ ಗಂಧಕ ೪ ತೊಲೆ, ಶುದ್ಧಿಮಾಡಿದ ಪಾದರಸ ೨ ತೊಲೆ, ಶುದ್ಧಿಮಾಡಿದ ತಾಳಕ ೧ ತೊಲೆ, ಶುದ್ಧಿಮಾಡಿದ ಮಣಿಶಿಲೆ ॥ ತೊಲೆ, ಈ ನಾಲ್ಕನ್ನೂ ಕಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ಅರೆದು, ೨ ತೊಲೆ ಶುದ್ಧಿಮಾಡಿದ ತಾಮ್ರದ ರೇಕುಗಳಿಗೆ ಲೇಪಿಸಿ, ಒಣಗಿಸಿ ಹಣತೆಯಲ್ಲಿಟ್ಟು ಚೀಲುಮಾಡಿ ೧ ಗಜಪುಟವನ್ನು ಹಾಕಿ ಸಾಂಗಶೀತಲವಾದ ನಂತರ ಔಷಧವನ್ನು ಗ್ರಹಿಸಿ ಲೋಳೀಸರದ ರಸದಲ್ಲಿ ಅರೆದು ೧ ಗಜಪುಟವನ್ನೂ, ನಿಂಬೇಹಣ್ಣಿನ ರಸದಲ್ಲಿ ಅರಿದು ೧ ಗಜಪುಟವನ್ನೂ ಹಾಕಲು ಭಸ್ಮವಾಗುವುದು.

ಈ ಮೇಲ್ಕಂಡ ಎಲ್ಲಾ ವಿಧವಾದ ತಾಮ್ರ ಭಸ್ಮಗಳನ್ನೂ ೧-೨ ಭತ್ತದ ಕಾಳು ಪ್ರಮಾಣ ಅನುಪಾನವಿಶೇಷಗಳೊಡನೆ ಪ್ರಾತಃಕಾಲಗಳಲ್ಲಿ ದಿನಕ್ಕೆ ಒಂದು ಹೊತ್ತುಮಾತ್ರ ೩-೫ ದಿನ ಸೇವಿಸುವುದು. ರೋಗಗಳನ್ನನುಸರಿಸಿ ಪಥ್ಯವಿಡುವುದು. ಇದರಿಂದ ವಾತ, ಶ್ಲೇಷ್ಮ, ಆಮ್ಲಪಿತ್ತ, ವಾಂತಿಭ್ರಾಂತಿ, ಬಳಲಿಕೆ, ಸ್ವರಭೇದ, ಪರಿಣಾಮಶೂಲೆ, ಹೊಟ್ಟೆಯುಬ್ಬರ, ಉದರಶೂಲೆ, ಕ್ರಿಮಿರೋಗ, ಪಾಂಡುರೋಗ, ಉಬ್ಬಸ, ಭ್ರಮೆ, ಗುಲ್ಮ, ಪ್ಲೀಹ, ಕ್ಷಯ, ಕುಷ್ಠ, ಮೇಹ, ಮೂಲ, ಗ್ರಹಣಿ, ವ್ರಣ, ಮೇದೋದೋಷ ಸಕಲ ವಿಧವಾದ ಜ್ವರಗಳು ಇವುಗಳೆಲ್ಲಾ ಪರಿಹಾರವಾಗುವುದಲ್ಲದೆ ವೀರ್ಯವೃದ್ಧಿ, ಬಲ, ರುಚಿ ಇವುಗಳನ್ನುಂಟುಮಾಡುವುದು.

ತಾಮ್ರಭಸ್ಮವು ಅಶುದ್ಧವಾಗಿದ್ದರೆ ಕ್ರಿಮಿರೋಗ, ಉದರಶೂಲೆ, ಹೊಟ್ಟೆಯುಬ್ಬರ, ಕುಷ್ಠರೋಗ ಮೊದಲಾದ ರೋಗಗಳನ್ನು ಹುಟ್ಟಿಸುವುದು.

## ವಂಗ (ತಗರ) ಭಸ್ಮ.

೧ನೇ ವಿಧ—ಶುದ್ಧಿಮಾಡಿದ ವಂಗ ೧ ಶಾಣ ಪ್ರಮಾಣ, ಶುದ್ಧಿಮಾಡಿದ ಸೀಸ ೧ ಗುಂಜಿಯ ತೂಕ, ಅಂದರೆ ೩೦ ಭಾಗ ವಂಗ, ೧ ಭಾಗ ಸೀಸ, ಇವೆರಡನ್ನೂ ಒಂದು ಕಪ್ಪರೆಯಲ್ಲಿ ಹಾಕಿ ಕರಗಿಸಿ, ಕಬ್ಬಿಣದ ಸೌಟಿನಿಂದ ಚೆನ್ನಾಗಿ ತೊಳಸಬೇಕು. ಹೀಗೆ ಮಾಡುತ್ತಿದ್ದರೆ ೧ ಜಾವದೊಳಗೆ ಕಾಡಿಗೆಯ ಮುರುಕಿನಂತೆ ಕರ್ರನೆಯ ಭಸ್ಮವಾಗುವುದು. ಬಳಿಕ ಬಲವಾದ ಆ ಕಪ್ಪರೆಯ ಕಾವಿನಿಂದಲೇ ಅದು ಬೆಳ್ಳಗೆ ಭಸ್ಮವಾಗುವುದು.

೨ನೇ ವಿಧ—ಮುತ್ತುಗದ ರಸದಲ್ಲಿ ತಾಳಕವನ್ನು ಅರೆದು, ಅದನ್ನು ತಗರದ ತಗಡಿಗೆ ಲೇಪಿಸಿ ವೊಳಪುಟಹಾಕಿದರೆ ಮೂರು ಪುಟಗಳಲ್ಲಿ ಭಸ್ಮವಾಗುವುದು.

೩ನೇ ವಿಧ—ತವರದ ತಗಡಿಗೆ ಗೇರಿನೆಣ್ಣೆಯನ್ನು ಹಚ್ಚಿ ಬಟ್ಟೆ ಸುತ್ತಿ, ಹುಣಸೆ ಅರಳಿ ಮುತ್ತುಗ ಈ ಸೌದೆಗಳ ಬೆಂಕಿಯಲ್ಲಿ ವೊಳಪುಟಹಾಕಿದರೆ ಭಸ್ಮವಾಗುವುದು.

೪ನೇ ವಿಧ—ವಂಗವನ್ನು ಒಂದು ಮಡಕೆಯಲ್ಲಿ ಹಾಕಿ ಕರಗಿಸಿ, ಹುಣಿಸೆ, ಅರಳಿ ಇವುಗಳ ತೊಗಟೆಯ ಚೂರ್ಣವನ್ನು ವಂಗದ ನಾಲ್ಕರಲ್ಲೊಂದು ಭಾಗದಷ್ಟು ಅದಕ್ಕೆ ಸ್ವಲ್ಪಸ್ವಲ್ಪವಾಗಿ ಹಾಕಿ, ಕಬ್ಬಿಣದ ಸೌಟಿನಿಂದ ತೊಳಸುತ್ತಿದ್ದರೆ ಎರಡು ಜಾವದೊಳಗೆ ವಂಗವು ಭಸ್ಮವಾಗುವುದು. ಆ ಭಸ್ಮವನ್ನು ತೆಗೆದುಕೊಂಡು ಅದಕ್ಕೆ ಸಮತೂಕ ತಾಳಕವನ್ನು ಸೇರಿಸಿ, ಹುಳಿ ಹಿಂಡಿಕೊಂಡು ಮರ್ದಿಸಿ ಬಿಲ್ಲೆಕಟ್ಟಿ ಗಜಪುಟವನ್ನುಹಾಕಿ ತೆಗೆದುಕೊಂಡು, ಪುನಃ ಅದಕ್ಕೆ ಹತ್ತನೆಯೊಂದುಭಾಗ ತಾಳಕವನ್ನು ಸೇರಿಸಿ, ಹುಳಿಯಿಂದ ಒಂದು ಜಾವ ಹೊತ್ತು ಮರ್ದಿಸಿ ವೊಳಪುಟಹಾಕಬೇಕು. ಈ ರೀತಿಯಾಗಿ ಹತ್ತುವೊಳಪುಟಗಳನ್ನು ಹಾಕಿದರೆ ವಂಗವು ಚೆನ್ನಾಗಿ ಭಸ್ಮವಾಗುವುದು.

ಒಳ್ಳೆ ವಂಗ ಭಸ್ಮವು ಕಹಿ; ಉಷ್ಣ; ಜಿಡ್ಡಿಲ್ಲದುದು; ಸ್ವಲ್ಪ ವಾಯುವನ್ನು ಕೆರಳಿಸುವುದು; ಮೇಹ ಶ್ಲೇಷ್ಮರೋಗ ಮೇದಸ್ಸು ಕ್ರಿಮಿ ಇವುಗಳನ್ನು ಹೊಡೆವುದು.

ಕ್ರಮವಾಗಿ ಶುದ್ಧಿಯಾಗದೆಯೂ ಭಸ್ಮವಾಗದೆಯೂ ಇರುವ ತಗರವು ಪ್ರಮೇಹ, ಶ್ಲೇಷ್ಮರೋಗ, ಮೇದಸ್ಸು, ಕ್ರಿಮಿ ಇವುಗಳನ್ನು ಉಂಟುಮಾಡುವುದು. ಗುಲ್ಮ, ಹೃದಯರೋಗ, ಶೂಲೆ, ಮೊಳೆಯಜಾಡ್ಯ, ಕೆಮ್ಮು, ಉಬ್ಬಸ, ವಮನ ಇವುಗಳನ್ನು ಹುಟ್ಟಿಸುವುದು.

## ಸೀಸ ಭಸ್ಮ.

೧ನೇ ವಿಧ—ಶುದ್ಧವಾದ ಸೀಸವನ್ನು ಒಂದು ಮಡಕೆಯಲ್ಲಿ ಹಾಕಿ ಒಲೆಯಮೇಲಿಟ್ಟು ಕರಗಿಸಿ, ಆ ಸೀಸದ ನಾಲ್ಕರಷ್ಟು ಅರಳಿ, ಹುಣಿಸೆ ಇವುಗಳ ತೊಗಟೆಯ ಬೂದಿಯನ್ನು ಅದಕ್ಕೆ ಸ್ವಲ್ಪಸ್ವಲ್ಪವಾಗಿ ಹಾಕಿ ಕಬ್ಬಿಣದ ಸೌಟಿನಿಂದ ತೊಳಸುತ್ತಿದ್ದರೆ ಸೀಸವು ಭಸ್ಮವಾಗುವುದು. ಬಳಿಕ ಅದನ್ನು ತೆಗೆದುಕೊಂಡು ಸಮತೂಕ ಮಣಿಶಿಲೆಯನ್ನುಸೇರಿಸಿ, ನಿಂಬೆಯ ಹುಳಿಯಿಂದಾಗಲಿ, ಕಲಗಚ್ಚಿನಿಂದಾಗಲಿ ಅರೆದು ಬಿಲ್ಲೆಕಟ್ಟಿ ವೊಳಪುಟಹಾಕಿ ಸಾಂಗಶೀತಲವಾದನಂತರ ತೆಗೆದುಕೊಂಡು, ಆ ಭಸ್ಮದ ಇಪ್ಪತ್ತನೆಯ ಒಂದಂಶ ಮಣಿಶಿಲೆಯನ್ನು ಸೇರಿಸಿ, ಹುಳಿ ಹಿಂಡಿಕೊಂಡು ಒಂದು ಜಾವ ಅರೆದು ಬಿಲ್ಲೆಕಟ್ಟಿ, ಯಥಾಪ್ರಕಾರವಾಗಿ ಕುಕ್ಕುಟಪುಟಹಾಕಬೇಕು. ಹೀಗೆ ಅರವತ್ತು ಪುಟಗಳಲ್ಲಿ ಪಕ್ವವಾದರೆ ಸೀಸವು ಚೆನ್ನಾಗಿ ಭಸ್ಮವಾಗುವುದು.

೨ನೇ ವಿಧ—ಮಣಿಶಿಲೆ, ಗಂಧಕ ಇವೆರಡನ್ನು ಸಮತೂಕವಾಗಿ ತೆಗೆದು ಕೊಂಡು ಆಡುಸೋಗೆಯ ರಸದಲ್ಲಿ ಮರ್ದಿಸಿ ಕಲ್ಕಮಾಡಿ, ಆದರಲ್ಲಿ ಸೀಸದ ರೇಕನ್ನು ನೆನೆಸಿಟ್ಟಿದ್ದು ಅದನ್ನೇ ಕವಚಕೊಟ್ಟು ವರಾಹಪುಟದಲ್ಲಿ ಮೂರುಪುಟ ಕೊಡಲು ಭಸ್ಮವಾಗುವುದು.

೩ನೇ ವಿಧ—ವೀಳೆಯದೆಲೆಯ ರಸದಲ್ಲಿ ಮಣಿಶಿಲೆಯನ್ನು ಅರೆದು ಸೀಸದ ರೇಕಿಗೆ ಲೇಪಮಾಡಿ ಕುಕ್ಕುಟಪುಟಹಾಕಬೇಕು. ಹೀಗೆ ಪುನಃಪುನಃ ಲೇಪಮಾಡಿ ೩೨ ಸಲ ಪುಟಹಾಕಿದರೆ ಸೀಸವು ಭಸ್ಮವಾಗುವುದು. ಅದು ನೀರಿನಲ್ಲಿ ಮುಣು ಗುವುದಿಲ್ಲ.

ಸೀಸ ಭಸ್ಮವು ಅತ್ಯುಷ್ಣ; ಜಿಡ್ಡುಳ್ಳದು; ಕಹಿ; ವಾತವನ್ನೂ ಕಫ ವನ್ನೂ ಹೊಡೆವುದು. ಪ್ರಮೇಹ, ಜಲದೋಷ ಇವುಗಳನ್ನು ಹೊಡೆವುದು; ಅಗ್ನಿಶಕ್ತಿಯನ್ನು ಹೆಚ್ಚಿಸುವುದು; ಆಮವಾತವನ್ನು ಪರಿಹರಿಸುವುದು.

ಅಶುದ್ಧವಾದ ಸೀಸವು ಪ್ರಮೇಹ, ಕ್ಷಯ, ಕಾಮಾಲೆ ಇವುಗಳನ್ನು ಹುಟ್ಟಿಸುವುದು. ಆದುದರಿಂದ ಸೀಸವನ್ನು ಶುದ್ಧಿಮಾಡಿಯೇ ಭಸ್ಮಮಾಡ ಬೇಕು.

## ನಾಗ (ಸತ್ತು) ಭಸ್ಮ ಅಥವಾ ಜಸದ ಭಸ್ಮ.

ಶುದ್ಧಿಮಾಡಿದ ಸತ್ತನ್ನು ಕಬ್ಬಿಣದ ಬಾಂಡ್ಲಿಯಲ್ಲಿ ಹಾಕಿ ಕರಗಿಸಿ ಅರ ಸಿನ, ವೋಮ, ಬಿಳೇಜೀರಿಗೆ, ಅಶ್ವತ್ಥದ ಚಕ್ಕೆ, ಹುಣಸೇಸೊಪ್ಪು ಇವುಗಳ ಚೂರ್ಣವು ಸತ್ತಿಗೆ ೨ ಭಾಗ ಹಾಕಿ ಕಬ್ಬಿಣದ ಸೌಟಿನಿಂದ ಉಜ್ಜುತ್ತಾಬಂದರೆ ಸತ್ತು ಚೂರ್ಣವಾಗುವುದು ಈ ಚೂರ್ಣವನ್ನು ಖಲ್ವದಲ್ಲಿ ಹಾಕಿ ಲೋಳೆಸರದ ರಸದಿಂದ ಅರದು ಬಿಲ್ಲೆಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಅರ್ಧಗಜ ಪುಟಹಾಕುವುದು. ಈ ರೀತಿ ೫ ಪುಟ ಹಾಕುವುದು. ನಿಂಬೇಹಣ್ಣಿನ ರಸದಲ್ಲಿ ಅರದು ೫ ಪುಟಯಿಡುವುದು ಹಸೀ ಶುಂಟೀ ರಸದಲ್ಲಿ ಅರದು ೫-೫ ಪುಟಯಿಡುವುದು. ಈ ರೀತಿ ೧೫ ಪುಟಗಳು ತೀರಿದ ನಂತರ ಸತ್ತುಭಸ್ಮವಾಗುವುದು. ಇದನ್ನು ೧ ಭತ್ತದಕಾಳು ವೊದಲು ೩ ಭತ್ತದಕಾಳುವರಿವಿಗು ಅನುಪಾನವಿಶೇಷಗಳಿಂದ ತೆಗೆದುಕೊಳ್ಳುವುದು. ಇದರಿಂದ ಗುಣ:—ಜೀರಿಗೆ, ಬಾಲಮೆಣಸು ಇವು ಎರಡೆರ ಚೂರ್ಣ ಕಾಲು ತೊಲೆಯಲ್ಲಿ ಈ ಭಸ್ಮವನ್ನು ಬೆರಸಿ ಹಸುವಿನ ಬೆಣ್ಣೆಯಲ್ಲಿ ಕಲಸಿ ಸೇವಿಸಿದರೆ ಮೇಹರೋಗಗಳು ಪರಿಹರವಾಗುವುದು. ವಾಯುವಿಳಂಗ, ಮುತ್ತುಕದ ಬೀಜ, ಕರೇ ಜೀರಿಗೆ, ಶೊಂಟಿ ಇವುಗಳ ಚೂರ್ಣದಲ್ಲಿ ಭಸ್ಮವನ್ನು ಬೆರಸಿ ಜೇನುತುಪ್ಪ ದೊಡನೆ ಸೇವಿಸಿದರೆ ಕ್ರಿಮಿರೋಗ ಹರ. ಸತ್ತು ಭಸ್ಮ ೧ ತೊಲೆ, ಸುವರ್ಣ ಮಾಕ್ಷಿಕ ಭಸ್ಮ ೧ ತೊಲೆ, ಚಿತ್ರಕಾದಿವಟಿ ೫ ತೊಲೆ ಈ ವಸ್ತುಗಳನ್ನು ಬೆರಸಿ ಖಲ್ವದಲ್ಲಿ ಹಾಕಿ ಜೇನುತುಪ್ಪ ಹಾಕಿ ಅರದು ತೊಗರೀಕಾಳು ಪ್ರಮಾಣ ಮಾತ್ರೆ

ಮಾಡಿ ದಿನಕ್ಕೆ ಎರಡು ಅಥವಾ ನಾಲ್ಕು ಮಾತ್ರೆ ಸೇವಿಸುತ್ತಾ ಬಂದರೆ ಪಾಂಡು, ಯಕೃತ್ತು, ಪ್ಲೀಹೋದರ ಗುಣವಾಗುವುದು.

## ಲೋಹ ಭಸ್ಮ.

೧ನೇ ವಿಧ—ಶುದ್ಧವಾದ ಪಾದರಸ ೧ ಭಾಗ, ಶುದ್ಧವಾದ ಗಂಧಕ ೨ ಭಾಗ, ಇವೆರಡರ ಸಮತೂಕ ಶುದ್ಧವಾದ ಲೋಹಚೂರ್ಣ ಇವು ಮೂರನ್ನೂ ಲೋಳಿಸರದ ರಸದಲ್ಲಿ ಎರಡುಜಾವ ಅರೆದು ಉಂಡೆಮಾಡಿ ಹರಳೆಲೆಯಲ್ಲಿ ಸುತ್ತಿ ನೂಲಿನಿಂದ ಬಿಗಿದು, ತಾಮ್ರದ ಭರಣಿಯಲ್ಲಿರಿಸಿ ಚೀರುಮಣ್ಣು ಮಾಡಿ ಬಿಸಿಲಿನಲ್ಲಿ ಒಣಗಿಸಿ ಧಾನ್ಯರಾಸಿಯಲ್ಲಿ ಹೂತಿದ್ದು, ಮೂರು ದಿನದಮೇಲೆ ತೆಗೆದುಕೊಂಡು ಚೂರ್ಣಿಸಿ ವಸ್ತ್ರಗಾಳಿತಮಾಡಿದರೆ ಆ ಲೋಹಚೂರ್ಣವು ಭಸ್ಮವಾಗಿ ನೀರಿನಲ್ಲಿ ಹಾಕಿ ನೋಡಿದರೆ ಹಂಸದಂತೆ ತೇಲುವುದು. ಈ ಲೋಹಭಸ್ಮಕ್ಕೆ ಸೋಮಾಮೃತವೆಂದು ಹೆಸರು.

೨ನೇ ವಿಧ—ಶುದ್ಧವಾದ ತೀಕ್ಷ್ಣವೆಂಬ ಕಬ್ಬಿಣದ (ಉಕ್ಕು) ಅರಪುಡಿಗೆ ಅದರ ಹನ್ನೆರಡನೆಯೊಂದುಭಾಗದಷ್ಟು ಶುದ್ಧವಾದ ಇಂಗಲೀಕವನ್ನು ಸೇರಿಸಿ ಲೋಳಿಸರದ ರಸದಲ್ಲಿ ಎರಡುಜಾವ ಅರೆದು ಬಿಲ್ಲೆಯ ಕಟ್ಟಿ ಎರಡು ಶರಾವೆಗಳ ಮಧ್ಯದಲ್ಲಿರಿಸಿ ಚೀರುಮಣ್ಣುಮಾಡಿ ಗಜಪುಟವನ್ನು ಹಾಕಬೇಕು. ಏಳುಸಲ ಹೀಗೆ ಪುನಃಪುನಃ ಲೋಳಿಸರದ ರಸದಲ್ಲಿ ಅರೆದು ಬಿಲ್ಲೆಯಕಟ್ಟಿ ಒಣಗಿಸಿ ಗಜಪುಟವನ್ನು ಹಾಕಿದರೆ ಆ ಅರಪುಡಿಯು ಭಸ್ಮವಾಗಿ ನೀರಿನಲ್ಲಿ ಹಾಕಿದರೆ ತೇಲುವುದು.

೩ನೇ ವಿಧ—ಕಬ್ಬಿಣದ ಅರಪುಡಿ ೧ ಭಾಗ, ಪೆಟ್ಲುಪ್ಪು (ಸೋರುಪ್ಪು) ೧ ಭಾಗ, ಹಿರಿಯಮದ್ದು ೧ ಭಾಗ ಇವು ಮೂರನ್ನೂ ಒಟ್ಟಾಗಿ ಖಲ್ವದಲ್ಲಿ ಹಾಕಿ ಲೋಳಿಸರದ ರಸದಿಂದ ಒಂದುದಿನವೆಲ್ಲ ಚೆನ್ನಾಗಿ ಮರ್ದಿಸಿ ಉಂಡೆಮಾಡಿ ಹರಳೆಲೆಯಲ್ಲಿ ಸುತ್ತಿ ಮೇಲೆ ಕೆಸರುಮಣ್ಣನ್ನು ಬಳಿದು ಗಜಪುಟವನ್ನು ಹಾಕಿ ಸಾಂಗಶೀತಳವಾದನಂತರ ತೆಗೆದುಕೊಂಡರೆ ಕೆಂಪಗೆ ಸಿಂಧೂರದಂತೆ ಭಸ್ಮವಾಗಿರುವುದು. ಅದನ್ನು ನೀರಿನಲ್ಲಿ ಹಾಕಿ ನೋಡಿದರೆ ತೇಲುತ್ತಿರುವುದು. ಅದು ಸಕಲಕಾರ್ಯಗಳಿಗೂ ಉಪಯೋಗಿಸುವುದು. ಬಹಳ ಉತ್ತಮವಾದುದು.

೪ನೇ ವಿಧ—ಕಬ್ಬಿಣದ ಅರಪುಡಿಯನ್ನು ದಾಳಿಂಬದ ಸೊಪ್ಪಿನ ರಸದಲ್ಲಿ ನೆನೆಯಿಸಿ ನೆನೆಯಿಸಿ ಬಿಸಿಲಿನಲ್ಲಿಟ್ಟು ಒಣಗಿಸುವುದು. ಹೀಗೆ ಏಳುಸಲ ಭಾವನೆ ಮಾಡಿದ ಅರಪುಡಿಯನ್ನು ಮತ್ತೆ ಅದೇರಸದಲ್ಲಿ ಅರೆದು ಬಿಲ್ಲೆಯ ಕಟ್ಟಿ ಒಣಗಿಸಿ ಚೀರುಮಣ್ಣುಮಾಡಿ ಗಜಪುಟ ಹಾಕಬೇಕು. ಹೀಗೆ ಎರಡು ಪುಟ ಹಾಕಿದರೆ ಒಳ್ಳೆಯ ಭಸ್ಮವಾಗಿ ನೀರಿನಲ್ಲಿ ಹಾಕಿದರೆ ತೇಲುವುದು. ಅದನ್ನು ಸಕಲರೋಗಗಳಲ್ಲೂ ಪ್ರಯೋಗಿಸಬಹುದು. ಇದು ಗುರುವಾಕ್ಯದಂತೆ ಸತ್ಯವಾದ ಸಿದ್ಧಕ್ರಿಯೆ.

೫ನೇ ವಿಧ— ತೀಕ್ಷ್ಣವೆಂಬ ಕಬ್ಬಿಣದ ಅರಪುಡಿಯನ್ನೂ ತಕ್ಕಷ್ಟು ಆಕಳ ಮೊಸರನ್ನೂ ಸಹ ಒಂದು ಮಡಕೆಯಲ್ಲಿ ಹಾಕಿ ಅದು ತಾನಾಗಿ ಒಣಗುವ ವರೆಗೂ ಇರಿಸಿದ್ದು, ಒಣಗಿದಮೇಲೆ ತೆಗೆದುಕೊಂಡು ತ್ರಿಫಲೆಯ ಕೆಂಡದಲ್ಲಿ ಗಜಪುಟಹಾಕಬೇಕು. ಹೀಗೆ ಪುನಃಪುನಃ ಭಾವನೆಮಾಡಿ ಮೂರುಪುಟ ಹಾಕಿದರೆ ಆಕ್ಷಣದಲ್ಲೇ ಒಳ್ಳೆಯ ಶುಭ್ರವಾದ ಭಸ್ಮವಾಗುವುದು ಸಂಶಯವಿಲ್ಲ.

೬ನೇ ವಿಧ—ಕಬ್ಬಿಣದ ಅರಪುಡಿಯನ್ನೂ, ಅದರ ಸಮತೂಕ ನವಾಸಾಗರವನ್ನೂ, ಸ್ವಲ್ಪ ಬಿಸಿನೀರನ್ನೂ ಕಲೆಸಿ ಒಂದು ಬಟ್ಟೆಯಲ್ಲಿ ಕಟ್ಟಿರಿಸಿದ್ದು ಒಂದುಜಾವ ಕಳೆದಮೇಲೆ ಅದನ್ನು ಕೈಯಿಂದ ಚೆನ್ನಾಗಿ ಉಜ್ಜಿದರೆ ಆ ಕ್ಷಣದಲ್ಲೇ ಭಸ್ಮವಾಗುವುದು. ಆ ಭಸ್ಮವು ನೀರಿನಲ್ಲಿ ಹಾಕಿದರೆ ತೇಲುವುದು. ಅದನ್ನು ಸಮಸ್ತ ರೋಗಗಳಲ್ಲೂ ಪ್ರಯೋಗಿಸಬಹುದು.

ಹೀಗೆ ಮಾರಣಮಾಡಲ್ಪಟ್ಟ ಲೋಹಗಳನ್ನು ಮಿತ್ರಪಂಚಕದೊಡನೆ ಸೇರಿಸಿ ಬೆಂಕಿಯಲ್ಲಿಟ್ಟು ಊದಬೇಕು. ಹೀಗೆ ಮಾಡುವುದಕ್ಕೆ ನಿರುತ್ಥಾನವೆಂದು ಹೆಸರು. ನಿರುತ್ಥಾನ ಮಾಡಲ್ಪಟ್ಟ ಲೋಹಭಸ್ಮವು ನೀರಿನಮೇಲೆ ತೇಲಿದರೆ ಅದು ಸೇವನೆಗೆ ಯೋಗ್ಯವು. (ಮಿತ್ರಪಂಚಕವೆಂದರೆ— ತುಪ್ಪ, ಅರಗು, ಜೇನುತುಪ್ಪ, ಟಂಕಣಕ್ಷಾರ, ತುಪ್ಪ(ಟ)ಳ ಇವು ಐದೆಂದು ಹೇಳುವರು.)

ಗುರುಗಂಜಿ, ತುಪ್ಪ, ಅರಗು, ಜೇನುತುಪ್ಪ, ಬಿಳಿಗಾರ, ಕುರಿಯೇ ಮೊದಲಾದುವುಗಳ ತುಪ್ಪಳ, ಇವುಗಳೊಡನೆ ಸೇರಿಸಿ ಬೆಂಕಿಯಲ್ಲಿ ಇರಿಸಿ ಊದಿದರೆ ಸಪ್ತಧಾತುಗಳೂ ಜೀವವನ್ನೂ ಹೊಂದುವುವು.

ಗಂಧಕವನ್ನೂ ನಿರುತ್ಥಾನಮಾಡಲ್ಪಟ್ಟ ಲೋಹವನ್ನೂ ಸಮತೂಕವಾಗಿ ತೆಗೆದುಕೊಂಡು ಖಲ್ವದಲ್ಲಿರಿಸಿ ಲೋಳೆಸರದ ರಸದಿಂದ ಒಂದು ದಿನವೆಲ್ಲ ಮರ್ದಿಸಿ ಬಿಲ್ಲೆಮಣ್ಣುಮಾಡಿ ಗಜಪುಟ ಹಾಕಬೇಕು. ಇದೇರೀತಿಯಾಗಿ ಸಕಲ ಲೋಹಗಳಿಗೂ ನಿರುತ್ಥಾನವನ್ನು ಮಾಡುವುದು.

ಲೋಹ ಭಸ್ಮವು—ಪಾಂಡು, ಕ್ಷಯ, ಕ್ಷೀಣತೆ (ಬಡವು), ಕೆಮ್ಮು, ತಲೆದಿರಗು, ಶ್ಲೇಷ್ಮಜಾಡ್ಯ, ರಕ್ತರೋಗ, ಗುಲ್ಮ, ಶೂಲೆ, ಪೀನಸ, ವಮನ, ಉಬ್ಬಸ, ಪ್ರಮೇಹ, ಅರುಚಿ ಇವನ್ನು ಬಹುಬೇಗ ಪರಿಹರಿಸುವುದು ; ನಡುಕವನ್ನು ನಿಲ್ಲಿಸುವುದು ; ತಂಪು ; ಕಣ್ಣಿಗೆ ಹಿತವಾದುದು.

ಶುದ್ಧವಾದ ಲೋಹಭಸ್ಮವು ಶಿವಶಕ್ತಿಯುಕ್ತವಾದುದರಿಂದ ಪಿತ್ತ, ಕಫ, ವಾಯು, ಮೋಹ, ಪಾಂಡುರೋಗ, ಗುದರೋಗ, ಶೂಲೆ ಇವುಗಳನ್ನೆಲ್ಲ ಹೊಡೆವುದು. ಅಶುದ್ಧವಾದುದು ಈ ರೋಗಗಳನ್ನೆಲ್ಲ ಹುಟ್ಟಿಸುವುದು.

ಲೋಹ ಭಸ್ಮವನ್ನು ಸೇವಿಸುವವರಿಗೆ ಕುಂಬಳಕಾಯಿ, ಎಳ್ಳೆಣ್ಣೆ, ಉದ್ದಿನ್ನ, ಸಾಸವೆ, ಮದ್ಯ, ಹುಳಿ ಇವು ಅಪಥ್ಯಗಳು.

ಲೋಹವನ್ನು ಸೇವಿಸುವವರು ಮೀನು, ರಾತ್ರಿ ಜಾಗರಣೆ, ಬದನೆಯ ಕಾಯಿ, ಉದ್ದು, ಹಾಗಲಕಾಯಿ, ದೇಹಾಯಾಸ, ಮದ್ಯವೇ ಮೊದಲಾದ ತೀಕ್ಷ್ಣಪದಾರ್ಥಗಳು, ಎಣ್ಣೆ, ಹುಳಿ ಇವುಗಳನ್ನು ದೂರದಲ್ಲೇ ತ್ಯಜಿಸಬೇಕು.

ಲೋಹಭಸ್ಮವನ್ನು ಒಂದೂವರೆಗುಂಜಿಯ ತೂಕದಿಂದ ಹಿಡಿದು ಮೂರು ಗುಂಜಿಯ ತೂಕದವರೆಗೆ ಉಚಿತವರಿತು ಪ್ರಯೋಗಿಸಬಹುದು.

ಲೋಹಭಸ್ಮವು ತ್ರಿಫಲೆಯ ಅನುಪಾನದಿಂದ ಮುಪ್ಪಿನಸೊಕ್ಕು ನರೆಗಳನ್ನು ಸಹ ಹೋಗಿಸುವುದು. ತ್ರಿಕುಟಿಕ (ಶುಂಠಿ, ಮೆಣಸು, ಹಿಪ್ಪಲಿ ಇವುಮೂರು) ಗಂಟುಭಾರಂಗಿ, ಜೇನುತುಪ್ಪ ಈ ಅನುಪಾನದಿಂದ ಧಾತುದೋಷಗಳನ್ನು ಹೊಡೆವುದು. ಜೇನುತುಪ್ಪ, ಹಿಪ್ಪಲಿ ಇವುಗಳೊಡನೆ ಸೇರಿದರೆ ಶ್ಲೇಷ್ಮರೋಗಗಳನ್ನು ಪರಿಹರಿಸುವುದು ಕಲ್ಲುಸಕ್ಕರೆ ಚಾತುರ್ಜಾತಕ (ಏಲಕ್ಕಿ, ಲವಂಗಚಕ್ಕೆ, ಲವಂಗಪತ್ರೆ, ನಾಗಕೇಸರ ಇವು ನಾಲ್ಕು) ಇವುಗಳೊಡನೆ ಸೇರಿದರೆ ರಕ್ತಪಿತ್ತಜಾಡ್ಯವನ್ನು ನಾಶಮಾಡುವುದು. ಬಿಳಿಯಕೊಮ್ಮೆಯನ್ನು ಹಸುವಿನಹಾಲಿನಲ್ಲಿಡಿದು ಆ ರಸಕ್ಕೆ ಹಾಕಿಕೊಟ್ಟರೆ ಚೆನ್ನಾಗಿ ಬಲವನ್ನು ಹೆಚ್ಚಿಸುವುದು. ಬಿಳಿಯ ಕೊಮ್ಮೆಯ ರಸದೊಡನೆ ಸೇರಿದರೆ ಪಾಂಡುರೋಗವನ್ನು ಹೊಡೆವುದು. ಅರಿಸಿನ, ಹಿಪ್ಪಲಿ, ಜೇನುತುಪ್ಪ ಇವುಗಳ ಅನುಪಾನದಿಂದ ಇಪ್ಪತ್ತುವಿಧವಾದ ಪ್ರಮೇಹ ಜಾಡ್ಯಗಳನ್ನೂ ಕೊಲ್ಲುವುದು; ಸಂಶಯವಿಲ್ಲ. ಶಿಲಾಜಿತು ಭಸ್ಮದೊಡನೆ ಸೇರಿದರೆ ಮೂತ್ರಕೃಚ್ಛ್ರರೋಗವನ್ನು ನಿವಾರಣೆಮಾಡುವುದು. ಆಡುಸೋಗೆ, ಹಿಪ್ಪಲಿ, ದ್ರಾಕ್ಷೆ, ಜೇನುತುಪ್ಪ ಇವುಗಳೊಡನೆ ಸೇರಿಸಿ ಗುಳಿಗೆಮಾಡಿ ಬೆಳಗಿನ ಹೊತ್ತು ಸೇವಿಸಿದರೆ ಐದುವಿಧವಾದ ಕಾಸಜಾಡ್ಯಗಳನ್ನೂ ಪರಿಹರಿಸುವುದು. ತಾಂಬೂಲದೊಡನೆ ಸೇವಿಸಿದರೆ ಬಹಳ ಒಳ್ಳೆಯದು. ಅಗ್ನಿಶಕ್ತಿಯನ್ನು ಹೆಚ್ಚಿಸುವುದು. ವೀರ್ಯವೃದ್ಧಿಮಾಡುವುದು. ಮೈಗೆ ಕಾಂತಿಯನ್ನು ಹೆಚ್ಚಿಸುವುದು. ಹೆಚ್ಚಾಗಿ ಹೇಳುವುದರಿಂದೇನು. ಮುಖ್ಯವಾಗಿ ದೇಹವನ್ನು ಲೋಹದಂತೆ ದೃಢಮಾಡುವುದು ಎಂಬುದು ಸರ್ವಸಮ್ಮತವಾಗಿದೆ.

ಔಷಧಗಳೂ ಪುಟಗಳೂ ಸಾಲದೆಹೋದುದರಿಂದಲೂ, ಗಂಧಕ ಪಾದರಸ ಇವು ಸೇರದಿದ್ದುದರಿಂದಲೂ ಅಪಕ್ವವಾದ ಅಂದರೆ—ಚೆನ್ನಾಗಿ ಭಸ್ಮವಾಗದ ಲೋಹಚೂರ್ಣವು ಜನರ ಆಯುಸ್ಸನ್ನು ನಾಶಮಾಡುವುದು.

ಮಂಡೂರವನ್ನು ಲೋಹಭಸ್ಮಮಾಡುವ ಕ್ರಮದಂತೆಯೇ ಮಾಡಿದರೆ ಮಂಡೂರವು ಭಸ್ಮವಾಗುವುದು.

### ಕಾಂತ ಭಸ್ಮ.

ಶುದ್ಧಿಮಾಡಿದ ಕಾಂತವನ್ನು ಸಣ್ಣತುಂಡುಗಳಾಗಿ ಮಾಡಿದ್ದು ೬ ತೊಲೆ, ಶುದ್ಧಿಮಾಡಿದ ಇಂಗಳೀಕ ೬ ತೊಲೆ ಇವೆರಡನ್ನು ಖಲ್ವದಲ್ಲಿ ಹಾಕಿ ಗೋಮೂತ್ರ

ದಲ್ಲಿ ಅರದು ಬಿಲ್ಲೆಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲು ಮಾಡಿ ಒಣಗಿಸಿ ಒಂದುಮೊಳ ಪುಟಹಾಕುವುದು ಈ ರೀತಿ ೧೦ ಪುಟಗಳು ಹಾಕಿದನಂತರ ತ್ರಿಫಲೆಯ ಕಷಾಯದಲ್ಲಿ ನಿಂಬೇಹಣ್ಣಿನ ರಸ ಬೆರಸಿ ಮೇಲ್ಕಂಡ ಭಸ್ಮವನ್ನು ಖಲ್ವದಲ್ಲಿ ಹಾಕಿ ಈ ಕಷಾಯವನ್ನು ಬಿಟ್ಟು ಅರದು ಬಿಲ್ಲೆಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಒಂದುಮೊಳ ಪುಟ ಇಡುವದು. ಪುನಹ ಮುಕ್ಕಾಲುತೊಲೆ ಶುದ್ಧಿಮಾಡಿದ ಇಂಗಲೀಕವನ್ನು ಭಸ್ಮದೊಡನೆ ಸೇರಿಸಿ ಎಕ್ಕದಹಾಲು ಬಿಟ್ಟು ಖಲ್ವದಲ್ಲಿ ಅರದು ಬಿಲ್ಲೆಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಒಂದು ಗಜಪುಟಹಾಕಲು ಭಸ್ಮವಾಗುವುದು. ಪುನಹ ಈ ಭಸ್ಮವನ್ನು ನಿಂಬೇಹಣ್ಣಿನ ರಸದಲ್ಲಿ ಅರದು ಬಿಲ್ಲೆಮಾಡಿ ಒಣಗಿಸಿ ಹಣತೆಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಒಂದುಮೊಳ ಪುಟಹಾಕಲು ಭಸ್ಮವಾಗುವುದು. ಈ ಭಸ್ಮವನ್ನು ೨ ಭತ್ತದಕಾಳು ತೂಕ ಮೊದಲುಗೊಂಡು ೫ ಭತ್ತದಕಾಳು ತೂಕದವರಿವಿಗು ತೆಗೆದುಕೊಳ್ಳುವದು. ಈ ಭಸ್ಮವನ್ನು ಮೇಕೆಹಾಲು ಅನುಪಾನದಿಂದ ಕೊಡಲು ಎದೆಯುರಿ, ಗ್ರಹಣಿ, ಕಾಮಾಲೆ, ಪಾಂಡು, ಶೋಭೆ, ಮೇಹವಾಯು, ರಕ್ತಕ್ಷೀಣತೆ, ಮಂದಾಗ್ನಿ, ಕ್ಷಯ ಇವು ಗುಣವಾಗುವುವು.

ಕಾಂತ ಭಸ್ಮವು—ತಂಪು; ಸಿಹಿಯಾದುದು; ಸ್ವಲ್ಪ ಒಗರು, ಆಯುಸ್ಸನ್ನು ಹೆಚ್ಚಿಸುವುದು; ರಸಾದಿ ಧಾತುಗಳನ್ನು ಹೆಚ್ಚಿಸುವುದು. ತ್ರಿದೋಷಗಳನ್ನೂ, ವ್ರಣ, ಮೇಹ, ಕುಷ್ಠ, ಪ್ಲೀಹೆ, ಉದರಜಾಡ್ಯ, ಗ್ರಂಥಿರೋಗ, ವಿಷದೋಷ, ಕ್ರಿಮಿಜಾಡ್ಯ ಇವುಗಳನ್ನೂ ಹೊಡೆವುದು. ಒಳ್ಳೆಯ ರಜತಭಸ್ಮಕ್ಕೆ ಯಾವಯಾವ ಗುಣಗಳುಂಟೋ ಅವೆಲ್ಲ ಕಾಂತಭಸ್ಮದಲ್ಲಿರುವವು. ರಜತಭಸ್ಮಕ್ಕಿಂತಲೂ ಕಾಂತಭಸ್ಮವೇ ಉತ್ತಮವೆಂದು ಭೈರವನ ತಾತ್ಪರ್ಯವು.

## ಸ್ವರ್ಣಮಾಕ್ಷಿಕ ಭಸ್ಮ.

೧ನೇ ವಿಧ—ಶುದ್ಧಿಯಾದ ಹೇಮಮಾಕ್ಷಿಕಕ್ಕೆ ನಾಲ್ಕನೆಯೊಂದು ಭಾಗ ಶುದ್ಧವಾದ ಗಂಧಕವನ್ನು ಸೇರಿಸಿ, ಹರಳೆಣ್ಣೆಯ ಜತೆಯಲ್ಲಿ ಅರೆದು ಚಕ್ರದಂತೆ ಬಿಲ್ಲೆಮಾಡಿ, ಶರಾವೆಗಳೆರಡರ ನಡುವೆ ಇರಿಸಿ ಚೀಲುಮಣ್ಣುಮಾಡಿ ಗಜಪುಟದಲ್ಲಿ ಪುಟಹಾಕಬೇಕು. ಚೆನ್ನಾಗಿ ಕಾವು ಹತ್ತುವುದಕ್ಕಾಗಿ ಪುಟಕ್ಕೆ ಕೆಳಗೂ ಮೇಲೂ ಬತ್ತದ ಹೊಟ್ಟನ್ನು ಹಾಕಿರಬೇಕು. ಆ ಕಾವೆಲ್ಲ ಅಲ್ಲೇ ಆರಿದಮೇಲೆ ತೆಗೆದುಕೊಂಡರೆ ಸಿಂಧೂರದ ಕಾಂತಿಯುಳ್ಳ ಭಸ್ಮವಾಗಿರುವುದು.

೨ನೇ ವಿಧ—ಸ್ವರ್ಣಮಾಕ್ಷಿಕವನ್ನು ಆಡಿನ ಮೂತ್ರದಲ್ಲಾಗಲಿ, ಎಳ್ಳೆಣ್ಣೆಯಲ್ಲಾಗಲಿ, ಹುರುಳಿಯ ಕಟ್ಟಿನಲ್ಲಾಗಲಿ, ಮಜ್ಜಿಗೆಯಲ್ಲಾಗಲಿ ಅರೆದು ಬಿಲ್ಲೆಯ ಕಟ್ಟಿ ಹಿಂದೆ ಹೇಳಿದಂತೆ ಪುಟವಿಟ್ಟರೆ ಒಳ್ಳೆಯ ಭಸ್ಮವಾಗುವುದು.

ಹೇಮಮಾಕ್ಷಿಕ ಭಸ್ಮವು—ಸ್ವಲ್ಪ ಕಹಿ ಸಿಹಿ ನೇರಿದುದು; ಮೇಹ, ಮೂಲ ವ್ಯಾಧಿ, ಕ್ಷಯಜಾಡ್ಯ, ಕುಷ್ಠ, ಕಫ, ಪಿತ್ತ ಇವುಗಳನ್ನು ನಾಶಮಾಡುವುದು; ತಂಪು; ಯೋಗವಾಹಿ (ಅಂದರೆ ಯಾವ ಪದಾರ್ಥದೊಡನೆ ಸೇರುವುದೊ ಅದರ ಗುಣಗಳನ್ನು ಹೆಚ್ಚಿಸಿ ಕೆಲಸಮಾಡುವುದು); ರಸಾಯನವು.

ಸ್ವರ್ಣಮಾಕ್ಷಿಕ ರಜತಮಾಕ್ಷಿಕ ಇವುಗಳನ್ನು ಶೋಧಿಸಿ ಕ್ರಮವಾಗಿ ಸೇವಿಸಿದರೆ ಬಹಳ ಗುಣಕೊಡುವುವು; ಮೇಹ, ಕುಷ್ಠ, ಕ್ರಿಮಿ, ಶೋಭೆ, ಪಾಂಡು ರೋಗ, ಅಪಸ್ಮಾರ, ಅಶ್ಮರಿ ಇವುಗಳನ್ನು ಗೆಲ್ಲುವುವು.

ಮಾಕ್ಷಿಕವು ಅಪಕ್ವವಾಗಿದ್ದರೆ ಅಂದರೆ ಚೆನ್ನಾಗಿ ಭಸ್ಮವಾಗದಿದ್ದರೆ ಜೀರ್ಣಶಕ್ತಿಯನ್ನೂ, ಬಲವನ್ನೂ ತಗ್ಗಿಸಿಬಿಡುವುದು; ಮಲಮೂತ್ರಗಳನ್ನು ತಡೆವುದು; ಗಂಡಾಮಾಲೆಯನ್ನೂ ಇನ್ನೂ ಇತರ ಅನೇಕ ದುಷ್ಟರೋಗಗಳನ್ನೂ ಹುಟ್ಟಿಸುವುದು; ಗುರುವಾದುದು.

ಮಾಕ್ಷೀಕವೆಂಬ ಧಾತುವು ಸಕಲ ರೋಗಗಳನ್ನೂ ಹೊಡೆವುದು; ಪಾದರಸಕ್ಕೆ ಪ್ರಾಣಪ್ರಾಯವಾದುದು; ಉತ್ತಮವಾದ ವೃಷ್ಯಪದಾರ್ಥವು; ಸುಲಭವಾಗಿ ಸೇರದಿರುವ ಎರಡು ಲೋಹಗಳನ್ನು ಸೇರಿಸಬಲ್ಲುದು. ಉತ್ತಮಗುಣಗಳುಳ್ಳುದು; ರಸಾಯನಗಳಲ್ಲೆಲ್ಲ ಶ್ರೇಷ್ಠವಾದುದು.

ತಾರಮಾಕ್ಷಿಕವು ನೋಟಕ್ಕೆ ಕಂಚಿನಂತೆ ಕಾಣುವುದು; ಒರೆಗಲ್ಲಿನಲ್ಲಿ ಉಜ್ಜಿದರೆ ಬೆಳ್ಳಿಯಂತೆ ಮಿರುಗುವುದು. ಭಾರವಾಗಿಯೂ, ನುಣ್ಣಗಿರುವುದಾಗಿಯೂ ಬೆಳ್ಳಗೂ ಇರುವ ತಾರಮಾಕ್ಷಿಕವು ಶ್ರೇಷ್ಠವು.

ತಾರಮಾಕ್ಷಿಕದಲ್ಲೂ ಸ್ವರ್ಣಮಾಕ್ಷಿಕದಲ್ಲಿರುವಂತಹ ದೋಷಗಳೇ ಇರುವುದರಿಂದ ಆ ದೋಷಗಳು ಹೋಗುವಂತೆ ಮಾಡತಕ್ಕ ಶೋಧನಕ್ರಮವನ್ನು ಹೇಳುವೆನು; ಹೇಗೆಂದರೆ—ಎಲೆಹಾಗಲ ಹಾಲಕೊರಟಿಗೆ (ಮುರಿಗಾಯಿ) ಇವುಗಳ ರಸಗಳಲ್ಲೂ ನಿಂಬೆಯ ಹುಳಿಯಲ್ಲೂ ಒಂದು ದಿನವೆಲ್ಲ ನೆನೆಸಿ ಬಿಸಿಲಿನಲ್ಲಿಟ್ಟು ಭಾವನೆಮಾಡಿದರೆ ತಾರಮಾಕ್ಷಿಕವು ಶುದ್ಧವಾಗುವುದು.

ತಾರಮಾಕ್ಷಿಕದ ಮಾರಣವಿಧಾನವು ಸ್ವರ್ಣಮಾಕ್ಷಿಕದ ವಿಧಾನದಂತೆಯೇ. ಗುಣಗಳು ಮಾತ್ರ ಸ್ವರ್ಣಮಾಕ್ಷಿಕಕ್ಕಿಂತ ತಾರಮಾಕ್ಷಿಕದಲ್ಲಿ ಕಡಮೆ

## ಮೈಲತುತ್ತ ಭಸ್ಮ.

೧ನೇ ವಿಧ—ಶುದ್ಧಿಮಾಡಿದ ಮೈಲತುತ್ತವನ್ನು ಖಲ್ವದಲ್ಲಿ ಹಾಕಿ ತುರುಕಳ್ಳಿಹಾಲಿನಿಂದ ಒಂದುಜಾವ, ಜುಟ್ಟುವೇ ಹಾಲಿನಲ್ಲಿ ಒಂದ ಜಾವ ಅರದು ಖರ್ಜೂರದ ಕಾಯಿಗಳನ್ನು ತಂದು ಒಳಗಿರುವ ಬೀಜವನ್ನು ತೆಗೆದುಹಾಕಿ ಮೇಲ್ಕಂಡ ಮೈಲತುತ್ತವನ್ನು ತುಂಬಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಕುಕ್ಕುಟಪುಟ ಹಾಕಿ ಸಾಂಗಶೀತಲವಾದಮೇಲೆ ಖರ್ಜೂರದಲ್ಲಿರುವ ಭಸ್ಮವನ್ನು

ತೆಗೆದು ಇಟ್ಟುಕೊಳ್ಳುವುದು. ಇದು ಗಸೆ ಕೆಮ್ಮಲಿಗೆ ಜೇನುತುಪ್ಪದಲ್ಲಿ ಅಕ್ಕೀ ಕಾಳಷ್ಟು ಕೊಡಬೇಕು.

೨ನೇ ವಿಧ—ಶುದ್ಧಿಮಾಡಿದ ಮೈಲತುತ್ತವನ್ನು ಕುಡಿಕೆಯಲ್ಲಿ ಹಾಕಿ ಅದರ ತುಂಬಾ ಒಜೇಯರಿಯರಸ ಹಾಕಿ ಮೇಲೆ ಬಿಲ್ಲೆಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೩೦ ಬೆರಣಿ ಪುಟಹಾಕಲು ಭಸ್ಮವಾಗುತ್ತೆ. ಸಾಂಗಶೀತಲ ವಾದ ಮೇಲೆ ತೆಗದುಕೊಳ್ಳುವುದು. ಈ ಭಸ್ಮ ಔಷಧಸೇವನೆಗೆ ಯೋಗ್ಯ ವಾದದ್ದು.

೩ನೇ ವಿಧ—ಶುದ್ಧಿಮಾಡಿದ ಮೈಲತುತ್ತವನ್ನು ನಿಂಬೇಹಣ್ಣಿನ ರಸದಿಂದ ಅರದು ಬಿಲ್ಲೆಮಾಡಿ ಒಣಗಿಸಿ ಶೀಗೆಕುಡಿಯನ್ನು ಅರದು ಬ್ಯಾಲದ ಕಾಯಿಯಷ್ಟು ಗಾತ್ರ ಉಂಡೇಮಾಡಿ ಈ ಉಂಡೆಯ ಮಧ್ಯದಲ್ಲಿ ಮೈಲತುತ್ತವನ್ನು ಇಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಂದುಮೊಳ ಪುಟಹಾಕಲು ಭಸ್ಮವಾಗುವುದು.

☞ಮೈಲತುತ್ತ ಭಸ್ಮಸರಿಯಾಗಿ ಆಗದಿದ್ದರೆ ಮತ್ತೊಂದುಪುಟ ಇಟ್ಟು ಕೊಳ್ಳಬೇಕು.

ಈ ಕ್ರಮದಂತೆ ಶುದ್ಧಿಮಾಡಿದ ಮೈಲತುತ್ತವನ್ನು ಚೆನ್ನಾಗಿ ಭಸ್ಮಮಾಡಿದ ನಂತರ ಆಯಾ ರೋಗಗಳಿಗೆ ತಕ್ಕ ಅನುಪಾನಗಳಿಂದ ಸೇವಿಸಲು ಶೂಲೆ, ಆಮ್ಲಪೈತ್ಯ, ಕುಷ್ಠ, ಶ್ವಾಸ, ಖಾಸ ಇವುಗಳನ್ನು ಪರಿಹರಿಸುವದಲ್ಲದೆ ಹಸುವಿನ ಬೆಣ್ಣೆಯೊಡನೆ ಸೇವಿಸಿದರೆ ನವೆ, ವಿಷ ಇವುಗಳನ್ನು ; ವಾಯುವಿಳಂಗದಚೂರ್ಣ ದೊಡನೆ ಸೇವಿಸಿದರೆ ಕ್ರಿಮಿರೋಗಗಳನ್ನೂ, ವೀಳೆದೆಲೆಯ ರಸದಲ್ಲಿ ಸೇವಿಸಿದರೆ ಕಫರೋಗಗಳನ್ನು ಪರಿಹರಿಸುವುದು.

## ಮುರುದಾರುಸಿಂಗು ಭಸ್ಮ.

೧ ತೊಲೆ ಶುದ್ಧಿಮಾಡಿದ ಮುರದಾರುಸಿಂಗನ್ನು ಖಲ್ವದಲ್ಲಿ ಹಾಕಿ ಉತ್ತ್ರೇಣಿಸೊಪ್ಪಿನ ರಸದಿಂದ ಅರದು ಬಿಲ್ಲೆಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಒಂದು ಮೊಳ ಪುಟಹಾಕಿ ಸಾಂಗ ಶೀತಲವಾದನಂತರ ಔಷಧವನ್ನು ತೆಗೆದು ಖಲ್ವದಲ್ಲಿ ಹಾಕಿ ಶುದ್ಧಿಮಾಡಿದ ಗೋಮೂತ್ರ ಶಿಲಾಜಿತು ೨ ತೊಲೆ ಬೆರಸಿ ಲೋಳಿಸರದ ರಸದಲ್ಲಿ ಅರದು ಬಿಲ್ಲೆ ಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಒಂದು ಮೊಳ ಪುಟಹಾಕಿ ಸಾಂಗಶೀತಲವಾದನಂತರ ಔಷಧವನ್ನು ತೆಗೆದು ಖಲ್ವದಲ್ಲಿ ಹಾಕಿ ಶುದ್ಧಿಮಾಡಿದ ರಸಕರ್ಪೂರ ೧ ತೊಲೆ ಬೆರಸಿ ಆಡುಮುಟ್ಟದ ಸೊಪ್ಪಿನ ರಸದಲ್ಲಿ ಅರದು ಬಿಲ್ಲೆಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಒಣಗಿಸಿ ೧ ಗಜಪುಟ ಹಾಕಿ ಸಾಂಗಶೀತಲವಾದನಂತರ ತೆಗೆದು ಖಲ್ವದಲ್ಲಿ ಹಾಕಿ ಅರದು ಶೀಸೆಯಲ್ಲಿ ಇಟ್ಟುಕೊಳ್ಳುವುದು. ಹೊತ್ತಿಗೆ

೨ ಅಥವಾ ೩ ಬತ್ತದಕಾಳು ತೂಕ ಹಸುವಿನ ತುಪ್ಪ ಅಥವಾ ಹಸುವಿನ ಬೆಣ್ಣೆಯಲ್ಲಿ ಕಲಸಿಕೊಡುವುದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೫-೭ ದಿನ ಕೊಡಲು ಸಮಸ್ತ ಮೇಹರೋಗಗಳು ಗುಣವಾಗುವುದು. ಇದಕ್ಕೆ ಪತ್ಯ ಹಸುವಿನ ಹಾಲು ಅನ್ನ.

## ಸೋಡಾ ಭಸ್ಮ.

೬ ತೊಲೆ ಸೋಡಾಪುಡಿಯನ್ನು ಖಲ್ವದಲ್ಲಿ ಹಾಕಿ ಮಂಗರವಳ್ಳಿ ರಸದಲ್ಲಿ ೩ ದಿವಸ ಅರದು ಬಿಲ್ಲೆಮಾಡಿ ಒಣಗಿಸಿ ಹಣತೆಗಳಲ್ಲಿಟ್ಟು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ೩೦ ಬೆರಣಿಗಳಲ್ಲಿ ಪುಟವಿಟ್ಟು ಖಲ್ವದಲ್ಲಿ ಹಾಕಿ ಅರದು ಇಟ್ಟುಕೊಳ್ಳುವುದು. ಹೊತ್ತಿಗೆ ಒಂದು ಅಕ್ಕಿಕಾಳಷ್ಟು ಪ್ರಮಾಣ ನಿಂಬೇಹಣ್ಣಿನ ರಸದಲ್ಲಿ ಕಲಸಿಕೊಡುವುದು. ಹೀಗೆ ಬೆಳಿಗ್ಯೆ ಸಾಯಂಕಾಲ ೩-೫-೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಕಲ ಶೂಲೆ, ಹೊಟ್ಟೆನೋವು ಗುಣವಾಗುವುದು.

## ಪೆಟ್ಲುಪ್ಪು ಭಸ್ಮ.

ಪೆಟ್ಲುಪ್ಪು, ಪಟಿಕ ಸಮಭಾಗ ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ಇದರ ಯರಡರಷ್ಟು ಹಳೇ ಹುಣಿಸೇಹಣ್ಣು ಹಾಕಿ ಅರದು ಒಂದು ಕುಡಿಕೆಯಲ್ಲಿ ಹಾಕಿ ಮೇಲೆ ಬೋಕಿಬಿಲ್ಲೆ ಮುಚ್ಚಿ ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಒಣಗಿಸಿ ಕುಕ್ಕುಟ ಪುಟವಿಟ್ಟರೆ ಭಸ್ಮವಾಗುತ್ತೆ. ಈ ಭಸ್ಮವನ್ನು ಹೊತ್ತಿಗೆ ಹುರಳಿಕಾಳಷ್ಟು ಯಳನೀರಿನಲ್ಲಾಗಲಿ, ಮುಲ್ಲಂಗಿ ರಸದಲ್ಲಾಗಲಿ ಕೊಡುವುದು. ಈರೀತಿ ಬೆಳಿಗ್ಯೆ ಸಾಯಂಕಾಲ ೭ ದಿವಸ ತೆಗೆದುಕೊಳ್ಳುವುದು. ಇದಕ್ಕೆ ಪತ್ಯ-ತೊಗರೀಬೇಳೆ ಸಿಹಿ ಸಾರು ಅನ್ನ. ಇದರಿಂದ ಮೂತ್ರಕೃಚ್ಛ್ರ, ಉರಿಮೂತ್ರ, ಪುರುಷದಲ್ಲಿ ಚಳುಕು, ಮೂತ್ರಕಟ್ಟು ಇವು ಗುಣವಾಗುವುವು.

## ಪಂಚಲವಣ ಭಸ್ಮ.

ಪಂಚಲವಣಗಳು ಪ್ರತಿಯೊಂದೂ ೧-೧ ತೊಲೆ ಪ್ರಕಾರ ೫ ತೊಲೆಯನ್ನು ಖಲ್ವದಲ್ಲಿ ಹಾಕಿ ಹುಳಿದಾಳಿಂಬರೆಹಣ್ಣಿನ ರಸದಲ್ಲಿ ಒಂದುದಿನ ಅರೆದು ಬಿಲ್ಲೆಮಾಡಿ ಹಣತೆಗಳಲ್ಲಿಟ್ಟು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಕುಕ್ಕುಟಪುಟಯಿಟ್ಟರೆ ಭಸ್ಮವಾಗುವುದು. ಹೊತ್ತಿಗೆ ೨ ಆಣೆ ತೂಕ ಭಸ್ಮ ಜೇನುತುಪ್ಪದಲ್ಲಿ ಕಲಸಿ ಕೊಡಬೇಕು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಹೊಟ್ಟೆಶೂಲೆ ಗುಣವಾಗುವುದು.

## ಗೋಮೂತ್ರ ಶಿಲಾಜಿತು ಭಸ್ಮ.

ಗೋಮೂತ್ರ ಶಿಲಾಜಿತು ಒಂದೇ ಗಡ್ಡೆ ೬ ತೊಲೆ ತಂದು ಇದಕ್ಕೆ ಸುಣ್ಣದ ಬಟ್ಟೆ ಸುತ್ತಿ ಬೆಂಕಿಕೆಂಡದ ಮಧ್ಯ ಸ್ವಲ್ಪ ಹೊತ್ತು ಇಡುವುದು. ಈಚಗ ತಗೆದು

ಕೊಂಡು ಹಂಸಪಾದಿಸೊಪ್ಪಿನ ರಸದಲ್ಲಿ ಅರೆದು ಬಿಲ್ಲೆಮಾಡಿ ಒಣಗಿಸಿ ಹಣತೆಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಕುಕ್ಕುಟಪುಟ ಇಟ್ಟುಕೊಳ್ಳುವುದು. ಪುನಹಾ ಇದೇ ರಸಹಾಕಿ ಇದೇಮೇರಿಗೆ ಪುಟ ಇಟ್ಟುಕೊಳ್ಳುವುದು. ನಂತರ ಖಲ್ವದಲ್ಲಿ ಅರದು ಇಟ್ಟುಕೊಂಡು ಹಸುವಿನ ಬೆಣ್ಣೆಯಲ್ಲಿ ೧ ಹಣ ತೂಕ ಭಸ್ಮ ಕಲಸಿಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೩-೫-೭ ದಿನ ಕೊಡುವುದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಮೂತ್ರಕೋಶದಕಟ್ಟು, ಮರಳುಕಟ್ಟು, ಮೂತ್ರಕಟ್ಟೆಯಿರುವುದು, ಮೂತ್ರವುರಿಯುವುದು ನಿವಾರಣೆಯಾಗುವುವು. ೨ನೇದು:—ಮೇಲ್ಕಂಡ ಗೋಮೂತ್ರ ಶಿಲಾಜಿತು ಭಸ್ಮವನ್ನು ೧ ವರಹತೂಕ ಕಪ್ಪೇಚಿಪ್ಪಿನಲ್ಲಿ ಹಾಕಿ ಯಣ್ಣೆ ಬೆಳಗಾರ ಶುದ್ಧಿಮಾಡಿದ್ದು ೧ ವರಹತೂಕ ಹಾಕಿ ಅದರಮೇಲೆ ಗೋಮೂತ್ರ ಶಿಲಾಜಿತು ಭಸ್ಮ ೧ ವರಹತೂಕ ಹಾಕಿ ಘಟ್ಟಿಯಾಗಿ ಇಟ್ಟು ಅದರಮೇಲೆ ಕಪ್ಪೇ ಚಿಪ್ಪು ಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಬೆಂಕಿಕೆಂಡದ ಮಧ್ಯ ೧ ಘಂಟೆ ಇಟ್ಟು ಈಚೆಗೆ ತೆಗದುಕೊಳ್ಳುವುದು ಚಿಪ್ಪುಸಹಿತ ಖಲ್ವದಲ್ಲಿ ಅರದು ಇಟ್ಟುಕೊಳ್ಳುವುದು. ಪ್ರಯೋಗ:—ಹೊತ್ತಿಗೆ ೧ ಹಣತೂಕ ಭಸ್ಮ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ಯಳನೀರಿನಲ್ಲಾಗಲಿ ಅಥವಾ ಸೌತೇಬೀಜದ ಹಾಲಿನಲ್ಲಾಗಲಿ ಕೊಡುವುದು. ಇದರಿಂದ ಗುಣ:—ಮೂತ್ರಜನಿಯುವುದು, ಮರಳುಕಟ್ಟಿ ಇರುವುದು, ಮೂತ್ರಕಟ್ಟೆಯಿರುವುದು ನಿವಾರಣೆ ಆಗುವುದು, ಹುವ್ವ ಮೀರ್ ತಲೆಯಲ್ಲಿ ಇರುವ ಕಲ್ಲು (ಮೀನಿನ ತಲೆ ಕಲ್ಲು) ತಣ್ಣೀರಿನಲ್ಲಿ ಗಂಧಾ ತೆಗೆದು ಮೂಲಂಗಿಗಡ್ಡೆ ರಸದಲ್ಲಿ ಮೇಲಿನ ಭಸ್ಮ ೧ ಹಣತೂಕ ಶೇರಿಸಿ ಕಲಸಿ ಕೊಟ್ಟರೆ ತಕ್ಷಣವೇ ಗುಣಬರುವುದು. ಕಲ್ಲು ಕರಗಿ ತಕ್ಷಣವೇ ಮೂತ್ರ ಬಿಟ್ಟು ಹೋಗುವುದು.

## ಕರ್ಪೂರ ಶಿಲಾಜಿತು ಭಸ್ಮ.

೧ನೇ ವಿಧ—ಒಂದೇ ಗಡ್ಡೆಯಾಗಿರುವ ಕರ್ಪೂರ ಶಿಲಾಜಿತು ೬ ತೊಲೆ ತಂದು ಒಂದು ಬಿಳೀಬಟ್ಟೆಯಲ್ಲಿ ಸುತ್ತಿ ಮಡಕೆಯಲ್ಲಿ ॥ ಶೇರು ಸುಣ್ಣಕಲ್ಲನ್ನು ಹಾಕಿ ಅದರಮೇಲೆ ಕರ್ಪೂರ ಶಿಲಾಜಿತು ಇಟ್ಟು ಅದರಮೇಲೆ ॥ ಶೇರು ಸುಣ್ಣ ಕಲ್ಲು ಹಾಕಿ ಬಿಸಿನೀರು ಹುಯಿದು ಸುಣ್ಣಕಲ್ಲು ಬೆಂದನಂತರ ಕರ್ಪೂರ ಶಿಲಾಜಿತು ತೆಗೆದು ಬಟ್ಟೆಯನ್ನು ಕಿತ್ತುಹಾಕಿ ತಣ್ಣೀರಿನಲ್ಲಿ ತೊಳೆದು ಲೋಳಿಸರದ ಪಟ್ಟೆ ಮಧ್ಯಭಾಗ ಎರಡಾಗಿ ಶೀಳಿ ಅದರ ಮಧ್ಯದಲ್ಲಿ ಕರ್ಪೂರ ಶಿಲಾಜಿತು ಯಿಟ್ಟು ಮೇಲೆ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೧ ಮೊಳ ಪುಟಹಾಕಲು ಭಸ್ಮವಾಗುವುದು. ಇದನ್ನು ನಿಂಬೇಹಣ್ಣಿನ ರಸದಲ್ಲಿ ಅರದು ಬಿಲ್ಲೆಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಚೀಲುಮಾಡಿ ೧ ಮೊಳ ಪುಟಹಾಕಿ ತೆಗೆದುಕೊಂಡು ಖಲ್ವದಲ್ಲ ಹಾಕಿ ಅರದು ಇಟ್ಟುಕೊಳ್ಳುವುದು. ಹೊತ್ತಿಗೆ ಅಡ್ಡ ತೂಕ ಭಸ್ಮವನ್ನು

ಹಸುವಿನ ಬೆಣ್ಣೆಯಲ್ಲಿ ೨ ವೇಳೆ ೫-೭ ದಿನ ಕೊಡುವುದು. ಪಥ್ಯ ತೊಗರೀ ಬೇಳೆ ಸಿಹಿಸಾರು ಅನ್ನ. ಇದರ ಗುಣ:—ಮೇಹ, ಉರಿಮೂತ್ರ, ಉಷ್ಣ ನಿವಾರಣೆ ಆಗುವುದು.

೨ನೇ ವಿಧ—ಶುದ್ಧಿಮಾಡಿದ ಕರ್ಪೂರ ಶಿಲಾಜಿತು ೩ ತೊಲೆ, ಹುಣಿಸೇ ಸೊಪ್ಪು ತಂದು ಅರದು ಎರಡು ಬಿಲ್ಲೆಮಾಡಿ ಈ ಬಿಲ್ಲೆ ಮಧ್ಯ ಈ ಕರ್ಪೂರ ಶಿಲಾಜಿತುಯಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೧ ವೊಳ ಪುಟ ಹಾಕಿದರೆ ಭಸ್ಮವಾಗುವುದು. ಅದನ್ನು ಖಲ್ವದಲ್ಲಿ ಅರೆದು ಇಟ್ಟುಕೊಳ್ಳುವುದು.

೩ನೇ ವಿಧ—ಶುದ್ಧಿಮಾಡಿದ ಕರ್ಪೂರ ಶಿಲಾಜಿತನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲಿ ಅರದು ಬಿಲ್ಲೆಮಾಡಿ ಒಣಗಿಸಿ ಇದಕ್ಕೆ ಸುಣ್ಣವನ್ನು ಅರ್ಧಂಗುಲ ಮಂದ ಕವಚಕೊಟ್ಟು ಒಣಗಿಸು ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೧೦೦ ಬೆರಣಿಗಳಲ್ಲಿ ಪುಟಯಿಟ್ಟು ತೆಗೆದುಕೊಳ್ಳುವುದು. ಸಾಂಗಶೀತಲವಾದನಂತರ ಚೀಲುಬಿಚ್ಚಿ ಮೇಲೆ ಇರುವ ಸುಣ್ಣವನ್ನು ತೆಗೆದು ಹಾಕಿ ಒಳಗಿನ ಭಸ್ಮವನ್ನು ಮಾತ್ರ ತೆಗೆದು ಇಟ್ಟುಕೊಳ್ಳುವುದು.

೪ನೇ ವಿಧ—ಶುದ್ಧಿಮಾಡಿದ ಕರ್ಪೂರ ಶಿಲಾಜಿತು ಖಲ್ವದಲ್ಲಿ ಹಾಕಿ ಪುಲ್ಲಂಪುರಸಿಸೊಪ್ಪಿನ ರಸದಲ್ಲಿ ಒಂದು ದಿನ, ಕರೇಕಾಚಿಸೊಪ್ಪಿನ ರಸದಲ್ಲಿ ಒಂದು ದಿನ ಅರೆದು ಬಿಲ್ಲೆಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೧೦೦ ಬೆರಣಿಗಳಲ್ಲಿ ಪುಟವಿಟ್ಟರೆ ಭಸ್ಮವಾಗುವುದು.

೫ನೇ ವಿಧ—ಒಂದು ಮಗೆಯಲ್ಲಿ ಶುದ್ಧಿಮಾಡಿದ ಕರ್ಪೂರ ಶಿಲಾಜಿತುವನ್ನು ಹಾಕಿ ಇದಕ್ಕೆ ನಾಲ್ಕುಭಾಗ ಲೋಳಿಸರದ ರಸವನ್ನು ಹಾಕಿ ಮುಚ್ಚಳ ಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೧೦೦ ಬೆರಣಿಗಳಲ್ಲಿ ಪುಟವಿಟ್ಟು ಸಾಂಗಶೀತಲವಾದನಂತರ ತೆಗೆದು ಇದೇರೀತಿಯಾಗಿ ಮತ್ತೊಂದುಸಲ ಪುಟವಿಟ್ಟರೆ ಭಸ್ಮವಾಗುವುದು. ಈ ಭಸ್ಮವನ್ನು ಒಂದು ಗುರುಗಂಜಿ ತೂಕ ಹಸುವಿನ ಬೆಣ್ಣೆಯಲ್ಲಾಗಲಿ, ಹಸುವಿನ ತುಪ್ಪದಲ್ಲಾಗಲಿ, ಭಸ್ಮಕ್ಕೆ ಸಮಸಕ್ಕರೆ ಬೆರಸಿ ಕೊಡಲು ಮೂತ್ರಕೃಚ್ಛ್ರ, ಮೂತ್ರವುರಿ ಇವು ಗುಣವಾಗುವುದು. ಪ್ರಮೇಹಕ್ಕೆ ಕಿರುನೆಲ್ಲಿಸೊಪ್ಪಿನ ರಸದಲ್ಲಾಗಲಿ, ಲೋಳಿಸರದ ರಸದಲ್ಲಾಗಲಿ ಸಕ್ಕರೆ ಬೆರಸಿ ಭಸ್ಮವನ್ನು ಸೇವಿಸಬೇಕು.

೬ನೇ ವಿಧ—ಶುದ್ಧಿಮಾಡಿದ ಕರ್ಪೂರ ಶಿಲಾಜಿತು ೩ ತೊಲೆ, ಸೂರ್ತಿಬೆಳಗಾರ ೩ ತೊಲೆ ಇವು ಎರಡು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲ ಅರದು ಬಿಲ್ಲೆಮಾಡಿ ವಣಗಿಸಿ ೨ ಹಣತೆಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೧೦೦ ಬೆರಣಿಗಳಲ್ಲಿ ಪುಟವಿಡಲು ಭಸ್ಮವಾಗುವುದು. ೪ ಗುರುಗಂಜಿ ತೂಕ ಭಸ್ಮವನ್ನು ಹಸುವಿನ ಬೆಣ್ಣೆಯಲ್ಲಿ ಕಲಸಿಕೊಡುವುದು. ಹೀಗೆ ಬೆಳಗ್ಗೆ ಸಾಯಂಕಾಲ

೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪ್ರಮೇಹ, ಉರಿಮೂತ್ರ, ಮೂತ್ರಾಶ್ಮರೀ, ಕಲ್ಲುಕಟ್ಟಿನರೋಗಗಳು ಗುಣವಾಗುವುವು.

ಗೋಮೂತ್ರ ಶಿಲಾಜಿತುವನ್ನು ಸಹ ಮೇಲ್ಕಂಡರೀತಿಯಾಗಿ ಭಸ್ಮ ಮಾಡು ವುದು.

## ರಸಕರ್ಪೂರ ಮತ್ತು ಕರ್ಪೂರ ಶಿಲಾಜಿತು ಶೇರಿದ ಭಸ್ಮ.

ಶುದ್ಧಿಮಾಡಿದ ರಸಕರ್ಪೂರ ೧ ತೊಲೆ, ಶುದ್ಧಿಮಾಡಿದ ಕರ್ಪೂರ ಶಿಲಾ ಜಿತು ೧ ತೊಲೆ ಇವು ಎರಡನ್ನು ಸೇರಿಸಿ ಖಲ್ವದಲ್ಲಿ ಹಾಕಿ ಪುಲ್ಲಂಪುರಸಿಸೊಪ್ಪಿನ ರಸದಲ್ಲಿ ಒಂದು ಜಾವ, ಅಚ್ಚೀಸೊಪ್ಪಿನ ರಸದಲ್ಲಿ ಒಂದುಜಾವ, ಲೋಳೆಸರದ ರಸದಲ್ಲಿ ಒಂದುಜಾವ, ಕಿರಿನೆಲ್ಲಿಸೊಪ್ಪಿನ ರಸದಲ್ಲಿ ಒಂದುಜಾವ ಅರದು ಬಿಲ್ಲೆ ಮಾಡಿ ಒಣಗಿಸಿ ಹಣತೆಯಲ್ಲಿಟ್ಟು, ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೫೦ ಬೆರಣಿಗಳಲ್ಲಿ ಪುಟವಿಟ್ಟು ಸಾಂಗಶೀತಲವಾದನಂತರ ತೆಗೆದು ನೋಡಲು ಭಸ್ಮ ವಾಗಿರುವುದು. ಈ ಭಸ್ಮವನ್ನು ೧ ಹಣತೂಕ ಹಸುವಿನ ಬೆಣ್ಣೆ ಅಥವಾ ಹಸು ವಿನ ತುಪ್ಪದಲ್ಲಿ ಕಲಸಿ ಸೇವಿಸುವುದರಿಂದ ಮೇಹ, ಮೇಹವ್ರಣ, ಮೇಹವಾಯು ಇವು ಗುಣವಾಗುವವು

## ಕಲ್ಲುನಾರು ಭಸ್ಮ.

೧ನೇ ವಿಧ—ಕಲ್ಲುನಾರು ೧ ಪಾವು ತಂದು ಗಾಜಿನ ಬಟ್ಟಲನಲ್ಲಿ ಹಾಕಿ ಯಕ್ಕದ ಹಾಲಿನಲ್ಲಿ ೮ ದಿನ ನೆನೆಹಾಕುವುದು. ಯಕ್ಕದಬೇರಿನ ಬೊಬ್ಬಡೆ ತೆಗೆದುಕೊಂಡು ಯಕ್ಕದ ಹಾಲುಹಾಕಿ ಚನ್ನಾಗಿ ಅರದು ಕಲ್ಲುನಾರಿಗೆ ಕವಚ ಕೊಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ೨೦೦ ಬೆರಣಿಗಳಲ್ಲಿ ಪುಟಹಾಕುವುದು. ತಿರಿಗಿ ತೆಗೆದು ಕಲ್ಲುನಾರು ಖಲ್ವದಲ್ಲಿ ಹಾಕಿ ಯಕ್ಕದಹಾಲು ಹಾಕಿ ಅರದು ಬಿಲ್ಲೆ ಮಾಡಿ ಒಣಗಿಸಿ ೨ ಹಣತೆಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೧೦೦ ಬೆರಣಿಗಳಲ್ಲಿ ಪುಟಹಾಕುವುದು. ಹೀಗೆ ೩ ಸಲ ಪುಟಹಾಕುವುದು. ಹೊತ್ತಿಗೆ ಅಕ್ಕೀಕಾಳು ಪ್ರಮಾಣ ಹಸುವಿನ ಬೆಣ್ಣೆಯಲ್ಲಿ ಆಗಲಿ ಅಥವಾ ಹಸು ವಿನ ತುಪ್ಪದಲ್ಲಿ ಆಗಲಿ ಕಲಸಿ ಕೊಡಬೇಕು. ಹೀಗೆ ಬೆಳಗ್ಯೆ ಸಾಯಂಕಾಲ ೩ ದಿನ ಕೊಡುವುದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಮಸ್ತ ಪ್ರಮೇಹಗಳು ಗುಣವಾಗುವುವು.

೨ನೇ ವಿಧ—ಅನ್ನದ ಗಂಜಿಯಲ್ಲಿ ತಾಟಬೆಲ್ಲ ೩ ತೊಲೆ, ಕಲ್ಲುನಾರು ೩ ತೊಲೆ ಹಾಕಿ ೮ ಜಾವ ಭಾವನೆಮಾಡಿ ಒಣಗಿಸಿಕೊಳ್ಳುವುದು. ತಾಟ ಹೆಂಡದಲ್ಲಿ ೮ ಜಾವ ಭಾವನೆಮಾಡುವುದು ಕಿರುನೆಲ್ಲಿಸೊಪ್ಪು ತೆಂಗಿನಕಾಯಿ ಪ್ರಮಾಣ ನಿಂಬೇ ಹಣ್ಣಿನ ರಸದಲ್ಲಿ ಅರದು ಅದರ ಮಧ್ಯದಲ್ಲಿ ಕಲ್ಲುನಾರು ಇಟ್ಟು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಒಣಗಿಸಿ ಗಜಪುಟ ಇಡುವುದು. ಇದನ್ನು ತೆಗದು ಖಲ್ವ ದಲ್ಲಿ ಅರೆದು ಇಟ್ಟುಕೊಳ್ಳುವುದು. ಈ ಭಸ್ಮವನ್ನು ಬೆಣ್ಣೆಯಲ್ಲಿ ೧ ಹಣ ತೂಕ

ಕಲಸಿ ಕೊಡುವುದು. ಹೀಗೆ ಬೆಳಿಗ್ಯೆ ಸಾಯಂಕಾಲ ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಮೇಹ, ಉರಿ ಮೂತ್ರ, ಮೂತ್ರಕೃಚ್ಛ್ರ ಇವು ಗುಣವಾಗುವವು.

೩ನೇ ವಿಧ—ಶುದ್ಧಿಮಾಡಿದ ಕಲ್ಲುಸಾರನ್ನು ಖಲ್ವದಲ್ಲಿ ಹಾಕಿ ಲೋಳಿ ಸರದ ರಸದಲ್ಲಿ ಅರೆದು ಬಿಲ್ಲೆಮಾಡಿ ಒಣಗಿಸಿ ಮುಚ್ಚಳದಲ್ಲಿಟ್ಟು ಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಒಂದು ಮೊಳ ಪುಟಹಾಕಿ ಸಾಂಗ ಶೀತಲವಾದನಂತರ ಭಸ್ಮವನ್ನು ತೆಗೆದು ಖಲ್ವದಲ್ಲಿ ಹಾಕಿ ಮೇಲ್ಕಂಡಂತೆಯೇ ಅರೆದು ಮತ್ತೊಂದು ಪುಟಹಾಕಿದರೆ ಭಸ್ಮವಾಗುವುದು.

೪ನೇ ವಿಧ—ಶುದ್ಧಿಮಾಡಿದ ಕಲ್ಲುಸಾರನ್ನು ಖಲ್ವದಲ್ಲಿ ಹಾಕಿ ಕೆಂಪು ಹುವ್ವಬಿಡತಕ್ಕ ಅಗಸೇಸೊಪ್ಪಿನ ರಸದಲ್ಲಿ ಅರೆದು ಬಿಲ್ಲೆಮಾಡಿ ಒಣಗಿಸಿ ಅದೇ ಸೊಪ್ಪನ್ನು ಬಿಲ್ಲೆಗೆ ಕವಚಕೊಟ್ಟು ಮುಚ್ಚಳದಲ್ಲಿಟ್ಟು ಮುಚ್ಚಿ ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಒಣಗಿಸಿ ಒಂದು ಮೊಳ ಪುಟಹಾಕಿ ಸಾಂಗಶೀತಲವಾದನಂತರ ಭಸ್ಮವನ್ನು ತೆಗೆದು ಖಲ್ವದಲ್ಲಿ ಹಾಕಿ ಮೇಲ್ಕಂಡಂತೆಯೇ ಅರೆದು ಮತ್ತೊಂದು ಪುಟಹಾಕಿದರೆ ಭಸ್ಮವಾಗುವುದು.

೫ನೇ ವಿಧ—ಶುದ್ಧಿಮಾಡಿದ ಕಲ್ಲುಸಾರನ್ನು ಖಲ್ವದಲ್ಲಿ ಹಾಕಿ ತಂಗಡಿ ಸೊಪ್ಪಿನ ರಸದಲ್ಲಿ ಅರದು ಬಿಲ್ಲೆಮಾಡಿ ಒಣಗಿಸಿ ಅದೇ ಸೊಪ್ಪನ್ನು ಬಿಲ್ಲೆಗೆ ಕವಚಕೊಟ್ಟು ಮುಚ್ಚಳದಲ್ಲಿಟ್ಟು ಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಒಂದು ಮೊಳ ಪುಟಹಾಕಿ ಸಾಂಗಶೀತಲವಾದನಂತರ ಭಸ್ಮವನ್ನು ತೆಗೆದು ಖಲ್ವದಲ್ಲಿ ಹಾಕಿ ಮೇಲ್ಕಂಡಂತೆಯೇ ಅರೆದು ಮತ್ತೊಂದು ಪುಟಹಾಕಿದರೆ ಭಸ್ಮವಾಗುವುದು.

## ಪ್ರವಾಳ ಭಸ್ಮ.

೧ನೇ ವಿಧ—ಶುದ್ಧಿಮಾಡಿದ ಹವಳವನ್ನು ಯಕ್ಕದ ಹಾಲಿನಲ್ಲಿ ೩ ದಿನ ನೆನೆಯಿಸಿ ಬಿಸಲಿನಲ್ಲಿ ಒಣಗಿಸಿ ಹಣತೆಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಒಂದು ಗಜಪುಟವಿಡಲು ಭಸ್ಮವಾಗುವುದು. ನಂತರ ಔಷಧವನ್ನು ಗ್ರಹಿಸಿ ನಿಂಬೇಹಣ್ಣಿನ ರಸದಲ್ಲಿ ಅರದು ಒಂದು ಗಜಪುಟವಿಟ್ಟರೆ ಭಸ್ಮವಾಗುವುದು. ಹೊತ್ತಿಗೆ ೧ ಗುರುಗಂಜಿಯಿಂದ ೨ ಗುರುಗಂಜಿ ಪ್ರಮಾಣ ಹಸುವಿನ ತುಪ್ಪ, ಜೇನುತುಪ್ಪದಲ್ಲಿ ಕೊಡುವುದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕಫಹರ, ಕಾಸ, ಶ್ವಾಸ, ಕ್ಷಯ, ರಕ್ತಪಿತ್ತ, ಪ್ರದರಶೂಲೆ ಇವು ಗುಣವಾಗುವುವು.

೨ನೇ ವಿಧ—ಶುದ್ಧಿಮಾಡಿದ ಹವಳವನ್ನು ಹಸೇಶೊಂಟಿ ರಸದಲ್ಲಿ ೧ ದಿನ ನೆನೆಯಿಸಿ ಬಿಸಿಲಿನಲ್ಲಿ ಒಣಗಿಸಿಕೊಳ್ಳುವದು. ಈ ಹವಳವನ್ನು ಖಲ್ವದಲ್ಲಿ ಹಾಕಿ ಕಾಡುಮೊಲದ ರಕ್ತದಲ್ಲಿ ಅರೆದು ಬಿಲ್ಲೆಮಾಡಿ ಒಣಗಿಸಿ ೨ ಹಣತೆಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ೧ ಗಜಪುಟವಿಡಲು ಭಸ್ಮವಾಗುವುದು.

೩ನೇ ವಿಧ—ಶುದ್ಧಿಮಾಡಿದ ಹವಳವನ್ನು ಖಲ್ವದಲ್ಲಿ ಹಾಕಿ ಜುಟ್ಟುವೇ ಸೊಪ್ಪಿನ ರಸದಲ್ಲಿ ಅರೆದು ಬಿಲ್ಲೆಮಾಡಿ ಒಣಗಿಸಿ ಹಣತೆಗಳಲ್ಲಿಟ್ಟು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ೧ ಗಜಪುಟವಿಡಲು ಭಸ್ಮವಾಗುವುದು.

೪ನೇ ವಿಧ—ಶುದ್ಧಿಮಾಡಿದ ಹವಳವನ್ನು ಖಲ್ವದಲ್ಲಿ ಹಾಕಿ ಶೀತೊಂಡೇ ಸೊಪ್ಪಿನ ರಸದಲ್ಲಿ ಅರೆದು ಬಿಲ್ಲೆಮಾಡಿ ಒಣಗಿಸಿ ಹಣತೆಗಳಲ್ಲಿಟ್ಟು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಒಣಗಿಸಿ ೧ ಗಜಪುಟವಿಡಲು ಭಸ್ಮವಾಗುವುದು.

೫ನೇ ವಿಧ—ಶುದ್ಧಿಮಾಡಿದ ಹವಳವನ್ನು ಖಲ್ವದಲ್ಲಿ ಹಾಕಿ ಮಂಗರವಳ್ಳಿಯಲೆಯ ರಸದಲ್ಲಿ ಅರೆದು ಬಿಲ್ಲೆಮಾಡಿ ಒಣಗಿಸಿ ಹಣತೆಗಳಲ್ಲಿಟ್ಟು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಒಣಗಿಸಿ ೧ ಗಜಪುಟವಿಡಲು ಭಸ್ಮವಾಗುವುದು.

೬ನೇ ವಿಧ—ಶುದ್ಧಿಮಾಡಿದ ಹವಳವನ್ನು ಖಲ್ವದಲ್ಲಿ ಹಾಕಿ ನಾರಂಬೇಳೆ ಸೊಪ್ಪಿನ ರಸದಲ್ಲಿ ಅರೆದು ಬಿಲ್ಲೆಮಾಡಿ ಒಣಗಿಸಿ ಹಣತೆಗಳಲ್ಲಿಟ್ಟು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಒಣಗಿಸಿ ೧ ಗಜಪುಟವಿಡಲು ಭಸ್ಮವಾಗುವುದು.

೭ನೇ ವಿಧ—ಶುದ್ಧಿಮಾಡಿದ ಹವಳವನ್ನು ಲೋಳೆಸರದ ಪಟ್ಟೆಯಲ್ಲಿ ಇಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೧ ಮೊಳ ಪುಟವಿಡಲು ಭಸ್ಮವಾಗುವುದು.

೮ನೇ ವಿಧ—ಶುದ್ಧಿಮಾಡಿದ ಹವಳವನ್ನು ಅಚ್ಚೆಸೊಪ್ಪು (ತೆಲುಗಿನಲ್ಲಿ ರಡ್ಡಿವಾರಿನಾನಬೀಮು ಆಕು) ಕುಟ್ಟಿ ನುಣ್ಣಗೆ ಅರೆದು ಹವಳಕ್ಕೆ ಕವಚಕೊಟ್ಟು ಶ್ರಾವೆಯಲ್ಲಿರಿಸಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೧ ಮೊಳ ಪುಟವಿಡಲು ಭಸ್ಮವಾಗುವುದು. ಇದೇರೀತಿಯಾಗಿ ಇನ್ನೊಂದುಪುಟ ಇಟ್ಟುಕೊಳ್ಳುವುದು.

## ಪ್ರವಾಳ ಮತ್ತು ಕರ್ಪೂರ ಶಿಲಾಜಿತು ಭಸ್ಮ.

ಶುದ್ಧಿಮಾಡಿದ ಹವಳ ೩ ತೊಲೆ ಶುದ್ಧಿಮಾಡಿದ ಕರ್ಪೂರ ಶಿಲಾಜಿತು ೩ ತೊಲೆ ಇವು ಎರಡು ಖಲ್ವದಲ್ಲಿ ಹಾಕಿ ಮಂಗರವಳ್ಳಿಯ ರಸದಲ್ಲಿ ೪ ಜಾವ ಅರೆದು ಬಿಲ್ಲೆಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಒಂದುಮೊಳ ಪುಟವಿಟ್ಟು ತೆಗೆದುಕೊಳ್ಳುವದು. ಔಷಧವನ್ನು ಖಲ್ವದಲ್ಲಿ ಹಾಕಿ ಹುಣಿಸೇಸೊಪ್ಪಿನ ರಸದಿಂದ ೨ ಜಾವ ಅರೆದು ಬಿಲ್ಲೆಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಂದುಮೊಳ ಪುಟವಿಟ್ಟು ತೆಗದುಕೊಂಡರೆ ಭಸ್ಮವಾಗುವದು. ಹಸುವಿನ ಬೆಣ್ಣೆಯಲ್ಲಿ ೪ ಗುರುಗಂಜಿಯಷ್ಟು

ಬೆಳಿಗ್ಗೆ ಸಾಯಂಕಾಲ ೭ ದಿವಸ ಕೊಡುವುದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕ್ಷಯ, ಮಧುಮೇಹ, ಅರಸಿನ ಮೇಹ ಗುಣ ವಾಗುವುದು. ಜೇನುತುಪ್ಪದಲ್ಲಿ ಕೊಟ್ಟರೆ ಕಜ್ಜಿ, ಗುಲ್ಮವಾಯು ಗುಣವಾಗು ವುದು.

## ಮೌಕ್ತಿಕ ಭಸ್ಮ.

ಒಳ್ಳೇ ಮುತ್ತುಗಳನ್ನು ಒಂದು ಬಟ್ಟೆಯಲ್ಲಿ ಗಂಟುಕಟ್ಟಿ ಒಂದು ಮಡಕೆ ಯಲ್ಲಿ ಅಗನೇಸೊಪ್ಪಿನ ರಸವನ್ನು ಹಾಕಿ ಮೂರು ಘಂಟೆ ಹೊತ್ತು ಡೋಲಾ ಯಂತ್ರದಲ್ಲಿ ಸ್ವೇದನಮಾಡಲು ಶುದ್ಧಿಯಾಗುವುದು.

ಮೌಕ್ತಿಕ ಭಸ್ಮವಿಧಾನ—೧ನೇ ವಿಧ — ಶುದ್ಧಿಮಾಡಿದ ಮುತ್ತುಗ ಳನ್ನು ಚೂರ್ಣಮಾಡಿ ರಾಮುಗುಳ್ಳದ ಹಣ್ಣಿನ ರಸದಿಂದ ಅರದು ಬಿಲ್ಲೆಮಾಡಿ ಒಣಗಿಸಿ ಹಣತೆಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಮೂರು ಲಘುವುಟಗಳನ್ನು ಇಡಲು ಭಸ್ಮವಾಗುವುದು.

೨ನೇ ವಿಧ— ಶುದ್ಧಿಮಾಡಿದ ಮುತ್ತುಗಳನ್ನು ಹಸುವಿನ ಹಾಲಿನಲ್ಲಿ ಅರದು ಬಿಲ್ಲೆಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಮೂರು ಲಘುಪುಟಗಳನ್ನು ಇಡಲು ಭಸ್ಮವಾಗುವುದು.

೩ನೇ ವಿಧ—ಮುತ್ತುಗಳನ್ನು ಬಿಳೇವುಪ್ಪಿಹಣ್ಣಿನ ರಸದಲ್ಲಿ ಅರದು ಬಿಲ್ಲೆ ಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಮೂರು ಲಘುಪುಟಗಳನ್ನು ಇಡಲು ಭಸ್ಮವಾಗುವುದು. ಹೊತ್ತಿಗೆ ೧ ಭತ್ತದ ಕಾಳು ತೂಕದಿಂದ ೩ ಭತ್ತದಕಾಳು ತೂಕದವರಿವಿಗು ಕೊಡಬೇಕು.

ಇದರ ಗುಣ — ವಾಜೀಕರಣ, ನೇತ್ರಗಳಿಗೆ ಹಿತಕಾರಿ, ಶೀತವೀರ್ಯ ವುಳ್ಳುದು, ಶ್ವಾಸಕಾಸ, ಕ್ಷಯ ಇವುಗಳನ್ನು ಪರಿಹರಿಸುವುದು. ಮತ್ತು ಕ್ಷಯ ರೋಗದಿಂದ ಕ್ಷೀಣಿಸಿದ ಶರೀರಕ್ಕೆ ಪುಷ್ಟಿಯನ್ನುಂಟುಮಾಡುವುದು.

## ಶುಕ್ತಿ ಭಸ್ಮ-ಅಂದರೆ ಮುತ್ತಿನಚಿಪ್ಪು ಭಸ್ಮ.

ಮುತ್ತಿನಚಿಪ್ಪುಗಳನ್ನು ತುಂಡುತುಂಡುಗಳಾಗಿ ಮಾಡಿ ಬಿಸಿನೀರಿನಲ್ಲಿ ತೊಳದು ನಿಂಬೇಹಣ್ಣಿನ ರಸದಲ್ಲಿ ೮ ಜಾವ ನೆನೆಯಿಟ್ಟು ತೆಗೆದು ಬಿಸಿನೀರಿನಿಂದ ತೊಳದು ಖಲ್ವದಲ್ಲಿ ಹಾಕಿ ಲೋಳಿಸರದ ರಸದಲ್ಲಿ ಅರದು ಬಿಲ್ಲೆಮಾಡಿ ಒಣಗಿಸಿ ೫೦ ಬೆರಣಿಯಲ್ಲಿ ಪುಟ ಇಡುವುದು. ಇದೇರೀತಿಯಾಗಿ ನಾಲ್ಕು ಪುಟವಿಡಲು ನಿರ್ಮಲವಾದ ಭಸ್ಮವಾಗುವುದು. ಇದನ್ನು ೨ ಭತ್ತದಕಾಳು ಮೊದಲು ೪ ಭತ್ತದಕಾಳು ತೂಕದವರಿವಿಗು ದಿನ ಎರಡುಹೊತ್ತು ೫-೭ ದಿನಗಳು ಬೆಣ್ಣೆ, ತುಪ್ಪ ಅನುಪಾನಗಳಲ್ಲಿ ಕೊಡಬೇಕು. ಇದರಿಂದ ಗುಣ--ಕಫಹರ, ಶೂಲೆ, ಹೃದಯ ರೋಗ, ಮಂದಾಗ್ನಿ, ಕಾಸ, ಶ್ವಾಸ ಇವು ಗುಣವಾಗುವವು. ಅಜೀರ್ಣಶೂಲೆಗೆ

ಹಿಂಗುವಾಷ್ಟಕ ಚೂರ್ಣದೊಡನೆ ಸೇರಿಸಿ ಸೇವಿಸುವುದು. ಕಾಸಶ್ವಾಸಗಳಿಗೆ ವೀಳೆಯದೆಲೆಯ ರಸದೊಡನೆ ಸೇವಿಸುವುದು.

## ಶೃಂಗಿ ಭಸ್ಮ.

೧ನೇ ವಿಧ— ದುಪ್ಪೇಕೊಂಬನ್ನು ತುಂಡುಗಳು ಮಾಡಿ ಶೀಗೇಕಾಯಿ ನೀರಿನಲ್ಲಿ ಚನ್ನಾಗಿ ತೊಳದು ನಿಂಬೇಹಣ್ಣಿನ ರಸದಲ್ಲಿ ೩ ದಿನ ನೆನೆಹಾಕಿ ಹಸೇ ದೇವದಾರಿಸೊಪ್ಪು ತಂದು ಚನ್ನಾಗಿ ಕುಟ್ಟಿ ದುಪ್ಪೆಕೊಂಬುಗಳಿಗೆ ಕವಚಕೊಟ್ಟು ಅದರಮೇಲೆ ಬಿಳೇಬಟ್ಟೆ ಸುತ್ತಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಕಾಡುಬೆರಣಿ ಯಿಂದ ಗಜಪುಟ ಇಟ್ಟು ತೆಗೆದುಕೊಳ್ಳುವದು. ಅದನ್ನು ಖಲ್ವದಲ್ಲಿ ಅರದು ಇಟ್ಟುಕೊಂಡು ಹೊತ್ತಿಗೆ ೧ ಗುರುಗಂಜಿಗಾತ್ರ ಜೇನುತುಪ್ಪದಲ್ಲಿ ಕಲಸಿ ಕೊಡು ವುದು. ಹೀಗೆ ಬೆಳಿಗ್ಯೆ ಸಾಯಂಕಾಲ ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಮಸ್ತವಾಯುಗಳು ನಿವಾರಣೆ ಯಾಗುವುದು.

೨ನೇ ವಿಧ—ಶುದ್ಧಿಮಾಡಿದ ದುಪ್ಪೇಕೊಂಬನ್ನು ಸಣ್ಣ ತುಂಡುಗಳಾಗಿ ಮಾಡಿ ಒಂದು ಮಗೆಯಲ್ಲಿ ಹಾಕಿ ಮುಚ್ಚಳಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲು ಮಾಡಿ ಒಣಗಿಸಿ ಒಂದು ಗಜಪುಟವಿಟ್ಟು ಸಾಂಗಶೀತಲವಾದನಂತರ ತೆಗೆದು ಖಲ್ವದಲ್ಲಿ ಹಾಕಿ ಲೋಳೆಸರದ ರಸದಿಂದ ಅರೆದು ಬಿಲ್ಲೆಮಾಡಿ ಒಣಗಿಸಿ ಹಣತೆ ಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಒಂದು ಗಜಪುಟವಿಟ್ಟರೆ ಭಸ್ಮವಾಗುವುದು.

೩ನೇ ವಿಧ—ದುಪ್ಪೇಕೊಂಬನ್ನು ಸಣ್ಣ ತುಂಡುಗಳಾಗಿ ಮಾಡಿ ಒಂದು ಮಗೆಯಲ್ಲಿ ಹಾಕಿ ಗೋಮೂತ್ರದಲ್ಲಿ ಒಂದುದಿನ ನೆನೆಹಾಕಿ ತೆಗೆದು ನೀರಿನಿಂದ ತೊಳೆದುಕೊಂಡು ಉತ್ತರೇಣಿಸೊಪ್ಪನ್ನು ಅರದು ಉಂಡೆಮಾಡಿ ಇದರ ಮಧ್ಯ ದಲ್ಲಿ ತುಂಡುಗಳನ್ನು ಇಟ್ಟು ಕೆಮ್ಮಣ್ಣುಬಟ್ಟೆಯಿಂದ ಏಳು ಚೀಲುಮಾಡಿ ಒಣ ಗಿಸಿ ಗಜಪುಟ ಹಾಕಲು ಭಸ್ಮವಾಗುವುದು.

೪ನೇ ವಿಧ—ಒಂದು ಗಜ ಆಳವಾದ ಹಳ್ಳವನ್ನು ತೋಡಿ ಅರ್ಧಭಾಗ ಬೆರಣಿಗಳನ್ನು ತುಂಬಿ ಅದರಮೇಲೆ ಒಂದುವರಸೆ ಹಣ್ಣುಯಕ್ಕದ ಯಲೆಗಳನ್ನು ಹಾಸಿ ಅದರಮೇಲೆ ಒಂದುವರಸೆ ದುಪ್ಪೇಕೊಂಬಿನ ತುಂಡುಗಳನ್ನು ಹಾಸಿ ಅದರಮೇಲೆ ಪುನಹ ಎಕ್ಕದ ಯಲೆಗಳನ್ನು ಹಾಸಿ ಮತ್ತೊಂದುವರಸೆ ದುಪ್ಪೇ ಕೊಂಬಿನ ತುಂಡುಗಳನ್ನು ಹಾಸುವದು. ಇದೇರೀತಿಯಾಗಿ ಒಂದುವರಸೆಯಲೆ, ಒಂದುವರಸೆ ತುಂಡುಗಳನ್ನು ಹಾಸಿ ಉಳಿದ ಬೆರಣಿಗಳನ್ನು ಅದರಮೇಲೆ ಮುಚ್ಚಿ ಪುಟಯಿಟ್ಟರೆ ಭಸ್ಮ ಆಗುವುದು. ಸಾಂಗಶೀತಲವಾದನಂತರ ತೆಗೆದು ೧ ಗುರು ಗಂಜಿ ಪ್ರಮಾಣ ಹಸುವಿನಬೆಣ್ಣೆ ಸಕ್ಕರೆಯೊಡನೆ ಸೇವಿಸಿದರೆ ಮೇಹ ಗುಣ ವಾಗುವುದು.

೫ನೇ ವಿಧ—ಒಂದುಮೊಳ ಆಳವೂ, ಒಂದು ಮೊಳ ಉದ್ದವೂ, ಒಂದು ಮೊಳ ಅಗಲವೂ ಉಳ್ಳ ಹಳ್ಳವನ್ನು ತೆಗೆದು ಅರ್ಧಭಾಗದವರಿಗೆ ಹೊಂಗೆ ಕಟ್ಟಿಗೆಯನ್ನು ತುಂಬಿ, ಎರಡುಪಡಿ ಗೇರುಬೀಜ ಕತ್ತರಿಸಿ ಅರ್ಧವನ್ನು ಆ ಕಟ್ಟಿಗೆಯ ಮೇಲೆ ಹಾಸಿ ಅದರ ಮಧ್ಯದಲ್ಲಿ ಶೃಂಗಿಯನ್ನಿಟ್ಟು ಮೇಲೆ ಗೇರುಬೀಜ ಮುಚ್ಚಿ ಅದರಮೇಲೆ ಹೊಂಗೆ ಕಟ್ಟಿಗೆ ಮುಚ್ಚಿ ಪುಟಹಾಕುವುದು. ಅಮೇಲೆ ಶೃಂಗಿ ತೆಗೆದು ಖಲ್ವದಲ್ಲಿ ಹಾಕಿ ಹಸುವಿನ ಹಾಲಿನಿಂದ ಅರೆದು ಬಿಲ್ಲೆಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೩೦ ಬೆರಣಿಗಳಲ್ಲಿ ಪುಟ ಹಾಕುವುದು. ಬೆಳ್ಳಗೆ ಭಸ್ಮವಾಗುವುದು. ಬೆಣ್ಣೆ ಅಥವ ತುಪ್ಪದ ಅನುಪಾನ ದೊಡನೆ ಹೊತ್ತಿಗೆ ಹಾಗತೂಕ, ಅಡ್ಡತೂಕ ಕೊಡುವುದು. ಪಥ್ಯ ಹಸುವಿನ ಹಾಲು ಅನ್ನ ಅಥವಾ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಮಸ್ತ ಮೇಹಗಳು ಗುಣವಾಗುವುವು.

೬ನೇ ವಿಧ—ಶುದ್ಧಿಮಾಡಿದ ದುಪ್ಪೆಕೊಂಬನ್ನು ಸಣ್ಣಗೆ ತುಂಡುಗಳ ಮಾಡಿ, ಒಂದು ಮಡಕೆಯಲ್ಲಿ ಹುಣಿಸೇಸೊಪ್ಪು ಚನ್ನಾಗಿ ಕುಟ್ಟಿ ಹಾಕಿ ಅದರ ಮೇಲೆ ದುಪ್ಪೆಕೊಂಬಿನ ತುಂಡುಗಳನ್ನು ಹಾಕಿ ಅದರಮೇಲೆ ಹುಣಿಸೇಸೊಪ್ಪು ಚನ್ನಾಗಿ ಕುಟ್ಟಿಹಾಕಿ ಘಟ್ಟಿಯಾಗಿ ಅದಿಮಿ ಮೇಲೆ ಮುಚ್ಚಳಮುಚ್ಚಿ ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಒಣಗಿಸಿ ೧ ಗಜಪುಟವಿಟ್ಟರೆ ಭಸ್ಮವಾಗುವುದು. ೧ ಆಣೆ ತೂಕ ಭಸ್ಮವನ್ನು ಹಸುವಿನ ತುಪ್ಪದಲ್ಲಿ ಆಗಲಿ ಹಸುವಿನ ಬೆಣ್ಣೆಯಲ್ಲಿ ಆಗಲಿ ೨ ಹೊತ್ತು ೭ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿ ಸಾರು ಅನ್ನ. ಇದರಿಂದ ಮೇಹರೋಗ, ಹೃದ್ರೋಗ ಗುಣವಾಗುವವು.

೭ನೇ ವಿಧ—ಶುದ್ಧಿಮಾಡಿದ ಶೃಂಗಿಯ ತುಂಡುಗಳಿಗೆ, ಚಂಡುಮಲ್ಲಿಗೆ ಸೊಪ್ಪನ್ನು ಅರೆದು ಕವಚಕೊಟ್ಟು ಕೆಮ್ಮಣ್ಣುಬಟ್ಟೆಯಲ್ಲಿ ಸುತ್ತಿ ಒಂದುಮೊಳ ಪುಟಹಾಕಲು ಭಸ್ಮವಾಗುವುದು ಹೊತ್ತಿಗೆ ೨ ಗುರುಗಂಜಿತೂಕ ಭಸ್ಮವನ್ನು ಅರ್ಧತೊಲೆ ಹಸುವಿನ ಬೆಣ್ಣೆಯಲ್ಲಿ ಕಲಸಿ ಬೆಳಿಗ್ಯೆ ಸಾಯಂಕಾಲ ೧೦-೧೫ ದಿನ ಕೊಡುವುದು. ಇದರಿಂದ ಉಷ್ಣರೋಗಗಳು, ದಾಹ, ಮೇಹಸಮ್ಮಂಧವಾದ ಉಷ್ಣಗಳು ಗುಣವಾಗುವುವು.

೮ನೇ ವಿಧ—ಶುದ್ಧಿಮಾಡಿದ ದುಪ್ಪೆಕೊಂಬನ್ನು ಸಣ್ಣ ತುಂಡುಗಳಾಗಿ ಮಾಡಿ ಪುಲ್ಲಂಪುರಸಿಸೊಪ್ಪು ಅರದು ಅದರಲ್ಲಿ ಶೃಂಗಿಯನ್ನು ಇಟ್ಟು ಉಂಡೆಮಾಡಿ ಮೇಲೆ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಗಜಪುಟವನ್ನು ಇಟ್ಟರೆ ಭಸ್ಮವಾಗುವುದು. ಹೊತ್ತಿಗೆ ಹಣತೂಕ ಭಸ್ಮವನ್ನು ತುಪ್ಪದಲ್ಲಿ ಕಲಸಿ ಕೊಡುವುದು. ಈರೀತಿ ೭ ದಿವಸ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ಕೊಡುವುದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಮೇಹ ಗುಣವಾಗುವುದು.

## ಸಾರಗದ ಕೊಂಬು ಭಸ್ಮ.

೬ ತೊಲಿ ಸಾರಗದ ಕೊಂಬುಗಳನ್ನು ಶೀಳಿ ದಬ್ಬೆಗಳಂತೆ ಮಾಡಿಕೊಂಡು ನಿಂಬೇಹಣ್ಣಿನ ರಸದಲ್ಲಿ ೧ ದಿನ ನೆನೆಹಾಕಿ ಬೆಳಿಗ್ಯೆ ಈಚೆಗೆ ತೆಗೆದುಕೊಂಡು ಆವರಿಕೆಸೊಪ್ಪು ಸುಮಾರು ತೆಂಗಿನಕಾಯಿನಷ್ಟು ಕುಟ್ಟಿ ಮಗೆಯಲ್ಲಿ ಅರ್ಧ ಸೊಪ್ಪು ತುಂಬಿ ಅದರಮೇಲೆ ಸಾರಗದ ಕೊಂಬು ಇಟ್ಟು ಪುನಹ ಅರ್ಧ ಸೊಪ್ಪು ಗಟ್ಟಿಯಾಗಿ ತುಂಬಿ ಬಾಯಿಗೆ ಮುಚ್ಚಳ ಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ೧ ಗಜಪುಟವನ್ನು ಇಟ್ಟರೆ ಬೆಳ್ಳಗೆ ಭಸ್ಮ ಆಗುತ್ತೆ. ತಂಗಳನ್ನದಲ್ಲಿ ಹಸೀ ಹಸುವಿನ ಹಾಲು ಹಾಕಿ ಮೇಲ್ಕಂಡ ಭಸ್ಮ ೧ ಹಣತೂಕ ಬೆರಸಿ ಊಟಮಾಡಬೇಕು. ಇದೇರೀತಿಯಾಗಿ ಮಧ್ಯಾಹ್ನ ಸಹ ಊಟಮಾಡಬೇಕು. ರಾತ್ರಿಗೆ ತೊಗರೀಬೇಳೆ ಸಿಹಿಸಾರು ಅನ್ನ. ಇದೇಮೇರೆಗೆ ೩ ದಿನ ಬಿಟ್ಟು ೧ ದಿನ, ಪುನಹ ೩ ದಿನ ಬಿಟ್ಟು ೧ ದಿನ ಈ ರೀತಿ ಮೂರಾವರ್ತಿ ಕೊಡಬೇಕು. ಇದರಿಂದ ಅಸಾಧ್ಯವಾದ ಬಹುಮೂತ್ರ, ನೀರಿನದಾಹ ಸಹ ಗುಣವಾಗುತ್ತೆ.

## ವರಾಟಿಕೆ ಭಸ್ಮ ಅಂದರೆ ಕವಡೆ ಭಸ್ಮ.

೧ನೇ ವಿಧ—ಶುದ್ಧಿಮಾಡಿದ ಕವಡೆಗಳನ್ನು ಗಾಜಿನ ಬಟ್ಟಲಿನಲ್ಲಿಟ್ಟು ನಿಂಬೇಹಣ್ಣಿನ ರಸ ಹಾಕಿ ಬಿಸಲಿನಲ್ಲಿ ಇಟ್ಟು ರಸವೆಲ್ಲ ಒಣಗಿಹೋದನಂತರ ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ಅರೆದು ಬಿಲ್ಲೆಮಾಡಿ ಒಣಗಿಸಿ ಹಣತೆಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಒಂದು ಗಜಪುಟವಿಡಲು ಭಸ್ಮವಾಗುವುದು. ಈ ಭಸ್ಮವನ್ನು ತೆಗೆದುಕೊಳ್ಳುವ ಪ್ರಮಾಣ:—೨ ಭತ್ತದಕಾಳು ಮೊದಲು ೫ ಭತ್ತದಕಾಳು ತೂಕದವರಿವಿಗು ಕೊಡಬೇಕು. ಇದರಿಂದ ಕಾಸಶ್ವಾಸ, ನೇತ್ರರೋಗ, ಶೂಲೆ, ಗುಲ್ಮೋದರ ಇವುಗಳು ಗುಣವಾಗುವುದು.

೨ನೇ ವಿಧ—ಶುದ್ಧಿಮಾಡಿದ ಕವಡೆಗಳನ್ನು ಒಂದು ಸೀಸೆಯಲ್ಲಿ ಹಾಕಿ ಅದು ಮುಣುಗುವಷ್ಟು ಶೀಮೆ ಕಾಡಿ (ವಿನಿಗರ್) ಹಾಕಿ ೩ ದಿನ ಬಿಸಲಿನಲ್ಲಿಟ್ಟರೆ ಭಸ್ಮವಾಗುವುದು. ಇದನ್ನು ಖಲ್ವದಲ್ಲಿ ಹಾಕಿ ಅರೆದು ಇಟ್ಟುಕೊಂಡು ಹೊತ್ತಿಗೆ ೨ ಗುರುಗಂಜಿಯಷ್ಟು ಭಸ್ಮವನ್ನು ಜೇನುತುಪ್ಪದಲ್ಲಿ ಕಲಸಿಕೊಡುವುದು. ಹೀಗೆ ಬೆಳಿಗ್ಯೆ ಸಾಯಂಕಾಲ ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಜ್ವರದಗಡ್ಡೆ ಗುಣವಾಗುವುದು.

## ಕಪ್ಪೆಚಿಪ್ಪಿನ ಭಸ್ಮ.

ಸೀನೀರು ಕೆರೆಗಳಲ್ಲಿರತಕ್ಕ ಕಪ್ಪೆಚಿಪ್ಪುಗಳನ್ನು ಬಿಸಿನೀರಿನಿಂದ ಚನ್ನಾಗಿ ತೊಳೆದು ತುಂಡುತುಂಡುಗಳಾಗಿ ಹೊಡೆದು ಒಂದು ಪಿಂಗಾಣಿ ಪಾತ್ರೆಯಲ್ಲಿ ಹಾಕಿ ಅದು ಮುಳುಗುವಷ್ಟು ನಿಂಬೇಹಣ್ಣಿನ ರಸ ಹಾಕಿ ಒಂದುಜಾವ ಇರಿಸಿ ತೆಗೆದು ಬಿಸಿನೀರಿನಲ್ಲಿ ತೊಳೆದು ಬಿಸಲಿನಲ್ಲಿ ಒಣಗಿಸಿ ಒಂದು ಮಗೆಯಲ್ಲಿ ಹಾಕಿ ಮುಚ್ಚಳ

ಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೫೦ ಬೆರಣಿಗಳಲ್ಲಿ ಪುಟ ಇಟ್ಟು ಸಾಂಗಶೀತಲವಾದನಂತರ ತೆಗೆದು ಖಲ್ವದಲ್ಲಿ ಹಾಕಿ ಇದಕ್ಕೆ ಸಮ ಶುದ್ಧಿಮಾಡಿದ ನವಾಸಾಗರವನ್ನೂ, ಸೂರ್ತಿಬೆಳಗಾಟವನ್ನೂ ಬೆರಸಿ ಲೋಳಿಸರದ ರಸದಲ್ಲಿ ಅರೆದು ಬಿಲ್ಲೆಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೫೦ ಬೆರಣಿಗಳಲ್ಲಿ ಪುಟವಿಡಲು ಭಸ್ಮವಾಗುವುದು. ಈ ಭಸ್ಮವನ್ನು ಅರ್ಧ ಗುರುಗಂಜಿ ಪ್ರಮಾಣ ಅನುಪಾನವಿಶೇಷಗಳಲ್ಲ ಕೊಡಲು ವಾತಜ್ವರ, ಶೀತಜ್ವರ, ಕಂಠವಾಯು ಇವುಗಳು ಗುಣವಾಗುವುವು. ಮತ್ತು ಆಕಳತುಪ್ಪದಿಂದ ಸೇವಿಸುವದರಿಂದ ಹೊಟ್ಟೆಯಲ್ಲಿರುವ ಜ್ವರದಗಡ್ಡೆ (ಪ್ಲೀಹ), ಮಹೋದರ ಇವುಗಳು ಸಹ ಗುಣವಾಗುವುದು. ರೋಗಕ್ಕೆ ತಕ್ಕಹಾಗೆ ಪತ್ಯ ಇಡಬೇಕು.

## ಶಂಖು ಭಸ್ಮ.

೧ನೇ ವಿಧ—ಹಾಲುಶಂಖುವೊಂದನ್ನು ತುಂಡುಗಳಾಗಿಮಾಡಿ ಅದಕ್ಕೆ ನಾರಂಬೇಳೆನೊಪ್ಪು ತಂದು ಕುಟ್ಟಿ ಕವಚಮಾಡಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೧ ಗಜಪುಟ ಹಾಕಲು ಭಸ್ಮವಾಗುವುದು. ಹೊತ್ತಿಗೆ ೧ ಹಣತೂಕ ಭಸ್ಮವನ್ನು ಜೀರಿಗೆ ಕಷಾಯದಲ್ಲಿ ಕೊಡಬೇಕು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಉಷ್ಣವಾಯುಗಳು, ಹೊಟ್ಟೆಕಚ್ಚು, ಹೊಟ್ಟೆಶೂಲೆ, ಹೊಟ್ಟೆನೋವು, ಹೊಕ್ಕಳದಲ್ಲಿ ಹಿಡಿದುಕೊಳ್ಳುವುದು ಗುಣವಾಗುತ್ತೆ.

೨ನೇ ವಿಧ—ಹಾಲುಶಂಖುವೊಂದನ್ನು ತುಂಡುಗಳಾಗಿಮಾಡಿ ನಿಂಬೇಹಣ್ಣಿನ ರಸದಲ್ಲಿ ೧ ದಿನ ನೆನಸಿ ಖಲ್ವದಲ್ಲಿ ಹಾಕಿ ಚುರುಚುರಿಕೆನೊಪ್ಪಿನ ರಸದಲ್ಲಿ ಮರ್ದಿಸಿ ಬಿಲ್ಲೆಮಾಡಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೧ ಮೊಳ ಪುಟಹಾಕಲು ಭಸ್ಮವಾಗುವುದು. ಹೊತ್ತಿಗೆ ೧ ಹಣತೂಕ ಭಸ್ಮವನ್ನು ನಿಂಬೇಹಣ್ಣಿನ ರಸದಲ್ಲಿ ಕೊಡಬೇಕು ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಹೊಟ್ಟೆಶೂಲೆ, ಹೊಟ್ಟೆನೋವು ಗುಣವಾಗುವುದು.

೩ನೇ ವಿಧ—ಹಾಲುಶಂಖನ್ನು ತುಂಡುಗಳಾಗಿ ಮಾಡಿ ನಿಂಬೇಹಣ್ಣಿನ ರಸದಲ್ಲಿ ಬೇಯಿಸಿ ಗರುಗದಸೊಪ್ಪು ಕುಟ್ಟಿ ಶಂಖಿಗೆ ಕವಚಕೊಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೧ ಮೊಳ ಪುಟಹಾಕಿ ತೆಗೆದುಕೊಂಡು ಇದನ್ನು ಖಲ್ವದಲ್ಲಿ ಹಾಕಿ ನುಣ್ಣಗೆ ಅರೆದು ಇದಕ್ಕೆ ಸಮ ಸೈಂಧವಲವಣ ಬೆರಸಿ ನಿಂಬೇಹಣ್ಣಿನ ರಸದಲ್ಲಿ ಅರದು ಬಿಲ್ಲೆಮಾಡಿ ಒಣಗಿಸಿ ಹಣತೆಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ೧ ಮೊಳ ಪುಟಹಾಕಿ ತೆಗೆದುಕೊಂಡು ಪುನಃ ಖಲ್ವದಲ್ಲಿ ಹಾಕಿ ಕೆಂಪು ಅಗಸೇಹುವ್ವಿನ ರಸದಲ್ಲಿ ಅರದು ಬಿಲ್ಲೆಮಾಡಿ ಒಣಗಿಸಿ ಹಣತೆ

ಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೧ ವೊಳ ಪುಟಹಾಕುವುದು. ಇದೇರೀತಿಯಾಗಿ ನುಗ್ಗೇಬೇರಿನ ರಸದಲ್ಲಿ ೧ ಪುಟ, ಚಿತ್ರಮೂಲದ ರಸದಲ್ಲಿ ೧ ಪುಟ ಹಾಕಲು ಭಸ್ಮವಾಗುವುದು. ಹೊತ್ತಿಗೆ ೧ ಹಣತೂಕ ಭಸ್ಮವನ್ನು ಹೇರಳೆಹಣ್ಣಿನ ರಸದಲ್ಲಿ ಕೊಡಬೇಕು. ಈರೀತಿ ಬೆಳಿಗ್ಗೆ ಸಾಯಂಕಾಲ ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಕಲ ಶೂಲೆಗಳು, ಹೊಟ್ಟೆನೋವು ಗುಣವಾಗುವುದು.

೪ನೇ ವಿಧ—ಹಾಲುಶಂಖನ್ನು ತುಂಡುಗಳಾಗಿ ಮಾಡಿ ನಿಂಬೇಹಣ್ಣಿನ ರಸದಲ್ಲಿ ಬೇಯಿಸಿ ಹುಣಿಸೇಸೊಪ್ಪು ತಂದು ಕುಟ್ಟಿ ತುಂಡುಗಳಿಗೆ ಕವಚಕೊಟ್ಟು ಕೆಮ್ಮಣ್ಣುಬಟ್ಟೆ ಚೀಲುವಮಾಡಿ ಒಣಗಿಸಿ ೧ ವೊಳ ಪುಟಹಾಕಿ ತೆಗೆದು ಖಲ್ವದಲ್ಲಿ ಹಾಕಿ ಮುಂಡೆಗಳ್ಳಿ ಹಾಲುಹಾಕಿ ೧ ಜಾವ ಅರೆದು ಬಿಲ್ಲೆಮಾಡಿ ಮುಚ್ಚಳದಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುವಮಾಡಿ ೧ ವೊಳ ಪುಟಹಾಕಬೇಕು. ಈ ಭಸ್ಮವನ್ನು ತೆಗೆದು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲಿ ೧ ಜಾವ ಮರ್ದನೆ ಮಾಡಿ ಬಿಲ್ಲೆಮಾಡಿ ಒಣಗಿಸಿ ಮುಚ್ಚಳದಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುವಮಾಡಿ ೧ ವೊಳ ಪುಟಹಾಕಲು ಜಸ್ಮವಾಗುವುದು ಈ ಭಸ್ಮ ೧ ಹಣತೂಕ ನಿಂಬೇಹಣ್ಣಿನ ರಸದಲ್ಲಿಯಾಗಲಿ, ಹೇರಳೆಹಣ್ಣಿನ ರಸದಲ್ಲಿಯಾಗಲಿ ಕೊಡುವುದು. ಈರೀತಿ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದರಿಂದ ಸಕಲ ಶೂಲೆ, ಹೊಟ್ಟೇನೋವು ಗುಣವಾಗುವುದು.

೫ನೇ ವಿಧ—ಹಾಲುಶಂಖನ್ನು ತುಂಡುಗಳಾಗಿ ಮಾಡಿ ನಿಂಬೇಹಣ್ಣಿನ ರಸದಲ್ಲಿ ಬೇಯಿಸಿ ಶುದ್ಧಿಮಾಡಿಕೊಂಡು ರಾಮುಗುಳ್ಳದಸಮೂಲ ಕುಟ್ಟಿ ಶಂಖಿಗೆ ಕವಚ ಕೊಟ್ಟು ಕೆಮ್ಮಣ್ಣುಬಟ್ಟೆ ಚೀಲುವಮಾಡಿ ಒಣಗಿಸಿ ೧ ವೊಳ ಪುಟಹಾಕಲು ಭಸ್ಮವಾಗುವುದು. ಈ ಭಸ್ಮವನ್ನು ತೆಗೆದುಕೊಂಡು ಖಲ್ವದಲ್ಲಿ ಹಾಕಿ ಪುಲ್ಲಂಪುರಸಿ ಸೊಪ್ಪಿನ ರಸದಲ್ಲಿ ಅರದು ಬಿಲ್ಲೆಮಾಡಿ ಒಣಗಿಸಿ ಹಣತೆಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುವಮಾಡಿ ಒಣಗಿಸಿ ೧ ವೊಳ ಪುಟಹಾಕಲು ಭಸ್ಮವಾಗುವುದು. ನಿಂಬೇಹಣ್ಣಿನ ರಸ ಕಾಲುತೊಲೆ, ಲೋಳೆಸರದ ಬೇರು ತಂದು ಕೆಮ್ಮಣ್ಣುಬಟ್ಟೆ ಸುತ್ತಿ ಬೆಂಬೂದಿಯಲ್ಲಿಟ್ಟು ತೆಗೆದು ಕುಟ್ಟಿ ರಸತೆಗದದ್ದು ಕಾಲುತೊಲೆ ಈ ಎರಡು ರಸಗಳನ್ನು ಸೇರಿಸಿ ಇದಕ್ಕೆ ಮೇಲ್ಕಂಡ ಶಂಖುಭಸ್ಮ ೨ ಗುರುಗಂಜಿತೂಕ ಬೆರಸಿ ತೆಗೆದುಕೊಳ್ಳುವುದು. ಈರೀತಿ ಬೆಳಿಗ್ಗೆಹೊತ್ತು ೭ ದಿವಸ ಕೊಡಬೇಕು. ಇದರಿಂದ ಸಮಸ್ತ ಶೂಲೆಗಳು ಗುಣವಾಗುವುದು.

೬ನೇ ವಿಧ—ಹಾಲುಶಂಖನ್ನು ನಿಂಬೇಹಣ್ಣಿನ ರಸದಲ್ಲಿ ಬೇಯಿಸಿ ಶುದ್ಧಿಮಾಡಿಕೊಂಡು ಕೆಂಪುವುತ್ತರೇಣಿಸೊಪ್ಪು ಅರದು ಕವಚಕೊಟ್ಟು ಕೆಮ್ಮಣ್ಣುಬಟ್ಟೆ ಚೀಲುವಮಾಡಿ ಒಣಗಿಸಿ ೧ ಗಜಪುಟ ಹಾಕಿ ತೆಗೆದುಕೊಂಡು ನಂತರ ಗರು

ಗದಸೊಪ್ಪಿನ ರಸದಲ್ಲಿ ಮರ್ದಿಸಿ ಬಿಲ್ಲೆಮಾಡಿ ಹಣತೆಗಳಲ್ಲಿಟ್ಟು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಒಣಗಿಸಿ ೧ ಗಜಪುಟ ಹಾಕಲು ಭಸ್ಮವಾಗುವುದು. ಹೊತ್ತಿಗೆ ೧ ಹಣತೂಕ ಭಸ್ಮವನ್ನು ನಿಂಬೇಹಣ್ಣಿನ ರಸದಲ್ಲಿ ಕೊಡುವುದು ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದರಿಂದ ಸಕಲ ಶೂಲೆಗಳು, ಹೊಟ್ಟೆನೋವು ಗುಣವಾಗುವುದು.

# ಹದಿನಾಲ್ಕನೆಯ ಅಧ್ಯಾಯ.

## ಸಿಂಧೂರಗಳು.

ರಸ ಸಿಂಧೂರ—ಶುದ್ಧಿಮಾಡಿದ ಪಾದರಸ ೨ ಪಲ, ಶುದ್ಧಿಮಾಡಿದ ಹೆವಳಸರಿ ಗಂಧಕ ॥ ಪಲ, ನವಾಸಾಗರ (೬ ಆಣೆತೂಕ ೧ ತೊಲೆಯಲ್ಲಿ ೮ ನೇ ೩ ಭಾಗ.) ಈ ರೀತಿಯಾಗಿ ಇವು ಮೂರನ್ನೂ ಸೇರಿಸಿ ನಿಂಬೆಯಹುಳಿಯಿಂದ ಅರೆದು, ಗಾಜಿನ ಕುಪ್ಪಿಯಲ್ಲಿ ಹಾಕಿ ಬಾಯನ್ನು ಭದ್ರವಾಗಿ ಮುಚ್ಚಿ ಆ ಕುಪ್ಪಿಯ ಮೇಲೆ ನಯವಾದ ಜೇಡಿಮಣ್ಣನ್ನು ಬಳಿದು ಬಟ್ಟೆಯುಸುತ್ತಿ ಒಣಗಿಸಿ, ಪುನಃ ಪುನಃ ಇದೇರೀತಿಯಾಗಿ ಏಳುವರಿಸೆ ಲೇಪನಮಾಡಿ ಒಣಗಿಸಿಕೊಂಡು ಆ ಕುಪ್ಪಿಯನ್ನು ಒಂದು ಒಡೆಕು ಮಡಿಕೆಯಲ್ಲಿರಿಸಿ ವಾಲುಕಾಯಂತ್ರದಲ್ಲಿ ಕುತ್ತಿಗೆಯವರೆಗೆ ಹೂಳಿ ಆ ಬಳಿಕ ವಾಲುಕಾಯಂತ್ರವನ್ನು ಒಲೆಯಮೇಲೆ ಇರಿಸಿ ಉರಿಹಾಕುವಾಗ ಕುಪ್ಪಿಗೆಯು (ಒಡೆಯದಂತೆ) ಆಗಾಗ್ಗೆ ನೋಡಿಕೊಳ್ಳುತ್ತಾ ಎಂಟುಜಾವ ಅವಿಚ್ಛಿನ್ನವಾಗಿ ಉರಿಹಾಕಿ ಸಾಂಗಶೀತಲವಾಗಲು ಇಳಿಸಿಕೊಂಡು ಕುಪ್ಪಿಗೆಯಲ್ಲಿ ಇಂಗಳೀಕದಂತೆ ಇರುವ ಸಿಂಧೂರವನ್ನು ತೆಗೆದುಕೊಂಡು ಆಯಾ ರೋಗಗಳಿಗೆ ತಕ್ಕ ಅನುಪಾನಗಳಿಂದ ಸೇವಿಸಲು ಸಕಲ ರೋಗಗಳನ್ನೂ ಪರಿಹರಿಸುವುದು. ಇದು ಅರ್ಧ ಅಥವಾ ಒಂದಾಣೆ ತೂಕವನ್ನು ಹಿಪ್ಪಲಿ ಜೇನುತುಪ್ಪಗಳೊಡನೆ ಸೇವಿಸಿದರೆ ಕಾಮಿನಿಯರ ಕಾಮವನ್ನೂ ರತಿಕೌತುಕವನ್ನೂ ತೋರಿಸುವುದು. ವೀರ್ಯವನ್ನು ಗಟ್ಟಿಮಾಡಿ ಸ್ತ್ರೀಯರ ಮದವನ್ನು ಬಹುಬೇಗ ಮುರಿಯುವುದು.

ಈ ರಸಸಿಂಧೂರವು ರೂಕ್ಷಗುಣವುಳ್ಳದು ; ಅಗ್ನಿಮಾಂದ್ಯವನ್ನೂ, ರಾಜಯಕ್ಷ್ಮವೇ ಮೊದಲಾದುವುಗಳಿಂದುಂಟಾದ ದೇಹ ಧಾತುಗಳ ಕ್ಷಯವನ್ನೂ ; ಪಾಂಡುಶೋಭೆ, ಗುಲ್ಮ, ಪ್ರಮೇಹ, ಶೂಲೆ, ಪ್ಲೀಹರೋಗ, ಜ್ವರ, ಕೆಟ್ಟ ವ್ರಣಗಳು, ಮೂಲವ್ಯಾಧಿ, ಗ್ರಹಣಿ, ಭಗಂದರ, ವಮನ, ತ್ರಿದೋಷ, ವೈಷಮ್ಯ ಇವುಗಳನ್ನೂ ಪರಿಹರಿಸುವುದು.

ಮತ್ತೊಂದು ವಿಧಾನ—ಶುದ್ಧಿಮಾಡಿದ ಪಾದರಸ ೫ ಪಲ, ಶುದ್ಧಿ ಮಾಡಿದ ಹವಳಸರಿಗಂಧಕ ೫ ಪಲ, ಬಿಳಿಗಾರ ೨ ಪಲ, ನವಾಸಾಗರ ॥ ಪಲ, ಈ ಮೇರೆಗೆ ಇವನ್ನೆಲ್ಲ ಚನ್ನಾಗಿ ಮರ್ದಿಸಿ ಗಾಜಿನ ಕುಪ್ಪಿಯಲ್ಲಿ ಹಾಕಿ ಕುಪ್ಪಿಯ ಬಾಯನ್ನು ಭದ್ರವಾಗಿ ಮುಚ್ಚಿ ಹಿಂದೆ ಹೇಳಿದಂತೆ ಮಣ್ಣುಬಟ್ಟೆಗಳಿಂದ ಏಳು ವರಿಸೆ ಲೇಪನಮಾಡಿ ಆ ಕುಪ್ಪಿಯನ್ನು ಅಡಿಯಲ್ಲಿ ರಂಧ್ರವಿರುವ ವಾಲುಕಾ ಯಂತ್ರದಲ್ಲಿ ೧೨ ಜಾವಗಳು ಸುಟ್ಟು ಸಾಂಗಶೀತಲವಾದಮೇಲೆ ತೆಗೆದು ಒಡೆದು ಕುಂಕುಮಸೇರಿದ ಅರಸಿನದಂತಿರುವ ಆ ರಸಸಿಂಧೂರವನ್ನು ತೆಗೆದುಕೊಳ್ಳುವುದು.

ಈ ರಸ ಸಿಂಧೂರಕ್ಕೆ ಅನುಪಾನಗಳು—ವಾತಜಾಡ್ಯದಲ್ಲಿ—ಜೇನು ತುಪ್ಪದೊಡನೆ ಸೇರಿದ ಹಿಪ್ಪಲಿಯೂ, ಕಫರೋಗದಲ್ಲಿ—ಚಿತ್ರಮೂಲದ ಚೂರ್ಣ ದೊಡನೆ ಸೇರಿದ ತ್ರಿಕಟುಕವೂ, ಪಿತ್ತಜಾಡ್ಯದಲ್ಲಿ—ಏಲಕ್ಕಿಪುಡಿ ಸೇರಿದ ಸಕ್ಕ ರೆಯೂ, ವ್ರಣವುಳ್ಳಲ್ಲಿ—ಗುಳ್ಳ, ಕೊನ್ನಾರಿಗಡ್ಡೆ, ಹಸಿಯಶುಂಠಿ, ಅಮೃತಬಳ್ಳಿ, ಲಾವಂಚ ಇವುಗಳ ಕಷಾಯವೂ, ಪುಷ್ಟಿಯಾಗಬೇಕಾದಲ್ಲಿ—ತುಪ್ಪ, ಅರಿಸಿನ, ರುದ್ರಾಕ್ಷಿ ಇವುಗಳು, ಅಥವಾ ಬೂರುಗದಹೂವಿನ (ತೊಟ್ಟು) ಇವು ಉತ್ತಮ ವಾದ ಅನುಪಾನಗಳು.

ಮತ್ತೊಂದು ವಿಧಾನ—ಒಂದುಭಾಗ ಪಾದರಸಕ್ಕೆ ಮೂರುಭಾಗ ಗಂಧಕ ವನ್ನೂ, ಏಳುಗುಂಜಿ ತೂಕ ಪವನಾಶನ ಅಂದರೆ ನಾಗ (ಸೀಸ) ವನ್ನೂ ಸೇರಿಸಿ ನುಣ್ಣಗೆ ಅರೆದು, ಆ ಕಜ್ಜಲಿಯನ್ನು ಗಾಜಿನ ಕುಪ್ಪಿಯಲ್ಲಿಹಾಕಿ ಹಿಂದೆ ಹೇಳಿರುವಂತೆ ಮಣ್ಣುಬಟ್ಟೆ ಇವುಗಳಿಂದ ಲೇಪನಮಾಡಿ, ಆಲದಚಕ್ಕೆಯ ಪುಡಿ ಯನ್ನೂ ಸುಣ್ಣವನ್ನೂ ಕೂಡಿಸಿ ಅರೆದು ಗುಳಿಗೆಮಾಡಿ ಆ ಕುಪ್ಪಿಯ ಬಾಯ್ಗೆ ಮೆತ್ತಿ, ಆ ಕುಪ್ಪಿಯನ್ನು ವಾಲುಕಾಯಂತ್ರದಲ್ಲಿರಿಸಿ ಕ್ರಮಾಗ್ನಿಯಿಂದ ಮೂರು ದಿವಸ ಉರಿದರೆ ಹೊನ್ನೆಯಹೂವಿನಂತೆ ಕೆಂಪಗಿರುವ ಭಸ್ಮಸಿಂಧೂರವಾಗುವುದು. ಆ ಸಿಂಧೂರದ ಒಂದುಗುಂಜಿ ಪ್ರಮಾಣ ಆಯಾ ರೋಗಗಳಿಗೆ ತಕ್ಕ ಅನು ಪಾನಗಳಿಂದ ಕ್ರಮವಾಗಿ ಸೇವಿಸಲು ಮುಪ್ಪನ್ನೂ ಮರಣವನ್ನೂ ಕೂಡ ತಪ್ಪಿಸುವುದು.

ರಸಸಿಂಧೂರವು ಕ್ರಮವಾಗಿ ಸೇವಿಸಿದವರ ರೋಗಸಮುದಾಯಗಳನ್ನೆಲ್ಲ ಪರಿಹರಿಸುವುದು; ದೇಹದಾರ್ಢ್ಯವನ್ನೂ ವಿಶೇಷವಾದ ಶಕ್ತಿಯನ್ನೂ ಕೊಡುವುದು; ಶುಕ್ರಧಾತುವನ್ನು ನೂರರಷ್ಟು ಹೆಚ್ಚಿಸುವುದು.

ರಸಭಸ್ಮವು ಸಕಲವಿಧವಾದ ಕ್ಷಯಗಳನ್ನೂ ಪರಿಹರಿಸುವುದರಲ್ಲಿ ಬಹಳ ಸಾಮರ್ಥ್ಯವುಳ್ಳುದು; ವ್ರಣ, ಕುಷ್ಠ, ಭಗಂದರ, ಮೇಹ ಇವುಗಳನ್ನೆಲ್ಲ ಹೊಡೆ ವುದು; ಬಲ, ಕಾಂತಿ, ಶುಕ್ರ ಇವುಗಳನ್ನು ಹೆಚ್ಚಿಸುವುದು. ಸಮಸ್ತ ರೋಗ ಗಳನ್ನೂ ಪರಿಹರಿಸುವುದು.

ಮತ್ತೊಂದು ವಿಧಾನ—ಶುದ್ಧಿಮಾಡಿದ ಪಾದರಸ ೧ ಪಲ, ಅದರ ಸಮ ತೂಕ ಶುದ್ಧಿಮಾಡಿದ ಹವಳಸರಿಗಂಧಕ, ಇವೆರಡನ್ನೂ ಕಜ್ಜಲಿಯಂತೆ ನುಣ್ಣಗೆ ಅರೆದು, ಆಲದಮೊಗ್ಗಿನ ರಸದಿಂದ ಮೂರು ಭಾವನೆಗಳನ್ನು ಕೊಟ್ಟು ಒಂದು ಸ್ಥಾಲಿ (ಗಾಜಿನ ಕುಪ್ಪಿ) ಯಲ್ಲಿ ಹಾಕಿ, ಮಳಲುತುಂಬಿದ ವಾಲುಕಾಯಂತ್ರದಲ್ಲಿ ಇರಿಸಿ ೪ ಜಾವ ಮಂದಾಗ್ನಿಯಿಂದ ಉರಿಸಿದರೆ ಆಗತಾನೆ ಉದಿಸಿದ (ಬಾಲ) ಸೂರ್ಯನಂತೆ ಕೆಂಪಗಿರುವ ರಸಸಿಂಧೂರವಾಗುವುದು. ಇದು ಅನುಪಾನಭೇದ ದಿಂದ ಸೇವಿಸಿದವರಿಗೆ ಅನೇಕ ಗುಣಗಳನ್ನು ಕೊಡುವುದು. ಕ್ಷಯ, ಕುಷ್ಠ, ವಾತ, ಪ್ಲೀಹ, ಮೇಹ ಇವುಗಳನ್ನೂ ಪಾಂಡುರೋಗವನ್ನೂ ಪರಿಹರಿಸುವುದು.

ಎಣ್ಣೆಯು ನೀರಿನಲ್ಲಿ ಬಿದ್ದರೆ ಹೇಗೆ ಆ ಕ್ಷಣದಲ್ಲೇ ಹರಡಿಕೊಳ್ಳುವುದೋ ಹಾಗೆ ಔಷಧವು ಅನುಪಾನಯೋಗದಿಂದ ದೇಹದಲ್ಲಿ ಬೇಗ ವ್ಯಾಪಿಸುವುದು. ಅಂತಹ ಅನುಪಾನಗಳಲ್ಲಿ ರಸಸಿಂಧೂರ (ಭಸ್ಮ) ಕ್ಕೆ ಉಚಿತವಾದುವುಗಳು ಅವು ವೆಂದರೆ:—

ರಸಸಿಂಧೂರ (ಭಸ್ಮ) ವು ಹಿಪ್ಪಲಿ ಜೇನುತುಪ್ಪಗಳೊಡನೆ ಸೇರಿದರೆ ವಾತಮೇಹವನ್ನು ಹೊಡೆವುದು; ತ್ರಿಫಲೆ ಸಕ್ಕರೆ ಇವುಗಳ ಅನುಪಾನದಿಂದ ಪಿತ್ತಮೇಹವನ್ನು ಪರಿಹರಿಸುವುದು; ಹಿಪ್ಪಲಿ, ಮೆಣಸು, ಶುಂಠಿ, ಗಂಟು ಭಾರಂಗಿ, ಜೇನುತುಪ್ಪ ಈ ಅನುಪಾನದಿಂದ ಕೆಮ್ಮು, ಉಬ್ಬಸ, ಶೂಲೆ ಇವು ಗಳನ್ನು ಪರಿಹರಿಸುವುದು; ಅರಸಿನ ಸಕ್ಕರೆ ಇವುಗಳ ಅನುಪಾನದಿಂದ ರಕ್ತ ವಿಕಾರವನ್ನೂ ಶಮನಮಾಡುವುದು; ತ್ರಿಕಟುಕ, ತ್ರಿಫಲೆ, ಆಡುಸೋಗೆ ಇವು ಗಳ ಅನುಪಾನವು ಕಾಮಾಲೆ ಪಾಂಡು ಅಗ್ನಿಮಾಂದ್ಯ ಇವುಗಳನ್ನು ಹೊಡೆವುದು; ಹಿಪ್ಪಲಿ, ಚಿತ್ರಮೂಲ, ಅಳಲೆಕಾಯಿ, ಸೌವರ್ಚಲವಣ ಇವುಗಳ ಅನುಪಾನವು ಅಗ್ನಿಮಾಂದ್ಯ, ಬದ್ಧಕೋಷ್ಠ, ಎದೆನೋವು ಇವುಗಳನ್ನು ಪರಿಹರಿಸುವುದ ರಲ್ಲಿ ಉತ್ತಮವಾದುದು; ಶಿಲಾಜಿತು ಭಸ್ಮ, ಕಲ್ಸಕ್ಕರೆ, ಏಲಕ್ಕಿ ಇವುಗಳ ಅನು ಪಾನವು ಮೂತ್ರಕೃಚ್ಛ್ರದಲ್ಲಿ ಬಹಳ ಒಳ್ಳೆಯದೆಂಬುದು ನಾಗಾರ್ಜುನನ ಸತ್ಯ ವಚನವು; ಲವಂಗ, ಕುಂಕುಮಕೇಸರ, ಜಾಜಿಪತ್ರೆ, ಇಂಗಲೀಕ, ಮಗ್ಗಾರೆ ಕಾಯಿ, ಹಿಪ್ಪಲಿ, ಭಂಗಿ ಇವುಗಳನ್ನು ಸಮತೂಕವಾಗಿ ಒಂದೊಂದು ಭಾಗ ದಂತೆಯೂ; ಕರ್ಪೂರ, ಅಫೀಮು, ಸೀಸ ಭಸ್ಮ ಇವುಗಳನ್ನು ಸಮತೂಕವಾಗಿ ಅರ್ಧಭಾಗದಂತೆಯೂ ಹಾಕಿ ಎಲ್ಲವನ್ನೂ ಒಟ್ಟಾಗಿ ಅರೆದು, ಧಾತುವೃದ್ಧಿಗೆ (ರಸ ಭಸ್ಮಕ್ಕೆ) ಅನುಪಾನವಾಗಿ ಕೊಡುವುದು; ಸೌವರ್ಚಲವಣ, ಲವಂಗ, ನೆಲ ಬೇವು, ಅಳಲೆಕಾಯಿ ಇವುಗಳ ಅನುಪಾನದ ಯೋಗದಿಂದ ಸಕಲ ಜ್ವರಗಳನ್ನೂ ಹೊಡೆವುದು; ಸೌವರ್ಚಲವಣ ತ್ರಿಫಲೆ ಇವುಗಳ ಅನುಪಾನದಿಂದ ರೇಚನ ಮಾಡಿಸುವುದು; ಲವಂಗ, ಕುಂಕುಮಕೇಸರ, ಇಂಗಲೀಕ ಇವುಗಳೊಡನೆ

ಸೇರಿಸಿ ತಾಂಬೂಲದೊಡನೆ ಭಕ್ಷಿಸಿದರೆ ಚೆನ್ನಾಗಿ ಧಾತುವೃದ್ಧಿಮಾಡುವುದು ; ನೆಲಗುಂಬಳದಗಡ್ಡೆಯ ಚೂರ್ಣದೊಡನೆ ಸೇರಿದರೆ ಧಾತುವೃದ್ಧಿಮಾಡುವುದು ; ಭಂಗಿ, ಓಮದಕ್ಕಿ ಇವುಗಳೊಡನೆ ಸೇರಿದರೆ ವಮನವಿಕಾರವನ್ನು ಶಮನಮಾಡುವುದು ; ಸೌವರ್ಚಲವಣ, ಅರಸಿನ, ಭಂಗಿ, ಓಮದಕ್ಕಿ ಇವುಗಳ ಅನುಪಾನದಿಂದ ಆಗತಾನೇ ಹುಟ್ಟಿದ ಉದರಜಾಡ್ಯವನ್ನು ಪರಿಹರಿಸುವುದು ; ಎರಡಾಣೆ ತೂಕ ಮುತ್ತುಗದ ಬೀಜಕ್ಕೆ ದ್ವಿಗುಣವಾಗಿ (ನಾಲ್ಕಾಣೆ ತೂಕ) ಬೆಲ್ಲವನ್ನು ಸೇರಿಸಿ ಇದರ ಅನುಪಾನದಿಂದ ರಸಸಿಂಧೂರವನ್ನು ಕೊಟ್ಟರೆ ಕ್ರಿಮಿದೋಷವನ್ನು ಹೊಡೆವುದು ; ಅಫೀಮು, ಲವಂಗ, ಇಂಗಲೀಕ, ಭಂಗಿ ಇವುಗಳ ಅನುಪಾನದಿಂದ ಸಕಲವಿಧವಾದ ಅತಿಸಾರಗಳನ್ನೂ ತತ್‌ಕ್ಷಣದಲ್ಲೇ ಪರಿಹರಿಸುವುದು ; ಸೌವರ್ಚಲವಣ, ಓಮದಕ್ಕಿ ಇವುಗಳೊಡನೆ ಸೇರಿದರೆ ಅಗ್ನಿಮಾಂದ್ಯವನ್ನು ಪರಿಹರಿಸುವುದಲ್ಲದೆ ಹಸಿವೆಯನ್ನೂ ಹುಟ್ಟಿಸುವುದೆಂದು ಸಿದ್ಧನಾಗೇಶ್ವರ ವಚನವು ; ಅಮೃತಬಳ್ಳಿಯ ಸತ್ವದೊಡನೆ ಸೇರಿದರೆ ಸಕಲ ಪುಷ್ಟಿಯನ್ನೂ ಕೊಡುವುದು ; ಈರೀತಿಯಾಗಿ ಆಯಾ ರೋಗಗಳಿಗೆ ತಕ್ಕಂತಹ ಅನುಪಾನಗಳೊಡನೆ ಸೇರಿ ರಸಸಿಂಧೂರವು ಸಕಲ ರೋಗಗಳನ್ನೂ ಪರಿಹರಿಸುವುದು.

ಸೈಂಧವಲವಣ, ನೆಲ್ಲಿಕಾಯಿ, ಕೊತ್ತುಂಬರಿ, ಜೀರಿಗೆ, ಹಸಿಯಶುಂಠಿ, ಚಿಲುಕೀರೆಸೊಪ್ಪು, ಬದನೆಕಾಯಿ, ಪಡವಲಕಾಯಿ, ಸಿಹಿಸೋರೆ ಇವುಗಳಿಂದ ಮಾಡಿದ ವ್ಯಂಜನಗಳು ; ಗೋದುವೆ ಹಳೆಯ ಬತ್ತ ಇವುಗಳ ಅನ್ನ, ಆಕಳ ಹಾಲು, ತುಪ್ಪ, ಮೊಸರು, ಹಂಸೋದಕ, ಹೆಸರಕಟ್ಟಿನ ಸಾರು ಇವುಗಳು ಪಾರದವನ್ನು ಸೇವಿಸುವಾಗ ಪಥ್ಯಗಳು.

ರಸಸಿಂಧೂರವನ್ನು ಸೇವಿಸುವವರಿಗೆ ಉದ್ಗಾರ (ತೇಗು) ಬರುತ್ತಿದ್ದರೆ ಮೊಸರನ್ನವನ್ನೂ, ಜೀರಿಗೆ ಮಿಶ್ರವಾದ ಕರಿಯ ಮೀನನ್ನೂ ಪಥ್ಯವಾಗಿ ಕೊಡುವುದು. ವಾಯುವಿನ ತೊಂದರೆ ಇದ್ದರೆ ನಾರಾಯಣತೈಲವೇ ಮೊದಲಾದ ತೈಲಗಳಿಂದ ಅಭ್ಯಂಜನ ಮಾಡಿಸಬೇಕು ; ಮನಸ್ಸಿಗೆ ಅವುದೂ ಬೇಕಾಗದೆ ಬೇಸರವಾಗಿದ್ದರೆ ತಣ್ಣೀರನ್ನು ತಲೆಯಮೇಲೆ ಸುರಿಯಿಸುವುದು ; ನೀರಡಿಕೆಯಾದರೆ ಎಳನೀರು ಸಕ್ಕರೆಹಾಕಿದ ಹೆಸರುಕಟ್ಟು ದ್ರಾಕ್ಷೆ ದಾಳಿಂಬದಹಣ್ಣು ಖರ್ಜೂರ ಬಾಳೆಹಣ್ಣು ಇವುಗಳನ್ನು ಕೊಡಬೇಕು.

ಗುಳ್ಳದಕಾಯಿ, ಬೆಲ್ಲವತ್ತದಹಣ್ಣು, ಕುಂಬಳಕಾಯಿ, ಬಿದಿರಕಳಲೆ (ಚಿತ್ತದಕುಡಿ), ಹಾಗಲಕಾಯಿ, ಉದ್ದು, ಬಟಾಣಿ, ಕಡಲೆ, ಅವರೆ, ಹುರುಳಿ, ಉಪ್ಪು (ಸಾಸವೆ), ಎಳ್ಳು, ಉಪವಾಸ, ಮೈಯ್ಗೆ ಸೀಗೆಕಾಯಿ ಮೊದಲಾದ ಪುಡಿಗಳನ್ನು ಉಜ್ಜಿಕೊಳ್ಳುವುದು, ಸ್ನಾನ, ಕೋಳಿ, ಸುರೆ, ಆಸವ, ಅನೂಪಮಾಂಸ, ಕಲಗಚ್ಚು, ಬಾಳೆಲೆಯಲ್ಲೂ ಕಂಚಿನ ಪಾತ್ರೆಯಲ್ಲೂ ಭೋಜನಮಾಡು

ವುದು, ಗುರುವಾದ ಮಲಮೂತ್ರಗಳನ್ನು ತಡೆವ ಅತಿ ತೀಕ್ಷ್ಣವಾದ ಅತ್ಯುಷ್ಣವಾದ ಪದಾರ್ಥಗಳು, ಇವು ರಸವನ್ನು ಸೇವಿಸುವವರಿಗೆ ಅಪಥ್ಯಗಳೆಂದು ಮಹರ್ಷಿಗಳು ಹೇಳಿರುವರು.

ರಸವನ್ನು ಸೇವಿಸುವವರು ಕುಂಬಳ, ಸವುತೆ, ಬೋರೆ, ಕೊಡಸಿಗೆ, ಕಮರಕದಹಣ್ಣು, ಬಿದಿರಕಳಲೆ ಈ ಆರು (ಕಕಾರಾದಿ) ಪದಾರ್ಥಗಳನ್ನು ತ್ಯಜಿಸಬೇಕು. [ಸಂಸ್ಕೃತ ಭಾಷೆಯಲ್ಲಿ ಕಕಾರವು ಯಾವ ಪದದ ಆದಿಯಲ್ಲಿ ಬರುವುದೋ ಆ ಪದದ ಅರ್ಥ (ವಸ್ತು) ವನ್ನು ತ್ಯಜಿಸಬೇಕು; ಅಂತಹವು ಮೇಲೆ ಹೇಳಿರುವವಲ್ಲದೆ ಮತ್ತೆ ಅನೇಕ ಪದಾರ್ಥಗಳಿವೆ; ಅವುಗಳನ್ನೂ ತ್ಯಜಿಸಬೇಕೆಂದು ಗ್ರಂಥಾಂತರದಲ್ಲಿ ಸ್ಪಷ್ಟವಾಗಿ ಹೇಳಿರುವರು.]

## ಇಂಗಳೀಕ ಸಿಂಧೂರ.

ಶುದ್ಧಿಮಾಡಿದ ಇಂಗಳೀಕ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ ಇವೆರಡನ್ನು ಖಲ್ವದಲ್ಲಿ ಹಾಕಿ ೧೨ ಜಾವ ಚನ್ನಾಗಿ ಅರದು ಒಂದು ಗಾಜು ಕುಪ್ಪಿಯಲ್ಲಿ ಹಾಕಿ ಕೆಮ್ಮಣ್ಣುಬಟ್ಟೆಯಿಂದ ಮೂರು ಚೀಲುಮಾಡಿ ಒಣಗಿಸಿ ವಾಲುಕಾಯಂತ್ರದಲ್ಲಿ ಇಪ್ಪತ್ತನಾಲ್ಕು ಜಾವ ಬೇಯಿಸುವುದು. ಸಿಂಧೂರವಾದ ಕೂಡಲೇ ಕುಪ್ಪಿಯನ್ನು ಯಂತ್ರದಿಂದ ತೆಗೆದುಬಿಡಬೇಕು. ಸ್ವಾಂಗಶೀತಲವಾದನಂತರ ತೆಗೆದು ಇಟ್ಟುಕೊಳ್ಳುವುದು. ಇದನ್ನು ೧ ಭತ್ತದ ಕಾಳು ಮೊದಲುಗೊಂಡು ೩ ಭತ್ತದಕಾಳುವರಿವಿಗು ಅನುಪಾನವಿಶೇಷಗಳೊಡನೆ ಸೇವಿಸುವುದರಿಂದ ಸರ್ವ ಜ್ವರಗಳು, ಮೋಹಸಮ್ಮಂಧವಾದ ಚಟ್ಟಿಗಳು ಪರಿಹರವಾಗುವುದಲ್ಲದೆ ಅಗ್ನಿದೀಪನವನ್ನುಂಟುಮಾಡುವುದು.

## ತಾಳಕ ಸಿಂಧೂರ.

ಕಕ್ಕಿಮರದ ಚಕ್ಕೆಯನ್ನು ಸುಟ್ಟು ಬೂದಿಮಾಡಿ ಒಂದು ಮಡಕೆಯ ಅರ್ಧಭಾಗಕ್ಕೆ ಹಾಕಿ ಇದರಮೇಲೆ ಶುದ್ಧಿಮಾಡಿದ ತಾಳಕವನ್ನು ನಿಂಬೇಹಣ್ಣಿನ ರಸದಿಂದ ಒಂದು ದಿನ ಅರದು ಗಂಡುತಗಚೇಸೊಪ್ಪಿನ ರಸದಿಂದ ಒಂದು ದಿನ ಅರೆದು ಬಿಲ್ಲೆಮಾಡಿ ಒಣಗಿಸಿ ಈ ಬಿಲ್ಲೆಯನ್ನು ಬೂದಿಯಮೇಲೆ ಇಟ್ಟು ಉಳಿದ ಬೂದಿಯನ್ನು ಮಡಕೆ ಕಂಠದವರಿವಿಗು ತುಂಬಿ ಮೇಲೆ ಮುಚ್ಚಳ ಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ವಲೆಯಮೇಲೆ ಇಟ್ಟು ತಂಗಡಿಕಟ್ಟಿಗೆಯಿಂದ ೪ ಜಾವ ಉರಿಹಾಕಿ ಸ್ವಾಂಗಶೀತಲವಾದನಂತರ ತೆಗೆದು ನೋಡಲು ತಾಳಕವು ಸಿಂಧೂರವಾಗಿರುವುದು. ಈ ಸಿಂಧೂರವನ್ನು ಹೊತ್ತಿಗೆ ಅಕ್ಕೀಕಾಳು ಪ್ರಮಾಣ ತ್ರಿಕಟುಕ ಚೂರ್ಣದೊಡನೆ ಜೇನುತುಪ್ಪದಲ್ಲಿ ಕಲೆಸಿ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೩-೪ ದಿನ ಕೊಡುವುದು. ಇದರಿಂದ ಕಾಸಶ್ವಾಸ, ಜ್ವರಗಳು ಗುಣವಾಗುವವು. ರೋಗಕ್ಕೆ ತಕ್ಕ ಪತ್ಯವನ್ನಿಡುವುದು.

## ಶತಪುಠ ಅಭ್ರಕಸಿಂಧೂರ ಮಾಡುವ ಕ್ರಮ.

ಅಭ್ರಕಭಸ್ಮದಲ್ಲಿ ಹೇಳಲ್ಪಟ್ಟಿರುವ ಧಾನ್ಯಾಭ್ರಕವನ್ನು ಇದರ ಕೆಳಗೆ ಉದಹರಿಸಿರುವ ಮೂಲಿಕೆಗಳ ಸ್ವರಸಗಳಲ್ಲಿಯೂ, ಕಷಾಯಗಳಲ್ಲಿಯೂ, ಹಾಲಿನಲ್ಲಿಯೂ ಪ್ರತ್ಯೇಕಪ್ರತ್ಯೇಕವಾಗಿ ಅರೆದು ಬಿಲ್ಲೆಮಾಡಿ ಒಣಗಿಸಿ ಹಣತೆಗಳಲ್ಲಿಟ್ಟು ಚೀಲುಮಾಡಿ ಗಜಪುಟಗಳನ್ನು ಹಾಕಬೇಕು. ಎಕ್ಕದ ಹಾಲಿನಲ್ಲಿ ಅರೆಯುವಾಗ ಅಭ್ರಕಕ್ಕೆ ಹದಿನಾರರಲ್ಲಿ ಒಂದುಭಾಗ ಸೂರತಿ ಬೆಳಗಾರದ ಅರಳನ್ನು ಸೇರಿಸಿ ಅರೆಯಬೇಕು. ಉಳಿದ ಸ್ವರಸಗಳಿಂದ ಮತ್ತು ಕಷಾಯಗಳಿಂದ ಅರೆಯುವಾಗ ಬೆಳಗಾರವು ಅವಶ್ಯಕವಿಲ್ಲ.

೧. ಎಕ್ಕದಹಾಲು, ೨. ಬ್ರಹ್ಮದಂಡಿಸಮೂಲದ ರಸ, ೩. ಬೂದುಕುಂಬಳಕಾಯಿ ರಸ, ೪. ಚಿತ್ರಮೂಲದ ಕಷಾಯ, ೫. ತುಂಗೇಗಡ್ಡೆ ಕಷಾಯ, ೬. ನೆಲತಾಟಿ ಗಡ್ಡೆಯ ರಸ, ೭. ಮಜ್ಜಿಗೆ ಗಡ್ಡೆಯ ರಸ, ೮. ಹಿರೀಮದ್ದಿನ ಗಡ್ಡೆಯ ರಸ, ೯. ತಾವರೆ ಗಡ್ಡೆಯ ರಸ, ೧೦. ಲಕ್ಕಿಲಿಸೊಪ್ಪಿನ ರಸ, ೧೧. ಹಳದೀ ಹೂವುಗಳನ್ನು ಬಿಡುವ ಗರುಗದಸೊಪ್ಪಿನ ರಸ, ೧೨. ಬಿಳೀಕೊಮ್ಮೆಯಸಮೂಲದ ರಸ, ೧೩. ಅಮೃತಬಳ್ಳಿ ರಸ, ೧೪. ನೆಲಗುಳ್ಳದ ಹಣ್ಣಿನರಸ, ೧೫. ಲೋಳಿಸರದ ರಸ, ೧೬. ಆಲದಬಿಳಲಿನ ರಸ, ೧೭. ಆಡುಸೋಗೆ ಸೊಪ್ಪಿನ ರಸ, ೧೮. ಚಿಲಕೀರೆಸಮೂಲದ ರಸ, ೧೯. ಒಂದೆಲಗದಸೊಪ್ಪಿನ ರಸ, ೨೦. ಚಿಕ್ಕತಗಚೆಸೊಪ್ಪಿನ ರಸ, ೨೧. ಸಣ್ಣನೆಗ್ಗಿಲು ಸಮೂಲದರಸ, ೨೨. ನೆಲ್ಲೀಕಾಯಿ ರಸ, ೨೩. ವೀಳೆಯದೆಲೆ ರಸ, ೨೪. ತುಲಸೀಸೊಪ್ಪಿನ ರಸ, ೨೫. ಮಂಜಿಷ್ಟೆ ಕಷಾಯ, ೨೬. ಬೂರಗದಚಕ್ಕೆ ಕಷಾಯ, ೨೭. ಬಿಳೇಮತ್ತಿಚಕ್ಕೆಯ ಕಷಾಯ, ೨೮. ಹುವ್ವರಸಿಚಕ್ಕೆ ಕಷಾಯ, ೨೯. ಕೊಳವಳಿಕೆಸೊಪ್ಪಿನ ರಸ, ೩೦. ಕೆಂಪುಮುಳ್ಳರಿವೆಸೊಪ್ಪಿನ ರಸ, ೩೧. ಬಿಳೀಹುವ್ವ ಬಿಡುವ ತುಂಬೇಸೊಪ್ಪಿನ ರಸ, ೩೨. ಕಟುಕರೋಹಿಣಿ ಕಷಾಯ, ೩೩. ತ್ರಿಫಲೆ ಕಷಾಯ, ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಅರೆದು ಮೂರುಮೂರು ಸಲ ಗಜಪುಟಗಳನ್ನು ಹಾಕಿದರೆ ಸ್ವಚ್ಛವಾದ ಸಿಂಧೂರವಾಗುವುದು. ನಂತರ ಈ ಸಿಂಧೂರವನ್ನು ಹಸುವಿನ ಹಾಲಿನಲ್ಲಿ ಅರೆದು ಒಂದು ಗಜಪುಟವನ್ನು ಹಾಕಿದರೆ ಶುದ್ಧವಾದ ಸಿಂಧೂರವಾಗುವುದು.

ಅಭ್ರಕಭಸ್ಮವಾಗಲಿ, ಸಿಂಧೂರವಾಗಲಿ ಮಿಂಚಿಲ್ಲದಿರುವಿಕೆಯು ಶ್ರೇಷ್ಠವಾದದ್ದು. ಯಾವ ಉಪಾಯದಿಂದಲಾದರೂ ಕೆಲವು ಪುಟಗಳಲ್ಲಿಯೇ ಮಿಂಚಿಲ್ಲದೆ ಭಸ್ಮವಾದಾಗ್ಯೂ, ಸಿಂಧೂದವಾದಾಗ್ಯೂ ಉಳಿದಪುಟಗಳೆಲ್ಲವನ್ನೂ ಹಾಕಲೇಬೇಕು. ಅದರಿಂದ ಗುಣವು ಅಧಿಕವಾಗುವುದು.

## ಕೃಷ್ಣಾಭ್ರಕ ಭಸ್ಮ ಮತ್ತು ಸಿಂಧೂರಕ್ಕೆ ಅನುಪಾನ.

ಪಿತ್ತಪಾಂಡು, ತಲೆತಿರುಗು, ಪಿತ್ತಮೇಹ ಇವುಗಳಿಗೆ ಬಿಲ್ವಾದಿ ಲೇಹ ದೊಡನೆಯೂ; ಪಿತ್ತಗುಲ್ಮ ಶೂಲೆರೋಗ ಇವುಗಳಿಗೆ ಖಂಡಾದ್ರಿ ಚೂರ್ಣ

ಅಥವಾ ಖಂಡಾದ್ರಿ ಲೇಹ್ಯದೊಡನೆಯೂ; ಕ್ಷಯರೋಗ, ಉಬ್ಬಸ, ಕೆಮ್ಮು ಇವುಗಳಿಗೆ ರಾಮುಗುಳ್ಳದ ಚೂರ್ಣದೊಡನೆಯೂ, ಮೇಹವಾಯುವಿಗೆ ಜೇನು ತುಪ್ಪದೊಡನೆಯೂ; ಮಧುಮೇಹಕ್ಕೆ ಹಸುವಿನತುಪ್ಪದೊಡನೆಯೂ, ಜ್ವರಕ್ಕೆ ತ್ರಿಕಟುಕ ಚೂರ್ಣದೊಡನೆಯೂ. ಸೇವಿಸಬೇಕು. ಮತ್ತು ಮೇಹನಂಜು, ಮೇಹ ಜ್ವರ, ಮೇಹ ಉಷ್ಣ, ಮೇಹವ್ರಣ ಇವುಗಳಿಗೆ ಅಭ್ರಕಸಿಂಧೂರವನ್ನು ಅಯ ಸ್ಸಿಂಧೂರವನ್ನು ಬೆರಸಿ ಜೇನುತುಪ್ಪದಲ್ಲಿಯಾಗಲೀ, ಗರುಗದಸೊಪ್ಪಿನ ಚೂರ್ಣ ದಲ್ಲಿಯಾಗಲಿ ಕಲಿಸಿ ಸೇವಿಸಬೇಕು.

ಅಭ್ರಕಭಸ್ಮವನ್ನಾಗಲೀ, ಅಭ್ರಕಸಿಂಧೂರವನ್ನಾಗಲೀ ಒಂದುಹೊತ್ತಿಗೆ ಅರ್ಧಗುರುಗಂಜಿ ಪ್ರಮಾಣ ಸೇವಿಸಬೇಕು.

## ಪೂರ್ಣ ಚಂದ್ರೋದಯವು.

ಶುದ್ಧಿಮಾಡಿದ ಚಿನ್ನ (ಕುಂದಣ) ದ ತಗಡು ೧ ತೊಲೆ, ಶುದ್ಧಿಮಾಡಿದ ಪಾದರಸ ೮ ತೊಲೆ, ಶುದ್ಧಿಮಾಡಿದ ಹವಳಸರಿ ಗಂಧಕ ೧೬ ತೊಲೆ; ಮೊದಲು ಚಿನ್ನದ ತಗಡನ್ನು ಸಣ್ಣ ತುಂಡುಗಳಾಗಿ ಕತ್ತರಿಸಿ ಕಲ್ವದಲ್ಲಿ ಹಾಕಿ ಪಾದರಸ ವನ್ನು ಬಿಟ್ಟು, ರಸದಲ್ಲಿ ಚಿನ್ನವು ಮಿಳಿತವಾಗುವವರೆವಿಗೂ ೩ ದಿನ ಅರೆದು ನಂತರ ಗಂಧಕವನ್ನು ಬೆರಸಿ ಚೆನ್ನಾಗಿ ಕಜ್ಜಲಿಯಾಗುವಂತೆ ೩ ದಿನ ಅರೆಯು ವುದು. ಹೆಚ್ಚುಕಾಲ ಅರೆದಷ್ಟೂ ಗುಣವು ಅಧಿಕವಾಗುವುದು. ತರುವಾಯ ಲೋಳಿಸರದ ರಸ, ಕರೇಹತ್ತೀಹೂವಿನ ರಸ ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಪ್ರತ್ಯೇಕವಾಗಿ ಮೂರುಮೂರು ದಿವಸ ಅರೆದು ಬಿಲ್ಲೆಮಾಡಿ ಒಣಗಿಸಿ ನಂತರ ಕಲ್ವದಲ್ಲಿ ಚೂರ್ಣಿಸಿ ಗಾಜಿನ ಸೀಸಾಯಿಗೆ ಕೆಮ್ಮಣ್ಣುಬಟ್ಟೆಯಿಂದ ೭ ಚೀಲು ಗಳನ್ನು ಮಾಡಿ ಚನ್ನಾಗಿ ಒಣಗಿಸಿ ಸೀಸಾಯಿಯಲ್ಲಿ ಅರ್ಧಭಾಗದವರೆವಿಗೂ ಮೇಲ್ಕಂಡ ಚೂರ್ಣವನ್ನು ಹಾಕಿ ವಾಲುಕಾಯಂತ್ರದಲ್ಲಿಟ್ಟು ಕ್ರಮವಾಗಿ ಸೂಕ್ಷ್ಮ, ಕಮಲ, ಗಾಢಾಗ್ನಿಗಳಿಂದ ೩ ದಿನಗಳು ಪಾಕಮಾಡುವುದು. ಉರಿಯ ವ್ಯತ್ಯಾಸದಿಂದ ೩ ದಿನಗಳಿಗೆ ಸ್ವಲ್ಪ ಮುಂಚಿತವಾಗಿಯಾಗಲೀ, ಸ್ವಲ್ಪ ನಿದಾನ ವಾಗಿಯಾಗಲಿ ಪಾಕಕ್ಕೆ ಬರುವುದು. ಆದ್ದರಿಂದ ಪಾಕಕ್ಕೆ ಬರುವ ಸಮಯವನ್ನು ಎಚ್ಚರಿಕೆಯಿಂದ ನೋಡಿ ಉರಿಯನ್ನು ನಿಲ್ಲಿಸುವುದು. ಸಾಂಗಶೀತಲವಾದಮೇಲೆ ಸೀಸಾಯಿಯ ಚೀಲುಗಳನ್ನು ಒದ್ದೆಮಾಡಿ ತೆಗೆದುಹಾಕಿ, ಉಪಾಯವಾಗಿ ಸೀಸಾ ಯಿಯನ್ನು ಒಡೆದು, ಗಾಜಿನ ಚೂರುಗಳು ಔಷಧದಲ್ಲಿ ಬೆರತುಹೋಗದಂತೆ ಎಚ್ಚರಿಕೆಯಿಂದ ಮೇಲ್ಭಾಗದಲ್ಲಿರುವ ಸಿಂಧೂರವನ್ನೂ ಕೆಳಭಾಗದಲ್ಲಿರುವ ಸ್ವರ್ಣವನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ತೆಗೆದಿಟ್ಟುಕೊಳ್ಳಬೇಕು. ಚಿನ್ನವು ಸಿಂಧೂರದಲ್ಲಿರದೆ ತಳದಲ್ಲಿ ಬೂದಿಯಂತಾಗಲೀ, ಮಣ್ಣಿನ ಉಂಡೆಗ ಳಂತಾಗಲೀ ಇರುವುದು. ಸೀಸಾಯಿಯ ಅಡಿಯಲ್ಲಿ ಪಕ್ವವಾಗದಿರುವ ಗಂಧಕ

ಪಿಷ್ಟವು ಕರ್ಪೂಗೆ ಇದ್ದಲಿನ ಪುಡಿಯಂತೆ ಕಾಣಿಸುವುದು. ಇದನ್ನು ತೆಗೆದುಹಾಕಬೇಕು. ಸಿಂಧೂರವನ್ನೂ, ತಳದಲ್ಲಿ ನಿಂತಿದ್ದ ಚಿನ್ನವನ್ನೂ ಕಲೆಸಿ ಅರೆದಿಟ್ಟುಕೊಳ್ಳಬೇಕು. ಕೆಲವರು ಸಿಂಧೂರವನ್ನೂ ಚಿನ್ನವನ್ನೂ ಬೇರೆಬೇರೆಯಾಗಿ ಇಟ್ಟುಕೊಂಡಿದ್ದು ಬೇಕಾದಾಗ ೧೪ ಆಣೆ ತೂಕ ಸಿಂಧೂರವನ್ನೂ ೨ ಆಣೆ ತೂಕ ಸ್ವರ್ಣವನ್ನೂ ಕಲೆಸಿ ಒಂದು ತೊಲೆಯಂತೆ ಗ್ರಹಿಸುವರು.

ಪೂರ್ಣಚಂದ್ರೋದಯ ಸಿಂಧೂರ ೧ ತೊಲೆ, ಪಚ್ಚಕರ್ಪೂರ ೨ ಆಣೆ ತೂಕ, ಜಾಕಾಯಿ ಕಾಲುತೊಲೆ, ಲವಂಗ ಕಾಲುತೊಲೆ, ಹಿಪ್ಪಲಿ ಕಾಲುತೊಲೆ, ಕಸ್ತೂರಿ ೧ ಆಣೆ ತೂಕ ಇವುಗಳನ್ನು ಖಲ್ವದಲ್ಲಿ ಹಾಕಿ ನೀರಿನಿಂದ ಅರೆದು ಗುರುಗಂಜಿಪ್ರಮಾಣ ಮಾತ್ರೆಗಳನ್ನು ಮಾಡಿ ನೆರಳಿನಲ್ಲಿ ಒಣಗಿಸಿ ಇಟ್ಟುಕೊಳ್ಳುವುದು. ಇದನ್ನೇ ಪೂರ್ಣಚಂದ್ರೋದಯ ಮಾತ್ರೆಗಳೆನ್ನುವರು.

ಪ್ರಯೋಗ ಸರ್ವ ಜ್ವರಗಳಿಗೆ—ತ್ರಿಕಟುಕದ ಚೂರ್ಣ ೯ ಭತ್ತದಕಾಳು ತೂಕ, ಈ ಸಿಂಧೂರ ೨ ಭತ್ತದಕಾಳುಗಳ ತೂಕ ಕಲೆಸಿ ಜೇನುತುಪ್ಪದೊಡನೆ ಸೇವಿಸಿದರೆ ಸಮಸ್ತ ಜ್ವರಗಳು ಪರಿಹಾರವಾಗುವವು.

ಮದ್ವೀಡಿನ ವಿಷಕ್ಕೆ—ಈ ಸಿಂಧೂರ ೨ ಭತ್ತದಕಾಳಿನ ತೂಕ, ಶಿಪ್ಪಸತ್ತು ೪ ಭತ್ತದಕಾಳಿನ ತೂಕ ಕಲೆಸಿ ಜೇನುತುಪ್ಪದೊಡನೆ ಸೇವಿಸಬೇಕು.

ಪ್ರಮೇಹಕ್ಕೆ—ಈ ಔಷಧವನ್ನು ಮಾವಿನಚಕ್ಕೆ ಕಷಾಯದಲ್ಲಿ ಕೊಡಬೇಕು.

ರಸಾಯನಕ್ಕೆ—ನಿತ್ಯವೂ ಪೂರ್ಣಚಂದ್ರೋದಯವನ್ನು ೨ ಗುರುಗಂಜಿಗಳ ಪ್ರಮಾಣ ವೀಳೆದೆಲೆಯಲ್ಲಿಟ್ಟು ಸೇವಿಸಿದರೆ ರಸಾಯನವಾಗಿ ಸಕಲರೋಗಗಳನ್ನೂ ಹೋಗಲಾಡಿಸುವುದು.

ವಾಜೀಕರಣಕ್ಕೆ — ಸಿಂಧೂರ ೧ ಭತ್ತದಕಾಳಿನ ತೂಕ, ನಸುಗುನ್ನಿಬೀಜ, ಜಾಪತ್ರೆ, ಜಾಕಾಯಿ, ಸಫೇದ್‌ಮಿಸ್ರಿ, ಏಲಕ್ಕಿ, ಲವಂಗ ಇವು ಪ್ರತಿಯೊಂದೂ ೪ ಭತ್ತದ ಕಾಳುಗಳ ತೂಕ ಚೂರ್ಣಗಳನ್ನು ಕಲೆಸಿ, ೪ ತೊಲೆ ಕಾಸಿದ ಹಸುವಿನ ಹಾಲಿನಲ್ಲಿ ಹಾಕಿ, ಅರ್ಧ ತೊಲೆ ಸಕ್ಕರೆಯನ್ನು ಹಾಕಿ ಕುಡಿಯಬೇಕು.

ಈ ಔಷಧ ಸೇವನೆಯಲ್ಲಿ ಆಕಳತುಪ್ಪ, ಆಕಳಹಾಲು, ಮೃದುವಾದ ಮಾಂಸಗಳು, ಆಕಳಹಾಲಿನ ಕೆನೆ, ಉದ್ದಿನ ಫಲಹಾರಗಳು ಈ ಪದಾರ್ಥಗಳನ್ನು ವಿಶೇಷವಾಗಿ ಸೇವಿಸಬೇಕು.

## ರಜತ ಚಂದ್ರೋದಯ ರಸ.

ಶುದ್ಧಿಮಾಡಿದ ರಜತ ೧ ಭಾಗ, ಶುದ್ಧಿಮಾಡಿದ ಪಾದರಸ ೮ ಭಾಗ, ಶುದ್ಧಿಮಾಡಿದ ಹವಳಸರಿಗಂಧಕ ೧೬ ಭಾಗ, ಮೊದಲು ಪಾದರಸದಲ್ಲಿ ಬೆಳ್ಳಿ

ಯನ್ನು ಕಲಿಸಿ ಅರೆದು ರಜತಭಾಗವು ಕಾಣಿಸದೆ ಹೋದನಂತರ ಗಂಧಕವನ್ನು ಹಾಕಿ ಕಜ್ಜಲಿಮಾಡಿ ೩ ದಿನಗಳು ಅರೆಯುಬೇಕು. ಚೆನ್ನಾಗಿ ಕಲೆತುಹೋದ ನಂತರ ಕರೀಹತ್ತಿಹೂವಿನ ರಸದಿಂದಲೂ, ಲೋಳಿಸರದ ರಸದಿಂದಲೂ ಮೂರು ಮೂರು ದಿನ ಅರೆದು ಬಿಲ್ಲೆಮಾಡಿ ಒಣಗಿಸಿ ಚೂರ್ಣಮಾಡಿ ಗಾಜಿನ ಸೀಸಾ ಯಿಗೆ ಚೀಲುಮಾಡಿ ಅದರಲ್ಲಿ ಅರ್ಧಭಾಗಕ್ಕೆ ಚೂರ್ಣವನ್ನು ತುಂಬಿ ವಾಲುಕಾ ಯಂತ್ರದಲ್ಲಿಟ್ಟು ಕ್ರಮಾಗ್ನಿಗಳಿಂದ ೩ ದಿನಗಳು ಪಾಕಮಾಡಬೇಕು. ಎಲ್ಲಾ ವಿಷಯಗಳನ್ನೂ ಪೂರ್ಣಚಂದ್ರೋದಯದಂತೆಯೇ ತಿಳಿಯುವುದು.

ಪ್ರಮಾಣವು :—೨ ರಿಂದ ೬ ಭತ್ತದಕಾಳುಗಳವರಿಗೆ.

ಗುಣವು :—ರಸಾಯನ, ವಾಜೀಕರಣ, ದೀಪನ, ಅನುಪಾನವಿಶೇಷಗಳಿಂದ ಪೂರ್ಣಚಂದ್ರೋದಯ ರಸವು ಎಷ್ಟು ರೋಗಗಳಮೇಲೆ ಪ್ರಯೋಗಿಸ ಬಹುದೋ ಅದೇರೀತಿ ಇದನ್ನೂ ಪ್ರಯೋಗಿಸಬಹುದು. ಉಷ್ಣ ತತ್ವಗಳ ಮೇಲೆ ಪೂರ್ಣಚಂದ್ರೋದಯಕ್ಕಿಂತಲೂ ಇದು ಉತ್ತಮವಾದುದು.

## ವಸಂತ ಕುಸುಮಾಕರ.

ಸುವರ್ಣ ಭಸ್ಮ ೨ ತೊಲೆ, ರಜಿತ ಭಸ್ಮ ೨ ತೊಲೆ, ವಂಗ ಭಸ್ಮ ೩ ತೊಲೆ, ಶೀಸ ಭಸ್ಮ ೩ ತೊಲೆ, ಕಾಂತ ಭಸ್ಮ ೩ ತೊಲೆ, ರಸಸಿಂಧೂರ ೪ ತೊಲೆ, ಅಭ್ರಕ ಭಸ್ಮ ೪ ತೊಲೆ, ಪ್ರವಾಳ ಭಸ್ಮ ೪ ತೊಲೆ, ಮುತ್ತಿನ ಭಸ್ಮ ೪ ತೊಲೆ ಈ ಭಸ್ಮ ಗಳಲ್ಲಿ ಮೊದಲು ರಸಸಿಂಧೂರವನ್ನು, ಸುವರ್ಣ ಭಸ್ಮವನ್ನು, ಅಭ್ರಕ ಭಸ್ಮವನ್ನು ಬೆರಸಿ ಖಲ್ವದಲ್ಲಿ ಹಾಕಿ ಒಂದು ಜಾವ ಮರ್ದಿಸಿ ಅನಂತರ ಮಿಕ್ಕ ಭಸ್ಮಗಳನ್ನು ಹಾಕಿ ಒಂದು ದಿನ ಚನ್ನಾಗಿ ಬೆರಿಯುವಹಾಗೆ ಅರೆದು ಹಸುವಿನ ಹಾಲು, ಕಬ್ಬಿನ ರಸ, ಆಡುಸೋಗೆ ಕಷಾಯ, ಮುಡಿವಾಳದ ಕಷಾಯ, ಲಾವಂಚದ ಕಷಾಯ, ಶ್ರೀ ಗಂಧದ ಕಷಾಯ, ಅರಸಿನದ ರಸ ಅಥವಾ ಕಷಾಯ, ಬಾಳೇಗಡ್ಡೆ ರಸ, ತಾವರೇಹುವ್ವಿನ ಕಷಾಯ, ಜಾಜೀಹುವ್ವಿನ ಕಷಾಯ ಇವು ಪ್ರತಿವಂದ ರಲ್ಲಿಯೂ ಏಳು ಭಾವನೆಮಾಡಿ ಏಳು ಮರ್ದನೆಮಾಡಿ ಪಕ್ವಕ್ಕೆ ಬಂದಮೇಲೆ ೧ ತೊಲೆ ಕಸ್ತೂರಿಯನ್ನು ಪ್ರತ್ಯೇಕವಾಗಿ ಶ್ರೀಗಂಧದ ಕಷಾಯದಿಂದ ಚನ್ನಾಗಿ ಅರದು ಮೇಲ್ಕಂಡ ಸಿದ್ಧವಾದ ಔಷಧದೊಡನೆ ಕೂಡಿಸಿ ಚನ್ನಾಗಿ ಅರೆದು ಬಿಲ್ಲೆಮಾಡಿ ಒಣಗಿಸಿ ಖಲ್ವದಲ್ಲಿ ಹಾಕಿ ಅರೆದು ಸೀಸೆಯಲ್ಲಿ ಇಟ್ಟು ಕೊಳ್ಳುವುದು. ಹೊತ್ತಿಗೆ ೨ ರಿಂದ ೩ ಭತ್ತದಕಾಳಿನ ತೂಕ ಔಷಧವನ್ನು ಆಕಳತುಪ್ಪ, ಸಕ್ಕರೆ ಇವುಗಳೊಡನೆ ಬೆರಸಿ ಸೇವಿಸಲು ರಸಾಯನ, ವಾಜೀ ಕರಣ, ದೀಪನಕಾರಿ ಮತ್ತು ಮಧುಮೂತ್ರ, ಬಹುಮೂತ್ರ, ಕ್ಷಯರೋಗ, ರಕ್ತಪಿತ್ತ, ಮೂತ್ರಕೃಚ್ಛ್ರ, ಮೂತ್ರಾಘಾತ ಇವುಗಳನ್ನು ಪರಿಹರಿಸುವುದು. ಅನುಪಾನಭೇದಗಳಿಂದ ಸಕಲರೋಗಗಳನ್ನೂ ಪರಿಹರಿಸುವುದು.

## ಷಡ್ಗುಣ ಸಿಂಧೂರ.

ಶುದ್ಧಿಮಾಡಿದ ಪಾದರಸ ೧ ಭಾಗ, ಶುದ್ಧಿಮಾಡಿದ ಹವಳಸರಿಗಂಧಕ ೬ ಭಾಗ ಈ ಎರಡನ್ನೂ ಕಲ್ವದಲ್ಲಿಹಾಕಿ ಕಜ್ಜಲಿಮಾಡಿ ೩ ದಿನಗಳು ಅರೆಯಬೇಕು. ನಂತರ ೭ ಚೀಲುಗಳನ್ನು ಮಾಡಿದ ಗಾಜಿನ ಸೀಸಾಯಿಯಲ್ಲಿ ಅರ್ಧ ಭಾಗದವರೆಗೂ ಔಷಧವನ್ನು ಹಾಕಿ, ವಾಲುಕಾಯಂತ್ರದಲ್ಲಿ ಮೂರು ದಿನಗಳು ದೀಪ, ಕಮಲ, ಗಾಢಾಗ್ನಿಗಳಿಂದ ಪಾಕಮಾಡಬೇಕು. ಸಾಂಗಶೀತಲವಾದ ನಂತರ ಸೀಸಾಯಿಯನ್ನು ತೆಗೆದು ಚೀಲನ್ನು ಬಿಚ್ಚಿ ಸೀಸಾಯಿಯನ್ನು ಒಡೆದು ಮೇಲ್ಭಾಗದಲ್ಲಿರುವ ಸಿಂಧೂರವನ್ನು ತೆಗೆದಿಟ್ಟುಕೊಳ್ಳುವುದು. ಒಂದುವೇಳೆ ಗಂಧಕವು ಸೀಸಾಯಿಯ ತಳದಲ್ಲಿ ಕರ್‍ರಗೆ ಸೀದುಹೋಗಿದ್ದರೆ ತೆಗೆದುಹಾಕಬೇಕು. ಉರಿಯು ಹೆಚ್ಚಾದರೆ ಸಿಂಧೂರವರ್ಣವು ಕೊಂಚ ಕಡಿಮೆಯಾಗುವುದು. ಉರಿಯು ಕಡಿಮೆಯಾದರೆ ಔಷಧವು ಪಾಕವಾಗದೆ ಕೊಂಚ ಶೇಷವು ನಿಂತುಹೋಗುವುದು. ಅದಕ್ಕೆ ಪುನಹ ಸಮಭಾಗ ಗಂಧಕವನ್ನು ಸೇರಿಸಿ ಪಾಕವನ್ನು ಮಾಡಬೇಕು.

ಪ್ರಮಾಣ—೧ ರಿಂದ ೪ ಭತ್ತದಕಾಳಿನವರಿವಿಗೆ.

ಗುಣವು—ದೀಪನ, ರಸಾಯನ, ಇದು ಸರ್ವಜ್ವರಗಳನ್ನು, ಕಾಮಾಲೆ, ಪಾಂಡು, ಕೆಮ್ಮಲು ಮೊದಲಾದುವನ್ನು ಪರಿಹರಿಸುವುದು.

ಜ್ವರಗಳಿಗೆ—ತ್ರಿಕಟುಕ ಚೂರ್ಣದೊಡನೆ ಕೊಡಬೇಕು.

ಉಷ್ಣದ ಕೆಮ್ಮಲಿಗೆ — ಸೀಮೆತವಾಕ್ಷಿರಿ, ತಿಪ್ಪಸತ್ತು, ಲವಂಗಗಳ ಚೂರ್ಣ ಇವುಗಳೊಡನೆ ಕಲೆಸಿ ತೆಗೆದುಕೊಳ್ಳಬೇಕು.

ಕಾರ್ಶ್ಯಕ್ಕೆ—ಹಿರೀಮದ್ದಿನಗಡ್ಡೆಯ ಚೂರ್ಣ, ತಿಪ್ಪಸತ್ತು, ಹಿಪ್ಪಲಿ, ಸೀಮೆತವಾಕ್ಷರಿ ಇವುಗಳಲ್ಲಿ ಸಿಂಧೂರವನ್ನು ಕಲೆಸಿ ಕೊಡಬೇಕು.

ಈ ಚೂರ್ಣವು ದೊಡ್ಡವರಿಗೆ ೧೦ ಭತ್ತದಕಾಳಿನ ತೂಕವೂ, ಚಿಕ್ಕವರಿಗೆ ೫ ಭತ್ತದಕಾಳಿನ ತೂಕವೂ ಎರಡು ಔನ್ಸು ಆಕಳನೊರೆಹಾಲಿನಲ್ಲಿ ಕೊಡಬೇಕು.

## ಚಂಡಮಾರುತ ಸಿಂಧೂರ.

ಶುದ್ಧಿಮಾಡಿದ ಸವ್ವೀರ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ರಸಕರ್ಪೂರ ೨ ತೊಲೆ, ಸ್ವಂತವಾಗಿ ತಯಾರುಮಾಡಿದ ರಸಸಿಂಧೂರ ೧ ತೊಲೆ (ಅಂಗಡಿಯಲ್ಲಿ ಮಾರುವ ರಸಸಿಂಧೂರ ಕೂಡದು), ಶುದ್ಧಿ ಮಾಡಿದ ಇಂಗಳೀಕ ೪ ತೊಲೆ ಇವುಗಳನ್ನು ಪ್ರತ್ಯೇಕಪ್ರತ್ಯೇಕವಾಗಿ ಖಲ್ವದಲ್ಲಿ ಅರದು ಎಲ್ಲವನ್ನು ಒಂದಾಗಿಶೇರಿಸಿ ಖಲ್ವದಲ್ಲಹಾಕಿ ಕರೀಹತ್ತೀಸೊಪ್ಪಿನ ರಸದಲ್ಲಿ ವೂರುಜಾವ ಅರದು, ಲೋಳಿಸರದ ರಸದಲ್ಲಿ ಮೂರುಜಾವ ಅರದು ನಿಂಬೇ ಹಣ್ಣಿನ ರಸದಲ್ಲಿ ಮೂರುಜಾವ ಅರದು ಬಿಲ್ಲೆಮಾಡಿ ಒಣಗಿಸಿ ಕುಡಿಕೆಯಲ್ಲಿಟ್ಟು ಬಾಯಿಗೆ ಮುಚ್ಚಳಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಒಂದು

ಮಡಕೆಯಲ್ಲಿ ೨ ಅಂಗುಲ ಮರಳುಹಾಕಿ ಅದರಮೇಲೆ ಕುಡಿಕೆಯನ್ನಿಟ್ಟು ಮಡಕೆಯ ಕಂಠದವರಿವಿಗು ಮರಳುತುಂಬಿ ಮೇಲೆ ಮುಚ್ಚಳಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ವಲೆಯಮೇಲೆಯಿಟ್ಟು ೪ ಜಾವ ಕಮಲಾಗ್ನಿಯಿಂದ ಉರಿಹಾಕಿ ಸಾಂಗಶೀತಲವಾದನಂತರ ಔಷಧವನ್ನು ತೆಗೆದು ಖಲ್ವದಲ್ಲಿಹಾಕಿ ಅರದು ಶೀಸೆಯಲ್ಲಿ ಇಟ್ಟುಕೊಂಡು ಈ ಸಿಂಧೂರವನ್ನು ಹೊತ್ತಿಗೆ ೧ ಭತ್ತದಕಾಳು ಮೊದಲು ೨ ಭತ್ತದಕಾಳು ತೂಕದವರಿವಿಗು ತಾಟಬೆಲ್ಲದಲ್ಲಿ ಹುದುಗಿ ನುಂಗಿಸುವದು. ಹಳೆಯ ರೋಗಗಳಿಗೆ ೭ ದಿವಸದಮೇಲೆ ಕೊಡಕೂಡದು. ಇದರಿಂದ ಮೇಹಸಮ್ಮಂಧವಾದ ಪುರಾತನ ರೋಗಗಳು ಗುಣವಾಗುವುವು.

## ಕಾಂತ ಸಿಂಧೂರ.

ಶುದ್ಧಿಮಾಡಿದ ಕಾಂತಕ್ಕೆ ಸಮ ಶುದ್ಧಿಮಾಡಿದ ಇಂಗಳೀಕವನ್ನು ಬೆರಸಿ ಖಲ್ವದಲ್ಲಿಹಾಕಿ ನಿಂಬೇಹಣ್ಣಿನ ರಸದಿಂದ ಚನ್ನಾಗಿ ಅರದು ಬಿಲ್ಲೆಮಾಡಿ ಒಣಗಿಸಿ ಹಣತೆಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಒಂದುಮೊಳ ಪುಟಹಾಕುವದು. ಈರೀತಿ ಮೂರು ಪುಟಹಾಕುವದು. ನೇರಳೆಚಕ್ಕೆ ರಸದಲ್ಲಿ ೩ ಪುಟ, ಪುಲ್ಲಂಪುರಸಿಸೊಪ್ಪಿನ ರಸದಲ್ಲಿ ೩ ಪುಟ, ಗರುಗದಸೊಪ್ಪಿನ ರಸದಲ್ಲಿ ೩ ಪುಟ, ಅಂತರಗಂಗೆಸೊಪ್ಪಿನ ರಸದಲ್ಲಿ ೩ ಪುಟ, ತ್ರಿಫಲೆ ಕಷಾಯದಲ್ಲಿ ನಿಂಬೇಹಣ್ಣಿನ ರಸಬೆರಸಿ ೧ ಪುಟ ಹಾಕಿದರೆ ಸಿಂಧೂರವಾಗುವದು. ಈ ಸಿಂಧೂರಕ್ಕೆ ಕಾಂತಭಸ್ಮದಂತೆಯೇ ಗುಣ ಇರುವದು. ಅದರಂತೆಯೇ ಸೇವಿಸುವದು.

## ಸತ್ತು ಸಿಂಧೂರ.

ಶುದ್ಧಿಮಾಡಿದ ಸತ್ತನ್ನು ಕಬ್ಬಿಣದ ಬಾಂಡ್ಲಿಯಲ್ಲಿ ಹಾಕಿ ಕರಗಿಸಿ ಇದಕ್ಕೆ ಸ್ವಲ್ಪಸ್ವಲ್ಪವಾಗಿ ಪೆಟ್ಲುಪ್ಪನ್ನು ಹಾಕುತ್ತಾ ಲೋಳಿಸರದ ಬೇರಿನಿಂದ ೧ ಜಾವ ತಿರುವಿ ಆದನಂತರ ಒಣಗಿದ ಉತ್ತರೇಣಿಸಮೂಲವನ್ನು ಹಾಕಿ ಅದೇ ಲೋಳಿಸರದ ಬೇರಿನಿಂದ ೧ ಜಾವ ತಿರುವುತ್ತಾ ಇದ್ದರೆ ಸತ್ತು ಚೂರ್ಣವಾಗುವುದು. ಈ ಚೂರ್ಣವನ್ನು ಖಲ್ವದಲ್ಲಿ ಹಾಕಿ ವೀಳೆಯದೆಲೆ ರಸದಿಂದ ಒಂದುಜಾವ ಅರದು ಬಿಲ್ಲೆಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ೨ ಮೊಳಪುಟಗಳನ್ನಿಟ್ಟು ಸಾಂಗಶೀತಲವಾದನಂತರ ಔಷಧವನ್ನು ತೆಗೆದು ಖಲ್ವದಲ್ಲಿ ಹಾಕಿ ಜುಟ್ಟುವೇಸೊಪ್ಪಿನ ರಸದಿಂದ ಅರದು ೨ ಮೊಳವುಟಗಳನ್ನು, ಮುಳ್ಳುಅರವೇಸಮೂಲದ ರಸದಿಂದ ಅರೆದು ೨ ಪುಟ, ಕಿರುನೆಲ್ಲಿಸೊಪ್ಪಿನ ರಸದಿಂದ ಅರದು ೨ ಪುಟ, ಲೋಳಿಸರದ ರಸದಿಂದ ಅರದು ೨ ಪುಟ, ಅಶ್ವತ್ಥದ ಚಕ್ಕೆ ರಸದಿಂದ ಅರದು ೨ ಪುಟ, ಮುತ್ತುಗದಚಕ್ಕೆ ರಸದಿಂದ ಅರದು ೨ ಪುಟ, ನಿಂಬೇಹಣ್ಣಿನ ರಸದಿಂದ ಅರದು ೧ ಪುಟವನ್ನು ಹಾಕಿದರೆ ನಿಷ್ಕಳಂಕವಾದ ಸಿಂಧೂರವಾಗುವುದು.

## ಅನ್ನಬೇದಿ ಸಿಂಧೂರ.

ಶುದ್ಧಿಮಾಡಿದ ಅನ್ನಬೇದಿಯನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲಿ ಒಂದು ದಿನ, ಲೋಳಿಸರದ ರಸದಲ್ಲಿ ಒಂದು ದಿನ, ಪುಲ್ಲಂಪುರಸೇಸೊಪ್ಪಿನ ರಸದಲ್ಲಿ ಒಂದು ದಿನ ಅರದು ಬಿಲ್ಲೆಮಾಡಿ ಒಣಗಿಸಿ ಹಣತೆಗಳಲ್ಲಿಟ್ಟು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಒಣಗಿಸಿ ೧೦೦ ಬೆರಣಿಗಳಲ್ಲಿ ಪುಟವಿಡಲು ಸಿಂಧೂರವಾಗುವುದು. ಸಾಂಗಶೀತಲವಾದನಂತರ ತೆಗೆದು ಹೊತ್ತಿಗೆ ಒಂದು ಗುರುಗಂಜಿ ಪ್ರಮಾಣ ಜೇನುತುಪ್ಪದಲ್ಲಿ ಕೊಡಲು ದೀಪನಕಾರಿ, ರಕ್ತವೃದ್ಧಿ, ನೇತ್ರಗಳಿಗೆ ಹಿತಕಾರಿ, ರುಚಿಯನ್ನುಂಟುಮಾಡುವುದು. ಜ್ವರ, ಪ್ಲೀಹ, ಯಕೃತ್ತುದೋಷಗಳು, ಕಾಮಾಲೆ, ಪಾಂಡು ಇವು ಗುಣವಾಗುವವು.

೨ನೆ ವಿಧ—ಶುದ್ಧಿಮಾಡಿದ ಅನ್ನಬೇದಿ ತಂದು ಬಟ್ಟೆಯಲ್ಲಿ ಗಂಟುಕಟ್ಟಿ ಒಂದು ಮಡಕೆಗೆ ಗರುಗದಸೊಪ್ಪಿನರಸ ಹಾಕಿ ಡೋಲಾಯಂತ್ರದಿಂದ ೧ ಜಾವ ಬೇಯಿಸಿ ತೆಗೆದು ಒಣಗಿಸಿಕೊಳ್ಳುವುದು. ಈ ಅನ್ನಬೇದಿ ಖಲ್ವದಲ್ಲಿ ಹಾಕಿ ಚುರುಚುರಿಕೆಸೊಪ್ಪಿನ ರಸದಲ್ಲಿ ಅರದು ಬಿಲ್ಲೆಮಾಡಿ ಒಣಗಿಸಿ ಎರಡು ಹಣತೆಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ೧೫೦ ಬೆರಣಿಗಳಲ್ಲಿ ಪುಟಹಾಕಿದರೆ ಸಿಂಧೂರ ಆಗುವುದು. ಉಷ್ಣಜ್ವರಗಳಿಗೆ ೧ ಗುರುಗಂಜಿ ಪ್ರಮಾಣ ಹಸುವಿನ ತುಪ್ಪದಲ್ಲಿ ಕೊಡುವುದು. ಅಜೀರ್ಣ ಜ್ವರಗಳಿಗೆ, ಶೂಲೆಗೆ ಜೇನುತುಪ್ಪದಲ್ಲಿ ಸಿಂಧೂರ ಕಲಸಿ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ.

## ಕಲ್ಲುನಾರು ಸಿಂಧೂರ.

ಶುದ್ಧಿಮಾಡಿದ ಕಲ್ಲುನಾರನ್ನು ಖಲ್ವದಲ್ಲಿ ಹಾಕಿ ಮುಲ್ಲಂಗಿಗಡ್ಡೆಸಮೂಲದ ರಸದಲ್ಲಿ ಅರೆದು ಬಿಲ್ಲೆಮಾಡಿ ಒಣಗಿಸಿ ಮುಚ್ಚಳದಲ್ಲಿಟ್ಟು ಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಒಂದು ಮೊಳ ಪುಟಹಾಕಿ ಸಾಂಗಶೀತಲವಾದನಂತರ ಭಸ್ಮವನ್ನು ತೆಗೆದು ಖಲ್ವದಲ್ಲಿ ಹಾಕಿ ಮೇಲ್ಕಂಡಂತೆಯೇ ಅರೆದು ಮತ್ತೊಂದು ಪುಟಹಾಕಿದರೆ ಸಿಂಧೂರವಾಗುವುದು. ಈ ಸಿಂಧೂರವನ್ನು ಗುರುಗಂಜಿ ಪ್ರಮಾಣ ಹಸುವಿನ ಬೆಣ್ಣೆಯಲ್ಲಿ ಕಲಸಿ ತೆಗೆದುಕೊಳ್ಳಲು ಕುಸುಮರೋಗ, ಪ್ರಮೇಹ ಇವು ಗುಣವಾಗುವುದು.

## ಸಮುದ್ರಲವಣ ಸಿಂಧೂರ.

ಸಮುದ್ರಲವಣ ೬ ತೊಲೆ, ಕುಪ್ಪೇಸೊಪ್ಪಿನ ರಸ ೧೨ ತೊಲೆ ಇವು ಎರಡು ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ಬಿಲ್ಲೆಮಾಡಿ ಒಣಗಿಸಿ ೨ ಹಣತೆಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೫೦ ಬೆರಣಿಗಳಲ್ಲಿ ಪುಟಹಾಕಿದರೆ ಸಿಂಧೂರವಾಗುವುದು, ಪುನಃ ಮೇಲ್ಕಂಡ ರಸದಲ್ಲಿ ಅರದು ಬಿಲ್ಲೆ

ಮಾಡಿ ೩೦ ಬೆರಣಿಗಳಲ್ಲಿ ಪುಟಹಾಕಿ, ತಿರಿಗಿ ಅದೇ ರಸದಲ್ಲಿ ಅರದು ಬಿಲ್ಲೆಮಾಡಿ ೧೫ ಬೆರಣಿಗಳಲ್ಲಿ ಪುಟವಿಟ್ಟರೆ ಶುದ್ಧ ಸಿಂಧೂರವಾಗುವುದು. ಹೊತ್ತಿಗೆ ಹಾಗ ತೂಕ, ಅಡ್ಡತೂಕ ಜೇನುತುಪ್ಪದಲ್ಲಾಗಲಿ, ನಿಂಬೇಹಣ್ಣಿನ ರಸದಲ್ಲಾಗಲಿ ಕೊಡಬೇಕು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಕಲ ಶೂಲೆ, ಹೊಟ್ಟೇನೋವು ಗುಣವಾಗುವುದು.

## ಉಪ್ಪು ಸಿಂಧೂರ.

ತಿನ್ನುವ ಉಪ್ಪು ಖಲ್ವದಲ್ಲಿ ಹಾಕಿ ಅಂತರಪಾಚಿ ರಸದಲ್ಲಿ ಚನ್ನಾಗಿ ಅರದು ಬಿಲ್ಲೆಮಾಡಿ ಒಣಗಿಸಿ ೨ ಹಣತೆಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲು ಮಾಡಿ ಒಣಗಿಸಿ ಕುಕ್ಕುಟಪುಟ ಹಾಕುವುದು. ಈ ರೀತಿ ೭ ಪುಟಹಾಕಲು ಸಿಂಧೂರವಾಗುವುದು. ಈ ಸಿಂಧೂರ ಹೊತ್ತಿಗೆ ೧ ಹಣತೂಕ ನಿಂಬೇಹಣ್ಣಿನ ರಸ, ಹಸುವಿನ ಬೆಣ್ಣೆ, ಹೇರಳಿಹಣ್ಣಿನ ರಸ ಈ ಅನುಪಾನಗಳಲ್ಲಿ ಕೊಡುವುದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಕಲ ಶೂಲೆಗಳು ಗುಣವಾಗುವುದು.

## ರಸ ತಾಳಕ ಸಿಂಧೂರ.

ಶುದ್ಧಿಮಾಡಿದ ತಾಳಕ ೮ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೮ ತೊಲೆ, ಶುದ್ಧಿಮಾಡಿದ ಮಣಿಶಿಲೆ ೬ ತೊಲೆ, ಸೂರ್ತಿಬೆಳಗಾರ ಅರಳು ಮಾಡಿದ್ದು ೨ ತೊಲೆ, ಶುದ್ಧಿಮಾಡಿದ ನವಾಸಾಗರ ೧ ತೊಲೆ ಇವು ಖಲ್ವದಲ್ಲಿ ಹಾಕಿ ಮುತ್ತುಕದಚಕ್ಕೆ ರಸದಲ್ಲಿ ಅರದು ಬಿಲ್ಲೆಮಾಡಿ ವಣಗಿಸಿ ಪೀಂಗಾಣಿ (ಗಾಜಿನ) ಕುಪ್ಪಿಯಲ್ಲಿ ಇಟ್ಟು ೭ ಚೀಲುಮಣ್ಣುಮಾಡಿ ಒಂದು ಮಡಕೆಯಲ್ಲಿ ೪ ಅಂಗುಲ ಮರಳುಹಾಕಿ ಅದರಮೇಲೆ ಕುಪ್ಪಿಯಿಟ್ಟು ಮೇಲೆ ಕಂಠದವರಿವಿಗು ಮರಳುಹಾಕಿ ಅದರಮೇಲೆ ಮುಚ್ಚಳ ಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ವಲೆಯಮೇಲೆ ಇಟ್ಟು ೪ ಜಾವ ಉರಿಹಾಕಿ ಸಾಂಗಶೀತಲವಾದಮೇಲೆ ಮೇಲಿನ ಮಡಕೆಯಲ್ಲಿ ಇರುವ ಸಿಂಧೂರವನ್ನು ಕೆರೆದು ಇಟ್ಟುಕೊಳ್ಳುವುದು. ಹೊತ್ತಿಗೆ ಅರ್ಧ ಗುರುಗಂಜಿಯಷ್ಟು ಹಸುವಿನ ತುಪ್ಪದಲ್ಲಿ ಕೊಡುವುದು. ಹೀಗೆ ಬೆಳಿಗ್ಯೆ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ಹಸುವಿನ ಹಾಲು ಅನ್ನ. ಇದರಿಂದ ಗುಣ:—ಸಕಲ ಪ್ರಮೇಹ, ಮೇಹದಿಂದ ಹುಟ್ಟಿದ ವ್ರಣಗಳು ನಿವಾರಣೆ ಆಗುವುದು.

## ಸೂರ್ಯಕ್ಷಾರ-ಕಾಸೀಸ ಸಿಂಧೂರ.

ಶುದ್ಧಿಮಾಡಿದ ಅನ್ನಬೇದಿ ೩ ತೊಲೆ, ಪೆಟ್ಲುಪ್ಪು ೩ ತೊಲೆ ಇವೆರಡನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ಅರೆದು ಬಿಲ್ಲೆಮಾಡಿ ಒಣಗಿಸಿ ಹಣತೆ

ಯಲ್ಲಿಟ್ಟು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಒಣಗಿಸಿ ೫೦ ಬೆರಣಿಯಲ್ಲಿ ಪುಟವಿಟ್ಟು ತೆಗೆದು ಪುನಹ ಖಲ್ವದಲ್ಲಿ ಹಾಕಿ ಲೋಳೆಸರದ ರಸದಿಂದ ಅರೆದು ಬಿಲ್ಲೆಮಾಡಿ ಒಣಗಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಒಣಗಿಸಿ ೫೦ ಬೆರಣಿಯಲ್ಲಿ ಪುಟವಿಡಲು ಸಿಂಧೂರವಾಗುವದು. ಈ ಸಿಂಧೂರವನ್ನು ೨ ಭತ್ತದ ಕಾಳು ಮೊದಲುಗೊಂಡು ೪ ಭತ್ತದಕಾಳಿನವರಿಗು ಅನುಪಾನವಿಶೇಷಗಳಿಂದ ತೆಗೆದುಕೊಳ್ಳುವದರಿಂದ ನೇತ್ರರೋಗ, ಮೂತ್ರರೋಗ, ಗುಲ್ಮ, ಉದರರೋಗ, ಮೂತ್ರಕೃಚ್ಛ್ರ ಇತ್ಯಾದಿ ರೋಗಗಳು ಪರಿಹರವಾಗುವವು.

## ಪ್ರವಾಳದ ಸಿಂಧೂರ.

ಪ್ರವಾಳದ ಭಸ್ಮವನ್ನು ಖಲ್ವದಲ್ಲಿಹಾಕಿ ಹುಳಿದಾಳಿಂಬರೆ ಹಣ್ಣಿನ ರಸದಲ್ಲಿ ಅರದು ಬಿಲ್ಲೆಮಾಡಿ ಒಣಗಿಸಿ ೨ ಹಣತೆಗಳಲ್ಲಿಟ್ಟು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಒಣಗಿಸಿ ೨೦ ಬೆರಣಿಗಳಲ್ಲಿ ಪುಟವಿಡಲು ಸಿಂಧೂರವಾಗುವುದು. ಹೊತ್ತಿಗೆ ೧ ಗುರುಗಂಜಿಯಿಂದ ೨ ಗುರುಗಂಜಿ ಪ್ರಮಾಣ ಹಸುವಿನತುಪ್ಪ ಜೇನುತುಪ್ಪ ದಲ್ಲಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡ ಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕಾಸ, ಶ್ವಾಸ, ಕ್ಷಯ ಗುಣವಾಗುವುದು.

## ತಾಮ್ರ ಸಿಂಧೂರ.

ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ಪಾದರಸ ಕಾಲುತೊಲೆ ಇವೆರಡನ್ನು ಕಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ಅರದು ೧ ತೊಲೆ ಶುದ್ಧಿಮಾಡಿದ ತಾಮ್ರದ ರೇಖುಗಳಿಗೆ ಲೇಪಿಸಿ ಒಣಗಿಸಿ ಹಣತೆಯಲ್ಲಿ ಟ್ಟು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಒಣಗಿಸಿ ೧ ಗಜಪುಟವನ್ನು ಹಾಕಿ, ಸಾಂಗ ಶೀತಲವಾದನಂತರ ಔಷಧವನ್ನು ಎಕ್ಕದ ಹಾಲಿನಿಂದ ಅರದು ೧ ಗಜಪುಟವನ್ನು ಹಾಕಿ, ಸಾಂಗಶೀತಲವಾದನಂತರ ಔಷಧವನ್ನು ಗ್ರಹಿಸಿ ಪುನಃ ಹಂಸಪಾದಿ ಸೊಪ್ಪಿನ ರಸದಲ್ಲಿ ಅರೆದು ೧ ಗಜಪುಟವನ್ನೂ, ಪುನಃ ಆಲದ ಹಾಲಿನಿಂದ ಅರದು ೧ ಗಜಪುಟವನ್ನೂ, ಮೇಕೆ ಹಾಲಿನಿಂದ ಅರದು ೧ ಗಜಪುಟವನ್ನೂ, ಅಂತರಗಂಗೆ ರಸದಿಂದ ಅರದು ೧ ಗಜಪುಟವನ್ನೂ, ಅಶ್ವತ್ಥದ ಚಕ್ಕೆ ಕಷಾಯ ದಿಂದ ಅರದು ೧ ಗಜಪುಟವನ್ನೂ, ಜುವ್ವಿಚಕ್ಕೆ ಕಷಾಯದಿಂದ ಅರದು ೧ ಗಜ ಪುಟವನ್ನೂ ಹಾಕಲು ತಾಂಮ್ರವು ಸಿಂಧೂರವಾಗುವುದು.

## ಮೇಹಕ್ಕೆ ಅಯುಸ್ಸಿಂಧೂರ.

ಅಯುಸ್ಸಿಂಧೂರ ೩ ತೊಲೆ, ಕಾಂತಸಿಂಧೂರ ೩ ತೊಲೆ, ಕೃಷ್ಣಾಭ್ರಕ ಸಿಂಧೂರ ೩ ತೊಲೆ, ರಸಸಿಂಧೂರ ೩ ತೊಲೆ, ಇವುಗಳನ್ನು ಖಲ್ವದಲ್ಲಿ ಹಾಕಿ ಗರುಗದನೊಪ್ಪಿನ ರಸದಲ್ಲಿ ಅರೆದು ಬಿಲ್ಲೆಮಾಡಿ ಒಣಗಿಸಿ ೨ ಹಣತೆಗಳಲ್ಲಿಟ್ಟು

ಕೆಮ್ಮಣ್ಣು ಬಟ್ಟೆ ಚೀಲುಮಾಡಿ ೨೦ ಬೆರಣಿಗಳಲ್ಲಿ ಪುಟಹಾಕುವುದು. ತಿರಿಗಿ ಈ ಬಿಲ್ಲೆಯನ್ನು ತೆಗೆದುಕೊಂಡು ಲೋಳಿಸರದ ಬೇರಿನ ರಸದಲ್ಲಿ ಅರೆದು ಬಿಲ್ಲೆ ಮಾಡಿ ಒಣಗಿಸಿ ೨ ಹಣತೆಗಳಲ್ಲಿಟ್ಟು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ೨೦ ಬೆರಣಿಗಳಲ್ಲಿ ಪುಟಹಾಕಿ ಖಲ್ವದಲ್ಲಿಹಾಕಿ ಅರೆದುಕೊಳ್ಳುವದು. ೧ ಗುರುಗಂಜಿ ಪ್ರಮಾಣ ಹೊತ್ತಿಗೆ ಹಸುವಿನ ತುಪ್ಪದಲ್ಲಿ ಕಲಸಿಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೫ ದಿವಸ ಕೊಡಬೇಕು. ಇದಕ್ಕೆ ಪತ್ಯ ಹಸುವಿನ ಹಾಲು ಅನ್ನ. ಇದರಿಂದ ಗುಣ:—ವಿಂಶತಿಮೇಹ, ಕೆಟ್ಟವ್ರಣಗಳು ನಿವಾರಣೆಯಾಗುವುದು.

## ಹದಿನೈದನೆಯ ಅಧ್ಯಾಯ.

### ವಿಷಕ್ಕೆ ಪ್ರತಿ ವಿಷಗಳು.

ವತ್ಸನಾಭಿಗೆ—ಹಿರೀಮದ್ದಿನ ಗಡ್ಡೆಯ ರಸ, ಹತ್ತಿಯಬೀಜದ ರಸ, ಗೋಮೂತ್ರ, ನಿಂಬೆಹಣ್ಣಿನ ರಸ, ಬೆಳಗಾರ; ಗಣಿಗಲು ವಿಷಕ್ಕೆ - ಅಳಲೇಕಾಯಿ ರಸ, ಹತ್ತಿಕಾಯಿ ರಸ, ತಂಗಡಿ, ನಿಂಬೆಹುಳಿ, ಕೊಗ್ಗಿ ರಸ, ನೇರಳೇಚಕ್ಕೆ ರಸ, ಹಿಪ್ಪಲೀ ಮೂಲ; ಗುರುಗಂಜಿಗೆ - ಚಿಲಕೀರೆ ರಸ, ನೇರಳೇಚಕ್ಕೆ ರಸ, ತಾಳೆಮೊಲೆ ರಸ; ವಿಷಮುಷ್ಟಿ ಬೀಜಕ್ಕೆ - ನೇರಳೇಸೊಪ್ಪಿನ ರಸ, ಅಥವ ಬೀಜದ ರಸ; ಕರ್ಪೂರಕ್ಕೆ-ತಂಗಡಿ ಹುವ್ವಿನ ರಸ, ಕರ್ಜೂರ, ನಿಂಬೇಹಣ್ಣಿನ ರಸ; ಉಮ್ಮತ್ತಿಗೆ-ತಾವರೇಗಡ್ಡೆಯ ರಸ, ಹುಣಿಸೆಹುಳಿ; ಉಮ್ಮತ್ತಿಸೊಪ್ಪಿಗೆ-ಬ್ಯಾಲದ ಸೊಪ್ಪು; ಗೇರುಬೀಜಕ್ಕೆ-ಹುಣಿಸೆಹುಳಿ, ತೂಬರೆಚಕ್ಕೆ, ಮುತ್ತುಗದ ಹುವ್ವು ಅದರ ತೊಗಟೆ; ಎಕ್ಕದಹಾಲಿಗೆ-ಬೆಣ್ಣೆ, ಹರಳೆಣ್ಣೆ; ಮುಂಡಗಳ್ಳಿಗೆ-ತಂಗಡಿ ಮೊಗ್ಗಿನ ರಸ; ತಿಗಡೆಗೆ-ಹಿಪ್ಪಲಿ, ಹಸುವಿನ ಹಾಲು; ಪಾದರಸಕ್ಕೆ-ಹತ್ತಿಯ ಬೀಜದ ರಸ, ನಿಂಬೇಹಣ್ಣಿನ ರಸ, ಸಕ್ಕರೆ, ಕರೀಹತ್ತಿಸೊಪ್ಪು ಮತ್ತು ಹೂವಿನ ರಸ, ಹಾಗಲಸೊಪ್ಪಿನ ರಸ, ಗಂಧಕ; ಭಂಗೀಸೊಪ್ಪಿಗೆ-ದುಂಪರಾಶ್ಮೆಚೂರ್ಣ, ಹಾಲು, ಮಜ್ಜಿಗೆ, ನಿಂಬೇಹಣ್ಣು; ಪಾಷಾಣದೋಷಕ್ಕೆ-ಹತ್ತೀಕಾಯಿಯರಸ; ಸುಣ್ಣಕ್ಕೆ-ಮಜ್ಜಿಗೆಗಡ್ಡೆ, ಕೊಬರಿ, ಹರಳೆಣ್ಣೆ, ಒಳ್ಳೆಣ್ಣೆ, ಯಳಚೀಸೊಪ್ಪು, ಹಾಲು; ನಿಂಬೇಹುಳಿಗೆ-ಮಜ್ಜಿಗೆ; ಕೆಸವೇದಂಟೆಗೆ-ಅಕ್ಕೀಕಚ್ಚು; ದತ್ತೂರಿ ವಿಷಕ್ಕೆ-ಹಾಲು, ಸಕ್ಕರೆ, ತಾವರೆಚೂರ್ಣ, ಲಕ್ಕಿಲಿ, ಅಕ್ಕೀತೊಳೆದ ನೀರು; ಬೀಜಗಳ ವಿಷಕ್ಕೆ-ನಿಂಬೇರಸ, ಸಕ್ಕರೆ; ಸಪ್ಪೀರಕ್ಕೆ-ನೇರಳೇ, ಎಳನೀರು.

ನಾಭಿಯನ್ನು ತಿಂದವನಿಗೆ ೧ ದುಡ್ಡಿನ ತೂಕ ಮೆಣಸನ್ನು ಕೆಂಪಗೆ ಬೇಯಿಸಿ ನೀರುಹಾಕಿ ಕಾಯಿಸಿ ಶೋಧಿಸಿ, ೧ ದುಡ್ಡಿನ ತೂಕ ಮೆಣಸಿನ ಚೂರ್ಣವನ್ನು

ಕಷಾಯದಲ್ಲಿ ಬೆರಸಿ, ಕೊಂಚ ತುಪ್ಪವನ್ನು ಸೇರಿಸಿ ಸೇವಿಸಲು ನಾಭಿಯು ವಿಷವು ಗುಣವಾಗುವುದು.

ಅಫೀಮನ್ನು ತಿಂದವರಿಗೆ ಹಸೀಶುಂಟಿ ರಸವನ್ನು ಕುಡಿಸಲು ಗುಣವಾಗುವುದು ಮತ್ತು ಒಳ್ಳೆಯ ಇಂಗುವನ್ನು ಮೂಸಿನೋಡಿದರೆ ಗುಣವಾಗುವುದು.

ಜಾಪಾಳ ತಿಂದವರಿಗೆ ಜೀರಿಗೆ ಚೂರ್ಣವನ್ನು ಎಮ್ಮೆ ಮೊಸರಿನಲ್ಲಿ ಕಲಸಿ ಕೊಡಲು ಗುಣವಾಗುವುದು. ಎಮ್ಮೆಸಗಣಿ ರಸವನ್ನು ಹಾಲಿನಲ್ಲಿ ಕೊಡುವುದು. ನಿಂಬೆಹುಳಿ ಪಾನಕ ಕೊಡುವುದು. ಮಜ್ಜಿಗೆ ಕುಡಿಸುವುದು.

ಮುಷ್ಟೀಸೊಪ್ಪಿನ ರಸವನ್ನು ಕುಡಿದವರಿಗೆ ನೇರಳೇಯಲೆಯ ರಸವನ್ನು ಕುಡಿಸುವುದು.

ಕರ್ಪೂರ ತೆಂಗಿನಕಾಯಿ ನೀರು ಕುಡಿದವರಿಗೆ ತಾಳೇಮೊಲೆ ರಸ, ಗರುಗದ ಸೊಪ್ಪಿನ ರಸ ಕುಡಿಸುವುದು.

ಎಕ್ಕದ ಹಾಲನ್ನು ಕುಡಿದವರಿಗೆ ನೀಲೀಸೊಪ್ಪಿನ ರಸವನ್ನು ಕುಡಿಸುವುದು.

ಅಫೀಂ ಎಣ್ಣೆ ಕುಡಿದವರಿಗೆ ಹಸೆ ಅಕ್ಕಿತೊಳೆದ ನೀರನ್ನು ಕುಡಿಸುವುದು.

## ಹದಿನಾರನೆಯ ಅಧ್ಯಾಯ.

## ಜ್ವರಗಳು ಮತ್ತು ಔಷಧಗಳು.

### ಜ್ವರ ವಿವರಣೆ.

೧. ವಾತಜ್ವರವು:—ಮಾಂಸಧಾತುವನ್ನನುಸರಿಸಿ ಶರೀರವು ವೇದನೆಯೊಡನೆ ಕೂಡಿರುವುದು.

೨. ಪಿತ್ತಜ್ವರವು :—ರಕ್ತಧಾತುವನ್ನನುಸರಿಸಿ ಅತ್ಯುಷ್ಣ, ತಪ್ಪುಮಾತುಗಳು, ತಲೆತಿರುಗು, ವಮನ, ಮೂರ್ಛೆ, ದಾಹ, ನಾಲಿಗೆಯಲ್ಲಿ ಕಹಿ ಇಂತಹ ಗುರುತುಗಳುಳ್ಳದ್ದಾಗಿರುವುದು.

೩. ಶ್ಲೇಷ್ಮಜ್ವರವು :—ಶ್ವಾಸಾವಯವವನ್ನನುಸರಿಸಿ ಕೆಮ್ಮುಲೊಡಗೂಡಿರುವುದು.

೪. ವಾತಪಿತ್ತಜ್ವರವು :—ಮಾಂಸಧಾತುವನ್ನೂ ರಕ್ತಧಾತುವನ್ನೂ ಅನುಸರಿಸಿರುವುದು.

೫. ವಾತಶ್ಲೇಷ್ಮಜ್ವರವು :—ಮಾಂಸಧಾತುವನ್ನೂ ಶ್ವಾಸಾವಯುವವನ್ನೂ ಅನುಸರಿಸಿರುವುದು.

೬. ಶ್ಲೇಷ್ಮಪಿತ್ತಜ್ವರವು :—ಶ್ವಾಸಾವಯವವನ್ನೂ ರಕ್ತಧಾತುವನ್ನೂ ಅನುಸರಿಸಿರುವುದು.

೭. ಸನ್ನಿಪಾತಜ್ವರವು :—ಮಜ್ಜಾಧಾತುವನ್ನನುಸರಿಸಿ ದೌರ್ಬಲ್ಯ, ಮನೋವಿಕಾರ, ಅಜ್ಞಾನ ಇಂತಹ ಲಕ್ಷಣಗಳುಳ್ಳದ್ದಾಗಿರುವುದು.

ಆಗಂತುಕಜ್ವರವು :—ಅವ್ಯಕ್ತಕಾರಣವಾಗಿ ಹುಟ್ಟುವುದು.

೮. ಅಭಿಘಾತಜ್ವರವು :—ಅಧಿಕವಾಗಿ ಕಷ್ಟಮಾಡೋಣದರಿಂದ ಹುಟ್ಟುವುದು. ಏಟು ತಗಲುವದರಿಂದಲೂ ಗಾಯದಿಂದಲೂ ಸಹ ಹುಟ್ಟುವುದು.

೯. ಶಾಪಜ್ವರವು :—ದೊಡ್ಡವರ ಶಾಪದಿಂದ ಹುಟ್ಟುವುದು.

೧೦. ಅಭಿಚಾರಜ್ವರವು :—ಕೃತ್ರಿಮ ಮಂತ್ರಾದಿಗಳಿಂದ ಹುಟ್ಟುವುದು.

ಅಭಿಷಂಗಜ್ವರವು :—ನೋಂಕಿನಿಂದ ಹುಟ್ಟುವುದು.

೧೧. ಭೂತಾವೇಶಜ್ವರವು, ಇಲ್ಲವೆ ಪೈಶಾಚಜ್ವರವು.

೧೨. ಔಷಧಗಂಧಜ್ವರವು :—ರಸಗಂಧಕ ಪಾಷಾಣ ಗೇರುಗಳ ಗಂಧ ಸೇವನೆಯಿಂದ ಹುಟ್ಟುವುದು.

೧೩. ವಿಷಜ್ವರವು :—ಘಾಳಿಯ ದೋಷದಿಂದ ಹುಟ್ಟುವುದು.

೧೪. ಕೋಪಜ್ವರವು :—ಕೋಪಾಧಿಕ್ಯದಿಂದ ಹುಟ್ಟುವುದು.

೧೫. ಭಯಜ್ವರವು :—ಭೀತಿಹೊಂದುವುದರಿಂದ ಹುಟ್ಟುವುದು.

೧೬. ದುಃಖಜ್ವರವು :—ವ್ಯಸನದಿಂದ ಉಂಟಾಗುವುದು.

೧೭. ಕಾಮಜ್ವರವು :—ಕಾಮೋದ್ರೇಕದಿಂದ ಹುಟ್ಟುವುದು.

## ಸಂತತಾದಿ ಜ್ವರಭೇದಗಳು.

೧೮. ಸಂತತಜ್ವರವು :—ಶರೀರದಲ್ಲಿ ಒಳಗೆ ಎಡಬಿಡದಿರುವದು, ರಾತ್ರಿ ಹಗಲು ಕಾಯುವುದು.

೧೯. ಸತತಜ್ವರವು :—ರಾತ್ರಿಯಲ್ಲೂ ಹಗಲಿನಲ್ಲೂ ಎಡಬಿಡದೆ ಶರೀರದೊಳಗೆ ಹೊರಗೆ ಸಹ ಕಾಯುತ್ತಿರುವುದು. ಇದೇ ಹಗಲು ಒಂದು ಸಲ ರಾತ್ರಿ ಒಂದುಸಲ ಬರುವುದೂ ಉಂಟು.

೨೦. ಅನ್ಯೇದ್ಯುಷ್ಕಜ್ವರವು :—ಪ್ರತಿ ದಿನದಲ್ಲೂ ಒಂದುಸಲ ಬಂದು ಆರುವುದು.

೨೧. ದ್ವಾಹಿಕಜ್ವರವು :—ಎರಡುದಿನಕ್ಕೊಂದುಸಲ ಬರುವುದು.

೨೨. ತ್ರ್ಯಾಹಿಕಜ್ವರವು :—ಮೂರುದಿನಕ್ಕೊಂದುಸಲ ಬರುವುದು.

೨೩. ಚಾತುರ್ಥಿಕಜ್ವರವು :—ನಾಲ್ಕುದಿನಕ್ಕೊಂದುಸಲ ಬರುವುದು. ಇದು ಕಷ್ಟಸಾಧ್ಯವಾದುದು.

೧. ಶಾರೀರಜ್ವರವು :—ಆದಿಯಲ್ಲಿ ಶರೀರವನ್ನನುಸರಿಸಿ ಹುಟ್ಟುವದು.

೨. ಮಾನಸಿಕಜ್ವರವು :—ಮನಸ್ಸನ್ನನುಸರಿಸಿ ಹುಟ್ಟುವದು.

೩. ಸೌಮ್ಯಜ್ವರವು :—ಮೊದಲು ಶಾಂತವಾಗಿ ಹುಟ್ಟುವದು.

೪. ತೀಕ್ಷ್ಣಜ್ವರವು :—ಮೊದಲತ್ಯುಗ್ರವಾಗಿ ಹುಟ್ಟುವದು.

೫. ಅಂತರ್ಜ್ವರವು ಅಥವ ಒಳಜ್ವರವು :—ಮೊದಲು ಹೊಟ್ಟೆಯಲ್ಲಿ ಸಂಕಟವಾಗಿ ಬಳಿಕ ಕಾಣುವದು.

೬. ಬಹಿರ್ಜ್ವರವು ಅಥವ ಹೊರಜ್ವರವು :—ಹೊರಗೆ ಚರ್ಮವನ್ನನುಸರಿಸಿ ಹುಟ್ಟುವದು.

೭. ಪ್ರಾಕೃತಜ್ವರವು.

೮. ವೈಕೃತಜ್ವರವು.

೯. ಸಾಧ್ಯಜ್ವರವು.

೧೦ ಅಸಾಧ್ಯಜ್ವರವು.

೧೧. ಆಮಜ್ವರವು :—ಆಮಾಧಿಕ್ಯದಿಂದೊಡಗೂಡಿರುವದು.

೧೨. ನಿರಾಮಜ್ವರವು :—ಆಮಶೋಷೆಯಿಂದ ಹುಟ್ಟುವದು. ಇದರಲ್ಲಿ ಅನ್ನ ಜೀರ್ಣವಾಗದು.

ಈ ೧೨ ಜಾತಿ ಜ್ವರಗಳೊಡನೆ ಮೇಲೆ ಹೇಳಿದ ೨೩ ಜ್ವರಗಳೂ ಒಂದರಲ್ಲೊಂದೊಡಗೂಡಿ ಅನೇಕ ವಿಧಗಳಾಗಿ ಭೇದಿಸುತ್ತವೆ.

ಹ್ಯಾಗಂದರೆ:—ಒಂದರಲ್ಲೊಂದು ಶೇರಿದಾಗ ವಾತಶಾರೀರಜ್ವರ, ವಾತಮಾನಸಿಕಜ್ವರ, ವಾತಸೌಮ್ಯಜ್ವರ, ವಾತತೀಕ್ಷ್ಣಜ್ವರ, ವಾತಾಂತರ್ಜ್ವರ, ವಾತಬಹಿರ್ಜ್ವರ, ವಾತಪ್ರಾಕೃತಜ್ವರ, ವಾತವೈಕೃತಜ್ವರ, ವಾತಸಾಧ್ಯಜ್ವರ, ವಾತಸಾಧ್ಯಾಜ್ವರ, ವಾತಾಮಜ್ವರ, ವಾತನಿರಾಮಜ್ವರವೆಂದು ಕರೆಯಲ್ಪಡುವವು. ಈ ವಿಧವಾಗಿಯೇ ಮಿಕ್ಕ ೨೨ ವಿಧ ಜ್ವರಗಳಿಗೂ ಹೆಸರನ್ನಿಟ್ಟುಕೊಳ್ಳುವದು.

ಮತ್ತೂ ಆಯುರ್ವೇದಜ್ವರ ಪ್ರಕರಣದಲ್ಲಿ ೬೪ ಭೇದಗಳಾಗಿ ವಿವರಿಸಿದೆ ಯಾವವಂದರೆ :—

೧. ವಾತಜ್ವರವು.

೨. ಪಿತ್ತಜ್ವರವು.

೩. ಶ್ಲೇಷ್ಮಜ್ವರವು.

೪. ವಾತಪಿತ್ತಜ್ವರವು.

೫. ವಾತಶ್ಲೇಷ್ಮಜ್ವರವು.

೬. ಪಿತ್ತಶ್ಲೇಷ್ಮಜ್ವರವು.

೭. ಸನ್ನಿಪಾತಜ್ವರವು.

೮. ಭೂತಜ್ವರವು.

೯. ಕೋಪಜ್ವರವು.

೧೦. ಅಭಿಚಾರಜ್ವರವು.

೧೧. ಭಯಜ್ವರವು.

೧೨. ಪಿಶಾಚಜ್ವರವು.

೧೩. ವಿಷಮಜ್ವರವು.

೧೪. ಕಾಮಜ್ವರವು.

೧೫. ಆಮಜ್ವರವು.

೧೬. ನಿರಾಮಜ್ವರವು.

೧೭. ರಸಧಾತುಗತಜ್ವರವು:—ಏಳು ದಿನದಮೇಲೆ ರಕ್ತಧಾತುವನ್ನನುಸರಿಸುವುದು.

೧೮. ರಕ್ತಧಾತುಗತಜ್ವರವು:—೨೧ ದಿನಗಳಮೇಲೆ ಮಾಂಸಧಾತುವನ್ನನುಸರಿಸುವುದು.

೧೯. ಮಾಂಸಧಾತುಗತಜ್ವರವು:— ೨ ತಿಂಗಳಮೇಲೆ ಮೇದೋಧಾತುವನ್ನನುಸರಿಸುವದು.

೨೦. ಮೇದೋಧಾತುಗತಜ್ವರವು:—೫ ತಿಂಗಳಮೇಲೆ ಅಸ್ಥಿಧಾತುವನ್ನನುಸರಿಸುವುದು.

೨೧. ಅಸ್ಥಿಗತಜ್ವರವು:—೨ ಸಂವತ್ಸರಗಳಮೇಲೆ ಮಜ್ಜಾಧಾತುವನ್ನನುಸರಿಸುವುದು.

೨೨. ಮಜ್ಜಾಧಾತುಗತಜ್ವರವು:—೩ ಸಂವತ್ಸರದಮೇಲೆ ಶುಕ್ಲಧಾತುವನ್ನನುಸರಿಸುವದು.

೨೩. ಶುಕ್ಲಧಾತುಗತಜ್ವರವು:—ಇದರಲ್ಲಿ ಶಿಶ್ನವೂ ವೀರ್ಯವೂ ಬತ್ತುವವು.

೨೪. ಏಕಾಹಿಕಜ್ವರವು.

೨೫. ದ್ವ್ಯಾಹಿಕಜ್ವರವು.

೨೬. ತ್ರ್ಯಾಹಿಕಜ್ವರವು.

೨೭. ಚಾತುರ್ಥಿಕಜ್ವರವು.

೨೮. ಪಂಚಾಹಿಕಜ್ವರವು:—ಇದನ್ನೇ ಚಾತುರ್ಥಿಕ ವಿಪರೀತವೆನ್ನುವರು.

೨೯. ದೈವಪ್ರಕೋಪಜ್ವರವು:—ದೈವಪ್ರೇರಣೆಯಿಂದ ಹುಟ್ಟುವದು.

೩೦. ಗಾಂಧರ್ವಜ್ವರವು.

೩೧. ತಾಂತ್ರಿಕಜ್ವರವು.

೩೨. ಮೂರ್ಛಾಜ್ವರವು :—ಮೂರ್ಛೆಯೊಡಗೂಡಿರುವದು.

೩೩. ಪ್ರಲಾಪಜ್ವರವು :—ಭ್ರಮೆಮಾತುಗಳೊಡಗೂಡಿರುವದು.

೩೪. ಶೀತಜ್ವರವು.

೩೫. ಸ್ವೇದಜ್ವರವು :—ಅಧಿಕವಾಗಿ ಬೆವರಿನೊಡಗೂಡಿರುವದು.

೩೬. ಕ್ರಿಮಿಜ್ವರವು :—ಕರುಳಿನಲ್ಲಿ ಕ್ರಿಮಿ ಹೆಚ್ಚುವದರಿಂದ ಹುಟ್ಟುವದು.

೩೭. ಹಾರಿದ್ರಜ್ವರವು :—ಸರ್ವಾಂಗವರಿಸಿನಬಣ್ಣದಿಂದೊಡಗೂಡಿರುವದು.

೩೮. ಉದಯುದಜ್ವರವು :—ಸೂರ್ಯೋದಯಕಾಲದಲ್ಲಿ ಕಾಣುವದು.

೩೯. ಮಧ್ಯಾಹ್ನಜ್ವರವು :—ಮಧ್ಯಾಹ್ನದ ಸಮಯದಲ್ಲಿ ಕಾಣುವದು.

೪೦. ಸಾಯಾಹ್ನಜ್ವರವು :—ಸಾಯಂಕಾಲದಲ್ಲಿ ಕಾಣುವದು.

೪೧. ನಿಶಾಜ್ವರವು :—ಅರ್ಧರಾತ್ರಿಯಲ್ಲಿ ಕಾಣುವದು.

೪೨. ಶೋಷಜ್ವರವು :—ಅಧಿಕ ಬಾಯಾರಿಕೆಯಿಂದೊಡಗೂಡಿರುವದು.

೪೩. ತಾಪಜ್ವರವು :—ಅಧಿಕವಾದುರಿಯೊಡಗೂಡಿರುವದು.

೪೪. ವ್ರಣಜ್ವರವು :—ವ್ರಣವೇದನೆಯಿಂದ ಹುಟ್ಟುವದು.

೪೫. ಆತಪಜ್ವರವು :—ಬಿಸಲಿನ ವೇಗದಿಂದ ಹುಟ್ಟುವದು.

೪೬. ಹೀನಧ್ವನಿಜ್ವರವು :—ಧ್ವನಿ ತಗ್ಗಿರುವದು.

೪೭. ಅಗ್ನಿಮಾಂದ್ಯಜ್ವರವು :—ಹಸಿವಿಲ್ಲದೆ ದುರ್ಬಲದಿಂದೊಡಗೂಡಿರುವದು.

೪೮. ಉದ್ಗಾರಜ್ವರವು :—ತೇಗಿನಿಂದೊಡಗೂಡಿರುವದು.

೪೯. ವಮನಜ್ವರವು :—ವಾಂತಿಯಿಂದೊಡಗೂಡಿರುವದು.

೫೦. ಜೃಂಭಾಜ್ವರವು :—ಆಕಳಿಕೆಯಿಂದೊಡಗೂಡಿರುವದು.

೫೧. ಹಿಕ್ಕಾಜ್ವರವು :—ಬಿಕ್ಕಳಿಕೆಯಿಂದೊಡಗೂಡಿರುವದು.

೫೨. ಅನಿದ್ರಜ್ವರವು :—ನಿದ್ರೆಯಿಲ್ಲದಿರುವದು.

೫೩. ಕಾಸಜ್ವರವು :—ಎಡೆಬಿಡದೆ ಕೆಮ್ಮಿನೊಡಗೂಡಿರುವದು.

೫೪. ಶುಷ್ಕಜ್ವರವು :—ದೇಹವು ಶುಷ್ಕವಾಗಿ ಹುಟ್ಟುವದು.

೫೫. ಪುರಾಣಜ್ವರವು :—ಬಹುಕಾಲದಿಂದನುಸರಿಸಿ ಬರುತ್ತಿರುವದು.

೫೬. ಪಕ್ಷಾಂತಜ್ವರವು :—ಹದಿನೈದು ದಿನಗಳಿಗೊಂದುಸಲ ಕಾಣುವದು.

೫೭. ಮಾಸಜ್ವರವು :—೩೦ ದಿನಗಳಿಗೊಂದುಸಲ ಕಾಣುವದು.

೫೮. ವರ್ಷಜ್ವರವು :—ವರ್ಷಕ್ಕೊಂದುಸಲ ಕಾಣುವದು.

೫೯. ಪಿಟಕಜ್ವರವು :—ಚಿಕ್ಕ ದೊಡ್ಡ ಬೊಕ್ಕೆಗಳಿಂದೊಡಗೂಡಿರುವದು.

೬೦. ಸ್ಫೋಟಕಜ್ವರವು :—ಸಿಡಬಿನಿಂದ ಹುಟ್ಟುವದು.

೬೧. ಕಂಪಜ್ವರವು:—ನಡುಕುದಿಂದೊಡಗೂಡಿರುವದು.

೬೨. ಶೋಫಜ್ವರವು:—ಕೀಲುಗಳಲ್ಲಿ ಊತ ಹುಟ್ಟುವದು.

೬೩. ಆನಾಹಜ್ವರವು:—ಮಲಬದ್ಧವಾಗಿ ಹುಟ್ಟುವದು.

೬೪. ತ್ರಿಕಾಲಜ್ವರವು ಅಥವ ಸರ್ವಕಾಲ ಜ್ವರವು:—ಮೂರುಕಾಲಗಳಲ್ಲಿಯೂ ಪ್ರಕೋಪಿಸುತ್ತಿರುವದು.

ಆಗಂತುಕ ಜ್ವರಲಕ್ಷಣ—ಮಂತ್ರ, ತಂತ್ರ, ಔಷಧ, ಕೃತ್ರಿಮಗಳಿಂದ ಹುಟ್ಟಿದ ಜ್ವರ ಆಗಂತುಕವೆನ್ನಿಸಿಕೊಳ್ಳುವುದು, ಆ ಜ್ವರಗಳು ಆಮಜ್ವರಾದಿ ಭೇದಗಳಿಂದ ಅನೇಕ ಪ್ರಕಾರವಾಗಿರುವುದು.

ಆಮಜ್ವರ ಲಕ್ಷಣ—ಅರೋಚಕ, ಬಾಯಾರಿಕೆ, ತಾಪ, ಸಂದುಗಳ ಸೆಳೆತ, ಬಳಲಿಕೆ, ಮೂತ್ರಬಹಳವಾಗಿ ಬರುವಿಕೆ ಇವು ಆಮಜ್ವರ ಲಕ್ಷಣಗಳು.

ಜೊಲ್ಲುಸುರಿಯುವಿಕೆ, ನಾಲಿಗೆಗೆ ಉಪ್ಪು, ಹುಳಿ, ಸಿಹಿ, ಕಹಿ ತಿಳಿಯದೆಯಿರುವಿಕೆ, ಮನಸ್ಸು ಕದಡಿಯಿರುವಿಕೆ, ವಾಕರಿಕೆ, ತಂದ್ರಿ, ಆಲಸ್ಯ, ವಿವರ್ಣತ್ವ, ವ್ಯಿಭಾರ, ಬಹುವಾಗಿ ಮೂತ್ರಿಸುವುದು ಇವಿಷ್ಟೂ ಆಮಜ್ವರ ಲಕ್ಷಣಗಳು. ಆಮಜ್ವರದಲ್ಲಿ ಔಷಧವನ್ನು ಕೊಡಬಾರದು, ಲಂಘನವನ್ನು ಮಾಡಿಸಬೇಕು. ಅಲ್ಪವಾಗಿ ಉಷ್ಣೋದಕವಂ ಕೊಡಿಸಬೇಕು.

ನಿರಾಮಜ್ವರ ಲಕ್ಷಣ—ಹಸಿವು, ಬಾಯಾರಿಕೆ, ಶರೀರಲಾಘವ, ಅಲ್ಪ ಜ್ವರ, ಮಲದಲ್ಲಿ ಪಿತ್ತಶ್ಲೇಷ್ಮಗಳ ಪ್ರವೃತ್ತಿ, ಉತ್ಸಾಹ ಇವೆಲ್ಲವೂ ನಿರಾಮ ಜ್ವರಲಕ್ಷಣಗಳು. ಪಚ್ಯಮಾನ ಜ್ವರದಲ್ಲೂ, ನಿರಾಮಜ್ವರದಲ್ಲೂ ಔಷಧವನ್ನು ಕೊಡಬಹುದು.

ಅಭಿಘಾತಜ್ವರ ಲಕ್ಷಣ—ದೂರವಾಗಿ ನಡಿಯುವದರಿಂದ ಜ್ವರ ಬರುವುದು, ಅದರಿಂದ ದಾಹ, ಸರ್ವಾಂಗನಿತ್ರಾಣ, ಮರವೆ, ತಂದ್ರಿ, ಮತಿಭ್ರಂಶ, ಶೀತಳ, ಭೋಜನದಲ್ಲಿ ಉಪೇಕ್ಷೆ ಇವೆಲ್ಲವೂ ಅಭಿಘಾತಜ್ವರ ಚಿನ್ಹೆಗಳು.

ವಿಷಮಜ್ವರ ಐದು ಪ್ರಕಾರ—ವಿಷಮಜ್ವರ, ಸಂತತ, ಸತತ, ಅನ್ಯೇದ್ಯುಷ್ಕ, ತ್ರ್ಯಾಹಿಕ, ಚಾತುರ್ಥಿಕವೆಂದು ಐದುಪ್ರಕಾರ. ಸಂತತವೆಂಬದು ತ್ವಕ್ಕನಾಶ್ರಯಿಸಿಕ್ಕೊಂಡು ಎಲ್ಲವೇಳೆಯಲ್ಲಿಯೂ ಕಾಯುವುದು. ಸತತವೆಂಬದು ರಕ್ತವನ್ನೂ, ಅನ್ಯೇದ್ಯುಷ್ಕವೆಂಬದು ಮಾಂಸವನ್ನೂ, ತ್ರ್ಯಾಹಿಕವೆಂಬದು ಮೇದಸ್ಸನ್ನೂ, ಚಾತುರ್ಥಿಕವೆಂಬದು ಅಸ್ಥಿಮಜ್ಜೆಗಳೆರಡನ್ನೂ ಆಶ್ರಯಿಸಿಕ್ಕೊಂಡಿಹವು.

ಸಂತತಾದಿಜ್ವರಗಳ ಕಾಲಭೇದ—ಬಿಡದೆ ಯಾವಾಗಲೂ ಕಾಯುವ ಜ್ವರವುಸಂತತವೆನ್ನಿಸಿಕೊಳ್ಳುವದು. ಏಳುದಿನ ಕಾದರೂ ಹತ್ತುದಿನ ಕಾದರೂ ಹನ್ನೆರಡುದಿನಗಳು ಕಾದರೂ, ಬಂದುಬಿಡದೆ ಕಾದು ಮತ್ತು ಎಂಟು ಹತ್ತುದಿನಗಳು ಬಿಟ್ಟು ಮರಳಿ ಮೊದಲಿನರೀತಿಯಾಗಿಯೇ ಬರುವಜ್ವರ ಸತತಜ್ವರ. ಅನ್ಯೇ

ದ್ಯುಷ್ಕವೆಂಬದು ಹಗಲಾದರೂ ರಾತ್ರಿಯಾದರೂ ಒಂದುವೇಳೆ ಕಾದುಬಿಡುವದು, ಒಂದುದಿನ ಬಿಟ್ಟು ಒಂದುದಿನ ಬರುವಜ್ವರ ತ್ರ್ಯಾಹಿಕವೆನ್ನಿಸಿಕೊಂಬುದು. ಎರಡುದಿನ ಬಿಟ್ಟು ಬರುವಜ್ವರ ಚಾತುರ್ಥಿಕವೆನ್ನಿಸಿಕೊಂಬುದು.

ವಿಷಮಜ್ವರ ಲಕ್ಷಣ—ಕ್ಷಣಕ್ಕೆ ಮೈತಣ್ಣಗೆ ಆಗುವಿಕೆ, ಕ್ಷಣಕ್ಕೆ ಉಷ್ಣವಾಗುವಿಕೆ, ಕ್ಷಣಕ್ಕೆ ಬಹಳ ಜ್ವರಬರುವಿಕೆ, ಒಂದುದಿನ ರಾತ್ರಿಯಲ್ಲಿ ಬರುವಿಕೆ, ಒಂದುದಿನ ಹಗಲಿನಲ್ಲಿ ಬರುವಿಕೆ, ದಿನಬಿಟ್ಟು ದಿನಬರುವಿಕೆ, ಎರಡುದಿನಕ್ಕೊಂದಾವರ್ತಿ ಬರುವಿಕೆ ಇವು ವಿಷಮಜ್ವರದ ಚಿನ್ಹೆಗಳು.

ಅಂತರ್ಗತಜ್ವರ ಲಕ್ಷಣ—ಒಳಗೆಕಾವು, ಬಹಳಬಾಯಾರಿಕೆ, ಪ್ರಲಾಪ, ಶ್ವಾಸ, ಭ್ರಮೆ, ಸಂದುಗಳ ಎಲುಬುಗಳಸೆಳತ, ಬೆವರಿಲ್ಲದೆಯಿರುವಿಕೆ, ಮಲಬಂಧ ಇವೆಲ್ಲವೂ ಅಂತರ್ಗತಜ್ವರ ಲಕ್ಷಣಗಳು.

ಬಹಿರ್ವೇಗಜ್ವರ—ಹೊರಗೆ ಬಹಳವಾಗಿ ಕಾಯುವಿಕೆ, ತೃಷ್ಣೆಮೊದಲಾದವು ಅಲ್ಪವಾಗಿರುವಿಕೆ ಇವು ಬಹಿರ್ಗತಜ್ವರ ಲಕ್ಷಣಗಳು. ಇದು ಸುಲಭಸಾಧ್ಯವೆಂದರಿವುದು.

ರಸಗತಜ್ವರ—ಬಹಳಕ್ಲೇಶ, ಮೈಭಾರ, ದೈನ್ಯೋಕ್ತಿ, ಮೈಮುರಿಯುವಿಕೆ, ಆಕಳಿಕೆ, ಅರೋಚಕ, ವಾಂತಿ, ದಾಹ ಇವೆಲ್ಲವೂ ರಸಗತಜ್ವರದಲ್ಲಿ ಉಂಟಾಗುವವು.

ರಕ್ತಗತಜ್ವರ—ಮನುಷ್ಯರಿಗೆ ಜ್ವರವು ರಕ್ತಗತವಾಗಲು ಜ್ವರದವುಷ್ಣ, ಅತಿದಾಹ, ಆಲಸ್ಯ, ಬುದ್ಧಿಭ್ರಂಶ, ಮೈನೋವು, ಮೂರ್ಛೆ ಇವುಗಳುಂಟಾಗುವವು.

ಮಾಂಸಗತಜ್ವರ—ಅತಿತೀವ್ರಜ್ವರ, ಶ್ವಾಸ, ಬೆವರು, ತೃಷೆ, ಮೈನೋವು, ತಂದ್ರಿ, ವಿದಾಹ, ಭ್ರಮೆ, ಮೂರ್ಛೆ ಇವೆಲ್ಲವೂ ಮಾಂಸಗತಜ್ವರದಲ್ಲಿ ಉಂಟಾಗುವವು.

ಮೇದೋಗತಜ್ವರ—ಜ್ವರವು ಮೇದೋಗತವಾಗಲು ವಾಂತಿ, ತೃಷೆ, ಬೆವರು, ಆಕಳಿಕೆ, ಆಶೆ, ಭ್ರಮೆ, ಅರೋಚಕ, ಗಂಟ್ಲುಒಣಗುವಣ, ಶ್ವಾಸ, ಮೈನೋವುಗಳುಂಟಾಗುವವು.

ಅಸ್ಥಿಗತಜ್ವರ—ಅಂತರ್ದಾಹ, ಹೊರಗೆ ಶೈತ್ಯ, ಅರಿಯಬಾರದಹಾಗೆ ಬಂದು ಯಾವಾಗಲೂ ಕಾಯುತ್ತಿರುವಿಕೆ, ಮುಖಬಿಳುಪಾಗುವಿಕೆ, ಈ ಲಕ್ಷಣಗಳು ಉಂಟಾಗುವವು.

ಮಜ್ಜಾಗತಜ್ವರ—ಬಿಕ್ಕಳಿಕೆ, ಶ್ವಾಸ, ಭ್ರಮೆ, ತೃಷೆ, ಮೈನೋವು, ಪ್ರಾಣಾಪಾನವಾಯು ನಿರೋಧನವಾದ ಉಬ್ಬಸ ಇವೆಲ್ಲವೂ ಮಜ್ಜಾಗತಜ್ವರದಲ್ಲಿ ಉಂಟಾಗಿರುವವು.

ಶುಕ್ಲಗತಜ್ವರ—ಜ್ವರವು ಶುಕ್ಲಗತವಾಗಲು ಬಹಳನಿದ್ರೆ, ಪ್ರಲಾಪ, ಬುದ್ಧಿನಾಶ, ನಡುಕ ಇವೆಲ್ಲ ಉಂಟಾಗುವವು. ಇಂತಾಜ್ವರವು ಅಸಾಧ್ಯವೆಂದು ತಿಳಿಯುವುದು.

ತ್ವಗ್ಗತಜ್ವರ—ಅಲ್ಪಜ್ವರದಲ್ಲಿ ದಾಹ, ನಾಡೀಮಾಂದ್ಯ, ಒಂದು ಸ್ಥಳದಲ್ಲಿ ಮೈನೋವು, ಒಂದು ಸ್ಥಳದಲ್ಲಿ ಬೆವರು ಇವು ತ್ವಗ್ಗತಜ್ವರ ಲಕ್ಷಣಗಳು.

ಉಷ್ಣಜ್ವರ—ಪಿತ್ತದೋಷ ಆದಿಯಲ್ಲಿ ಸ್ವಸ್ಥವಾದವನಿಗೆ ದಾಹವುಂಟು ಮಾಡುವುದು, ಕಡೆಯಲ್ಲಿ ಪಿತ್ತಶಾಂತ್ಯರ್ಥವಾಗಿ ವಾತಶ್ಲೇಷ್ಮಗಳು ಶೈತ್ಯವುಂಟು ಮಾಡುವುವು.

ತರುಣಜ್ವರ—ಏಳುರಾತ್ರಿಪರ್ಯಂತ ತರುಣಜ್ವರವೆಂದೂ, ಹತ್ತುರಾತ್ರಿ ಪರ್ಯಂತರ ಮಧ್ಯಮಜ್ವರವೆಂದೂ, ಅದರಮೇಲೆ ಹಳೇಜ್ವರವೆಂದೂಯೆನ್ನಿಸಿ ಕೊಳ್ಳುವುದು.

ಹಾಲುಕುಡಿಯುವ ಬಾಲಕನಿಗೆ ಮೂರುದಿನವೂ, ಹಾಲನ್ನವಂ ಊಟಾ ಮಾಡುವ ಬಾಲಕನಿಗೆ ಐದುದಿನವೂ, ಅನ್ನವನ್ನೇ ಭೋಜನಮಾಡುವವನಿಗೆ ಏಳುದಿನವೂ ಜ್ವರವು ತರುಣವೆನ್ನಿಸಿಕೊಳ್ಳುವದು.

ಜ್ವರಗಳ ಸಪ್ತದೋಷಗಳು—೧. ಅಪಥ್ಯದೋಷ, ೨. ಸಂಗಮದೋಷ, ೩. ವಿಷಮದೋಷ, ೪. ವಿಷಮಶೀತದೋಷ, ೫. ಪೀತಜಿಹ್ವಿಕದೋಷ ೬. ರಕ್ತಜಿಹ್ವಿಕದೋಷ, ೭. ಕೃಷ್ಣಜಿಹ್ವಿಕದೋಷ. ಈ ದೋಷಗಳೆಲ್ಲವೂ ೭-೧೫ ದಿನಗಳು ಕಳೆದಬಳಿಕ ಸಾಧ್ಯವಾಗುವದು.

ಅಸಾಧ್ಯಜ್ವರ—ಹಣೆಯಲ್ಲಿ ಬೆವರು ಸುರಿಯುತ್ತಿರುವಿಕೆ, ಕೈಕಾಲು ಸಂದು ಸಡಿಲೋಣ, ಎಚ್ಚಿಸಿಕುಳ್ಳಿರಿಸಲು ಮರವೆ ಇವು ಯಾವನಿಗೆ ಉಂಟಾಗುವವೋ ಅವನು ದೇವನಾದರೂ ಬದುಕಲಾರನು.

ಅವನ ಮೂಗಿನ ಎರಡು ಹೊಳ್ಳೆಗಳಲ್ಲಿ ಒಂದೇವೇಳೆ ಶೀಘ್ರವಾಗಿ ಶ್ವಾಸ ಹೊರಡುತ್ತಿರುತ್ತೊ ಆತನಿಗೆ ಮೂರು ದಿನಗಳೊಳಗಾದರೂ, ಆ ಕ್ಷಣದಲ್ಲಿಯೇ ಆದರೂ ಮರಣತಪ್ಪದು ಸಂದೇಹವಿಲ್ಲ.

ಶ್ವಾಸ, ಬಿಕ್ಕಳಿಕೆ, ಭ್ರಮೆ, ಮೈಯೂದಿಕೊಳ್ಳುವಣ, ಹೊಟ್ಟೆಯನೋವು ಬಲಹಾನಿ, ಕಾಮಿಲೆ, ಛರ್ದಿ, ಕೆಮ್ಮು, ಅತಿಸಾರ ಇವೆಲ್ಲವೂ ಅಸಾಧ್ಯಜ್ವರ ಲಕ್ಷಣಗಳು.

ಅಸಾಧ್ಯಲಕ್ಷಣ—ಹಣೆಬೆವರುವಿಕೆ, ಮೈತಣ್ಣಗಿರುವಿಕೆ, ಶೈತ್ಯದಿಂದ ಕಷ್ಟಪಡೋಣ, ಮೈಅಂಟುಅಂಟಾಗಿರೋಣ, ತಿಂದ ಆಹಾರ ಗಂಟಲಲ್ಲಿ ರೋಣ ಇವೆಲ್ಲವೂ ಆವನಿಗೆ ಉಂಟಾಗುವವೋ ಅವನು ಶೀಘ್ರದಲ್ಲಿಯೇ ಯಮನ ಸ್ಥಾನವನ್ನೈದುವನು.

ಶೀತಜ್ವರದೇಹದಲ್ಲಿ ಪ್ರವೇಶಿಸುವ ಕ್ರಮ — ತ್ವಕ್ಕನ್ನಾಶ್ರಯಿಸಿರುವ ಶ್ಲೇಷ್ಮವಾಯುಗಳು ಆದಿಯಲ್ಲಿ ಶೀತಜ್ವರವುಂಟುಮಾಡುವುದು, ಕಡೆಯಲ್ಲಿ ಪಿತ್ತದೋಷವು, ಆ ವಾತಶ್ಲೇಷ್ಮಗಳ ಶಾನ್ತ್ಯರ್ಥವಾಗಿ ದಾಹವುಂಟುಮಾಡುವುದು.

ಪಕ್ವವಾಗುತ್ತಿರುವ ಜ್ವರ ಲಕ್ಷಣ — ಜ್ವರದ ವೇಗ, ಹೆಚ್ಚಾದ ಬಾಯಾರಿಕೆ, ಪ್ರಲಾಪ, ಶ್ವಾಸ, ಭ್ರಮೆ, ಮಲಪ್ರವೃತ್ತಿ, ಹೆಚ್ಚಾದ ಬಳಲಿಕೆ ಇವೆಲ್ಲ ಪಕ್ವವಾಗುತ್ತಿರುವ ಜ್ವರದ ಲಕ್ಷಣಗಳು.

ವಾತಾದಿ ಜ್ವರ ಪಕ್ವವಾಗುವ ಕ್ರಮ —ಏಳುರಾತ್ರಿಗೆ ವಾತಜ್ವರವೂ, ಆರುರಾತ್ರಿಗೆ ಪಿತ್ತಜ್ವರವೂ, ಹತ್ತುರಾತ್ರಿಗೆ ಶ್ಲೇಷ್ಮಜ್ವರವೂ ಪಕ್ವವಾಗುವವು.

ಜ್ವರಮುಕ್ತ ಲಕ್ಷಣ — ಅನ್ನದಮೇಲೆ ಅಪೇಕ್ಷೆ, ಮಂಡೆಯತೀಟೆ, ಸೀನು, ಮೈ ಹಗುರಾಗುವಿಕೆ, ಚನ್ನಾಗಿ ಮೈ ಬೆವರುಂಟಾಗಿರುವಿಕೆ, ಮುಖ ಬಾಡಿರುವಿಕೆ ಇವೆಲ್ಲವೂ ಜ್ವರಬಿಟ್ಟವನ ಲಕ್ಷಣಗಳು.

ಜ್ವರ ಚಿಕಿತ್ಸೆ—ಜ್ವರದ ಆದಿಯಲ್ಲಿ ಲಂಘನವನ್ನು (ಉಪವಾಸ) ಮಾಡಿಸುವುದು ಲೇಸು, ಜ್ವರ ಮಧ್ಯದಲ್ಲಿ ಹುರಿದ ಅಕ್ಕಿಯಗಂಜಿ, ಅರಳುಗಂಜಿ ಮೊದಲಾದವನ್ನು ಕೊಡಿಸತಕ್ಕದ್ದು. ಜ್ವರದ ಕಡೆಯಲ್ಲಿ ಔಷಧ, ಕಲ್ಕ, ಕಷಾಯಗಳನ್ನು ಕೊಡಿಸಬೇಕು. ಜ್ವರ ಬಿಟ್ಟಮೇಲೆ ವಿರೇಚನವನ್ನು ಮಾಡಿಸುವುದು.

ಜ್ವರದವನಿಗೆ ಪತ್ಯ ದ್ರವ್ಯ—ಹುರಳೀಕಟ್ಟು, ತೊಗರೀಕಟ್ಟು, ಹೆಸರುಕಟ್ಟು, ಹಳೇ ಅಕ್ಕಿ ಅನ್ನ, ಗೋದಿವೆ ರವೆಗಂಜಿ, ಹಸುವಿನಹಾಲು ಇತ್ಯಾದಿ ಸೂಕ್ಷ್ಮಪದಾರ್ಥಗಳನ್ನು ಮಾತ್ರ ಉಪಯೋಗಿಸಬೇಕು.

ಜ್ವರ ಬಂದವರಿಗೆ ಅಪಥ್ಯ — ಎಣ್ಣೆ, ಮೊಸರು, ಬೆಣ್ಣೆ, ತುಪ್ಪ, ಮಾಂಸ ಇತ್ಯಾದಿ ಕಠಿಣಪದಾರ್ಥಗಳು ಮತ್ತು ಹಗಲು ನಿದ್ರೆ, ಪಥ್ಯವಮಾಡಿದ ಬಳಿಕ ನಿದ್ರೆ, ಅಭ್ಯಂಗಸ್ನಾನ, ಸ್ತ್ರೀಸಂಗ, ಕೋಪ, ಗಾಳಿಯ ಪ್ರದೇಶ, ವ್ಯಾಯಾಮ ಇವೆಲ್ಲವೂ ಅಪಥ್ಯ ಮತ್ತು ಸನ್ನಿಪಾತಕ್ಕೆ ಕಾರಣಗಳು.

ಕ್ಷೀರಪಾನ ಯೋಗ್ಯರು—ಹಾಲು ಅಭ್ಯಾಸವುಳ್ಳವನು, ದಾಹ, ತೃಷೆಗಳುಳ್ಳವನು, ಪಿತ್ತವಾತಗಳಿಂದ ಕಂಗೆಟ್ಟುಯಿರುವವನು, ಹಳೇ ಜ್ವರದವನು, ಕ್ಷೀಣವಾದ ಶ್ಲೇಷ್ಮವುಳ್ಳವನು, ಅತಿಸಾರವುಳ್ಳವನು ಇವರುಗಳಿಗೆ ಹಾಲು ಅಮೃತಕ್ಕೆ ಸಮಾನವಹುದು.

ಕ್ಷೀರಪಾನಕ್ಕೆ ಯೋಗ್ಯರಲ್ಲದವರು—ತರುಣಜ್ವರವುಳ್ಳವನು ಕ್ಷೀರಪಾನವನ್ನು ಮಾಡಕೂಡದು.

ವಾತಾದಿ ಜ್ವರಗಳಿಗೆ ಪಥ್ಯಕಾಲ—ಪಿತ್ತಜ್ವರಕ್ಕೂ, ವಾತಜ್ವರಕ್ಕೂ ಮಧ್ಯಾಹ್ನದಲ್ಲಿಯೂ, ಶ್ಲೇಷ್ಮಜ್ವರಕ್ಕೆ ಅಪರಾಹ್ಣದಲ್ಲಿಯೂ ಗಂಜಿಯನ್ನು ಕುಡಿಸುವುದು.

ಸಾಮಾನ್ಯ ಜ್ವರಕ್ಕೆ ಪಥ್ಯಕಾಲ - ಜ್ವರದೋಷದೊಡನೆ ಕೂಡಿಯಿರುವವನಿಗಾದರೂ ಜ್ವರಬಿಟ್ಟಿರುವವನಿಗಾದರೂ ಸಾಯಂಕಾಲದಲ್ಲಿಯೇ ಲಘುವಾಗಿ ಪಥ್ಯವನ್ನು ಕೊಡಿಸಬೇಕು. ಈ ಪ್ರಕಾರ ಪಥ್ಯವನ್ನು ಕೊಡಿಸಲು ಶ್ಲೇಷ್ಮ ಕಡಿಮೆಯಾಗಿ ಅದರಿಂದ ದೇಹದಲ್ಲಿ ಅಗ್ನಿಯು ಬಲಿಷ್ಠವಾಗುವದು.

ಶ್ಲೇಷ್ಮ ಜ್ವರದಲ್ಲಿ ಪಥ್ಯ—ಹುರಳೀಕಟ್ಟು, ತೊಗರೀಬೇಳೆ ಸಿಹಿಸಾರು ಅನ್ನ ಇವುಗಳಲ್ಲಿ ಪಥ್ಯ ಕೊಡಿಸುವುದು.

ವಾತಪಿತ್ತ ಜ್ವರಕ್ಕೆ ಪಥ್ಯ—ತೊಗರೀಬೇಳೆ ಸಿಹಿಸಾರು ಅನ್ನ ಪಥ್ಯ ಕೊಡಿಸಬೇಕು.

ಬಲಿತ ಪಡವಲಕಾಯಿ, ಎಳೇ ಬೂದಿಕುಂಬಳಕಾಯಿ, ಬಸಳೇಸೊಪ್ಪು, ಕರೀಕೆಸವು, ಬಿಳೀಕೆಸವು, ಬೆಳ್ಳುಳ್ಳಿ, ಅವರೆ, ಸವತೇಕಾಯಿ, ಬಲಿತ ಬದನೇಕಾಯಿ, ಉದ್ದು, ಅವರೇಬೇಳೆ, ಹಿಂಡೀ, ಸಾಸುವೆ, ಸೋರೇಕಾಯಿ, ಬಾಳೇಹಣ್ಣು, ಹಲಸಿನಹಣ್ಣು, ಹುಣಿಸೇಹಣ್ಣು, ನಿಂಬೇಹಣ್ಣು, ಹೊಸ ಅಕ್ಕಿಅನ್ನ ಇವೆಲ್ಲವೂ ಜ್ವರಬಂದವನಿಗೆ ಅಪಥ್ಯ.

ತಾಂಬೂಲ, ಕೆಂಪಿನಹೊದ್ದಿಕೆ, ಪುಷ್ಪ, ಶ್ರೀಗಂಧ, ಕುಂಕುಮ, ಕರ್ಪೂರ ಮೊದಲಾದ ಪರಿಮಳಗಳು ; ತುಪ್ಪ, ಜೇನುತುಪ್ಪ, ಘಾಳಿ, ವೆಗ್ಗಳವಾದಮನೆ, ಸುಪ್ಪತ್ತಿಗೆ ಹಾಸಿಗೆ, ಅನ್ನಪಾನಗಳು, ತನಗೆ ಇಷ್ಟವಾದ ಸ್ತ್ರೀದರ್ಶನ-ಸ್ಪರ್ಶನಗಳು, ದಾರಿನಡೆಯೋಣ, ಶೋಕ, ಕೋಪ, ಬೆಳದಿಂಗಳು, ಕೂಗಿಮಾತನಾಡೋಣ ಇವೆಲ್ಲವನ್ನೂ ಜ್ವರದಿಂದ ತಪ್ತವಾದ ಶರೀರವುಳ್ಳವನು ಬಿಡತಕ್ಕದ್ದು.

ಜ್ವರದಿಂದ ಕೃಶವಾದ ಶರೀರವುಳ್ಳವನಿಗೆ ವಮನವಿರೇಚನಗಳನ್ನುಮಾಡಿಸಬಾರದು. ತಿಗಡೆ, ಅಳಲೇಕಾಯಿ, ಬೆಲ್ಲ, ಶುಂಠಿ ಇವೆಲ್ಲವನ್ನೂ ಪ್ರತ್ಯೇಕ ಒಂದೊಂದು ವರಹಾತೂಕವಂ ಕೂಡಿಸಿಕೊಟ್ಟು ವಿರೇಚನವಂ ಮಾಡಿಸುವುದು. ಅದರಿಂದ ಜ್ವರದೋಷ, ಮಂಡೆಯಭಾರ, ಶ್ಲೇಷ್ಮ ಇವುಗಳು ಪರಿಹರವು. ಪಂಚೇಂದ್ರಿಯಗಳೂ ಪ್ರಸನ್ನವಾಗುವವು. ಪೂರ್ಣಜ್ವರದಲ್ಲಿ ಮೃದುವಾಗಿ ನಸ್ಯವನ್ನುಕೊಟ್ಟು ವಿರೇಚನವನ್ನು ಮಾಡಿಸತಕ್ಕದ್ದು.

ಲಂಘನ ಗುಣ—ಲಂಘನವು ದೀಪನಪಾಚನಗಳನ್ನುಂಟುಮಾಡುವುದು, ವಾತಾದಿ ದೋಷಗಳಂ ಪರಿಹರಿಸುವುದು, ವಸ್ತಿಶೋಧನವಂ ಮಾಡುವುದು. ಅಜೀರ್ಣವಂ ಜಯಿಸುವುದು, ಆಮಾತಿಸಾರ, ಹೊಟ್ಟೆಯನೋವು, ಜ್ವರ, ಶ್ಲೇಷ್ಮ ಮೊದಲಾದ ವ್ಯಾಧಿಗಳನ್ನು ಪರಿಹರಿಸುವುದು.

ಲಂಘನಯೋಗ್ಯರು — ಕಣ್ಣುಬೇನೆಯುಳ್ಳವನು, ಹೊಟ್ಟೆಯಬೇನೆಯುಳ್ಳವನು, ಜ್ವರವುಳ್ಳವನು, ವ್ರಣವುಳ್ಳವನು ಇವರು ಐದು ಮಂದಿಯೂ ಲಂಘನಯೋಗ್ಯರು. ಇವರಿಗೆ ಲಂಘನವು ಹಿತಕಾರಿ.

ಲಂಘನಕ್ಕೆ ಅಯೋಗ್ಯರು—ವೃದ್ಧರು, ಪಿತ್ತರೋಗದವರು, ಉಪವಾಸದೊಡನೆ ದಾರೀ ನಡೆದು ಬಳಲಿರುಪವರು, ಅಲ್ಪವಾದ ವಾತಾದಿ ದೋಷಗಳುಳ್ಳವರು, ಬಡವಾದ ಶರೀರವುಳ್ಳವರು, ಬಾಲಕರು, ಯೌವನಸ್ತ್ರೀಯರು, ವಿಷತಾಕಿ ಬಡವಾಗಿರುವವರು, ಭಯಪಟ್ಟಿರುವವರು, ಕೋಪದಿಂದ ಕಂಗೆಟ್ಟಿರುವವರು, ಗರ್ಭಿಣಿಯರು ಇವರುಗಳಿಗೆಲ್ಲ ಲಂಘನವನ್ನು ಮಾಡಿಸಬಾರದು.

ಲಂಘನಾನಂತರದಲ್ಲಿ ಪಥ್ಯಮಾಡುವ ಕ್ರಮ — ಚಿಟ್ಟಾಮುಟ್ಟಿ ಬೇರೂ, ಕೊತ್ತುಂಬರಿಯೂ ಹಾಕಿ, ಮಾಡಿದ ಕಷಾಯದಲ್ಲಿ ಅಕ್ಕಿಯನ್ನು ಹುರಿದು ಗಂಜಿಯಂಮಾಡಿ ಕುಡಿಯಿಸುವುದು. ವಮನದಿಂದಾದರೆ ಬಿಲ್ಪತ್ರೆಬೇರನ್ನು ಹಾಕಿ ಆ ಗಂಜಿಯನ್ನು ಕುಡಿಸುವುದು.

ಜ್ವರೋತ್ಪತ್ತಿ—ಜ್ವರವು ಸಕಲರೋಗಗಳಿಗೂ ಅರಸಾಗಿಯೂ, ಪಾಪಸ್ವರೂಪವಾಗಿಯೂ, ಮೃತ್ಯುಸ್ವರೂಪವಾಗಿಯೂ ಇರುವುದು.

ಜ್ವರಕ್ಕೆ ಪೂರ್ವರೂಪ—ವಿಷಮವಾದ ಆಹಾರವಿಹಾರಗಳೂ, ವಾತಾದಿ ದೋಷಗಳೂ, ಆಮಸ್ಥಾನವನ್ನಾಶ್ರಯಿಸಿಯೂ, ಆಮವನ್ನಾಚ್ಛಾದಿಸಿಯೂ, ಕೋಷ್ಠಾಗ್ನಿಯನ್ನು ಹೊರಕ್ಕೆ ಕದಲಿಸಿಯೂ ಜ್ವರವನ್ನುಂಟುಮಾಡುವವು.

ಅಕಾಲದಲ್ಲಿ ಭೋಜನಮಾಡುವಿಕೆ, ಅಧಿಕ ಭೋಜನಮಾಡುವಿಕೆ, ಹೆಚ್ಚು ಸಂಚಾರಮಾಡುವಿಕೆ, ಶಕ್ತಿಮಿಾರಿ ಸಂಚರಿಸುವಿಕೆ ಇವುಗಳಿಂದ ಆಮಸ್ಥಾನದಲ್ಲಿ ದೋಷಗಳು ಹುಟ್ಟಿ ಅಗ್ನಿಮಾಂದ್ಯವನ್ನುಂಟುಮಾಡಿ ರಸಧಾತುಸ್ಥಾನಗಳಲ್ಲಿ ವ್ಯಾಪಿಸಿ ಜ್ವರಗಳನ್ನುಂಟುಮಾಡುವುದು.

ಅಧಿಕವಾಗಿ ನೀರುಕುಡಿಯುವಿಕೆ, ಅಕಾಲದಲ್ಲಿ ಅಧಿಕ ಭೋಜನಮಾಡುವಿಕೆ, ಹಗಲು ನಿದ್ರಿಸುವಿಕೆ, ರಾತ್ರಿಗಳಲ್ಲಿ ಜಾಗರಣೆಮಾಡುವಿಕೆ; ಮಲವನ್ನೂ, ಮೂತ್ರವನ್ನೂ ತಡೆಯುವಿಕೆ ಈ ಆರು ಕಾರಣಗಳಿಂದ ರೋಗಗಳು ಹುಟ್ಟುವುವು.

ಜ್ವರ ನಿದಾನ — ಜ್ವರವು ವಾತ, ಪಿತ್ತ, ಕಫ, ವಾತಪಿತ್ತ, ವಾತಕಫ, ಪಿತ್ತಕಫ, ಸನ್ನಿಪಾತ, ಸಂತತ, ಸತತ, ಅನ್ಯೇದ್ಯುಷ್ಕ, ತೃತೀಯಕ, ಚಾತುರ್ಥಿಕ, ಅಭಿಚಾರ, ಗ್ರಹಾವೇಶ, ಶಾಪ, ಶ್ರಮ, ದಾಹ, ಕ್ಷತ, ಛೇದ, ಕಾಮ, ಭಯ, ದುಃಖ, ಕೋಪ, ವಿಷಾದ, ಔಷಧ ಗಂಧಗಳೆಂಬ ಬೇಧಗಳಿಂದ ಇಪ್ಪತ್ತೈದು ವಿಧವಾಗಿರುತ್ತದೆ. ವಾತಾದಿಗಳು ಮೊದಲು ಸಾಮಾನ್ಯ ಜ್ವರಗಳೆಂತಲೂ, ಹಾಗೆಯೇ ಸನ್ನಿಪಾತಕಗಳನೇಕ ವಿಧಗಳೆಂತಲೂ, ಸಂತತಾದಿಗಳಾದಿಯಾಗಿ ಚಾತುರ್ಥಿಕದವರೆವಿಗು ವಿಷಮಜ್ವರಗಳೆಂತಲೂ, ಅಭಿಚಾರದಿಂದ ತಾಪದವರೆವಿಗೆ ಆಗಂತುಕ ಜ್ವರಗಳೆಂತಲೂ, ಶ್ರಮ ಮೊದಲ್ಗೊಂಡು ಛೇದದವರೆಗೆ, ಅಭಿಘಾತ ಜ್ವರಗಳೆಂತಲೂ, ಉಳಿದವುಗಳು ಅಭಿಷಂಗ ಜ್ವರಗಳೆಂತಲೂ ಹೇಳಲ್ಪಡುತ್ತವೆ.

ಜ್ವರೋಪದ್ರವ—ಶ್ವಾಸ, ಮೂರ್ಛೆ, ಅರುಚಿ, ಛರ್ದಿ, ತೃಷೆ, ಅತಿಸಾರ, ಮಲಬಂಧ, ಛಳಛಳಿ, ಮೈನೋವು ಇವು ಹತ್ತೂ ಜ್ವರೋಪದ್ರವಗಳೆನ್ನಿಸಿಕೊಳ್ಳುವವು.

ಜ್ವರಸಾಮಾನ್ಯ ಲಕ್ಷಣ—ಬೆವರಿಲ್ಲದೆ ತಾಪ, ಮೈಕೈಗಳಲ್ಲಿ ನೋವು, ಆಲಸ್ಯ, ಅರೋಚಕ, ದೇಹಭಾರ, ಬಾಯಿ ಪಾಕರಿಕೆ, ಕಣ್ಣಿನಲ್ಲಿ ನೀರು ಸುರಿಯುವದು, ಮೈಹುರುಕಳಿಸಿ, ಕೊಕ್ಕಿಸಿಕ್ಕೊಂಡು, ಮೊಳಕಾಲಚಿಪ್ಪು ನೋಯುತ್ತ ಬಳಲಿಕೆಯುಂಟಾಗುವದು, ಸ್ವಾದುವಾದ ಭಕ್ಷ್ಯಗಳಲ್ಲಿ ದ್ವೇಷ, ಧ್ವನಿಭೇದವಾಗುವದು ಇತ್ಯಾದಿ ವಿಕಾರಗಳು ಕಾಣುವವು.

ವಾತಜ್ವರ ಲಕ್ಷಣ—ವಾತಜ್ವರದಲ್ಲಿ ಜ್ವರದವೇಗವು ಒಂದೊಂದು ಸಲ ಅಧಿಕವಾಗಿಯೂ, ಒಂದೊಂದು ಸಲ ಸೂಕ್ಷ್ಮವಾಗಿಯೂ ಇರುವಿಕೆ, ಕುತ್ತಿಗೆ ತುಟಿಗಳು ಒಣಗುವಿಕೆ, ನಿದ್ರೆಯಿಲ್ಲದಿರುವಿಕೆ, ಶೀನುಗಳು, ಮಾಂದ್ಯವು, ಶರೀರದಲ್ಲಿ ಜಿಡ್ಡಿಲ್ಲದಿರುವಿಕೆ, ಶಿರಸ್ಸು, ಹೃದಯ ಇವುಗಳಲ್ಲಿ ನೋವು, ಅರೋಚಕವು, ಮಲವು ಗಟ್ಟಿಯಾಗಿರುವಿಕೆ, ಹೊಟ್ಟೆನೋವು, ಆಕಳಿಕೆಗಳು, ಶರೀರವು ರೋಮಾಂಚನವಾಗುವಿಕೆ, ಕಣ್ಣಿನಲ್ಲಿ ನೀರು ಸುರಿಯುವಿಕೆ, ಎದೆಯದರುವುದು, ಅವಯವಗಳು ಬಿಗಿಹಿಡಿಯುವಿಕೆ, ನವೆ, ಉಷ್ಣವು, ಶ್ವಾಸವು, ಬಾಯಾರಿಕೆ, ವಾಂತಿ ಇವುಗಳುಂಟಾಗುವಿಕೆ, ಮೂತ್ರವು ಬೂದಿಬಣ್ಣವಾಗಿರುವಿಕೆ, ಶರೀರಶಿಥಿಲತೆ, ನಡುವು ಬಲಹೀನವಾಗಿರುವಿಕೆ, ಮಂಕಾಗಿರುವಿಕೆ, ಹೊಟ್ಟೆ ಉಬ್ಬಿರುವಿಕೆ, ಬಾಯಿ ಸೀಯಾಗಿರುವಿಕೆ, ಹುಳಿಪದಾರ್ಥಗಳಲ್ಲಿ ಇಚ್ಛೆಯುಂಟಾಗುವಿಕೆ, ನಡುಕ, ಕ್ಷಣದಲ್ಲಿ ಶೀತ, ಕ್ಷಣದಲ್ಲಿ ಉಷ್ಣವುಂಟಾಗುವಿಕೆ, ಬಾಯಿವಣಗುವಿಕೆ, ಮೈನೋವು, ಶರೀರದಲ್ಲಿ ಕಾವು, ನಾಲಿಗೆಯಲ್ಲಿ ಕಾಠಿಣ್ಯ, ಕಪ್ಪು ಈ ಲಕ್ಷಣಗಳಿದ್ದರೆ ವಾತಜ್ವರವೆಂಬದಾಗಿ ತಿಳಿಯಬೇಕು.

## ಕಷಾಯವನ್ನು ಕಾಯಿಸುವ ಕ್ರಮವು.

ಕುಟ್ಟಿ ಪುಡಿಮಾಡಲ್ಪಟ್ಟ ಒಂದು ಪಲತೂಕ ಕಷಾಯದ್ರವ್ಯಕ್ಕೆ ಹದಿನಾರು ಭಾಗ ಸಿಹಿನೀರನ್ನು ಹಾಕಿ ಮಡಕೆಯಲ್ಲಿ ಕುದಿಸಬೇಕು. ಎಂಟನೆಯ ಒಂದುಭಾಗ ಉಳಿಯಲು ಇಳಿಸಿಕೊಳ್ಳಬೇಕು. ಸಣ್ಣಗೆ ಉರಿಹಾಕಿ ಕಾಯಿಸಲ್ಪಟ್ಟ ಆ ನೀರನ್ನು ಸುಖೋಷ್ಣವಾಗಿರುಹಾಗಲೇ ಕುಡಿಸಬೇಕು. ಹದವಾಗಿ ಕಾಯಿಸಲ್ಪಟ್ಟ ಶೋಧಿಸಿದ ಕಷಾಯವನ್ನು ಹೊಟ್ಟೆಯಲ್ಲಿ ಆಹಾರರಸವು ಜೀರ್ಣಿಸಿರುವಾಗ ಎರಡು ಪಲದಷ್ಟು ಕುಡಿಯಬೇಕು.

ಕಷಾಯದಲ್ಲಿ ಸಕ್ಕರೆಯನ್ನು ನೇರಿಸುವುದಾದರೆ ಪಿತ್ತರೋಗ, ವಾತರೋಗ, ಕಫರೋಗ ಇವುಗಳಲ್ಲಿ ಕ್ರಮವಾಗಿ ಹಾಗಪಾಲು, ಚೀಳಿಪಾಲು, ವೀಸಪಾಲು ಈರೀತಿಯಾಗಿ ಸೇರಿಸಬೇಕು. ಜೇನುತುಪ್ಪವನ್ನಾದರೆ ಮೇಲೆಹೇಳಿದ ಕ್ರಮಕ್ಕೆ

ವಿಪರೀತವಾಗಿ ಅಂದರೆ ವಾತರೋಗದಲ್ಲಿ ವೀಸಪಾಲು, ಪಿತ್ತರೋಗದಲ್ಲಿ ಬೇಳೆ ಪಾಲು, ಕಫರೋಗದಲ್ಲಿ ಹಾಗಪಾಲು ಈರೀತಿಯಾಗಿ ಸೇರಿಸಬೇಕೆಂದು ಹೇಳಲ್ಪಟ್ಟಿರುವುದು.

ಕಷಾಯದಲ್ಲಿ ಜೀರಿಗೆಯನ್ನು, ಗುಗ್ಗುಳವನ್ನು, ಸರ್ಜಕ್ಷಾರ ಯವಕ್ಷಾರಗಳೇ ಮೊದಲಾದ ಕ್ಷಾರಗಳನ್ನೂ, ಸೈಂಧವಾದಿ ಲವಣಗಳನ್ನೂ, ಶಿಲಾಜಿತುವನ್ನು, ಹಿಂಗನ್ನು, ತ್ರಿಕಟುವನ್ನು ಸೇರಿಸಬೇಕಾದರೆ ಆರು ಗುರುಗಂಜಿತೂಕ ಸೇರಿಸಬೇಕು

## ವಾತಜ್ವರಕ್ಕೆ ಚಿಕಿತ್ಸೆ.

೧. ಗುಡೂಚ್ಯಾದಿ ಕಷಾಯ :—ಅಮೃತಬಳ್ಳಿ, ಮೋಡಿ, ಶೊಂಟಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ೭ ದಿವಸ ತೆಗೆದುಕೊಳ್ಳಲು ವಾತಜ್ವರ ಗುಣವಾಗುವದು.

೨. ಶಾಲಿಪರ್ಣ್ಯಾದಿ ಕಷಾಯ:—ಒಂದೆಲೇಹೊನ್ನೆ, ಚಿಟ್ಟಾಮುಟ್ಟಿ, ದ್ರಾಕ್ಷಿ, ಅಮೃತಬಳ್ಳಿ, ಸೊಗದೇಬೇರು ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ತೀವ್ರವಾದ ವಾತಜ್ವರ ಗುಣವಾಗುವದು.

೩. ಕಾಶ್ಮರ್ಯಾದಿ ಕಷಾಯ :— ಶಿವನೇಬೇರು, ಸೊಗದೇಬೇರು, ದ್ರಾಕ್ಷಿ, ಎಣ್ಣೆಮಿಟ್ಲೆ, ಅಮೃತಬಳ್ಳಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಇದಕ್ಕೆ ಬೆಲ್ಲ ಬೆರಸಿ ತೆಗೆದುಕೊಂಡರೆ ವಾತಜ್ವರ ಗುಣವಾಗುವದು.

೪. ಅಮೃತಬಳ್ಳಿ, ಬಿಲ್ಪತ್ರೆಬೇರು, ಕೊನ್ನಾರಿಗಡ್ಡೆ, ಚಿಟ್ಟಾಮುಟ್ಟಿ, ಕೊತ್ತುಂಬರಿಬೀಜ, ಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ವಾತಜ್ವರ ಗುಣವಾಗುವದು.

೫ ಒಂದೆಲೆಹೊನ್ನೆ, ಚಿಟ್ಟಾಮುಟ್ಟಿ, ಸೊಗದೇಬೇರು, ಅಮೃತಬಳ್ಳಿ, ದ್ರಾಕ್ಷಿ ಇವು ಸಮಭಾಗತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ವಾತಜ್ವರ ಗುಣವಾಗುವದು.

೬. ನೆಲಬೇವು, ಕೊನ್ನಾರಿಗಡ್ಡೆ, ನೆಲಗುಳ್ಳ, ಹೆಗ್ಗುಳ್ಳ, ಅಮೃತಬಳ್ಳಿ, ಲಾವಂಚ, ಸಣ್ಣನೆಗ್ಗಿಲು, ಒಂದೆಲೆಹೊನ್ನೆ, ಮೂರೆಲೆಹೊನ್ನೆ, ಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ವಾತಜ್ವರ ಗುಣವಾಗುವದು.

೭. ನೆಲಹಾಲೆ, ರೇಣುಕೆ, ಹಿಪ್ಪಲಿ, ಸಬ್ಬಸೀಗೆ, ದ್ರಾಕ್ಷಿ, ಬಿಳೀಕೊಮ್ಮೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ವಾತಜ್ವರ ಗುಣವಾಗುವದು.

೮. ನೆಲಹಾಲೆ, ಕಕ್ಕೆ, ಚಿಟ್ಟಾಮುಟ್ಟೆ, ಅತಿಮಧುರ, ದುಂಪರಾಸ್ಮೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ವಾತಜ್ವರ ಗುಣವಾಗುವದು.

೯. ನೆಲ್ಲೀಕಾಯಿ, ನರೀಬಾಲದ ಹೊನ್ನೆ, ಶುಂಠಿ, ನೆಲಬೇವು, ತುಂಗೇಗಡ್ಡೆ, ಮೂರೆಲೆಹೊನ್ನೆ, ನೆಲಗುಳ್ಳ, ಹೆಗ್ಗುಳ್ಳ, ಅಮೃತಬಳ್ಳಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸಕ್ಕರೆ, ಜೇನುತುಪ್ಪ ಹಾಕಿ ಕುಡಿಯಲು ವಾತಜ್ವರ ಗುಣವಾಗುವದು.

೧೦. ಬಿಲ್ಪತ್ರಿ ಬೇರು, ನರುವಲ ಬೇರು, ಶಿವನಿ ಬೇರು, ಪಾದರಿ ಬೇರು, ಹೆಮ್ಮರದ ಬೇರು, ಅಮೃತಬಳ್ಳಿ, ನೆಲ್ಲೀಕಾಯಿ, ಕೊತ್ತುಂಬರಿಬೀಜ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ವಾತಜ್ವರ ಗುಣವಾಗುವದು.

೧೧. ಗಂಡುತುರಚಿ, ಅಮೃತಬಳ್ಳಿ, ಕೊನ್ನಾರಿಗಡ್ಡೆ, ಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ವಾತಜ್ವರ ಗುಣವಾಗುವದು.

೧೨. ಶಠ್ಯಾದಿ ಕಷಾಯ:— ಕಚೋರ, ತಾವರೆಗಡ್ಡೆ, ಗಂಟುಭಾರಂಗಿ, ಕರ್ಕಾಟಿಕಶೃಂಗಿ, ನಸುಗುನ್ನಿಬೇರು, ಅಮೃತಬಳ್ಳಿ, ಶೊಂಟಿ, ಅಗಿಲುಶೊಂಟಿ, ನೆಲಬೇವು, ಕಟುಕರೋಹಿಣಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ವಾತಜ್ವರ, ಕೆಮ್ಮಲು ಗುಣವಾಗುವದು.

೧೩. ಅಮೃತಬಳ್ಳಿ, ಶೊಂಟಿ, ಕೊನ್ನಾರಿಗಡ್ಡೆ, ನಸುಗುನ್ನಿಬೇರು ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ವಾತಜ್ವರ ಗುಣವಾಗುವದು.

೧೪. ಕಿರಾತಾದಿ ಕಷಾಯ:—ನೆಲಬೇವು, ತುಂಗೇಗಡ್ಡೆ, ಅಮೃತಬಳ್ಳಿ, ಲಾವಂಚ, ರಾಮಗುಳ್ಳ, ಹೆಗ್ಗುಳ್ಳ, ಸಣ್ಣನೆಗ್ಗಿಲು, ಒಂದೆಲೆಹೊನ್ನೆ, ಮೂರೆಲೆಹೊನ್ನೆ, ಶೊಂಟಿ ಇವುಗಳನ್ನು ಸಮಭಾಗವಾಗಿ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ವಾತಜ್ವರ ಗುಣವಾಗುವದು.

೧೫. ಪಿಪ್ಪಲ್ಯಾದಿ ಕಷಾಯ: — ಹಿಪ್ಪಲಿ, ಸೊಗದೇಬೇರು, ದ್ರಾಕ್ಷಿ, ಸೋಪುಬೀಜ, ರೇಣುಕೆಬೀಜ ಇವುಗಳನ್ನು ಸಮಭಾಗವಾಗಿ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸಕ್ಕರೆ ಬೆರಸಿ ಕುಡಿಯಲು ವಾತಜ್ವರ ಗುಣವಾಗುವದು.

## ಪಿತ್ತಜ್ವರ ಲಕ್ಷಣಗಳು.

ಜ್ವರದ ವೇಗವು ಅಧಿಕವಾಗಿರುವಿಕೆ, ಮಲವು ದ್ರವವಾಗಿರುವಿಕೆ, ನಿದ್ರೆ ಅಲ್ಪವಾಗಿರುವಿಕೆ, ವಾಂತಿಯಾಗುವಿಕೆ, ಕಂಠವು, ತುಟಿಗಳು,

ಮೂಗು ಇವು ಹುಣ್ಣಾಗಿರುವಿಕೆ, ಮೈಬೆವರುವಿಕೆ, ಮೂರ್ಛೆ, ಮಲವು, ಮೂತ್ರವು, ನೇತ್ರಗಳು ಹಳದಿಬಣ್ಣವಾಗಿರುವಿಕೆ, ಭ್ರಾಂತಿ, ಶ್ವಾಸ, ಶಿರೋವೇದನೆ, ಅತಿ ತಾಪ, ಕುಕ್ಷಿಶೂಲೆ, ಬಾಯಾರಿಕೆ, ಕಫ ಇವುಗಳುಂಟಾಗುವಿಕೆ, ಬಾಯಿ ಕಹಿಯಾಗಿರುವಿಕೆ, ಶರೀರವು ಉಷ್ಣವಾಗಿರುವಿಕೆ, ಪದಾರ್ಥಗಳಲ್ಲಿ ಪ್ರೀತಿಯಿಲ್ಲದಿರುವಿಕೆ, ಮೂತ್ರವು ಕೆಂಪಾಗಿಯೂ ಹಳದಿಯಾಗಿಯೂ ಇರುವಿಕೆ; ನೇತ್ರಗಳಿಗೆ ಹಳದಿ, ಕಪ್ಪು, ಕೆಂಪು, ಕತ್ತಲಾಗಿಯು ಕಾಣಿಸುವಿಕೆ, ನಾಲಿಗೆ ಕಹಿಯಾಗಿರುವಿಕೆ, ಪ್ರಜ್ಞೆಯಿಲ್ಲದಿರುವಿಕೆ, ಅದುರುವಿಕೆ, ಕಣ್ಣುಗಳು ಕೆಂಪಗಿರುವಿಕೆ, ಪ್ರಲಾಪ, ಮೈತಿರುಗಿದಂತಿರುವಿಕೆ, ವಿಸ್ಮಯವಾಗುವಿಕೆ ಈ ಲಕ್ಷಣಗಳಿದ್ದರೆ ಪಿತ್ತಜ್ವರವೆಂದು ತಿಳಿಯಬೇಕು.

## ಪಿತ್ತಜ್ವರ ಚಿಕಿತ್ಸೆ.

೧. ಕಟ್ಫಲಾದಿ ಕಷಾಯ :—ಕಾಯಿಫಲಚಕ್ಕೆ, ಕೊಡಸಿಗೆಬೀಜ, ಶುದ್ಧಿ ಮಾಡಿದ ವಿಷಬೊದ್ದಿ, ಕಟುಕರೋಹಿಣಿ, ತುಂಗೇಗಡ್ಡೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಪಿತ್ತಜ್ವರ ಗುಣವಾಗುವದು.

೨. ಪರ್ಪಟಾದಿ ಕಷಾಯ :—ಪರ್ಪಾಟಕ, ಒಣಗಿದ ಆಡುಸೋಗೆ ಸೊಪ್ಪು, ಕಟುಕರೋಹಿಣಿ, ನೆಲಬೇವು, ನಸುಗುನ್ನಿ, ಗವಲದಬೇರು ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸಕ್ಕರೆ ಹಾಕಿ ಕಲಸಿ ಕೊಡಲು ಪಿತ್ತಜ್ವರ ಗುಣವಾಗುವದು.

೩. ದ್ರಾಕ್ಷಾದಿ ಕಷಾಯ :—ದ್ರಾಕ್ಷಿ, ಅಳಲೇಕಾಯಿಹೀಚು, ತುಂಗೇಗಡ್ಡೆ, ಕಟುಕರೋಹಿಣಿ, ಕಕ್ಕೆಬಂಕೆ, ಪರ್ಪಾಟಕ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಪಿತ್ತಜ್ವರ, ದಾಹ, ಮೂರ್ಛೆ, ತಾಪ, ರಕ್ತಪಿತ್ತ ಇವು ಗುಣವಾಗುವದು.

೪. ದುರಾಲಭಾದಿ ಕಷಾಯ :—ನಸುಗುನ್ನಿಬೇರು, ಪರ್ಪಾಟಕ, ಗೌಲದಬೇರು, ನೆಲಬೇವು, ಆಡುಸೋಗೆ, ಕಟುಕರೋಹಿಣಿ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸಕ್ಕರೆಹಾಕಿ ಕಲಸಿ ಕೊಡಲು ಪಿತ್ತಜ್ವರ, ದಾಹ, ರಕ್ತಪೈತ್ಯ, ಜ್ವರ, ನಾಲಿಗೆ ಒಣಗುವದು ಇವು ಗುಣವಾಗುವವು.

೫. ಪರ್ಪಟಾದಿ ಕಷಾಯ :—ಪರ್ಪಾಟಕವನ್ನು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಪಿತ್ತಜ್ವರ ಗುಣವಾಗುವದು.

೬. ಗುಡೂಚ್ಯಾದಿ ಕಷಾಯ :—ಅಮೃತಬಳ್ಳಿ, ಕೊತ್ತುಂಬರಿಬೀಜ, ನೆಲಬೇವು, ಪದ್ಮಕ, ರಕ್ತಚಂದನ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಪಿತ್ತಜ್ವರ ಗುಣವಾಗುವದು.

೭. ಭದ್ರಮುಸ್ತೆ, ನೈದಿಲೆಗಡ್ಡೆ, ಅಮೃತಬಳ್ಳಿ, ದ್ರಾಕ್ಷೆಹಣ್ಣು, ಸೊಗದೇಬೇರು, ಹಿಪ್ಪಲಿ, ಶ್ರೀಗಂಧ, ಪರ್ಪಾಷ್ಟಕ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಪಿತ್ತಜ್ವರವು ಗುಣವಾಗುವದು.

೮. ಭದ್ರಮುಸ್ತೆ, ರಕ್ತಚಂದನ, ಶುಂಠಿ, ಮುಡಿವಾಳದಬೇರು, ಪರ್ಪಾಷ್ಟಕ, ಲಾವಂಚ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಬಾಯಾರಿಕೆಯನ್ನೂ, ಪಿತ್ತಜ್ವರವನ್ನೂ ಪರಿಹರಿಸುವುದು ಮತ್ತು ಪಾಚನವನ್ನುಂಟುಮಾಡುವದು.

೯. ಸೊಗದೇಬೇರು, ಕಟುಕರೋಹಿಣಿ, ರಕ್ತಚಂದನ, ಲಾವಂಚ, ಭದ್ರಮುಸ್ತೆ, ಯಷ್ಟಿಮಧುಕ, ಮುಡಿವಾಳ, ನೈದಿಲೆಗಡ್ಡೆ, ಹಿಪ್ಪೆಹುವ್ವು, ಮಜ್ಜಿಗೆಗಡ್ಡೆ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸಕ್ಕರೆ, ಜೇನುತುಪ್ಪ ಬೆರಸಿ ಕುಡಿಯಲು ದಾಹವುಳ್ಳ ಪಿತ್ತಜ್ವರ ಗುಣವಾಗುವುದು.

೧೦. ಶುಂಠಿ, ಶ್ರೀಗಂಧದಚಕ್ಕೆ, ಲಾವಂಚ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕೆಂಪು ಕಲ್ಲುಸಕ್ಕರೆ ಬೆರಸಿ ಕುಡಿಯಲು ಪಿತ್ತಜ್ವರ ಗುಣವಾಗುವದು.

೧೧. ರಕ್ತಚಂದನ, ಲಾವಂಚ, ಕಬ್ಬು, ನೆಲಹಾಲೆ, ಹೆಸರು, ಪೊರಕೆಹುಲ್ಲು ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸಕ್ಕರೆ ಬೆರಸಿ ಕುಡಿಯಲು ಪಿತ್ತಜ್ವರ ಗುಣವಾಗುವದು.

೧೨. ಕೊನ್ನಾರಿಗಡ್ಡೆ, ಕಟುಕರೋಹಿಣಿ, ಕಕ್ಕೇಬಂಕೆ, ಪರ್ಪಾಷ್ಟಕ, ಹಾಲುವಾಣದಚಕ್ಕೆ, ದ್ರಾಕ್ಷಿ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಪಿತ್ತಜ್ವರ ಗುಣವಾಗುವದು.

೧೩. ೧ ತೊಲೆ ಕಟುಕರೋಹಿಣಿಯನ್ನು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸಕ್ಕರೆ ಬೆರಸಿ ಕುಡಿಯಲು ಪಿತ್ತಜ್ವರ ಗುಣವಾಗುವದು.

೧೪. ಮೂರು ತೊಲೆ ದ್ರಾಕ್ಷಿರಸದಲ್ಲಿ ೧ ತೊಲೆ ತ್ರಿಫಲೆ ಚೂರ್ಣವನ್ನು ಬೆರಸಿ ಕೊಟ್ಟರೆ ಪಿತ್ತಜ್ವರ ಗುಣವಾಗುವದು.

೧೫. ಶಿವನಿ, ನೆಲಬೇವು, ಇಂದ್ರಜವೆ, ಕೊನ್ನಾರಿಗಡ್ಡೆ, ಕಟುಕರೋಹಿಣಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸಕ್ಕರೆ ಬೆರಸಿ ಕುಡಿಯಲು ಪಿತ್ತಜ್ವರ ಗುಣವಾಗುವದು.

೧೬. ರಕ್ತಚಂದನ, ಕೊನ್ನಾರಿಗಡ್ಡೆ, ಕಹಿಪಡವಲ, ಹಾಲುವಾಣದಚಕ್ಕೆ, ಲಾವಂಚ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸಕ್ಕರೆ ಬೆರಸಿ ಕುಡಿಯಲು ಪಿತ್ತಜ್ವರ ಗುಣವಾಗುವುದು.

೧೭. ಪರ್ಪಾಷ್ಟಕ, ರಕ್ತಚಂದನ, ಲಾವಂಚ, ಶುಂಠಿ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಪಿತ್ತಜ್ವರ ಗುಣವಾಗುವದು

೧೮. ಅತ್ತಿಬೇರಿನಚಕ್ಕೆ, ಸೋಪುಬೀಜ, ಅಮೃತಬಳ್ಳಿ ಇವು ಸಮ ಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸಕ್ಕರೆ ಬೆರಸಿ ಕೊಡಲು ಪಿತ್ತಜ್ವರ ಗುಣವಾಗುವದು.

೧೯. ಕಹಿಪಡವಲ, ಸೋಪುಬೀಜ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸಕ್ಕರೆ ಬೆರಸಿ ಕುಡಿಯಲು ಪಿತ್ತ ಜ್ವರ ಗುಣವಾಗುವದು.

೨೦. ದ್ರಾಕ್ಷಿ, ಯಷ್ಟಿಮಧುಕ, ಇಪ್ಪೇಹುವ್ವು, ಲೋಧ್ರ, ಶಿವನಿ, ಸೊಗದೇಬೇರು, ಕೊನ್ನಾರಿಗಡ್ಡೆ, ನೆಲ್ಲೀಕಾಯಿ, ಮುಡಿವಾಳ, ತಾವರೆಕುಸುಮ, ಪದ್ಮಕ, ತಾವರೆಗಡ್ಡೆ, ರಕ್ತಚಂದನ, ಲಾವಂಚ, ಕನ್ನೈದಿಲೆಗಡ್ಡೆ, ಖರ್ಜೂರ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸಕ್ಕರೆ, ಜೇನುತುಪ್ಪ ಮತ್ತು ಭತ್ತದ ಅರಳು ಚೂರ್ಣಮಾಡಿ ಕಲಸಿ ಕುಡಿಯಲು ವಾತಪಿತ್ತಜ್ವರ, ಮದಾತ್ಯಯ, ವಮನ, ಮೂರ್ಛೆ, ದಾಹ, ಶ್ರಮೆ, ಭ್ರಮೆ, ಊರ್ಧ್ವಗತವಾತ, ರಕ್ತಪಿತ್ತಜ್ವರ, ಬಾಯಾರಿಕೆ, ಕಾಮಾಲೆ ಇವು ಗುಣವಾಗುವದು.

೨೧. ಒಂದೆಲಗ, ಕಟುಕರೋಹಿಣಿ, ತ್ರಿಫಲೆ, ಶುಂಠಿ, ಕಕ್ಕೆಬಂಕೆ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಜೇನುತುಪ್ಪ ಬೆರಸಿ ಕುಡಿಯಲು ಪಿತ್ತಜ್ವರ ಗುಣವಾಗುವದು.

೨೨. ಅಮೃತಬಳ್ಳಿ, ಲಾವಂಚ, ತುಂಗೇಗಡ್ಡೆ, ಚಂಗಲಕೋಷ್ಟ, ರಕ್ತ ಚಂದನ, ಶುಂಠಿ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಪೈತ್ಯಜ್ವರ ಗುಣವಾಗುವದು.

೨೩. ಯಲುವಸಂಧಿ, ಮುಳ್ಳುಕೊಗ್ಗಿ, ಪೇರಾಮುಟ್ಟಿ, ತುಂಗೇಗಡ್ಡೆ, ಶುಂಠಿ, ನೆಲ್ಲಿಕಾಯಿ, ಕೊತ್ತಮಿರಿಬೀಜ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಪೈತ್ಯಜ್ವರ ಗುಣವಾಗುವದು.

೨೪. ಮಜ್ಜಿಗೆಗಡ್ಡೆ, ಕೊತ್ತಮಿರಿಬೀಜ, ಯಷ್ಟಿಮಧುಕ, ದುಂಪ ರಾಷ್ಮೆ, ತುಂಗೇಗಡ್ಡೆ, ಹಾವುನಂಜಿನಬೀಜ, ಸುರಸುರಕೆ ಸೊಪ್ಪು, ಮುಡಿವಾಳ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಪೈತ್ಯಜ್ವರ ಗುಣವಾಗುವದು.

೨೫. ನೆಲಬೇವು, ಕೊನ್ನಾರಿಗಡ್ಡೆ, ತಕ್ಕೋಲ, ನಸುಗುನ್ನಿಬೇರು ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಪಿತ್ಥಜ್ವರ ಗುಣವಾಗುವದು.

೨೬. ದ್ರಾಕ್ಷಿ, ಪರ್ವಾಷ್ಪಕ, ಕಕ್ಕೇಬಂಕೆ, ಕೊತ್ತುಂಬರಿಬೀಜ, ಕೊನ್ನಾರಿಗಡ್ಡೆ, ಅಳಲೇಕಾಯಿಸಿಪ್ಪೆ, ಲಾವಂಚ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಮೂರ್ಛೆ, ಗಂಟ್ಲು, ಮೈವಣಗುವಿಕೆ, ಬಾಯಾರಿಕೆ, ದಾಹ, ಪಿತ್ತಜ್ವರ ಇವನ್ನು ಗುಣಮಾಡುವದು.

೨೭. ರಾಮಗುಳ್ಳದಸಮೂಲ, ನೆಲಬೇವು, ಕಟುಕರೋಹಿಣಿ, ಆಡುಸೋಗೆಸೊಪ್ಪು, ತಕ್ಕೋಲ, ಆಲದಹಣ್ಣೆಲೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸಕ್ಕರೆ ಬೆರಸಿ ಕುಡಿಯಲು ಮೈವುರಿ, ತಾಪ, ರಕ್ತಪಿತ್ತಜ್ವರ ಇವನ್ನು ಗುಣಮಾಡುವದು.

೨೮. ಶುಂಠಿ, ತುರಚನಬೇರು, ಆಡುಸೋಗೆಸಮೂಲ, ತುಂಗೇಗಡ್ಡೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಕೆಮ್ಮಲಿನಿಂದ ಕೂಡಿದ ಪಿತ್ತಜ್ವರ ಗುಣವಾಗುವದು.

## ಶ್ಲೇಷ್ಮಜ್ವರ ಲಕ್ಷಣಗಳು.

ಶರೀರದಮೇಲೆ ಒದ್ದೆಬಟ್ಟೆಯನ್ನು ಹೊದಿಸಿದಂತಿರುವಿಕೆ, ಜ್ವರದವೇಗವು ಮಂದವಾಗಿರುವಿಕೆ, ಕೆಲಸಗಳಲ್ಲಿ ಆಸಕ್ತಿಯಿಲ್ಲದಿರುವಿಕೆ, ಮಲಮೂತ್ರಗಳು ಬಿಳುವಾಗಿರುವಿಕೆ, ಹೊಟ್ಟೆತುಂಬಿದಹಾಗಿರುವಿಕೆ, ಚಳಿ, ಅತಿನಿದ್ರೆ, ನೆಗಡಿ, ಕೆಮ್ಮಲು, ನೇತ್ರಗಳು ಬಿಳುಪಾಗಿರುವಿಕೆ, ಕಣ್ಣುಗಳಲ್ಲಿ ನೀರುಸುರಿಯುವಿಕೆ, ಕಂಠವು ಕಫಯುಕ್ತವಾಗಿರುವಿಕೆ, ಶ್ವಾಸವುಂಟಾಗುವಿಕೆ, ಬಾಯಿ ಉಪ್ಪಾಗಿರುವಿಕೆ, ಕೈಕಾಲುಗಳು ಉರಿಯುವಿಕೆ, ಮೂತ್ರವು ಅಧಿಕವಾಗಿ ವಿಸರ್ಜಿಸುವಿಕೆ, ಶಿರೋಭಾರ, ಶೋಷೆ ಇವುಗಳುಂಟಾಗುವಿಕೆ, ಶರೀರ ಸಂಧಿಗಳಲ್ಲಿ ನೋವಾಗಿರುವಿಕೆ, ಯಾವ ವಸ್ತುವಿನಲ್ಲಿಯೂ ಪ್ರೀತಿಯಿಲ್ಲದಿರುವಿಕೆ, ಅಲ್ಪವಾಗಿ ಬೆವರುವಿಕೆ ಈ ಲಕ್ಷಣಗಳಿದ್ದರೆ ಶ್ಲೇಷ್ಮಜ್ವರವೆಂದು ತಿಳಿಯಬೇಕು.

## ಶ್ಲೇಷ್ಮಜ್ವರ ಚಿಕಿತ್ಸೆ.

೧. ಹಿಪ್ಪಲ್ಯಾದಿ ಕಷಾಯ:—ಹಿಪ್ಪಲಿ, ಮೋಡಿ, ಚವ್ಯ, ಚಿತ್ರಮೂಲ, ಶುಂಠಿ, ಮೆಣಸು, ಯಾಲಕ್ಕಿ, ವೋಮ, ಕೊಡಸಿಗೆಬೀಜ, ಅಗಿಲುಶುಂಠಿ, ರೇಣುಕೆ, ಬಿಳೇಜೀರಿಗೆ, ಗಂಟುಭಾರಂಗಿ, ಬೇಲಿನಚಕ್ಕೆ, ಕಟುಕರೋಹಿಣಿ, ಸಾಸುವೆ, ವಾಯುವಿಳಂಗ, ಅತಿಬಜೆ, ಕಾಚಿಹುಲ್ಲು ಇವು ಜಿನಸಿಗೆ ೧ ತೊಲೆ, ಶುದ್ಧಿಮಾಡಿದ ಹಿಂಗು ಕಾಲುತೊಲೆ ಇವುಗಳನ್ನು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಶ್ಲೇಷ್ಮಜ್ವರ ಗುಣವಾಗುವದು.

೨ ಪಂಚಕೋಲಕಷಾಯ :—ಹಿಪ್ಪಲಿ, ಮೋಡಿ, ಚವ್ಯ, ಚಿತ್ರಮೂಲ, ಶುಂಠಿ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಶ್ಲೇಷ್ಮಜ್ವರ ಗುಣವಾಗ ವದು.

೩. ಆರಗ್ವದ ಪಂಚಕಷಾಯ :—ಕಕ್ಕೇಬಂಕೆ, ಕಟುಕರೋಹಿಣಿ, ಮೋಡಿ, ತುಂಗೇಗಡ್ಡೆ, ಅಳಲೇಕಾಯಿಸಿಪ್ಪೆ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಶ್ಲೇಷ್ಮಜ್ವರ ಗುಣವಾಗುವದು.

೪. ಪಟೋಲಾದಿ ಕಷಾಯ :—ಕಹಿಪಡವಲ, ಅಳಲೇಕಾಯಿಸಿಪ್ಪೆ, ತಾರೇ ಕಾಯಿಸಿಪ್ಪೆ, ನೆಲ್ಲೀಕಾಯಿ, ಕಟುಕರೋಹಿಣಿ, ಕಚೋರ, ಆಡುಸೋಗೆ, ಅಮೃತ ಬಳ್ಳಿ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಜೇನುತುಪ್ಪ ಬೆರಸಿ ಕುಡಿಯಲು ಶ್ಲೇಷ್ಮಜ್ವರ ಗುಣವಾಗುವದು.

೫. ನಿದಿಗ್ಧಿಕಾದಿ ಕಷಾಯ :—ನೆಲಗುಳ್ಳದಬೇರು, ಅಮೃತಬಳ್ಳಿ, ಹಿಪ್ಪಲಿ ಶುಂಠಿ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಶ್ಲೇಷ್ಮಜ್ವರ, ಶ್ವಾಸ, ಕೆಮ್ಮು, ಶೂಲೆ, ಅಗ್ನಿಮಾಂದ್ಯ, ಹೊಟ್ಟೆ ಯಲ್ಲಿ ಗುಡಬಡೆ ಶಬ್ದ ಇವು ಗುಣವಾಗುವವು.

೬. ಭೂನಿಂಬಾದಿ ಕಷಾಯ :— ನೆಲಬೇವು, ಬೇವಿನಚಕ್ಕೆ, ಹಿಪ್ಪಲಿ, ಕಚೋರ, ಶುಂಠಿ, ಮಜ್ಜಿಗೆಗಡ್ಡೆ, ಅಮೃತಬಳ್ಳಿ, ನೆಲಗುಳ್ಳದಬೇರು ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಕಫ ಜ್ವರ ಮತ್ತು ಕೆಮ್ಮಲು ಸಹ ಗುಣವಾಗುವದು.

೭. ಬೀಜಪೂರಾದಿ ಕಷಾಯ :— ಮಾದವಾಳದ ಬೇರು, ಅಳಲೇಕಾಯಿ ಸಿಪ್ಪೆ, ಶುಂಠಿ, ಗ್ರಂಥಿಕತಗರ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಯವಕ್ಷಾರ ಕಲಸಿ ಕುಡಿಯಲು ಶ್ಲೇಷ್ಮಜ್ವರ ಗುಣವಾಗು ವದು.

೮. ಅಮೃತಾಷ್ಟಕ ಕಷಾಯ :—ಅಮೃತಬಳ್ಳಿ, ಬೇವಿನಚಕ್ಕೆ, ಕಟುಕ ರೋಹಿಣಿ, ತುಂಗೇಗಡ್ಡೆ, ಕೊಡಸಿಗೆಬೀಜ, ಶುಂಠಿ, ಕಹಿಪಡವಲ, ರಕ್ತಚಂದನ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಹಿಪ್ಪಲಿಚೂರ್ಣ ಬೆರಸಿ ಕೊಡಲು ಪಿತ್ತಶ್ಲೇಷ್ಮಜ್ವರ, ವಾಂತಿ, ಅರೋಚಕ, ಬಾಯಿಯಲ್ಲಿ ಜೊಲ್ಲು ಸುರಿಯುವಿಕೆ, ತಾಪ ಇವುಗಳು ಗುಣವಾಗುವವು.

೯. ತ್ರಿಕಂಟಕಾದಿ ಕ್ಷೀರಪಾಕ:—ಸಣ್ಣನೆಗ್ಗಿಲು, ಚಿಟ್ಟಾಮುಟ್ಟಿ, ನೆಲ ಗುಳ್ಳ, ಶುಂಠಿ ಇವುಗಳನ್ನು ಚೂರ್ಣಮಾಡಿ-ಬೆಲ್ಲ, ಆಕಳಹಾಲು ೮ ಭಾಗ, ನೀರು ೪ ಭಾಗ ಹಾಕಿ ಹಾಲು ಉಳಿಯುವಹಾಗೆ ಕಾಯಿಸಿ ಕುಡಿಯಲು ಮಲಬಂಧ, ಮೂತ್ರಬಂಧ, ಶ್ಲೇಷ್ಮಜ್ವರ ಇವುಗಳು ಗುಣವಾಗುವವು.

೧೦. ಅರಸಿನ, ಇಂದ್ರಜವೆ, ಕಟುಕರೋಹಿಣಿ, ಅಳಲೇಕಾಯಿಸಿಪ್ಪೆ, ತುಪ್ಪದದೇವದಾರು ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಶ್ಲೇಷ್ಮಜ್ವರ ಗುಣವಾಗುವದು.

೧೧. ತುಲಸಿ, ಅತಿಬಜೆ, ಚಂಗಲಕೋಷ್ಟ, ಶುಂಠಿ, ತುಪ್ಪದದೇವದಾರು ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಶ್ಲೇಷ್ಮಜ್ವರ ಮತ್ತು ಕೆಮ್ಮಲು ಗುಣವಾಗುವದು.

೧೨. ಕಕ್ಕೇಬಂಕೆ, ಕಲ್ಲುಶಣಬು, ಕೋಲಮುರಕನಚಕ್ಕೆ, ತುಲಸಿ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಶ್ಲೇಷ್ಮಜ್ವರ ಗುಣವಾಗುವದು.

೧೩. ಕಟುಕರೋಹಿಣಿ, ಬಜೆ, ಅಗುಳುಶುಂಠಿ, ಗೆಜ್ಜುಗದಬೇರು, ಕಕ್ಕೇಬಂಕೆ, ಕಲ್ಲುಶಣಬು ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಕೆಮ್ಮುಳ್ಳ ಶ್ಲೇಷ್ಮಜ್ವರ ಗುಣವಾಗುವದು.

೧೪. ಬೇವು, ಅಮೃತಬಳ್ಳಿ, ನೆಲಗುಳ್ಳ, ನೆಲಬೇವು, ಚಂಗಲಕೋಷ್ಟ, ಕಚೋರ, ಹಿಪ್ಪಲಿ, ಶುಂಠಿ, ತುಪ್ಪದದೇವದಾರು ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಕೆಮ್ಮು, ಶ್ಲೇಷ್ಮಜ್ವರ ಗುಣವಾಗುವದು.

೧೫. ನೆಲಗುಳ್ಳ, ಗಂಡುತುರುಚಿ, ಗಂಟುಭಾರಂಗಿ, ಶುಂಠಿ, ಅಮೃತಬಳ್ಳಿ, ಕೊನ್ನಾರಿಗಡ್ಡೆ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಹಿಪ್ಪಲಿಚೂರ್ಣ ಬೆರಸಿ ಕುಡಿಯಲು ಶ್ಲೇಷ್ಮಜ್ವರ ಗುಣವಾಗುವದು.

೧೬. ನೆಲಗುಳ್ಳ, ಮುಳ್ಳುಕೊಗ್ಗಿ, ಆಡುಸೋಗೆ, ಮುಳ್ಳುಗೋರಂಟೆ, ಶುಂಠಿ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಹಿಪ್ಪಲಿ ಚೂರ್ಣ ಬೆರಸಿ ಕುಡಿಯಲು ಶ್ಲೇಷ್ಮಜ್ವರ ಗುಣವಾಗುವದು.

೧೭. ಆಡುಸೋಗೆ, ಬಜೆ, ಮಂಗರವಳ್ಳಿ, ನೆಲಗುಳ್ಳ, ಶುಂಠಿ, ಕಟುಕರೋಹಿಣಿ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಹಿಪ್ಪಲಿಚೂರ್ಣ, ಜೇನುತುಪ್ಪ ಬೆರಸಿ ಕುಡಿಯಲು ಶ್ಲೇಷ್ಮಜ್ವರ ಗುಣವಾಗುವದು.

೧೮. ಕಹಿಪಡವಲ, ತ್ರಿಫಲೆ, ಜುಟ್ಟುವೇಬೇರು, ಮರದರಿಸಿನ, ಕಟುಕರೋಹಿಣಿ, ಶುಂಠಿ, ಹೆಗ್ಗುಳ್ಳದಬೇರು, ರಾಮಗುಳ್ಳದಬೇರು, ಆಡುಸೋಗೆ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಶ್ಲೇಷ್ಮಜ್ವರ ಗುಣವಾಗುವದು.

೧೯. ಹಿಪ್ಪಲಿ, ಮೆಣಸು, ಆಡುಸೋಗೆಸೊಪ್ಪು, ಕೊನ್ನಾರಿಗಡ್ಡೆ, ನಸುಗುನ್ನಿಬೇರು ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಶ್ಲೇಷ್ಮಜ್ವರ ಗುಣವಾಗುವದು.

## ವಾತಪಿತ್ತಜ್ವರ ಲಕ್ಷಣಗಳು.

ವಾತಪಿತ್ತಜ್ವರದಲ್ಲಿ ಮೂರ್ಛೆ, ನಿದ್ರೆಯಿಲ್ಲದಿರುವಿಕೆ, ವೈವುರಿ, ಕಣ್ಣು ಕತ್ತಲೆ ಮುಸುಕಿದಂತಿರುವಿಕೆ, ಕೀಲುಗಳು ಸೆಳೆಯುವಿಕೆ, ಆಕಳಿಕೆಗಳು; ಎದೆ, ಕಂಠ ಇವುಗಳಲ್ಲಿ ಉರಿಯುಂಟಾಗುವಿಕೆ, ತಲೆನೋವು, ವಾಂತಿ, ಶ್ವಾಸವು, ತಾಪವು, ನಾಲಿಗೆ ಸೆಳೆತ, ಅರುಚಿ, ಶರೀರದಲ್ಲಿ ನವೆ ಇವುಗಳುಂಟಾಗುವಿಕೆ, ಕುಕ್ಷಿಯಲ್ಲಿ ವಾಯುವು ಬಂಧಿಸುವಿಕೆ, ನೇತ್ರಗಳುರಿಯುವಿಕೆ, ಬೆವರುವಿಕೆ, ಹೆಚ್ಚು ವಿಸ್ಮಯವಾಗುವಿಕೆ, ಬಾಯಿ ಕಹಿಯಾಗಿಯಾದರೂ, ಹುಳಿಯಾಗಿಯಾದರೂ ಇರುವಿಕೆ, ಮೂತ್ರವು ನೀಲವರ್ಣವಾಗಿಯಾದರೂ, ಧೂಮ್ರವರ್ಣವಾಗಿಯಾದರೂ ಇರುವಿಕೆ ಈ ಲಕ್ಷಣಗಳುಂಟಾಗಿದ್ದರೆ ವಾತಪಿತ್ತಜ್ವರವೆಂದು ತಿಳಿಯಬೇಕು.

## ವಾತಪಿತ್ತಜ್ವರ ಚಿಕಿತ್ಸೆ.

೧. ಪಂಚಭದ್ರ ಕಷಾಯ :—ಅಮೃತಬಳ್ಳಿ, ಪರ್ಪಾಟಕ, ತುಂಗೇಗಡ್ಡೆ, ನೆಲಬೇವು, ಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ವಾತಪಿತ್ತಜ್ವರ ಗುಣವಾಗುವದು.

೨ ದ್ರಾಕ್ಷಾದಿ ಕಷಾಯ :—ದ್ರಾಕ್ಷಿ, ನೆಲಬೇವು, ಅಮೃತಬಳ್ಳಿ, ಆಡುಸೋಗೆ, ಕಚೋರ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ವಾತಪಿತ್ತಜ್ವರ ಗುಣವಾಗುವದು.

೩. ನೀಲೋತ್ಪಲಾದಿ ಹಿಮ :—ಕರಿನೈದಿಲೆ ಗಡ್ಡೆ ಹುವ್ವುಸಹಿತ, ಚಿಟ್ಟಾಮುಟ್ಟಿ, ದ್ರಾಕ್ಷಿ, ಇಪ್ಪೇಚಕ್ಕೆ, ಅತಿಮಧುರ, ಲಾವಂಚ, ಪದ್ಮಕ, ನೆಲಕುಂಬಳ, ಚಿಕ್ಕ ಈಚಲದ ಹಣ್ಣು ಇವು ಸಮಭಾಗ ಕುಟ್ಟಿ ಚೂರ್ಣಮಾಡಿ ಒಂದು ಪಾತ್ರೆಯಲ್ಲಿ ಹಾಕಿ ಮುಕ್ಕಾಲುಶೇರು ನೀರುಹಾಕಿ ಒಂದು ರಾತ್ರಿ ನೆನೆಹಾಕಿ ಎರಡನೆಯ ದಿನ ಬೆಳಿಗ್ಗೆ ಶೋಧಿಸಿ ಆದರಲ್ಲಿ ಜೇನುತುಪ್ಪ ಬೆರಸಿ ೫ ತೊಲೆಯಷ್ಟು ಕುಡಿಯಲು ವಾತಪಿತ್ತಜ್ವರ, ಪ್ರಲಾಪ, ಭ್ರಮೆ, ವಾಂತಿ, ಮೂರ್ಛೆ, ದಾಹವು ಗುಣವಾಗುವವು.

೪. ಶುಂಠಿ, ಚಂಗಲಕೋಷ್ಟ, ಅಮೃತಬಳ್ಳಿ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಕಾಸ, ಶ್ವಾಸ, ಪಾರ್ಶ್ವಶೂಲೆ, ವಾತಪಿತ್ತಜ್ವರ ಇವು ಗುಣವಾಗುವವು.

೫. ಸೈಂದರಲವಣ, ಹಾಲುವಾಣದಚಕ್ಕೆ, ಶುಂಠಿ, ಕೊನ್ನಾರಿಗಡ್ಡೆ, ನೆಲಬೇವು, ಅಮೃತಬಳ್ಳಿ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ವಾತಪಿತ್ತಜ್ವರ ಗುಣವಾಗುವದು.

೬. ಆಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಬೂರುಗದ ಚಕ್ಕೆ, ಸಣ್ಣರಾಸ್ಮೆ, ಕಕ್ಕೇಬಂಕೆ, ಆಡುಸೋಗೆ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸಕ್ಕರೆಬೆರಸಿ ಕುಡಿಯಲು ವಾತ ಪಿತ್ತಜ್ವರ ಗುಣವಾಗುವದು.

೭. ಶುಂಠಿ, ಚಂಗಲಕೋಷ್ಟ, ಪರ್ಪಾಷ್ಟಕ, ಅಮೃತಬಳ್ಳಿ ಇವು ಸಮ ಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಕಾಸ, ಶ್ವಾಸ, ಪಾರ್ಶ್ವಶೂಲೆ, ವಾತಪಿತ್ತಜ್ವರ ಇವು ಗುಣವಾಗುವವು.

೮. ಅಮೃತಬಳ್ಳಿ, ಚಿಟ್ಟೆಹರಳುಬೇರು, ಲಕ್ಕಿಬೇರು, ತುಂಗೇಗಡ್ಡೆ, ಒಂದೆಲೆ ಹೊನ್ನೆ, ಯಲುವಸಂಧಿ, ಶುಂಠಿ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ವಾತಪಿತ್ತಜ್ವರ ಗುಣವಾಗುವದು.

## ವಾತಶ್ಲೇಷ್ಮಜ್ವರ ಲಕ್ಷಣಗಳು.

ವಾತಶ್ಲೇಷ್ಮಜ್ವರದಲ್ಲಿ ದೇಹವು ತಣ್ಣಗಿರುವಿಕೆ, ಕೀಲುಗಳು ಸೆಳೆಯು ವಿಕೆ, ಅತಿನಿದ್ರೆ, ಶರೀರವು ಭಾರವಾಗಿರುವಿಕೆ, ತಲೆಭಾರ, ನೆಗಡಿ, ಕೆಮ್ಮಲು, ಮೈಯುರಿಯುವಿಕೆ, ಜ್ವರದ ವೇಗವು ವಿಶೇಷವಾಗಿಲ್ಲದಿರುವಿಕೆ, ಶರೀರವು ಜಿಗು ಟಾಗುವಿಕೆ, ಬಾಯಿ ಉಪ್ಪಾಗಿರುವಿಕೆ, ಶಿರೋವೇದನೆಯುಂಟಾಗುವಿಕೆ, ಸರ್ವಾಂಗ ಗಳಲ್ಲಿಯೂ ನೋವುಂಟಾಗುವಿಕೆ, ನೇತ್ರಗಳಲ್ಲಿ ನೀರು ಸುರಿಯುವಿಕೆ, ವಾಂತಿ ಯಾಗುವಿಕೆ, ಶರೀರದಲ್ಲಿ ರೋಮಾಂಚನವಾಗುವಿಕೆ, ಮೂಗಿನಲ್ಲಿ ಶ್ಲೇಷ್ಮವು ಸ್ರವಿಸುತ್ತಿರುವಿಕೆ, ಅತಿತಾಪವು, ಶ್ವಾಸ ಇವುಗಳುಂಟಾಗುವಿಕೆ, ನಿದ್ರೆ ಬಾರ ದಿರುವಿಕೆ, ಮೂತ್ರವು ನೊರೆಗಟ್ಟುವಿಕೆ, ಈ ಲಕ್ಷಣಗಳು ಉಂಟಾಗಿದ್ದರೆ ವಾತ ಶ್ಲೇಷ್ಮಜ್ವರವೆಂದು ತಿಳಿಯಬೇಕು.

## ವಾತಶ್ಲೇಷ್ಮಜ್ವರ ಚಿಕಿತ್ಸೆ.

೧. ಆರಗ್ವಾದಿ ಕಷಾಯ :—ಕಕ್ಕೇಬಂಕೆ, ಮೋಡಿ, ತುಂಗೇಗಡ್ಡೆ, ಕಟುಕ ರೋಹಿಣಿ, ಆಳಲೇಕಾಯಿಸಿಪ್ಪೆ, ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ವಾತಶ್ಲೇಷ್ಮಜ್ವರ ಗುಣವಾಗುವದು.

೨. ದಶಮೂಲ ಕಷಾಯ :—ಮೂರೆಲೆಹೊನ್ನೆ, ಒಂದೆಲೆಹೊನ್ನೆ, ನೆಲ ಗುಳ್ಳ, ಹೆಗ್ಗುಳ್ಳ, ಸಣ್ಣನೆಗ್ಗಿಲು, ಬಿಲ್ವಪತ್ರೆಬೇರು, ನರುವಲು, ಹೆಮ್ಮರ, ಶಿವನೆಬೇರು, ಪಾದರಿ ಇವುಗಳ ಬೇರನ್ನು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಹಿಪ್ಪಲಿಚೂರ್ಣ ಬೆರಸಿ ಸೇವಿಸಲು ವಾತಶ್ಲೇಷ್ಮ ಜ್ವರ, ಸನ್ನಿಪಾತಜ್ವರ, ಬಾಣಂತಿಯರ ದೋಷಗಳು, ಶೋಷ, ಶೈತ್ಯ, ಭ್ರಮೆ, ಬೆವರು, ಶ್ವಾಸ, ಕಾಸ, ಎದೇನೋವು, ಗಂಟಲುನೋವು, ಪಾರ್ಶ್ವಶೂಲೆ, ತಲೇನೋವು ಇವು ಗುಣವಾಗುವವು.

೩. ಮುಸ್ತಾದಿ ಕಷಾಯ:—ತುಂಗೇಗಡ್ಡೆ, ಪರ್ಪಾಷ್ಟಕ, ಶುಂಠಿ, ಅಮೃತ ಬಳ್ಳಿ, ನೆಸುಗುನ್ನಿಬೀಜ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ವಾತಶ್ಲೇಷ್ಮಜ್ವರ ಗುಣವಾಗುವದು.

೪. ಕ್ಷುದ್ರಾದಿ ಕಷಾಯ:—ನೆಲಗುಳ್ಳ, ಅಮೃತಬಳ್ಳಿ, ಶುಂಠಿ, ತಾವರೇ ಗಡ್ಡೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ವಾತಶ್ಲೇಷ್ಮಜ್ವರ, ಶ್ವಾಸಕಾಸ, ಅರುಚಿ, ಕುಕ್ಷಿಶೂಲೆ, ತ್ರಿದೋಷ ಜ್ವರ ಇವು ಗುಣವಾಗುವವು.

೫. ಮೋಡಿ, ಅಳಲೇಕಾಯಿಸಿಪ್ಪೆ, ಕೊನ್ನಾರಿಗಡ್ಡೆ, ಕಕ್ಕೇಬಂಕೆ, ಕಟುಕ ರೋಹಿಣಿ, ಹಿಪ್ಪಲಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಆಮ ಮತ್ತು ಶೂಲೆಗಳಿಂದ ಕೂಡಿದ ವಾತ ಶ್ಲೇಷ್ಮಜ್ವರ ಪರಿಹರವಾಗಿ ದೀಪನವನ್ನು ಉಂಟುಮಾಡುವದು.

೬. ನೆಲಗುಳ್ಳ, ಶುಂಠಿ, ಅಮೃತಬಳ್ಳಿ, ಚಂಗಲಕೋಷ್ಟ, ಹಿಪ್ಪಲಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ವಾತಶ್ಲೇಷ್ಮಜ್ವರ ಗುಣವಾಗುವದು.

೭. ಕಕ್ಕೇಬಂಕೆ, ಕೊನ್ನಾರಿಗಡ್ಡೆ, ಮೋಡಿ, ಅಳಲೇಕಾಯಿಸಿಪ್ಪೆ, ಕಟುಕ ರೋಹಿಣಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ವಾತಶ್ಲೇಷ್ಮಜ್ವರ ಗುಣವಾಗುವದು.

೮. ನೆಲಗುಳ್ಳ, ಶುಂಠಿ, ಅಮೃತಬಳ್ಳಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಹಿಪ್ಪಲಿಚೂರ್ಣ ಬೆರಸಿ ಕುಡಿಯಲು ವಾತಶ್ಲೇಷ್ಮಜ್ವರ ಗುಣವಾಗುವದು.

೯. ಬಜೆ, ಅಗಳುಶುಂಠಿ, ಕಕ್ಕೇಬಂಕೆ, ಕೋಲಮುಕ್ಕನಚಕ್ಕೆ, ಕಟುಕ ರೋಹಿಣಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಹಿಪ್ಪಲಿಚೂರ್ಣ ಬೆರಸಿ ಕುಡಿಯಲು ವಾತಶ್ಲೇಷ್ಮಜ್ವರವು ಗುಣ ವಾಗುವದು.

೧೦. ನೆಲಗುಳ್ಳ, ಗಂಡುತುರಚೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವ ಶೇಷ ಕಷಾಯ ಕಾಯಿಸಿ ಶೋಧಿಸಿ ಹಿಪ್ಪಲಿಚೂರ್ಣ ಬೆರಸಿ ಕುಡಿಯಲು ವಾತ ಶ್ಲೇಷ್ಮಜ್ವರ ಗುಣವಾಗುವದು.

೧೧. ಕಹಿಪಡವಲ, ತ್ರಿಫಲೆ, ಕಟುಕರೋಹಿಣಿ, ಅಮೃತಬಳ್ಳಿ, ಬೇವಿನ ಯಾಳೇಕಡ್ಡಿ, ಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸಕ್ಕರೆ, ಜೇನುತುಪ್ಪ ಬೆರಸಿ ಕುಡಿಯಲು ವಾತಶ್ಲೇಷ ಜ್ವರ ಗುಣವಾಗುವದು.

೧೨ ಲಘು-ಕ್ಷುದ್ರಾದಿ ಕಷಾಯ:—ಸಣ್ಣನೆಗ್ಗಿಲು, ಶುಂಠಿ, ಅಮೃತಬಳ್ಳಿ, ಚಂಗಲಕೋಷ್ಟ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಕಾಸ, ಶ್ವಾಸ, ಅರುಚಿ, ಪಾರ್ಶ್ವಶೂಲೆ, ಶ್ಲೇಷ್ಮ ವಾತಜ್ವರ, ತ್ರಿದೋಷಜ್ವರ ಇವು ಗುಣವಾಗುವದು.

೧೩. ಕಟುಕರೋಹಿಣಿ, ಅಳಲೇಕಾಯಿಸಿಪ್ಪೆ, ಚವ್ಯ, ತುಪ್ಪದದೇವದಾರು, ಅರಸಿನ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಕಫವಾತಜ್ವರ ಗುಣವಾಗುವದು.

೧೪. ಕಕ್ಕೇಬಂಕೆ, ಅಳಲೇಕಾಯಿಸಿಪ್ಪೆ, ಕಹಿಪಡವಲ, ಮೋಡಿ, ಕೊನ್ನಾರಿಗಡ್ಡೆ, ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಶ್ಲೇಷ್ಮವಾತಜ್ವರವನ್ನು ಆಮಶೂಲೆಯನ್ನು ಪರಿಹರಿಸಿ ಅಗ್ನಿಬಲ ಹುಟ್ಟಿಸಿ ಜೀರ್ಣಶಕ್ತಿ ಕೊಡುತ್ತೆ.

## ಪಿತ್ತಶ್ಲೇಷ್ಮಜ್ವರ ಲಕ್ಷಣಗಳು.

ಪಿತ್ತಶ್ಲೇಷ್ಮಜ್ವರದಲ್ಲಿ ಕೆಮ್ಮು, ದಾಹ, ಆಗಾಗ್ಗೆ ಶರೀರದಲ್ಲಿ ತಾಪ, ಚಳಿಯಾಗುವಿಕೆ; ಹಳದಿಯಾಗಿಯೂ, ನೀಲವಾಗಿಯೂ, ಕತ್ತಲಾಗಿಯೂ, ಕಣ್ಣುಗಳಿಗೆ ಕಾಣುವಿಕೆ, ರೋಮಾಂಚನವಾಗುವಿಕೆ, ಶರೀರವು ಅದರುವಿಕೆ, ಬಾಯಿ ಅರುಚಿಯಾಗಿಯೂ, ಕಹಿಯಾಗಿಯೂ, ಉಪ್ಪಾಗಿಯೂ ಇರುವಿಕೆ, ವಿಸ್ಮಯವಾಗಿರುವಿಕೆ, ಪಾದಗಳು ಉರಿಯುವಿಕೆ, ಕಂಠದಲ್ಲಿ ಕಫವು ಕಟ್ಟುವಿಕೆ, ನಿದ್ರೆಬಾರದಿರುವಿಕೆ, ವಾಂತಿಯಾಗುವಿಕೆ; ಮೂತ್ರವು ಕೆಂಪಗೂ, ಬಿಳುಪಾಗಿಯೂ ಇರುವಿಕೆ ಈ ಲಕ್ಷಣಗಳು ಉಂಟಾಗಿದ್ದರೆ ಪಿತ್ತಶ್ಲೇಷ್ಮಜ್ವರವೆಂದು ತಿಳಿಯಬೇಕು.

## ಪಿತ್ತಶ್ಲೇಷ್ಮಜ್ವರ ಚಿಕಿತ್ಸೆ.

೧. ಕಂಟಕಾರ್ಯಾದಿ ಕಷಾಯ:—ರಾಮಗುಳ್ಳದಬೇರು, ಅಮೃತಬಳ್ಳಿ, ಗಂಟುಭಾರಂಗಿ, ಶುಂಠಿ, ಕೊಡಸಿಗೆಬೀಜ, ನಸುಗುನ್ನಿಬೀಜ, ನೆಲಬೇವು, ರಕ್ತಚಂದನಚಕ್ಕೆ, ತುಂಗೇಗಡ್ಡೆ, ಕಹಿಪಡವಲ, ಕಟುಕರೋಹಿಣಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಪಿತ್ತಶ್ಲೇಷ್ಮಜ್ವರ, ದಾಹ, ನಾಲಗೆ ಒಣಗುವದು, ಅರುಚಿ, ಬಿಕ್ಕಳಿಕೆ, ಕೆಮ್ಮು, ಗರ್ಭಶೂಲೆ, ಕುಕ್ಷಿಶೂಲೆ ಗುಣವಾಗುವದು.

೨ ಪಟೋಲಾದಿ ಕಷಾಯ:— ಕಹಿಪಡವಲ, ರಕ್ತಚಂದನ ಚಕ್ಕೆ, ಮಂಜಿನಾರುಬೇರು, ಕಟುಕರೋಹಿಣಿ, ಅಗಿಲುಶುಂಠಿ, ಅಮೃತಬಳ್ಳಿ, ಹಿಪ್ಪಲಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಪಿತ್ತಶ್ಲೇಷ್ಮಜ್ವರ, ಅರುಚಿ, ವಾಂತಿ ಇವು ಗುಣವಾಗುವದು.

೩. ಅಮೃತಾಷ್ಟಕ ಕಷಾಯ :—ಅಮೃತಬಳ್ಳಿ, ಬೇವಿನಪಟ್ಟೆ, ಕಟುಕರೋಹಿಣಿ, ತುಂಗೇಗಡ್ಡೆ, ಕೊಡಶಿಗೆಬೀಜ, ಶುಂಠಿ, ಕಹಿಪಡವಲ, ರಕ್ತಚಂದನ ಚಕ್ಕೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಹಿಪ್ಪಲಿಚೂರ್ಣ ಬೆರಸಿ ಕುಡಿಯಲು ಪಿತ್ತಶ್ಲೇಷ್ಮಜ್ವರ, ವಾಂತಿ, ಅರುಚಿ, ಎದೆ ಅದರುವದು, ದಾಹ, ನಾಲಿಗೆ ಒಣಗುವದು ಇವು ಗುಣವಾಗುವದು.

೪. ತಿಕ್ತಾದಿ ಕಷಾಯ:—ಕಟುಕರೋಹಿಣಿ, ಲಾವಂಚ, ಚಿಟ್ಟೆರಳುಬೇರು, ಕೊತ್ತುಂಬರಿಬೀಜ, ಪರ್ಪಾಷ್ಟಕ, ತುಂಗೇಗಡ್ಡೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಅಪಥ್ಯದಿಂದ ಮರಕಳಿಸಿರುವ ಪಿತ್ತಶ್ಲೇಷ್ಮಜ್ವರ ಶೀಘ್ರವಾಗಿ ಗುಣವಾಗುವದು.

೫. ಅಮೃತಬಳ್ಳಿ, ಇಂದ್ರಜವೆ, ಕಹಿಪಡವಲ, ನೆಲಬೇವು, ಕೊನ್ನಾರಿಗಡ್ಡೆ, ರಕ್ತಚಂದನ, ಶುಂಠಿ, ಕಟುಕರೋಹಿಣಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಪಿತ್ತಶ್ಲೇಷ್ಮಜ್ವರ ಗುಣವಾಗುವದು.

೬. ನೆಲಬೇವು, ಚಿಟ್ಟಾಮುಟ್ಟೆ, ಕಹಿಪಡವಲ, ತ್ರಿಫಲೆ, ಅತಿಮಧುರ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಪಿತ್ತಶ್ಲೇಷ್ಮಜ್ವರ ಗುಣವಾಗುವದು.

೭ ಲಾವಂಚ, ಕೊತ್ತಮಿರಿಬೀಜ, ನೆಲಗುಳ್ಳ, ಯಲುವಸಂಧಿ, ತುರಚನಬೇರು (ಮುಳ್ಳುತುರಚ), ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಪಿತ್ತಶ್ಲೇಷ್ಮಜ್ವರ ಗುಣವಾಗುವದು.

೮. ಕಹಿಪಡವಲ, ಕಟುಕರೋಹಿಣಿ, ರಕ್ತಚಂದನ, ಕುರುಟಿಗೆಬೇರು ಅಮೃತಬಳ್ಳಿ, ಅಗಿಲುಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಶ್ಲೇಷ್ಮಪಿತ್ತಜ್ವರ, ಛರ್ದಿ, ಅರೋಚಕ, ಕಾಮಾಲೆ ಇವು ಗುಣವಾಗುವದು.

## ವಿಷಮಜ್ವರಕ್ಕೆ ಚಿಕಿತ್ಸೆ.

೧. ಮುಸ್ತಾದಿ ಕಷಾಯ :—ತುಂಗೇಗಡ್ಡೆ, ನೆಲಗುಳ್ಳ, ಅಮೃತಬಳ್ಳಿ, ಶುಂಠಿ, ನೆಲ್ಲಿಕಾಯಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಹಿಪ್ಪಲಿಚೂರ್ಣ, ಜೇನುತುಪ್ಪ ಬೆರಸಿ ಕುಡಿಯಲು ವಿಷಮಜ್ವರ ಗುಣವಾಗುವದು.

೨ ಚಿತ್ರಮೂಲ, ಹೊಟ್ಟು ಸುಲಿದ ಬೆಳ್ಳುಳ್ಳಿ, ಅಗಿಲುಶುಂಠಿ, ಕಹಿಪಡವಲ, ಬೇವಿನಯಳೇಕಡ್ಡಿ, ಪರ್ಪಾಷ್ಟಕ, ಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ವಿಷಮಜ್ವರ ಗುಣವಾಗುವದು.

೩. ಲಕ್ಕಿಲಿಕುಡಿ, ಹಿಪ್ಪಲಿ, ತುಂಬೇಹುವ್ವು, ಕಟುಕರೋಹಿಣಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ವಿಷಮಜ್ವರ ಗುಣವಾಗುವದು.

೪. ಕಹಿಪಡವಲ, ಕಟುಕರೋಹಿಣಿ, ಕೊನ್ನಾರಿಗಡ್ಡೆ, ಅಳಲೇಕಾಯಿಸಿಪ್ಪೆ, ಅತಿಮಧುರ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ೩-೪-೫ ದಿವಸಗಳು ಕೊಟ್ಟರೆ ವಿಷಮಜ್ವರ ಗುಣವಾಗುವದು.

೫. ಒಂದು ತೊಲೆ ಹಿಪ್ಪಲಿ, ಒಂದು ಪಾವು ಹಾಲು, ಒಂದು ಶೇರು ನೀರುಹಾಕಿ ಹಾಲು ಇಮರುವವರಿಗು ಕಾಯಿಸಿ ಶೋಧಿಸಿ ಕೊಟ್ಟರೆ ವಿಷಮಜ್ವರ ಗುಣವಾಗುವದು.

೬. ನೆಲಗುಳ್ಳ, ಲಕ್ಕಿಲಿ, ಒಂದೆಲಗ, ಬಿಳೇಜೀರಿಗೆ, ಗರುಗ, ಶುಂಠಿ, ಹಿಪ್ಪಲಿ, ಮುಳ್ಳುಕೊಗ್ಗಿ, ಅಳಲೇಕಾಯಿಸಿಪ್ಪೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ೧ ತೊಲೆ ಜೇನುತುಪ್ಪವನ್ನು ಬೆರಸಿ ಕುಡಿಯಲು ವಿಷಮಜ್ವರ ಗುಣವಾಗುವದು.

### ದೋಷಜ್ವರಕ್ಕೆ ಕಷಾಯ.

೧ ನೆಲಗುಳ್ಳ, ಹೆಗ್ಗುಳ್ಳ, ತಗ್ಗೀಬೇರು, ಚಿಟ್ಟಾಮುಟ್ಟಿಬೇರು, ಪಾದರಿಬೇರು, ಬಿಲ್ಪತ್ರೆಬೇರು, ಶಿವನಿಬೇರು, ಮೂರೆಲೆಹೊನ್ನೆ, ಒಂದೆಲೆಹೊನ್ನೆ, ಚಿತ್ರಮೂಲ, ಎಕ್ಕದಬೇರು, ನುಗ್ಗೀಬೇರು, ಮಯೂರಶಿಖಿ, ಬಿಳೇವುಪ್ಪಿ, ಕರೇವುಪ್ಪಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ದೋಷಜ್ವರ, ಸನ್ನಿಪಾತ ಇವು ಗುಣವಾಗುವದು.

೨. ನೆಲಬೇವು, ಒಳ್ಳೇಬೇವಿನ ವಳನಾರು, ಕಟುಕರೋಹಿಣಿ, ಕಹಿಪಡವಲ, ಕೊನ್ನಾರಿಗಡ್ಡೆ, ಆಡುಸೋಗೆಬೇರು, ಅಮೃತಬಳ್ಳಿ, ತ್ರಿಫಲೆ, ತ್ರಿಕಟುಕ, ಕಲ್ಲುವಾಪಟೆಬೇರು ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಜೇನುತುಪ್ಪ ಬೆರಸಿ ಕುಡಿಯಲು ದೋಷಜ್ವರ ಗುಣವಾಗುವದು.

### ತ್ರಿದೋಷಜ್ವರಕ್ಕೆ ಕಷಾಯ.

ತ್ರಿಕಟುಕ, ತುಂಗೇಗಡ್ಡೆ, ಕಟುಕರೋಹಿಣಿ, ಕಹಿಪಡವಲ, ಕೊಡಸಿಗೆಬೀಜ, ನೆಲಬೇವು, ಅಮೃತಬಳ್ಳಿ, ಅಗಳುಶುಂಠಿ ಇವು ಸಮಭಾಗ ತಂದು

ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ತ್ರಿದೋಷಜ್ವರ ಗುಣವಾಗುವದು.

### ಐಕಾಹಿಕಜ್ವರಕ್ಕೆ ಚಿಕಿತ್ಸೆಗಳು.

೧. ಪಟೋಲಾದಿ ಕಷಾಯ:—ಕಹಿಪಡವಲ, ತ್ರಿಫಲೆ, ಬೇವಿನಚಕ್ಕೆ, ದ್ರಾಕ್ಷಿ, ಕಕ್ಕೇಬಂಕೆ, ಆಡುಸೋಗೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸಕ್ಕರೆ, ಜೇನುತುಪ್ಪ ಬೆರಸಿ ಕುಡಿಯಲು ಏಕಾಹಿಕಜ್ವರ ಗುಣವಾಗುವದು.

೨. ಚಿಟ್ಟಾಮುಟ್ಟಿ, ನೆಲಬೇವು, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಸೊಗದೇಬೇರು, ಅಮೃತಬಳ್ಳಿ, ಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಏಕಾಹಿಕ ಚಳಿಜ್ವರ ಗುಣವಾಗುವದು.

೩. ಕಹಿಪಡವಲ, ಬೇವು, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ದ್ರಾಕ್ಷಿ, ಕಟುಕರೋಹಿಣಿ, ಕಕ್ಕೇಬಂಕೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಜೇನುತುಪ್ಪ, ಸಕ್ಕರೆ ಬೆರಸಿ ಕುಡಿಯಲು ದಿನಪ್ರತಿಯಲ್ಲೂ ಬರುವ ಜ್ವರ ಗುಣವಾಗುವದು.

೪. ಪ್ರತಿದಿನ ಬರುವ ಚಳಿಜ್ವರಕ್ಕೆ:—ಗಜ್ಜುಗದಪಪ್ಪು, ಹೊಟ್ಟುಸುಲಿದ ಬೆಳ್ಳುಳ್ಳಿ, ಮೆಣಸು ಇವು ಮೂರು ಸಮಭಾಗ ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ಚಿಕ್ಕ ನಿಂಬೇಹಣ್ಣಿನಗಾತ್ರ ಹೊಟ್ಟೆಗೆ ಕೊಡುವದು. ಈರೀತಿ ೩ ದಿನ ಕೊಡಬೇಕು. ಇದರಿಂದ ದಿನ ಬರುವ ಚಳಿಜ್ವರ ಗುಣವಾಗುವದು.

### ದ್ವ್ಯಾಹಿಕಜ್ವರಕ್ಕೆ ಚಿಕಿತ್ಸೆ.

ಕಹಿಪಡವಲ, ತುಂಗೇಗಡ್ಡೆ, ಶುಂಠಿ, ಹಾವುಮೆಕ್ಕೇ ಬೇರು, ಅಮೃತಬಳ್ಳಿ, ಪರ್ಪಾಟಕ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಹಿಪ್ಪಲಿಚೂರ್ಣ ಬೆರಸಿ ಕುಡಿಯಲು ದ್ವ್ಯಾಹಿಕ ಚಳಿಜ್ವರ ಗುಣವಾಗುವದು.

### ತ್ರ್ಯಾಹಿಕಜ್ವರಕ್ಕೆ ಚಿಕಿತ್ಸೆಗಳು.

೧. ನಾಯಿತುಲಸಿ, ದ್ರಾಕ್ಷಿ, ಶುಂಠಿ, ಗಂಟುಭಾರಂಗಿ, ಹಾವುಮೆಕ್ಕೇಬೇರು, ಸಹದೇವಿ, ಚಿಟ್ಟಾಮುಟ್ಟಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ತ್ರ್ಯಾಹಿಕ ಚಳಿಜ್ವರ ಗುಣವಾಗುವದು.

೨. ಶುಂಠಿ, ಅಮೃತಬಳ್ಳಿ, ತುಂಗೇಗಡ್ಡೆ, ರಕ್ತಚಂದನಚಕ್ಕೆ, ಲಾವಂಚ, ಕೊತ್ತುಂಬರಿಬೀಜ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ

ಕಾಯಿಸಿ ಶೋಧಿಸಿ ಸಕ್ಕರೆ, ಜೇನುತುಪ್ಪ ಬೆರಸಿ ಕುಡಿಯಲು ತ್ರ್ಯಾಹಿಕಜ್ವರ ಗುಣವಾಗುವದು.

೩. ಕೊತ್ತುಂಬರಿಬೀಜ, ರಕ್ತಚಂದನ, ಕೊನ್ನಾರಿಗಡ್ಡೆ, ಅಮೃತಬಳ್ಳಿ, ಲಾವಂಚ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಜೇನುತುಪ್ಪ, ಸಕ್ಕರೆ ಬೆರಸಿ ಕುಡಿಯಲು ಮೂರುದಿವಸಕ್ಕೆ ಒಂದಾವರ್ತಿ ಬರುವ ಜ್ವರ ಗುಣವಾಗುವದು.

೪ ನೆಲಬೇವು, ಅಮೃತಬಳ್ಳಿ, ರಕ್ತಚಂದನ, ಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಜೇನುತುಪ್ಪ, ಸಕ್ಕರೆ ಬೆರಸಿ ಕುಡಿಯಲು ಮೂರುದಿವಸಗಳಿಗೆ ಒಂದಾವರ್ತಿ ಬರುವ ಜ್ವರ ಗುಣವಾಗುವದು.

೫. ಮೂರನೇ ಚಳಿಜ್ವರಕ್ಕೆ :—ನೆಲಕುಂಬಳದ ಹುವ್ವ ೩, ಇಂಗಳದ ಹುವ್ವ ೩, ತುಂಬೇ ಹುವ್ವ ೩, ನುಗ್ಗೇ ಹುವ್ವ ೩ ಇವು ನಾಲ್ಕು ಜಿನಸು ಅರಸಿ ನದಬಟ್ಟೆಯಲ್ಲಿ ಕಟ್ಟಿ ಸಾಂಬ್ರಾಣಿ ಹೊಗೆ ತೋರಿಸಿ ತೋಳಿಗೆ ಕಟ್ಟುವದು. ಯಕ್ಕದ ಹುವ್ವ ೧, ಮೆಣಸು ೩, ಬೆಳ್ಳುಳ್ಳಿಯಿಲುಕು ೧ ಇವು ಮೂರು ಅರದು ವೀಳ್ಯೆದೆಲೆಯಲ್ಲಿ ಇಟ್ಟು ಮಡಿಸಿ ಹೊಟ್ಟೆಗೆ ಕೊಡುವದು. ಇದರಿಂದ ಮೂರನೇ ಚಳಿಜ್ವರ ಗುಣವಾಗುವದು.

೬. ಮೂರನೇ ಚಳಿಜ್ವರಕ್ಕೆ :—ತುಂಬೇ ಸೊಪ್ಪು ೨ ಆಣೆ ತೂಕ, ಮೆಣಸು ೫, ಹೊಟ್ಟುಸುಲಿದ ಬೆಳ್ಳುಳ್ಳಿಯಿಲುಕು ೧ ಇವು ಮೂರು ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ಉಂಡೇಮಾಡಿ ನುಂಗಿಸುವದು. ಹೀಗೆ ಬೆಳಿಗ್ಯೆ, ಮಧ್ಯಾನ್ಹ, ಸಾಯಂಕಾಲ ೩ ಸಲ ಕೊಡಬೇಕು. ಕೈಗೆಕಟ್ಟುವ ಔಷಧ:—ತುಂಬೇಸೊಪ್ಪು ॥ ತೊಲ, ಮೆಣಸು ೫, ಹೊಟ್ಟುಸುಲಿದ ಬೆಳ್ಳುಳ್ಳಿಯಿಲುಕು ೫ ಇವು ಮೂರು ಚನ್ನಾಗಿ ಅರದು ಬಟ್ಟೆಯಲ್ಲಿ ಹಾಕಿ ಕೈಗೆ ನೋಡುವಸ್ಥಳಕ್ಕೆ ಕಟ್ಟುವದು. ಈರೀತಿ ಹೊಟ್ಟೆಗೆ ಕೈಗೆ ೩ ದಿನ ಮಾಡಬೇಕು. ಎಂದಿಗೂ ಮೂರನೇ ಚಳಿ ಬರುವದಿಲ್ಲ.

೭. ಮೂರನೇ ಚಳಿಜ್ವರಕ್ಕೆ ಕಟ್ಟುವ ಔಷಧ:—ಎಕ್ಕದಕುಡಿ ೩, ಹೊಟ್ಟುಸುಲಿದ ಬೆಳ್ಳುಳ್ಳಿಯಿಲುಕು ೩, ಮೆಣಸು ೫ ಇವು ಮೂರು ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ಚಳಿಬರುವ ಸಮಯದಲ್ಲಿ ಮಣಿಕಟ್ಟು ಗೆಣ್ಣಿಗೆ ಬಿಲ್ಲೆಮಾಡಿ ಕಟ್ಟುವದು. ಚಳಿಜ್ವರ ನಿಂತಕೂಡಲೇ ಬಿಚ್ಚಿಹಾಕುವದು. ಈರೀತಿ ೩ ದಿನ ಕಟ್ಟಿದರೆ ಮೂರನೇ ಚಳಿಜ್ವರ ಗುಣವಾಗುವದು.

೮. ಮೂರನೇ ಜ್ವರಕ್ಕೆ :—ನಿಂಬೇಹಣ್ಣಿನ ಹೋಳಿನಲ್ಲಿ ೬ ತೊಟ್ಟು ನುಗ್ಗೇ ಸೊಪ್ಪಿನ ರಸ ಹಾಕಿ ಜ್ವರಬರುವ ದಿನ ಬೆಳಿಗ್ಯೆ ಹೋಳು ಹೊಟ್ಟೆಗೆ ಕೊಡಬೇಕು. ಈರೀತಿ ೩ ದಿನಕ್ಕೆ ೩ ಹೋಳು ಕೊಟ್ಟರೆ ಮೂರನೇ ಜ್ವರ ಗುಣವಾಗುವದು.

೯. ಗುಡೂಚ್ಯಾದಿ ಕಷಾಯ :— ಅಮೃತಬಳ್ಳಿ, ಕೊತ್ತಮಿರಿಬೀಜ, ತುಂಗೇಗಡ್ಡೆ, ರಕ್ತಚಂದನ, ಮೋಡಿ, ಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸಕ್ಕರೆ, ಜೇನುತುಪ್ಪ ಬೆರಸಿ ಕುಡಿಯಲು ತೃತೀಯಕಜ್ವರ ಗುಣವಾಗುವದು.

## ಚಾತುರ್ಥಿಕಜ್ವರಕ್ಕೆ ಚಿಕಿತ್ಸೆಗಳು.

೧. ದೇವದಾರ್ವ್ಯಾದಿ ಕಷಾಯ :— ತುಪ್ಪದದೇವದಾರು, ಅಳಲೇಕಾಯಿಸಿಪ್ಪೆ, ಆಡುಸೋಗೆ, ಮೂರೆಲೆಹೊನ್ನೆ, ಶುಂಠಿ, ನೆಲ್ಲೀಕಾಯಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸಕ್ಕರೆ, ಜೇನುತುಪ್ಪ ಬೆರಸಿ ಕುಡಿಯಲು ಚಾತುರ್ಥಿಕಜ್ವರ ಗುಣವಾಗುವದು.

೨. ಆಡುಸೋಗೆ, ನೆಲ್ಲೀಕಾಯಿ, ಒಂದೆಲೆಹೊನ್ನೆ, ತುಪ್ಪದದೇವದಾರು, ಕೊತ್ತುಂಬರಿಬೀಜ, ಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸಕ್ಕರೆ, ಜೇನುತುಪ್ಪ ಬೆರಸಿ ಕುಡಿಯಲು ಚಾತುರ್ಥಿಕಜ್ವರ ಗುಣವಾಗುವದು.

೩. ಪಥ್ಯಾದಿ ಕಷಾಯ :—ಅಳಲೇಕಾಯಿಸಿಪ್ಪೆ, ಒಂದೆಲೆಹೊನ್ನೆ, ಶುಂಠಿ, ತುಪ್ಪದದೇವದಾರು, ನೆಲ್ಲೀಕಾಯಿ, ಆಡುಸೋಗೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕಲ್ಲುಸಕ್ಕರೆ, ಜೇನುತುಪ್ಪ ಬೆರಸಿ ಕುಡಿಯಲು ಚಾತುರ್ಥಿಕಜ್ವರ ಗುಣವಾಗುವದು.

೪. ನೆಲ್ಲೀಕಾಯಿ, ಅಳಲೇಕಾಯಿಸಿಪ್ಪೆ, ತುಪ್ಪದದೇವದಾರು, ನೆಲಹೊನ್ನೆ, ಶುಂಠಿ, ಆಡುಸೋಗೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಜೇನುತುಪ್ಪ, ಸಕ್ಕರೆ ಬೆರಸಿ ಕುಡಿಯಲು ಚಾತುರ್ಥಿಕಜ್ವರ ಗುಣವಾಗುವದು.

೫. ನೆಲ್ಲೀಕಾಯಿ, ಕೊನ್ನಾರಿಗಡ್ಡೆ, ಅಮೃತಬಳ್ಳಿ, ಅತಿಮಧುರ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಜೇನುತುಪ್ಪ, ಸಕ್ಕರೆ ಬೆರಸಿ ಕುಡಿಯಲು ಚಾತುರ್ಥಿಕಜ್ವರ ಗುಣವಾಗುವದು.

೬. ನಿಂಬೇಹಣ್ಣು ತಂದು ಎರಡು ಭಾಗವಾಗಿ ಕುಯಿದು ಒಂದುಭಾಗ ತೆಗೆದುಕೊಂಡು ಅದಕ್ಕೆ ತುಂಬೇಸೊಪ್ಪಿನ ರಸ ಹಾಕಿ ಅದರಮೇಲೆ ಬಿಳೇಜೀರಿಗೆ ಚೂರ್ಣ ಹಾಕಿ ಜಿಬಿಕಿ ಹೊಟ್ಟು ಬಿಸಾಕುವದು. ಈರೀತಿ ೩ ದಿನ ಬೆಳಿಗ್ಯೆಹೊತ್ತು ಕೊಡಬೇಕು. ಇದರಿಂದ ನಾಲ್ಕನೇ ಚಳಿಜ್ವರ ಗುಣವಾಗುವದು.

## ಪಂಚಾಹಿಕಜ್ವರಗಳಿಗೆ ಚಿಕಿತ್ಸೆಗಳು.

೧. ಚಿಟ್ಟಾಮುಟ್ಟಿ, ಪೇರಾಮುಟ್ಟಿ, ಯಲುವಸಂಧಿ, ಶುಂಠಿ, ನೆಲತಾಟಿಗಡ್ಡೆ, ಸೊಗದೇಬೇರು, ಅಮೃತಬಳ್ಳಿ, ಕಟುಕರೋಹಿಣಿ, ಮರದರಿಸಿನ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಪಂಚಾಹಿಕಜ್ವರ ಗುಣವಾಗುವದು.

೨. ಚಿಟ್ಟಾಮುಟ್ಟಿ, ಪೇರಾಮುಟ್ಟಿ, ಬೇವಿನಯಳೇಕಡ್ಡಿ, ಯಲುವಸಂಧಿ, ನೆಲಬೇವು, ಚಿತ್ರಮೂಲ, ನೆಲತಾಟಿಗಡ್ಡೆ, ಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಪಂಚಾಹಿಕಜ್ವರ ಗುಣವಾಗುವದು. ಇದನ್ನೇ ಚಾತುರ್ಥಿಕವಿಪರೀತವೆನ್ನುವರು.

## ಸಂತತಾದಿಜ್ವರಗಳಿಗೆ ಚಿಕಿತ್ಸೆಗಳು.

೧. ಪಟೋಲಾದಿ ಕಷಾಯ :—ಕಹಿಪಡವಲ, ಕೊಡಸಿಗೆಬೀಜ, ತುಪ್ಪದ ದೇವದಾರು, ತ್ರಿಫಲೆ, ತುಂಗೇಗಡ್ಡೆ, ದ್ರಾಕ್ಷಿ, ಅತಿಮಧುರ, ಅಮೃತಬಳ್ಳಿ, ಆಡುಸೋಗೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಜೇನುತುಪ್ಪ ಬೆರಸಿ ಕುಡಿಯಲು ಸತತಜ್ವರ, ಐಕಾಹಿಕಜ್ವರ, ದ್ವ್ಯಾಹಿಕಜ್ವರ, ತೃತೀಯಕಜ್ವರ, ವಿಷಮಜ್ವರ, ದಾಹಜ್ವರ, ಸಂತತಜ್ವರ, ನವಜ್ವರಗಳು ಗುಣವಾಗುವದು.

೨. ಕಹಿಪಡವಲ, ಕಟುಕರೋಹಿಣಿ, ಇಂದ್ರಜವೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಸಂತತಜ್ವರ ಗುಣವಾಗುವದು.

೩. ನೆಲಹಾಲೆ, ಕೊನ್ನಾರಿಗಡ್ಡೆ, ಕಹಿಪಡವಲ, ಕಟುಕರೋಹಿಣಿ, ಅಗಳುಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಸಂತತಜ್ವರ ಗುಣವಾಗುವದು.

## ಸರ್ವಶೀತಜ್ವರಕ್ಕೆ ಕ್ಷುದ್ರಾದಿ ಚಿಕಿತ್ಸೆ.

ನೆಲಗುಳ್ಳ, ಕೊತ್ತುಂಬರಿಬೀಜ, ಶುಂಠಿ, ಅಮೃತಬಳ್ಳಿ, ತುಂಗೇಗಡ್ಡೆ, ಪದ್ಮಕ, ರಕ್ತಚಂದನ, ನೆಲಬೇವು, ಕಹಿಪಡವಲ, ಆಡುಸೋಗೆ, ಚಂಗಲಕೋಷ್ಟ, ಕಟುಕರೋಹಿಣಿ, ಕೊಡಸಿಗೆಬೀಜ, ಬೇವಿನಚಕ್ಕೆ, ಗಂಟುಭಾರಂಗಿ, ಪರ್ಪಾಷ್ಟಕ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಪ್ರತಿದಿನ ಪ್ರಾತಃಕಾಲ ಸೇವಿಸುತ್ತಾ ಬರುವದರಿಂದ ಸರ್ವಶೀತಜ್ವರಗಳು ಗುಣವಾಗುವದು.

## ಚಳಿಜ್ವರಕ್ಕೆ ಚಿಕಿತ್ಸೆಗಳು.

೧. ಬಿಲ್ವಪತ್ರೆಎಳೇಕಡ್ಡಿ, ನೆಲಬೇವು, ಮೋಡಿ, ಹಿಪ್ಪಲಿ, ಚಿರಾಯಿತ, ಕಹಿಪಡವಲ, ಪರ್ಪಾಷ್ಟಕ, ವಿಷ್ಣುಕ್ರಾಂತಿ, ಭದ್ರಮುಸ್ತೆ, ಅಗುಳುಶುಂಠಿ, ತಾಳೀಸಪತ್ರೆ, ಕರ್ಜೂರ, ಮೆಣಸು, ಅಷ್ಟಮಧುಕ, ಶುಂಠಿ, ದುಂಪರಾಸ್ಮೆ, ಸುನಾಮುಕಿ, ಕರೇಜೀರಿಗೆ, ಕೊತ್ತುಂಬರಿಬೀಜ, ನಿಂಬೇಹಣ್ಣಿನಹೊಟ್ಟು, ಬ್ಯಾಲದಹೊಟ್ಟು, ಅಕ್ಕಲಕರೆ, ಒಳ್ಳೇಬೇವಿನಚಕ್ಕೆ, ಕರಬೇವಿನಯಲಿಕಡ್ಡಿ, ಅಮೃತಬಳ್ಳಿ, ಬಿಲ್ವಪತ್ರೆಬೇರು ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಚಳಿಜ್ವರ ಗುಣವಾಗುವದು.

೨. ನೆಲಗುಳ್ಳ, ಚಿತ್ರಮೂಲ, ಚಿಟ್ಟೆಹರಳು, ಚಿಟ್ಟಾಮುಟ್ಟಿ, ಶುಂಠಿ, ಬಿಳೀಕೊಮ್ಮೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಹಿಪ್ಪಲಿಚೂರ್ಣ ಬೆರಸಿ ಕುಡಿಯಲು ಛಳಿಜ್ವರ ಗುಣ ವಾಗುವದು.

೩. ಅಮೃತಬಳ್ಳಿ, ಚಿಟ್ಟೆರಳುಬೇರು, ಲಕ್ಕಿಲಿ, ಶುಂಠಿ, ಕೊತ್ತುಂಬರಿ ಬೀಜ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಛಳಿಕೂಡಿದಜ್ವರ ಗುಣವಾಗುವದು.

೪. ನೆಲಗುಳ್ಳ, ಅಮೃತಬಳ್ಳಿ, ಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಹಿಪ್ಪಲಿಚೂರ್ಣ ಬೆರಸಿ ಕುಡಿಯಲು ಕಾಸ, ಛಳಿ, ಜ್ವರ ಗುಣವಾಗುವದು.

## ಆಗಂತುಕಜ್ವರಕ್ಕೆ ಚಿಕಿತ್ಸೆ.

ನೆಲಗುಳ್ಳ, ಶುಂಠಿ, ಅಮೃತಬಳ್ಳಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಹಿಪ್ಪಲಿಚೂರ್ಣ ಬೆರಸಿ ಕುಡಿಯಲು ಜೀರ್ಣಜ್ವರ, ಅರುಚಿ, ಶ್ವಾಸ, ಕೆಮ್ಮು, ಶೂಲೆ, ಅಗ್ನಿಮಾಂದ್ಯ, ಅರ್ದಿತ ವಾತ, ಪೀನಸ ಇವುಗಳು ಗುಣವಾಗುವದು.

## ಶತ್ರುಜ್ವರಕ್ಕೆ ಚಿಕಿತ್ಸೆ.

ಶುಂಠಿ ೧ ತೊಲೆ, ಲವಂಗ ೧ ತೊಲೆ, ಜಾಕಾಯಿ ೧ ತೊಲೆ ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಜಟಾಮಾಂಸಿ ॥ ತೊಲೆ, ಕಾಡುಹಾಗಲು ಬೀಜ ॥ ತೊಲೆ, ಪರ್ಪಾಷ್ಟಕ ॥ ತೊಲೆ, ಚಂಗಲಕೋಷ್ಟ ॥ ತೊಲೆ, ಅತಿ ಮಧುರ ॥ ತೊಲೆ, ಮೆಣಸು ೧ ತೊಲೆ, ಒಳ್ಳೇಬೇವಿನಯಳೇಕಡ್ಡಿ ॥ ತೊಲೆ, ಹೇರಳೆಕಾಯಿಹೊಟ್ಟು ೧ ತೊಲೆ, ಬಿಲ್ವಪತ್ರೆಬೇರು ೧ ತೊಲೆ, ನಾಯಿತೊಳಸಿಕಡ್ಡಿ ೧ ತೊಲೆ, ವಿಷ್ಣುಕ್ರಾಂತಿ ॥ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಶತ್ರುಜ್ವರ, ವಿಷಜ್ವರ (ಕೈಮಸಗು) ಗುಣವಾಗುವದು.

## ದ್ವಂದ್ವಜ್ವರಕ್ಕೆ ಚಿಕಿತ್ಸೆ.

ಅಮೃತಬಳ್ಳಿ, ಶುಂಠಿ, ತುಂಗೇಗಡ್ಡೆ, ನೆಲಬೇವು, ಯುಲುವಸಂಧಿ, ಚಿಟ್ಟಾಮುಟ್ಟಿ, ಒಂದೆಲಿಹೊನ್ನೆ, ಅಳಲೇಕಾಯಿಸಿಪ್ಪೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ದ್ವಂದ್ವಜ್ವರ ಗುಣವಾಗುವದು.

## ದಾಹಜ್ವರಕ್ಕೆ ಚಿಕಿತ್ಸೆ.

ಲಾವಂಚ, ಪರ್ಪಾಟಕ, ಮುಡಿವಾಳ, ತುಂಗೇಗಡ್ಡೆ, ಶುಂಠಿ, ರಕ್ತಚಂದನ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ದಾಹಜ್ವರ ಗುಣವಾಗುವದು.

## ತಾಪಜ್ವರಕ್ಕೆ ಚಿಕಿತ್ಸೆಗಳು.

೧. ಟುಂಟುಕಾದಿ ಕಷಾಯ :—ದೊಡ್ಡಮರದಚಕ್ಕೆ, ಕಟುಕರೋಹಿಣಿ, ತುಂಗೇಗಡ್ಡೆ, ಕಹಿಪಡವಲ, ನೆಲಬೇವು, ಬೇವಿನಯಳೇಕಡ್ಡಿ, ಹುಣಿಸೇಯಳೇಕಡ್ಡಿ, ಹಿಪ್ಪಲಿ, ಬಿಳೇಜೀರಿಗೆ, ಕೊತ್ತುಂಬರಿಬೀಜ, ಯಾಲಕ್ಕಿ, ಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಜ್ವರ, ದಾಹ, ತಾಪ ಇವು ಗುಣವಾಗುವದು.

೨. ಕೊನ್ನಾರಿಗಡ್ಡೆ, ಪರ್ಪಾಟಕ, ಲಾವಂಚ, ರಕ್ತಚಂದನ, ಸೊಗದೇಬೇರು, ಶುಂಠಿ, ಮುಡಿವಾಳ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಜೇನುತುಪ್ಪ ಬೆರಸಿ ಕುಡಿಯಲು ತಾಪಜ್ವರ ಗುಣವಾಗುವದು.

೩. ಅಮೃತಬಳ್ಳಿ, ತುಂಗೇಗಡ್ಡೆ, ಮುಡಿವಾಳ, ತುರಚನಬೇರು, ಲಾವಂಚ, ಶುಂಠಿ, ಅಗುಳುಶುಂಠಿ, ನೆಲಬೇವು, ಕೊತ್ತುಂಬರಿಬೀಜ, ಪರ್ಪಾಟಕ ಇವು ಸಮಭಾಗತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ತಾಪಜ್ವರ ಗುಣವಾಗುವದು.

## ಪುರಾಣಜ್ವರಕ್ಕೆ ಚಿಕಿತ್ಸೆಗಳು.

೧. ದ್ರಾಕ್ಷೆ, ಅಮೃತಬಳ್ಳಿ, ಯಲುವಸಂಧಿ, ಸಹದೇವಿ, ಚಿಟ್ಟಾಮುಟ್ಟಿ ಬೇರು, ಹಿಪ್ಪಲಿ, ಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಪುರಾಣಜ್ವರ ಗುಣವಾಗುವದು.

೨ ಕಡ್ಡಿಅರಗು ೧ ತೊಲೆ, ಬಿಳೇಕೊಮ್ಮೇಬೇರು ೨ ತೊಲೆ, ವಿಷ್ಣುಕ್ರಾಂತಿ ೨ ತೊಲೆ, ಲವಂಗ ೫ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಪುರಾಣಜ್ವರ ಗುಣವಾಗುವದು.

## ಹಳೇಜ್ವರಗಳಿಗೆ ಚಿಕಿತ್ಸೆ.

೧. ನೆಲಬೇವು, ಒಂದೆಲಗದಸೊಪ್ಪು, ಹೊಮ್ಮುಗಳಿಸೊಪ್ಪು, ವಿಷ್ಣು ಕ್ರಾಂತಿ, ಪರ್ಪಾಟಕ, ಸಹದೇವಿ, ತೊಳಸಿಸೊಪ್ಪು, ನಾಯಿತೊಳಸಿಸೊಪ್ಪು, ಚಿಟ್ಟಾಮುಟ್ಟಿ, ಕೊತ್ತುಂಬರಿಬೀಜ, ಶುಂಠಿ, ಮೆಣಸು, ಇಂಗಳದಹಣ್ಣಿನಮೈಣ, ಒಳ್ಳೇಬೇವಿನಕಡ್ಡಿ, ಬಿಲ್ಪತ್ರಿಕಡ್ಡಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಜೇನುತುಪ್ಪ ಬೆರಸಿ ಕುಡಿಯಲು ಒಳಜ್ವರ, ಹಳೇಜ್ವರ ಗುಣವಾಗುವದು.

## ಕಾಸಜ್ವರಕ್ಕೆ ಚಿಕಿತ್ಸೆಗಳು.

೧. ವಾಸಾದಿ ಕಷಾಯ:—ಆಡುಸೋಗೆ, ನೆಲಗುಳ್ಳ, ಅಮೃತಬಳ್ಳಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಜೇನು ತುಪ್ಪ ಬೆರಸಿ ಕುಡಿಯಲು ಕಾಸಜ್ವರ ಗುಣವಾಗುವದು.

೨. ಕಟ್ಫಲಾದಿ ಕಷಾಯ:—ಕಾಯಿಫಲಚಕ್ಕೆ, ತುಂಗೇಗಡ್ಡೆ, ಗಂಟು ಭಾರಂಗಿ, ಕೊತ್ತುಂಬರಿಬೀಜ, ಕಾಮಾಕ್ಷಿಹುಲ್ಲು, ಪರ್ಪಾಟಕ, ಬಜೆ, ಅಳಲೇ ಕಾಯಿಸಿಪ್ಪೆ, ಕರ್ಕಾಟಕಶೃಂಗಿ, ತುಪ್ಪದದೇವದಾರು, ಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಕಾಸ ಜ್ವರ, ಶ್ವಾಸಜ್ವರ, ಶ್ಲೇಷ್ಮರೋಗ ಇವು ಗುಣವಾಗುವದು.

೩. ಅಭಯಾದಿ ಕಷಾಯ:—ಆಡುಸೋಗೆ, ರಾಮಗುಳ್ಳ, ಅಮೃತಬಳ್ಳಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಜೇನು ತುಪ್ಪ ಬೆರಸಿ ಕುಡಿಯಲು ಕಾಸಜ್ವರ ಗುಣವಾಗುವದು.

## ಖಾಸಶ್ವಾಸ ಶೀತವಾತಜ್ವರ ಚಿಕಿತ್ಸೆ.

೧. ಚಂಗಲಕೋಷ್ಟ, ಹಿಪ್ಪಲಿ, ಬಿಳೇಜೀರಿಗೆ, ಮೆಣಸು, ಸಣ್ಣರಾಶ್ಮೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಜೇನು ತುಪ್ಪ ಬೆರಸಿ ಕುಡಿಯಲು ಶೀತ, ಗೂರ್ಲುಬ್ಬಸ, ಗಸೇಕೆಮ್ಮಲುಳ್ಳ ಜ್ವರ ಗುಣವಾಗುವದು.

## ಅಜೀರ್ಣಜ್ವರಕ್ಕೆ ಚಿಕಿತ್ಸೆಗಳು.

೧. ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಶುಂಠಿ, ಮೆಣಸು, ಮೋಡಿ, ವೋಮ, ಬಜೆ, ಚಿತ್ರಮೂಲ, ಬಿಳೇವೃಪ್ಪಿಬೇರು ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಅಜೀರ್ಣ ಜ್ವರ ಗುಣವಾಗುವದು.

೨. ನಿದಿಗ್ಧಿಕಾದಿ ಕಷಾಯ:—ನೆಲಗುಳ್ಳ, ಅಮೃತಬಳ್ಳಿ, ಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಹಿಪ್ಪಲಿ ಚೂರ್ಣ ಬೆರಸಿ ಕುಡಿಯಲು ಅಜೀರ್ಣಜ್ವರ ಗುಣವಾಗುವದು.

೩. ಜೀರ್ಣಜ್ವರಕ್ಕೆ ಗುಡೂಚ್ಯಾದಿ ಕಷಾಯ :—ಅಮೃತಬಳ್ಳಿ ತಂದು ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಹಿಪ್ಪಲಿಚೂರ್ಣ ಬೆರಸಿ ಕುಡಿಯಲು ಜೀರ್ಣಜ್ವರ ಗುಣವಾಗುವದು.

## ಅಷ್ಟವಿಧ ಜ್ವರಗಳಿಗೆ ಚಿಕಿತ್ಸೆ.

೧. ಕ್ಷುದ್ರಾದಿ ಕಷಾಯ :—ನೆಲಗುಳ್ಳ, ನೆಲಬೇವು, ಕಟುಕರೋಹಿಣಿ, ಶುಂಠಿ, ಅಮೃತಬಳ್ಳಿ, ಚಂಗಲಕೋಷ್ಟ ಇವು ಸಮಭಾಗತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಅಷ್ಟವಿಧ ಜ್ವರಗಳು ಗುಣವಾಗುವದು.

## ತ್ವಗ್ಗತಜ್ವರಕ್ಕೆ ಚಿಕಿತ್ಸೆಗಳು.

೧. ಹಾವುಮೆಕ್ಕೇಬೇರು, ಸೊಗದೇಬೇರು, ಶುಂಠಿ, ಸಹದೇವಿ, ಅಮೃತಬಳ್ಳಿ, ಚಿಟ್ಟಾಮುಟ್ಟೆಬೇರು, ಮೆಣಸು ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ರಾತ್ರಿಹೊತ್ತು ಬರುವಜ್ವರ ಗುಣವಾಗುವದು.

೨. ವಿಷ್ಣುಕ್ರಾಂತಿ, ಚಿಟ್ಟಾಮುಟ್ಟೆ, ಪೇರಾಮುಟ್ಟೆ, ಅಮೃತಬಳ್ಳಿ, ಶುಂಠಿ, ಯಲುವಸಂಧಿ, ಕಟುಕರೋಹಿಣಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ರಾತ್ರಿಹೊತ್ತು ಬರುವಜ್ವರ ಗುಣವಾಗುವದು.

೩. ಕಟುಕರೋಹಿಣಿ, ಚಿಟ್ಟಾಮುಟ್ಟೆಬೇರು, ಪೇರಾಮುಟ್ಟೆಬೇರು, ಜುಟ್ಟುವೇಬೇರು, ಶುಂಠಿ, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಯಲುವಸಂಧಿ, ಅಮೃತಬಳ್ಳಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ತ್ವಗ್ಗತಜ್ವರ ಗುಣವಾಗುವದು.

## ರಕ್ತಗತಜ್ವರಕ್ಕೆ ಚಿಕಿತ್ಸೆ.

ತಾವರೆಗಡ್ಡೆ, ನೆಲಕೊಳವಳಿಕೆ, ಶುದ್ಧಿಮಾಡಿದ ಅಶ್ವಗಂಧಿ, ಚಿತ್ರಮೂಲ, ಚಿಟ್ಟಾಮುಟ್ಟೆಬೇರು ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ರಕ್ತಗತಜ್ವರ ಗುಣವಾಗುವದು.

## ನಾನಾಲಕ್ಷಣ ಮಿಶ್ರಜ್ವರಹರ ಚಿಕಿತ್ಸೆ.

ಶುಂಠಿ, ಹಿಪ್ಪಲಿ, ಮೆಣಸು, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ತಾಳೀಸಪತ್ರೆ, ಲವಂಗ, ಚವ್ಯ, ಮೋಡಿ, ಗಂಟುಭಾರಂಗಿ, ಅತಿಬಜೆ, ಅಗುಳುಶುಂಠಿ, ಸಣ್ಣರಾಸ್ಮೆ, ಅಕ್ಕಲಕರೆ, ಗುಳ್ಳದಬೇರು, ಕೊನ್ನಾರಿಗಡ್ಡೆ, ಆಡುಸೋಗೆಸೊಪ್ಪು, ತಾವರೇಗಡ್ಡೆ, ಲಾವಂಚ, ವಿಷ್ಣುಕ್ರಾಂತಿ, ನೆಲಬೇವು, ಬಿಳೀಜೀರಿಗೆ, ಕರೇಜೀರಿಗೆ, ಅಮೃತಬಳ್ಳಿ, ಪರ್ಪಾಷ್ಟಕ, ಕೊತ್ತುಂಬರಿಬೀಜ,

ದ್ರಾಕ್ಷಿ, ಇಂಗಳದ ಹಣ್ಣಿನವ್ಯೈಣ, ಖರ್ಜೂರ, ಕಕ್ಕೇಕಾಯಿ ಬಂಕೆ, ಆಲದ ಹಣ್ಣಿಯಲಿ, ಕಿರುನೆಲ್ಲಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸಕ್ಕರೆ ಬೆರಸಿ ಕುಡಿಯಲು ಮಿಶ್ರವಾದಜ್ವರ ಗುಣವಾಗುವದು.

## ಸರ್ವಜ್ವರಕ್ಕೆ ಚಿಕಿತ್ಸೆಗಳು.

೧. ಗುಡೂಚ್ಯಾದಿ ಕಷಾಯ:—ಅಮೃತಬಳ್ಳಿ, ಕೊತ್ತುಂಬರಿಬೀಜ, ಬೇವಿನ ಚಕ್ಕೆ, ಪದ್ಮಕ, ರಕ್ತಚಂದನ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಮಂದಾಗ್ನಿ, ತಾಪ, ಬಾಯಿಯಲ್ಲಿ ನೀರು ಊರುವದು, ದಾಹ, ವಾಂತಿ, ಅರುಚಿ, ಸರ್ವಜ್ವರಗಳು ಗುಣವಾಗುವದು.

೨. ನಾಗರಾದಿ ಕಷಾಯ:—ಶುಂಠಿ, ತುಪ್ಪದದೇವದಾರು, ಕೊತ್ತುಂಬರಿ ಬೀಜ, ನೆಲಗುಳ್ಳ, ಹೆಗ್ಗುಳ್ಳ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಸರ್ವಜ್ವರಗಳು ಗುಣವಾಗುವದು.

೩. ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಚಿಟ್ಟಾ ಮುಟ್ಟಿ, ಪೇರಾಮುಟ್ಟಿ, ತುಂಗೇಗಡ್ಡೆ, ಒಂದೆಲೆಹೊನ್ನೆ, ಕಟುಕರೋಹಿಣಿ, ಯಲುವಸಂಧಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಯಾವ ವಿಧವಾದ ಜ್ವರವಾದರು ಗುಣವಾಗುವದು.

೪. ನೆಲಬೇವು, ಚಿತ್ರಮೂಲ, ಚವ್ಯ, ಮುಳ್ಳುಕೊಗ್ಗಿ, ಅಮೃತಬಳ್ಳಿ, ವಿಷ್ಣುಕ್ರಾಂತಿ, ಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಸಮಸ್ತ ವಿಧ ಜ್ವರಗಳು ಗುಣವಾಗುವದು.

೫. ಚಿಟ್ಟಾಮುಟ್ಟಿಬೇರು, ಬೇವಿನಯಳೇಕಡ್ಡಿ, ನೆಲಬೇವು, ಒಂದೆಲೆ ಹೊನ್ನೆ, ಅಮೃತಬಳ್ಳಿ, ನೆಲಗುಳ್ಳ, ಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಸಮಸ್ತವಿಧ ಜ್ವರಗಳು ಗುಣವಾಗುವದು.

೬. ತುಂಗೇಗಡ್ಡೆ, ಪರ್ಪಾಷ್ಟಕ, ಚಿಟ್ಟರಳುಬೇರು, ಸೂರತಿಬೆಳಗಾರ ಅರಳುಮಾಡಿದ್ದು, ಉಪ್ಪಿಬೇರು, ಚಿತ್ರಮೂಲ, ಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಸಮಸ್ತ ಜ್ವರ ಗಳು ಗುಣವಾಗುವದು.

೭. ಕಕ್ಕೇಬಂಕೆ, ಶುಂಠಿ, ತುರಚನಬೇರು, ಆಡುಸೋಗೆಯಳೇಕಡ್ಡಿ, ಕಹಿಪಡವಲ, ಕೊತ್ತುಂಬರಿಬೀಜ, ತುಂಗೇಗಡ್ಡೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಸಮಸ್ತ ಜ್ವರ ಗಳು ಗುಣವಾಗುವವು.

೮. ತಾಳೀಸಪತ್ರೆ, ಶುಂಠಿ, ಅಗುಳುಶುಂಠಿ, ಲವಂಗ, ಹಿಪ್ಪಲಿ, ಮೆಣಸು, ಅರಸಿನ, ರಾಮುಗುಳ್ಳದಬೇರು, ಸೂರ್ಯಕಾಂತಿ, ಒಳ್ಳೇಬೇವಿನ ಎಳೇಕಡ್ಡಿ, ನೆಲ್ಲೀ ಕಾಯಿ ಎಳೇಕಡ್ಡಿ, ಕರಬೇವಿನಸೊಪ್ಪಿನ ಎಳೇಕಡ್ಡಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಸರ್ವಜ್ವರಗಳು ಗುಣ ವಾಗುವವು.

೯. ದುಂಪರಾಸ್ಮೆ, ಗಂಟುಭಾರಂಗಿ, ಕಹಿಪಡವಲ, ನೆಲಬೇವು, ಶುದ್ಧಿ ಮಾಡಿದ ವಿಷಬೊದ್ದಿ, ಲವಂಗ, ತಾಳೀಸಪತ್ರೆ, ಬಿಳೇಜೀರಿಗೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಸಕಲ ಜ್ವರಗಳು ಗುಣವಾಗುವವು.

೧೦. ಚಿರಾಯಿತ ೧ ತೊಲೆ, ನೆಲಬೇವು ೧ ತೊಲೆ, ಕಹಿಪಡವಲ ೧ ತೊಲೆ, ಪರ್ಪಾಟಕ ೧ ತೊಲೆ, ಶುಂಠಿ ॥ ತೊಲೆ, ಮೆಣಸು ೧ ತೊಲೆ, ಅತಿಮಧುರ ॥ ತೊಲೆ, ನೆಲ್ಲೀಕಾಯಿ ೧ ತೊಲೆ, ಬಿಳೇಜೀರಿಗೆ ೧ ತೊಲೆ ಇವುಗಳನ್ನು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಸಮಸ್ತ ಜ್ವರಗಳು ಗುಣವಾಗುವವು.

೧೧. ಶುಂಠಿ, ಮೆಣಸು, ಹಿಪ್ಪಲಿ, ಚವ್ಯ, ಯಲುವಸಂಧಿಸೊಪ್ಪು, ತಾಳೀಸ ಪತ್ರೆ, ಮೋಡಿ, ದುಂಪರಾಸ್ಮೆ, ಸಣ್ಣರಾಸ್ಮೆ, ಅಂಕೋಲೆಬೇರು, ಲವಂಗ, ಆಡುಸೋಗೆಸೊಪ್ಪು, ಅಮೃತಬಳ್ಳಿ, ಕಾಡುಕರೇ ಅಳಲೇಕಾಯಿ, ಸುನಾಮುಖಿ, ನಸುಗುನ್ನಿಬೇರು, ಭದ್ರಮುಸ್ತೆ, ಕೊತ್ತುಂಬರಿಬೀಜ, ಬಿಲ್ಪತ್ರೆಬೇರು, ಒಳ್ಳೇ ಬೇವಿನಕಡ್ಡಿ ಇವು ಜಿನಸು ೧ಕ್ಕೆ ಅರ್ಧ ತೊಲೆ ತಂದು ಕುಟ್ಟಿ ಚೂರ್ಣಮಾಡಿ ೬ ಪಟ್ಣಗಳು ಕಟ್ಟಿ ಒಂದು ಪಟ್ಣ ತೆಗೆದುಕೊಂಡು ನೀರುಹಾಕಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಜೇನುತುಪ್ಪ ಅರ್ಧ ತೊಲೆ ಬೆರಸಿ ಕುಡಿಯುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೩ ದಿನ ಕೊಟ್ಟರೆ ಸಮಸ್ತ ಜ್ವರಗಳು ಗುಣವಾಗುವವು.

೧೨. ಗಂಟುಭಾರಂಗಿ, ಅಮೃತಬಳ್ಳಿ, ತುಪ್ಪದದೇವದಾರು, ಶುಂಠಿ, ಆಡು ಸೋಗೆಸೊಪ್ಪು, ಹಿಪ್ಪಲಿ, ತಾವರೆಗಡ್ಡೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವ ಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಜ್ವರಹರ, ವಾತಹರ, ಜೀರ್ಣ ಕಾರಿ, ರುಚಿಹುಟ್ಟಿಸುವುದು.

## ಜ್ವರಾತಿಸಾರಕ್ಕೆ ಚಿಕಿತ್ಸೆಗಳು.

೧. ಗುಡೂಚ್ಯಾದಿ ಕಷಾಯ:— ಅಮೃತಬಳ್ಳಿ, ಕೊತ್ತುಂಬರಿಬೀಜ, ಲಾವಂಚ, ಶೊಂಠಿ, ಮುಡಿವಾಳ, ಪರ್ಪಾಟಕ, ಬಿಲ್ಪತ್ರೆಬೇರು, ಅತಿಬಜೆ, ಶುದ್ಧಿಮಾಡಿದ ವಿಷಬೊದ್ದಿ, ರಕ್ತಚಂದನ, ಕೊಡಸಿಗೆಬೀಜ, ನೆಲಬೇವು, ತುಂಗೇ

ಗಡ್ಡೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸಕ್ಕರೆ, ಜೇನುತುಪ್ಪ ಬೆರಸಿ ಕುಡಿಯಲು ರಕ್ತಪಿತ್ತ, ಜ್ವರಾತಿಸಾರ ಇವು ಗುಣ ವಾಗುವದು.

೨ ಶುಂಠಿ, ಅತಿಬಜೆ, ತುಂಗೇಗಡ್ಡೆ, ಹಿಪ್ಪಲಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಜ್ವರಾತಿಸಾರ ಗುಣವಾಗುವದು.

೩. ನಾಗರಾದಿ ಕಷಾಯ :—ಶುಂಠಿ, ಕೊಡಸಿಗೇಬೀಜ, ತುಂಗೇಗಡ್ಡೆ, ಅಮೃತಬಳ್ಳಿ, ಅತಿಬಜೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯಲು ಜ್ವರಾತಿಸಾರ ಗುಣವಾಗುವದು.

೪. ದೊಡ್ಡಮರದಚಕ್ಕೆ, ಅತಿಬಜೆ, ಕೊನ್ನಾರಿಗಡ್ಡೆ, ಶುಂಠಿ, ಬಿಲ್ಪತ್ರೆ ಹಣ್ಣು, ದಾಳಿಂಬರೆ ಹೀಚು ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಜೇನುತುಪ್ಪ ಬೆರಸಿ ಕೊಡಲು ಜ್ವರಾತಿಸಾರ ಗುಣ ವಾಗುವದು.

೫ ಜ್ವರಾತಿಸಾರಕ್ಕೆ ನಾಗರಾದಿ ಕಷಾಯ :—ಶುಂಠಿ, ಕೊಡಸಿಗೆಬೀಜ, ತುಂಗೇಗಡ್ಡೆ, ಅಮೃತಬಳ್ಳಿ, ಶುದ್ಧಿಮಾಡಿದ ಅತಿಬಜೆ ಇವುಗಳನ್ನು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಕುಡಿಯು ವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ಜ್ವರಾತಿಸಾರ ಗುಣವಾಗುವ ವರಿವಿಗು ಕೊಡುವದು.

೬ ಮಾವಿನ ಬೀಜ, ದಾಳಿಂಬರೆ ಮೊಗ್ಗು, ಬಿಲ್ಪತ್ರೆ ಬೇರು, ಕೊಡಸಿಗೆ ಬೀಜ, ದೊಡ್ಡಮರದಚಕ್ಕೆ, ಅಮೃತಬಳ್ಳಿ, ಶುದ್ಧಿಮಾಡಿದ ಅತಿಬಜೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಕುಡಿಯುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ಜ್ವರಾತಿಸಾರ ಗುಣ ವಾಗುವವರಿವಿಗು ಕೊಡುವದು.

೭. ದಾಳಿಂಬರೆಚಕ್ಕೆ, ಜಾಪತ್ರೆ, ಶುದ್ಧಿಮಾಡಿದ ಅತಿಬಜೆ, ಕೊಡಸಿಗೆ ಬೀಜ, ತಂಗಡಿಹುವ್ವು, ಅಮೃತಬಳ್ಳಿ, ಶೊಂಠಿ, ತುಂಗೇಗಡ್ಡೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಕುಡಿಯು ವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ಜ್ವರಾತಿಸಾರ ಗುಣವಾಗುವ ವರಿವಿಗು ಕೊಡುವದು. ಇದಕ್ಕೆ ಪತ್ಯ ರವೇಗಂಜಿ ಸಕ್ಕರೆಹಾಕಿ ಕಾಯಿಸಿ ಆರಿದನಂತರ ಹಸುವಿನ ಹಾಲುಹಾಕಿ ಕೊಡುವದು.

---

## ಸನ್ನಿಪಾತಕಗಳ ಲಕ್ಷಣ ಮತ್ತು ಚಿಕಿತ್ಸೆಗಳು.

೧. ಸಂಧಿಕ ಸನ್ನಿಲಕ್ಷಣ:—ಇದರ ಪೂರ್ವರೂಪದಲ್ಲಿ ಶೂಲೆ, ಶೋಷ, ವಾತವಿಶೇಷದಿಂದ ಉಂಟಾದ ನೋವು, ಶ್ಲೇಷ್ಮವು ಹೆಚ್ಚುವದು, ಸಂತಾಪ, ಬಲಹೀನತ್ವ, ಜಾಗರಣ ಈ ಲಕ್ಷಣಗಳು ಉಂಟಾಗುತ್ತವೆ ಇದಕ್ಕೆ ಅವಧಿ ೭ ದಿವಸಗಳು.

ಇದಕ್ಕೆ ಚಿಕಿತ್ಸೆ:—ಅಮೃತಬಳ್ಳಿ, ಚಿಟ್ಟರಳುಬೇರು, ಶುಂಠಿ, ದೇವದಾರು, ರಾಶ್ಮೆ, ಅಳಲೇಕಾಯಿಸಿಪ್ಪೆ ಇವುಗಳ ಕಷಾಯವಂ ಕಾಯಿಸಿ ಕೊಡಿಸಲು ಸಕಲ ವಾತರೋಗಗಳೂ ಸಂಧಿಕಸನ್ನಿಪಾತಗಳೂ ಶಮನವಾಗುವುದು.

೨. ತಾಂದ್ರಿಕ ಸನ್ನಿಲಕ್ಷಣ:—ಶೂಲೆ, ಜ್ವರ, ಕಫ, ಕೆಮ್ಮು, ನೀರಡಿಕೆ, ನಾಲಿಗೆದಪ್ಪ, ಕಪ್ಪು, ಮುಳ್ಳು, ಕರಿಣ, ಅರುಚಿ, ಅತಿಸಾರ, ಶ್ವಾಸ, ಬಳಲಿಕೆ, ತಾಪ, ಕರ್ಣಶೂಲೆ, ಗಂಟಲುಭಾರ, ನವೆ, ಹಗಲು ರಾತ್ರಿ ಸಹ ನಿದ್ರೆಯಲ್ಲಿರುವಿಕೆ ಈ ಲಕ್ಷಣಗಳು ಉಂಟಾಗುತ್ತವೆ. ಇದಕ್ಕೆ ಅವಧಿ ೨೫ ದಿವಸಗಳು. ಇದು ಕಷ್ಟಸಾಧ್ಯ.

ಇದಕ್ಕೆ ಚಿಕಿತ್ಸೆ:—ಅಮೃತಬಳ್ಳಿ, ತ್ರಿಕಟುಕ, ಕಹಿಪಡವಲ ಇವುಗಳನ್ನು ಪ್ರತ್ಯೇಕ ಆರುವರಹಾತೂಕ ಒಂದು ಬಳ್ಳ ನೀರಿನಲ್ಲಿ ಕಷಾಯ ಅಷ್ಟಾವಶೇಷವಾಗಿ ಕಾಯಿಸಿ ಪ್ರಾತಃಕಾಲದಲ್ಲಿ ಕೊಡಿಸಲು ತಾಂದ್ರಿಕಸನ್ನಿಪಾತ ಶಮನವಹುದು.

೩. ಪ್ರಲಾಪ ಸನ್ನಿಲಕ್ಷಣ:—ಕಂಪ, ಅತಿಮಾತು, ಸಂತಾಪ, ತಲೆನೋವು, ಪ್ರೌಢಮಾತು, ನಿರ್ಮಲತ್ವ, ಅನ್ಯರಚಿಂತೆ, ಬುದ್ಧಿಹೀನತ್ವ, ಕಳವಳ, ಪ್ರಲಾಪ, ನಡುಕ, ಮೈನೋವು, ಕಾಲುಗಳೆರಡೂ ಉಷ್ಣವಾಗಿರೋಣ, ಮೈಯುರಿ ಈ ಲಕ್ಷಣಗಳು ಉಂಟಾಗುತ್ತವೆ. ಇದಕ್ಕೆ ಅವಧಿ ೧೪ ದಿವಸಗಳು. ಇದು ಕಷ್ಟಸಾಧ್ಯ.

ಇದಕ್ಕೆ ಚಿಕಿತ್ಸೆ:—ಕೊನ್ನಾರಿಗಡ್ಡೆ, ದಶಮೂಲ, ಮುಡಿವಾಳ, ಶ್ರೀಗಂಧ, ಕಿರಿಕಸಾಲೆ, ಪರ್ಪಾಷ್ಟಕ, ಆಡುಸೋಗೆ ಇವಷ್ಟನ್ನೂ ಸಮಾಂಶವಾಗಿ ಹಾಕಿ ಕಷಾಯವಂ ಮಾಡಿ ಕೊಡಿಸಲು ಪ್ರಲಾಪಸನ್ನಿ ಶಮನವಹುದು.

೪. ಚಿತ್ತವಿಭ್ರಮ ಸನ್ನಿಲಕ್ಷಣ:—ಶರೀರಪೀಡೆ, ಭ್ರಮೆ, ಸಂತಾಪ, ಮೋಹ, ಬುದ್ಧಿಚಂಚಲ, ಕಣ್ಣುಚಂಚಲ, ನಗುವದು, ಕುಣಿಯುವದು, ಗಾನ ಮಾಡುವದು, ಪ್ರಲಾಪ ಈ ಲಕ್ಷಣಗಳು ಉಂಟಾಗುತ್ತವೆ. ಇದಕ್ಕೆ ಅವಧಿ ೨೧ ದಿವಸಗಳು. ಇದು ಕಷ್ಟಸಾಧ್ಯ.

ಇದಕ್ಕೆ ಚಿಕಿತ್ಸೆ:—ಅಳಲೇಕಾಯಿಸಿಪ್ಪೆ, ಪರ್ಪಾಷ್ಟಕ, ಕಟುಕರೋಹಿಣಿ, ದ್ರಾಕ್ಷೆ, ತುಪ್ಪದದೇವದಾರು, ಕೊನ್ನಾರಿಗಡ್ಡೆ, ನೆಲಬೇವು, ಕಕ್ಕೇಚಕ್ಕೆ, ಕಹಿ

ಪಡೆವಲ, ತಾರೇಕಾಯಿಸಿಪ್ಪೆ ಇವುಗಳಲ್ಲಿ ಎರಡೆರಡು ವರಹಾತೂಕವಂ ಎರಡು ಮಾನ ನೀರಿನಲ್ಲಿ ಕಷಾಯವೆತ್ತಿ ಚತುರ್ಭಾಗಾವಶೇಷವಾಗಿ ಕಾಯಿಸಿ ಕೊಡಿಸಲು ಚಿತ್ತವಿಭ್ರಮುಸನ್ನಿಪಾತವು ಶಮನವಹುದು.

೫. ಜಿಹ್ವಕ ಸನ್ನಿಲಕ್ಷಣ:—ಕೆಮ್ಮು, ಶ್ವಾಸ, ಸಂತಾಪ, ನಾಲಿಗೆ ಕಠಿನತ್ವ, ಮುಳ್ಳು ಇರುವದು, ಕಿವಡು, ಮೂಕತ್ವ, ಬಲಹೀನತ್ವ, ಮಲಮೂತ್ರಗಳು ಹೇರಳವಾಗಿ ಬಿಡೋಣ, ಶ್ಲೇಷ್ಮ ಹೆಚ್ಚಿ ವಾತಪಿತ್ತಂಗಳ ಮಾಂದ್ಯವುಳ್ಳದ್ದು ಜಿಹ್ವಕ ಸನ್ನಿಪಾತಲಕ್ಷಣ. ಇದಕ್ಕೆ ಅವಧಿ ೧೬ ದಿವಸಗಳು ಇದು ಕಷ್ಟಸಾಧ್ಯ.

ಇದಕ್ಕೆ ಚಿಕಿತ್ಸೆ:—ದೇವದಾರು, ಕರ್ಪೂರಶುಂಠಿ, ಬೇವಿನ ಒಳನಾರು, ಚಿಟ್ಟೆರಳುಬೇರು, ಅಳಲೇಕಾಯಿಸಿಪ್ಪೆ, ಕಹಿಪಡೆವಲ, ಅರಸಿನ, ಮರದರಿಸಿನ, ನೆಲಗುಳ್ಳದಬೇರು, ಚಂಗಲಕೋಷ್ಟ ಕೊನ್ನಾರಿಗಡ್ಡೆ, ಅಮೃತಬಳ್ಳಿ ಇವಿಷ್ಟನ್ನೂ ಸಮಾಂಶವಾಗಿ ಹಾಕಿ ಪಕ್ವವಾಗಿ ಕಷಾಯವಂ ಕಾಯಿಸಿ ಕೊಡಿಸಲು ಜಿಹ್ವಕ ಸನ್ನಿಪಾತ ಶಮನವಹುದು.

೬. ಕರ್ಣಿಕ ಸನ್ನಿಲಕ್ಷಣ :—ಪ್ರಲಾಪ, ಕಿವುಡು, ಕಂಠಗ್ರಹ, ಮೈನೋವು, ಶ್ವಾಸ, ಕೆಮ್ಮು ಲಾಲಾ, ಜ್ವರ, ಕಿವಿ, ಗಲ್ಲ ಇವುಗಳಲ್ಲಿ ನೋವು, ಕರ್ಣಮೂಲದಲ್ಲಿ ಬಾವು, ಕಿವಿಗಳ ಕೆಳಗೆ ಗ್ರಂಥಿ ಹುಟ್ಟುವದು, ಕೊರಳು ಕಟ್ಟಿಕೊಳ್ಳೋಣ, ದೇಹ ಸ್ವಲ್ಪ ಬಿಗಿಯಾಗಿರೋಣ, ನಡುಕ, ಎದೇನೋವು, ಕಾಸ ಈ ಲಕ್ಷಣಗಳು ಉಂಟಾಗುತ್ತವೆ. ಈ ಕರ್ಣಮೂಲದ ಬಾವುಜ್ವರ ಆದಿಯಲ್ಲಿ ಬಂದರೆ ಕಷ್ಟಸಾಧ್ಯ, ಮಧ್ಯದಲ್ಲಿ ಬಂದರೆ ಸಾಧ್ಯ, ಅಂತ್ಯದಲ್ಲಿ ಬಂದರೆ ಸುಖಸಾಧ್ಯವು. ಇದಕ್ಕೆ ಅವಧಿ ೯೦ ದಿವಸಗಳು.

ಇದಕ್ಕೆ ಚಿಕಿತ್ಸೆ:—ಮೆಣಸು, ದಶಮೂಲ, ಕಟುಕರೋಹಿಣಿ, ತ್ರಿಫಲೆ, ಶುಂಠಿ, ಹಿಪ್ಪಲಿ, ಚಿತ್ರಮೂಲ, ನೆಲಬೇವು ಇವೆಲ್ಲವೂ ಹಾಕಿ ಕಷಾಯವಂ ಕಾಯಿಸಿಕೊಡಲು ಕರ್ಣಿಕ ಸನ್ನಿಪಾತ ಶಮನವಹುದು.

೭. ರುಗ್ದಾಹ ಸನ್ನಿಲಕ್ಷಣ :—ಪ್ರಲಾಪ, ಸಂತಾಪ, ಮೋಹ, ಮಂದತ್ವ, ಅನಾಯಾಸಶ್ರಮ, ಭ್ರಮಣೆ; ಕಂಠ, ತಲೆ, ಚುಬುಕ ಇವುಗಳಲ್ಲಿ ನೋವು, ನಿರಂತರದಾಹ, ಶ್ವಾಸ, ಕಾಸ, ಬಿಕ್ಕು, ಮೈನೋವು, ಮೈಯುರಿತ, ಅಜ್ಞಾನ, ಮೈಭಾರ, ಮಲವೆಗ್ಗಳವಾಗಿ ಬಿಡೋಣ ಅಥವಾ ಮಲಬದ್ಧ ಈ ಲಕ್ಷಣಗಳು ಉಂಟಾಗುತ್ತವೆ. ಇದಕ್ಕೆ ಅವಧಿ ೨೦ ದಿವಸಗಳು. ಇದು ಕಷ್ಟಸಾಧ್ಯ.

ಇದಕ್ಕೆ ಚಿಕಿತ್ಸೆ:—ಒಂದೆಲೆಹೊನ್ನೆ, ದ್ರಾಕ್ಷೆಹಣ್ಣು, ಕೊನ್ನಾರಿಗಡ್ಡೆ, ಬಜೆ, ಆಷಾಢಿ, ಕಕ್ಕೇತ್ವಕ್ಕು, ಕಟುಕರೋಹಿಣಿ, ಅಳಲೇಕಾಯಿಸಿಪ್ಪೆ, ನೆಲ್ಲಿಚಟ್ಟು, ತಾರೇಕಾಯಿಸಿಪ್ಪೆ, ಕಳ್ಳಂಗಡಲೆಬೇರು, ಬೇವಿನಒಳನಾರು, ಕಹಿಹೀರೇ

ಬೇರು, ನೆಲಬೇವು ಇವುಗಳ ಕಷಾಯವಂ ಕಾಯಿಸಿ ಕೊಡಿಸಲು ಸಕಲ ವಾತ ರುಗ್ದಾಹ ಸನ್ನಿಪಾತ ಶಮನವಹವು.

೮. ಅಂತಕ ಸನ್ನಿಲಕ್ಷಣ:—ನೀರಡಿಕೆ, ಸಂತಾಪ, ಮೋಹ, ತಲೆನಡುಗು, ಅಳುವಿಕೆ, ಬಿಕ್ಕು, ಕೆಮ್ಮು, ಮಂಡೆನೋವು, ಅಜ್ಞಾನ, ಸರ್ವಾಂಗವೂ ಕಂಪಿಸೋಣ, ಮೈಯುರಿತ, ಮಲಬದ್ಧ, ಕಾಸ, ಶ್ವಾಸ, ಅಗ್ನಿಮಾಂದ್ಯ ಈ ಲಕ್ಷಣಗಳು ಉಂಟಾಗುತ್ತವೆ. ಇದಕ್ಕೆ ಅವಧಿ ೧೦ ದಿವಸಗಳು. ಇದು ಕಷ್ಟಸಾಧ್ಯ.

ಇದಕ್ಕೆ ಚಿಕಿತ್ಸೆ:—ಚಿತ್ರಮೂಲ, ನೆಲಬೇವು, ಲಕ್ಕಲಿಸೊಪ್ಪು, ಚವ್ಯ, ಕಹಿಪಡವಲ, ಹಿಪ್ಪಲಿ, ಶುಂಠಿ, ಹಿಪ್ಪಲಿಮೂಲ, ಮೆಣಸು, ಸಾಸಿವೆ ಇವು ಸಮವಾಗಿ ಕಷಾಯವಂ ಕಾಯಿಸಿ ಕೊಡಿಸಲು ಅಂತಕಸನ್ನಿ ಶಮನವಹುದು.

೯. ಭಗ್ನನೇತ್ರ ಸನ್ನಿಲಕ್ಷಣ:—ಜ್ವರದಿಂದ ಬಲಕ್ಷಯ, ಸ್ಮೃತಿನಾಶ, ಶ್ವಾಸ, ವಕ್ರದೃಷ್ಟಿ, ಪ್ರಲಾಪ, ಭ್ರಮೆ, ಕಂಪ, ಶೋಭೆ, ವಾತಪ್ರಕೋಪ, ಕಿವಿಕೇಳದಿರೋಣ, ಕಣ್ಣು ಒಡೆದು ನೀರುಸುರಿಯೋಣ, ನಡುಕ, ಶೋಕ, ಮೊಳಕಾಲುಗಳು, ಪಾರ್ಶ್ವಗಳೂ ಮಂಡೆಯೂ ನೋಯೋಣ, ಸಂಧಿಗಳಲ್ಲಿ ವೇದನೆಯುಂಟಾಗಿರೋಣ, ಅತ್ಯಂತ ನಿದ್ರೆ ಈ ಲಕ್ಷಣಗಳು ಉಂಟಾಗುತ್ತವೆ. ಇದಕ್ಕೆ ಅವಧಿ ೮ ದಿವಸಗಳು. ಇದು ಸಾಧ್ಯವು.

ಇದಕ್ಕೆ ಚಿಕಿತ್ಸೆ:—ಮರದರಿಸಿನ, ಕೊನ್ನಾರಿಗಡ್ಡೆ, ಕಟುಕರೋಹಿಣಿ, ತ್ರಿಫಲೆ, ನೆಲಗುಳ್ಳದಬೇರು, ಕಹಿಪಡವಲ, ಅರಿಸಿನ, ಬೇವಿನಚಕ್ಕೆಯೊಳಗಿನ ನಾರು ಇವಷ್ಟನ್ನೂ ಪ್ರತ್ಯೇಕ ಎರಡು ವರಹತೂಕವಂ ಎರಡುಮಾನ ನೀರಿನಲ್ಲಿ ಚಾತುರ್ಭಾಗಾವಶೇಷವಾಗಿ ಕಷಾಯವಂ ಕಾಯಿಸಿ ಕೊಡಿಸಲು ಭಗ್ನನೇತ್ರ ಸನ್ನಿಶಮನವಹುದು.

೧೦. ಕಂಠಕುಬ್ಜ ಸನ್ನಿಲಕ್ಷಣ:—ತಲೆನೋವು, ಗಂಟಲುನೋವು, ದಾಹ, ಎಚ್ಚರಿಕೆತಪ್ಪೋಣ, ಕಂಪ, ಜ್ವರ, ರಕ್ತವಾತದಿಂದ ಪೀಡೆ, ಚುಬುಕಸ್ತಂಭ, ಸಂತಾಪ, ಪ್ರಲಾಪ, ಮೂರ್ಛೆ, ಮೈಯುರಿತ, ನಡುಕು, ಶೋಣಿತ ವಾತ ದಿಂದುಂಟಾದ ನೋವು, ದಾಡೆಗಳು ಕಟ್ಟಿಕೊಂಡಿರೋಣ, ಕಳವಳ, ಮೈಬಿಸಿ ವೆಗ್ಗಳವಾಗಿರುವಣ, ದೇಹದಲ್ಲಿ ಗುರುತ್ವ, ಎದ್ದೆದ್ದು ಬೀಳೋಣ, ಶ್ವಾಸ, ಮಂಡೆ ನೋವು, ಕಿವಿಗಳಲ್ಲಿ ಧ್ವನಿಯೂ ವೇದನೆಯೂ, ಕೊರಳಬಳಸಿ ಮುಳ್ಳುಗಳಂತೆ ಯೇಳೋಣ, ಈ ಲಕ್ಷಣಗಳು ಉಂಟಾಗುತ್ತವೆ. ಇದಕ್ಕೆ ಅವಧಿ ೧೩ ದಿವಸಗಳು. ಇದು ಅಸಾಧ್ಯವು.

ಇದಕ್ಕೆ ಚಿಕಿತ್ಸೆ:—ತ್ರಿಕಟುಕ, ಕಾಡಕವಡೆಬೇರು, ಕಟುಕರೋಹಿಣಿ, ಆಳಲೇಕಾಯಿಸಿಪ್ಪೆ, ಕೊನ್ನಾರಿಗಡ್ಡೆ, ತಾರೇಕಾಯಿಸಿಪ್ಪೆ, ನೆಲ್ಲಿಚಟ್ಟು ಇವುಗಳನ್ನು ಹಾಕಿ ಕಷಾಯವಂ ಕಾಯಿಸಿ ಕೊಡಿಸಲು ಕಂಠಕುಬ್ಜ ಸನ್ನಿಪಾತ ಶಮನವಹುದು.

೧೧. ರಕ್ತಷ್ಠೀವಿ ಸನ್ನಿಲಕ್ಷಣ:—ಉಗಿದರೆ ರಕ್ತಬೀಳುವದು, ಜ್ವರ, ಓಕರಿಕೆ, ವಾಂತಿ, ತೃಷ್ಣ, ಮೂರ್ಛೆ, ಶೂಲೆ, ಅತಿಸಾರ, ಬಿಕ್ಕು, ಹೊಟ್ಟೆಯುಬ್ಬರ, ಶಿರೋಭ್ರಮಣೆ, ತಾಪ, ಶ್ವಾಸ, ಜ್ಞಾನತಪ್ಪುವದು, ನಾಲಿಗೆ ಕಪ್ಪು ಅಥವಾ ಕೆಂಪು, ನಾಲಿಗೆಯಲ್ಲಿ ಮಂಡಲಾಕಾರವಾಗುವಿಕೆ, ಬಾಯಾರಿಕೆ, ಬಳಲಿಕೆ, ಮೂರ್ಛೆ, ಮೈಮೇಲೆ ಕಪ್ಪಾಗಿಯಾದರೂ ಕೆಂಪಾಗಿಯಾದರೂ ಬಟುವಾಗಿ ಗಂದೆಯೇಳುವದು ಈ ಲಕ್ಷಣಗಳು ಉಂಟಾಗುತ್ತವೆ. ಇದಕ್ಕೆ ಅವಧಿ ೧೦ ದಿವಸಗಳು. ಇದು ಕಷ್ಟಸಾಧ್ಯವು.

ಇದಕ್ಕೆ ಚಿಕಿತ್ಸೆ:—ಪರ್ಪಾಷ್ಟಕ, ಕಟುಕರೋಹಿಣಿ, ಗಂಡುತುರುಚಿ, ಆಡುಸೋಗೆ, ನೆಲಬೇವು, ಮುಡಿವಾಳ ಇವುಗಳ ಕಷಾಯವಂ ಕಾಯಿಸಿ ಸಕ್ಕರೆವೆರಸಿ ಕುಡಿಯಲು ರಕ್ತಷ್ಠೀವಿ ಸನ್ನಿಪಾತ ಶಮನವಹುದು.

೧೨. ಶೀತಾಂಗ ಸನ್ನಿಲಕ್ಷಣ:—ಶರೀರವು ತಣ್ಣಗೆ ಇರುವದು, ಕಂಪ, ಶ್ವಾಸ, ಬಿಕ್ಕು, ಅಂಗಶೈಥಿಲ್ಯ, ಸ್ವರಹೀನತ್ವ, ಅಂತರ್ದಾಹ, ಅನಾಯಾಸಶ್ರಮ, ಮನೋವ್ಯಥೆ, ಕೆಮ್ಮು, ವಾಂತಿ, ಅತಿಸಾರ, ಛರ್ದಿ ಈ ಲಕ್ಷಣಗಳು ಉಂಟಾಗುತ್ತವೆ. ಇದಕ್ಕೆ ಅವಧಿ ೧೫ ದಿವಸಗಳು. ಇದು ಕಷ್ಟಸಾಧ್ಯವು.

ಇದಕ್ಕೆ ಚಿಕಿತ್ಸೆ:—ಶುಂಠಿ, ಹಿಪ್ಪಲಿ, ಮೆಣಸು, ಚವ್ಯ, ಚಿತ್ರಮೂಲ, ಗಂಟುಭಾರಂಗಿ, ಗುಗ್ಗುಳ ಸಹ ಸಮಾನವಾಗಿ ಕಷಾಯವಿಟ್ಟು ಕೊಡಿಸಲು ಶೀತಾಂಗಸನ್ನಿ ಶಮನವಹುದು.

೧೩. ಅಭಿನ್ಯಾಸ ಸನ್ನಿಲಕ್ಷಣ:—ವಾತಪಿತ್ತ ಶ್ಲೇಷ್ಮಗಳೆಂಬ ದೋಷತ್ರಯಂಗಳು ಕೂಡಿ ಮುಖದಲ್ಲಿ ಎಣ್ಣೆಯು ತೊಡೆದಂತೆ ಮಿಂಚುವದು, ನಿದ್ರೆ, ಪ್ರಲಾಪ, ಕಳವಳ, ಮತ್ತಾಗಿ ಮಲಗಿರುವದು, ಬಹು ಶ್ರಮದಿಂದ ಯಾವಾಗ್ಯಾದರೂ ಮಾತನಾಡುವದು, ಬಲನಾಶ, ಶ್ವಾಸಾದಿಗಳ ಅವರೋಧವಿರುವದು ಈ ಲಕ್ಷಣಗಳು ಉಂಟಾಗುತ್ತವೆ. ಇದಕ್ಕೆ ಅವಧಿ ೧೫ ದಿವಸಗಳು. ಇದು ಕಷ್ಟಸಾಧ್ಯವು.

ಇದಕ್ಕೆ ಚಿಕಿತ್ಸೆ:—ಗಂಡುತುರುಚಿ, ಶುಂಠಿ, ಚಂಗಲಕೋಷ್ಟ, ದಶಮೂಲ ಇವಷ್ಟನ್ನೂ ಕಷಾಯವಂ ಕಾಯಿಸಿ ಶೋಧಿಸಿಕೊಂಡು ಅದರಲ್ಲಿ ಹಿಪ್ಪಲಿ, ಶುಂಠಿಗಳಂ ಚೂರ್ಣಿಸಿ ಹಾಕಿ ಕುಡಿಯಕೊಡಲು ಅಭಿನ್ಯಾಸ ಸನ್ನಿಪಾತ ಶಮನವಹುದು.

## ಇತರ ಸನ್ನಿಪಾತಕಗಳು.

೧. ವಿಷಮ ಸನ್ನಿಲಕ್ಷಣ:—ಜ್ವರತಾಪವು, ನಾಡಿ ಕುಟಿಲವಾಗಿ ವೇಗದೊಡನೆ ನಡಿಯೋಣ, ಅಂತರ್ದಾಹ, ಮದ, ಮೂರ್ಛೆ ಇವಷ್ಟು ವಿಷಮ ಸನ್ನಿಜ್ವರಲಕ್ಷಣ.

ಇದಕ್ಕೆ ಚಿಕಿತ್ಸೆ:—ಯಕ್ಕೆಹೂವಿನಮೊಗರು, ತುಂಬೆಹೂವು, ನುಗ್ಗೆಹೂವು, ಬಿಳೇಜೀರಿಗೆ, ಕೊತ್ತುಂಬರಿ, ಶುಂಠಿ, ಹಿಪ್ಪಲಿ, ಮೆಣಸು, ಬೆಳ್ಳುಳ್ಳಿ, ಕೊನ್ನಾರಿ ಗಡ್ಡೆ, ಕೋಷ್ಠ, ನೆಲಬೇವು, ರಾಶ್ಮೆ ಇವಷ್ಟನ್ನೂ ಸಮಾಂಶವಾಗಿ ಬಿಸಿನೀರಿನಿಂದರದು ಶೋಧಿಸಿ ಕೊಡಲು ವಿಷಮ ಸನ್ನಿಜ್ವರ ಪರಿಹರವಹುದು. ನುಗ್ಗೇಬೇರಿನ ಕಷಾಯದಿಂದಲಾದರೂ ಕೊಡಿಸುವುದು.

೨. ವಿಷಮಶೀತ ಸನ್ನಿಲಕ್ಷಣ:— ಒಂದು ದಿನದೊಳಗಾಗಿ ಎರಡು ಮೂರು ನಾಲ್ಕುವೇಳೆಯಾದರೂ ಕ್ಷಣಕ್ಕೆ ಛಳಿಯಾಗಿ ಕ್ಷಣಕ್ಕೆ ಬಿಸಿಯಾಗಿ ಜ್ವರ ಬರುವದು, ದಾಹ, ಮೂರ್ಛೆ, ಮಂಡೆನೋವು, ನಾಲಿಗೆ ಮುಳ್ಳುಮುಳ್ಳಾಗಿ ಕಠಿಣವಾಗಿರೋಣ ಈ ಲಕ್ಷಣಗಳು ವಿಷಮಶೀತವೆಂಬ ದೋಷಜ್ವರದಲ್ಲಿ ಉಂಟಾಗಿರುವದು.

ಇದಕ್ಕೆ ಚಿಕಿತ್ಸೆ:—ಕಿರುಗಡಿಸಿಗೆ, ಕಟುಕರೋಹಿಣಿ, ತ್ರಿಕಟುಕ, ಸಬ್ಬಸೀಗೆ, ನೆಲಬೇವು, ರಾಶ್ಮೆ, ಆಳಲೇಕಾಯಿಸಿಪ್ಪೆ, ಕೊತ್ತುಂಬರಿ, ಬೆಳ್ಳುಳ್ಳಿ, ಲವಂಗ, ಅರಿಸಿನ, ಚಂಗಲಕೋಷ್ಠ, ಬಿಳೀಜೀರಿಗೆ, ಕರೀಜೀರಿಗೆ, ಯಾಲಕ್ಕಿ, ವೋಮ, ನುಗ್ಗೇಬೇರು, ತುಲಸೀಚಿಗರು, ಲಕ್ಕೀಚಿಗರು, ಅಗಲುಶುಂಠಿ ಇವಷ್ಟನ್ನೂ ಸಮಾಂಶವಾಗಿ ತುಲಸೀಸೊಪ್ಪಿನ ರಸದಿಂದ ಅರದು ಕೊಡಲು ವಿಷಮಶೀತ ದೋಷ ಶಮನವಹುದು.

೩. ರಕ್ತಜಿಹ್ವಕ ಸನ್ನಿಲಕ್ಷಣ:—ನಾಲಿಗೆ ರಕ್ತವರ್ಣವಾಗಿರೋಣ, ಒಣಗಿ ಮುಳ್ಳುಮುಳ್ಳಾಗಿರೋಣ, ಜ್ವರ, ಬಾಯಾರಿಕೆ, ಮೈಯಲ್ಲಿ ಉರಿ ಈ ಲಕ್ಷಣಗಳೊಡನೆ ಕೂಡಿರುವದು ರಕ್ತಜಿಹ್ವಕ ಸನ್ನಿದೋಷವೆನ್ನಿಸಿಕೊಳ್ಳುವದು.

ಇದಕ್ಕೆ ಚಿಕಿತ್ಸೆ:—ಕಹಿಪಡವಲ, ಕಟುಕರೋಹಿಣಿ, ಕೊನ್ನಾರಿಗಡ್ಡೆ, ಇಪ್ಪೆಹೂವು, ಯಷ್ಟಿಮಧುಕ, ಹಿಪ್ಪಲಿ, ದ್ರಾಕ್ಷೆಹಣ್ಣು, ಲಾವಂಚ, ಖರ್ಜೂರ ಇವಷ್ಟನ್ನೂ ಸಮಾಂಶವಾಗಿ ಬಿಸಿನೀರಿನಿಂದರದು ಶರ್ಕರೆವೆರಸಿ ಕುಡಿಯಕೊಡಲು ರಕ್ತಜಿಹ್ವಕ ಸನ್ನಿದೋಷ ಶಮನವಹುದು.

೪. ಪಿತ್ತಜಿಹ್ವಕ ಸನ್ನಿಲಕ್ಷಣ:—ನಾಲಿಗೆ ಒಣಗಿ ಮುಳ್ಳಾಗಿ ಅರಸಿನ ವರ್ಣವಾಗಿ ಬೊಕ್ಕೆಗಳೊಡನೆಯಿರೋಣ, ಜ್ವರ, ಭ್ರಮೆ, ಮದ, ಮೂರ್ಛೆ ಇವಷ್ಟೂ ಪಿತ್ತಜಿಹ್ವಕವೆಂಬ ದೋಷಜ್ವರದಲ್ಲುಂಟಾಗಿರುವದು.

ಮೇಲ್ಕಂಡ ರಕ್ತಜಿಹ್ವಕಸನ್ನಿಗೆ ಹೇಳಿದ ಚಿಕಿತ್ಸೆಯನ್ನು ಮಾಡಿದರೆ ಪಿತ್ತಜಿಹ್ವಕ ಸನ್ನಿದೋಷ ಶಮನವಾಗುವದು.

೫. ಕೃಷ್ಣಜಿಹ್ವಕ ಸನ್ನಿಲಕ್ಷಣ:—ನಾಲಿಗೆ ಕಪ್ಪಾಗಿ ಬಿರುಸಾಗಿ ಮುಳ್ಳುಗಳುಂಟಾಗಿರೋಣ, ಜ್ವರ, ಭ್ರಮೆ, ಶ್ವಾಸ, ಮೈತಿಮಿರ, ಮದ, ಬಾಯಾರಿಕೆ ಇವಿಷ್ಟೂ ಕೃಷ್ಣಜಿಹ್ವಕಯೆಂಬ ದೋಷಜ್ವರದಲ್ಲುಂಟಾಗುವದು.

ಇದಕ್ಕೆ ಚಿಕಿತ್ಸೆ :—ನೆಲಗುಳ್ಳದಬೇರು, ಶುಂಠಿ, ಅಮೃತಬಳ್ಳಿ ಇವು ಮೂರನ್ನೂ ಕಷಾಯವಂ ಕಾಯಿಸಿ ಹಿಪ್ಪಲಿಚೂರ್ಣ ಪ್ರತಿಪಾಕವಿಟ್ಟು ಕೊಡಲು ಕೃಷ್ಣಜಿಹ್ವಕ ಸನ್ನಿಪಾತ, ಶ್ಲೇಷ್ಮಜ್ವರ ಶಮನವಹುದು.

೬. ವಾತಸನ್ನಿ ಲಕ್ಷಣ :—ಶಿರಸ್ಸು, ಎದೆ, ಪಾರ್ಶ್ವ, ಬೆನ್ನು, ಕೊರಳು, ನಾಲಿಗೆ, ತುಟಿ ಇವುಗಳಲ್ಲಿ ತೀವ್ರವೇದನೆಯುಂಟಾಗಿರೋಣ, ತೀವ್ರವಾದ ಜ್ವರವೂ ನಾಡಿಯೂ ಉಳ್ಳದ್ದಾಗಿರೋಣ, ಈ ಲಕ್ಷಣಗಳುಳ್ಳದ್ದನ್ನು ವಾತಸನ್ನಿದೋಷ ವೆಂದು ತಿಳಿಯುವದು.

ಇದಕ್ಕೆ ಚಿಕಿತ್ಸೆ:—ತುಪ್ಪದದೇವದಾರು, ಗ್ರಂಥಿಕತಗರ, ಚಂಗಲಕೋಷ್ಟ, ಯಷ್ಟಿಮಧುಕ, ಶ್ರೀಗಂಧ, ರಕ್ತಚಂದನ ಇವು ಸಮಭಾಗ ಮೊಲೆಹಾಲಿನಿಂದರೆದು ಕುಡಿಸಲು ವಾತಸನ್ನಿ ಶಮನವಾಗುವುದು.

೭. ಪಿತ್ತಸನ್ನಿ ಲಕ್ಷಣ :—ಅಂತರ್ದಾಹ, ಭ್ರಮೆ, ಮದ, ಪ್ರಲಾಪ, ಚಿತ್ತ ವೈಕಲ್ಯ, ಅಜ್ಞಾನ, ಮೂರ್ಛೆ, ಬಳಲಿಕೆ ಈ ಲಕ್ಷಣಂಗಳೊಡನೆ ಕೂಡಿರುವದು ಪಿತ್ತಸನ್ನಿಯೆನ್ನಿಸಿಕೊಂಬುದು.

ಇದಕ್ಕೆ ಚಿಕಿತ್ಸೆ :—(೧) ಸಾರಗದಕೊಂಬು, ರುದ್ರಾಕ್ಷಿ, ಶ್ರೀಗಂಧ ಈ ಮೂರನ್ನು ಮೊಲೆಹಾಲಿನೊಳರದು ಕುಡಿಸಲು ಪಿತ್ತಸನ್ನಿದೋಷ ಗುಣವಾಗು ವುದು.

(೨) ಹೆಗ್ಗುಳ್ಳದಬೇರು, ನೆಲಗುಳ್ಳದಬೇರು, ನುಗ್ಗಿಚಕ್ಕೆ, ಮಾವಿನಚಕ್ಕೆ ಇವನ್ನು ಸಮಭಾಗ ಕಷಾಯವಿಕ್ಕಿ ಕೊಡಲು ಪಿತ್ತಸನ್ನಿದೋಷ ಪರಿಹರ.

೮. ಶ್ಲೇಷ್ಮಸನ್ನಿಲಕ್ಷಣ :—ಅರೋಚಕ, ಛರ್ದಿ, ಎದೇನೋವು, ಅಂಗ ಕಂಪನ, ಭ್ರಮೆ, ಬಳಲಿಕೆ, ಶ್ವಾಸ, ಕಾಸ, ಪ್ರಸೇಕ ಇವುಗಳು ಕೂಡಿಯಿರುವ ಜ್ವರವು ಶ್ಲೇಷ್ಮಸನ್ನಿಯೆನ್ನಿಸಿಕೊಳ್ಳುವುದು.

ಇದಕ್ಕೆ ಚಿಕಿತ್ಸೆ :—ಶುಂಠಿ, ಹಿಪ್ಪಲಿ, ಮೆಣಸು, ನಾಗಕೇಸರಿ, ಸೈಂಧವ ಲವಣ ಇವನ್ನು ಸಮಾಂಶವಾಗಿ ಮೊಲೆಹಾಲಿನಿಂದರೆದು ಕುಡಿಯಲು ಶ್ಲೇಷ್ಮ ಸನ್ನಿದೋಷ ಪರಿಹಾರವಾಗುವುದು.

೯. ಅಂತರ್ಗತಸನ್ನಿಗೆ ಚಿಕಿತ್ಸೆ :—ವಾದರಿಬೇರು, ಚಿತ್ರಮೂಲ, ಲಕ್ಕಿ ಬೇರು, ತುರುಚನಬೇರು, ಕಹಿಪಡವಲ, ಶುಂಠಿ ಇವು ಸಮಭಾಗ ಕಷಾಯವಿಟ್ಟು ಕೊಡಲು ಅಂತರ್ಗತ ಸನ್ನಿಗುಣವಾಗುವದು.

೧೦ ತ್ರಿದೋಷಸನ್ನಿಗೆ ಚಿಕಿತ್ಸೆ:—ಬಿಲ್ವಪತ್ರೆ, ನರುವಲು, ಹೆಮ್ಮರ, ಶಿವನಿ, ನೆಲಗುಳ್ಳ, ಹೆಗ್ಗುಳ್ಳ, ಎರಡೆಲೆಹೊನ್ನೆ, ಮೂರೆಲೆಹೊನ್ನೆ, ನೆಗ್ಗಿಲು, ಗಂಡು ತುರಚೆ, ಅಮೃತಬಳ್ಳಿ, ಆಡುಸೋಗೆ, ಇವುಗಳ ಬೇರುಗಳು ; ಶುಂಠಿ, ಕೊನ್ನಾರಿ ಗಡ್ಡೆ, ಕಹಿಪಡವಲ, ಪರ್ಪಾಷ್ಟಕ, ಚಂಗಲಕೋಷ್ಟ ಇವನ್ನು ಸಮಭಾಗ

ಕಷಾಯುವಿಟ್ಟು ಸೇವಿಸೆ ತ್ರಿದೋಷಸನ್ನಿಪಾತಜ್ವರ, ಶ್ಲೇಷ್ಮವಾತೋತ್ತರ ಸಹ ಮಾಣುವುದು.

೧೧. ಸ್ತ್ರೀಸಂಗದಿಂದುಂಟಾದ ಸನ್ನಿಪಾತಲಕ್ಷಣ :— ಸಂದು ಸಂದಿನ ಮುಡುಹುಗಳಲ್ಲಿ ಕತ್ತಿಯಲ್ಲಿ ಕಡಿದಂತೆ ಉಂಟಾದ ಬಹಳ ವೇದನೆಯು, ನಡುಕವು, ಎದೆನೋವು, ಮೈಯುರಿತವು, ಪ್ರಳಾಪವು, ಎದ್ದೆದ್ದು ಕುಳಿತುಕೊಂಬುದು, ಭ್ರಮೆಯು, ಹಸ್ತಪಾದಗಳ ಶೈತ್ಯವು ಮುಂತಾದ ಲಕ್ಷಣಗಳೊಡನೆ ಕೂಡಿರ್ಪುದೆ ತರುಣ ಜ್ವರದಲ್ಲಿಯುಂಟಾದ ಸ್ತ್ರೀಸಂಗದಿಂದಾದ ಸನ್ನಿದೋಷ. ಇದನ್ನೆ ಸುಖಸನ್ನಿ ಎಂದು ಹೇಳುವರು

(೧) ಚಿಕಿತ್ಸೆ :—ಯಾವ ಸ್ತ್ರೀಸಂಗದಿಂ ದೋಷಹುಟ್ಟುವುದೊ ಆ ಸ್ತ್ರೀಯ ತೊಡೆಯ ರಕ್ತದಲ್ಲಿ ಹಿಪ್ಪಲಿಯ ತೇದು ಕಣ್ಣಿಗೆಹಚ್ಚಲು ಆ ಕ್ಷಣವೇ ಸುಖಸನ್ನಿ ಗುಣವಾಗುವುದು.

(೨) ಚಿಕಿತ್ಸೆ :—ಪುತ್ರಜೀವಿಬೀಜದ ತಿರುಳು, ಈರುಳ್ಳಿ, ಜೀರಿಗೆ ಇವನ್ನು ಹಸುವಿನ ಹಸೀಹಾಲಿನಲ್ಲಿ ಅರೆದು ಕುಡಿಯಕೊಡಿಸಲು ಸ್ತ್ರೀಸಂಗದಿಂದ ಹುಟ್ಟಿದ ಸನ್ನಿದೋಷ ಶಮನವಹುದು.

೧೨. ಹಾರಿದ್ರಕ ಸನ್ನಿಯಲಕ್ಷಣ :—ದೇಹ, ಉಗರು, ಕಣ್ಣು, ಕೈಕಾಲು ಇವುಗಳು ಅರಸಿನದಹಾಗೆ ಪೀತವರ್ಣವಾಗಿರುವದು, ಉಗಳು, ಕೆಮ್ಮುಗಳಿಂದ ಯುಕ್ತವಾಗಿರುವದು ಇದೇ ಹಾರಿದ್ರಕ ಸನ್ನಿಯೆನ್ನಿಸಿಕೊಳ್ಳುತ್ತದೆ.

೧೩. ಗರ್ಭಸನ್ನಿ:—ಗರ್ಭಧಾರಣಮಾಡಿದ ಬಳಿಕ ಕಾಣುವದು.

೧೪. ಪ್ರಸವಸನ್ನಿ :—ಹೆತ್ತಮೇಲೆ ಕಾಣುವದು.

೧೫. ವ್ರಣಸನ್ನಿ :—ವ್ರಣದದೆಶೆಯಿಂದ ಕಾಣುವದು.

೧೬. ಮುಖಸನ್ನಿ :—ಮುಖದಲ್ಲಿ ವಿಕಾರವನ್ನುಂಟುಮಾಡುವದು.

೧೭. ಕಂಪಸನ್ನಿ :—ಕೈಕಾಲುಗಳಲ್ಲಿ ನಡುಕ ಉಂಟುಮಾಡುವದು.

೧೮. ಅಪಥ್ಯದಿಂದುಂಟಾದ ಸನ್ನಿಲಕ್ಷಣಗಳು :—ತೂಕಡಿಕೆ, ಮೂರ್ಛೆ, ಭ್ರಮೆ, ದಾಹ, ಪ್ರಲಾಪ, ಎದೇನೋವು ಇವೆಲ್ಲವೂ ಅಪಥ್ಯದಿಂದುಂಟಾದ ಸನ್ನಿದೋಷವೆಂದು ಹೇಳಲ್ಪಡುವದು.

ಅಪಥ್ಯಗಳು ಯಾವದಂದರೆ :—ತರುಣಜ್ವರದಲ್ಲಿ ಕಹಿ, ಹುಳಿ, ಖಾರ, ಕಷಾಯವಾದ ದ್ರವ್ಯ, ಸಿಹಿಯಾದ ಆಹಾರ, ಜಲಪಾನ, ಶೈತ್ಯವಾದ ವಸ್ತುವಿನ ಸೇವೆ, ಸ್ತ್ರೀಸಂಗ, ಆಗ್ರಹ, ವ್ಯಾಯಾಮ, ಚಿಂತೆ, ಶೋಕ ಇವುಗಳಿಂದ ದೋಷ ಬಲವಾಗಿ ಹುಟ್ಟುವದು. ಇದೇ ಅಪಥ್ಯದೋಷವೆಂದು ಹೇಳಲ್ಪಡುವದು.

---

## ಜ್ವರಕ್ಕೆ ಮಾತ್ರೆಗಳು.

೧. ಜ್ವರಘ್ನಿಘುಟಿಕ:— ಶುದ್ಧಿಮಾಡಿದ ಹವಳಸರಿಗಂಧಕ ೪ ತೊಲೆ, ಶುದ್ಧಿಮಾಡಿದ ಪಾದರಸ ೧ ತೊಲೆ, ಬಾಣಂತಿ ಬೋಳ ೪ ತೊಲೆ, ಹಿಪ್ಪಲಿ ೪ ತೊಲೆ, ಅಳಲೇಕಾಯಿಸಿಪ್ಪೆ ೪ ತೊಲೆ, ಅಕ್ಕಲಕರೆ ೪ ತೊಲೆ, ಹಾವುಮೆಕ್ಕೆ ಕಾಯಿವಳಗಿನ ತಿರಳು ೪ ತೊಲೆ, ಇವುಗಳನ್ನು ಖಲ್ವದಲ್ಲಿ ಹಾಕಿ ಹಾವುಮೆಕ್ಕೆಕಾಯಿ ರಸದಲ್ಲಿ ಅರೆದು ಗುರುಗಂಜಿ ಪ್ರಮಾಣ ಮಾತ್ರೆಮಾಡಿ ಅಮೃತಬಳ್ಳಿರಸದ ಅನುಪಾನದಲ್ಲಿ ಕೊಡಲು ವಾತಜ್ವರ ಗುಣವಾಗುವದು.

೨. ಮಹಾಜ್ವರಾಂಕುಶ ಮಾತ್ರೆ:— ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ಶುದ್ಧಿಮಾಡಿದ ಉಮ್ಮತ್ತಿಬೀಜ ೩ ತೊಲೆ, ಶೊಂಟಿ ೩ ತೊಲೆ, ಹಿಪ್ಪಲಿ ೩ ತೊಲೆ, ಮೆಣಸು ೩ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಎಲ್ಲವನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲಿ ೧ ದಿನ ಅರೆದು ಹಸೀಶುಂಟೀ ರಸದಲ್ಲಿ ೧ ದಿನ ಅರೆದು ಗುರುಗಂಜಿ ಪ್ರಮಾಣ ಮಾತ್ರೆಮಾಡುವದು. ಇದನ್ನು ಹೊತ್ತಿಗೆ ೧ ಮಾತ್ರೆ ಹಸೀ ಶುಂಠೀರಸದಲ್ಲಾದರೂ, ಅಮೃತಬಳ್ಳಿ ಕಷಾಯದಲ್ಲಾದರೂ, ಲಕ್ಕಲೀಸೊಪ್ಪಿನ ರಸದಲ್ಲಾದರೂ ಜೇನುತುಪ್ಪ ಬೆರಸಿ ಕೊಡುವದು. ಇದರಿಂದ ವಾತಜ್ವರ ಗುಣವಾಗುವದು.

೩. ಜ್ವರಮುರಾರಿ ಮಾತ್ರೆ :—ಶುದ್ಧಿಮಾಡಿದ ಇಂಗಲೀಕ ೧ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ಶೊಂಟಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳು ಮಾಡಿದ್ದು ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ಶುದ್ಧಿಮಾಡಿದ ಜಾಪಾಳ ೩ ತೊಲೆ, ಇವುಗಳನ್ನು ಖಲ್ವದಲ್ಲಿ ಹಾಕಿ ತಣ್ಣೀರಿನಲ್ಲಿ ಅರೆದು ಗುರುಗಂಜಿಗಾತ್ರ ಮಾತ್ರೆಮಾಡಿ ಬೆಳಿಗ್ಗೆ ಹೊತ್ತು ೧ ಮಾತ್ರೆ ಜೇನುತುಪ್ಪದಲ್ಲಿ ಕಲಸಿಕೊಡಲು ಬೇದಿಯಾಗಿ ವಾತಜ್ವರ ಗುಣವಾಗುವದು. ಈ ಮಾತ್ರೆ ವಾತಜ್ವರ ಪ್ರಥಮದಲ್ಲಿ ೧ ದಿನ ಮಾತ್ರ ಕೊಡಬೇಕು. ಅನಂತರ ೨ನೆಯ ದಿನ ಮೇಲ್ಕಂಡ ಮಹಾ ಜ್ವರಾಂಕುಶ ಮಾತ್ರೆ ಉಪಯೋಗಿಸುವದು.

೪. ಜೋಗಿರಸ ಮಾತ್ರೆ :—ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ತಾಳಕ ೧ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ, ಮೋಡಿ ೧ ತೊಲೆ, ಶೊಂಟಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಶುದ್ಧಿಮಾಡಿದ ಜಾಪಾಳ ೬ ತೊಲೆ ಇವುಗಳನ್ನು ಖಲ್ವದಲ್ಲಿ

ಹಾಕಿ ಗರುಗದಸೊಪ್ಪಿನ ರಸದಲ್ಲಿ ೧ ದಿನ ಅರದು ಬಿಳೇಕೋವ್ಮೆಸೊಪ್ಪಿನ ರಸದಲ್ಲಿ ೧ ದಿನ ಅರದು ಗುರುಗಂಜಿಗಾತ್ರ ಮಾತ್ರೆಮಾಡುವದು. ಬೆಳಿಗ್ಗೆ ಹೊತ್ತು ೧ ಮಾತ್ರೆ ಪೋಮದ ಕಷಾಯದಲ್ಲಾದರೂ, ಲಕ್ಕಿಲೀಸೊಪ್ಪಿನ ರಸದಲ್ಲಾದರೂ, ಹಸೀಶುಂಟೀ ರಸದಲ್ಲಾದರೂ ಜೇನುತುಪ್ಪ ಬೆರಸಿ ಕೊಡಲು ವಾತಜ್ವರ ಗುಣವಾಗುವದು.

೫. ಸಪ್ತಾನಂದ ಭೈರವಿ :—ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಇಂಗಳೀಕ ೨ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ಶುದ್ಧಿಮಾಡಿದ ಯಣ್ಣಿಬೆಳಗಾರ ಅರಳುಮಾಡಿದ್ದು ೧ ತೊಲೆ, ಶುಂಠಿ ೨ ತೊಲೆ, ಮೆಣಸು ೨ ತೊಲೆ, ಹಿಪ್ಪಲಿ ೨ ತೊಲೆ, ದುಂಪರಾಸ್ಮೆ ೨ ತೊಲೆ, ಅಳಲೇಕಾಯಿಸಿಪ್ಪೆ ೪ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲಿ ೧ ದಿನ ಅರದು, ಚಿತ್ರಮೂಲದ ಕಷಾಯದಲ್ಲಿ ೧ ದಿನ ಅರದು, ಹಸೀಶುಂಟೀ ರಸದಲ್ಲಿ ೧ ದಿನ ಅರದು ಗುರುಗಂಜಿ ಪ್ರಮಾಣ ಮಾತ್ರೆ ಮಾಡಿ ೧ ಮಾತ್ರೆ ಹಸೀಶುಂಟೀ ರಸದಲ್ಲಿ ಜೇನುತುಪ್ಪ ಬೆರಸಿ ಕೊಡಲು ವಾತಜ್ವರ ಗುಣವಾಗುವದು.

೬. ಅಮೃತಸಂಜೀವನೀ ಮಾತ್ರೆ:—ಶುದ್ಧಿಮಾಡಿದ ಇಂಗಳೀಕ ೨ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ಹಿಪ್ಪಲಿ ೧ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲಿ ಅರದು ಗುರುಗಂಜಿ ಪ್ರಮಾಣ ಮಾತ್ರೆಮಾಡಿ ಜೇನುತುಪ್ಪದಲ್ಲಿ ಕಲಸಿ ಮೇಲ್ಕಂಡ ಪಂಚಭದ್ರ ಕಷಾಯದಲ್ಲಿ ಬೆರಸಿ ಕುಡಿಯುವದು. ಇದರಿಂದ ತೀವ್ರವಾದ ವಾತಪಿತ್ತಜ್ವರವು ಗುಣವಾಗುವುದು.

೭. ತ್ರಿಫಲಾದಿ ಮಾತ್ರೆ :— ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಶೊಂಟಿ, ಹಿಪ್ಪಲಿ, ಮೆಣಸು ಇವುಗಳನ್ನು ಸಮಭಾಗವಾಗಿ ಸೇರಿಸಿ ಕುಟ್ಟಿ ಚೂರ್ಣಮಾಡಿ ಶೋಧಿಸಿ ಈ ಚೂರ್ಣಕ್ಕೆ ಅರ್ಧಭಾಗ ಶುದ್ಧಿಮಾಡಿದ ಬಿಳೀ ಲಾಲುತಿಗಡೆ ಚೂರ್ಣವನ್ನು ಬೆರಸಿ ಅದಕ್ಕೆ ತಕ್ಕಷ್ಟು ಬೆಲ್ಲ ಅಥವಾ ಸಕ್ಕರೆ ಪಾಕವೆತ್ತಿ ಈ ಚೂರ್ಣವನ್ನು ಕಲಿಸಿ ಕಲ್ವದಲ್ಲಿ ಹಾಕಿ ಚೆನ್ನಾಗಿ ಅರೆದು ಯಲಚೀ ಬೀಜದಷ್ಟು ಮಾತ್ರೆ ಮಾಡಿ ೧ ಮಾತ್ರೆ ಬಿಸಿನೀರಿನಲ್ಲಿ ಕೊಡಲು ವಾತಜ್ವರ, ಕುಕ್ಷಿಶೂಲೆ, ಅರುಚಿ, ಕೆಮ್ಮು ಸಹ ಗುಣವಾಗುವವು.

೮. ಮುಸಾಂಬರ ಮಾತ್ರೆ :— ಮುಸಾಂಬರ ೧ ತೊಲೆ, ಶುದ್ಧಿಮಾಡಿದ ಹಿಂಗು ಕಾಲುತೊಲೆ, ಸಣ್ಣಹಿಪ್ಪಲಿ ೧ ತೊಲೆ, ಗಜಹಿಪ್ಪಲಿ ೧ ತೊಲೆ, ಕಟುಕರೋಹಿಣಿ ೧ ತೊಲೆ, ಪಾದರನಮ್ಮಕ್ (ಬಿಡಾಲವಣ) ೧ ತೊಲೆ, ಗಜ್ಜೀಕಾಯಿ ಪೊಪ್ಪು ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ, ಹಾವುನಂಜಿನಸೊಪ್ಪಿನ ರಸ, ಶ್ರೀತುಲಸೀರಸ, ಜುಟ್ಟುವೇಸೊಪ್ಪಿನ ರಸ, ವೀಳೆಯದೆಲೆಯ ರಸ, ಗರು

ಗದಸೊಪ್ಪಿನ ರಸ, ಹಸೀಶುಂಠಿ ರಸ, ತುಂಬೇಸೊಪ್ಪಿನ ರಸ, ಈ ರಸಗಳಲ್ಲಿ ಪ್ರತ್ಯೇಕವಾಗಿ ಪ್ರತಿಯೊಂದು ರಸದಲ್ಲಿಯೂ ಒಂದೊಂದು ಭಾವನೆಯನ್ನು ಮಾಡಿ ಕಲ್ವದಲ್ಲಿ ಹಾಕಿ ಹಸೀಶುಂಠಿ ರಸದಿಂದ ಚೆನ್ನಾಗಿ ಅರೆದು ಹೆಸರುಕಾಳು ಪ್ರಮಾಣ ಮಾತ್ರೆಯನ್ನು ಮಾಡಿ ೧ ಮಾತ್ರೆ ಜೇನುತುಪ್ಪದಲ್ಲಿ ಕಲಸಿಕೊಡಲು ವಾತಜ್ವರ ಗುಣವಾಗುವುದು.

೯. ಮಹಾಜ್ವರಾಂಕುಶ ಮಾತ್ರೆ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹೆವಳಸರಿಗಂಧಕ ೨ ತೊಲೆ, ಸೂರತಿ ಬೆಳಗಾರ ಅರಳುಮಾಡಿದ್ದು ೨ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ತ್ರಿಕಟುಕ ೬ ತೊಲೆ, ತುಪ್ಪದ ದೇವದಾರು ೨ ತೊಲೆ, ಶುದ್ಧಿಮಾಡಿದ ಜಾಪಾಳ ೬ ತೊಲೆ, ಇವುಗಳನ್ನು ಕಲ್ವದಲ್ಲಿ ಹಾಕಿ, ಚಿತ್ರಮೂಲದ ರಸದಿಂದ ೧ ಜಾವ, ಹಸೀಶುಂಠಿ ರಸದಿಂದ ೧ ಜಾವ ಅರೆದು ಗುರುಗಂಜಿ ಪ್ರಮಾಣ ಮಾತ್ರೆ ಮಾಡುವುದು ೧-೨-೩-೪-೫ ದಿವಸದ ಜ್ವರ, ೮ ದಿವಸಕ್ಕೆ ಬರುವ ಜ್ವರ, ೧ ತಿಂಗಳು ಬಿಟ್ಟು ಬರುವ ಜ್ವರ ಇವುಗಳಿಗೆ ಶೊಂಟಿ, ಹಿಪ್ಪಲಿ, ಮೆಣಸು ಕಷಾಯದಲ್ಲಿ ೧ ಮಾತ್ರೆಯನ್ನು ಕೊಡುವುದು.

೧೦. ತೀರ್ಘಜ್ವರಾಂಕುಶ ಮಾತ್ರೆ.—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಇಂಗಳೀಕ ೧ ತೊಲೆ, ಶುದ್ಧಿಮಾಡಿದ ಹೆವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ತ್ರಿಕಟುಕ ೩ ತೊಲೆ, ಕಟುಕರೋಹಿಣಿ ೧ ತೊಲೆ, ಸೂರ್ತಿ ಬೆಳಗಾರದ ಅರಳು ೧ ತೊಲೆ, ಶುದ್ಧಿಮಾಡಿದ ಜಾವಾಳ ೨ ತೊಲೆ ಇವುಗಳನ್ನು ಕಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ೧ ದಿನ, ಹಸೀ ಶುಂಠಿ ರಸದಿಂದ ೧ ದಿನ ಅರೆದು ಗುರುಗಂಜಿ ಪ್ರಮಾಣ ಮಾತ್ರೆ ಕಟ್ಟಿ ಶೀತ ಸಮ್ಮಂದವಾದ ಜ್ವರಗಳಿಗೆ ಬೆಳಗಿನಹೊತ್ತು ೧ ಮಾತ್ರೆ ಜೇನುತುಪ್ಪದಲ್ಲಿ ಕೊಡುವುದು.

೧೧. ಕರ್ಪೂರದ ಮಾತ್ರೆ:—ಶುದ್ಧಿಮಾಡಿದ ಆರತಿಕರ್ಪೂರ ೨॥ ವರಹಾ ತೂಕ, ಮೆಣಸು ೧೦ ವರಹಾ ತೂಕ, ಚಿತ್ರಮೂಲದ ಬೇರಿನ ಬೊಬ್ಬಡೆ ೧ ವರಹಾ ತೂಕ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಕಲ್ವದಲ್ಲಿ ಹಾಕಿ ಬೇವಿನ ಚಕ್ಕೆ ಕಷಾಯದಿಂದ ಅರೆದು ಹೆಸರುಕಾಳು ಪ್ರಮಾಣ ಮಾತ್ರೆ ಮಾಡಿ ಅನುಪಾನ ವಿಶೇಷಗಳಿಂದ ಕೊಡಲು ಶೀತಜ್ವರ ಗುಣವಾಗುವುದು.

೧೨. ವಿಷಮುಷ್ಟಿ ಮಾತ್ರೆ:—ಶುದ್ಧಿಮಾಡಿದ ವಿಷಮುಷ್ಟಿಬೀಜದ ಚೂರ್ಣ ೧ ತೊಲೆ, ಮೋಡಿ ೧ ತೊಲೆ, ಶುಂಠಿ ೨ ತೊಲೆ, ಮೆಣಸು ೨ ತೊಲೆ, ಹಿಪ್ಪಲಿ ೨ ತೊಲೆ, ಶುದ್ಧಿಮಾಡಿದ ಹಿಂಗು ಕಾಲು ತೊಲೆ ಇವುಗಳನ್ನು ಕಲ್ವದಲ್ಲಿ ಹಾಕಿ ತಣ್ಣೀರಿನಿಂದ ಅರೆದು ಮೆಣಸಿನಕಾಳಷ್ಟು ಮಾತ್ರೆ ಮಾಡಿ ಬೆಳಗ್ಗೆ ಸಾಯಂಕಾಲ ೧ ಮಾತ್ರೆ ಮೆಣಸು ಕಷಾಯ ಅಥವಾ ಲವಂಗದ ಕಷಾಯದಲ್ಲಿ ಕೊಟ್ಟರೆ ಶೀತ

ಜ್ವರ ಗುಣವಾಗುವುದು. ಇದರಿಂದ ಹೊಟ್ಟೆನೋವು ಗುಣವಾಗುವದು. ಅಗ್ನಿ ದೀಪ್ತಿ ಉಂಟಾಗುವದು. ಜ್ವರ ಬಿಟ್ಟಮೇಲೆ ಶಕ್ತಿವೃದ್ಧಿಗಾಗಿ ಕೊಡುವದು ಬಹಳ ಒಳ್ಳೇದು.

೧೩. ಇಂಗಳೀಕ ಮಾತ್ರೆ:—ಶುದ್ಧಿಮಾಡಿದ ಇಂಗಳೀಕ ೧ ವರಹಾ ತೂಕ, ಶುದ್ಧಿಮಾಡಿದ ರಸಕರ್ಪೂರ ೧ ವರಹಾ ತೂಕ, ಹಿಪ್ಪಲಿ ೧ ತೊಲೆ, ಮೋಡಿ ೧ ತೊಲೆ, ಕಟುಕರೋಹಿಣಿ ೧ ತೊಲೆ, ಲವಂಗ ೧ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಕಲ್ವದಲ್ಲಿ ಹಾಕಿ ನೆಲಬೇವಿನ ಕಷಾಯದಿಂದ ಅರೆದು ಗುರುಗಂಜಿ ಪ್ರಮಾಣ ಮಾತ್ರೆ ಮಾಡಿ ೧ ಮಾತ್ರೆ ಜೀರಿಗೆ ಕಷಾಯದಲ್ಲಿ ಕೊಡಲು ಶೀತಜ್ವರ ಮತ್ತು ಛಳಿಜ್ವರಗಳು ಗುಣವಾಗುವವು.

೧೪. ಇಂಗಳೀಕ ಮಾತ್ರೆ:—ಶುದ್ಧಿಮಾಡಿದ ಇಂಗಳೀಕ ೨ ತೊಲೆ, ಶುಂಠಿ ೨ ತೊಲೆ, ಮೆಣಸು ೨ ತೊಲೆ, ಹಿಪ್ಪಲಿ ೨ ತೊಲೆ, ಕಟುಕರೋಹಿಣಿ ೨ ತೊಲೆ, ಇವುಗಳನ್ನು ಖಲ್ವದಲ್ಲಿ ಹಾಕಿ ಲೋಳೀಸರವನ್ನು ಗೀಚಿ ಅದರಲ್ಲಿ ಬರುವ ಅರಶಿನ ಬಣ್ಣದ ಹಾಲಿನಲ್ಲಿ ಅರೆದು ಗುರುಗಂಜಿ ಪ್ರಮಾಣ ಮಾತ್ರೆ ಕಟ್ಟುವುದು. ಬೆಳಿಗ್ಗೆ ೧ ಮಾತ್ರೆ, ಸಾಯಂಕಾಲ ೧ ಮಾತ್ರೆ ಹಸೀಶುಂಠಿ ರಸ, ಜೇನುತುಪ್ಪ ಇವುಗಳ ಅನುಪಾನಗಳಲ್ಲಿ ಕೊಟ್ಟರೆ ಚಳಿಜ್ವರ ಗುಣವಾಗುವುದು. ಅರಿಶಿನ ನೀರು ವಾಂತಿಯಾಗುವ ಜ್ವರದಲ್ಲಿ ಈ ಪ್ರಯೋಗ ಬಹಳ ಪ್ರಯೋಜಕವಾದುದು.

೧೫. ಆನಂದಭೈರವಿ ಮಾತ್ರೆ:—ಶುದ್ಧಿಮಾಡಿದ ಇಂಗಳೀಕ ೪ ತೊಲೆ, ಗೋರೋಜನ ॥ ತೊಲೆ, ಅಕ್ಕಲಕರೆ ೨ ತೊಲೆ, ಯಾಲಕ್ಕಿ ೧ ತೊಲೆ, ಜುನ್ನು ॥ ತೊಲೆ, ವಾಯುವಿಳಂಗ ೨ ತೊಲೆ, ಮೋಡಿ ೨ ತೊಲೆ, ಚಂಗಲಕೋಷ್ಟ ೨ ತೊಲೆ, ಗಜಹಿಪ್ಪಲಿ ೨ ತೊಲೆ, ಲವಂಗ ೨ ತೊಲೆ, ನಾಗಕೇಸರಿ ೨ ತೊಲೆ, ಕಬಾಬಚಿನ್ನಿ (ಬಾಲಮೆಣಸು) ೨ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಕಲ್ವದಲ್ಲಿ ಹಾಕಿ ಪನ್ನೀರಿನಿಂದ ೧ ದಿನ ಚೆನ್ನಾಗಿ ಅರೆದು ಹೆಸರುಕಾಳು ಪ್ರಮಾಣ ಮಾತ್ರೆ ಮಾಡಿ ಹೊತ್ತಿಗೆ ೧ ಮಾತ್ರೆ ಜೇನುತುಪ್ಪದಲ್ಲಿ ಕಲಿಸಿ ಕೊಡುವುದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ಕೊಡುವುದರಿಂದ ಸನ್ನಿಪಾತ ಮತ್ತು ಶೀತದ ಎಲ್ಲಾ ಜ್ವರಗಳೂ ಗುಣವಾಗುವುವು.

೧೬. ಆನಂದಭೈರವಿ ಮಾತ್ರೆ:—ಶುದ್ಧಿಮಾಡಿದ ಇಂಗಳೀಕ ೧ ತೊಲೆ, ಯಾಲಕ್ಕಿ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ತುಕ್ಮೆಚೋಂಚ್ (ನಸುಗುನ್ನಿಬೀಜ) ೧ ತೊಲೆ, ಶೊಂಟಿ ೧ ತೊಲೆ, ಸೂರತಿಬೆಳಗಾರ ಅರಳುಮಾಡಿದ್ದು ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಕಲ್ವದಲ್ಲಿ ಹಾಕಿ ಹಸೀಶೊಂಟಿ ರಸದಲ್ಲಿ ಅರೆದು ಹೆಸರುಕಾಳು ಪ್ರಮಾಣ ಮಾತ್ರೆ ಕಟ್ಟುವುದು. ೧ ಮಾತ್ರೆಯನ್ನು ಶೊಂಟಿ ಕಷಾಯದಲ್ಲಾಗಲಿ,

ತುಳಸಿಸೊಪ್ಪಿನ ರಸದಲ್ಲಾಗಲಿ, ಹಾವುನಂಜಿನಸೊಪ್ಪಿನ ರಸದಲ್ಲಾಗಲಿ ಕೊಡಲು ಶೀತಜ್ವರಗಳು ಗುಣವಾಗುವುವು.

೧೭. ಇಂಗಳೀಕ ಮಾತ್ರೆ :— ಶುದ್ಧಿಮಾಡಿದ ಇಂಗಳೀಕ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ॥ ತೊಲೆ, ಸೂರ್ತಿಬೆಳಗಾರ ಅರಳುಮಾಡಿದ್ದು ॥ ತೊಲೆ, ಶುದ್ಧಿಮಾಡಿದ ಜಾಪಾಳ ೧ ತೊಲೆ, ಇವುಗಳನ್ನು ಕಲ್ವದಲ್ಲಿ ಹಾಕಿ ನುಗ್ಗೇಸೊಪ್ಪಿನ ರಸದಲ್ಲಿ ಅರದು ಗುರುಗಂಜಿ ಪ್ರಮಾಣ ಮಾತ್ರೆ ಕಟ್ಟುವುದು. ಬೆಳಗ್ಗೆ ಹೊತ್ತು ೧ ಮಾತ್ರೆ ಜೇನುತುಪ್ಪದಲ್ಲಿ ಕಲಸಿ ಕೊಡುವುದು. ಈ ರೀತಿ ೩ ದಿವಸ ಕೊಡಲು ದಿನವೂಬರುವ ಜ್ವರವು ಗುಣವಾಗುವದು.

೧೮. ಇಂಗಳೀಕ ಮಾತ್ರೆ :— ಶುದ್ಧಿಮಾಡಿದ ಇಂಗಳೀಕ ೧ ತೊಲೆ, ಶೊಂಟಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಕರೀಜೀರಿಗೆ ೧ ತೊಲೆ, ಲವಂಗ ೧ ತೊಲೆ, ಶುದ್ಧಿಮಾಡಿದ ಎಣ್ಣೆಬೆಳಗಾರದ ಅರಳು ೧ ತೊಲೆ, ಶುದ್ಧಿ ಮಾಡಿದ ಜಾಪಾಳ ೬ ತೊಲೆ, ಇವುಗಳನ್ನು ಕಲ್ವದಲ್ಲಿ ಹಾಕಿ ಅಳಲೇಕಾಯಿ ಕಷಾಯದಲ್ಲಿ ಅರದು ಗುರುಗಂಜಿಗಾತ್ರ ಮಾತ್ರೆಮಾಡಿ ಬೆಳಗ್ಗೆ ಹೊತ್ತು ೧ ಮಾತ್ರೆ ಜೇನುತುಪ್ಪದಲ್ಲಿ ಕೊಡಲು ಭೇದಿಯಾಗಿ ಸಕಲ ಜ್ವರಗಳೂ ಗುಣವಾಗುವವು.

೧೯. ಕರ್ಪೂರಾದಿ ಮಾತ್ರೆ :— ಶುದ್ಧಿಮಾಡಿದ ಆರ್ತಿಕರ್ಪೂರ ೧ ವರಹ ತೂಕ, ಮೆಣಸು ೧೦, ವೀಳೆದೆಲೆ ತೊಟ್ಟು ೧೦ ಇವು ಮೂರು ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ಗುರುಗಂಜಿಗಾತ್ರ ಮಾತ್ರೆ ಮಾಡಿ ಬೆಳಗ್ಗೆ ಹೊತ್ತು ೧ ಮಾತ್ರೆ ೩ ದಿನ ಕೊಟ್ಟರೆ ಛಳಿಜ್ವರ ಗುಣವಾಗುವದು.

೨೦. ಜ್ವರಗಳಿಗೆ ಸುಖವಿರೇಚನ ಮಾತ್ರೆ :— ಶುದ್ಧಿಮಾಡಿದ ಇಂಗಳೀಕ ಕಾಲುತೊಲೆ, ಶುದ್ಧಿಮಾಡಿದ ರಸಕರ್ಪೂರ ಕಾಲು ತೊಲೆ, ಲವಂಗ ೧ ತೊಲೆ, ಶುದ್ಧಿಮಾಡಿದ ಜಾಪಾಳ ೧॥ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ವಿಷಮುದಾರಿ ಸೊಪ್ಪಿನ ರಸದಲ್ಲಿ ಅರದು ಗುರುಗಂಜಿ ಪ್ರಮಾಣ ಮಾತ್ರೆಮಾಡಿ ಸರಿಯಾದ ಅನುಪಾನಗಳಿಂದ ಬೆಳಿಗ್ಗೆಹೊತ್ತು ೧ ಮಾತ್ರೆ ಕೊಡಲು ಸಮಸ್ತ ಜ್ವರಗಳು ಗುಣವಾಗುವುವು.

೨೧. ಮಣಿಶಿಲೆ ಮಾತ್ರೆ :— ಶುದ್ಧಿಮಾಡಿದ ಮಣಿಶಿಲೆ ೧ ತೊಲೆ, ಶೊಂಟಿ ೨ ತೊಲೆ, ಮೆಣಸು ೨ ತೊಲೆ, ಹಿಪ್ಪಲಿ ೨ ತೊಲೆ, ನೋಡಿ ೨ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಮೇಕೆ ಮೂತ್ರದಲ್ಲಿ ೧ ಜಾವ ಅರೆದು ತುಲಸೀಸೊಪ್ಪಿನ ರಸದಲ್ಲಿ ೧ ಜಾವ ಅರೆದು, ಮೆಣಸು ಪ್ರಮಾಣ ಮಾತ್ರೆ ಮಾಡಿ ವಿಷ್ಣುಕ್ರಾಂತಿ ಕಷಾಯದಲ್ಲಿ ೧ ಮಾತ್ರೆಯನ್ನು ಕೊಡಲು ಪಿತ್ತವಾತಜ್ವರ ಗುಣವಾಗುವುದು.

೨೨. ಜ್ವರಕ್ಕೆ ಮಾತ್ರೆ :— ಶುದ್ಧಿಮಾಡಿದ ಇಂಗಳೀಕ, ಶುದ್ಧಿಮಾಡಿದ ರಸಕರ್ಪೂರ, ಶುದ್ಧಿಮಾಡಿದ ರಸಸಿಂಧೂರ, ಸೂರತಿಬೆಳಗಾರದ ಅರಳು,

ಶೊಂಟಿ, ಮೆಣಸು, ಹಿಪ್ಪಲಿ ಇವುಗಳು ಪ್ರತಿಯೊಂದೂ ಒಂದೊಂದು ವರಹೆ ತೂಕ, ಶುದ್ಧಿಮಾಡಿದ ಜಾಪಾಳ ಳ ವರಹ ತೂಕ, ಇವುಗಳನ್ನು ಖಲ್ವದಲ್ಲಿ ಹಾಕಿ ಮೊಲೆಹಾಲಿನಲ್ಲಿ ೧ ದಿನ, ಹಸೀಶೊಂಟಿ ರಸದಲ್ಲಿ ೧ ದಿನ ಚೆನ್ನಾಗಿ ಅರೆದು ಉದ್ದಿನ ಪ್ರಮಾಣ ಮಾತ್ರೆ ಮಾಡಿ ೧ ಮಾತ್ರೆ ಜೇನುತುಪ್ಪ ಹಸೀಶುಂಟೀ ರಸದಲ್ಲಿ ಕೊಡಲು ವಾತಜ್ವರ, ಶೀತಜ್ವರ ಸಹ ಗುಣವಾಗುವವು.

೨೩. ಜ್ವರದ ಮಾತ್ರೆ:—ಲವಂಗ ೧ ತೊಲೆ, ಜಾಕಾಯಿ ೧ ತೊಲೆ, ಮೋಡಿ ೧ ತೊಲೆ, ಹಿಪ್ಪಲಿ ೧ ತೊಲೆ, ಕಟುಕರೋಹಿಣಿ ೨ ತೊಲೆ, ಮೋಮ ೧ ತೊಲೆ, ಇವೆಲ್ಲ ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ತಣ್ಣೀರಿನಲ್ಲಿ ಅರೆದು ಹಸೀಕಡಲೆಯಷ್ಟು ಮಾತ್ರೆ ಮಾಡಿ ೧ ಮಾತ್ರೆ ಜೇನುತುಪ್ಪದಲ್ಲಿ ಕಲಸಿ ತೆಗೆದುಕೊಳ್ಳಲು ಅಜೀರ್ಣಜ್ವರ ಗುಣವಾಗುವುದು.

೨೪. ವಾಸುಕೀ ಚಂದ್ರಪ್ರಭಾವತೀ ಮಾತ್ರೆ:—ಶುದ್ಧಿಮಾಡಿದ ಇಂಗಳೀಕ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ಸೂರತಿಬೆಳಗಾರದ ಅರಳು ೧ ತೊಲೆ, ಶೊಂಟಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಯಾಲಕ್ಕಿ ‖ ತೊಲೆ, ವಾಯುವಿಳಂಗ ೧ ತೊಲೆ, ಅರಸಿನ ‖ ತೊಲೆ, ತುಂಗೇಗಡ್ಡೆ ೧ ತೊಲೆ, ಒಣಗಿದ ಒಳ್ಳೇಜೇವಿನಸೊಪ್ಪು ೧ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಖಲ್ವದಲ್ಲಿ ಹಾಕಿ ಹಸುವಿನ ಮೂತ್ರದಲ್ಲಿ ೧ ದಿನ ಅರೆದು ಅನಂತರ ಕರೀಮೇಕೆ ಮೂತ್ರದಲ್ಲಿ ೧ ದಿನ ಅರೆದು ಗುರುಗಂಜಿ ಪ್ರಮಾಣ ಮಾತ್ರೆ ಮಾಡಿ ೧ ಮಾತ್ರೆ ತಕ್ಕ ಅನುಪಾನಗಳಲ್ಲಿ ಕೊಡಲು ಸಮಸ್ತ ಜ್ವರಗಳೂ ಗುಣವಾಗುವವು. ಇದು ವಾತಶ್ಲೇಷ್ಮಜ್ವರ ಅಂದರೆ ಇಙ್ಫ್ಲೂಯೆಂಜಾ ಜ್ವರಕ್ಕೆ ಕೈಗಂಡೆದ್ದು.

೨೫. ಸೂರ್ಯಪ್ರಭಾಕರ ಮಾತ್ರೆ:—ಶುದ್ಧಿಮಾಡಿದ ಪಾದರಸ ೧ ವರಹೆ ತೂಕ, ಶುದ್ಧಿಮಾಡಿದ ಹವಳಸರಿಗಂಧಕ ೧ ವರಹ ತೂಕ, ಶುದ್ಧಿಮಾಡಿದ ನಾಭಿ ೧ ವರಹ ತೂಕ, ತಾಂಬ್ರಭಸ್ಮ ೧ ವರಹ ತೂಕ, ಅರಸಿನ ೩ ತೊಲೆ, ಮರದರಿಸಿನ ೩ ತೊಲೆ, ಒಣಗಿದ ಒಳ್ಳೇಬೇವಿನಸೊಪ್ಪು ೬ ತೊಲೆ, ಶೊಂಟಿ ೩ ತೊಲೆ, ಹಿಪ್ಪಲಿ ೩ ತೊಲೆ, ಮೆಣಸು ೩ ತೊಲೆ, ಭದ್ರಮುಸ್ತೆ ೩ ತೊಲೆ, ವಾಯುವಿಳಂಗ ೩ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಖಲ್ವದಲ್ಲಿ ಹಾಕಿ ಕರೇಮೇಕೆ ಮೂತ್ರದಲ್ಲಿ ೧ ದಿನ ಅರೆದು ಗುರುಗಂಜಿಗಾತ್ರ ಮಾತ್ರೆ ಮಾಡಿ ೧ ಮಾತ್ರೆಯನ್ನು ಅನುಪಾನವಿಶೇಷದಿಂದ ಕೊಡಲು, ಸಮಸ್ತ ಜ್ವರಗಳು, ದಾಹ, ಅಜೀರ್ಣ, ಮಂದಾಗ್ನಿ, ಶೂಲೆ, ಶ್ವಾಸ, ಖಾಸ, ಪುರಾಣಜ್ವರಗಳಿಂದುಂಟಾದ ಯಕೃತ್ ಪ್ಲೀಹರೋಗಗಳೂ ಸಹ ಗುಣವಾಗುವುವು.

೨೬. ಜ್ವರಕ್ಕೆ ಮಾತ್ರೆ:—ಶುದ್ಧಿಮಾಡಿದ ಇಂಗಲೀಕ ‖ ತೊಲೆ, ಶೊಂಟಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ತಾಳೀಸಪತ್ರೆ ೧ ತೊಲೆ,

ಸಣ್ಣರಾಸ್ಮೆ ೧ ತೊಲೆ, ಮೋಡಿ ೧ ತೊಲೆ, ವೀಳೆದೆಲೆ ೬, ಹೊಟ್ಟುಸುಲಿದ ಬೆಳ್ಳುಳ್ಳಿ ೧ ತೊಲೆ, ತುಂಬೇಹುವ್ವು ೧ ತೊಲೆ, ಶುದ್ಧಿಮಾಡಿದ ಹಿಂಗು ೨ ಆಣೆ ತೂಕ ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಅರಿಯುವ ಜಿನಸುಗಳನ್ನು ಖಲ್ವದಲ್ಲಿ ಹಾಕಿ ಅರದು ಎಲ್ಲವನ್ನೂ ಖಲ್ವದಲ್ಲಿ ಹಾಕಿ ಮೆಣಸಿನ ಕಷಾಯದಲ್ಲಿ ಅರದು ಗುರುಗಂಜಿಗಾತ್ರ ಮಾತ್ರೆ ಮಾಡಿ ಹೊತ್ತಿಗೆ ೧ ಮಾತ್ರೆ ಜೇನುತುಪ್ಪದಲ್ಲಿ ಕಲಸಿ ಕೊಡಲು ಶ್ಲೇಷ್ಮಜ್ವರ ಗುಣ ವಾಗುವದು.

೨೭. ಜ್ವರಕ್ಕೆ ಮಾತ್ರೆ:—ಶುದ್ಧಿಮಾಡಿದ ಇಂಗಳೀಕ ಕಾಲು ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಸಣ್ಣರಾಸ್ಮೆ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ತುಂಬೇಸೊಪ್ಪಿನ ರಸದಲ್ಲಿ ಅರದು ಗುರುಗಂಜಿ ಪ್ರಮಾಣ ಮಾತ್ರೆ ಮಾಡಿ ಹೊತ್ತಿಗೆ ೧ ಮಾತ್ರೆ ನೆಲಬೇವಿನ ಕಷಾಯದಲ್ಲಿ ಕೊಡಲು ಶ್ಲೇಷ್ಮಜ್ವರ ಗುಣವಾಗುವದು.

೨೮. ವಿಷಕೋಲಾಹಲದ ಮಾತ್ರೆ:—ಈಶ್ವರಿಬೇರು ೧ ತೊಲೆ, ನಂಜಿನ ಚಕ್ಕೆ ೧ ತೊಲೆ, ಸಣ್ಣ ನಂಜಿನಬೀಜ ೧ ತೊಲೆ, ಅಗುಳುಶೊಂಟಿ ೧ ತೊಲೆ, ಬಿಳೇಜೀರಿಗೆ ೧ ತೊಲೆ, ಕರೇಜೀರಿಗೆ ೧ ತೊಲೆ, ಹಿಪ್ಪಲಿ ೧ ತೊಲೆ, ತಾಳೀಸ ಪತ್ರೆ ೧ ತೊಲೆ, ಕಟುಕರೋಹಿಣಿ ೧ ತೊಲೆ, ಕಹಿಪಡವಲ ೧ ತೊಲೆ, ದೊಡ್ಡಮರದಚಕ್ಕೆ ೧ ತೊಲೆ, ನಾಗಮುಷ್ಟಿಚಕ್ಕೆ ೧ ತೊಲೆ, ಪುತ್ರಜೀವಿಬೀಜ ೧ ತೊಲೆ, ವೋಮ ೧ ತೊಲೆ, ಇಂಗಳಹಣ್ಣಿನ ಮ್ಯಣ ೩ ತೊಲೆ, ಶುದ್ಧಿಮಾಡಿದ ವತ್ಸನಾಭಿ ಅರ್ಧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವ ದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ೩ ದಿನ ಅರದು ಗುರುಗಂಜಿ ಪ್ರಮಾಣ ಮಾತ್ರೆ ಮಾಡುವದು. ಶೊಂಟಿ ನೀರಿನಲ್ಲಿ ಗಂಧತೆಗದು ೧ ಮಾತ್ರೆ ಪುಡಿಮಾಡಿ ಜೇನುತುಪ್ಪದಲ್ಲಿ ಕಲಸಿ ಕೊಟ್ಟರೆ ವಾತಜ್ವರ ಗುಣವಾಗುವದು. ಮೆಣಸು, ಹಿಪ್ಪಲಿ ಕಷಾಯದಲ್ಲಿ ೧ ಮಾತ್ರೆ ಕಲಸಿ ಕೊಡಲು ಶ್ಲೇಷ್ಮಜ್ವರ ಗುಣವಾಗು ವದು. ಹಸೇಶೊಂಟಿ ರಸದಲ್ಲಿ ಅಥವಾ ಬಿಳೇಜೀರಿಗೆ ಕಷಾಯದಲ್ಲಿ ಕೊಟ್ಟರೆ ಚಳಿಜ್ವರ ಗುಣವಾಗುವದು. ಪಿತ್ತಜ್ವರಕ್ಕೆ ದ್ರಾಕ್ಷಿಪಾನಕದಲ್ಲಿ ಕೊಡುವದು.

೨೯. ಜ್ವರದ ಮಾತ್ರೆ:—ಇಂಗಳೀಕ ಒಂದೇ ಗಡ್ಡೆಯಾಗಿರುವದು ೩ ತೊಲೆ ತಂದು ಹಸುವಿನ ಹಾಲಿನಲ್ಲಿ ಹಾಕಿ ೭ ಸಲ ಬೆಂಕಿಯುಮೇಲಿಟ್ಟು ಕುದಿಸಿ ಅನಂತರ ಸಾಂಬ್ರಾಣಿ ೧ ತೊಲೆ, ಆರತಿಕರ್ಪೂರ ೧ ತೊಲೆ ಇವು ಎರಡು ಖಲ್ವ ದಲ್ಲಿ ಹಾಕಿ ಅರದು ಮೇಲಿನ ಇಂಗಲೀಕದಗಡ್ಡೆಗೆ ಕವಚಕೊಟ್ಟು ಬಾಂಡ್ಲಿಯಲ್ಲಿ ಹಾಕಿ ವಲೆಯುಮೇಲಿಟ್ಟು ಉರಿದರೆ ಕಟ್ಟುತ್ತೆ. ಅನಂತರ ಮೇಲಿನ ಕವಚ ಕಿತ್ತು ಇಂಗಳೀಕ ತೆಗೆದುಕೊಂಡು ಬಿಳೇಯಕ್ಕದಬೇರಿನ ಜೊಬ್ಬಡೆ ೧ ಶೇರು

ತಂದು ಸುಟ್ಟು ಕರಕುಮಾಡಿಕೊಂಡು ಆ ಕರಕಿಗೆ ೪ ಹಣತೂಕ ಕಟ್ಟಿದ ಇಂಗಲೀಕ ಹಾಕಿ ಇವುಗಳನ್ನು ಖಲ್ವದಲ್ಲಿ ಹಾಕಿ ವೀಳೆದೆಲೆ ರಸದಲ್ಲಿ ೧ ದಿನ ಅರದು, ಹಾವುನಂಜಿನಸೊಪ್ಪಿನ ರಸದಲ್ಲಿ ೧ ದಿನ ಅರದು ಹೆಸರುಕಾಳು ಪ್ರಮಾಣ ಮಾತ್ರೆ ಕಟ್ಟಿ ಬಿಳೀಜೀರಿಗೆ, ಮೆಣಸು ಕಷಾಯದಲ್ಲಿ ೧ ಮಾತ್ರೆ ಕಲಸಿ ಕೊಡಲು ಜ್ವರ ಗುಣವಾಗುವದು. ಶೀತಜ್ವರಕ್ಕೆ ಹಸೀಶುಂಟೀ ರಸದಲ್ಲಿ, ಜೇನುತುಪ್ಪದಲ್ಲಿ ೧ ಮಾತ್ರೆ ಕಲಸಿ ಕೊಡುವದು.

೩೦. ಭೈರವೀ ಮಾತ್ರೆ :—ಶುದ್ಧಿಮಾಡಿದ ಪಾದರಸ ಕಾಲು ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ಕಾಲು ತೊಲೆ, ಶುದ್ಧಿಮಾಡಿದ ನಾಭಿ ಕಾಲು ತೊಲೆ, ತ್ರಿಫಲೆ ಮುಕ್ಕಾಲು ತೊಲೆ, ತ್ರಿಕಟುಕ ಮುಕ್ಕಾಲು ತೊಲೆ, ತಾಳೀಸ ಪತ್ರೆ ಕಾಲು ತೊಲೆ, ಶುದ್ಧಿಮಾಡಿದ ಜಾಪಾಳ ೨॥ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಗರುಗದಸೊಪ್ಪಿನ ರಸದಲ್ಲಿ ೩ ದಿನ ಅರದು ಗುರುಗಂಜಿ ಪ್ರಮಾಣ ಮಾತ್ರೆ ಮಾಡಿ ೧ ಮಾತ್ರೆ ಮೆಣಸು, ಶೊಂಟಿ ಕಷಾಯದಲ್ಲಿ ಜೇನುತುಪ್ಪ ಹಾಕಿ ಕೊಡುವದು. ಇದರಿಂದ ಸಮಸ್ತ ಜ್ವರಗಳು ಗುಣವಾಗುವದು.

೩೧. ಅಗ್ನಿಕುಮಾರ ಮಾತ್ರೆ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ಮೆಣಸು ೧ ತೊಲೆ, ಶುದ್ಧಿಮಾಡಿದ ಯುಣ್ಣಿಬೆಳಗಾರ ಅರಳುಮಾಡಿದ್ದು ೧ ತೊಲೆ, ಶಂಕುಭಸ್ಮ ೧ ತೊಲೆ, ಕವಡೇಭಸ್ಮ ೧ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ನಿಂಬೇ ಹಣ್ಣಿನ ರಸದಲ್ಲಿ ೮ ಜಾವ ಮರ್ದನೆಮಾಡಿ ಹೆಸರುಕಾಳಷ್ಟು ಮಾತ್ರೆ ಮಾಡುವದು. ಚಳಿಜ್ವರಕ್ಕೆ ೧ ಮಾತ್ರೆ ವೀಳೆದೆಲೆಯ ರಸದಲ್ಲಿ ಕೊಡುವದು. ಸನ್ನಿಪಾತಜ್ವರಕೆ ಹಸೀಶುಂಟಿ ರಸದಲ್ಲಿ ೧ ಮಾತ್ರೆ ಕೊಡುವದು.

೩೨. ಜ್ವರದ ಮಾತ್ರೆ :—ಶುದ್ಧಿಮಾಡಿದ ಇಂಗಲೀಕ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ಚಿತ್ರಮೂಲದ ರಸದಲ್ಲಿ ೧ ದಿನ ನೆನೆಯಿಸಿದ ಹಿಪ್ಪಲಿ ೧ ತೊಲೆ, ಹಸುವಿನ ಹಾಲಿನಲ್ಲಿ ೧ ದಿನ ನೆನೆಯಿಸಿದ ಮೆಣಸು ೧ ತೊಲೆ, ಸುಣ್ಣದ ನೀರಿನಲ್ಲಿ ೧ ದಿನ ನೆನೆಯಿಸಿದ ಶೊಂಟಿ ೧ ತೊಲೆ, ಶುದ್ಧಿಮಾಡಿದ ಜಾಪಾಳ ೨ ತೊಲೆ, ಸೂರ್ತಿಬೆಳಗಾರ ಅರಳುಮಾಡಿದ್ದು ೧ ತೊಲೆ, ಇವುಗಳನ್ನು ಖಲ್ವದಲ್ಲಿ ಹಾಕಿ ಹಸೇಶೊಂಟಿ ರಸದಲ್ಲಿ ೩ ದಿನ ಅರದು ಮೆಣಸಿನಕಾಳುಗಾತ್ರ ಮಾತ್ರೆಮಾಡಿ ಬೆಳಿಗ್ಯೆಹೊತ್ತು ೧ ಮಾತ್ರೆ ಕೊಡುವದು. ಜ್ವರಕ್ಕೆ ಮೆಣಸಿನ ಕಷಾಯದಲ್ಲಿ ಕೊಡುವದು. ಚಳಿಜ್ವರಕ್ಕೆ ಜೀರಿಗೆ ಕಷಾಯದಲ್ಲಿ ಕೊಡುವದು. ಭೇದೀಗೆ ಶೊಂಟಿ, ಮೆಣಸು ಕಷಾಯದಲ್ಲಿ ಕೊಡುವದು. ಸನ್ನಿಗೆ ಹಸೇಶೊಂಟಿ ರಸ, ಜೇನುತುಪ್ಪದಲ್ಲಿ ಕೊಡುವದು. ಹೊಟ್ಟೆನೋವಿಗೆ ಹಸುವಿನ ತುಪ್ಪದಲ್ಲಿ

ಕೊಡುವದು. ಬೇದಿ ಜಾಸ್ತಿಯಾದರೆ ಹಸುವಿನ ಹಾಲು ಅನ್ನ ಕೊಡುವದು. ಬಜೆಸುಟ್ಟು ಕರುಕುಮಾಡಿ ಜೇನುತುಪ್ಪದಲ್ಲಿ ಕಲಸಿ ಕೊಟ್ಟರೆ ಭೇದಿ ನಿಂತು ಹೋಗುವದು.

೩೩. ಜ್ವರಕ್ಕೆ ಮಾತ್ರೆ:—ಶುದ್ಧಿಮಾಡಿದ ಇಂಗಳೀಕ ೧ ತೊಲೆ, ಕಸ್ತೂರಿ ಅರ್ಧ ಹಣ ತೂಕ, ಗೋರೋಜನ ಅರ್ಧ ಹಣ ತೂಕ, ಕುಂಕುಮಕೇಸರಿ ೧ ಹಣ ತೂಕ ಇವುಗಳನ್ನು ಖಲ್ವದಲ್ಲಿ ಹಾಕಿ ವಾತನಾರಾಯಣಿಸೊಪ್ಪಿನ ರಸದಲ್ಲಿ ಅರದು ಹೆಸರುಕಾಳು ಪ್ರಮಾಣ ಮಾತ್ರೆ ಮಾಡಿ ಅನುಪಾನ ಹಸೀಶುಂಟೀ ರಸ, ಕರೇಲಕ್ಕಲಿಸೊಪ್ಪಿನ ರಸ ಇವುಗಳಲ್ಲಿ ಕೊಡುವದು. ಇದರಿಂದ ಶೀತ, ಶ್ಲೇಷ್ಮ ಸಂಬಂಧವಾದ ಜ್ವರ ಗುಣವಾಗುವದು.

೩೪. ಜ್ವರಕ್ಕೆ ಮಾತ್ರೆ:—ಶುದ್ಧಿಮಾಡಿದ ಪಾದರಸ ೬ ತೂಕ, ಶುದ್ಧಿ ಮಾಡಿದ ಹವಳಸರಿಗಂಧಕ ೬ ತೂಕ, ಶುದ್ಧಿಮಾಡಿದ ತಾಳಕ ೩ ತೂಕ, ಶುದ್ಧಿ ಮಾಡಿದ ವತ್ಸನಾಭಿ ೩ ತೂಕ, ಸೂರ್ತಿಬಿಳಗಾರ ಅರಳುಮಾಡಿದ್ದು ೩ ತೂಕ, ಶುದ್ಧಿಮಾಡಿದ ಕರೇವುಮ್ಮತ್ತಿಬೀಜ ೩ ತೂಕ, ಶೊಂಟಿ ೩ ತೂಕ, ಮೆಣಸು ೩ ತೂಕ, ಹಿಪ್ಪಲಿ ೩ ತೂಕ, ಶುದ್ಧಿಮಾಡಿದ ಜಾವಾಳ ೬ ತೂಕ ಇವುಗಳನ್ನು ಖಲ್ವ ದಲ್ಲಿಹಾಕಿ ಚಿತ್ರಮೂಲದ ಕಷಾಯದಿಂದ ೩ ದಿನ ಅರದು ಉದ್ದಿನಕಾಳು ಪ್ರಮಾಣ ಮಾತ್ರೆಮಾಡುವದು. ಜ್ವರಕ್ಕೆ ಬೆಳಿಗ್ಯೆ ಹೊತ್ತು ೧ ಮಾತ್ರೆ ಹಸೇಶೊಂಟಿ ರಸ ದಿಂದ ಕೊಡಬೇಕು. ಇನ್ನು ಅನುಪಾನ ವಿಶೇಷಗಳಿಂದ ಕೊಡುವದು. ಇದರಿಂದ ಸರ್ವ ಜ್ವರ, ಸನ್ನಿಪಾತಜ್ವರ ಗುಣವಾಗುವದು.

೩೫. ಇಂಗಲೀಕ ಮಾತ್ರೆ:—ಶುದ್ಧಿಮಾಡಿದ ಇಂಗಳೀಕ ೧೬ ಗುರುಗಂಜಿ ತೂಕ, ಕಸ್ತೂರಿ ೧ ಗುರುಗಂಜಿ ತೂಕ, ಕುಂಕುಮಕೇಸರಿ ೧೦ ಗುರುಗಂಜಿ ತೂಕ, ಮೆಣಸು ೧೩ ಗುರುಗಂಜಿ ತೂಕ, ಗೋರೋಜನ ೫ ಗುರುಗಂಜಿ ತೂಕ, ಯಾಲಕ್ಕಿ ೭ ಗುರುಗಂಜಿ ತೂಕ, ಲವಂಗ ೮ ಗುರುಗಂಜಿ ತೂಕ, ಲವಂಗಪತ್ರೆ ೪ ಗುರುಗಂಜಿ ತೂಕ, ಜಾಕಾಯಿ ೩ ಗುರುಗಂಜಿ ತೂಕ, ಜಾಪತ್ರೆ ೫ ಗುರುಗಂಜಿ ತೂಕ, ಪಚ್ಚ ಕರ್ಪೂರ ೨ ಗುರುಗಂಜಿ ತೂಕ ಇವುಗಳನ್ನು ಖಲ್ವದಲ್ಲಿ ಹಾಕಿ ಮಲೆಹಾಲಿನಿಂದ ಚೆನ್ನಾಗಿ ಅರದು ಮೆಣಸಿನಕಾಳು ಪ್ರಮಾಣ ಮಾತ್ರೆ ಮಾಡಿ ದೇಹಸ್ಥಿತಿ ನೋಡಿ ಕೊಡುವದು. ಕೆರೆಹಿಪ್ಪಲಿಸೊಪ್ಪಿನ ರಸದಲ್ಲಿ, ಹಸೇಶೊಂಟಿ ರಸದಲ್ಲಿ, ಜೇನುತುಪ್ಪ ದಲ್ಲಿ, ಹಾವುನಂಜಿನಸೊಪ್ಪಿನ ರಸದಲ್ಲಿ, ಶ್ರೀತುಲಸೀಸೊಪ್ಪಿನ ರಸದಲ್ಲಿ, ನಾಯಿ ತುಲಸಿಸೊಪ್ಪಿನ ರಸದಲ್ಲಿ, ವಂದೆಲಗದಸೊಪ್ಪಿನ ರಸದಲ್ಲಿ, ಶೊಂಟಿ ಮೆಣಸು ಕಷಾ ಯದಲ್ಲಿ ರೋಗಕ್ಕೆ ತಕ್ಕ ಅನುಪಾನಗಳಲ್ಲಿ ಬೆಳಿಗ್ಯೆ ೧ ಮಾತ್ರೆ, ಸಾಯಂಕಾಲ ೧ ಮಾತ್ರೆ ಕೊಡಬೇಕು. ಇದರಿಂದ ಸರ್ವಜ್ವರಗಳು ಗುಣವಾಗುವದು.

೩೬. ಜ್ವರಕ್ಕೆ ಮಾತ್ರೆ:—ಶುದ್ಧಿಮಾಡಿದ ತಾಳಕ ೧ ತೊಲೆ ಶೀಗೆಕಾಯಿ ಕಷಾಯವಿಟ್ಟು ಅದರಲ್ಲಿ ಶೊಂಟಿ, ಹಿಪ್ಪಲಿ, ಮೆಣಸು ಜಿನಸಿಗೆ ೩ ತೊಲೆ ಇವು ಮೂರು ಬಟ್ಟೆಯಲ್ಲಿ ಗಂಟುಕಟ್ಟಿ ಕಷಾಯದಲ್ಲಿ ಹಾಕಿ ಅಷ್ಟಾವಶೇಷ ಕಷಾಯ ಕಾಯಿಸಿ ಗಂಟು ತೆಗದುಕೊಂಡು ಖಲ್ವಕ್ಕೆ ಹಾಕಿ ತಾಳಕವನ್ನು ಹಾಕಿ ಶೀಗೇ ಕಾಯಿ ಕಷಾಯದಲ್ಲಿ ಅರದು ಹೆಸರುಕಾಳು ಪ್ರಮಾಣ ಮಾತ್ರೆ ಮಾಡಿ ಇಟ್ಟು ಕೊಂಡು ಜ್ವರಬಂದವರಿಗೆ ರೋಗಕ್ಕೆ ತಕ್ಕ ಅನುಪಾನಗಳಿಂದ ಕೊಟ್ಟರೆ ಶೀತ ಮತ್ತು ಛಳಿಜ್ವರ ಗುಣವಾಗುವದು.

೩೭. ಜ್ವರಕ್ಕೆ ಮಾತ್ರೆ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿ ಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ಇಂಗಳೀಕ ೧ ತೊಲೆ, ಶುದ್ಧಿಮಾಡಿದ ತಾಳಕ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ಶುದ್ಧಿ ಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ, ಹಿಪ್ಪಲಿ ೪ ತೊಲೆ, ಶೊಂಟಿ ೪ ತೊಲೆ, ಮೆಣಸು ೪ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಹಾಗಲ ಸೊಪ್ಪಿನ ರಸದಲ್ಲಿ ೧ ದಿನ ಅರದು, ನಿಂಬೇಹಣ್ಣಿನ ರಸದಲ್ಲಿ ೧ ದಿನ ಅರದು, ಹಸೀಶುಂಠಿ ರಸದಲ್ಲಿ ೧ ದಿನ ಅರದು ಗುರುಗಂಜಿ ಪ್ರಮಾಣ ಮಾತ್ರೆಮಾಡಿ ೧ ಮಾತ್ರೆ ಹಸೀಶುಂಠೀರಸ, ಜೇನುತುಪ್ಪದಲ್ಲಿ ಕೊಡಲು ಚಾತುರ್ಥಿಕಜ್ವರ, ವಿಷಮಜ್ವರ, ಸನ್ನಿಪಾತಜ್ವರ ಗುಣವಾಗುವದು.

೩೮. ಜ್ವರಕ್ಕೆ ಮಾತ್ರೆ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿ ಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ತಾಳಕ ೨ ತೊಲೆ, ಶುದ್ಧಿ ಮಾಡಿದ ವತ್ಸನಾಭಿ ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ, ಶೊಂಟಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಅಳಲೇ ಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಶುದ್ಧಿಮಾಡಿದ ಜಾಪಾಳ ೫॥ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಹಸೀಶುಂಟೀ ರಸದಿಂದ ೩ ಜಾವ ಅರದು ಗುರುಗಂಜಿ ಪ್ರಮಾಣ ಮಾತ್ರೆಮಾಡಿ ೧ ಮಾತ್ರೆ ಜೇನುತುಪ್ಪದಲ್ಲಿ ಆಗಲಿ ಮೆಣಸಿನ ಕಷಾಯ ದಲ್ಲಿಯಾಗಲಿ ಬೆಳಿಗ್ಗೆಹೊತ್ತು ಕೊಡಲು ಚಳಿಜ್ವರ ಗುಣವಾಗುವದು.

೩೯. ಶೀತಜ್ವರಾಂಕುಶ ಮಾತ್ರೆ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ತಾಳಕ ೧ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿ ದ್ದು ೧ ತೊಲೆ, ತ್ರಿಕಟುಕ ೩ ತೊಲೆ, ತ್ರಿಫಲೆ ೩ ತೊಲೆ, ಇದಕ್ಕೆ ಸಮಭಾಗ ಶುದ್ಧಿಮಾಡಿದ ಜಾಪಾಳ ಇವುಗಳನ್ನು ಖಲ್ವದಲ್ಲಿ ಹಾಕಿ ಹಸೀಶುಂಟೀ ರಸದಲ್ಲಿ ೩ ಜಾವ, ಮುತ್ತುಕದಚಕ್ಕೆ ರಸದಲ್ಲಿ ೩ ಜಾವ ಮರ್ದಿಸಿ ಗುರುಗಂಜಿ ಪ್ರಮಾಣ

ಮಾತ್ರೆಮಾಡಿ ಸನ್ನಿಗೆ ೧ ಮಾತ್ರೆ ಹಸೀಶುಂಟಿರಸದಲ್ಲಿ ಕೊಡುವುದು. ಜ್ವರ, ಪಿತ್ತಜ್ವರ, ಅಜೀರ್ಣ, ಮಂದಾಗ್ನಿ ಇವುಗಳಿಗೆ ಜೀರಿಗೆ ಕಷಾಯದಲ್ಲಿ ಕೊಡಲು ಗುಣವಾಗುವವು.

೪೦. ಆನಂದಭೈರವಿ ಮಾತ್ರೆ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ಇಂಗಳೀಕ ೩ ತೊಲೆ, ಶುದ್ಧಿಮಾಡಿದ ತಾಳಕ ೧ ತೊಲೆ, ಶುದ್ಧಿಮಾಡಿದ ಮಣಿಸಿಲೆ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಚಿತ್ರಮೂಲದ ರಸದಲ್ಲಿ ೧ ದಿನ, ನಿಂಬೇಹಣ್ಣಿನ ರಸದಲ್ಲಿ ೧ ದಿನ, ಹಸೀಶುಂಟೀ ರಸದಲ್ಲಿ ೧ ದಿನ ಅರದು ಗುರು ಗಂಜಿಪ್ರಮಾಣ ಮಾತ್ರೆಮಾಡಿ ಅನುಪಾನವಿಶೇಷದಿಂದ ಕೊಡಲು ಸಮಸ್ತ ಜ್ವರಗಳು, ಸನ್ನಿ ಇವು ಗುಣವಾಗುವದು.

೪೧. ಅಮೃತಸಂಜೀವಿ ಮಾತ್ರೆ:—ಶುದ್ಧಿಮಾಡಿದ ಇಂಗಳೀಕ ೨ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಕಟುಕರೋಹಿಣಿ ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲಿ ೪ ಜಾವ ಮರ್ದಿಸಿ ಗುರುಗಂಜಿ ಪ್ರಮಾಣ ಮಾತ್ರೆ ಮಾಡುವದು. ೧ ಮಾತ್ರೆ ಜ್ವರಕ್ಕೆ ಮೆಣಸಿನ ಕಷಾಯದಲ್ಲಿ ಕೊಡುವದು. ಚಳಿಜ್ವರಕ್ಕೆ ಶೊಂಟಿ, ಲವಂಗ, ಮೆಣಸು ಇವು ಮೂರು ಕಷಾಯವಿಟ್ಟು ಅದರಲ್ಲಿ ೧ ಮಾತ್ರೆ ಕಲಸಿಕೊಟ್ಟರೆ ಗುಣವಾಗುವದು. ಸನ್ನಿಗೆ ಹಸೀಶುಂಠಿ ರಸದಲ್ಲಿ ಕೊಡುವದು. ನಾಲಿಗೆಮೇಲಿನ ದೋಷಕ್ಕೆ ೧ ಮಾತ್ರೆಯನ್ನು ಪುಡಿಮಾಡಿ ಜೇನುತುಪ್ಪದಲ್ಲಿ ಕಲಸಿ ನಾಲಿಗೆಗೆ ಲೇಪನಮಾಡುವದು.

೪೨. ಮಹಾ ಸಂಜೀವಿ ಮಾತ್ರೆ:—ಶುದ್ಧಿಮಾಡಿದ ಇಂಗಳೀಕ ೨ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಬೇವಿನಚಕ್ಕೆ ಕಷಾಯದಲ್ಲಿ ಚನ್ನಾಗಿ ಅರದು ಹೆಸರುಕಾಳು ಪ್ರಮಾಣ ಮಾತ್ರೆಮಾಡಿ ೧ ಮಾತ್ರೆ ಹಸೀ ಶುಂಠಿ ರಸದಲ್ಲಿ ಕೊಡಲು ಏಕಾಹಿಕ ಜ್ವರ, ಸನ್ನಿಪಾತಜ್ವರ ಇವು ಗುಣವಾಗುವದು.

೪೩ ದಿನ ಬರುವ ಜ್ವರಕ್ಕೆ ಮಾತ್ರೆ:— ಶುದ್ಧಿಮಾಡಿದ ಇಂಗಳೀಕ ೩ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ, ಶುದ್ಧಿಮಾಡಿದ ಜಾಪಾಳ ೧ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ೫ ನಿಂಬೇಹಣ್ಣಿನ ರಸದಲ್ಲಿ ಅರಿಯಬೇಕು. ಅನಂತರ ನುಗ್ಗೇ

ಸೊಪ್ಪಿನ ರಸ ೬ ತೊಲೆ ಹಾಕಿ ಚನ್ನಾಗಿ ಅರದು ಗುರುಗಂಜಿ ಪ್ರಮಾಣ ಮಾತ್ರೆ ಮಾಡಿ ಇಟ್ಟುಕೊಳ್ಳುವದು. ಬೆಳಿಗ್ಯೆಹೊತ್ತು ೧ ಮಾತ್ರೆ ಜೇನುತುಪ್ಪದಲ್ಲಿ ಕಲಸಿಕೊಟ್ಟರೆ ಏಕಾಹಿಕಜ್ವರ ಗುಣವಾಗುವದು.

೪೪. ವೀರವೈಷ್ಣವಿ ಮಾತ್ರೆ :—ಶುದ್ಧಿಮಾಡಿದ ಪಾದರಸ ೧ ವರಹ ತೂಕ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ವರಹ ತೂಕ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೧ ವರಹ ತೂಕ, ಶುದ್ಧಿಮಾಡಿದ ಶಂಖಪಾಷಾಣ ೧ ವರಹ ತೂಕ, ಶುಂಠಿ ೩ ವರಹ ತೂಕ, ಹಿಪ್ಪಲಿ ೩ ವರಹ ತೂಕ, ಮೆಣಸು ೩ ವರಹ ತೂಕ, ಶುದ್ಧಿಮಾಡಿದ ಇಂಗಲೀಕ ೬ ವರಹ ತೂಕ ಇವುಗಳನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ೨ ಜಾವ ಮರ್ದಿಸಿ ಹೆಸರುಕಾಳು ಪ್ರಮಾಣ ಮಾತ್ರೆ ಮಾಡಿ ಚಳಿಜ್ವರಕ್ಕೆ ತುಲಸೀ ರಸದಿಂದ ೧ ಮಾತ್ರೆ ಕೊಡುವದು. ಸನ್ನಿಗೆ ಹಸೀಶುಂಠಿ ರಸದಲ್ಲಿ ೧ ಮಾತ್ರೆ ಕೊಡುವದು. ಬರೀಜ್ವರಕ್ಕೆ ಪರ್ಪಾಟಕ, ಬೇವಿನಪಟ್ಟೆ, ಕಿತ್ತಲೆ ಹಣ್ಣಿನಸಿಪ್ಪೆ, ಕೊತ್ತುಂಬರಿಬೀಜ, ಗುಲಾಬಿಹುವ್ವ, ಸೋಪುಬೀಜ ಇವು ದಿನಸು ೧ಕ್ಕೆ ೧ ತೊಲೆಯಂತೆ ತಂದು ಅರ್ಧ ಸೇರು ನೀರುಹಾಕಿ ಅಷ್ಟಾವಶೇಷವಾಗಿ ಕಷಾಯ ಕಾಯಿಸಿ ಶೋಧಿಸಿ ಕಾಲು ಸೊಲಿಗೆ ಕಷಾಯದಲ್ಲಿ ೧ ಮಾತ್ರೆ ಕಲಸಿ ೩ ದಿನ ಬೆಳಿಗ್ಯೆ ಸಾಯಂಕಾಲ ಕೊಡುವದು. ಇದರಿಂದ ಸಮಸ್ತ ಜ್ವರ, ಛಳಿ, ಸನ್ನಿಪಾತ ಇವು ಗುಣವಾಗುವವು.

೪೫. ಜ್ವರಾಂಕುಶ ಮಾತ್ರೆ :—ಶುದ್ಧಿಮಾಡಿದ ಪಾದರಸ ೨ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೨ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ, ಶುಂಠಿ ೧ ತೊಲೆ, ಮೆಣಸು ೩ ತೊಲೆ, ಹಿಪ್ಪಲಿ ೩ ತೊಲೆ, ಶುದ್ಧಿಮಾಡಿದ ಜಾಪಾಳ ೬ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಬೇವಿನಚಕ್ಕೆ ಕಷಾಯದಿಂದ ೩ ದಿನ ಅರೆದು ಗುರುಗಂಜಿ ಪ್ರಮಾಣ ಮಾತ್ರೆ ಮಾಡಿ ೧ ಮಾತ್ರೆ ಅನುಪಾನವಿಶೇಷದಿಂದ ಕೊಟ್ಟರೆ ಸಕಲ ಜ್ವರಗಳು ಗುಣವಾಗುವವು.

೪೬. ಜ್ವರಗಳಿಗೆ ಮಾತ್ರೆ :—ಶುದ್ಧಿಮಾಡಿದ ಇಂಗಳೀಕ ೧ ತೊಲೆ, ಶುದ್ಧಿಮಾಡಿದ ತಾಳಕ ॥ ತೊಲೆ, ಶುದ್ಧಿಮಾಡಿದ ವತ್ಸನಾಭಿ ॥ ತೊಲೆ, ಶುಂಠಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ತಾಳೀಸಪತ್ರೆ ೧ ತೊಲೆ, ಬಿಳೇಜೀರಿಗೆ ೧ ತೊಲೆ, ಬೇವಿನಹುವ್ವು ೧ ತೊಲೆ, ವಿಷ್ಣುಕ್ರಾಂತಿ ೧ ತೊಲೆ, ಲವಂಗ ೧ ತೊಲೆ, ಶುದ್ಧಿಮಾಡಿದ ಉಮ್ಮತ್ತಿಬೀಜ ॥ ತೊಲೆ, ಶುದ್ಧಿಮಾಡಿದ ಜಾಪಾಳ ೩ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ನುಗ್ಗೀಚಕ್ಕೆ ರಸದಲ್ಲಿ ಅರೆದು ಗುರುಗಂಜಿ ಪ್ರಮಾಣ ಮಾತ್ರೆ ಮಾಡಿ ಅನುಪಾನವಿಶೇಷದಿಂದ ೧ ಮಾತ್ರೆ ಕೊಡಲು ಛಳಿಜ್ವರ ಗುಣವಾಗುವದು.

೪೭. ಜ್ವರದ ಮಾತ್ರೆ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ಶುದ್ಧಿ ಮಾಡಿದ ಕಟೀವುಮ್ಮತ್ತಿಬೀಜ ೧ ತೊಲೆ, ಮೆಣಸು ೨ ತೊಲೆ, ಹಿಪ್ಪಲಿ ೨ ತೊಲೆ, ಶೊಂಠಿ ೨ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ, ಇವುಗಳನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲಿ ಚನ್ನಾಗಿ ಅರದು ಗುರುಗಂಜಿ ಪ್ರಮಾಣ ಮಾತ್ರೆ ಮಾಡಿ ಅನುಪಾನವಿಶೇಷದಿಂದ ಕೊಡಲು ಜ್ವರ ಗುಣವಾಗುವದು. ಲವಂಗ, ಹಿಪ್ಪಲಿ ಹದವಾಗಿ ಹುರಿದದ್ದು, ಶೊಂಠಿ, ಅಳಲೇ ಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ಕಾಲು ತೊಲೆ, ಚೂರ್ಣಕ್ಕೆ ಮೇಲ್ಕಂಡ ೧ ಮಾತ್ರೆ ಪುಡಿಮಾಡಿ ಜೇನುತುಪ್ಪದಲ್ಲಿ ಕಲಸಿ ತೆಗೆದುಕೊಳ್ಳಲು ಕೆಮ್ಮು, ಉಬ್ಬಸ ಗುಣವಾಗುವದು. ಉಷ್ಣದ ಕೆಮ್ಮಿಗೆ ಮಲೆಹಾಲಿನಲ್ಲಿ ೧ ಮಾತ್ರೆ ಕಲಸಿ ಕೊಡುವದು ಎದೆಯಲ್ಲಿ ಶ್ಲೇಷ್ಮ ಕಟ್ಟಿ ಉಬ್ಬಸ ಜಾಸ್ತಿಯಾದರೆ ದುಂಪರಾಸ್ಮೆ, ಮಾಯಿಪಾಳದ ಕಾಯಿಯನ್ನು ನೀರಿನಿಂದ ಗಂಧತೆಗೆದು ೧ ಮಾತ್ರೆ ಪುಡಿಮಾಡಿ ಕಲಸಿಕೊಟ್ಟರೆ ಕೆಮ್ಮು, ಉಬ್ಬಸ ಗುಣವಾಗುವದು.

೪೮. ರಾಜಚಂಡೇಶ್ವರ ಮಾತ್ರೆ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ || ತೊಲೆ, ತಾಂಬ್ರಭಸ್ಮ || ತೊಲೆ, ಇವುಗಳನ್ನು ಖಲ್ವದಲ್ಲಿ ಹಾಕಿ ಲಕ್ಕಲಿಸೊಪ್ಪಿನ ರಸದಲ್ಲಿ ೭ ಸಲ, ಹಸೀಶುಂಟೀ ರಸದಲ್ಲಿ ೭ ಸಲ ಚನ್ನಾಗಿ ಅರದು ಹೆಸರುಕಾಳು ಪ್ರಮಾಣ ಮಾತ್ರೆ ಮಾಡುವದು. ೧ ಮಾತ್ರೆ ಹಸೀಶುಂಠಿ ರಸದಲ್ಲಿ ಕಲಸಿ ಕೊಟ್ಟರೆ ಜ್ವರ ಗುಣವಾಗುವದು. ಹಿಪ್ಪಲಿಚೂರ್ಣ, ೧ ಮಾತ್ರೆ ಜೇನುತುಪ್ಪದಲ್ಲಿ ಕಲಸಿ ಕೊಟ್ಟರೆ ಪುರಾಣಜ್ವರ ಗುಣವಾಗುವದು.

೪೯. ಜ್ವರದ ಮಾತ್ರೆ:—ಶುದ್ಧಿಮಾಡಿದ ಸಪ್ಪೀರ ೧ ತೊಲೆ, ಅವ್ವಲ್ ಪಚ್ಚಕರ್ಪೂರ ೧ ತೊಲೆ, ಆರತಿಕರ್ಪೂರ ೨ ತೊಲೆ, ಪಟಕಿ ಮುಕ್ಕಾಲು ತೊಲೆ, ಸೂರ್ತಿಬೆಳಗಾರ ಅರಳುಮಾಡಿದ್ದು ೧ ತೊಲೆ, ಇವುಗಳನ್ನು ಖಲ್ವದಲ್ಲಿ ಹಾಕಿ ಯಳನೀರಿನಲ್ಲಿ ೧ ಜಾವ ಚನ್ನಾಗಿ ಅರದು ರಾಗಿಕಾಳು ಪ್ರಮಾಣ ಮಾತ್ರೆ ಮಾಡಿ ನೆರಳಿನಲ್ಲಿ ಒಣಗಿಸಿ ಹೊಸಮಲ್ ಬಟ್ಟೆಯಿಂದ ಮಾತ್ರೆಯನ್ನು ಚನ್ನಾಗಿ ತೀಡಿದರೆ ಮಾತ್ರೆ ಮೆರಗುಬರುತ್ತೆ. ಈ ಮಾತ್ರೆಯನ್ನು ವಾತಜ್ವರ, ಸನ್ನಿವಾತಜ್ವರ, ಸಮಸ್ತ ಜ್ವರಗಳಿಗೆ ಬಿಸಿನೀರು, ಸಕ್ಕರೆಪಾನಕ ಇವುಗಳ ಅನುಪಾನಗಳಲ್ಲಿ ಬೆಳಿಗ್ಯೆ ೧ ಮಾತ್ರೆ, ಸಾಯಂಕಾಲ ೧ ಮಾತ್ರೆಯಂತೆ ೩ ದಿನ ೬ ಹೊತ್ತು ಕೊಡಬೇಕು ಇದಕ್ಕೆ ಪತ್ಯ ರವೆಗಂಜಿ, ಹಾಲು, ಶೀಸಾರು ಅನ್ನ ಕೊಡಬೇಕು.

೫೦ ಛಳಿಜ್ವರಕ್ಕೆ ಕೊಯಿನಾ ಮಾತ್ರೆ:—ಶೊಂಟಿ ೧ ತೊಲೆ, ಲವಂಗ ೧ ತೊಲೆ, ಹಿಪ್ಪಲಿ ೧ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಕೊಯಿನಾ ೧ ತೊಲೆ, ತುಂಬೇಹುವ್ವ ೧ ತೊಲೆ ಸೇರಿಸಿ ನಿಂಬೇ ಹಣ್ಣಿನ ರಸದಲ್ಲಿ ಅರದು ಗುರುಗಂಜಿ ಪ್ರಮಾಣ ಮಾತ್ರೆ ಮಾಡುವದು. ಬೆಳಿಗ್ಯೆ ೧ ಮಾತ್ರೆ, ಸಾಯಂಕಾಲ ೧ ಮಾತ್ರೆ ಜೇನುತುಪ್ಪದಲ್ಲಿ ಕಲಸಿ ಕೊಡಲು ಛಳಿಜ್ವರ ಗುಣವಾಗುವದು.

೫೧ ಜ್ವರಕ್ಕೆ ಮಾತ್ರೆ :—ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಸಣ್ಣ ರಾನ್ಮೆ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ತುಂಬೇಸೊಪ್ಪಿನ ರಸದಲ್ಲಿ ಅರೆದು ಗುರುಗಂಜಿ ಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ನೆಲಬೇವಿನ ಕಷಾಯದಲ್ಲಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೩-೫ ದಿನ ಕೊಡಬೇಕು. ಇದರಿಂದ ಕಫಜ್ವರ, ಶ್ಲೇಷ್ಮ ಜ್ವರ ಗುಣವಾಗುವದು.

೫೨. ತಪನಜ್ವರಕ್ಕೆ ಮಾತ್ರೆ:—ಶುದ್ಧಿಮಾಡಿದ ಇಂಗಳೀಕ ||| ತೊಲೆ, ರಸಸಿಂಧೂರ ಮಾಡಿದ್ದು ಕಾಲು ತೊಲೆ, ಶುದ್ಧಿಮಾಡಿದ ಹೆವಳಸರಿಗಂಧಕ ಕಾಲು ತೊಲೆ, ತಕ್ಕೋಲ || ತೊಲೆ, ಮೆಣಸು ||| ತೊಲೆ, ಇವುಗಳನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ಅರದು ಗುರುಗಂಜಿ ಪ್ರಮಾಣ ಮಾತ್ರೆ ಮಾಡುವದು. ೧ ಮಾತ್ರೆ ಮಲೆಹಾಲಿನಲ್ಲಿ ಕಲಸಿ ಕೊಡುವದು ಹೀಗೆ ಬೆಳಿಗ್ಯೆ ಹೊತ್ತು ೩ ದಿನ ಕೊಡಬೇಕು. ಇದರಿಂದ ಜ್ವರದಿಂದ ಹುಟ್ಟಿದ ತಾಪ ಗುಣವಾಗುವದು.

೫೩. ಅಮೃತಸಂಜೀವನೀ ಮಾತ್ರೆ :—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹೆವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ಇಂಗಳೀಕ ೧ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ಕಟುಕರೋಹಿಣಿ ೧ ತೊಲೆ, ಮೆಣಸು ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಗರುಗದಸೊಪ್ಪಿನ ರಸದಲ್ಲಿ ಚನ್ನಾಗಿ ಅರದು ಗುರುಗಂಜಿ ಪ್ರಮಾಣ ಮಾತ್ರೆ ಮಾಡಿ ೧ ಮಾತ್ರೆ ಹಸೀಶುಂಟಿ ರಸದಲ್ಲಿ ಕೊಡಲು ಸಮಸ್ತ ಜ್ವರಗಳು ಗುಣವಾಗುವದು.

೫೪. ಜ್ವರಕ್ಕೆ ಮಾತ್ರೆ :—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹೆವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ತಾಳಕ ೧ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಹಾಗಲಸೊಪ್ಪಿನ ರಸದಲ್ಲಿ ಚನ್ನಾಗಿ ಅರದು ಮೆಣಸು ಪ್ರಮಾಣ ಮಾತ್ರೆ ಮಾಡಿ ವಾತದೇಹದವರಿಗೆ ಹಿಪ್ಪಲಿ, ಮೆಣಸು ಕಷಾಯದಲ್ಲಿ ಕೊಡುವದು. ಪೈತ್ಯದೇಹದವರಿಗೆ ಬಿಳೀಜೀರಿಗೆ, ಕೊತ್ತುಂಬರಿಬೀಜದ ಕಷಾಯದಲ್ಲಿ ಕೊಡುವದು. ಚಳಿಜ್ವರ, ಶೀತಜ್ವರಕ್ಕೆ ಹಸೀಶೊಂಟಿ ರಸ, ಜೇನುತುಪ್ಪದಲ್ಲಿ ಕೊಡುವದು.

೫೫ ದೋಷಾಮೃತ ಸಂಜೀವನೀ ಮಾತ್ರೆ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ಇಂಗಲೀಕ ೧ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ಬಿಳಿಗಾರದ ಅರಳು ೧ ತೊಲೆ, ಕಟುಕರೋಹಿಣಿ ೧ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಗರುಗದಸೊಪ್ಪಿನ ರಸದಲ್ಲಿ ೩ ದಿನ ಅರದು ಗುರುಗಂಜಿ ಪ್ರಮಾಣ ಮಾತ್ರೆ ಮಾಡುವದು. ೧ ಮಾತ್ರೆ ಹಸೀಶುಂಠೀ ರಸದಲ್ಲಿ ಕೊಡಲು ಸಮಸ್ತ ದೋಷಜ್ವರಗಳು ನಿವಾರಣೆ ಆಗುವದು.

೫೬. ಹೀರಪ್ರದೇಶದ ಜ್ವರದ ಮಾತ್ರೆ:—ಪಾವುಜಹರ್‌ಮಾದಿನಿ ೨ ತೊಲೆ, ಕಚೋರ ೨ ತೊಲೆ, ಕಸ್ತೂರಿ ಅರಸಿನ ೨ ತೊಲೆ, ಅಮೃತಬಳ್ಳಿಸಕ್ಕರೆ ೨ ತೊಲೆ, ಸುನಾಕಾವಿ ೨ ತೊಲೆ, ಜದ್ವಾರ್ ೨ ತೊಲೆ, ದರೂನಜ್ ಅಕ್ರಬಿ ೨ ತೊಲೆ ಇವು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಖಲ್ವಕ್ಕೆ ಹಾಕಿ ೮ ಡ್ರಾಂ ಹಿಡಿಯುವ ಪನ್ನೀರು ಪೂರಾಶೀಸೆ ತಂದು ಇದು ಹಿಂಗುವವರಿಗೂ ಪನ್ನೀರುಹಾಕಿ ಅರಿಯುತ್ತಾ ಪನ್ನೀರು ಎಲ್ಲ ಮುಗಿದಮೇಲೆ ತೊಗರೀಕಾಳಿನಂತೆ ಮಾತ್ರೆ ಮಾಡುವದು. ದೊಡ್ಡವರಿಗೆ ಬೆಳಿಗ್ಗೆ ೧ ಮಾತ್ರೆ ಬಾಯಲ್ಲಿ ಹಾಕಿ ೬ ಕಾಸಿನ ಪನ್ನೀರು ಕುಡಿಯುವದು. ಸಾಯಂಕಾಲ ಇದೇರೀತಿ ಮಾತ್ರೆ ತೆಗೆದುಕೊಳ್ಳುವದು. ಇದರಿಂದ ಉಷ್ಣಸಮ್ಮಂಧವಾದ ಜ್ವರ ತಪನಜ್ವರಗಳು ಗುಣವಾಗುವವು.

೫೭. ಪೀಲಾ ಮಾತ್ರೆ (ತಪ್ಕೆವಾಸ್ತೆ) ಜ್ವರಕ್ಕೆ:—ತಬಾಷೀರ್ ೧೨ ಆಣೆ ತೂಕ, ಸದಫ್ (ಮುತ್ತಿನಚಿಪ್ಪು ಭಸ್ಮ) ೧ ತೊಲೆ, ಮೇಕೆ ಗೋರೋಜನ ॥ ತೊಲೆ, ಜದ್ವಾರ್ ॥ ತೊಲೆ, ದರೂನಜ್ ॥ ತೊಲೆ, ಜಹರ್‌ಮೊಹರಾ ಖತಾಯಿ ॥ ತೊಲೆ, ಯೇಷಿಬ್ ॥ ತೊಲೆ, ನಾರೆಲ್‌ದರಿಯಾಯಿ ೧ ತೊಲೆ, ಕೇಸರಿ ಕಾಲು ತೊಲೆ, ಪಚ್ಚಕರ್ಪೂರ ॥ ತೊಲೆ, ಅಮೇರಿಕಾದ್ದು ಚಂಚಪರೇಕು ೨೫ ಇವುಗಳನ್ನು ಖಲ್ವದಲ್ಲಿ ಹಾಕಿ ಪನ್ನೀರಿನಲ್ಲಿ ಅರದು ತೊಗರೀಕಾಳು ಪ್ರಮಾಣ ಮಾತ್ರೆ ಮಾಡಿ ಮೂರು ಘಂಟೆಗೆ ೧ ಸಲ ಈ ಕೆಳಗೆ ಬರದಿರುವ ಕಷಾಯದಲ್ಲಿ ಕೊಡುತ್ತಾ ಬರುವದು. ಇದಕ್ಕೆ ಕಷಾಯ:—ಬನಫಷಾ ಕಾಲು ತೊಲೆ, ಚಾತರಾ ಕಾಲು ತೊಲೆ, ಕಾಮೋನಿ ಕಾಲು ತೊಲೆ, ಜೂಫಾ ಕಾಲು ತೊಲೆ, ಇಸ್ತೆಖುದ್ದೂಸ್ ಕಾಲು ತೊಲೆ, ನಿಶಾಟಲಕಡಿ ಕಾಲು ತೊಲೆ, ಅಂಜೂರ್ ೨, ಪಿಸ್ತಾ ೫, ಹುನ್ನಾಫ್ ೫, ಬಡೀಮುನಕ್ಕ ೫ ಇವು ಅಷ್ಟಾವಶೇಷವಾಗಿ ಕಷಾಯ ಕಾಯಿಸಿ ಬೆಳಿಗ್ಗೆ, ಮಧ್ಯಾನ್ಹ, ಸಾಯಂಕಾಲ ೧-೧ ಮಾತ್ರೆಯಂತೆ ಕಷಾಯದಲ್ಲಿ ಮಾತ್ರೆ ಕಲಸಿ ಕೊಡುವದು. ಭೇದಿ ಆಗಬೇಕಾದರೆ ಗುಲಾಬ್‌ಕಿಕಲ್ಲಿ ಕಾಲುತೊಲೆ, ಸೋಪ್ ಕಾಲು ತೊಲೆ, ಬರ್ಗಸೆನಾ ॥ ತೊಲೆ ಇವುಗಳನ್ನು ಮೇಲ್ಕಂಡ ಕಷಾಯದಲ್ಲಿ ಸೇರಿಸಿ ಮಾತ್ರೆ ಇಟ್ಟು ಕೊಟ್ಟರೆ ಭೇದಿಗಳಾಗುವವು. ತಪನವಿದ್ದರೆ ಭೇದಿ

ಆಗುವ ದಿನಸು ಬಿಟ್ಟುಬಿಟ್ಟು ಮೇಲ್ಕಂಡ ಜಿನಸುಗಳ ಕಷಾಯವನ್ನು ಕೊಡ ಬೇಕು. ಕಾಸ್ನಿ ಕಾಲು ತೊಲೆ, ಖುಲ್ಫಾ ಕಾಲು ತೊಲೆ, ಕಾಹು ಕಾಲು ತೊಲೆ ಭೇದಿಮಾಡುವ ದಿನಸುಗಳು ತೆಗದು ಇದನ್ನು ಮೇಲ್ಕಂಡ ಕಷಾಯದಲ್ಲಿ ಹಾಕಿ ಕೊಟ್ಟರೆ ತಪನಜ್ವರ ಗುಣವಾಗುವದು.

೫೮. ಚಂದ್ರತಾಳಕ ಮಾತ್ರೆ :—ಶುದ್ಧಿಮಾಡಿದ ತಾಳಕ ೩ ವರಹ ತೂಕ, ಸುಣ್ಣ ೪ ವರಹ ತೂಕ ಇವುಗಳನ್ನು ಖಲ್ವದಲ್ಲಿ ಹಾಕಿ ಲೋಳಿಸರದ ರಸದಲ್ಲಿ ಅರೆದು ಬಿಲ್ಲೆಮಾಡಿ ಒಣಗಿಸಿ ಹುಣಿಸೆಚಕ್ಕೆ ಬೂದಿ ಒಂದು ಮಡಿಕೆಯಲ್ಲಿ ಹಾಕಿ ಆದರಮೇಲೆ ಬಿಲ್ಲೆ ಮಡಗಿ ಅದರಮೇಲೆ ಹುಣಿಸೆಚಕ್ಕೆ ಬೂದಿಹಾಕಿ ಮಡಿಕೆ ಮೇಲೆ ಮುಚ್ಚಳಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ವಲೆಯಮೇಲೆ ಇಟ್ಟು ಮೂರುಜಾವ ಬೇಯಿಸಿ ಸಾಂಗಶೀತಲವಾದನಂತರ ಚೀಲು ಬಿಚ್ಚಿ ವಳಗಿರುವ ಬಿಲ್ಲೆಯನ್ನು ತೆಗೆದು ಖಲ್ವದಲ್ಲಿ ಹಾಕಿ ಲೋಳಿಸರದ ರಸದಲ್ಲಿ ಅರದು ಹೆಸರು ಕಾಳು ಪ್ರಮಾಣ ಮಾತ್ರೆ ಮಾಡಿ ಜ್ವರಕ್ಕೆ ೧ ಮಾತ್ರೆ ಬಿಳೀಜೀರಿಗೆ ಚೂರ್ಣ ಸಕ್ಕರೆಯಲ್ಲಿ ಕೊಡಲು ಗುಣವಾಗುವದು. ಚಾತುರ್ಥಿಕ ಜ್ವರಕ್ಕೆ ಜೇನುತುಪ್ಪ ದಲ್ಲಿ ಕಲಸಿ ಕೊಡುವದು.

೫೯. ಜ್ವರದ ಮಾತ್ರೆ :—ಶೊಂಟಿ ೧ ತೊಲೆ, ಲವಂಗ ‖ ತೊಲೆ, ಹಿಪ್ಪಲಿ ‖ ತೊಲೆ, ಮೆಣಸು ‖ ತೊಲೆ, ಬಿಳೀಜೀರಿಗೆ ‖ ತೊಲೆ, ಮೋಡಿ ‖ ತೊಲೆ, ಕೊತ್ತುಂಬರಿಬೀಜ ‖ ತೊಲೆ, ತಾಳೀಸಪತ್ರೆ ೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡುವದು ಒಂದು ಮಡಿಕೆಯಲ್ಲಿ ೪ ಚೊಂಬು ನೀರುಹಾಕಿ ಅದರಲ್ಲಿ ಒಳ್ಳೇ ತುಲಸೀಸೊಪ್ಪು ೧ ಹಿಡಿ, ವಂದೆಲಗದಸೊಪ್ಪು ೧ ಹಿಡಿ, ಹೊಮ್ಮುಗಳಿ ಸೊಪ್ಪು ೧ ಹಿಡಿ, ವಿಷ್ಣುಕ್ರಾಂತಿ ೧ ಹಿಡಿ ಇವುಗಳನ್ನು ಹಾಕಿ ಮಡಕೆ ಬಾಯಿಗೆ ಬಟ್ಟೆಕಟ್ಟಿ ಅದರಮೇಲೆ ಮೇಲ್ಕಂಡ ಚೂರ್ಣಹಾಕಿ ಅದರ ಮೇಲೆ ಮುಚ್ಚಳಮುಚ್ಚಿ ವಲೆಯಮೇಲೆ ಇಟ್ಟು ೨ ಜಾವ ಕಾಯಿಸಿ ಮಡಕೆಯಲ್ಲಿ ೧ ಪಾವು ಕಷಾಯ ಇರುವಹಾಗೆ ಇಳಿಸಿಕೊಂಡು ಬಟ್ಟೆಯಮೇಲೆ ಇರುವ ಚೂರ್ಣ ಖಲ್ವಕ್ಕೆ ಹಾಕಿ ಮಡಿಕೆಯಲ್ಲಿ ಇರುವ ಕಷಾಯದಲ್ಲಿ ಅರದು ಕಡಲೇಕಾಳು ಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಅತಿಮಧುರ, ಶೊಂಟಿ, ಜೇನುತುಪ್ಪ, ಮಲೆಹಾಲು ಇವುಗಳಲ್ಲಿ ಗಂಧತೆಗೆದು ಅದರಲ್ಲಿ ೧ ಮಾತ್ರೆ ಕಲಸಿ ಕೊಡುವದು. ಈರೀತಿ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡ ಬೇಕು. ಇದರಿಂದ ನಚ್ಚುಜ್ವರ ಗುಣವಾಗುವದು.

೬೦. ಕಾಲಾಗ್ನಿರುದ್ರ ಮಾತ್ರೆ :—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೨ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ಬಿಳಿಗಾರದ ಹರಳು ೧ ತೊಲೆ, ಶುದ್ಧಿಮಾಡಿದ ವಿಷಮುಷ್ಟಿಬೀಜ ೧ ತೊಲೆ,

ಚಿತ್ರಮೂಲ ೧ ತೊಲೆ, ಚಂಗಲಕೋಷ್ಟ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೪ ತೊಲೆ, ಶೊಂಟೆ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ವೋಮ ೧ ತೊಲೆ, ಬಿಳೇಜೀರಿಗೆ ೧ ತೊಲೆ, ವಾಯುವಿಳಂಗ ೧ ತೊಲೆ, ಯವಕ್ಷಾರ ೧ ತೊಲೆ, ಸಜ್ಜಕ್ಷಾರ ೧ ತೊಲೆ, ಸೈಂಧರಲವಣ ॥ ತೊಲೆ, ಸೌವರ್ಚಲವಣ ॥ ತೊಲೆ, ಸಮುದ್ರಲವಣ ॥ ತೊಲೆ, ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಅರಿಯುವ ಜಿನಸುಗಳನ್ನು ಖಲ್ವದಲ್ಲಿ ಹಾಕಿ ಅರದು ಎಲ್ಲವನ್ನು ಸೇರಿಸಿ ನಿಂಬೇಹಣ್ಣಿನ ರಸ ದಿಂದ ೪ ಜಾವ ಅರದು ಮೆಣಸಿನ ಪ್ರಮಾಣ ಮಾತ್ರೆ ಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ೧ ಮಾತ್ರೆ ಹಸೀಶೊಂಟೀ ರಸ ಮೊದಲಾದ ಅನುಪಾನ ವಿಶೇಷಗಳಿಂದ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೫-೭ ದಿನ ಕೊಡಬೇಕು. ಇದರಿಂದ ದೀಪನವಾಗುವದು, ವಾಯು, ಗುಲ್ಮ, ಗ್ರಹಣಿ, ಜ್ವರ, ಜೀರ್ಣಜ್ವರ, ಮಂದಾಗ್ನಿ ಗುಣವಾಗುವದು

೬೧. ಮಹಾ ಜ್ವರಾಂಕುಶ ಮಾತ್ರೆ :—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ಬಿಳಗಾರದ ಹರಳು ೧ ತೊಲೆ, ಶುದ್ಧಿಮಾಡಿದ ಕರೇವುಮ್ಮತ್ತಿಬೀಜದಪಪ್ಪು ೩ ತೊಲೆ, ಶೊಂಟೆ ೪ ತೊಲೆ, ಹಿಪ್ಪಲಿ ೪ ತೊಲೆ, ಮೆಣಸು ೪ ತೊಲೆ ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಅರಿಯುವ ಜಿನಸುಗಳನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲಿ ೧ ದಿನ, ಹಸೀಶುಂಠೀ ರಸದಲ್ಲಿ ೧ ದಿನ ಅರದು ಗುರುಗಂಜಿ ಪ್ರಮಾಣ ಮಾತ್ರೆ ಮಾಡಿ ಹಸೇಶುಂಟೀ ರಸದಲ್ಲಿ, ನಿಂಬೇಹಣ್ಣಿನ ರಸದಲ್ಲಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೫-೭ ದಿನ ಕೊಡಬೇಕು. ಇದರಿಂದ ಶೀತಜ್ವರ, ಏಕಾಹಿಕಜ್ವರ, ವಿಷಮಜ್ವರ, ಸನ್ನಿ ಇವು ಗುಣವಾಗುವದು.

೬೨. ಬ್ರಂಹಾನಂದಭೈರವ ಮಾತ್ರೆ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ತಾಳಕ ೧ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳು ಮಾಡಿದ್ದು ೧ ತೊಲೆ, ಮೆಣಸು ೧ ತೊಲೆ, ಅಭ್ರಕಸಿಂಧೂರ ಕಾಲು ತೊಲೆ, ಶುದ್ಧಿಮಾಡಿದ ಇಂಗಳೀಕ ೨ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಹಸೀ ಶುಂಟೀ ರಸದಲ್ಲಿ ಅರದು ಗುರುಗಂಜಿ ಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಹಸೀಶುಂಟೀ ರಸ, ಜೇನುತುಪ್ಪ ಸೇರಿಸಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೩-೫ ದಿನ ಕೊಡಬೇಕು. ಇದರಿಂದ ೧೩ ಸನ್ನಿ, ತ್ರಿದೋಷಜ್ವರ, ಅತಿಸಾರ, ಗ್ರಹಣಿ, ರಕ್ತಾತಿಸಾರ ಮೊದಲಾದ ಸರ್ವರೋಗ ಗಳು ಗುಣವಾಗುವದು.

೬೩. ಸನ್ನಿಪಾತಭೈರವಿ ಮಾತ್ರೆ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹೆವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ತಾಳಕ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೩ ತೊಲೆ, ಸೂರ್ತಿಬೆಳಗಾರ ಅರಳುಮಾಡಿದ್ದು ೩ ತೊಲೆ, ಶುದ್ಧಿಮಾಡಿದ ಮಣಿಶಿಲೆ ೧ ತೊಲೆ, ಶುದ್ಧಿಮಾಡಿದ ಇಂಗಲೀಕ ೮ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಹಸೇಶುಂಟೀ ರಸದಲ್ಲಿ ೧ ಜಾವ, ಚಿಟ್ಟರಳುಬೇರಿನ ರಸದಲ್ಲಿ ೧ ಜಾವ, ನಿಂಬೇಹಣ್ಣಿನ ರಸದಲ್ಲಿ ೧ ಜಾವ ಅರದು ಗುರುಗಂಜಿ ಪ್ರಮಾಣ ಮಾತ್ರೆ ಮಾಡುವದು. ಬೆಳಿಗ್ಯೆ ೧ ಮಾತ್ರೆ, ಸಾಯಂಕಾಲ ೧ ಮಾತ್ರೆ ವೀಳೆದೆಲೆ ರಸದಲ್ಲಿ ಅಥವಾ ಹಸೀಶುಂಟೀ ರಸದಲ್ಲಿ ಮತ್ತು ಅನುಪಾನ ವಿಶೇಷಗಳಿಂದ ಕೊಡಲು ಇದರಿಂದ ೧೩ ವಿಧವಾದ ಸನ್ನಿ, ೩ ವಿಧ ದೋಷಗಳು, ಅತಿಸಾರ, ಕಠಿಣವಾದ ಶೂಲೆಗಳು, ಅರುಚಿ, ಕಫ, ಪಾಂಡು, ಶೋಭೆ, ದೃಷ್ಟಿದೋಷ, ವೈವುರಿ, ಜ್ವರಗಳು ಗುಣವಾಗುವದು.

೬೪. ಜ್ವರಾಂಕುಶ ಮಾತ್ರೆ:—ಹಿಪ್ಪೇಹುವ್ವ ೧ ತೊಲೆ, ಕಟುಕರೋಹಿಣಿ ೨ ತೊಲೆ, ಶುದ್ಧಿಮಾಡಿದ ಜಾವಾಳ ೩ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ಮೆಣಸಿನಕಾಳು ಪ್ರಮಾಣ ಮಾತ್ರೆ ಮಾಡಿ ೧ ಮಾತ್ರೆ ತಣ್ಣೀರಿನಲ್ಲಿ ಕೊಡಲು ಜ್ವರ ಗುಣವಾಗುವದು.

೬೫. ತರುಣಜ್ವರಾರಿ ಮಾತ್ರೆ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹೆವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ಬಿಳಿಗಾರದ ಅರಳು ೧ ತೊಲೆ, ಶುದ್ಧಿಮಾಡಿದ ಜಾಪಾಳ ೧ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಲೋಳಿಸರದ ರಸದಲ್ಲಿ ಅರದು ಗುರುಗಂಜಿ ಪ್ರಮಾಣ ಮಾತ್ರೆ ಮಾಡಿ ಸಕ್ಕರೆ, ತಣ್ಣೀರಿನ ಅನುಪಾನಗಳಲ್ಲಿ ಕೊಡಲು ತರುಣಜ್ವರ ಗುಣವಾಗುವದು.

೬೬. ಸ್ವಚ್ಛಂದಭೈರವ ಮಾತ್ರೆ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹೆವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ಜಾಕಾಯಿ ೧ ತೊಲೆ, ಹಿಪ್ಪಲಿ ೨ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ವೀಳೆದೆಲೆ ರಸದಲ್ಲಿ ಅರದು ೨ ಗುರುಗಂಜಿ ಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ವೀಳೆದೆಲೆ ರಸದಲ್ಲಿ ಕೊಡಲು ಜ್ವರ, ಅಜೀರ್ಣಜ್ವರ, ಸನ್ನಿ, ವಿಷಮಜ್ವರ, ಮಂದಾಗ್ನಿ ಇವು ಗುಣವಾಗುವದು.

೬೭. ಪ್ರತಾಪಮಾರ್ತಾಂಡ ಮಾತ್ರೆ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಇಂಗಲೀಕ ೨ ತೊಲೆ, ಶುದ್ಧಿಮಾಡಿದ ಜಾಪಾಳ ೩ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲಿ ಅರದು ಗುರುಗಂಜಿ ಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಬೆಲ್ಲದಲ್ಲಿ ಕೊಡಲು ವಿರೇಚನ

ವಾಗುವದು. ಈ ಮಾತ್ರೆ ಚಳಿಜ್ವರ ಬರುವ ದಿವಸ ಕೊಟ್ಟರೆ ಚಳಿಜ್ವರ ಗುಣವಾಗುವದು.

೬೮. ವಿಶ್ವತಾಪಹರಣ ಮಾತ್ರೆ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ತಾಂಬ್ರಭಸ್ಮ ೧ ತೊಲೆ, ಶುದ್ಧಿಮಾಡಿದ ಬಿಳೇತಿಗಡೆ ೧ ತೊಲೆ, ಹಿಪ್ಪಲಿ ೧ ತೊಲೆ, ಕಟುಕರೋಹಿಣಿ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ಶುದ್ಧಿಮಾಡಿದ ವಿಷಮುಷ್ಟಿ ಬೀಜ ೧ ತೊಲೆ, ಶುದ್ಧಿಮಾಡಿದ ಜಾಪಾಳ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಕರೇವ್ರುಮ್ಮತ್ತಿನೊಪ್ಪಿನ ರಸದಲ್ಲಿ ೧ ದಿನ ಅರದು ಗುರುಗಂಜಿ ಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಹಸೀಶುಂಟೀ ರಸದಲ್ಲಿ ಕೊಡುವದು. ಹೊಸದಾಗಿ ಬರುವ ತರುಣಜ್ವರ ಗುಣವಾಗುವದು.

೬೯. ಜ್ವರಕ್ಕೆ ಮಾತ್ರೆ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ತಾಳಕ ‖ ತೊಲೆ, ಶುದ್ಧಿಮಾಡಿದ ಇಂಗಳೀಕ ೧ ತೊಲೆ, ಶುದ್ಧಿಮಾಡಿದ ಮಣಿಶಿಲೆ ೧ ತೊಲೆ, ಸಂಗೆಚಮಕ್ (ಸುಣ್ಣದ ನೀರನ್ನು ಹಾಕಿ ಡೋಲಾಯಂತ್ರದಲ್ಲಿ ೨ ಜಾವ ಬೇಯಿಸಿದ್ದು) ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳು ಮಾಡಿದ್ದು ‖ ತೊಲೆ, ಇವುಗಳನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ಚನ್ನಾಗಿ ಅರದು ಗುರುಗಂಜಿ ಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಹಸೇಶೊಂಟೀ ರಸದಲ್ಲಿ ಸ್ವಲ್ಪ ಜೇನುತುಪ್ಪ ಹಾಕಿ ಕಲಸಿ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ಕೊಡಲು ಛಳಿಜ್ವರ ಗುಣವಾಗುವದು.

೭೦. ಪ್ರಭಾಕರ ೧ನೇ ವಿಧ:—ಶುದ್ಧಿಮಾಡಿದ ಹವಳಸರಿಗಂಧಕ ೩ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ತಾಂಬ್ರಭಸ್ಮ ಕಾಲುತೊಲೆ, ಶೊಂಟಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಮೋಡಿ ೧ ತೊಲೆ, ಲವಂಗ ೧ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ವಾಯುವಿಳಂಗ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ರೇಣುಕೆ ೧ ತೊಲೆ, ಚವ್ಯ ೧ ತೊಲೆ, ಚಿತ್ರಮೂಲ ೧ ತೊಲೆ, ಕೊನ್ನಾರಿಗಡ್ಡೆ ೧ ತೊಲೆ, ಬಿದರುವುಪ್ಪು ೧ ತೊಲೆ, ಅಕ್ಕಲಕರೆ ೧ ತೊಲೆ ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಅರಿಯುವ ಜಿನಸುಗಳನ್ನು ಖಲ್ವದಲ್ಲಿಹಾಕಿ ಅರದು ಎಲ್ಲವನ್ನು ಸೇರಿಸಿ ಮರಕಬ್ಬಿನಬೆಲ್ಲ ೧೨ ತೊಲೆ, ಜೇನುತುಪ್ಪ ತಕ್ಕಹಾಗೆ ಹಾಕಿ ಚನ್ನಾಗಿ ಅರದು ಇಟ್ಟುಕೊಳ್ಳುವದು. ಹೊತ್ತಿಗೆ ಮೆಣಸು ಪ್ರಮಾಣ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೩-೫-೭-೯ ದಿನ ಕೊಡಬೇಕು. ಇದರಿಂದ ಜ್ವರಗಳು, ಶ್ಲೇಷ್ಮಸಮ್ಮಂಧವಾದ ಎಲ್ಲಾ ತರಹೆ ಜಾಡ್ಯಗಳು, ಶೀತಸಮ್ಮಂಧವಾದ ಎಲಾ ತರಹೆ

ಜಾಡ್ಯಗಳು, ಅರೋಚಕ ಗುಣವಾಗುವದು. ಹಳೇಜ್ವರಕ್ಕೆ ಅಕ್ಕಿಕಚ್ಚಿನಲ್ಲಿ ಕೊಡಬೇಕು.

೨೧. ಪ್ರಭಾಕರ ೨ನೇ ವಿಧ.—ಶುದ್ಧಿಮಾಡಿದ ಪಾದರಸ ೧ ವರಹ ತೂಕ, ಶುದ್ಧಿಮಾಡಿದ ಹವಳಸರಿಗಂಧಕ ೨ ವರಹ ತೂಕ, ಶುದ್ಧಿಮಾಡಿದ ನಾಭಿ ಅರ್ಧ ವರಹ ತೂಕ, ತಾಂಬ್ರಭಸ್ಮ ಕಾಲುವರಹ ತೂಕ, ಚಿತ್ರಮೂಲ ೫ ವರಹ ತೂಕ, ಜಾಪತ್ರೆ ೬ ವರಹ ತೂಕ, ವಾಯುವಿಳಂಗ ೭ ವರಹ ತೂಕ, ರೇಣಿಕೆ ೮ ವರಹ ತೂಕ, ಭದ್ರಮುಸ್ತೆ ೯ ವರಹ ತೂಕ, ಗಂಟುಭಾರಂಗಿ ೧೦ ವರಹ ತೂಕ, ಯಾಲಕ್ಕಿ ೧೧ ವರಹ ತೂಕ, ನಾಗಕೇಸರಿ ೧೨ ವರಹ ತೂಕ, ಮೋಡಿ ೧೩ ವರಹ ತೂಕ, ಅಳಲೇಕಾಯಿಸಿಪ್ಪೆ ೧೪ ವರಹ ತೂಕ, ತಾರೇಕಾಯಿಸಿಪ್ಪೆ ೧೫ ವರಹ ತೂಕ, ನೆಲ್ಲೀಕಾಯಿ ೧೬ ವರಹ ತೂಕ, ಶೊಂಟಿ ೧೭ ವರಹ ತೂಕ, ಹಿಪ್ಪಲಿ ೧೮ ವರಹ ತೂಕ, ಮೆಣಸು ೧೯ ವರಹ ತೂಕ, ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಅರಿಯುವ ಜಿನಸುಗಳನ್ನು ಖಲ್ವದಲ್ಲಿಹಾಕಿ ಅರದು ಎಲ್ಲವನ್ನು ಸೇರಿಸಿ ಹಳೇಬೆಲ್ಲ ೧ ಶೇರು, ಜೇನುತುಪ್ಪ ೧ ಪಾವು ಹಾಕಿ ಅರದು ಇಟ್ಟುಕೊಳ್ಳುವದು. ಹೊತ್ತಿಗೆ ಮೆಣಸು ಪ್ರಮಾಣ ತಣ್ಣೀರಿನಲ್ಲಿ ಕಲಸಿಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೩-೫-೭-೯ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶ್ವಾಸಖಾಸ, ಕ್ಷಯ, ಪ್ರಮೇಹ, ವಿಷಮಜ್ವರ, ಸಂಗ್ರಹಣಿ, ಹೊಟ್ಟೆಶೂಲೆ, ಪಾಂಡು, ಕುಷ್ಠ, ಅಪಸ್ಮಾರ, ಸನ್ನಿ, ಸರ್ಪವಿಷ, ವೃಶ್ಚಿಕವಿಷ, ಕೈಕಾಲುವುರಿ, ರಕ್ತಮೇಹ ಇವೆಲ್ಲ ಗುಣವಾಗುವವು.

೨೨. ಮೃತ್ಯುಂಜಯ ರಸ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ತಾಳಕ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ಶುದ್ಧಿಮಾಡಿದ ಮಣಿಶಿಲೆ ೧ ತೊಲೆ, ಹೇಮಮಾಕ್ಷಿಕ ಭಸ್ಮ ೧ ತೊಲೆ, ತಾಮ್ರಭಸ್ಮ ೧ ತೊಲೆ, ಶುದ್ಧಿಮಾಡಿದ ಜಾಪಾಳ ೧ ತೊಲೆ ಇವುಗಳನ್ನು ಖಲ್ವದಲ್ಲಿಹಾಕಿ ನೆಲ ೨ಟಗಡ್ಡೆರಸದಲ್ಲಿ ಅರದು ಬಿಲ್ಲೆಮಾಡಿ ವಣಗಿಸಿ ೨ ಹಣತೆಯಲ್ಲಿಟ್ಟು ಕೆಮ್ಮಣ್ಣು ಒಟ್ಟೆ ಚೀಲುಮಾಡಿ ವಣಗಿಸಿ ಕುಕ್ಕುಟಪುಟವಿಟ್ಟು ತೆಗೆದು ಸಾಂಗಶೀತಲವಾದ ಮೇಲೆ ತೆಗದು ಖಲ್ವದಲ್ಲಿಹಾಕಿ ಬ್ಯಾಲದಯುಲೆರಸದಲ್ಲಿ ಅರದು ವಣಗಿಸಿ ಚೂರ್ಣಮಾಡಿ ಇದಕ್ಕೆ ಸಮ ಹಿಪ್ಪಲಿ, ಮೆಣಸು ಚೂರ್ಣ ಹಾಕಿ ಕಲಸಿ ಹೊತ್ತಿಗೆ ೪ ಗುರುಗಂಜಿ ಪ್ರಮಾಣ ಚೂರ್ಣ ಬಾಯಿಯಲ್ಲ ಹಾಕಿಕೊಂಡು ಬಿಸಿನೀರು ಕುಡಿಯುವದು ಇದರಿಂದ ೧೩ ಸನ್ನಿಪಾತ, ನೂತನಜ್ವರ, ಚಾತುರ್ಥಿಕಜ್ವರ, ಪಕ್ಷಜ್ವರ, ಮಾಸಜ್ವರ ನಿವಾರಣೆ ಆಗುವದು.

೭೩. ಅಮೃತಸಂಜೀವಿ ರಸ:—ಶುದ್ಧಿಮಾಡಿದ ಇಂಗಲೀಕ ೨ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ಕಾವೀಕಲ್ಲು ೧ ತೊಲೆ, ಶುದ್ಧಿಮಾಡಿದ ಜಾಪಾಳ ೨|| ತೊಲೆ, ಇವುಗಳನ್ನು ಖಲ್ವದಲ್ಲಿಹಾಕಿ ನಿಂಬೇಹಣ್ಣಿನರಸದಲ್ಲಿ ಅರದು ಗುರುಗಂಜಿ ಪ್ರಮಾಣ ಮಾತ್ರೆ ಮಾಡುವದು. ಬಿಳೇ ಜೀರಿಗೆ, ಕೊತ್ತುಂಬರಿಬೀಜ, ವಿಷ್ಣುಕ್ರಾಂತಿ, ಜೀವಿನಕಡ್ಡಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಅದರಲ್ಲಿ ೧ ಮಾತ್ರೆ ಕಲಸಿ ತೆಗೆದುಕೊಳ್ಳುವದು. ಇದರಿಂದ ಸಮಸ್ತ ಜ್ವರ ಗುಣವಾಗುವದು.

೭೪. ಅಮೃತಸಂಜೀವಿ ರಸ:—ಶುದ್ಧಿಮಾಡಿದ ಇಂಗಲೀಕ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ಶುದ್ಧಿಮಾಡಿದ ಯಲೆಕಪ್ಪರಿ ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೨ ತೊಲೆ, ಕಟುಕರೋಹಿಣಿ ೩ ತೊಲೆ, ಶುದ್ಧಿಮಾಡಿದ ಜಾಪಾಳ ೨|| ತೊಲೆ ಇವುಗಳನ್ನು ಖಲ್ವದಲ್ಲಿಹಾಕಿ ಹಸೀ ಶುಂಠೀರಸದಲ್ಲಿ ಚನ್ನಾಗಿ ಅರದು ಹೆಸರುಕಾಳು ಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಅನುಪಾನ ವಿಶೇಷಗಳಲ್ಲಿ ಕೊಡಲು ಸಮಸ್ತಜ್ವರ ಗುಣವಾಗುವದು.

೭೫. ಸೂರ್ಯಪ್ರಭಾಕರ ರಸ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ತಾಳಕ || ತೊಲೆ, ಶುದ್ಧಿಮಾಡಿದ ನಾಭಿ || ತೊಲೆ, ಚಿತ್ರಮೂಲ ೧ ತೊಲೆ, ವಾಯುವಿಳಂಗ ೧ ತೊಲೆ, ರೇಣಿಕೆ ೧ ತೊಲೆ, ಭದ್ರಮುಸ್ತೆ ೧ ತೊಲೆ, ಯಾಲಕ್ಕಿ ಕಾಲುತೊಲೆ, ನಾಗಕೇಸರಿ ೧ ತೊಲೆ, ಮೋಡಿ ೧ ತೊಲೆ, ತ್ರಿಕಟುಕ ೩ ತೊಲೆ, ತ್ರಿಫಲೆ ೩ ತೊಲೆ, ತಾಂಬ್ರಭಸ್ಮ ಕಾಲುತೊಲೆ, ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಅರಿಯುವ ಜಿನಸುಗಳನ್ನು ಖಲ್ವದಲ್ಲಿಹಾಕಿ ಅರದು ಇದಕ್ಕೆ ಸಮ ಹಳೇಬೆಲ್ಲ ಹಾಕಿ ಚನ್ನಾಗಿ ಅರದು ಕಡಲೇ ಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ತಣ್ಣೀರಿನಲ್ಲಿ ಕೊಡಲು ಪೈತ್ಯಹರ, ಅಕ್ಕಿತೊಳದ ನೀರಿನಲ್ಲಿ ಕೊಡಲು ವಾತಹರ, ಮಜ್ಜಿಗೆಯಲ್ಲಿ ಕೊಡಲು ಜಲೋದರಹರ, ಮೊಸರಿನಲ್ಲಿ ಕೊಡಲು ಗುಲ್ಮಶೂಲೆಹರ, ಸಕ್ಕರೆಯಲ್ಲಿ ಕೊಡಲು ವಾಂತಿಭ್ರಾಂತಿಹರ, ಹಸೀ ಶುಂಠೀರಸದಲ್ಲಿ ಕೊಡಲು ಸಕಲ ರೋಗಹರ, ಸರಿಯಾದ ಅನುಪಾನವಿಟ್ಟುಪ್ರಯೋಗಿಸಲು, ವಿಷಮಜ್ವರ, ಅಜೀರ್ಣಜ್ವರ, ಪಾಂಡುರೋಗ ಗುಣವಾಗುವದು.

೭೬. ಸೂರ್ಯಪ್ರಭಾವತಿ ರಸ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ಅರಸಿನ ೧ ತೊಲೆ, ಒಳ್ಳೇ ಬೇವಿನ ಸೊಪ್ಪು ಒಣಗಿದ್ದು ೧ ತೊಲೆ, ಹಿಪ್ಪಲಿ

೧ ತೊಲೆ, ಮೆಣಸು ೧ ತೊಲೆ, ವಾಯುವಿಳಂಗ ೧ ತೊಲೆ, ಭದ್ರಮುಸ್ತೆ ೧ ತೊಲೆ, ಶೊಂಟಿ ೧ ತೊಲೆ, ಚಿತ್ರಮೂಲ ೧ ತೊಲೆ, ಸೈಂದರಲವಣ ೧ ತೊಲೆ, ಜಂಗಲ ಕೋಷ್ಟ ೧ ತೊಲೆ, ಅಗಿಲುಶೊಂಟಿ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ಶುದ್ಧಿಮಾಡಿದ ಅತಿಬಜೆ ೧ ತೊಲೆ, ತಾಳೀಸಪತ್ರೆ ೧ ತೊಲೆ, ಬಜೆ ೧ ತೊಲೆ, ಶುದ್ಧಿಮಾಡಿದ ಅಶ್ವಗಂಧಿ ೧ ತೊಲೆ, ಮರದರಿಸಿನ ೧ ತೊಲೆ, ಮೋಡಿ ೧ ತೊಲೆ ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಶೋಧಿಸಿ ಅರಿಯುವ ಜಿನಸುಗಳನ್ನು ಖಲ್ವದಲ್ಲಿ ಹಾಕಿ ಅರದು ಎಲ್ಲವನ್ನು ಖಲ್ವದಲ್ಲಿ ಹಾಕಿ ಮೇಕೇ ಮೂತ್ರದಲ್ಲಿ ೫ ದಿನ ಅರದು ಗುರುಗಂಜಿ ಪ್ರಮಾಣ ಮಾತ್ರೆ ಮಾಡಿ ಅನುಪಾನವಿಶೇಷದಿಂದ ಕೊಟ್ಟರೆ ಸಕಲ ರೋಗಗಳು ಗುಣವಾಗುವದು ಹೊತ್ತಿಗೆ ೧ ಮಾತ್ರೆ ಜೇನು ತುಪ್ಪದಲ್ಲಿ ಕಲಸಿಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದ ರಿಂದ ಅತಿಸಾರ, ಅಗ್ನಿಮಾಂದ್ಯ, ಅಜೀರ್ಣ, ವಿಷೂಚಿ, ಗ್ರಹಣಿ, ಶೂಲೆ ಪಾಂಡು, ಮಹೋದರ, ಸನ್ನಿ, ಸರ್ವಜ್ವರ ಗುಣವಾಗುವದು.

೭೭. ಶೀತಭಂಜನ ರಸ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿ ಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ತಾಳಕ ೧ ತೊಲೆ, ಶುದ್ಧಿ ಮಾಡಿದ ಕಪರಿ ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು, ೧ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಹಾಗಲಸೊಪ್ಪಿನ ರಸದಲ್ಲಿ ಮರ್ದಿಸಿ ಒಂದು ತಾಂಬ್ರದ ಭರಣಿಯಲ್ಲಿ ಹಾಕಿ ಮೇಲೆ ತಾಂಬ್ರದ ಮುಚ್ಚಳ ಮುಚ್ಚಿ ವಾಲುಕಾ ಯಂತ್ರದಲ್ಲಿಟ್ಟು ವಲೆಯಮೇಲೆ ಇಕ್ಕಿ ಮೇಲೆ ಭತ್ತಹಾಕಿ ಅರಳು ಆಗುವ ಪರಿಯಂತರ ಸಣ್ಣದಾಗಿ ಉರಿಯನ್ನು ಹಾಕಿ ತೆಗದುಕೊಳ್ಳುವದು. ಸಾಂಗಶೀತಲವಾದಮೇಲೆ ಭರಣಿಯಲ್ಲಿರುವ ಔಷಧವನ್ನು ತೆಗೆದು ಅದರ ಸಮ ಮೆಣಸು ಚೂರ್ಣಹಾಕಿ ಖಲ್ವದಲ್ಲಿ ಹಾಕಿ ಹಾಗಲಸೊಪ್ಪಿನ ರಸದಲ್ಲಿ ಚನ್ನಾಗಿ ಅರದು ಗುರುಗಂಜಿ ಪ್ರಮಾಣ ಮಾತ್ರೆಮಾಡಿ ಹೊತ್ತಿಗೆ ೧ ಮಾತ್ರೆ ಬೆಳಿಗ್ಯೆ ಸಾಯಂಕಾಲ ಜೀರಿಗೆ ಚೂರ್ಣ, ಸಕ್ಕರೆಯಲ್ಲಿ ಕಲಸಿ ತೆಗೆದುಕೊಳ್ಳಲು ಏಕಾಹಿಕ ಜ್ವರ, ದ್ವ್ಯಾಹಿಕಜ್ವರ, ಚಾತುರ್ಥಿಕಜ್ವರ, ಚಳಿಜ್ವರ, ಪುರಾಣಜ್ವರ, ಸಮಸ್ತ ಅಜೀರ್ಣಜ್ವರ, ದಾರುಣಜ್ವರ ಮೊದಲಾದ ಜ್ವರಗಳು ಗುಣವಾಗುವದು.

೭೮. ಹುತಾಶನ ರಸ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿ ಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ಬಿಳಿಗಾ ರದ ಅರಳು ೧ ತೊಲೆ, ಜಂಗಲಕೋಷ್ಟ ೧ ತೊಲೆ, ಶೊಂಟಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ

ಖಲ್ವದಲ್ಲಿ ಹಾಕಿ ಗರುಗದಸೊಪ್ಪಿನ ರಸದಲ್ಲಿ ಚನ್ನಾಗಿ ಅರೆದು ಹೆಸರುಕಾಳು ಪ್ರಮಾಣ ಮಾತ್ರೆಮಾಡುವದು. ೧ ಮಾತ್ರೆ ಜೇನುತುಪ್ಪದಲ್ಲಿ, ಹಸೀಶುಂಟೀ ರಸದಲ್ಲಿ ಕಲಸಿ ಸೇವಿಸಲು ಅಜೀರ್ಣ, ಶ್ವಾಸ, ಖಾಸ, ಸಮಸ್ತ ಜ್ವರಗಳು ನಿವಾರಣೆ ಆಗುವದು.

೭೯. ಶೀತಾಂಶು ರಸ:—ಶುದ್ಧಿಮಾಡಿದ ಮಣಿಶಿಲ ೧ ತೊಲೆ, ಶುದ್ಧಿ ಮಾಡಿದ ತಾಳಕ ೧ ತೊಲೆ, ಶೊಂಟಿ ೨ ತೊಲೆ, ಹಿಪ್ಪಲಿ ೨ ತೊಲೆ, ಮೆಣಸು ೨ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಬೇವಿನಚಕ್ಕೆ ರಸದಲ್ಲಿ ಅರೆದು ಗುರು ಗಂಜಿ ಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಜೇನುತುಪ್ಪ ದಲ್ಲಿ, ಹಸೀಶುಂಟಿ ರಸದಲ್ಲಿ ಕೊಡಲು ಶೀತಜ್ವರ, ಸನ್ನಿಪಾತ, ಜ್ವರದಾಡ್ಡೆ, ಹೊಟ್ಟೆವುಬ್ಬರ, ಅನಾಹವಾತ, ತಾಪ, ಸರ್ವಾಂಗದಲ್ಲಿ ಉರಿ, ಬಿಕ್ಕಳಿಕೆ, ಅಗ್ನಿ ಮಾಂದ್ಯ, ಶೋಭೆ, ಭ್ರಮೆ ಇವು ಗುಣವಾಗುವವು.

೮೦. ಮಹಾಜ್ವರಾಂಕುಶ ರಸ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ಬಿಳಗಾರದ ಅರಳು ೧ ತೊಲೆ, ಶುದ್ಧಿಮಾಡಿದ ಉಮ್ಮತ್ತಿಬೀಜ ೩ ತೊಲೆ, ಶುಂಠಿ ೩ ತೊಲೆ, ಮೆಣಸು ೩ ತೊಲೆ, ಹಿಪ್ಪಲಿ ೩ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಹಸೀಶುಂಠೀ ರಸದಿಂದ ಚನ್ನಾಗಿ ಅರೆದು ಗುರುಗಂಜಿ ಪ್ರಮಾಣ ಮಾತ್ರೆ ಮಾಡಿ ಹೊತ್ತಿಗೆ ೧ ಮಾತ್ರೆ ನಿಂಬೇಹಣ್ಣಿನ ರಸದಲ್ಲಿ ಅಥವಾ ಹಸೀಶುಂಟೀ ರಸದಲ್ಲಿ ಸೇವಿಸಲು ಸನ್ನಿಪಾತಜ್ವರ, ಸಂತತ ಜ್ವರ, ಸತತಜ್ವರ, ತೃತೀಯಕಜ್ವರ, ಚಾತುರ್ಥಿಕಜ್ವರ, ವಿಷಮಜ್ವರ ಇವುಗಳು ಗುಣವಾಗುವದು.

೮೧. ಘೋಟಾಚೋಳೀ ರಸ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ತಾಳಕ ೧ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ಶುದ್ಧಿಮಾಡಿದ ಯಣ್ಣೆಬೀಗಾರ ಅರಳುಮಾಡಿ ದ್ದು ೧ ತೊಲೆ, ಶೊಂಟಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಅಳ ಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಶುದ್ಧಿಮಾಡಿದ ಜಾಪಾಳ ೬ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಹಸೀಶುಂಠೀ ರಸದಲ್ಲಿ ೧ ದಿನ, ಮುತ್ತಕದ ಹುವ್ವಿನ ರಸದಲ್ಲಿ ೧ ಜಾವ ಅರೆದು ಮೆಣಸಿನಕಾಳು ಪ್ರಮಾಣ ಮಾತ್ರೆಮಾಡುವದು ಅಜೀರ್ಣ, ಮಂದಾಗ್ನಿ, ಶಿರೋರೋಗ, ಶೀತಜ್ವರ, ವಿಷೂಚಿ, ವಿಷಮಜ್ವರ, ಸನ್ನಿಪಾತ ಕಕ್ಕೆ ೧ ಮಾತ್ರೆ ಹಸೀಶುಂಟೀ ರಸದಲ್ಲಿ ಕೊಡುವದು. ಸಂಗ್ರಹಣಿಗೆ ಹಸುವಿನ ಮಜ್ಜಿಗೆಯಲ್ಲಿ ಕೊಡುವದು. ವಾಯುವಿಗೆ ಪೋಮದ ಕಷಾಯದಲ್ಲಿ ಕೊಡುವದು.

ತಲೆತಿರುಗುವ ಪಿತ್ತ ಮತ್ತು ಪೈತ್ಯಕ್ಕೆ ಜೀರಿಗೆ ಕಷಾಯದಲ್ಲಿ ಕೊಡುವದು. ಶ್ಲೇಷ್ಮಜ್ವರಕ್ಕೆ ಹಿಪ್ಪಲಿಚೂರ್ಣ, ಜೇನುತುಪ್ಪ ಕಲಸಿ ಕೊಡುವದು. ಉಷ್ಣ ರೋಗಕ್ಕೆ ನೆಲ್ಲೀಕಾಯಿ ಕಷಾಯದಲ್ಲಿ ಕೊಡುವದು. ಪ್ರಮೇಹಕ್ಕೆ ಶ್ರೀಗಂಧದ ಕಷಾಯದಲ್ಲಿ ಕೊಡುವದು. ಬೇದಿ ಆಗುತ್ತಿದ್ದರೆ ನೇರಳೆಚಕ್ಕೆ ರಸದಲ್ಲಿ ಕೊಡುವದು. ಆಮ್ಲಪೈತ್ಯಕ್ಕೆ ಹೇರಳೆಹಣ್ಣಿನ ರಸದಲ್ಲಿ ಕೊಡುವದು. ಪಶಿಂಕೆಗೆ ಮೇಕೆಮೂತ್ರದಲ್ಲಿ ಕೊಡುವದು. ಹೊಟ್ಟೆನೋವಿಗೆ ನುಗ್ಗೇಚಕ್ಕೆ ರಸದಲ್ಲ ಕೊಡು ವದು. ವೀರ್ಯನಷ್ಟಕ್ಕೆ, ನಷ್ಟೇಂದ್ರಿಯಕ್ಕೆ ಬಿಳೇಕೊಮ್ಮೇಬೇರು, ಯಷ್ಟಿಮಧುಕ ಇವು ಚೂರ್ಣಮಾಡಿ ಹಸುವಿನ ತುಪ್ಪದಲ್ಲಿ ಕಲಸಿಕೊಡುವದು. ಶೋಭೆಗೆ ಗರುಗದಸೊಪ್ಪಿನ ರಸದಲ್ಲಿ ಕೊಡುವದು. ಪಾಂಡುವಿಗೆ ಕೆಂಪುಕೊಮ್ಮೆಬೇರಿನ ರಸದಲ್ಲಿ ಕೊಡುವದು.

೮೨. ಅಗ್ನಿಕುಮಾರ ರಸ:—ಶುದ್ಧಿಮಾಡಿದ ಪಾದರಸ ಭಸ್ಮ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೨ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ಬೆಳಗಾರದ ಅರಳು ೧ ತೊಲೆ, ಶೊಂಟಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀ ಕಾಯಿ ೧ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಲಕ್ಕಲಿಸೊಪ್ಪಿನ ರಸದಲ್ಲಿ ೧ ದಿನ ಭಾವನೆ, ಚಿತ್ರಮೂಲದ ಬೇರಿನ ಕಷಾ ಯದಲ್ಲಿ ೧ ದಿನ ಭಾವನೆ, ತಪಸಿಚಕ್ಕೆ ಕಷಾಯದಲ್ಲಿ ೧ ದಿನ ಭಾವನೆ, ನೆಲಗುಳ್ಳದ ರಸದಲ್ಲಿ ೧ ದಿನ ಭಾವನೆ, ಹೆಗ್ಗುಳ್ಳದ ರಸದಲ್ಲಿ ೧ ದಿನ ಭಾವನೆಮಾಡಿ ಗುರು ಗಂಜಿಪ್ರಮಾಣ ಮಾತ್ರೆಮಾಡುವದು. ಹೊತ್ತಿಗೆ ೧ ಮಾತ್ರೆ ಹಸೀಶುಂಟೀ ರಸದಲ್ಲಿ ಹಿಪ್ಪಲಿಚೂರ್ಣ ಕಲಸಿಕೊಡಲು ಸನ್ನಿಪಾತ, ತ್ರಿದೋಷ, ಮಂದಾಗ್ನಿ ಜ್ವರ, ಘನವಾದ ವಾಯು, ವಿಷಮಜ್ವರ ಗುಣವಾಗುವದು.

೮೩. ಆನಂದಭೈರವಿ ರಸ:—ಶುದ್ಧಿಮಾಡಿದ ಇಂಗಲೀಕ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳು ಮಾಡಿದ್ದು ೧ ತೊಲೆ, ಹಿಪ್ಪಲಿ ೧ ತೊಲೆ, ಶೊಂಟಿ ೧ ತೊಲೆ, ಮೆಣಸು ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲಿ ಅರದು ಗುರುಗಂಜಿ ಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಹಸೀಶುಂಟೀ ರಸದಲ್ಲಿ ಕೊಡಲು ಸಮಸ್ತ ಪೈತ್ಯಗಳು, ಜ್ವರಾತಿಸಾರ ಗಳು ಗುಣವಾಗುವದು.

೮೪. ಮಹಾ ಜ್ವರಾಂಕುಶ:—ಶುದ್ಧಿಮಾಡಿದ ಪಾದರಸ ॥ ತೊಲೆ, ಶುದ್ಧಿ ಮಾಡಿದ ಹವಳಸರಿಗಂಧಕ ॥ ತೊಲೆ, ಶುದ್ಧಿಮಾಡಿದ ವತ್ಸನಾಭಿ ॥ ತೊಲೆ, ಬೆಳಗಾರದ ಅರಳು ॥ ತೊಲೆ, ಶುದ್ಧಿಮಾಡಿದ ಕರೇವುಮ್ಮತ್ತಿಬೀಜ ೧॥ ತೊಲೆ,

ನೆಲತಂಗಡಿಬೀಜ ೬ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಈ ಚೂರ್ಣ ೨ ಗುರುಗಂಜಿ ಪ್ರಮಾಣ ನಿಂಬೇಹಣ್ಣಿನ ರಸದಲ್ಲಿಯಾಗಲಿ, ಹಸೀ ಶುಂಟೀ ರಸದಲ್ಲಿಯಾಗಲಿ ಸೇವಿಸಿದರೆ ಸನ್ನಿಪಾತ ಜ್ವರಗಳು, ಸತತಜ್ವರ, ತೃತೀಯಕಜ್ವರ, ಚಾತುರ್ಥಿಕಜ್ವರ, ವಿಷಮಜ್ವರ ಗುಣವಾಗುವದು.

೮೫. ಬಾಲಾರ್ಕ ರಸ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೨ ತೊಲೆ, ಶುದ್ಧಿಮಾಡಿದ ಇಂಗಳೀಕ ೩ ತೊಲೆ, ಶುದ್ಧಿಮಾಡಿದ ಜಾಪಾಳ ೪ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಗಿರಿಕರ್ಣಿಕೆ ಬೇರಿನ ಕಷಾಯದಲ್ಲಿ ಒಂದು ದಿನ ಅರದು ಗುರುಗಂಜಿಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಹಸೀಶುಂಟೀರಸದಲ್ಲಿ ಕೊಡಲು ಜ್ವರ ಗುಣವಾಗುವದು.

೮೬. ಶೀತಾರಿ ರಸ:—ಶುದ್ಧಿಮಾಡಿದ ತಾಳಕ ೧ ತೊಲಿ, ಶಂಕುಭಸ್ಮ ೧ ತೊಲೆ, ಶುದ್ಧಿಮಾಡಿದ ಮೈಲತುತ್ತ ೩ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಲೋಳಿಸರದ ರಸದಲ್ಲಿ ಮರ್ಧನೆಮಾಡಿ ಬಿಲ್ಲೆ ಕಟ್ಟಿ ಒಣಗಿಸಿ ೨ ಹಣತೆಗಳಲ್ಲಿಟ್ಟು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಒಣಗಿಸಿ ಒಂದು ಗಜಪುಟ ಹಾಕಿ ಸಾಂಗಶೀತಲವಾದನಂತರ ತೆಗೆದು ಖಲ್ವದಲ್ಲ ಚನ್ನಾಗಿ ಅರದು ಇಟ್ಟುಕೊಳ್ಳುವದು. ಹೊತ್ತಿಗೆ ಹೆಸರುಕಾಳು ಪ್ರಮಾಣ ಕಲ್ಲುಸಕ್ಕರೆಯಲ್ಲಿ ಕಲಸಿ ತೆಗೆದುಕೊಳ್ಳಲು ಐಕಾಹಿಕ, ದ್ವಾಹ್ಯಿಕ, ತ್ರ್ಯಾಹಿಕ, ಚಾತುರ್ಥಿಕ ಜ್ವರಗಳು ಗುಣವಾಗುವವು.

೮೭. ಶೀತಾಂಕುಶ ರಸ:—ಶುದ್ಧಿಮಾಡಿದ ಮೈಲತುತ್ತ ೧ ತೊಲೆ, ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ತಾಳಕ ೧ ತೊಲೆ, ಶುದ್ಧಿಮಾಡಿದ ಯಣ್ಣೆಬಿಳಗಾರ ಅರಳುಮಾಡಿದ್ದು ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ಶುದ್ಧಿಮಾಡಿದ ಕಪರಿ ೧ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಹಾಗಲಸಮೂಲದ ರಸದಿಂದ ೧ ದಿನ ಅರದು ಹೆಸರುಕಾಳು ಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಸಕ್ಕರೆಯಲ್ಲಿ ಆಗಲಿ, ಜೀರಿಗೆ ಚೂರ್ಣದಲ್ಲಿ ಆಗಲಿ ಕಲಸಿ ಸೇವಿಸಿದರೆ ಐಕಾಹಿಕ, ದ್ವಾಹ್ಯಿಕ, ತ್ರ್ಯಾಹಿಕ, ಶೀತಜ್ವರ ಗುಣವಾಗುವದು.

೮೮. ಕನಕಸುಂದರ ರಸ:—ಶುದ್ಧಿಮಾಡಿದ ಇಂಗಲೀಕ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ಶುದ್ಧಿಮಾಡಿದ ಯಣ್ಣೆಬಿಳಗಾರ ಅರಳುಮಾಡಿದ್ದು ೧ ತೊಲೆ, ಶುದ್ಧಿಮಾಡಿದ ಉಮ್ಮತ್ತಿಬೀಜ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ ಇವುಗಳನ್ನು ಖಲ್ವದಲ್ಲ ಹಾಕಿ ಭಂಗೀಸೊಪ್ಪಿನ ರಸದಲ್ಲ ಅರದು ಗುರುಗಂಜಿ ಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಕೊಡುವದು. ಇದರಿಂದ

ಗ್ರಹಣಿ, ಅತಿಸಾರ, ಜ್ವರಾತಿಸಾರ, ಹೆಂಗಸರ ಪ್ರದರರೋಗ ಇವುಗಳು ಗುಣವಾಗುವದು.

೮೯. ಪಂಚವಕ್ತ್ರ ರಸ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಮೆಣಸು ೧ ತೊಲೆ, ಸೂರ್ತಿಬೆಳಗಾರ ಅರಳುಮಾಡಿದ್ದು ೧ ತೊಲೆ, ಹಿಪ್ಪಲಿ ೧ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಕರೇವುಮ್ಮತ್ತಿಸೊಪ್ಪಿನ ರಸದಿಂದ ಒಂದು ದಿನ ಅರದು ಗುರುಗಂಜಿ ಪ್ರಮಾಣ ಮಾತ್ರೆಮಾಡಿ ಎಕ್ಕದಬೇರಿನ ಕಷಾಯದಲ್ಲಿ ತ್ರಿಕಟುಕ ಚೂರ್ಣ ಬೆರಸಿ ಮೇಲ್ಕಂಡ ಮಾತ್ರೆಯಲ್ಲಿ ೧ ಮಾತ್ರೆಯನ್ನು ಕಲಸಿ ಸೇವಿಸಲು ಸನ್ನಿಪಾತ ಗುಣವಾಗುವದು. ಜೇನುತುಪ್ಪದಲ್ಲಿ ಸೇವಿಸಿದರೆ ಕಫರೋಗಗಳು ಗುಣವಾಗುವವು.

೯೦. ಮೃತಸಂಜೀವನೀ ರಸ:— ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೨ ತೊಲೆ, ಅಭ್ರಕಭಸ್ಮ ೧ ತೊಲೆ, ಲೋಹಭಸ್ಮ ೧ ತೊಲೆ, ತಾಮ್ರಭಸ್ಮ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ಶುದ್ಧಿಮಾಡಿದ ತಾಳಕ ೧ ತೊಲೆ, ಶುದ್ಧಿಮಾಡಿದ ಕಂಕುಷ್ಠ ೧ ತೊಲೆ, ಶುದ್ಧಿಮಾಡಿದ ಮಣಿಶಿಲೆ ೧ ತೊಲೆ, ಶುದ್ಧಿಮಾಡಿದ ಇಂಗಲೀಕ ೧ ತೊಲೆ, ಚಿತ್ರಮೂಲ ೧ ತೊಲೆ, ಗಜಹಿಪ್ಪಲಿ ೧ ತೊಲೆ, ಅತಿಬಜೆ ೧ ತೊಲೆ, ತ್ರಿಕಟುಕ ೩ ತೊಲೆ, ಹೇಮಮಾಕ್ಷಿಕ ೧ ತೊಲೆ, ಗರುಗದಬೇರು ೧ ತೊಲೆ, ರೇಣುಕೆ ೧ ತೊಲೆ, ಕೊನ್ನಾರಿಗಡ್ಡೆ ೧ ತೊಲೆ ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ, ಅರಿಯುವ ಜಿನಸುಗಳನ್ನು ಖಲ್ವದಲ್ಲಿ ಹಾಕಿ ಅರದು ಎಲ್ಲವನ್ನು ಸೇರಿಸಿ ಹಸೀಶುಂಠೀ ರಸದಲ್ಲಿ ಮೂರುದಿನ ಮರ್ದನೆಯಂ ಮಾಡಿದ ಬಳಿಕ ಲಕ್ಕಲಿ ಸೊಪ್ಪಿನ ರಸ, ಭಂಗೀ ರಸ, ನಿಂಬೇಹಣ್ಣಿನ ರಸ, ಪುಳ್ಳಂಪುರುಚೆ ರಸ ಇವುಗಳೊಳು ಒಂದೊಂದರಲ್ಲಿ ಒಂದೊಂದು ದಿನಪ್ರಕಾರ ಮರ್ದನೆಮಾಡಿ ಒಣಗಿಸಿ ಗಾಜಿನಕುಪ್ಪೆಯಲ್ಲಿ ತುಂಬಿ ವಾಲುಕಾಯಂತ್ರದಲ್ಲಿ ಎರಡುಝಾವ ಪಾಕವಂಮಾಡಿ ತೆಗದುಕೊಂಡು ಹಶೀಶುಂಠೀ ರಸದಲ್ಲಿ ಮರ್ದಿಸಿ ಗುಂಜಾಮಾತ್ರ ಗುಳಿಗೆಯಂ ಮಾಡಿ ಹಸೀಶುಂಠೀ ರಸದಲ್ಲಾದರೂ ಹಿಪ್ಪಲಿ ಜೇನುತುಪ್ಪಗಳಲ್ಲಾದರು ಕೊಡಲು ಸನ್ನಿಪಾತ ಶಮನವಹುದು. ಅಸಾಧ್ಯವಾದ ಅಂತಕಸನ್ನಿಪಾತವಾದರೂ ಶಮನವಹುದು. ಆನಂದಭೈರವ ಔಷಧಕ್ಕೂ ಇದೇ ಗುಣ.

೯೧. ಜ್ವರಾಂಕುಶ:—ಜಿಂಕೇಕೊಂಬು ಸಣ್ಣಗೆ ತುಂಡುಗಳಾಗಿ ಮಾಡಿ ಒಂದು ಮಡಿಕೆಯಲ್ಲಿ ಹಾಕಿ ಜ್ವಾಲಾಮುಖಿ ರಸವನ್ನು ಹುಯಿದು ಮೇಲೆ ಮುಚ್ಚಳ ಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ವಣಗಿಸಿ ವಲೆಯಮೇಲೆ ಇಟ್ಟು ಗಾಢಾಗ್ನಿಯಿಂದ ೨ ಜಾವ ಉರಿಹಾಕಿ ಸಾಂಗಶೀತಲವಾದನಂತರ ತೆಗೆದುನೋಡಲು ಭಸ್ಮ

ವಾಗಿರುವದು. ಈ ಭಸ್ಮಕ್ಕೆ ನಾಲ್ಕರಲ್ಲಿ ಒಂದುಭಾಗ ತ್ರಿಕಟುಕ ಚೂರ್ಣವನ್ನು ಬೆರಸಿ ೪ ಗುಂಜಿ ಪ್ರಮಾಣ ವೀಳೆಯದೆಲೆಯ ರಸದಲ್ಲಿ ಸೇವಿಸಿದರೆ ವಾತ, ಪಿತ್ತ, ಜ್ವರಗಳು ಗುಣವಾಗುವವು.

೯೨. ಅಮೃತಸಂಜೀವಿನೀ ರಸ:— ಶುದ್ಧಿಮಾಡಿದ ನಾಭಿ ೧ ತೊಲೆ, ಹಿಪ್ಪಲಿ ೧ ತೊಲೆ, ಶುದ್ಧಿಮಾಡಿದ ಇಂಗಲೀಕ ೨ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲಿ ಅರದು ಉದ್ದಿನಕಾಳು ಪ್ರಮಾಣ ಮಾತ್ರೆಮಾಡಿ ಅನುಪಾನಗಳಿಂದ ಕೊಡಲು ವಾತಪೈತ್ಯಜ್ವರಗಳು ಗುಣವಾಗುವವು.

೯೩. ತ್ರಿಭುವನಕೀರ್ತಿ ರಸ:—ಶುದ್ಧಿಮಾಡಿದ ಇಂಗಳೀಕ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ಶೊಂಟಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಸೂರ್ಶಿಬೆಳಗಾರ ಅರಳುಮಾಡಿದ್ದು ೧ ತೊಲೆ, ಮೋಡಿ ೧ ತೊಲೆ ಇವುಗಳನ್ನು ಚೂರ್ಣಮಾಡಿ ಖಲ್ವದಲ್ಲಿ ಹಾಕಿ ತುಲಸೀಯಲೆ ರಸದಲ್ಲ ೧ ದಿನ, ಹಸೀಶುಂಟೀ ರಸದಲ್ಲಿ ೧ ದಿನ, ಕರೇವುಮ್ಮತ್ತಿಸೊಪ್ಪಿನ ರಸದಿಂದ ೧ ದಿನ ಅರದು ಗುರುಗಂಜಿಪ್ರಮಾಣ ಮಾತ್ರೆಮಾಡಿ ದೇಹತತ್ವವನ್ನರಿತು ಹಸೀಶುಂಟೀ ರಸದಲ್ಲಿ ೧ ಮಾತ್ರೆ ಕೊಡಲು ಸಮಸ್ತಜ್ವರಗಳು, ೧೩ ಸನ್ನಿಪಾತಗಳು ಗುಣವಾಗುವವು.

೯೪. ಸೂತರಾಜಮೃತಪ್ರಾಣದಾಯಿ ರಸ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ಯಣ್ಣೆ ಬೆಳಗಾರ ಅರಳುಮಾಡಿದ್ದು ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಕರೇವುಮ್ಮತ್ತಿಬೀಜದ ಕಷಾಯದಿಂದ ೩ ಜಾವ ಶುದ್ಧಿಮಾಡಿದ ವತ್ಸನಾಭಿ ಕಷಾಯದಿಂದ ೩ ಜಾವ, ತಂಗಡಿಬೀಜದ ಕಷಾಯದಲ್ಲಿ ೩ ಜಾವ, ತ್ರಿಕಟುಕ ಕಷಾಯದಿಂದ ೫ ಜಾವ ಅರದು ಗುರುಗಂಜಿಪ್ರಮಾಣ ಮಾತ್ರೆ ಮಾಡಿ ಅನುಪಾನಗಳಿಂದ ಕೊಡಲು ಸರ್ವಜ್ವರಗಳು ಗುಣವಾಗುವವು. ಈ ಮಾತ್ರೆಯನ್ನು ತುಂಗೇಗಡ್ಡೆ ಕಷಾಯದಲ್ಲಿ ಕೊಡಲು ಜ್ವರಾತಿಸಾರವು ಗುಣವಾಗುವದು. ಗ್ರಹಣಿರೋಗ, ಮೂಲವ್ಯಾಧಿ ಇವುಗಳಿಗೆ ಜೇನುತುಪ್ಪ, ಸಕ್ಕರೆ ಅನುಪಾನದಿಂದಲು, ವಾತಜ್ವರಕ್ಕೆ ತ್ರಿಕಟುಕ ಕಷಾಯದಲ್ಲಿಯು, ಕಂಪವಾಯು, ಬಾಹುವಾಯು, ಏಕಾಂಗವಾಯು ಇವುಗಳಿಗೆ ಚಿತ್ರಮೂಲದ ಕಷಾಯದಲ್ಲಿಯು ಸೇವಿಸುವದು.

೯೫. ಆನಂದಭೈರವ ರಸ:—ಶುದ್ಧಿಮಾಡಿದ ನಾಭಿ, ಶುದ್ಧಿಮಾಡಿದ ಇಂಗಲೀಕ, ಸೂರ್ಶಿಬೆಳಗಾರ ಅರಳುಮಾಡಿದ್ದು, ಮೆಣಸು, ಹಿಪ್ಪಲಿ, ಶೊಂಟಿ ಇವುಗಳನ್ನು ಸಮಭಾಗ ನಿಂಬೇಹಣ್ಣಿನ ರಸದಿಂದ ಅರದು ಮೆಣಸುಪ್ರಮಾಣ ಮಾತ್ರೆಮಾಡಿ ಅನುಪಾನವಿಶೇಷಗಳಿಂದ ಕೊಡಲು ಸಕಲಪೈತ್ಯಗಳು, ಅತಿಸಾರಗಳು, ಜ್ವರಗಳು ಗುಣವಾಗುವವು.

೯೬. ಲಘ್ವಗ್ನಿಕುಮಾರಿ ರಸ:—ಶುದ್ಧಿಮಾಡಿದ ಪಾದರಸ ೧ ತೊಲೆ, ತಾಂಬ್ರಭಸ್ಮ ೧ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ಶುದ್ಧಿಮಾಡಿದ ಹವಳ ಸರಿಗಂಧಕ ೨ ತೊಲೆ, ಶೊಂಟಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಇವುಗಳನ್ನು ಖಲ್ವದಲ್ಲಿ ಹಾಕಿ ಲಕ್ಕಲಿಸೊಪ್ಪಿನ ರಸ, ನೆಲಗುಳ್ಳದ ಬೇರಿನ ರಸ, ಚಿತ್ರಮೂಲದ ರಸ, ತುರಕಳ್ಳೀಬೇರಿನ ರಸ, ದುಸ್ನಾರೆಬೇರಿನ ರಸ, ಗೊಡ್ಡುಹಾಗಲಬೇರಿನ ರಸ, ಕರೇಕಾಚಿನೂಪ್ಪಿನ ರಸ, ಹಾವುಮೆಕ್ಕೇಕಾಯಿ ಬೇರಿನ ರಸ, ಈ ರಸಗಳಲ್ಲ ಪ್ರತಿಯೊಂದು ರಸದಲ್ಲಿಯೂ ಒಂದೊಂದುದಿನ ಪ್ರತ್ಯೇಕವಾಗಿ ಅರದು ಉದ್ದಿನಕಾಳು ಪ್ರಮಾಣ ಮಾತ್ರೆಮಾಡಿ ಹಸೀ ಶುಂಠೀ ರಸದಲ್ಲಿ ೧ ಮಾತ್ರೆಕೊಡಲು ಸನ್ನಿಪಾತಕಗಳು, ತ್ರಿದೋಷ, ಶೀತಾಂಗ ವಾತ, ಕೈಕಾಲು ಹಿಡಿತ ಗುಣವಾಗುವವು.

೯೭. ಸಿಂಧೂರಭೂಷಣ ರಸ:—ಅಭ್ರಕಭಸ್ಮ ೧ ತೊಲೆ, ಶುದ್ಧಿಮಾಡಿದ ರಸಸಿಂಧೂರ ೧ ತೊಲೆ, ಶುದ್ಧಿಮಾಡಿದ ಹವಳಸರಿ ಗಂಧಕ ೧ ತೊಲೆ, ಸೂರ್ತಿಬೆಳ ಗಾರ ಅರಳುಮಾಡಿದ್ದು ೧ ತೊಲೆ ಇವುಗಳನ್ನು ಕರೇವುಮ್ಮತ್ತಿಸೊಪ್ಪಿನ ರಸದಲ್ಲ ಚನ್ನಾಗಿ ಅರದು ಉದ್ದಿನಕಾಳುಪ್ರಮಾಣ ಮಾತ್ರೆಮಾಡಿ ೧ ಮಾತ್ರೆ ಜೇನುತುಪ್ಪ ದಲ್ಲಿ ಕಲಸಿಕೊಡಲು ಕುಷ್ಠಗಳು, ಕಾಮಾಲೆಗಳು, ಶ್ಲೇಷ್ಮರೋಗಗಳು, ಪೈತ್ಯ ರೋಗಗಳು, ವಾತರೋಗಗಳು, ಸಮಸ್ತಶೂಲೆಗಳು, ಪ್ರಮೇಹಗಳು, ೧೩ ಸನ್ನಿ ಪಾತಗಳು, ಅತಿಸಾರಗಳು, ಶ್ಲೇಷ್ಮ, ಪಾಂಡುಸಂಬಂಧ ಜ್ವರಗಳು, ದ್ವಂದ್ವಜ್ವರ, ತ್ರಿದೋಷ, ರಾಜಯಕ್ಷ್ಮ, ದ್ವಂದ್ವದಿಂದ ಹುಟ್ಟಿದ ಮೂತ್ರಕೃಚ್ಛ್ರ, ಸಮಸ್ತ ಗಳರೋಗಗಳು ನಿವಾರಣಯಾಗಿ ವೀರ್ಯವೃದ್ಧಿ, ದೇಹಪುಷ್ಟಿ, ಕಾಂತಿ ಇವು ಗಳನ್ನು ಉಂಟುಮಾಡುವುದು. ಈ ಔಷಧವನ್ನು ಬಂಜೆಯು ಸ್ತ್ರೀಗಳಿಗೆ ಕೊಟ್ಟರೆ ಸಂತಾನವನ್ನುಂಟುಮಾಡುವುದು. ಇದು ಅನುಪಾನವಿಶೇಷಗಳಿಂದ ಕೊಡಲು ಸಮಸ್ತರೋಗಗಳು ಗುಣವಾಗುವವು.

೯೮. ನವಾನಂದ ಭೈರವೀ ರಸ:—ಶುದ್ಧಿಮಾಡಿದ ಇಂಗಲೀಕ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ತಾಮ್ರಭಸ್ಮ ೧ ತೊಲೆ, ಸೂರ್ತಿಬೆಳಗಾರ ಅರಳುಮಾಡಿದ್ದು ೧ ತೊಲೆ, ತ್ರಿಕಟುಕ ೩ ತೊಲೆ, ಶುದ್ಧಿಮಾಡಿದ ಕರೀವುಮ್ಮತ್ತಿದಬೀಜ ೧ ತೊಲೆ ಇವುಗಳನ್ನು ಖಲ್ವ ದಲ್ಲಹಾಕಿ ಭಂಗೀಸೊಪ್ಪಿನ ರಸದಲ್ಲಿ ಒಂದುದಿನ ಮರ್ದಿಸಿ ಗುರುಗಂಜಿ ಪ್ರಮಾಣ ಮಾತ್ರೆಮಾಡಿ ಹೊತ್ತಿಗೆ ೧ ಮಾತ್ರೆಯನ್ನು ಯಕ್ಕದಬೇರಿನ ಕಷಾಯದಲ್ಲ ತ್ರಿಕಟುಕ ಚೂರ್ಣ ಬೆರಸಿ ಸೇವಿಸಲು ದುಸ್ತರವಾದ ಸನ್ನಿಪಾತವನ್ನು ಪರಿಹರಿ ಸುವುದು.

೯೯. ಸಪ್ತಾನಂದಭೈರವಿ ರಸ:—ಶುದ್ಧಿಮಾಡಿದ ಇಂಗಲೀಕ ೧ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ, ತ್ರಿಕಟುಕ ೩ ತೊಲೆ, ಸೂರ್ತಿಬೆಳಗಾರ ಅರಳು ಮಾಡಿದ್ದು ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಇವುಗಳನ್ನು ಖಲ್ವದಲ್ಲಿಹಾಕಿ ನಿಂಬೇಹಣ್ಣಿನ ರಸದಿಂದ ನಾಲ್ಕುನೂರ್ರುಜಾವ ಮರ್ದಿಸಿ ಗುರುಗಂಜಿ ಪ್ರಮಾಣ ಗುಳಿಗೆಯಂಮಾಡಿ ಒಂದುಗುಳಿಗೆ ಕಾಡುಮೆಣಸಿನ ರಸದಲ್ಲಿ ತ್ರಿಕಟುಕ ಚೂರ್ಣಬೆರಸಿ ಕೊಡಲು ಸನ್ನಿ, ಜ್ವರ, ಕಾಸ, ಶ್ವಾಸ, ಅತಿಸಾರ, ಗ್ರಹಣಿ, ಅಗ್ನಿಮಾಂದ್ಯ, ಮುಖರೋಗ ಇವಷ್ಟೂ ಶಮನವಹವು, ಜೀರಿಗೆ ಆವರಿಕೆ ಹೂವಿನ ಚೂರ್ಣಸಹಿತ ಮಜ್ಜಿಗೆಯಿಂದ ಕೊಡಲು ಪ್ರಮೇಹ ಹರವಹುದು

೧೦೦ ಅಗ್ನಿತುಂಡಿ ರಸ:—ಶುದ್ಧಿಮಾಡಿದ ಪಾದರಸ, ಶುದ್ಧಿಮಾಡಿದ ಹವಳಸರಿಗಂಧಕ, ಸೂರ್ತಿಬೆಳಗಾರ ಅರಳುಮಾಡಿದ್ದು, ಶುದ್ಧಿಮಾಡಿದ ನಾಭಿ, ಸರ್ಜಕ್ಷಾರ, ಯವಕ್ಷಾರ, ಸೈಂಧರಲವಣ, ಸೌವರ್ಚಲವಣ, ಸಮುದ್ರಲವಣ, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಬಿಳೇಜೀರಿಗೆ, ಅಜಮೋದ, ವಾಯುವಿಳಂಗ, ಚಿತ್ರಮೂಲ ಇವುಗಳನ್ನು ಸಮತೂಕವಾಗಿ ಒಂದೊಂದು ತೊಲೆಯಷ್ಟು ತಂದು ಮೊದಲು ರಸವನ್ನು ಗಂಧಕವನ್ನು ಸೇರಿಸಿ ಖಲ್ವದಲ್ಲಿ ಹಾಕಿ ಅರದು ಇಟ್ಟುಕೊಂಡು ಶುದ್ಧಿಮಾಡಿದ ೧೬ ತೊಲೆ ವಿಷಮುಷ್ಟಿ ಬೀಜಗಳನ್ನು ಕುಟ್ಟಿ ಚೂರ್ಣಮಾಡಿ ಮೇಲ್ಕಂಡ ಖಜ್ಜಲಿಯೊಡನೆ ಸೇರಿಸಿ ಅನಂತರ ಮಿಕ್ಕಿದ ಔಷಧಗಳನ್ನು ಕುಟ್ಟಿ ಚೂರ್ಣಮಾಡಿ ಬೆರಸಿ ನಿಂಬೇಹಣ್ಣಿನ ರಸದಲ್ಲಿ ೭ ದಿವಸ ಭಾವನೆ ೭ ದಿವಸ ಮರ್ದನೆಮಾಡಿ ಮೆಣಸು ಪ್ರಮಾಣ ಮಾತ್ರೆಯನ್ನು ಮಾಡಿ ಇಟ್ಟುಕೊಳ್ಳುವದು. ಈ ಮಾತ್ರೆ ಸೇವನೆಯಿಂದ ದೀಪನವು, ಪಾಚನವು, ಜ್ವರಹರವು. ಇದಕ್ಕೆ ಅನುಪಾನ:—ಅಗ್ನಿಮಾಂದ್ಯಕ್ಕೆ ಬೆಳಿಗ್ಗೆ ಹಸೀಶುಂಟೀ ರಸದಲ್ಲಿ ೧ ಮಾತ್ರೆಯು, ಸಾಯಂಕಾಲ ಜೀರಿಗೆ ಕಷಾಯದಲ್ಲಿ ೧ ಮಾತ್ರೆ ಕೊಡಬೇಕು. ಅಜೀರ್ಣ ಜ್ವರಕ್ಕೆ ಶೊಂಟಿ, ಮೆಣಸು ಕಷಾಯದಲ್ಲಿ ಕೊಡಬೇಕು. ಜ್ವರ, ಅಗ್ನಿಮಾಂದ್ಯ, ಹೊಟ್ಟೆನೋವುಗಳಿಗೆ ಮೆಣಸು ಕಷಾಯದಲ್ಲಿ ಕೊಡುವದು.

೧೦೧. ಆದಿತ್ಯ ರಸ:—ಶುದ್ಧಿಮಾಡಿದ ಇಂಗಲೀಕ, ಶುದ್ಧಿಮಾಡಿದ ಹವಳಸರಿಗಂಧಕ, ಶುದ್ಧಿಮಾಡಿದ ನಾಭಿ, ಶೊಂಟಿ, ಹಿಪ್ಪಲಿ, ಮೆಣಸು, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಜಾಕಾಯಿ, ಲವಂಗ, ಸಮುದ್ರಲವಣ, ಸೈಂಧರಲವಣ, ಸೌವರ್ಚಲವಣ, ಕಾಚಲವಣ, ಬಿಡಾಲವಣ ಇವು ಜಿನಸಿಗೆ ೧-೧ ತೊಲೆ, ಇಂಗಲೀಕವನ್ನು ಗಂಧಕವನ್ನು ಮೊದಲಲ್ಲಿ ಖಲ್ವದಲ್ಲಿ ಹಾಕಿ ಚೆನ್ನಾಗಿ ಅರದು ಇಟ್ಟುಕೊಳ್ಳುವದು. ನಂತರ ಲವಣಗಳನ್ನು ಅರೆದು ಬೇರೆ ಇಟ್ಟುಕೊಳ್ಳುವದು. ಅನಂತರ ಮಿಕ್ಕ ವಸ್ತುಗಳನ್ನು ಕುಟ್ಟಿ ಚೂರ್ಣ

ಮಾಡಿ ಶೋಧಿಸಿ ಎಲ್ಲವನ್ನು ಒಂದಾಗಿ ಸೇರಿಸಿ ಖಲ್ವದಲ್ಲಿ ಹಾಕಿ ಮಾದವಾಳದ ಹಣ್ಣಿನ ರಸ, ನಿಂಬೇಹಣ್ಣಿನ ರಸ, ಹೇರಳಿಹಣ್ಣಿನ ರಸ, ದಾಳಿಂಬರೇಹಣ್ಣಿನ ರಸ ಇವುಗಳಿಂದ ಪ್ರತ್ಯೇಕವಾಗಿ ಒಂದೊಂದು ರಸದಲ್ಲಿಯೂ ೭ ಸಲ ಭಾವನೆ ಮಾಡಿ ೭ ಸಲ ಮರ್ದನೆಮಾಡಿ ಹೆಸರುಕಾಳು ಪ್ರಮಾಣ ಮಾತ್ರೆ ಮಾಡುವದು. ಈ ಮಾತ್ರೆಯನ್ನು ಅಜೀರ್ಣ ಜ್ವರಗಳಿಗೆ ಶೊಂಟಿ, ಮೆಣಸು ಕಷಾಯದಲ್ಲಿಯು; ಪಿತ್ತಕಾಮಾಲಿ ಜ್ವರಕ್ಕೆ ಹಸೀಶುಂಟೀ ರಸವನ್ನು ಕುದಿಸಿ ಆರಿದನಂತರ ಇದರಲ್ಲಿ ೧ ಮಾತ್ರೆಯನ್ನು ಕಲಸಿ ಕೊಡುವದು.

೧೧೨. ಕಾಲಾಗ್ನಿರುದ್ರ ರಸ:—ಶುದ್ಧಿಮಾಡಿದ ಪಾದರಸ, ಶುದ್ಧಿಮಾಡಿದ ಹೆವಳಸರಿಗಂಧಕ, ಶುದ್ಧಿಮಾಡಿದ ನಾಭಿ, ಅಜವೋದ, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಶೊಂಟಿ, ಮೆಣಸು, ಹಿಪ್ಪಲಿ, ಸೈಂಧರಲವಣ, ಸೌವರ್ಚಲವಣ, ಸೂರ್ತಿಬೆಳಗಾರ ಅರಳುಮಾಡಿದ್ದು, ಯವಕ್ಷಾರ, ಸಜ್ಜಕ್ಷಾರ, ಬಿಳೀಜೀರಿಗೆ, ಚಿತ್ರಮೂಲ, ವಾಯುವಿಳಂಗ ಇವು ಜಿನಸಿಗೆ ೧-೧ ತೊಲೆ, ಇದಕ್ಕೆ ಸಮ ಅಂದರೆ ೧೮ ತೊಲೆ ವಿಷಮುಷ್ಟಿ ಬೀಜಗಳನ್ನು ಅಕ್ಕಿ ಕಲಗಚ್ಚಿನಲ್ಲಿ ೩ ದಿನ ಶುದ್ಧಿಮಾಡಿ ಒಣಗಿಸಿ ಚೂರ್ಣಮಾಡಿ ಮೇಲ್ಕಂಡ ಜಿನಸಿಗಳೊಡನೆ ಸೇರಿಸಿ ಚೂರ್ಣಮಾಡಿ ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲಿ ೧ ದಿನ ಅರದು ಮೆಣಸು ಪ ಮಾಣ ಮಾತ್ರೆ ಮಾಡಿ ನೆರಳಲ್ಲಿ ಒಣಗಿಸಿ ಇಟ್ಟುಕೊಳ್ಳುವದು. ವಾತರೋಗಕ್ಕೆ ಜೀರಿಗೆ, ಮೆಣಸು ಇವೆರಡರ ಕಲ್ಕದಲ್ಲಿ ಕೊಡಬೇಕು. ತುಪ್ಪದಲ್ಲಿಯು, ಮೆಣಸು ಚೂರ್ಣದಲ್ಲಿಯು ಅನುಪಾನವಿಟ್ಟು ಕೊಡಬಹುದು. ಇದು ದೀಪನಕಾರಿ, ನೇತ್ರಹಿತಕಾರಿ, ವಾತಹರಕಾರಿ, ನರಗಳಿಗೆ ಬಲವನ್ನು ಕೊಡುವದು. ಗುಲ್ಮ, ಗ್ರಹಣಿರೋಗಹರವು.

೧೧೩. ಮಾಲಿನೀವಸಂತ ರಸ:—ಶುದ್ಧಿಮಾಡಿದ ಕಪರಿ ೨ ತೊಲೆ, ಮೆಣಸು ಚೂರ್ಣ ೧ ತೊಲೆ ಇವೆರಡನ್ನು ಖಲ್ವದಲ್ಲಿ ಹಾಕಿ ಬೇವಿನಚಕ್ಕೆ ರಸದಿಂದ ಒಂದು ದಿನ ಅರದು ಮೆಣಸುಗಾತ್ರ ಮಾತ್ರೆಮಾಡಿ ನೆರಳಲ್ಲಿ ಒಣಗಿಸಿ ಇಟ್ಟುಕೊಳ್ಳುವದು. ಒಂದು ಅಥವಾ ಎರಡು ಮಾತ್ರೆಗಳನ್ನು ಹಿಪ್ಪಲಿ, ಜೀರಿಗೆ ಕಲ್ಕದಿಂದ ಕೊಡಲು ಪುರಾಣಜ್ವರ, ರಕ್ತಾತಿಸಾರ, ಜ್ವರ, ಆಮಾತಿಸಾರ ಇವುಗಳು ಗುಣವಾಗುವದು.

೧೧೪. ಸನ್ನಿಪಾತ ಭೈರವ ರಸ:—ಶುದ್ಧಿಮಾಡಿದ ಹೆವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ತಾಳಕ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೩ ತೊಲೆ, ಶುದ್ಧಿಮಾಡಿದ ಎಣ್ಣೆಬೆಳಗಾರದ ಅರಳು ೧ ತೊಲೆ, ಶುದ್ಧಿಮಾಡಿದ ಮಣಿಶಿಲೆ ೧ ತೊಲೆ, ಶುದ್ಧಿಮಾಡಿದ ಇಂಗಳೀಕ ೪ ತೊಲೆ, ಇವುಗಳನ್ನು ಕಲ್ವದಲ್ಲಿ ಹಾಕಿ ಹಸೀಶುಂಟೀ ರಸ, ಚಿಟ್ಟೆರಳುಬೇರಿನ

ರಸ, ನಿಂಬೇಹಣ್ಣಿನ ರಸ, ಇವುಗಳಲ್ಲಿ ಪ್ರತಿಯೊಂದು ರಸದಿಂದಲೂ, ಪ್ರತ್ಯೇಕ ವಾಗಿ ಒಂದೊಂದುದಿನ ಚನ್ನಾಗಿ ಅರೆದು ಗುರುಗಂಜಿ ಪ್ರಮಾಣ ಮಾತ್ರೆಮಾಡಿ ಅನುಪಾನವಿಶೇಷಗಳಿಂದ ಸೇವಿಸಿದರೆ ೧೩ ಸನ್ನಿಪಾತಗಳೂ, ಮೂರು ವಿಧವಾದ ಮಹಾ ದೋಷಗಳು, ಅತಿಸಾರಗಳು, ಕಠಿಣವಾದ ಶೂಲೆ, ಅರುಚಿ, ಕಫ, ಪಾಂಡು, ಶೋಭೆ, ದೃಷ್ಟಿದೋಷ, ಶರೀರದಲ್ಲಿ ಉರಿಯಾಗುವ ಜ್ವರಗಳು ಮೊದ ಲಾದುವುಗಳು ಪರಿಹಾರವಾಗುವುವು.

---

## ಜ್ವರಗಳಿಗೆ ಚೂರ್ಣಗಳು.

೧. ಎಲ್ಲಾತರಹೆ ಜ್ವರಗಳಿಗೆ ಚೂರ್ಣ:—ಕರೇಜೀರಿಗೆ, ತಬಾಷಿರ್, ಮಿಾಟಲಕಡಿ, ದೊಡ್ಡ ಯಾಲಕ್ಕಿ, ಮೊಗ್ಜಿಕವಲ್‌ಪಟ್ಟೆ, ನಾಗಕೇಸರಿ, ಸಂದಲ್ ಯೆಸುರುಕ್, ತಜ್, ಆಮಿಲಾ, ಪತ್ತ್ರರಿಜ, ತುಕ್ಮೆಕುಲ್‌ಫಾ, ಬಿಳೀಜೀರಿಗೆ, ಸಂದಲ್‌ಯೆಸುಫೇದ್ ಇವು ದಿನಸು ೧ಕ್ಕೆ ೪ ಮಾಷ, ಕಬಾಬ್‌ಚಿನ್ನಿ ೨ ಮಾಷ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ಕಾಲುದಿಂ ಕೊಡು ವದು. ಇದರಿಂದ ಎಲ್ಲಾತರಹದ ಜ್ವರ, ಹಳೇಜ್ವರ, ಉಷ್ಣ ಮತ್ತು ಶೀತಜ್ವರ ಗುಣವಾಗುವದು.

೨. ತಬಾಷಿರ ಚೂರ್ಣ ಉಷ್ಣಜ್ವರಕ್ಕೆ:—ಗುಲೇಸುರ್ಕ್, ತಬಾಷಿರ್, ತುಕ್ಮೆಕುಲ್‌ಫಾ, ಕತ್ತೀರೆಅಸಲ್‌ಸೂಸ್, ಮೊಗ್ಜಿ ತುಕ್ಮೆನೀಲೋಪರ್, ನಿಷಾಸ್ತಾ ಇವು ಜಿನಸು ೧ಕ್ಕೆ ೪ ತೂಕ, ಕತ್ತೀರಾ ೨॥ ತೂಕ, ಸಂದಲ್‌ಸುಫೇದ್ ೧೧ ತೂಕ, ಮೊಗ್ಜಿ ತುಕ್ಮೆಯೆುಕದ್ದು ಸಬ್ಜ್ ೯ ತೂಕ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ೧-೨ ದಿರಂ ತಣ್ಣೀರಿನಲ್ಲಿ ಕೊಡಲು ಉಷ್ಣಜ್ವರ ಗುಣವಾಗುವದು.

೩. ತಬಾಷಿರ್ ಚೂರ್ಣ:—ತಬಾಷಿರ್ ೧ ತೊಲೆ, ಯಾಲಕ್ಕಿ ೧ ತೊಲೆ, ಅಮೃತಬಳ್ಳಿ ಸಕ್ಕರೆ ೩ ತೊಲೆ, ಗುಲಾಬಿಹೂವ್ವ ೧೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಬಿಳೀಕಲ್ಲುಸಕ್ಕರೆ ೬ ತೊಲೆ ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ಎಲ್ಲವನ್ನು ಕಲಸಿ ಇಟ್ಟುಕೊಳ್ಳುವದು. ಬೆಳಿಗ್ಯೆಹೊತ್ತು ೧ ದಿರಂ ಕಾಸ್ನಿ ರಸದಿಂದಾಗಲಿ, ಕಾಹುಸೊಪ್ಪಿನ ರಸದಿಂದಲಾಗಲಿ ಅಥವಾ ಖರಬೂಜದ ಬೀಜದ ಹಾಲಿನಲ್ಲಾಗಲಿ, ಸೌತೇಬೀಜದ ಹಾಲಿನಲ್ಲಾಗಲಿ, ಗೋಣಿಸೊಪ್ಪಿನ ರಸ ದಲ್ಲಾಗಲಿ ೭ ದಿವಸ ಕೊಡಬೇಕು. ಪತ್ಯ ಜೀರ್ಣಕಾರಿಯಾದ ಪದಾರ್ಥಗಳು ಕೊಡಬೇಕು. ಇದು ಉಷ್ಣದ ಶರೀರಕ್ಕೆ ಉಪಯೋಗಿಸುವದು. ಇದರಿಂದ ಉಷ್ಣದಜ್ವರ, ಹೊಟ್ಟೆಯಲ್ಲಿರುವ ಗಡ್ಡೆ, ನಚ್ಚುಜ್ವರಗಳು ಗುಣವಾಗುವದು.

೪. ಸಪ್ತಜ್ವರವಾಯುವಿಗೆ ಚೂರ್ಣ:—ಕರ್ಕಾಟಕಶೃಂಗಿ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಶೊಂಟಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ರಾಮಗುಳ್ಳದಬೇರು ೧ ತೊಲೆ, ಗಂಟುಭಾರಂಗಿ ೧ ತೊಲೆ, ಚಂಗಲಕೋಷ್ಟ ೧ ತೊಲೆ, ಜಟಾಮಾಂಸಿ ೧ ತೊಲೆ, ಸೈಂಧರಲವಣ ೧ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಹೊತ್ತಿಗೆ ಕಾಲು ತೊಲೆ, ಅರ್ಧ ತೊಲೆ ಜೇನುತುಪ್ಪದಲ್ಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಪ್ತಜ್ವರ, ಬಿಕ್ಕಳಿಕೆ, ಊರ್ಧ್ವಶ್ವಾಸ, ವಾಯು, ಶ್ಲೇಷ್ಮ ವ್ಯಾಧಿ, ಅರೋಚಕ ಮೊದಲಾದ ರೋಗಗಳು ಗುಣವಾಗುವವು.

೫. ಕಾಸಶ್ವಾಸಜ್ವರಕ್ಕೆ ತ್ರಿಫಲಾಹಿಪ್ಪಲಿ ಚೂರ್ಣ:—ತ್ರಿಫಲೆ, ಹಿಪ್ಪಲಿ, ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಕಾಲು ತೊಲೆ ಚೂರ್ಣ ಜೇನುತುಪ್ಪದಲ್ಲಿ ಕಲಸಿ ಸೇವಿಸಲು ಕಾಸ, ಶ್ವಾಸ, ಜ್ವರ, ಮಲಬದ್ಧ, ಮಂದಾಗ್ನಿ ಇವುಗಳು ಗುಣವಾಗುವವು.

೬. ಜ್ವರಗಳಿಗೆ ಕಟ್ಫಲಾದಿ ಚೂರ್ಣ:—ಕಾಯಫಲಚಕ್ಕೆ, ತುಂಗೇಗಡ್ಡೆ, ಕಟುಕರೋಹಿಣಿ, ಶುಂಠಿ, ಕರ್ಕಾಟಕಶೃಂಗಿ, ಚಂಗಲಕೋಷ್ಟ ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಕಾಲು ತೊಲೆ, ಅರ್ಧ ತೊಲೆ ಚೂರ್ಣ ಜೇನುತುಪ್ಪದಲ್ಲಾಗಲಿ, ಹಸೀಶುಂಠಿ ರಸದಲ್ಲಾಗಲಿ ಕಲಸಿ ಸೇವಿಸಲು ಕಾಸ, ಶ್ವಾಸ, ಅರುಚಿ, ವಾತರೋಗ, ವಾಂತಿ, ಶೂಲೆ, ಕ್ಷಯರೋಗ ಇವು ಗುಣವಾಗುವವು.

೭. ಸರ್ವಜ್ವರಗಳಿಗೆ ಸುದರ್ಶನ ಚೂರ್ಣ:—ತ್ರಿಫಲೆ, ಅರಸಿನ, ಮರದ ದರಿಸಿನ, ನೆಲಗುಳ್ಳ, ಹೆಗ್ಗುಳ್ಳ, ಕಚೋರ, ತ್ರಿಕಟುಕ, ಮೋಡಿ, ಸೋಗೆನಾರು, ಅಮೃತಬಳ್ಳಿ, ನಸುಗುನ್ನಿಬೇರು, ಕಟುಕರೋಹಿಣಿ, ಪರ್ಪಾಷ್ಟಕ, ತುಂಗೇಗಡ್ಡೆ, ಯಣ್ಣೆಮಿಟ್ಲೆ, ಮುಡಿವಾಳ, ಬೇವಿನಚಕ್ಕೆ, ಚಂಗಲಕೋಷ್ಟ, ಯಷ್ಟಿಮಧುಕ, ಕೊಡಸಿಗೆಬೀಜ, ಕೊಡಸಿಗೆಚಕ್ಕೆ, ವೋಮ, ಗಂಟುಭಾರಂಗಿ, ನುಗ್ಗೇಬೀಜ, ಗೋಪಿಚಂದನ ಬಜೆ, ದಾಲಚಿನ್ನಿ, ಪದ್ಮಕ, ಲಾವಂಚ, ಶ್ರೀಗಂಧದಚಕ್ಕೆ, ಅತಿ ಬಜೆ, ಚಿಟ್ಟಾಮುಟ್ಟೆ, ಒಂದೆಲೆಹೊನ್ನೆ, ಮೂರಲೆಹೊನ್ನೆ, ವಾಯುವಿಳಂಗ, ಗ್ರಂಥಿಕತಗರ, ಚಿತ್ರಮೂಲ, ದೇವದಾರು, ಚವ್ಯ, ಕಹಿಪಡವಲ, ಜೀವಕ, ಋಷಭಕ, ಲವಂಗ, ತವಕ್ಷೀರ, ಬಿಳೀತಾವರೇಹೊವ್ವ, ಕಾಕೋಳಿ, ಲವಂಗಪತ್ರೆ, ಜಾಪತ್ರೆ, ತಾಳೀಸಪತ್ರೆ ಇವುಗಳನ್ನು ಸಮಭಾಗ ಚೂರ್ಣಮಾಡಿ ಈ ಚೂರ್ಣಕ್ಕೆ

ಅರ್ಧಭಾಗ ನೆಲಬೇವು ಚೂರ್ಣವನ್ನು ಬೆರಸಿ ಶರೀರಪ್ರಕೃತಿ ಅನುಸರಿಸಿ ಸೇವಿಸಲು ವಾತ, ಪಿತ್ತ, ಶ್ಲೇಷ್ಮ, ಸನ್ನಿರೋಗಗಳು, ಸರ್ವಜ್ವರಗಳು, ವಾತಾದಿ ದೋಷದಿಂದ ಹುಟ್ಟಿದಜ್ವರಗಳು, ದ್ವಂದ್ವಜ್ವರಗಳು, ಸನ್ನಿಪಾತಜ್ವರಗಳು, ಆಗಂತುಕಜ್ವರ, ಧಾತುಗತಜ್ವರ, ವಿಷಮಜ್ವರ, ಮಾನಸಿಕಜ್ವರ, ಶೀತಜ್ವರ, ಏಕಾಹಿಕಜ್ವರ, ಮೋಹ, ತಂದ್ರ, ಭ್ರಮೆ, ದಾಹ, ಶ್ವಾಸ, ಕಾಸ, ಪಾಂಡುರೋಗ, ಹೃದಯರೋಗ, ಕಾಮಾಲೆ, ಸಂದುಗಳ ಶೂಲೆ ಇವುಗಳು ಗುಣವಾಗುವವು.

೮. ಅಶ್ವಗಂಧಿಚೂರ್ಣ ೧ನೇ ವಿಧ:—ಶುದ್ಧಿಮಾಡಿದ ಅಶ್ವಗಂಧಿ ೧ ಸೇರು ಭೂಸಕ್ಕರೇಗಡ್ಡೆ ೬ ತೊಲೆ, ನೆಲತಾಟಿಗಡ್ಡೆ ೬ ತೊಲೆ, ಮಜ್ಜಿಗೆಗಡ್ಡೆ ೬ ತೊಲೆ, ಶುದ್ಧಿಮಾಡಿದ ಪರಂಗಿಚಕ್ಕೆ ೩ ತೊಲೆ, ತಾಳೀಸಪತ್ರೆ ೩ ತೊಲೆ, ಸಣ್ಣರಾಸ್ಮೆ ೩ ತೊಲೆ, ಬಿಳೇಜೀರಿಗೆ ೩ ತೊಲೆ, ಸೋಪುಬೀಜ ೩ ತೊಲೆ, ವಾಯುವಿಳಂಗ ೩ ತೊಲೆ, ಅತಿಮಧುರ ೩ ತೊಲೆ, ನೆಗದೇಬೇರು ೩ ತೊಲೆ, ಶೊಂಟಿ ೩ ತೊಲೆ, ಮೆಣಸು ೩ ತೊಲೆ, ಹಿಪ್ಪಲಿ ೩ ತೊಲೆ, ತಾರೇಕಾಯಿಸಿಪ್ಪೆ ೩ ತೊಲೆ, ನೆಲ್ಲೀಕಾಯಿ ೩ ತೊಲೆ, ಅಳಲೇಕಾಯಿಸಿಪ್ಪೆ ೩ ತೊಲೆ, ವೋಮ ೩ ತೊಲೆ, ಚಂಗಲಕೋಷ್ಟ ೩ ತೊಲೆ, ಜಾಕಾಯಿ ೩ ತೊಲೆ, ಜಾಪತ್ರೆ ೩ ತೊಲೆ, ಯಾಲಕ್ಕಿ ೩ ತೊಲೆ, ಲವಂಗ ೩ ತೊಲೆ, ದಾಲಚಿನ್ನಿ ೩ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಇದರ ಸಮ ಬೂರಾಸಕ್ಕರೆ ಸೇರಿಸಿ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲು ತೊಲೆ ಚೂರ್ಣ ಜೇನುತುಪ್ಪದಲ್ಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೬-೧೪ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀ ಬೇಳೆ ಸಿಹಿಸಾರು ಅನ್ನ. ಇದರಿಂದ : ಅಸ್ತಿಗತಜ್ವರ, ಪಾಂಡು, ತುರಿ, ಖಜ್ಜಿ, ಜ್ವರದನಚ್ಚು ಇವು ಗುಣವಾಗಿ ರಕ್ತವೃದ್ಧಿಯನ್ನುಂಟುಮಾಡುವದು.

೯. ಅಶ್ವಗಂಧಿ ಚೂರ್ಣ ೨ನೇವಿಧ :—ಸಣ್ಣರಾಸ್ನೆ, ಗಂಟುಭಾರಂಗಿ, ಅತಿಬಜೆ, ಚವ್ಯ, ದಾಲಚಿನ್ನಿ, ಲವಂಗಪತ್ರೆ, ನಾಗಕೇಸರಿ, ಯಾಲಕ್ಕಿ, ಮೆಣಸು, ಹಿಪ್ಪಲಿ, ಮೋಡಿ, ಶೊಂಟಿ, ಲವಂಗ, ರೇಣಿಕೆ, ಜಟಾಮಾಂಸಿ, ಮಂಜಿಷ್ಟೆ, ಯಷ್ಟಿಮಧುಕ, ತಾಳೀಸಪತ್ರೆ, ಖುರಾಸಾನಿವೋಮ, ಜಾಕಾಯಿ, ರಾಮಗುಳ್ಳದ ಬೇರು, ಕಚೋರ, ಗಜಹಿಪ್ಪಲಿ, ಲಾವಂಚ, ಕೊತ್ತುಂಬರಿಬೀಜ ಇವು ಸಮ ಭಾಗ, ಇದಕ್ಕೆ ಸಮಭಾಗ ಶುದ್ಧಿಮಾಡಿದ ಅಶ್ವಗಂಧಿ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಇದಕ್ಕೆ ಸಮಭಾಗ ಸಕ್ಕರೆ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲು ತೊಲೆ ಚೂರ್ಣ ಹಸು

ವಿನ ಹಾಲಿನಲ್ಲಿ ಆಗಲಿ ಅಥವಾ ಜೇನುತುಪ್ಪದಲ್ಲಿ ಆಗಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇಚ್ಛಾ ಪತ್ಯ ಚಲದಿಪದಾರ್ಥ ವರ್ಜಿತ. ಇದರಿಂದ ಅಸ್ತಿಗತಜ್ವರ, ಶ್ವಾಸಕಾಸ, ಕ್ಷಯ, ಪಾಂಡು, ಮಂದಾಗ್ನಿ, ಅರುಚಿ, ಅನ್ನದ್ವೇಷ, ಗುಲ್ಮ, ಅಶೀತಿವಾಯು, ಆಮ್ಲ ಪಿತ್ತ ಗಣವಾಗುವದು.

೧೦. ಸರ್ವ ಜ್ವರಕ್ಕೆ ಆಮಲಕ್ಯಾದಿ ಚೂರ್ಣ:—ನೆಲ್ಲೀಕಾಯಿ, ಚಿತ್ರ ಮೂಲ, ಅಳಲೀಕಾಯಿಸಿಪ್ಪೆ, ಹಿಪ್ಪಲಿ, ಸೈಂಧವಲವಣ ಇವುಗಳನ್ನು ಸಮ ತೂಕ ಕುಟ್ಟಿ ಚೂರ್ಣಮಾಡಿ ಶೋಧಿಸಿ ಕಾಲು ತೊಲೆ ಚೂರ್ಣ ಜೇನುತುಪ್ಪದಲ್ಲಿ ಕಲಸಿ ಸೇವಿಸಲು ಸಮಸ್ತ ಜ್ವರಗಳು, ಮಲಬದ್ಧ, ಅರುಚಿ, ಶ್ಲೇಷ್ಮರೋಗ ಪರಿಹಾರವಾಗುವದು ಮತ್ತು ದೀಪನ, ಪಾಚನ ವುಂಟಾಗುವದು.

೧೧. ತಾಲೀಸ್ಪತ್ರಿಕಾ ಹಲ್ವಾ ಯೂನಾನಿ:—ತಾಲಸ್ಪತ್ರಿ ೪ತೊಲೆ, ಕಾಲೀ ಮಿರ್ಚಿ ೪ ತೊಲೆ, ಶುದ್ಧಿಮಾಡಿದ ಚೋಪ್‌ಚಿನ್ನಿ ೪ ತೊಲೆ, ಪಿಪ್ಪಲಿ ೮ ತೊಲೆ, ಪಿಪ್ಪಲಾಮೋಡ್ ೮ ತೊಲೆ, ಶೋಂಟ್ ೧೨ ತೊಲೆ, ಹಲ್ದಾ೧೨ ತೊಲೆ, ದಾರ್‌ಚಿನ್ನಿ ೧ ತೊಲೆ, ಇಲಾಚಿ, ೧ ತೊಲೆ, ತೀಸ್ಪಾತ್ ೧ ತೊಲೆ, ಬಾಲಾಸುಪೇದ್ ೧ ತೊಲೆ, ಕಬಾಬುಚಿನ್ನಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಕೊಳ್ಳುವದು. ಒಂದು ಬಾಂಡ್ಲಿಯಲ್ಲಿ ರಾಯಿಪುಡಿಸಕ್ಕರೆ ೭|| ಶೇರು, ನೀರುಹಾಕಿ ವಲೆಯಮೇಲೆ ಇಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ವನ್ನು ಹಾಕಿ ಜೇನುತುಪ್ಪ || ಶೇರುಹಾಕಿ ಕಲಸಿ ಪಕ್ವವಾಗಿ ಲೇಹಮಾಡಿ ಇಟ್ಟು ಕೊಳ್ಳುವದು. ಹೊತ್ತಿಗೆ ಕಾಲು ತೊಲೆ, ಅರ್ಧತೊಲೆ ಕೊಡುವದು. ಈರೀತಿ ಬೆಳಿಗ್ಗೆ ಸಾಯಂಕಾಲ ೨೦ ದಿವಸ ಕೊಡಬೇಕು. ಇಚ್ಛಾಪತ್ಯ ಚಲದಿಪದಾರ್ಥ ವರ್ಜಿತ. ಇದರಿಂದ ಜ್ವರದನಚ್ಚು, ಶ್ವಾಸಖಾಸ, ಉಬ್ಬಸ, ಹಸಿವು ಇಲ್ಲದೆ ಇರುವದು, ದಾಹ, ಅರುಚಿ, ಪಾಂಡು, ಮಂದಾಗ್ನಿ ಇವು ಗುಣವಾಗುವವು. ಮಕ್ಕಳ ಮಂದಾಗ್ನಿ, ವಳಜ್ವರ, ಕೆಮ್ಮು ಇವು ಪರಿಹಾರವಾಗುವವು. ಮಕ್ಕಳಿಗೆ ಕಡಲೇಕಾಳುಗಾತ್ರ ಲೇಹ ಮಲೆಹಾಲಿನಲ್ಲಿ ಕಲಸಿ ಕೊಡುವದು.

---

## ಜ್ವರಕ್ಕೆ ಘೃತಗಳು.

೧. ಪಂಚತಿಕ್ತ ಘೃತ:—ಆಡುಸೋಗೆ, ಬೇವಿನಚಕ್ಕೆ, ಅಮೃತಬಳ್ಳಿ, ನೆಲಗುಳ್ಳ, ಕಹಿಪಡವಲ ಇವು ಸಮಭಾಗ ಕಲ್ಕಮಾಡಿ, ಇದಕ್ಕೆ ನಾಲ್ಕರಷ್ಟು ಹಸುವಿನತುಪ್ಪ, ನಾಲ್ಕರಷ್ಟು ನೀರನ್ನು ಬೆರಸಿ ಘೃತಪಕ್ವವಾಗಿ ಕಾಯಿಸಿ

ಸೇವಿಸಲು ವಿಷಮಜ್ವರ, ಪಾಂಡುರೋಗ, ಕುಷ್ಠ, ವಿಸರ್ಪ, ಕ್ರಿಮಿರೋಗ, ಮೂಲರೋಗ ಇವು ಗುಣವಾಗುವುವು.

೨. ಪಂಚಮೂಲೀಕ್ಷೀರ ಪಾಕ:—ಒಂದೆಲೆಹೊನ್ನೆ, ಮೂರೆಲೆಹೊನ್ನೆ, ನೆಲಗುಳ್ಳ, ಹೆಗ್ಗುಳ್ಳ, ಸಣ್ಣನೆಗ್ಗಿಲು ಇವುಗಳ ಬೇರುಗಳನ್ನು ಕುಟ್ಟಿ ಎಂಟುಭಾಗ ಆಕಳಹಾಲು, ನಾಲ್ಕುಭಾಗ ನೀರನ್ನು ಬೆರಸಿ ಹಾಲು ಮಿಗುವಹಾಗೆ ಕಾಯಿಸಿ ಶೋಧಿಸಿ ಸೇವಿಸಲು ಜೀರ್ಣಜ್ವರ, ಶ್ವಾಸ, ಕಾಸ, ತಲೇನೋವು, ಪಾರ್ಶ್ವಶೂಲೆ, ಪೀನಸಿ ಇವುಗಳು ಗುಣವಾಗುವದು.

೩. ಸಕಲ ಜ್ವರಗಳಿಗೆ ಪಿಪ್ಪಲ್ಯಾದಿ ಘೃತ:—ಹಿಪ್ಪಲಿ, ಕೊಡಸಿಗೆಬೀಜ, ನೆಲಗುಳ್ಳ, ಕಟುಕರೋಹಿಣಿ, ಸೊಗದೇಬೇರು, ನೆಲ್ಲೀಕಾಯಿ, ಕಿರುನೆಲ್ಲಿ, ಬಿಲ್ಪತ್ರೆ ಬೇರು, ಬೇವಿನ ವಳನಾರು, ಶ್ರೀಗಂಧದಚಕ್ಕೆ, ಜಾಜೀಬೇರು, ಲಾವಂಚ, ದ್ರಾಕ್ಷಿ, ಅತಿಬಜೆ, ಒಂದೆಲೆಹೊನ್ನೆ ಈ ಹದಿನೈದು ಜಿನಸುಗಳನ್ನು ಪ್ರತ್ಯೇಕ ಎರಡೆರಡು ವರಹತೂಕ ಚೂರ್ಣಮಾಡಿ ಒಂದುಕೊಳಗ ನೀರಿನಲ್ಲಿ ಒಂದು ಬಳ್ಳ ಹಸುವಿನತುಪ್ಪ ಸುರಿದು ಅದರಲ್ಲಿ ಆ ಚೂರ್ಣವಂ ಕದಡಿ ತುಪ್ಪ ಉಳಿಯುವ ಪರ್ಯಂತರ ಕಾಯಿಸಿ ಇಳುಹಿ ಪ್ರತಿದಿನವೂ ಪ್ರಾತಃಕಾಲದಲ್ಲಿ ಕಾಲು ತೊಲೆ ಯಷ್ಟು ಸೇವಿಸಲು ಉಗ್ರವಾದ ಜ್ವರ, ಹೊಟ್ಟೆಯೊಳಗೆ ಹಲೀಮಕ ಗ್ರಂಥಿಯನ್ನು ಸಹ ಪರಿಹರಿಸುವದು. ಮುಡುಹುಗಳ ತಾಪ, ಪಾರ್ಶ್ವಶೂಲೆ, ವಮನ, ಕ್ಷಯ ಇವಷ್ಟೂ ಪರಿಹರವಾಗುವದು.

೪. ಪುರಾಣಜ್ವರಕ್ಕೆ ಪಿಪ್ಪಲ್ಯಾದಿ ಘೃತ:—ಹಿಪ್ಪಲಿ ೧ ತೊಲೆ, ಕೊಡಸಿಗೆ ಬೀಜ ೧ ತೊಲೆ, ರಾಮಗುಳ್ಳದಬೇರು ೧ ತೊಲೆ, ಕಟುಕರೋಹಿಣಿ ೧ ತೊಲೆ, ಸೊಗದೇಬೇರು ೧ ತೊಲೆ, ಬಿಲ್ಪತ್ರೆಬೇರು ೧ ತೊಲೆ, ಒಳ್ಳೇಬೇವಿನಕಡ್ಡಿ ೧ ತೊಲೆ, ಶ್ರೀಗಂಧದಚಕ್ಕೆ ೧ ತೊಲೆ, ಸಣ್ಣನೆಗ್ಗಿಲು ೧ ತೊಲೆ, ಲಾವಂಚ ೧ ತೊಲೆ, ದ್ರಾಕ್ಷಿ ೧ ತೊಲೆ, ಅತಿಬಜೆ ೧ ತೊಲೆ, ಒಂದೆಲೆಹೊನ್ನೆ ಬೇರು ೧ ತೊಲೆ, ಮೂರೆಲೆ ಹೊನ್ನೆ ಬೇರು ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ವರಳಲ್ಲಿಹಾಕಿ ಹಸುವಿನಹಾಲು ೧ ಶೇರುಹಾಕಿ ಚನ್ನಾಗಿ ರುಬ್ಬಿ ಒಂದು ಮಡಿಕೆಯಲ್ಲಿಹಾಕಿ ಹಸುವಿನ ತುಪ್ಪ ೨| ಶೇರು ಹಾಕಿ ಒಲೆಯಮೇಲೆ ಇಟ್ಟು ಸಣ್ಣನಾಗಿ ಉರಿಹಾಕಿ ಘೃತ ಪಾಕವಾದ ಕೂಡಲೇ ಇಳಿಸಿ ಶೋಧಿಸಿಕೊಂಡು ಅದರಲ್ಲಿ ಪಚ್ಚಕರ್ಪೂರ ೧ ಆಣಿ ತೂಕ ಖಲ್ವದಲ್ಲಿ ಹಾಕಿ ಅರದು ಹಾಕುವದು. ಹೊತ್ತಿಗೆ ಕಾಲುತೊಲೆ ಅಥವಾ ಅರ್ಧತೊಲೆ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪುರಾಣಜ್ವರ, ಹಳೇಬಿಕ್ಕಳಿಕೆ, ಕ್ಷಯ, ಪಾಂಡು, ಕಾಮಾಲೆ, ಶೋಭೆ ಗುಣವಾಗುವವು.

## ಜ್ವರದಲ್ಲಿ ಅಸಾಧ್ಯ ಲಕ್ಷಣಗಳು.

೧. ಹಳೇಜ್ವರವಿದ್ದು ದಿನೇ ದಿನೇ ವೃದ್ಧಿಯಾಗುತ್ತಾಬಂದರೆ ಅಸಾಧ್ಯವು.

೨ ಭ್ರಮೆ, ಊರ್ಧ್ವಶ್ವಾಸ, ಬಲಕ್ಷಯ, ಅಳೋಣ, ವಣಕೆಮ್ಮು, ಹೃದಯದಲ್ಲ ನೋವು, ಕೋಪಗಳಿರುವ ಜ್ವರವು ಅಸಾಧ್ಯವು.

೩. ರೋಮಾಂಚ, ಮೂತ್ರಕಟ್ಟೋದು, ಪಣಕೆಮ್ಮು, ಪುನಃಪುನಃ ನಗೋದು, ಸಿಂಹನಾದ ಮಾಡೋಣ, ಹಾಸಿಗೆಯನ್ನು ಒದೆಯೋಣ, ಚಿತ್ರವನ್ನು ನೋಡೋಣ ಇವುಗಳುಳ್ಳ ಜ್ವರವು ಅಸಾಧ್ಯವು.

೪ ಜ್ವರಾದಿಯಲ್ಲಿ ವಿಷಮಲಕ್ಷಣ ತೋರಿ ಬಹುದಿವಸದ ಜ್ವರವಾಗಿ ಮೇಲೆ ಮೇಲೆ ಸ್ವಲ್ಪವೇ ಆಗಲಿ ಬಹಳವೇ ಆಗಲಿ ಬರುತ್ತಿರುವ ಜ್ವರವು ಅಸಾಧ್ಯವು.

೫. ಜ್ವರಬಂದ ಕಾಲದಲ್ಲಿ ಜ್ಞಾನತಪ್ಪಿ ಜ್ವರ ಬಿಟ್ಟಮೇಲೆಯೂ ಮೇಲಕ್ಕೆ ಯೇಳದೆ ಅಂತರ್ದಾಹಯುಕ್ತವಾದ ಶೈತ್ಯಯುಕ್ತವಾದ ಜ್ವರವು ಅಸಾಧ್ಯವು.

೬. ಮೈ ತಣ್ಣಗೆಯಿದ್ದು ಕುತ್ತಿಗೆಯಲ್ಲಿ ಬೆವರು ಬಂದರೆ ಆ ಜ್ವರವು ಅಸಾಧ್ಯವು.

೭. ಹಣೆಮೇಲೆ ಹುಟ್ಟಿದ ಬೆವರಿನಲ್ಲಿ ಶೈತ್ಯವು, ಸಂಧಿಗಳಲ್ಲ ಶೈಥಿಲ್ಯವು, ಯಬ್ಬಿಸಿ ಕೂಡಿಸಿದ ಮಾತ್ರಕ್ಕೆ ಪ್ರಜ್ಞೆತಪ್ಪುವ ಜ್ವರವು ಅಸಾಧ್ಯವು.

೮. ಪೂರ್ವಾಹ್ನದಲ್ಲಿ ಜ್ವರ, ಪುಡಿಕೆಮ್ಮು, ದೇಹದಲ್ಲ ಅತ್ಯುಷ್ಣ ಮತ್ತು ಅಪರಾಹ್ನದಲ್ಲಿ ಜ್ವರ, ಶ್ಲೇಷ್ಮಯುಕ್ತವಾದ ಕಾಸ, ಬಲ ಮಾಂಸಗಳ ಕ್ಷಯಗಳುಳ್ಳ ಜ್ವರವು ಅಸಾಧ್ಯವು.

೯. ಅತಿಜ್ವರ ಸಂತಾಪ, ಮೂರ್ಛೆ, ಬಲಹಾನಿ, ನೀರಡಿಕೆ, ಸಂಧಿಶೈಥಿಲ್ಯಗಳುಳ್ಳ ಜ್ವರವು ಅಸಾಧ್ಯವು.

೧೦. ಆಕಳು ಪ್ರಸವಕಾಲದಲ್ಲಿ ನರಳುವಂತೆ ನರಳುವಿಕೆ, ಸ್ವೇದಗಳುಳ್ಳ ಜ್ವರವು ಅಸಾಧ್ಯವು.

೧೧. ಗೋವಿನ ಮುಖದಲ್ಲಿರುವ ನೀರಿನ ಗುಳ್ಳೆಗಳಂತೆ ಗುಳ್ಳೆಗಳು ಸರ್ವಾಂಗದಲ್ಲೂ ಹುಟ್ಟಿದ ಸ್ವೇದ, ಶ್ರಮ, ಸಂತಾಪಗಳಿಂದ ಕೂಡಿದ ಲೇಪಿಜ್ವರವು ಅಸಾಧ್ಯವು.



# ಹದಿನೇಳನೆಯ ಅಧ್ಯಾಯ.

## ಅತಿಸಾರ, ಗ್ರಹಣಿ ಮತ್ತು ಔಷಧಗಳು.

### ಅತಿಸಾರ ಲಕ್ಷಣವು.

ಅತಿಸಾರ ರೋಗವು ವಾತ, ಪಿತ್ತ, ಸನ್ನಿಪಾತ, ಶೋಕ, ಆಮ, ಭಯಗಳಿಂದ ಉತ್ಪನ್ನವಾಗಿ ಏಳು ವಿಧವಾಗಿರುತ್ತದೆ.

ವಾತಾತಿಸಾರದಲ್ಲಿ ಮಲವು ಕಪ್ಪುವರ್ಣವಾಗಿಯೂ, ನೊರೆನೊರೆಯಾಗಿಯೂ, ರೂಕ್ಷವಾಗಿಯೂ, ಅಪಕ್ವವಾಗಿಯೂ, ನೋವಿನಿಂದಲೂ, ಶಬ್ದದಿಂದಲೂ ಕೂಡಿದ್ದಾಗಿ ಕೊಂಚಕೊಂಚವಾಗಿ ಹೊರಡುವುದು.

ಪಿತ್ತಾತಿಸಾರದಲ್ಲಿ ಮಲವು ಹಸುರು ಬಣ್ಣವಾಗಿಯೂ, ಹಳದಿ ಬಣ್ಣವಾಗಿಯೂ, ಕೊಂಚ ಕೆಂಪಗೂ ಹೊರಡುವುದು. ದಾಹ, ಮೂರ್ಛೆ, ಶರೀರದಲ್ಲಿ ಉರಿ, ಗುದಸ್ಥಾನದಲ್ಲಿ ಹುಣ್ಣು, ಜ್ವರವು ಮೊದಲಾದ ಲಕ್ಷಣಗಳುಂಟಾಗಿರುತ್ತದೆ.

ಕಫಾತಿಸಾರದಲ್ಲಿ ಮಲವು ಬೆಳ್ಳಗೂ, ಕಠಿನವಾಗಿಯೂ, ಶ್ಲೇಷ್ಮದಿಂದ ಕೂಡಿರುವುದಾಗಿಯೂ, ದುರ್ಗಂಧವಾಗಿಯೂ, ಶೀತವಾಗಿಯೂ ಸ್ರವಿಸುವುದು.

ಸನ್ನಿಪಾತಾತಿಸಾರದಲ್ಲಿ ಹಂದಿಯ ಕೊಬ್ಬು, ಮಾಂಸವು ಇವುಗಳನ್ನು ತೊಳೆದ ನೀರಿನಂತೆಯೂ, ಹಿಂದೆ ಹೇಳಲ್ಪಟ್ಟ ವಾತ, ಪಿತ್ತ, ಕಫ, ಅತಿಸಾರಗಳ ಲಕ್ಷಣಗಳೆಲ್ಲವೂ ಉಳ್ಳದ್ದಾಗಿ ಮಲವು ಸ್ರವಿಸುವುದು.

ದುಃಖಾತಿಸಾರದಲ್ಲಿ:—ದುಃಖದಿಂದ ಸ್ವಲ್ಪವಾಗಿ ಊಟಮಾಡುವ ಮನುಷ್ಯನಿಗೆ, ಕಣ್ಣೀರನ್ನು ಬಿಡುವುದರಿಂದ ಹುಟ್ಟುವ ಉಷ್ಣವು ಜಠರಾಗ್ನಿಯಲ್ಲಿ ಕಲೆತು ಕೋಷ್ಠವನ್ನು ಪ್ರವೇಶಿಸಿ ರಕ್ತವನ್ನು ಕ್ಷೋಭೆಗೊಳಿಸಿ ಗುಲಗುಂಜಿಯಂತೆ ವರ್ಣವುಳ್ಳ ರಕ್ತವು ಮಲದಲ್ಲಿ ಕೂಡಿಯಾದರೂ, ಮಲವಿಲ್ಲದೆಯೂ, ದುರ್ಗಂಧದಿಂದ ಕೂಡಿದ್ದಾಗಿಯೂ, ದುರ್ಗಂಧವಿಲ್ಲದೆಯೂ ಸ್ರವಿಸುವುದು

ಅಜೀರ್ಣದಿಂದ ವಾತಾದಿ ದೋಷಗಳು ಸ್ವಮಾರ್ಗವನ್ನು ಬಿಟ್ಟು ಇತರ ಮಾರ್ಗಗಳಲ್ಲಿ ಸಂಚರಿಸುತ್ತಾ ಕೋಷ್ಠವನ್ನು ರಕ್ತಾದಿಧಾತುಗಳನ್ನು ಪುರೀಷಾದಿ ಮಲಗಳನ್ನು ದುಷ್ಟವಾಗಿಮಾಡಿ ಅನೇಕವಿಧ ವರ್ಣಗಳುಂಟಾಗಿ ಶೂಲೆಯಿಂದ ಕೂಡಿದ್ದಾಗಿ ಮಲವು ಸ್ರವಿಸುವುದು ಇದು ಆಮಾತಿಸಾರವು.

ಭಯಾತೀಸಾರದಲ್ಲಿ:—ಶತ್ರುಗಳು ಮೊದಲಾದವರಿಂದುಂಟಾಗುವ ಭಯದಿಂದ ವಾತಪ್ರಕೋಪವುಂಟಾಗಿ ವಾತಾತಿಸಾರ ಲಕ್ಷಣವುಳ್ಳದ್ದಾಗಿರುತ್ತದೆ.

## ಗ್ರಹಣೀ ರೋಗ ಲಕ್ಷಣವು.

ಅತಿಸಾರ ರೋಗದಲ್ಲಿ ಯಾರು ವಿರುದ್ಧಾಹಾರಗಳನ್ನು ಸೇವಿಸುವರೋ ಅವರ ಮಲವು ದುಷ್ಟವಾಗಿ ಗ್ರಹಣೀ ರೋಗವು ಸಂಭವಿಸುವುದು.

ವಾತಗ್ರಹಣಿಯಲ್ಲಿ ಅನ್ನವು ಅತಿಕಷ್ಟವಾಗಿ ಜೀರ್ಣಿಸುವಿಕೆ, ಹುಳಿತೇಗು ಬರುವಿಕೆ, ಅಗ್ನಿಮಾಂದ್ಯವು, ದಾಹವು ತಗ್ಗುವಿಕೆ, ಕರ್ಣರಂಧ್ರಗಳಲ್ಲಿ ಧ್ವನಿ ಹುಟ್ಟುವಿಕೆ, ಎರಡು ಪಕ್ಕಗಳು, ತೊಡೆಗಳು, ತೊಡೆ ಸಂದುಗಳು, ಕಂಠವು ಇವುಗಳಲ್ಲಿ ನೋವಾಗುವಿಕೆ, ಅನ್ನರಸವು ಅಧೋಮುಖವಾಗಿ ಹೊರಡುವಿಕೆ, ಎದೆನೋವು, ಶರೀರಕೃಶತ್ವ, ಬಲವು ತಗ್ಗುವಿಕೆ, ಅರುಚಿ, ಗುದದಲ್ಲಿ ಬಾಧೆ, ಅನ್ನವು ಜೀರ್ಣವಾಗಲು ಜೀರ್ಣವಾದಮೇಲೂ ಹೊಟ್ಟೆಯುಬ್ಬರಿಸುವಿಕೆ, ಊಟಮಾಡಿದಾಗ ಸ್ವಸ್ಥವಾಗಿರುವಿಕೆ, ದ್ರವವಾಗಿಯೂ, ಶುಷ್ಕವಾಗಿಯೂ, ಸೂಕ್ಷ್ಮವಾಗಿಯೂ, ನೊರೆಯಾಗಿಯೂ ಮಲವು ಸ್ರವಿಸುವಿಕೆ ಮೊದಲಾದ ಲಕ್ಷಣಗಳಿರುವುದು.

ಪಿತ್ತಗ್ರಹಣಿಯಲ್ಲಿ ಪಿತ್ತವು ಪ್ರಕೋಪಿಸಿ ಅಜೀರ್ಣವನ್ನು, ಹಳದಿ, ಕಪ್ಪು ಬಣ್ಣಗಳುಳ್ಳ ಮಲವನ್ನು ಆಗಾಗ್ಗೆ ಸ್ರವಿಸುವುದು. ಅಂತಹ ರೋಗವುಳ್ಳ ಮನುಷ್ಯನು ಹಳದಿ ಶರೀರವುಳ್ಳವನಾಗಿ, ದುರ್ಗಂಧಯುಕ್ತವಾದ ತೇಗುಗಳುಳ್ಳವನಾಗಿರುವನು ಮತ್ತು ಕಂಠ, ಹೃದಯ ಇವುಗಳಲ್ಲಿ ಉರಿ, ಅರುಚಿ, ದಾಹ ಈ ಲಕ್ಷಣಗಳಿರುವುವು.

ಕಫಗ್ರಹಣಿಯಲ್ಲಿ ಕಫವು ಪ್ರಕೋಪವಾಗಿ ಜಠರಾಗ್ನಿಯನ್ನು ನಾಶಪಡಿಸುವುದು. ಊಟಮಾಡಿದ ಆಹಾರವು ಕಷ್ಟವಾಗಿ ಜೀರ್ಣವಾಗುವುದು. ಮತ್ತು ಬಾಯಿಂದ ನೀರು ಸುರಿಯುವಿಕೆ, ವಾಂತಿ, ಅರುಚಿ, ಬಾಯಿಯು ಜಿಗುಟಾಗಿಯೂ ಸೀಯಾಗಿಯೂ ಇರುವಿಕೆ, ಕೆಮ್ಮು, ಬಾಯಿಂದ ಕಫವು ಬೀಳುವಿಕೆ, ನೆಗಡಿ, ಹೃದಯವು ಭಾರವಾಗಿರುವಿಕೆ, ವಿಕೃತವಾಗಿ ತೇಗುಗಳು ಬರುವಿಕೆ, ಅಗ್ನಿಮಾಂದ್ಯವು, ಆಮ ಕಫಗಳಿಂದೊಡಗೂಡಿದ ಮಲವು ಸ್ರವಿಸುವಿಕೆ, ಬಲವು ನಶಿಸುವಿಕೆ ಮೊದಲಾದ ಲಕ್ಷಣಗಳಿರುವುವು.

ಸನ್ನಿಪಾತ ಗ್ರಹಣಿಯಲ್ಲಿ ವಾತ, ಪಿತ್ತ, ಕಫಗಳಿಗೆ ಪ್ರತ್ಯೇಕಪ್ರತ್ಯೇಕವಾಗಿ ಹೇಳಿರುವ ಲಕ್ಷಣಗಳೆಲ್ಲವೂ ಉಂಟಾಗಿರುವುದು.

ಆಮಗ್ರಹಣಿಯಲ್ಲಿ ಆಮವು ಪ್ರತಿನಿತ್ಯವೂ ಆಗಲಿ, ನಾಲ್ಕುದಿನಗಳಿಗೊಂದು ಬಾರಿಯಾಗಲಿ, ಎಂಟುದಿನಗಳಿಗೊಂದುಸಾರಿಯಾಗಲಿ ಸ್ರವಿಸುವುದು.

## ಅತಿಸಾರದಲ್ಲಿ ಅಸಾಧ್ಯ ಲಕ್ಷಣ.

೧. ಮಲದಲ್ಲಿ ನಾನಾವರ್ಣಗಳು ತೋರಿ ಆಸನ ದ್ವಾರವು ಸಡಿಲವಾಗಿ ಮಾಂಸವನ್ನು ತೊಳದ ನೀರಿನಂತೆಯೂ, ಹೆಣದಂತೆಯೂ, ಹಾಲು, ಮೊಸರು, ಜೇನುತುಪ್ಪಗಳು ಕೆಟ್ಟನಾತದಂತೆಯೂ, ಹೆಣದ ಕಂಪಿನಂತೆಯೂ, ದುರ್ಗಂಧದಿಂದ ಕೂಡಿರುವ ಅತಿಸಾರವು ಅಸಾಧ್ಯವು.

೨. ಪಕ್ವವಾದ ನೇರಳೆಹಣ್ಣಿನಂತೆ ಮಲದಲ್ಲಿ ಕಪ್ಪುರಂಗು, ಎಣ್ಣೆ, ತುಪ್ಪ, ವಸೆ, ಮಜ್ಜೆಗಳಂತೆ ಜೊಂಡುತೋರಿ ಮೊಸರಿನ ಕೊಳೆನೀರಿನಂತೆಯೂ, ಮಾಂಸ ವನ್ನು ತೊಳೆದ ನೀರಿನಂತೆಯೂ ನೀಲಿ, ಕೆಂಪು ಮತ್ತು ಅನೇಕವಿಧ ರಂಗುಗಳಿಂದ ಕೂಡಿದ ಅತಿಸಾರವು ಅಸಾಧ್ಯವು.

೩. ಶ್ವಾಸ, ಶೂಲೆ, ನೀರಡಿಕೆ, ದೌರ್ಬಲ್ಯ, ಕಾರ್ಶ್ಯಜ್ವರ, ಪೀಡೆಗಳುಳ್ಳ ಅತಿಸಾರವು ಅಸಾಧ್ಯವು

೪. ದುರ್ಗಂಧಯುಕ್ತವಾಗಿ ಮಿದುಳಿನಂತೆ ಪ್ರವರ್ತಿಯಲ್ಲಿ ಬೀಳೋಣವು, ಮಲದಲ್ಲಿ ಆಧಿಕ್ಯವು, ನೀರಡಿಕೆ, ಅನ್ನದ್ವೇಷ, ಬಿಕ್ಕಳಿಕೆ, ಉಬ್ಬಸ, ಪಾರ್ಶ್ವ ಶೂಲೆ, ಮೂರ್ಛೆ, ಸಕಲ ಪದಾರ್ಥಗಳ ಆಶಾರಾಹಿತ್ಯ, ಆಸನದಲ್ಲ ಕೊಳೆತಹಾಗೆ ತೋರೋಣವು, ಪ್ರಲಾಪಗಳುಳ್ಳ ಅತಿಸಾರವು ಅಸಾಧ್ಯವು.

೫. ಯಾವ ಮನುಷ್ಯನಿಗೆ ಆಸನದ್ವಾರವು ತುಂಬಿದಹಾಗೆ ಇದ್ದು ದೇಹದಲ್ಲಿ ಕಾರ್ಶ್ಯವು, ಮೂಗಿನಲ್ಲಿ ವಿಶೇಷವಾಗಿ ಶಿಂಬಳತುಂಬಿ ಇರೋಣವು, ಆಸನದ್ವಾರ ದಲ್ಲಿ ಸಣ್ಣಸಣ್ಣ ಬೊಕ್ಕೆಗಳುಯೇಳುವಿಕೆಯೂ, ಭ್ರಮೆ, ಅಗ್ನಿನಾಶಗಳುಳ್ಳ ಅತಿ ಸಾರವು ಅಸಾಧ್ಯವು.

೬. ಗಂಟುಗಂಟಾಗಿ ಮಲಬಿದ್ದು ಮಾಂಸವನ್ನು ತೊಳೆದ ನೀರಿನಂತೆಯೂ, ತೈಲ, ಘೃತ, ಲವಣ, ದಧಿ, ಮಜ್ಜೆ, ವಸೆ, ಪೂಯಗಳಿಂದ ಕೂಡಿದಂತೆಯೂ, ಕಪ್ಪಿನಿಂದ ಕೂಡಿದ ಕೆಂಪಿನಂತೆಯೂ, ಜೇನಿನಂತೆಯೂ ಮಲವು ಸ್ರವಿಸಿದರೆ ಅಸಾಧ್ಯವು.

## ರಕ್ತಾತಿಸಾರದಲ್ಲಿ ಅಸಾಧ್ಯ ಲಕ್ಷಣ.

೧. ಹೆಚ್ಚಾಗಿ ರಕ್ತಬೀಳುವದು, ದುರ್ಗಂಧ, ಬಿಳಪುರಂಗು, ಆಸನದ್ವಾರ ದಲ್ಲಿ ನೋವು, ಸರ್ವದಾ ರಕ್ತಸ್ರಾವ, ಧಾತುನಾಶ, ಬದ್ಧಮಲ, ಕೆಲವುಕಾಲ ಮಲದಲ್ಲಿ ಅತಿಸ್ರಾವ ಮತ್ತು ಧಾರದಂತೆ ಬೀಳೋಣ, ಅದಕ್ಕೆ ನೊಣಗಳು ಮುತ್ತೋಣ, ಆಸನ ದ್ವಾರವು ತೆರದಿರುವದು, ಮೈಮೇಲೆ ಕೆಂಪಾಗಿ ಗುಂಡು ಗುಂಡಾಗಿರುವರೀತಿ ಕಾಣಿಸುವದು, ಅಂಡೆದಮೇಲಿನ ಚರ್ಮ ಶಳಿಯುವದು, ತಿಂದ ಅನ್ನವೇ ಮಲದಲ್ಲಿ ಬೀಳುವದು, ಸರ್ವಾಂಗಸಂಧಿ, ಶೈಥಿಲ್ಯ, ಬಲಹಾನಿ, ಅಗ್ನಿನಷ್ಟ, ಶ್ವಾಸ, ಕಾಸದಲ್ಲಿ ರಕ್ತಬೀಳುವಿಕೆ, ಜ್ವರ, ದಾಹಗಳಿಂದ ಕೂಡಿದ ಅತಿಸಾರವು ಅಸಾಧ್ಯವು.

## ರಕ್ತಪ್ರವರ್ತಿಯಲ್ಲಿ ಅಸಾಧ್ಯ ಲಕ್ಷಣ.

೧. ಕೀವಿನಿಂದ ಕೂಡಿದ ರಕ್ತಸ್ರಾವ, ಆಸನದ್ವಾರದಲ್ಲಿ ನೋವು, ಮೇಲು ಸುರು ಕೆಮ್ಮುಗಳಿಂದ ಕೂಡಿದ್ದರೆ ಅಸಾಧ್ಯವು.

## ಸಂಗ್ರಹಣೀಯಲ್ಲಿ ಅಸಾಧ್ಯ ಲಕ್ಷಣ.

೧ ತ್ರಿದೋಷದಿಂದ ಹುಟ್ಟಿ, ಹುಟ್ಟಿದಾರಭ್ಯ ನಿಶ್ಚಿಬಾರದೆ ಕರಳು ಹೊರಗೆ ಬರುತ್ತಾ ಬಲವು ಕಡಿಮೆಯಾಗುತ್ತಿರುವ ಸಂಗ್ರಹಣಿಯು ಅಸಾಧ್ಯವು.

೨. ಕೈ, ಕಾಲು, ನಾಭಿ, ಗುದ, ಮುಖಗಳಲ್ಲಿ ಶೋಭೆ, ಹೃದಯ, ಪಾರ್ಶ್ವ ಗಳಲ್ಲಿ ಶೂಲೆಗಳುಳ್ಳ ಸಂಗ್ರಹಣಿಯು ಅಸಾಧ್ಯವು.

೩. ಅಸಾಧ್ಯ ಮೂಲವ್ಯಾಧಿ ಇದ್ದು ರೋಗಿಗೆ ಆಯುಷ್ಯವಿದ್ದು ಚತುಷ್ಪಾದ ಜಂತುವಿನಂತೆ ನಡೆಯುತ್ತಿರುವವನಿಗೆ ಅಗ್ನಿನಷ್ಟವಾದ ಸಂಗ್ರಹಣಿಯು ಅಸಾಧ್ಯವು.

೪. ಹೃದಯದಲ್ಲೂ ಪಾರ್ಶ್ವದಲ್ಲಿಯೂ ಶೂಲೆ, ಸಂಮೋಹ, ಛರ್ದಿ, ಮೈನೋವು, ಜ್ವರ ಇವುಗಳಿದ್ದು ತೃಷ್ಣಾ, ಗುದಸ್ಥಾನದಲ್ಲಿ ಮೆತ್ತಗಿದ್ದು ಹುಣ್ಣು ಇದ್ದರೆ ಅಂಥಾ ಸಂಗ್ರಹಣಿ ಅಸಾಧ್ಯವು.

೫. ತೃಷ್ಣಾ, ಅರುಚಿ, ಶೂಲೆ, ಅಧಿಕರಕ್ತಸ್ರಾವ, ಶೋಭೆ, ಅತಿಸಾರ, ಅರ್ಶ ಇವುಗಳಿಂದ ಕೂಡಿದ ಸಂಗ್ರಹಣಿಯು ಅಸಾಧ್ಯವು.

೬. ತ್ರಿದೋಷದಿಂದ ಹುಟ್ಟಿದ್ದಾಗಿ ಹೊಟ್ಟೀ ದಪ್ಪನಾಗಿ, ಕೈ, ಕಾಲು, ಗುದ, ಹೊಟ್ಟಿ, ಅಂಡ ಇವುಗಳಲ್ಲಿ ಶೋಭೆಯು ಇದ್ದು ಪಾರ್ಶ್ವ, ಹೃದಯ ಇವುಗಳಲ್ಲಿ ಶೂಲೆ ಇವುಗಳುಳ್ಳ ಸಂಗ್ರಹಣಿಯು ಅಸಾಧ್ಯವು.

೭ ವಾಂತಿ, ಜ್ವರ, ಮೋಹ, ತೃಷ್ಣಾ, ಗುದದ್ವಾರ ಪಕ್ವವಾಗಿರುವರೀತಿ ಇರುವದು, ಅಗ್ನಿಮಾಂದ್ಯ, ಅರುಚಿ, ಅಂಗಭಂಗ ಇವುಗಳಿರುವ ಸಂಗ್ರಹಿಣಿಯು ಅಸಾಧ್ಯವು.

೮. ಮೂಲವ್ಯಾಧಿಯಲ್ಲಿ ಕಣ್ಣುಕಾಣದೆ ಹೋದರೂ, ಹೊಟ್ಟಿ, ಕಣ್ಣು, ಕೈ, ಕಾಲು, ಗುದ, ಅಂಡ ಇವುಗಳಲ್ಲ ಶೋಭೆಯಿದ್ದರೂ, ಹೃದಯಶೂಲೆ, ಶ್ವಾಸ, ಶೋಷೆ, ಅತಿಸಾರದಲ್ಲಿ ಅತ್ಯಂತ ರಕ್ತ ಇವುಗಳಿದ್ದರೆ ಅಂಥಾ ಸಂಗ್ರಹಣಿಯು ಅಸಾಧ್ಯವು.

## ಅತಿಸಾರ, ಗ್ರಹಣಿ ಚಿಕಿತ್ಸೆಗಳು.

೧. ಮಹಾಗ್ರಹಿಣಿ ವಟಕ:— ಕರ್ಕಾಟಕಶೃಂಗಿ, ದಾಲಚಿನ್ನಿ, ಕೆಂಪುಕಾಚು, ಜಟಾಮಾಂಸಿ, ಶುದ್ಧಿಮಾಡಿದ ಅತಿಬಜೆ ಅಜಮೋದ, ಅಗುಳುಶೊಂಟಿ, ತುಂಗೇಗಡ್ಡೆ, ಬೂರುಗದಬಂಕೆ, ಜಾಕಾಯಿ, ಜಾಪತ್ರೆ, ಲವಂಗ, ಭಂಗೀಸೊಪ್ಪು, ಅಫೀಮು, ವೋಮ, ಖುರಾಸಾನಿವೋಮ, ಶೊಂಟಿ, ಗಸಗಸೆ ಇವು ಜಿನಸಿಗೆ || ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಒಂದು ಯಳೇದಾಳಿಂಬರೇಕಾಯಿ ತಂದು ಅದರಲ್ಲಿರುವ ಬೀಜ ತೆಗೆದು ಮೇಲ್ಕಂಡ ಜಿನಸಿ ಚೂರ್ಣ ತುಂಬಿ ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಒಂದು ಗೇಣುವುದ್ದ ಪುಟಹಾಕ

ಬೇಕು ಅನಂತರ ಸಿಪ್ಪೆ ತೆಗೆದು ಹಾಕಿ ಒಳಗಿರುವ ಔಷಧಿಯನ್ನು ಖಲ್ವದಲ್ಲಿ ಹಾಕಿ ನೀರು ಹಾಕಿ ಅರದು ಕಡಲೇ ಪ್ರಮಾಣ ಮಾತ್ರೆ ಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ೧ ಮಾತ್ರೆ ತಣ್ಣೀರಿನಲ್ಲಿ ಕಲಸಿ ಕೊಡುವದು. ಹೀಗೆ ಬೆಳಗ್ಯೆ ಸಾಯಂಕಾಲ ೨ ಹೊತ್ತು ಬೇದಿ ನಿಲ್ಲುವವರಿವಿಗು ಮಾತ್ರೆ ಕೊಡಬೇಕು. * ಗ್ರಹಣಿಗೆ ಪಥ್ಯ ರವೆಗಂಜಿ ಸಕ್ಕರೆ ಹಾಕಿ ಕಾಯಿಸಿ ಹಸುವಿನ ಹಾಲು ಹಾಕಿ ಕೊಡುವದು. ಗಸಗಸೆ ಹುರದು ನೀರು ಹಾಕಿ ಅರದು ಸಕ್ಕರೆ ಹಾಕಿ ಗಂಜಿ ಮಾಡಿಕೊಡುವದು. ಇದರಿಂದ ತರಹೇವಾರಿ ಭೇದಿಗಳು, ಮಹಾಗ್ರಹಣಿ, ಆಮಶಂಕೆ ಇವು ಗುಣವಾಗುವವು.

೨. ಅಫೀಂ ೧ ತೊಲೆ, ಶುದ್ಧಿಮಾಡಿದ ಇಂಗಲೀಕ ಕಾಲುತೊಲೆ, ಪಟಿಕಿ ಅರಳುಮಾಡಿದ್ದು ಕಾಲುತೊಲೆ, ಸೂರ್ತಿಬೆಳಗಾರ ಅರಳುಮಾಡಿದ್ದು ಕಾಲುತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ಅರದು ಮೆಣಸು ಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಗಸಗಸೆ ಹಾಲಿನಲ್ಲಿ ಕೊಡುವದು. ಹೀಗೆ ಬೆಳಗ್ಯೆ ಸಾಯಂಕಾಲ ೨ ಹೊತ್ತು ಬೇದಿ ನಿಲ್ಲುವವರಿವಿಗು ಮಾತ್ರೆ ಕೊಡಬೇಕು ಇದರಿಂದ ಆಮಶಂಕೆ ಬೇದಿಗಳು, ತರಹೇವಾರಿ ಬೇದಿಗಳು ಗುಣವಾಗುವದು.

೩. ಬಿಲ್ವಾದಿ ಲೇಹ:—ಎಳೇಬಿಲ್ವಪತ್ರೆಕಾಯಿ ತಂದು ಒಣಗಿಸಿ ಚೂರ್ಣ ಮಾಡಿದ್ದು ತೂಕ ೧ ಶೇರು, ಶೊಂಟಿ ೧ ತೊಲೆ, ಅಗಿಲುಶೊಂಟಿ ೧ ತೊಲೆ, ಅರಸಿನ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ಚಿತ್ರಮೂಲ ೧ ತೊಲೆ, ಶುದ್ಧಿಮಾಡಿದ ಹಿಕೇಮದ್ದಿನಗಡ್ಡೆ ೧ ತೊಲೆ, ಇಂಗಳದ ಬೇರು ೧ ತೊಲೆ, ವೋಮ [illegible] ಕೊತ್ತುಂಬರಿ ಬೀಜ ೧ ತೊಲೆ, ಜಾಕಾಯಿ ೧ ತೊಲೆ, ಆನೇನೆಗ್ಗಿಲು [illegible] ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಒಂದು ಬ[illegible]ಯಲ್ಲಿ ೧॥ ಶೇರು ರಾಯಿಪುಡಿಸಕ್ಕರೆ ಹಾಕಿ ನೀರು ಹಾಕಿ ವಲೆಯ ಮೇಲೆ ಇಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣವನ್ನು ಹಾಕಿ ಪಕ್ವವಾಗಿ ಲೇಹಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ಯಲಚೀಬೀಜದ ಪ್ರಮಾಣ ಕೊಡುವದು. ಹೀಗೆ ಬೆಳಗ್ಯೆ ಸಾಯಂಕಾಲ ೨ ಹೊತ್ತು ಬೇದಿ ನಿಲ್ಲುವವರಿವಿಗು ಕೊಡಬೇಕು. ಇದರಿಂದ ಗ್ರಹಣಿ, ಅತಿಸಾರ, ಹೊಟ್ಟೆ ಉಬ್ಬರ ಗುಣವಾಗುವದು.

೪. ಬಿಳೀಸೊಲಸೊಪ್ಪು, ಹೊಟ್ಟು ತೆಗೆದ ಬೆಳ್ಳುಳ್ಳಿ, ಮೆಣಸು ಇವು ಸಮಭಾಗ ಅರದು ಗಜ್ಜುಗದಷ್ಟು ಹಸುವಿನ ಮೊಸರಿನಲ್ಲಿ ಕಲಸಿ ಕೊಡುವದು. ಹೀಗೆ

* ಗ್ರಹಣಿ ಮತ್ತು ಅತಿಸಾರ ರೋಗಗಳಲ್ಲಿ ಮಹಾಗ್ರಹಣಿ ಮಟಕದ ಅಂತ್ಯದಲ್ಲಿರುವ ಪಥ್ಯಕ್ರಮವನ್ನೇ ಅನುಸರಿಸಬೇಕು.

ಬೆಳಿಗ್ಗೆ ಸಾಯಂಕಾಲ ೨ ಹೊತ್ತು ಬೇದಿ ನಿಲ್ಲುವವರಿವಿಗು ಕೊಡಬೇಕು ಇದರಿಂದ ಗ್ರಹಣಿ, ಅತಿಸಾರ ಗುಣವಾಗುವದು

೫. ತಾರೇಕಾಯಿ ಗಿಡದಯಳೆ ಕುಡಿ ತಂದ ಕುಟ್ಟಿ ಗಜ್ಜುಗದಷ್ಟು ಹಸುವಿನ ಮೊಸರಿನಲ್ಲಿ ಕಲಸಿ ಕೊಡುವದು ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ಬೇದಿ ನಿಲ್ಲುವವರಿವಿಗು ಕೊಡಬೇಕು. ಇದರಿಂದ ಗ್ರಹಣಿ, ಅತಿಸಾರ ಗುಣವಾಗುವದು.

೬ ದುಸ್ಸಾರೆಸೊಪ್ಪು ತಂದು ಬಿಸಿನೀರಿನಲ್ಲಿ ಚನ್ನಾಗಿ ಹಿಸಿಕಿ ಅದಕ್ಕೆ ಸ್ವಲ್ಪ ಅರಿಶಿನದಪುಡಿ, ಸಕ್ಕರೆ ಹಾಕಿ ಕಲಸಿಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ಬೇದಿ ನಿಲ್ಲುವವರಿವಿಗು ಕೊಡಬೇಕು. ಇದರಿಂದ ಗ್ರಹಣಿ, ಅತಿಸಾರ ಗುಣವಾಗುವದು.

೭ ಹಿಪ್ಪಲಿ ೧ ತೊಲೆ ತಂದು ಇದಕ್ಕೆ ಕೆಮ್ಮಣ್ಣು ಬಟ್ಟೆ ಸುತ್ತಿ ಅದರ ಮೇಲೆ ಒಂದು ಹೇರಳೆಕಾಯಿ ಗಾತ್ರ ರಾಗಿಹಿಟ್ಟು ನೀರಿನಿಂದ ಕಲಸಿ ಕವಚಕೊಟ್ಟು ಒಂದು ಮಡಿಕೆಯಲ್ಲಿ ನೆಲ್ಲುಹೊಟ್ಟು ನೀರು ಹಾಕಿ ಕಲಸಿ ಮಡಿಕೆಯ ತಳದಲ್ಲಿ ಮೇಲ್ಕಂಡ ಹಿಪ್ಪಲಿಯ ಉಂಡೆಯನ್ನು ಇಟ್ಟು ಅದರಮೇಲೆ ಕಲಸಿದ ನೆಲ್ಲುಹೊಟ್ಟು ಮುಚ್ಚಿ ಮಡಿಕೆಮೇಲೆ ಮುಚ್ಚಳ ಮುಚ್ಚಿ ಒಲೆಯಮೇಲಿಟ್ಟು ೧ ಜಾವ ಕಮಲಾಗ್ನಿಯಾಗಿ ಉರಿಹಾಕಿ ಸದರಿ ಹಿಪ್ಪಲಿಯನ್ನು ತೆಗೆದುಕೊಂಡು ಖಲ್ವದಲ್ಲಿ ಹಾಕಿ ಕುರಿಯ ಹಾಲು ಹಾಕಿ ೧ ಜಾವ ಚನ್ನಾಗಿ ಅರದು ಕಡಲೇಕಾಳುಗಾತ್ರ ಮಾತ್ರೆಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ೧ ಮಾತ್ರೆ ಬಾಯಲ್ಲಿ ಹಾಕಿಕೊಂಡು ತಣ್ಣೀರು ಕುಡಿಯುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ಬೇದಿ ನಿಲ್ಲುವವರಿವಿಗು ಮಾತ್ರೆಯನ್ನು ಕೊಡಬೇಕು. ಇದರಿಂದ ಗ್ರ[illegible]ಅತಿಸಾರ ಗುಣವಾಗುವದು.

೮. ಶುದ್ಧಿಮಾಡಿದ ಅತಿಬಜೆ ೧ ವರಹ ತೂಕ, ಗೋರೋಚನ ೧ ವರಹ ತೂಕ, ಕುಂಕುಮಕೇಸರಿ ೧ ವರಹ ತೂಕ, ಅಫೀಂ ೧ ಹಣತೂಕ, ಜಾಕಾಯಿ ೧ ವರಹ ತೂಕ, ಮೆಣಸು ೧ ವರಹ ತೂಕ, ಜಾಪತ್ರೆ ೧ ವರಹ ತೂಕ, ಲವಂಗ ೧ ವರಹ ತೂಕ ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಅರಿಯುವ ಜಿನಸುಗಳನ್ನು ಅರದು ಎಲ್ಲವನ್ನು ಸೇರಿಸಿ ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲಿ ಅರದು, ನಿಂಬೇಹಣ್ಣು ಕುಯಿದು ಒಂದು ಹೋಳಿನ ರಸ ಹಿಂಡಿ, ರಸ ಇಲ್ಲದೆ ಇರುವದರಲ್ಲಿ ಮೇಲ್ಕಂಡ ಖಲ್ವದಲ್ಲಿ ಅರದ ಔಷಧವನ್ನು ಇಟ್ಟು ಅದರಮೇಲೆ ರಸವಿರುವ ಒಪ್ಪನ್ನು ಮುಚ್ಚಿ ಬೆಂಕಿ ಕೆಂಡದಮೇಲೆ ರಸ ಹಿಂಗುವ ತನಕ ಇಟ್ಟು ತೆಗೆದುಕೊಂಡು ಖಲ್ವದಲ್ಲಿ ಹಾಕಿ ಅರಿಯುವದು. ಈ ರೀತಿ ನಿಂಬೇಹಣ್ಣಿನಲ್ಲಿ ೭ ಸಲ ಪುಟ ಹಾಕುವದು. ಅನಂತರ ಖಲ್ವದಲ್ಲಿ ಹಾಕಿ

ಅರಕಡಲೆಕಾಳಷ್ಟು ಮಾತ್ರೆ ಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ೧ ಮಾತ್ರೆ ಮೊಸರಿನಲ್ಲಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ಬೇದಿ ನಿಲ್ಲುವವರಿವಿಗು ಮಾತ್ರೆಯನ್ನು ಕೊಡಬೇಕು. ಇದರಿಂದ ಬಾಣಂತಿಯರ ಬೇದಿ, ರಕ್ತಬೇದಿ, ಅತಿಸಾರ ಬೇದಿ, ಸರ್ವಾತಿಸಾರ ಬೇದಿ ಗುಣವಾಗುವದು.

೯. ಮೆಣಸು ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಜಂಬುನೇರಳೆ ಚಕ್ಕೆ ರಸದಲ್ಲಿ ಅರದು ಬಿಲ್ಲೆಮಾಡಿ ಕೆಳಗೆ ಮೇಲೆ ಜಂಬುನೇರಳೆ ಯಲೆಗಳನ್ನು ಇಟ್ಟು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಕುಕ್ಕುಟಪುಟ ಇಡುವದು. ಈರೀತಿ ಏಳಾವರ್ತಿ ಪುಟವಿಟ್ಟು ತೆಗೆದು ಖಲ್ವದಲ್ಲಿ ಹಾಕಿ ಜಂಬುನೇರಳೆಚಕ್ಕೆ ರಸದಲ್ಲಿ ಅರದು ಅವರೇಕಾಳು ಪ್ರಮಾಣ ಮಾತ್ರೆ ಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ೧ ಮಾತ್ರೆ ತಣ್ಣೀರಿನಲ್ಲಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ಬೇದಿ ನಿಲ್ಲುವವರಿವಿಗು ಕೊಡಬೇಕು. ಇದರಿಂದ ವಾತದಿಂದ ಹುಟ್ಟಿದ ಆಮ, ರಕ್ತ ಗುಣವಾಗುವದು.

೧೦. ಬಿಳೇ ಜೀರಿಗೆ ತಂದು ಬಟ್ಟೆಯಲ್ಲಿ ಗಂಟುಕಟ್ಟಿ ಒಂದು ಸೌಟಿನಲ್ಲಿ ಹಸುವಿನ ಮಜ್ಜಿಗೆ ಹಾಕಿ ಈ ಗಂಟು ಅದರಲ್ಲಿ ಇಟ್ಟು ಬೆಂಕಿಯ ಮೇಲೆ ಇಟ್ಟು ಮಜ್ಜಿಗೆ ಹಿಂಗುವವರಿವಿಗು ಕಾಯಿಸಿ ಈಚೆಗೆ ತೆಗೆದುಕೊಳ್ಳುವದು. ಈರೀತಿ ೩ ಸಲ ಮಾಡುವದು. ಇದನ್ನು ಖಲ್ವದಲ್ಲಿ ಹಾಕಿ ಹಸುವಿನ ಮಜ್ಜಿಗೆಯಿಂದ ಅರದು ಬಿಲ್ಲೆಮಾಡಿ ಕೆಳಗೆ ಮೇಲೆ ಜಂಬುನೇರಳೆ ಎಲೆಗಳನ್ನು ಹಾಕಿ ಕೆಮ್ಮಣ್ಣು ಬಟ್ಟೆ ಚೀಲುಮಾಡಿ ೧ ಗೇಣು ಪುಟ ಇಟ್ಟುಕೊಳ್ಳುವದು. ಈರೀತಿ ೩ ಸಲ ಪುಟ ಇಡುವದು. ಇದನ್ನು ತೆಗೆದು ಖಲ್ವದಲ್ಲಿ ಹಾಕಿ ಹಸುವಿನ ಮಜ್ಜಿಗೆಯಿಂದ ಅರದು ಅವರೇಕಾಳು ಪ್ರಮಾಣ ಮಾತ್ರೆಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ೧ ಮಾತ್ರೆ ತಣ್ಣೀರಿನಲ್ಲಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ಬೇದಿ ನಿಲ್ಲುವವರಿವಿಗು ಕೊಡಬೇಕು. ಇದರಿಂದ ಉಷ್ಣದಿಂದ ಹುಟ್ಟಿದ ಗ್ರಹಣಿ ಗುಣವಾಗುವದು.

೧೧. ಜಾಕಾಯಿ ಕಾಲುತೊಲೆ, ಜಾಪತ್ರೆ ಕಾಲುತೊಲೆ, ಕುಂಕುಮಕೇಸರಿ ೧ ಆಣಿತೂಕ, ಶುದ್ಧಿಮಾಡಿದ ಇಂಗಳೀಕ ೧ ಆಣಿ ತೂಕ, ಗೋರೋಜನ ೧ ಆಣಿ ತೂಕ, ಮಜ್ಜಿಗೆಗಡ್ಡೆ ಕಾಲುತೊಲೆ, ಮಾಯಿಪಾಳದಕಾಯಿ ಕಾಲುತೊಲೆ, ಅಫೀಂ ೧ ಆಣಿ ತೂಕ, ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿ ಅರಿಯುವ ಜಿನಸುಗಳನ್ನು ಅರದು ಎಲ್ಲವನ್ನು ಸೇರಿಸಿ ಇಟ್ಟು ಕೊಳ್ಳುವದು. ಜಾಕಾಯಿತಂದು ಮಧ್ಯದಲ್ಲಿ ರಂಧ್ರಮಾಡಿ ಅದರಲ್ಲಿ ಮೇಲ್ಕಂಡ ಚೂರ್ಣವನ್ನು ತುಂಬಿ ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಒಂದೊಂದು ಜಾಕಾಯಿ ೧ ಬೆರಣಿಯಲ್ಲಿ ಪುಟ ಇಡುವದು. ಅದನ್ನು ತೆಗೆದುಕೊಂಡು ಖಲ್ವದಲ್ಲಿಹಾಕಿ

ತಣ್ಣೀರಿನಿಂದ ಅರದು ತೊಗರೀಕಾಳು ಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ತಣ್ಣೀರಿನಲ್ಲಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ಬೇದಿ ನಿಲ್ಲುವವರಿವಿಗು ಕೊಡಬೇಕು. ಇದರಿಂದ ಗ್ರಹಣಿ, ಅತಿಸಾರ ಗುಣವಾಗುವದು.

೧೨. ಬಜೆ, ಶೊಂಟೆ, ಅಕ್ಕಲಕರೆ, ಹಿಪ್ಪಲಿ, ಅಗಿಲುಶೊಂಟೆ ಇವು ಸುಟ್ಟು ಕರುಕುಮಾಡಿಕೊಳ್ಳುವದು. ಬಿಳೇಜೀರಿಗೆ, ಮೆಣಸು, ವೋಮ, ಮೋಡಿ, ಅಜಾಮೊದ, ಧಾತಕೀಕುಸುಮ, ಖುರಾಸಾನಿವೋಮ, ಶುದ್ಧಿಮಾಡಿದ ಅತಿ ಬಜೆ, ಬೂರುಗದಬಂಕೆ, ದಾಲಚಿನ್ನಿ, ಕೊಡಸಿಗೆಬೀಜ ಇವುಗಳನ್ನು ಸುಮಾ ರಾಗಿ ಹುರಿದುಕೊಂಡು ಮೇಲ್ಕಂಡ ಕರುಕು ಇವು ಎಲ್ಲವನ್ನು ಕೇರಿಸಿ ಕುಟ್ಟಿ ಚೂರ್ಣಮಾಡಿ ಇದಕ್ಕೆ ಸಮ ಹಳೇಬೆಲ್ಲ ಒಂದು ಬಾಂಡ್ಲಿಯಲ್ಲಿ ಹಾಕಿ ವಲೆಯ ಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣಹಾಕಿ ಪಕ್ವವಾಗಿ ಲೇಹಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ಯಲಚೀಬೀಜದ ಪ್ರಮಾಣ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ಕೊಡಬೇಕು. ಬೇದಿ ನಿಲ್ಲುವವರಿವಿಗು ಕೊಡುತ್ತಾ ಬರುವದು. ಇದರಿಂದ ಜೀರ್ಣಶಕ್ತಿಯಿಲ್ಲದೆ ಬೇದಿ ಆಗುವದು ಗುಣವಾಗುವದು.

೧೩. ಧಾತಕೀಕುಸುಮ, ಬ್ಯಾಲದಬೀಜ, ಲೋಧ್ರದಚಕ್ಕೆ, ಕರೇಜೀರಿಗೆ ಬಿಳೇಜೀರಿಗೆ, ವೋಮ, ಹಿಪ್ಪಲಿ, ಶೊಂಟೆ, ದಾಳಿಂಬರೆಕಾಯಿಸಿಪ್ಪೆ, ಮಾವಿನ ಬೀಜದಪಪ್ಪು, ನೇರಳೇಚಕ್ಕೆ, ಹುಣಿಸೇಬೀಜದಬೊಬ್ಬಡೆ ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು ಹೊತ್ತಿಗೆ ೩ಾಲುತೊಲೆ ಚೂರ್ಣ ಅಕ್ಕಿತೊಳದ ನೀರಿನಲ್ಲಿ ಆಗಲಿ, ಮೊಸರುಬಟ್ಟೆಯಲ್ಲಿ ಗಂಟುಕಟ್ಟಿ ಅದರ ನೀರಿನಲ್ಲಿ ಆಗಲಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ಬೇದಿನಿಲ್ಲುವವರಿವಿಗು ಕೊಡಬೇಕು. ಇದರಿಂದ ಗ್ರಹಣಿ, ಅತಿಸಾರ ಗುಣ ವಾಗುವದು.

೧೪. ಜಾಕಾಯಿ, ಜಾಪತ್ರೆ, ಲವಂಗ, ಗಸಗಸೆ, ಕೊತ್ತುಂಬರಿಬೀಜ, ಲೋಧ್ರದಚಕ್ಕೆ, ದೊಡ್ಡಮರದಚಕ್ಕೆ, ಬೂರುಗದಬಂಕೆ, ತಕ್ಕೋಲ, ಕೊಡ ಸಿಗೆಬೀಜ, ಖುರಾಸಾನಿವೋಮ, ಧಾತಕೀಕುಸುಮ, ಹುಣಿಸೇಬೀಜದಬೊಬ್ಬಡೆ, ಎಳೇಬಿಲ್ಪತ್ರೆಕಾಯಿ, ತುಂಗೇಗಡ್ಡೆ, ಮೋಡಿ, ಮೆಣಸು, ಶೊಂಟೆ ಇವು ಸಮ ಭಾಗ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿಹಾಕಿ ಹಸುವಿನ ಮೊಸರು ಹಾಕಿ ಅರದು ಮುದ್ದೇಮಾಡಿ ನೇರಳೆಯಲೆಯಲ್ಲಿ ಕವಚಕೊಟ್ಟು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ೧ ಗೇಣು ಪುಟ ಇಟ್ಟು ತೆಗೆದುಕೊಂಡು ದಾಳಿಂಬರೆಕಾಯಿ ವಳಗೆ ಇರುವ ಬೀಜತೆಗದು ಅದರಲ್ಲಿ ಮೇಲ್ಕಂಡ ಔಷಧವನ್ನು ಇಟ್ಟು ಕೆಮ್ಮಣ್ಣು

ಬಟ್ಟೆ ಚೀಲುಮಾಡಿ ೧ ಗೇಣು ಪುಟ ಇಡುವದು. ದಾಳಿಂಬರೆಕಾಯಿ ವಳಗೆ ಇರುವ ಔಷಧವನ್ನು ತೆಗೆದುಕೊಂಡು ಕುಟ್ಟಿ ಚೂರ್ಣಮಾಡಿ ಹೊತ್ತಿಗೆ ಕಾಲು ತೊಲೆ ಚೂರ್ಣ ಹಸುವಿನ ಹಾಲಿನಲ್ಲಿ ಹಾಕಿ ಕಲಸಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ಬೇದಿ ನಿಲ್ಲುವವರಿವಿಗು ಕೊಡಬೇಕು. ಇದರಿಂದ ಗ್ರಹಣಿ, ಅತಿಸಾರ ಗುಣವಾಗುವದು.

೧೫. ಶುದ್ಧಿಮಾಡಿದ ಇಂಗಲೀಕ ಕಾಲುತೊಲೆ, ಸೂರ್ತಿಬೆಳಗಾರ ಅರಳು ಮಾಡಿದ್ದು ॥ ತೊಲೆ, ಚಿತ್ರಮೂಲ ೧ ತೊಲೆ, ಶುದ್ಧಿಮಾಡಿದ ಅಳಿಬಜೆ ೧ ತೊಲೆ ಉರಿಯುವದು, ಜಾಕಾಯಿ ೧ ತೊಲೆ ಉರಿಯವದು, ತುಂಗೇಗಡ್ಡೆ ೧ ತೊಲೆ, ಚಿಟ್ಟಾಮುಟ್ಟೆ ೧ ತೊಲೆ, ಕೊಡಸಿಗೆಬೀಜ ೪ ತೊಲೆ, ದಾಲಚಿನ್ನಿ ೧ ತೊಲೆ ಉರಿಯುವದು, ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಅರಿಯುವ ಜಿನಸುಗಳನ್ನು ಅರದು ಎಲ್ಲವನ್ನು ಸೇರಿಸಿ ಖಲ್ವದಲ್ಲಿ ಹಾಕಿ ಕರೇವುಮ್ಮತ್ತಿಸೊಪ್ಪಿನ ರಸದಲ್ಲಿ ಅರದು ಗುರುಗಂಜಿ ಪ್ರಮಾಣ ಮಾತ್ರೆಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ೧ ಮಾತ್ರೆ ಹಸುವಿನ ಹಾಲಿನಲ್ಲಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ಬೇದಿ ನಿಲ್ಲುವವರಿವಿಗು ಕೊಡುತ್ತಾ ಬರುವದು. ಇದರಿಂದ ಗ್ರಹಣಿ, ಅತಿಸಾರ ಗುಣವಾಗುವದು.

೧೬. ಮೆಂತ್ಯ ೧ ತೊಲೆ, ಲವಂಗ ೧ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಶುಂಟಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಬಿಳೇಜೀರಿಗೆ ೧ ತೊಲೆ, ಮೋಡಿ ೧ ತೊಲೆ, ಚಿತ್ರಮೂಲ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿಹಾಕಿ ಅಫೀಂ ಕಾಲುತೊಲೆ ಬೆರಸಿ ನಿಂಬೇಹಣ್ಣಿನ ರಸದಲ್ಲಿ ಅರದು ಖರ್ಜೂರತಂದು ಅದರಲ್ಲಿರುವ ಬೀಜತೆಗೆದು ಅದರಲ್ಲಿ ಮೇಲ್ಕಂಡ ಔಷಧವನ್ನು ತುಂಬಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಬೆಂಬೂದಿಯಲ್ಲಿ ಸುಟ್ಟು ತೆಗೆದು ಖಲ್ವದಲ್ಲಿಹಾಕಿ ಜೇನುತುಪ್ಪ ಹಾಕಿ ಅರದು ಕಡಲೇಪ್ರಮಾಣ ಮಾತ್ರೆಮಾಡುವದು. ಹೊತ್ತಿಗೆ ೧ ಮಾತ್ರೆ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ಬೇದಿ ನಿಲ್ಲುವವರಿವಿಗು ಕೊಡಬೇಕು. ಇದರಿಂದ ಅಜೀರ್ಣ, ಗ್ರಹಣಿ, ಅತಿಸಾರ ಗುಣವಾಗುವದು.

೧೭. ಮೋಡಿ ೧ ತೊಲೆ, ಗಸಗಸೆಹೊಟ್ಟು ೧ ತೊಲೆ, ಅತಿಮಧುರ ೧ ತೊಲೆ, ಧಾತಕೀಕುಸುಮ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಕೊಂಡು ಅಫೀಂ ಕಾಲುತೊಲೆ ಬೆರಸಿ ಖಲ್ವದಲ್ಲಿ ಹಾಕಿ ನೀರುಹಾಕಿ ಅರದು ಒಂದು ಬಾಂಡ್ಲಿಯಲ್ಲಿ ಹಾಕಿ ೫ ತೊಲೆ ಹಳೇಬೆಲ್ಲ ಸ್ವಲ್ಪ ನೀರುಹಾಕಿ ವಲೆಯ ಮೇಲೆ ಇಟ್ಟು ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣಹಾಕಿ ಪಕ್ವ ವಾಗಿ ಲೇಹಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ಅವರೇಕಾಳುಗಾತ್ರ ಕೊಡು

ವದು ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ಬೇದಿ ನಿಲ್ಲುವವರಿವಿಗು ಕೊಡಬೇಕು. ಇದರಿಂದ ಗ್ರಹಣಿ, ಅತಿಸಾರ ಗುಣವಾಗುವದು.

೧೮. ಗಸಗಸೆಹೊಟ್ಟು ೨ ತೊಲೆ ಅರ್ಧ ಹುರದದ್ದು ಅರ್ಧ ಹಸೇದು, ಒಣಗಿದ ಕೊಬ್ಬರಿ ಅರ್ಧ ಸುಟ್ಟದ್ದು ಅರ್ಧ ಹಸೇದು, ತಾಟಿಬೆಲ್ಲ ೨ ತೊಲೆ, ವೋಮ ೨ ತೊಲೆ, ಮೋಡಿ ೨ ತೊಲೆ, ಶುದ್ಧಿಮಾಡಿದ ಅತಿಬಜೆ ೨ ತೊಲೆ, ಕೊಡಸಿಗೆಬೀಜ ೨ ತೊಲೆ, ಧಾತಕೀಕುಸುಮ ೨ ತೊಲೆ ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಶೋಧಿಸಿ ಅರಿಯುವ ಜಿನಸುಗಳನ್ನು ಅರದು ಎಲ್ಲವನ್ನು ಸೇರಿಸಿ ಖಲ್ವದಲ್ಲಿ ಹಾಕಿ ಜೇನುತುಪ್ಪ ಹಾಕಿ ಅರದು ಇಟ್ಟುಕೊಳ್ಳುವದು. ಹೊತ್ತಿಗೆ ಯಲಚೀಬೀಜದ ಪ್ರಮಾಣ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ಬೇದಿ ನಿಲ್ಲುವವರಿವಿಗು ಕೊಡಬೇಕು. ಇದರಿಂದ ಗ್ರಹಣಿ, ಅತಿಸಾರ ಗುಣವಾಗುವದು.

೧೯. ಗಂಗಾಧರ ಚೂರ್ಣ:—ತುಂಗೇಗಡ್ಡೆ ೧ ತೊಲೆ, ಕೊಡಸಿಗೆಬೀಜ ೧ ತೊಲೆ, ಎಳೇಬಿಲ್ಪತ್ರೆಕಾಯಿ ೧ ತೊಲೆ, ಲೋಧ್ರದಚಕ್ಕೆ ೧ ತೊಲೆ, ಬೂರುಗದಬಂಕೆ ೧ ತೊಲೆ, ತಂಗಡಿಹೂವು ೧ ತೊಲೆ ಇವು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲುತೊಲೆ ಚೂರ್ಣ ಹಸುವಿನ ಮಜ್ಜಿಗೆಯಲ್ಲಿ ಬೆಲ್ಲಹಾಕಿ ಕಲಸಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ಬೇದಿ ನಿಲ್ಲುವವರಿವಿಗು ಕೊಡಬೇಕು. ಇದರಿಂದ ಗ್ರಹಣಿ, ಸರ್ವಾತಿಸಾರ ಗುಣವಾಗುವದು.

೨೦. ಕೊತ್ತುಂಬರಿಬೀಜ ತಂದು ಪಪ್ಪುತೆಗೆದು ಕುಟ್ಟಿ ಚೂರ್ಣಮಾಡಿ ಶೋಧಿಸಿದ್ದು ಕಾಲುತೊಲೆ, ಯಮ್ಮೆಬೆಣ್ಣೆ ಸಕ್ಕರೆಹಾಕಿ ಕಲಸಿ ತಿನ್ನುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ಬೇದಿ ನಿಲ್ಲುವವರಿವಿಗು ಕೊಡುವದು. ಇದರಿಂದ ಗ್ರಹಣಿ ಗುಣವಾಗುವದು.

೨೧. ಶುದ್ಧಿಮಾಡಿದ ಅತಿಬಜೆ, ಕರಿಬೇವಿನಸೊಪ್ಪು, ಅಳಲೇಕಾಯಿಸಿಪ್ಪೆ, ಬಿಳೇಜೀರಿಗೆ, ಗಜ್ಜುಗಕಾಯಿಪಪ್ಪು, ವೋಮ, ಸೈಂಧರಲವಣ, ಜಾಕಾಯಿ, ಜಾಪತ್ರೆ ಇವು ಸಮಭಾಗ ತಂದು ಸೈಂಧವಲವಣವನ್ನು ಬಿಟ್ಟು ಉಳಿದ ಜಿನಸುಗಳನ್ನು ಸುಮಾರಾಗಿ ಹುರದು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು ಹೊತ್ತಿಗೆ ಕಾಲುತೊಲೆ ಚೂರ್ಣ ಹಸುವಿನ ಮಜ್ಜಿಗೆಯಲ್ಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ಬೇದಿ ನಿಲ್ಲುವವರಿವಿಗು ಕೊಡುವದು. ಇದರಿಂದ ಗ್ರಹಣಿ ಗುಣವಾಗುವದು.

೨೨. ಅರ್ಧ ಮಾಗಿದ ಬಿಲ್ಪತ್ರೆಕಾಯಿ ತಂದು ಒಲೆಯಲ್ಲಿಟ್ಟು ಸ್ವಲ್ಪ ಬಿಸಿಯಾದಕೂಡಲೇ ಒಳಗಿನ ತಿರುಳು ತೆಗೆದುಕೊಂಡದ್ದು ೬ ತೊಲೆ, ಯಾಲಕ್ಕಿ ೧ ತೊಲೆ, ಬಾರ್‌ತಂಗ್‌ಬೀಜ ೧ ತೊಲೆ ಇವು ಮೂರು ಖಲ್ವದಲ್ಲಿ ಹಾಕಿ ಚನ್ನಾಗಿ

ಅರದು ಇಟ್ಟುಕೊಳ್ಳುವದು. ಹೊತ್ತಿಗೆ ೧ ತೊಲೆ ಕೊಡಬೇಕು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ಬೇದಿನಿಲ್ಲುವವರಿವಿಗು ಕೊಡಬೇಕು. ಇದಕ್ಕೆ ಪಥ್ಯ ಹೆಸರುಬೇಳೆ ಸಾರು ಅನ್ನ. ಇದರಿಂದ ಎಲ್ಲಾ ತರದ ರಕ್ತಬೇದಿ ಗುಣವಾಗುವದು.

೨೩. ಅಫೀಂ ಕಾಲುತೊಲೆ, ಲವಂಗ ಕಾಲುತೊಲೆ ಹುರಿಯುವದು, ಬಿಳೀ ಜೀರಿಗೆ ಕಾಲುತೊಲೆ ಹುರಿಯುವದು, ಬಿಲ್ಪತ್ರೆ ಹಣ್ಣಿನ ಒಳಗಿನ ತಿರುಳು ೩ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ದೊಡ್ಡವರಿಗೆ ಕಡಲೇಕಾಳು ಗಾತ್ರ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ಬೇದಿನಿಲ್ಲುವ ವರಿವಿಗು ಕೊಡಬೇಕು.

೨೪. ಸರ್ವಾತಿಸಾರಕ್ಕೆ ಕಷಾಯ :— ಕೊಡಸಿಗೆಬೀಜ, ತುಂಗೇಗಡ್ಡೆ, ದೊಡ್ಡಮರದಚಕ್ಕೆ, ನೆಲಬೇವು, ಮಾವಿನಚಕ್ಕೆ, ಎಳೀ ಬಿಲ್ಪತ್ರೆ ಕಾಯಿ, ದಾಳಿಂಬರೆಮೊಗ್ಗು, ಶೊಂಟಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಕುಡಿಯುವದು. ಹೀಗೆ ಬೆಳಿಗ್ಯೆ ಸಾಯಂ ಕಾಲ ೨ ಹೊತ್ತು ಸೇವಿಸಿದರೆ ಸರ್ವಾತಿಸಾರ ಗುಣವಾಗುವದು.

೨೫. ಶೊಂಟಿ, ಶುದ್ಧಿಮಾಡಿದ ಅತಿಬಜೆ, ತುಂಗೇಗಡ್ಡೆ, ಧಾತಕೀಕುಸುಮ, ಶಂಗಡಿಹುವ್ವ, ಕೊಡಸಿಗೆಬೀಜ, ಎಳೇಬಿಲ್ಪತ್ರೆಕಾಯಿ, ದಾಳಿಂಬರೆಮೊಗ್ಗು, ದೊಡ್ಡಮರದಚಕ್ಕೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಕುಡಿಯುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ಸರ್ವಾತಿಸಾರ ಗುಣವಾಗುವವರಿವಿಗು ಕೊಡುವದು.

೨೬. ಜಾಕಾಯಿ, ಉಮ್ಮತ್ತಿಬೇರು, ಬೂರುಗದಬಂಕೆ, ಕೊಡಸಿಗೆಬೀಜ, ದಾಳಿಂಬರೆಮೊಗ್ಗು, ಶೊಂಟಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಕುಡಿಯುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ಸರ್ವಾತಿಸಾರ ಗುಣವಾಗುವವರಿವಿಗು ಕೊಡುವದು.

೨೭. ದೋಷಾತಿಸಾರಕ್ಕೆ ಕಷಾಯ :—ತುಂಗೇಗಡ್ಡೆ, ಅಮೃತಬಳ್ಳಿ, ಗಜ್ಜುಗದಪಪ್ಪು, ಬಿಳೀಜೀರಿಗೆ, ಎಳೇಬಿಲ್ಪತ್ರೆಕಾಯಿ, ಕೊಡಸಿಗೆಬೀಜ, ಶುದ್ಧಿ ಮಾಡಿದ ಅತಿಬಜೆ, ಶೊಂಟಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಕುಡಿಯುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ದೋಷಾತಿಸಾರ ಗುಣವಾಗುವವರಿವಿಗು ಕೊಡುವದು.

೨೮. ಅಮೃತಬಳ್ಳಿ, ಗಜ್ಜುಗದಬೇರಿನಬೊಬ್ಬಡೆ, ಎಳೇಬಿಲ್ಪತ್ರೆಕಾಯಿ, ಶುದ್ಧಿಮಾಡಿದ ಅತಿಬಜೆ, ಯಾಲಕ್ಕಿ, ಲವಂಗ, ಲವಂಗಪತ್ರೆ, ಶೊಂಟಿ, ಕೊಡ ಸಿಗೆಬೀಜ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಕುಡಿಯುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ದೋಷಾತಿಸಾರ ಗುಣವಾಗುವವರಿವಿಗು ಕುಡಿಯುವದು.

೨೯. ಸಮಸ್ತವಾದ ಅತಿಸಾರಕ್ಕೆ ಕಷಾಯ:—ಶೊಂಟಿ, ಶುದ್ಧಿಮಾಡಿದ ಅತಿಬಜೆ, ತಂಗೇಗಡ್ಡೆ, ಕೊಡಸಿಗೆಬೀಜ ಇವು ಸಮಭಾಗ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಸೈಂಧವಲವಣ ಬೆರಸಿ ಕುಡಿಯುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ಕುಡಿಯಲು ಸಮಸ್ತವಾದ ಅತಿಸಾರ ಗುಣವಾಗುವದು.

# ಹದಿನೆಂಟನೆಯ ಅಧ್ಯಾಯ.

## ಮೂಲರೋಗ ಮತ್ತು ಔಷಧಗಳು.

### ಮೂಲವ್ಯಾಧಿ ಲಕ್ಷಣವು.

ಮನುಷ್ಯರ ಗುದಸ್ಥಾನದಲ್ಲಿ ಶಂಖದೊಳಗಿನ ನಾಭಿಯ ಸದೃಶವಾಗಿ ೪ ಅಂಗುಲದ ಮೂರು ಚಕ್ರಗಳಿರುತ್ತವೆ. ಒಂದನೇದು ಮೇಲಿನದು, ಎರಡನೇದು ಮಧ್ಯದ್ದು, ಮೂರನೇದು ಕೆಳಭಾಗದ್ದು. ಮೇಲಿನ ಚಕ್ರಕ್ಕೆ ಪ್ರವಾಹಿನೀ ಎಂಬ ಹೆಸರು—ಅದು ಮಲ, ವಾಯು ಇವುಗಳನ್ನು ಹೊರಕ್ಕೆ ತಳ್ಳುವದು. ಮಧ್ಯದ ಚಕ್ರವು ಈ ಮಲಾದಿಗಳನ್ನು ಹೊರಡಿಸುತ್ತದೆ ಮೂರನೆ ಚಕ್ರವು ಈ ಮಲವಾಯು ಮುಂತಾದವನ್ನು ಹೊರಡಿಸಿದನಂತರ ಆ ಗುದಸ್ಥಾನವನ್ನು ಮೊದಲಿದ್ದಂತೆಯೇ ಮುಚ್ಚಿಬಿಡುವದು. ಮೂಲವ್ಯಾಧಿಯು ಈ ಮೂರು ಚಕ್ರಗಳಲ್ಲಿಯೂ ಆಗುವದುಂಟು. ಇದೇ ಈ ರೋಗಕ್ಕೆ ಮುಖ್ಯಸ್ಥಾನವು. ಮೊದಲನೇದರಲ್ಲಿ ಮೂಲವ್ಯಾಧಿಯುಂಟಾದರೆ ಅಸಾಧ್ಯ ! ಮಧ್ಯದ್ದರಲ್ಲಿ ಆಗಲು ಕಷ್ಟಸಾಧ್ಯ !! ಮೂರನೇದರಲ್ಲಿ ಆದರೆ ಸಾಧ್ಯವು !!!

ಈ ಮೂಲವ್ಯಾಧಿಯು ೧ ವಾತ, ೨ ಪಿತ್ತ, ೩ ಕಫ, ೪ ಸನ್ನಿಪಾತ, ೫ ರುಧಿರ, ೬ನೇಯದು ಶರೀರದ ಜತೇಲಿಯೇ ಹುಟ್ಟುವದು ; ಹೀಗೆ ೬ ಪ್ರಕಾರವಿದೆ ವಾತಕಾರಕ ಅಥವಾ ಉಷ್ಣಪದಾರ್ಥ, ಕಫಕಾರೀ, ಸ್ನಿಗ್ಧ (ಅತಿಮೃದು), ಶೀಹಿಯಾದ ವಸ್ತುಗಳನ್ನು ಸೇವಿಸುವುದರಿಂದಲೂ, ಹಾಗೆಯೇ ವಾತಪಿತ್ತ ಕಫಗಳನ್ನುಂಟುಮಾಡುವ ಮಿಥ್ಯಾ ಆಹಾರ, ಮಿಥ್ಯಾವಿಹಾರಗಳಿಂದ ಪ್ರಕುಪಿತಗಳಾದ ವಾತ, ಪಿತ್ತ, ಕಫ ದೋಷಗಳು ಗುದಸ್ಥಾನದ ಆ ಮೂರು ಚಕ್ರಗಳ ಮೇಲ್ಭಾಗದಲ್ಲಿನ ತ್ವಚಾ, ಮಾಂಸ, ಮೇದಾಗಳನ್ನು ಕೆಡಿಸಿ—ಗುದಸ್ಥಾನದ ಮೇಲ್ಗಡೆ ನಾನಾಪ್ರಕಾರದ ಮಾಂಸದ ಅಂಕುರಗಳನ್ನು ಮೊಳೆಯ ಆಕೃತಿಯಲ್ಲಿ ಉಂಟುಮಾಡುವವು. ಈ ರೋಗಕ್ಕೆ ವೈದ್ಯರು ಮೂಲವ್ಯಾಧಿಯೆಂದೆನ್ನುವರು.

ಇದು ೬ ವಿಧವಾಗಿರುವದು. ಪರಂತು ಲೋಕದಲ್ಲಿ ಎರಡೇ ವಿಧವೆಂದರಿಯು ತ್ತಿದ್ದಾರೆ. ಮೊದಲನೇದು ರಕ್ತದವೊಳೆ, ೨ನೇದು ವಾತದವೊಳೆ ಯಾವದರಲ್ಲಿ ವಿಶೇಷವಾಗಿ ರಕ್ತಾ ಸುರಿಯುವದೋ ಅದೇ ರಕ್ತವೊಳೆ, ಇನ್ನೊಂದರಲ್ಲಿ ರಕ್ತ ವೇನೂ ಬಾರದಿದ್ದರೂ ಪೀಡೆ, ಕಡಿತ, ಚಿಮಿಚಿಮಿಯಾಗುವಿಕೆ ಮುಂತಾದ್ದಾದರೆ ಅದನ್ನು ವಾತಾತಿಸಾರ ಅಥವಾ ಬಾದೀ ಎಂದೆನ್ನುವರು. ಇವೆರಡೂ ಆ ಮೇಲಿನ ೬ ವಿಧಗಳಲ್ಲಿಯೇ ಸೇರಿರುವವು.

ಇಲ್ಲಿ ವಿಶೇಷವೇನೆಂದರೆ—ಅರ್ಶ (ಮೂಲವ್ಯಾಧಿ) ಯೆಂದರೆ ಸೂಕ್ಷ್ಮ ಮಾಂಸದ ವೊಳೆಗಳೆಂಬುದೇ ಅರ್ಥವು. ಇಂತಹ ವೊಳೆಗಳು ಕಣ್ಣು ಮೂಗು ಮುಂತಾದ ಸೂಕ್ಷ್ಮಾಂಗಗಳಲ್ಲಿ ಸಹಾ ಕೆಲವರಿಗೆ ಏಳುವವು. ಆದರೆ ಗುದದ್ವಾರ ದಲ್ಲಿ ಬಹಳವಾಗಿ ಏಳುವುದರಿಂದ ಅರ್ಶಸ್—ಎಂದರೆ ಮೂಲವ್ಯಾಧಿಯೆಂಬುದೇ ಸಾಧಾರಣವಾಗಿ ರೂಢಿವಾಚಕವಾಗಿದೆ. ಅಂತಹ ಸಂದರ್ಭದಲ್ಲಿ ಸ್ಥಳಪರತ್ವದಿಂದ ನಾಸಾರ್ಶ (ಮೂಗಿನ ವೊಳೆ), ನೇತ್ರಾರ್ಶ (ಕಣ್ಣು ವೊಳೆ) ಮುಂತಾಗಿ ಹೆಸ ರನ್ನು ಪಡೆಯುವದು. ಇಲ್ಲಿ ಅರ್ಶವೆಂದರೆ ಗುದಸ್ಥಾನೀಯವಾದ ವೊಳೆಯೆಂಬದೇ ಅರ್ಥವು.

ಹಸಿವೆ ಕಡಿಮೆಯಾಗುವಿಕೆ, ಅನ್ನದಲ್ಲಿ ರುಚಿ ಕಡಿಮೆಯಾಗುವಿಕೆ, ಹೊಟ್ಟೆ ಯುಬ್ಬೋಣ, ಮಲವು ಎಡೆಗೆ ಏರಿದಂತಾಗೋಣ, ಮಲದಜತೇಲಿ ಸ್ವಲ್ಪ ಸ್ವಲ್ಪ ರಕ್ತಬೀಳೋಣ, ಮಲವು ಗಟ್ಟಿ ಹೆಂಟೆಯಾಗೋಣ, ಇಲ್ಲವೆ ಹಿಕ್ಕೆಹಿಕ್ಕೆ ಯಾಗಿ ರಕ್ತಮಿಶ್ರತೆಯಿಂದ ಸುರಿಯೋಣ—ಮೊದಲು ನಾಲ್ಕೈದು ತೊಟ್ಟು ರಕ್ತಬೀಳೋಣ, ಇಲ್ಲವೆ ಹಿಂದಿನಿಂದ ಬಹಳ ರಕ್ತಸುರಿಯೋಣ, ಗುದದ್ವಾರದಲ್ಲಿ ವೊಳೆಗಳೆದ್ದು ಅದರಲ್ಲಿ ಬಾವು, ಚಿಮಿಚಿಮಿ, ಉರುಪು, ಶೂಲೆ, ಕಡಿತಗಳುಂಟಾಗಿ— ಕೈಕಾಲುಗಳಲ್ಲಿ ಸಾಮರ್ಥ್ಯವಡಗೋಣ ಈ ಲಕ್ಷಣಗಳಿದ್ದರೆ ಮೂಲವ್ಯಾಧಿ ಯೆಂದು ಹೇಳುವರು.

ಕೆಲವರಿಗೆ ತಂದೆತಾಯಿಗಳ ದೋಷದಿಂದ ಜನ್ಮಾರಭ್ಯ ಈ ರೋಗವಿದ್ದೇ ಇರುತ್ತದೆ. ಒಳ್ಳೇ ಪ್ರಾಯಸ್ಥರು ಮೈಮುರಿದು ಕೆಲಸಮಾಡದೆ ಕೂತಲ್ಲಿಯೇ ಸೋಮಾರಿತನದಿಂದ ಕುಳಿತಿರುವ ದುರಭ್ಯಾಸವಿದ್ದರೆ ಈ ರೋಗವು ಅವರಲ್ಲಿ ಉಂಟಾಗುವುದು.

ಶರೀರಕ್ಕೆ ಅತ್ಯಗತ್ಯವಾದ ವ್ಯಾಯಾಮ, ಕಸರತ್ತು, ಗಾಳಿಸವಾರಿ ಹೊರಡು ವಿಕೆ ಇವ್ಯಾವವೂ ಇಲ್ಲದೆ ಉಂಡುಂಡು ಸುಮ್ಮನೆ ಕೂಡ್ರುವ ಶ್ರೀಮಂತರಿಗೆ ಈ ವ್ಯಾಧಿಯುಂಟಾಗುವದು. ಹೊಟ್ಟೆಯ ಗಂಟುರೋಗಕ್ಕೆ ಮೇಲಿಂದ ಮೇಲೆ ಜುಲಾಬಿನ ಔಷಧಿಯನ್ನು ತೆಗದುಕೊಳ್ಳುವುದರಿಂದಲೂ ಈ ವೊಳೇಜಾಡ್ಯ ವುಂಟಾಗುವುದು. ಪರರ ಏಳಿಗೆಯನ್ನು ನೋಡಿ ಹೊಟ್ಟೇಕಿಚ್ಚುಪಡುವ ಪಾಪಿಗೆ ಈ ವ್ಯಾಧಿಯುಂಟಾಗುವದು. ಅಂದರೆ ಇದು ಕರ್ಮಜಾಡ್ಯವೆಂದರೂ ಆಗುವದು.

## ಮೂಲವ್ಯಾಧಿಯ ಪೂರ್ವರೂಪ.

ತಿಂದ ಅನ್ನವು ಒಳ್ಳೇರೀತಿಯಿಂದ ಪಕ್ವವಾಗದಿರುವದು; ಅನ್ನವೆಲ್ಲ ಅನ್ನಕೋಶದಲ್ಲಿರುವಿಕೆ, ಬದ್ಧಕೋಷ್ಠವೂ, ಮಂದಾಗ್ನಿಯೂ ಆಗುವಿಕೆ, ಬಹಳವಾಗಿ ತೇಗು ಬರುತ್ತಿರುವಿಕೆ, ಶರೀರವು ಬಹು ಕೃಶವಾಗುವಿಕೆ, ಕೋಶದಲ್ಲಿಯೂ, ಅಂಗಾಂಗಗಳಲ್ಲಿ ಪೀಡೆಯಿರುವಿಕೆ—ಈ ಲಕ್ಷಣವಿದ್ದಲ್ಲಿ ಆ ಮನುಷ್ಯನಿಗೆ ಮೂಲವ್ಯಾಧಿಯುಂಟಾಗುವದೆಂದರಿಯುವದು.

## ವಾತದ ಮೂಲವ್ಯಾಧಿಯ ಲಕ್ಷಣ.

ಯಾವನ ಗುದಸ್ಥಾನದ ಮೊಳೆಯು ಉರುಪು, ಒರಟು, ಕಠೋರ, ತೀಕ್ಷ್ಣ, ಒಡೆದ ಮುಖದ ಗುದಸ್ಥಾನದ ಮೇಲ್ಭಾಗದಲ್ಲಿ ಆಗಿರುತ್ತಾ—ಸಣ್ಣಸಣ್ಣದಾಗಿ ಹತ್ತಿಯ ಹೂವಿನಂತೆ ಇರುವದೊ—ಹಾಗೆಯೇ ತಲೆ, ಪಾರ್ಶ್ವಭಾಗ, ಹೆಗ್ಗತ್ತು, ಸೊಂಟ, ಜಂಘಾ, ವೃಷಣಾದಿಗಳಲ್ಲಿ ವ್ಯಥೆಯಿರುವದೋ, ಶೀನುಗಳು, ಆಕಳಿಕೆ ಇವು ಸುತರಾಂ ಬಾರದಿರುವದೋ, ಹೃದಯಶೂಲೆಯಿಂದಿರುತ್ತಾ ಹಸಿವಾಗದೆ ಇರುವಿಕೆ, ಕಾಸ, ಶ್ವಾಸ, ಮಂದಾಗ್ನಿ, ಕಿವಿಯಲ್ಲಿ ಶಬ್ದವಾಗುವಿಕೆ, ಭ್ರಮೆ, ವಾಯುವಿನಗಡ್ಡೆ, ಉದರರೋಗ, ಪ್ಲೀಹ ಇವು ತಲೆದೋರುವದೋ ಇದು ವಾತಜನ್ಯ ಮೂಲವ್ಯಾಧಿಯೆಂದರಿಯುವದು. ಅತಿಯಾಗಿ ವಾಯುಪದಾರ್ಥ ತಿನ್ನುವದರಿಂದಲೂ, ಅತಿಯಾಗಿ ಮಧ್ಯಪಾನ, ಸ್ತ್ರೀವ್ಯಸನಗಳಿಂದಲೂ, ಉಪವಾಸ, ಅತ್ಯಂತ ಶೋಕ ಮುಂತಾದ್ದರಿಂದಲೂ ಈ ವಾತಜನ್ಯ ಮೂಲವ್ಯಾಧಿಯುಂಟಾಗುತ್ತದಲ್ಲದೆ, ಇದರಲ್ಲಿ ವಾತವಿಕಾರಗಳು ಹೆಚ್ಚಾಗಿ ಕಂಡುಬರುತ್ತಿರುವವು.

## ಪಿತ್ತದ ಮೂಲರೋಗದ ಲಕ್ಷಣ.

ಬಹಳ ಕಾರತಿನ್ನೋಣ, ಬಿಸಿಲು ಬೆಂಕಿಗಳ ಜಳಬಡಿಸಿಕೊಳ್ಳೋಣ, ತೀಕ್ಷ್ಣವಾದ ಮದ್ಯಕುಡಿಯೋಣ, ಉಷ್ಣರೋಗದವಳ ಸಹವಾಸ ಮಾಡೋಣ, ಬೇರೆಯವರ ಏಳಿಗೆಯನ್ನು ನೋಡಿ ಹೊಟ್ಟೆಕಿಚ್ಚುಪಡೋಣ, ಮೊಳೆಗಳು ಪಿತ್ತವಿಕಾರದಲ್ಲಿ ಮೃದುವಾಗಿಯೂ, ನೀಲಿ, ಕೆಂಪು, ಮಾಂಸಬಣ್ಣವಾಗಿಯೂ, ಬಿಗಿಯಾಗಿ ಇರುತ್ತದೆ ಅಂದರೆ ಗುದಸ್ಥಾನದ ಮೊಳೆಗಳ ಮುಖವು ನೀಲ,ಕೆಂಪು, ಹಸರು, ಬಿಳೀವರ್ಣವಿರುತ್ತದೆ ಅವುಗಳಿಂದ ಬಿಸಿಬಿಸಿಯಾದ ಸೂಕ್ಷ್ಮಧಾರೆಯಿಂದ ರಕ್ತ ಹೊರಡುತ್ತಿರುವದು. ಈ ಮೊಳೆಗಳು ಬಹು ಕೋಮಲಗಳಾಗಿರುವವು. ಅವುಗಳ ಮುಖವು ಜಿಗಣೆಯ ಆಕಾರದಲ್ಲಿರುವದು. ಈ ರೋಗಿಯ ಶರೀರದಲ್ಲಿ ದಾಹ, ಜ್ವರ, ಮೂರ್ಛೆ, ಅರುಚಿಗಳಿರುವವು. ಮಲವು ಕಪ್ಪಾಗಿಯಾಗಲೀ, ಹಳದೀಯಾಗಲೀ, ಕೆಂಪಗಾಗಲೀ ಇರುವದು. ಚರ್ಮ, ನಖ, ನೇತ್ರಗಳು ಹಳದಿಯಾಗಿರಲು ಇದೇ ಪಿತ್ತವಿಕಾರದ ಮೊಳೇಜಾಡ್ಯವೆಂದರಿಯುವದು.

## ಕಫವಿಕಾರದ ಮೂಲವ್ಯಾಧಿಯ ಲಕ್ಷಣ.

ಯಾವಾಗಲೂ ಕೇವಲ ಸಿಹಿಯಾದ ಅನ್ನಪಾನಮಾಡೋಣ, ಹಗಲು ನಿದ್ರೆ, ಜಡಾನ್ನ, ಅತಿಶೀತ ಇವುಗಳನ್ನು ಸೇವಿಸೋಣ, ಯಾವನ ಮೊಳೆಯು ದಪ್ಪನಾಗಿರುತ್ತಾ ಸ್ವಲ್ಪಸ್ವಲ್ಪ ನೋವಿನಿಂದಿದ್ದು ಎತ್ತರವಾಗಿ, ಭಾರವಾಗಿದ್ದಂತೆ ಕಾಣುವಿಕೆ, ಇದರಿಂದ ಮಲಮೂತ್ರಗಳು ಬಿಳೇಬಣ್ಣವಾಗಿರುತ್ತವೆ. ಮೊಳೆಗಳು ಕಫದಿಂದ ಮುಚ್ಚಿರುವಿಕೆ, ಕಡತ ಹೆಚ್ಚಾಗಿರುವಿಕೆ, ಬಾಯಾರಿಕೆ, ವೃಷಣಗಳಲ್ಲಿ ಪೀಡಾ, ಗುದಸ್ಥಾನದಲ್ಲಿ ತಿನಿಸು ಹೆಚ್ಚಾಗಿರುವಿಕೆ, ಕಾಸ, ಶ್ವಾಸ, ಹೃದಯಪೀಡಾ, ಅರುಚಿ, ಪೀನಸ, ಮೂತ್ರಕೃಚ್ಛ್ರ, ಮಂದವಾಯು, ಮಂದಾಗ್ನಿ ಇರುವಿಕೆ, ಶೀತವಾಗಿರೋಣ, ಕಫ ಸುತ್ತಿದ ಮಲ ಹೊರಡುವಿಕೆ, ಗುದಸ್ಥಾನದಲ್ಲಿರುವ ಮೊಳೆಗಳಿಂದ ರಕ್ತ ಬಾರದಿರುವಿಕೆ, ಶರೀರದ ಬಣ್ಣವು ಹಳದಿ ಸ್ನಿಗ್ಧ, ಆಮವಾತಯುಕ್ತವಾಗಿರಲು ಕಫದ ಮೊಳೇಜಾಡ್ಯವು.

## ಸನ್ನಿಪಾತ ಮೂಲವ್ಯಾಧಿ.

ಮಿಶ್ರಲಕ್ಷಣಗಳಿಂದ ಕೂಡಿದ್ದೇ ಸನ್ನಿಪಾತದ ಮೂಲವ್ಯಾಧಿಯು ವಾತದಿಂದುಂಟಾದ ಮೊಳೆಗಳು ತೊಂಡೇಕಾಯಿ, ಹತ್ತಿಕಾಯಿ ಮುಂತಾದ ತರತರದ ಆಕೃತಿಯಾಗಿರುವವು. ಕೆಲವು ಸಾಸಿವೆಕಾಳಿನಷ್ಟು ಸಹ ಇರುತ್ತವೆ ಮಲ ಮೂತ್ರ ಉಗರು ಕಣ್ಣುಗಳು ಕಪ್ಪುಛಾಯೆಯಿಂದಿರುವವು.

ಒಳಗೆ ಮೊಳೆಗಳಿದ್ದು ರಕ್ತಸೋರದೆ ನೋವಾದರೆ ಒಳಮೂಲವೆಂತಲೂ, ರಕ್ತಸೋರಿ ಹೊರತೋರುವುದಕ್ಕೆ ರಕ್ತ ಮೂಲವ್ಯಾಧಿಯೆಂತಲೂ ಲೋಕದಲ್ಲಿ ರೂಢಿಯುಂಟು. ಎಲ್ಲಾ ಲಕ್ಷಣಗಳನ್ನೂ ಚನ್ನಾಗಿ ಪರೀಕ್ಷಿಸಿ ಚಿಕಿತ್ಸೆ ಮಾಡತಕ್ಕದ್ದು.

## ಮಲರೋಗದಲ್ಲಿ ಅಸಾಧ್ಯ ಲಕ್ಷಣ.

ಕೈಕಾಲು, ನಾಭಿ, ಗುದ, ವೃಷಣ, ಮುಖ ಇವುಗಳಲ್ಲಿ ಶೋಭೆ ಮತ್ತು ಹೃದಯಪಾರ್ಶ್ವ, ಅಂಗ ಇವುಗಳಲ್ಲ ನೋವು, ವಮನ, ಜ್ವರ ಇವುಗಳಿದ್ದು ಆಸನದ್ವಾರವು ತೆರದು ಇದ್ದರೆ ಅಸಾಧ್ಯವು.

## ಮೂಲರೋಗಕ್ಕೆ ಚಿಕಿತ್ಸೆಗಳು.

೧. ಮೂಲಕ್ಕೆ ಮಾತ್ರೆ:—ಆನೇನೆಗ್ಗಿಲು ಮುಳ್ಳು ಅರ್ಧಸೇರು ತಂದು ಒಂದುಮಡಕೆಯಲ್ಲಿ ಹಾಕಿ ಒಲೆಯಮೇಲಿಟ್ಟು ಉರಿಹಾಕಿ ಕರ್ರಗೆ ಇದ್ದಲಿನಂತೆ ಮಾಡಿಕೊಂಡು ಚನ್ನಾಗಿ ಕುಟ್ಟಿ ಚೂರ್ಣಮಾಡಿಕೊಂಡು ಕಲ್ವದಲ್ಲಿ ಹಾಕಿ ಮುಲ್ಲಂಗಿಸೊಪ್ಪಿನ ರಸದಿಂದ ಅರದು ಯಲಚೀಬೀಜದಷ್ಟು ಮಾತ್ರೆಗಳು ಮಾಡಿ ಇಟ್ಟುಕೊಳ್ಳುವದು. ಬೆಳಿಗ್ಗೆ ೧ ಮಾತ್ರೆ ಹಸುವಿನ ತುಪ್ಪದಲ್ಲಿ ಇಟ್ಟು ನುಂಗಿಸಬೇಕು. ಇದೇಮೇರಿಗೆ ೩-೫-೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ

ಸಿಹಿಸಾರು ಅನ್ನ ತುಪ್ಪ ಜಾಸ್ತಿಯಾಗಿ ತಿನ್ನಬೇಕು. ಇದರಿಂದ ರಕ್ತಮೂಲವೇ ಆಗಲಿ ಪಿತ್ತಮೂಲವೇ ಆಗಲಿ ಶ್ಲೇಷ್ಮಮೂಲವೇ ಆಗಲಿ ಗುಣವಾಗುತ್ತೆ.

೨ ತುತ್ತಿಸೊಪ್ಪಿಯಲೆ ೪೦, ವೆಣಸು ೪೦ ಇವು ಎರಡು ಕಲ್ವದಲ್ಲಿ ಹಾಕಿ ಚನ್ನಾಗಿ ಅರದು ಯಲಚೀಕಾಯಿನ ಪ್ರಮಾಣ ಮಾತ್ರೆ ಮಾಡುವದು ಬೆಳಗ್ಗೆ ೧ ಮಾತ್ರೆ ಸಾಯಂಕಾಲ ೧ ಮಾತ್ರೆ ಹಸುವಿನ ತುಪ್ಪದಲ್ಲಿ ಇಟ್ಟು ತೆಗೆದುಕೊಳ್ಳಬೇಕು. ಈರೀತಿ ೭ ದಿವಸ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ ಇದರಿಂದ ವಾತಮೂಲ, ಪಿತ್ತಮೂಲ, ಶ್ಲೇಷ್ಮಮೂಲ ಗುಣವಾಗುವದು.

೩. ಬ್ರಹ್ಮಮೇಡಿಕಾಯಿ (ಕಲ್ಲತ್ತಿಕಾಯಿ) ಅಂದರೆ ಎಲೆವೃದ್ಧವಾಗಿರುವದು, ಘಟ್ಟಿಯಾಗಿ ಹಾಲು ಬರುವದು. ಬುಡದಲ್ಲಿ ಕಾಯಿಗಳು ಅತ್ತಿಕಾಯಿಗಳು ಬಿಟ್ಟಂತೆ ಬಿಡುವದು. ಈ ಕಾಯಿಗಳು ಅಡಿಗೆಮಾಡಿ ಊಟಮಾಡಬಹುದು. ಈ ಅತ್ತಿಕಾಯಿಗಳು ತೂಕದ ೧ ಸೇರು ತಂದು ಒಂದೊಂದುಕಾಯಿ ಎರಡೆರಡು ತುಂಡಾಗಿ ಕತ್ತರಿಸಿ ಬಾಯಿ ಸಣ್ಣದಾಗಿರುವ ಮಡಕೆಯಲ್ಲಿ ಹಾಕಿ ನೀರು ಹಾಕಿ ಈ ಕಾಯಿಗಳು ಹಾಕಿ ಚನ್ನಾಗಿ ಬೇಯಿಸಿ ಹೊಗೆ ಹೋಗದಂತೆ ಮುಚ್ಚಳ ಮುಚ್ಚಿ ಮಡಿಕೆ ಹಿಡಿಯುವಹಾಗೆ ಗುಣಿ ತೆಗೆದು ಭೂಮಿಯಲ್ಲಿ ಮಡಿಕೆ ಬಾಯಿ ಹಿಡಿಯುವಂತೆ ಇಟ್ಟು ಮೇಲಿನ ಮುಚ್ಚಳ ತೆಗೆದುಹಾಕಿ ಅದರಮೇಲೆ ರಾಗೀಕಲ್ಲು ಬಾಯಿ ಇರುವದನ್ನು ಅದರ ಮೇಲೆ ಇಟ್ಟು ಸುತ್ತು ಮಣ್ಣುಮೆತ್ತಿ ರಾಗೀಕಲ್ಲಿನ ಮೇಲೆ ಆಸನವನ್ನಿಟ್ಟು ಹೊಗೆ ತೆಗೆದುಕೊಳ್ಳುವದು. ಈರೀತಿ ೩-೫-೭ ದಿನ ಹೊಗೆ ಕೊಟ್ಟಲ್ಲಿ ಮೊಳೆಗಳು ಬಿದ್ದುಹೋಗುವದು. ಅಷ್ಟವಿಧ ಮೊಳೆಗಳು ಗುಣವಾಗುವದು. ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ತುಪ್ಪ ಜಾಸ್ತಿಯಾಗಿ ಉಪಯೋಗಿಸಬೇಕು.

೪. ತಪಸೀಕುಡಿ ಮೂರುಹಿಡಿ ತಂದು ಒಳ್ಳೆ ತೊಗರೀಬೇಳೆ ೧ ಪಾವು ಬೇಯುವದಕ್ಕೆ ಹಾಕಿ ನೀರು ಹಾಕಿ ಬೇಳೆ ಅರ್ಧ ಬೆಂದಮೇಲೆ ಅದರಲ್ಲಿ ಈ ತಪಸಿಕುಡಿ ಹಾಕಿ ಚೆನ್ನಾಗಿ ಬೆಂದಮೇಲೆ ಹಸುವಿನತುಪ್ಪ ಅರ್ಧಸೊಲಿಗೆ ಹಾಕಿ ಅರ್ಧಸೊಲಿಗೆ ತುಪ್ಪ ಉಳಿಯುವಹಾಗೆ ಕಾಯಿಸಿ ಇಳಿಸಿಕೊಳ್ಳುವದು. ಅದನ್ನೆಲ್ಲಾ ಎಲೆಯಲ್ಲಿ ಹಾಕಿ ತಿರಿಗಿ ಅರ್ಧಸೊಲಿಗೆ ತುಪ್ಪಹಾಕಿ ಕಲಸಿ ಎಲ್ಲವನ್ನು ತಿನ್ನುವದು. ಈರೀತಿ ಬೆಳಿಗ್ಗೆಮಾಡಿ ಸಾಯಂಕಾಲ ೪-೫ ಘಂಟೆಗೆ ತೊಗರೀಬೇಳೆ ಸಿಹಿಸಾರು ಅನ್ನ ಊಟಮಾಡುವದು. ಊಟಮಾಡಿದ ಕೂಡಲೇ ೭-೮ ಸಲ ಬೇದಿಗಳಾಗುತ್ತೆ. ಅದರಿಂದಲೇ ಮೊಳೆ ಹೋಗಿಬಿಡುತ್ತೆ. ಪುನಃ ಎಂದಿಗೂ ಬರುವದಿಲ್ಲ.

೫. ರಸಬಾಳೇಹಣ್ಣು ೧೪, ಯಾಲಕ್ಕಿ ೧ ತೊಲೆ, ಕರೀಜೀರಿಗೆ ೧ ತೊಲೆ, ಬಿಳೀಜೀರಿಗೆ ೧ ತೊಲೆ, ಕರ್ಪೂರಶಿಲಾಜಿತು ಭಸ್ಮ ೧ ತೊಲೆ, ಕಲ್ಲುನಾರು ಭಸ್ಮ

೧ ತೊಲೆ, ತವಕ್ಷೀರ ೧ ತೊಲೆ, ಗಂಟುಶೀಗೇಕಾಯಿ ೧ ತೊಲೆ ಈ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ರಸಬಾಳೇಹಣ್ಣು ಬಿಲ್ಲೆಬಿಲ್ಲೆಯಾಗಿ ಕುಯಿದು ಮೇಲ್ಕಂಡ ಚೂರ್ಣಹಾಕಿ ರಸಬಾಳೆಹಣ್ಣು ಕರಗುವ ಹಾಗೆ ಚನ್ನಾಗಿ ಕಲಸಿ ಒಂದು ಗಾಜಿನ ಬಟ್ಲಲ್ಲಿ ಇಟ್ಟುಕೊಂಡು ಬೆಳಿಗ್ಯೆ ೧ ತೊಲೆ, ಸಾಯಂಕಾಲ ೧ ತೊಲೆ ಈರೀತಿ ೯ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ತುಪ್ಪ ಜಾಸ್ತಿಯಾಗಿ ಹಾಕಿಕೊಳ್ಳಬೇಕು. ೧೦ನೇ ದಿನ ಹಸುವಿನ ಹಾಲು ಮೆಣಸು ಹಾಕಿಕೊಂಡು ಬಿಸಿನೀರು ಸ್ನಾನಮಾಡುವದು. ಅನಂತರ ಕೆಲವು ದಿನ ಬುಧವಾರ ಶನಿವಾರ ಅಭ್ಯಂಗನಸ್ನಾನ ಮಾಡುತ್ತಾ ಬರಬೇಕು. ಈರೀತಿ ಸರಿಯಾಗಿ ಪಥ್ಯವಿದ್ದಲ್ಲಿ ಒಳಮೊಳೆ, ಹೊರಮೊಳೆ ಖಂಡಿತವಾಗಿ ಗುಣವಾಗುವದು.

೬. ಕರ್ಪೂರ ಶಿಲಾಜಿತು ೧ ತೊಲೆ ಬಿಳೇಯಕ್ಕದ ಹಾಲಿನಲ್ಲಿ ೩ ದಿನ ನೆನಸುವದು. ಶುದ್ಧವಾದ ವಂಗಭಸ್ಮ ೧ ತೊಲೆ, ಶುದ್ಧವಾದ ಪಾದರಸದ ಭಸ್ಮ ೧ ತೊಲೆ ಇವು ಮೂರು ಜಿನಸುಗಳನ್ನು ಖಲ್ವದಲ್ಲಿ ಹಾಕಿ ಸುಣ್ಣದ ತಿಳಿನೀರಿನಿಂದ ಅರದು ಬಿಲ್ಲೆಮಾಡಿ ಒಣಗಿಸಿ ೨ ಹಣತೆಗಳಲ್ಲಿಟ್ಟು ಕೆಮ್ಮಣ್ಣು ಬಟ್ಟೆ ಚೀಲು ಮಾಡಿ ಒಣಗಿಸಿ ಕುಕ್ಕುಟಪುಟ ಇಡುವದು. ಈರೀತಿ ೩ ಪುಟವಿಟ್ಟು ಖಲ್ವದಲ್ಲಿ ಅರದು ಇಟ್ಟುಕೊಳ್ಳುವದು. ಹೊತ್ತಿಗೆ ೧ ಗುರ ಗಂಜಿ ಪ್ರಮಾಣ ಬಿಳೇಜೀರಿಗೆ ಮತ್ತು ದಾಳಿಂಬರೆಯಲೆಯ ಕಷಾಯದಲ್ಲಿ ರಕ್ತಮೂಲಕ್ಕೆ ಕೊಡುವದು. ಈರೀತಿ ಬೆಳಿಗ್ಯೆ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ರಕ್ತಮೂಲ ಗುಣವಾಗುವದು.

೭. ಹೀರಾಹಿಂಗ್ ೫ ತೊಲೆ, ದಪ್ಪಮುಲ್ಲಂಗಿ ೭, ಮುಲ್ಲಂಗಿ ಕೆಳಗಿನ ಬುಡ ಬಿಟ್ಟು ಮೇಲೆ ಇರುವದನ್ನು ಸ್ವಲ್ಪ ಕುಯಿದು ರಂಧ್ರಮಾಡಿ ಹಿಂಗು ೭ ಭಾಗ ಮಾಡಿ ೭ ಮುಲ್ಲಂಗಿಯಲ್ಲಿಟ್ಟು ಬೇರೆ ಸ್ವಲ್ಪ ಮುಲ್ಲಂಗಿ ತಂದು ಕುಟ್ಟಿ ರಸ ತೆಗೆದು ಹಿಂಗು ಹಾಕಿದ ಮುಲ್ಲಂಗಿಯಲ್ಲಿ ಮುಲ್ಲಂಗಿ ರಸ ಹಾಕಿ ಕುಯಿದ ಮುಲ್ಲಂಗಿ ತುಂಡಿನಿಂದ ಮುಚ್ಚಿ ಸೇಧಾರದಿಂದ ಕಟ್ಟಿ ಧಾನ್ಯದಲ್ಲಿ ೮ ದಿವಸ ಪುಟವಿಟ್ಟು ತೆಗದುಕೊಂಡು ಮುಲ್ಲಂಗಿವಳಗೆ ಇರುವ ಹಿಂಗು ಈಚೆಗೆ ತೆಗದು ಕೊಂಡು ಸುರಸುರಿಕೆಸೊಪ್ಪಿನ ರಸ ೧ ಪಾವಿನಷ್ಟು ಒಂದು ಕಬ್ಬಿಣದ ಸೌಟಿನಲ್ಲಿ ಹಾಕಿ ಅದರಲ್ಲಿ ಹಿಂಗುಹಾಕಿ ಬೆಂಕಿಯಮೇಲಿಟ್ಟು ಕಾಯಿಸಿ ಈಚೆಗೆ ತೆಗದು ಸಾಂಬ್ರಾಣಿ ೧ ತೊಲೆ ಬೆಂಕಿಯಮೇಲಿಟ್ಟು ಇದರ ಹೊಗೆ ಸೌಟಿಗೆ ಕೊಡಬೇಕು. ಈರೀತಿ ೩ ಸಲ ಹೊಗೆ ಕೊಡಬೇಕು. ಅನಂತರ ಈಚೆಗೆ ತೆಗದುಕೊಂಡು ಹಸುವಿನತುಪ್ಪ ೧ ಪಾವುಹಾಕಿ ಚೆನ್ನಾಗಿ ಅರದು ಲೇಹದಹಾಗೆ ಆದಮೇಲೆ ಶೀಸೆಯಲ್ಲಿಟ್ಟುಕೊಂಡು ಬೆಳಿಗ್ಯೆಹೊತ್ತು ಯಲಚೀಬೀಜದ ಪ್ರಮಾಣ ಹಸುವಿನತುಪ್ಪದಲ್ಲಿ ಕಲಿಸಿ ಸೇವಿಸಬೇಕು. ಈರೀತಿ ೯-೧೧ ದಿವಸ ಕೊಡಬೇಕು. ಇದಕ್ಕೆ

ಪತ್ಯ ತುಪ್ಪಹಾಕಿದ ಕಿಚಡಿ (ಹುಗ್ಗಿ) ಅನ್ನ ಇದರಿಂದ ವಾತಮೂಲ ಗುಣವಾಗುವದು.

೮. ಒಂದು ಮಡಿಕೆಯಲ್ಲಿ ೧ ಶೇರು ಅಕ್ಕಿಹಾಕಿ ನೀರುಹಾಕಿ ೧ ಶೇರು ಬೆಲ್ಲಹಾಕಿ ಹಸುವಿನತುಪ್ಪ ೨ ಸೊಲಿಗೆ, ಚಿತ್ರಮೂಲದ ಬೇರಿನ ಬೊಬ್ಬಡಿ ಚೂರ್ಣ ೨ ತೊಲೆ ಹಾಕಿ ಚನ್ನಾಗಿ ಬೇಯಿಸಿ ತೆಗೆದುಕೊಂಡು ಊಟಮಾಡುವದು. ಈರೀತಿ ದಿನಬಿಟ್ಟು ದಿನ ೫ ದಿನ ಕೊಟ್ಟಲ್ಲಿ ಸಮಸ್ತ ಮೂಲರೋಗ ಗುಣವಾಗುವದು.

೯. ಕತ್ತೀಕಿರಬಿನ ಸೊಪ್ಪು ಸಮೂಲ, ಚಾತರಾಸಿ (ಕಹಿದರಿಶಿನ) ಸಮೂಲ ಇವು ಎರಡು ಕುಟ್ಟಿ ಚೂರ್ಣಮಾಡಿ ಹೊತ್ತಿಗೆ ಕಾಲುತೊಲೆ ಹಸುವಿನ ತುಪ್ಪದಲ್ಲಿ ಕಲಸಿಕೊಡುವದು. ಈರೀತಿ ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ.

೧೦. ಅಳಲೇಕಾಯಿಸಿಪ್ಪೆ ೫ ತೊಲೆ, ಮೆಣಸು ೧ ತೊಲೆ, ಬಿಳೇಜೀರಿಗೆ ೧ ತೊಲೆ, ಹಿಪ್ಪಲಿ ೧ ತೊಲೆ, ಮೋಡಿ ೨ ತೊಲೆ, ಚವ್ಯ ೩ ತೊಲೆ, ಚಿತ್ರಮೂಲ ೪ ತೊಲೆ, ಶೊಂಟಿ ೫ ತೊಲೆ, ಯವಕ್ಷಾರ ೨ ತೊಲೆ, ಒಣಗಿದ ಚೂರ್ಣದಗಡ್ಡೆ ೮ ತೊಲೆ, ಶುದ್ಧಿಮಾಡಿದ ಗೇರುಬೀಜ ೧ ತೊಲೆ, ಇದರಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಅರಿಯುವ ಜಿನಸುಗಳನ್ನು ಅರದು ಇದಕ್ಕೆ ಸಮಭಾಗ ಹಳೇಬೆಲ್ಲ ಹಾಕಿ ಚೆನ್ನಾಗಿ ಅರದು ಕಡಲೇಕಾಳುಗಾತ್ರ ಮಾತ್ರೆಮಾಡಿ ಹಸುವಿನ ತುಪ್ಪದಲ್ಲಿ ಕೊಡುವದು. ಈರೀತಿ ಬೆಳಿಗ್ಯೆ ೧ ಮಾತ್ರೆ, ಸಾಯಂಕಾಲ ೧ ಮಾತ್ರೆಯಂತೆ ೭ ದಿನ ಕೊಡಬೇಕು. ಇದಕ್ಕೆ ಪತ್ಯ ಮುಲ್ಲಂಗಿ ಗಡ್ಡೆ, ಚೂರ್ಣದಗಡ್ಡೆ ಇವುಗಳನ್ನು ತೊಗರೀಬೇಳೆ ಬೇಯಿಸಿದ ಸಾರಿಗೆ ಹಾಕಿ ಊಟಮಾಡುವದು ಹಸುವಿನ ಮಜ್ಜಿಗೆ ಹಾಕಿಕೊಳ್ಳಬಹುದು. ಇದರಿಂದ ಸಮಸ್ತ ಮೂಲರೋಗ ಗುಣವಾಗುವದು.

೧೧. ಶ್ರೀಗಂಧದಚಕ್ಕೆ, ಗೇರುಬೀಜದಪೊಪ್ಪು, ಮಂಗರವಳ್ಳಿಬೇರು, ಚಿತ್ರಮೂಲ, ಹಿಪ್ಪಲಿ, ಮೆಣಸು, ವೋಮ, ಹಾಗಲಕಾಯಿ ಇವು ಸಮಭಾಗ ಕುಟ್ಟಿ ಚೂರ್ಣಮಾಡಿ ಇದಕ್ಕೆ ೪ ಭಾಗ ರಾಯಪುಡಿಸಕ್ಕರೆಹಾಕಿ ಕಲಸಿ ೩ ಬೆರಳಿನಲ್ಲಿ ಬಂದಷ್ಟು ಚೂರ್ಣ ಬಾಯಿಯಲ್ಲಿ ಹಾಕಿಕೊಂಡು ಬಿಸಿನೀರು ಕುಡಿಯುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಮಸ್ತ ಮೂಲರೋಗ ಗುಣವಾಗುವದು.

೧೨. ಬಿಳೇ ಈರುಳ್ಳಿ ೧ ವಾವು ತಂದು ಸಣ್ಣಗೆ ಕುಯಿದು ಹಸುವಿನ ತುಪ್ಪದಲ್ಲಿ ಹುರಿದು ಅದಕ್ಕೆ ಲವಂಗ ೫, ಲೋಧ್ರದಚಕ್ಕೆ ಕಾಲುತೊಲೆ,

ಧಾತಕೀಕುಸುಮ ಕಾಲುತೊಲೆ ಈ ಮೂರು ಜಿನಸು ಚೂರ್ಣಮಾಡಿ ಎಲ್ಲವನ್ನು ಸೇರಿಸಿ ಕುಟ್ಟಿ ಹೊತ್ತಿಗೆ ೧ ತೊಲೆಯಂತೆ ಬೆಳಿಗ್ಯೆ ಸಾಯಂಕಾಲ ೫ ದಿವಸ ಕೊಡ ಬೇಕು. ಇದಕ್ಕೆ ಪತ್ಯ ಹಸುವಿನಮಜ್ಜಿಗೆ ಅನ್ನ, ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ರಕ್ತಮೂಲ ಗುಣವಾಗುವದು.

೧೩. ಮುಲ್ಲಂಗಿಗಡ್ಡೆಯನ್ನು ಕೆಮ್ಮಣ್ಣುಬಟ್ಟೆಯಲ್ಲಿ ಸುತ್ತಿ ಬೆಂಬೂದಿಯಲ್ಲಿಟ್ಟಿದ್ದು ನಂತರ ರಸತೆಗೆಯುವುದು ಈ ರಸ ೨ ತೊಲೆ, ಇದಕ್ಕೆ ಲವಂಗಗಳು ೩ ಚೂರ್ಣಮಾಡಿ ಸೇರಿಸುವುದು. ಬಿಳೇ ಈರುಳ್ಳಿ ರಸ ೨ ತೊಲೆ, ಹಸುವಿನತುಪ್ಪ ೨ ತೊಲೆ ಇವೆಲ್ಲವನ್ನೂ ಕಲೆಸಿ ಸುಮಾರು ಗಟ್ಟಿಯಾಗುವಹಾಗೆ (ಘೃತಪಕ್ವದಂತೆ) ಕಾಯಿಸಿ ಹೊತ್ತಿಗೆ ೧ ತೊಲೆಪ್ರಕಾರ ಬೆಳಿಗ್ಯೆ ಸಾಯಂಕಾಲ ೭ ದಿವಸ ತೆಗೆದು ಕೊಳ್ಳುವದು. ಇದಕ್ಕೆ ಪತ್ಯ ಕಿಚ್ಚಡಿ (ಹುಗ್ಗಿ) ಅನ್ನ ಇದರಿಂದ ಮೂಲ ರೋಗವು ಗುಣವಾಗುವುದು.

೧೪. ೧ ಸೊಲಿಗೆ ಹಸುವಿನತುಪ್ಪ, ತಂಟಬೆಲ್ಲ ೬, ಬಿಳೇ ಈರುಳ್ಳಿಗಡ್ಡೆ ೬, ಆಲದಮರದ ಬೇರಿನ ಬಿಳಿಲು ಕೊನೆಬೇರಿನದು ಒಂದುವರೆಚಟಾಕು ತೆಗದುಕೊಂಡು ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಅರಿಯುವ ಜಿನಸುಗಳನ್ನು ಅರದು ಎಲ್ಲವನ್ನು ಒಂದು ಮಡಿಕೆಯಲ್ಲಿಹಾಕಿ ವಲೆಯಲ್ಲಿ ಉರಿಸಿ ಪಕ್ವವಾಗಿ ಕಾಯಿಸಿ ಇಟ್ಟುಕೊಳ್ಳುವದು ಬೆಳಿಗ್ಯೆಹೊತ್ತು ೧ ಗಜ್ಜುಕಾಯಿ ಪ್ರಮಾಣ ತೆಗೆದುಕೊಳ್ಳಬೇಕು. ಇದೇರೀತಿ ಸಾಯಂಕಾಲ ಕೊಡುವದು. ಹೀಗೆ ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ರಕ್ತ ಮೂಲ ಗುಣವಾಗುವದು.

೧೫ ಕೆರೇಹಿಪ್ಪಲಿಸೊಪ್ಪು ತಂದು ಚನ್ನಾಗಿ ತೊಳದು ಒಂದು ಮಡಿಕೆಯಲ್ಲಿಹಾಕಿ ಹಸುವಿನತುಪ್ಪ ಹಾಕಿ ಚನ್ನಾಗಿ ಬೇಯಿಸಿ ಇಳಿಸಿಕೊಂಡು ಅದಕ್ಕೆ ಯಾಲಕ್ಕಿ, ಸಕ್ಕರೆಹಾಕಿ ವರಳಲ್ಲಿಹಾಕಿ ರುಬ್ಬಿ ಹೊತ್ತಿಗೆ ೧ ತೊಲೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೧೧ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ರಕ್ತಮೂಲ ಗುಣವಾಗುವದು.

೧೬. ಮೆಂತ್ಯ ೧ ಪಾವು, ಮುಲ್ಲಂಗಿಬೀಜ ಅರಪಾವು ಇವು ಎರಡು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಬಿಳೇಈರುಳ್ಳಿ ೧ ಪಾವು ಸಣ್ಣಗೆ ಕುಯ್ಯುವದು ಇವುಮೂರು ಹಸುವಿನ ತುಪ್ಪದಲ್ಲಿ ಹುರದು ವರಳಲ್ಲಿಹಾಕಿ ರುಬ್ಬಿ ಕೊಳ್ಳುವದು ಹೊತ್ತಿಗೆ ೧ ತೊಲೆಯಂತೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೯ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ರಕ್ತಮೂಲ ಗುಣವಾಗುವದು

೧೭. ಕೆಂಪು ಉತ್ತರೇಣಿಸೊಪ್ಪು ಚನ್ನಾಗಿ ಅರದದ್ದು ತೆಂಗಿನಕಾಯಿ ನಷ್ಟು, ಕಲ್ಲುಸಕ್ಕರೆ ೧ ಪಾವು, ಯಾಲಕ್ಕಿ ॥ ತೊಲೆ, ಬಿಳೇಜೀರಿಗೆ ೧ ತೊಲೆ

ಇವುಗಳನ್ನು ಚೂರ್ಣಮಾಡಿಕೊಳ್ಳುವದು. ಒಂದು ಕಬ್ಬಿಣದ ಬಾಂಡ್ಲಿಯಲ್ಲಿ ಹಸುವಿನಬೆಣ್ಣೆ ೧ ಪಾವುಹಾಕಿ ವಲೆಯಮೇಲಿಟ್ಟು ಮೇಲ್ಕಂಡ ಜಿನಸುಗಳನ್ನು ಆದರಲ್ಲಿಹಾಕಿ, ಕಲಸಿ ಪಕ್ವವಾಗಿ ಕಾಯಿಸಿ ಇಟ್ಟುಕೊಳ್ಳುವದು. ಹೊತ್ತಿಗೆ ಗಜ್ಜೀಕಾಯಿ ಪ್ರಮಾಣ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೧೧ ದಿನ ಕೊಡ ಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ರಕ್ತ ಮೂಲ ಗುಣವಾಗುವದು.

೧೮. ಶುದ್ಧಿಮಾಡಿದ ಗೇರುಬೀಜ ೧೦, ಬೋಡತರ (ಬೋಳದರಗ) ಯಲೆ ಚೂರ್ಣ ೧ ಸೊಲಿಗೆ, ವೋಮ ಚೂರ್ಣಮಾಡಿದ್ದು ೧ ಸೊಲಿಗೆ, ಅಳಲೇಕಾಯಿ ಚೂರ್ಣಮಾಡಿದ್ದು ೧ ಸೊಲಿಗೆ, ಚಿತ್ರಮೂಲದಬೇರಿನ ಬೊಬ್ಬಡೆ ಚೂರ್ಣ ೧ ಸೊಲಿಗೆ, ಸುಲಿದ ಬೆಳ್ಳುಳ್ಳಿ ೧ ಸೊಲಿಗೆ, ತಾರೇಕಾಯಿಚೂರ್ಣ ೧ ಸೊಲಿಗೆ, ನೆಲ್ಲೀಕಾಯಿಚೂರ್ಣ ೧ ಸೊಲಿಗೆ, ಒಳ್ಳೆಯೆಳ್ಳು ॥ ಸೊಲಿಗೆ, ಒಳ್ಳೆಳ್ಳು ಹಿಂಡಿ ॥ ಸೊಲಿಗೆ ಇವೆಲ್ಲವನ್ನು ಸೇರಿಸಿ ಇದಕ್ಕೆ ನಾಲ್ಕು ಭಾಗ ಬೆಲ್ಲಹಾಕಿ ವರಳಲ್ಲಿ ಹಾಕಿ ರುಬ್ಬಿ ಹೊತ್ತಿಗೆ ಗಜ್ಜಿಕಾಯಿಗಾತ್ರ ಕೊಡುವದು. ಹೀಗೆ ಬೆಳಿಗ್ಯೆ ಸಾಯಂ ಕಾಲ ೨ ಹೊತ್ತು ೯-೧೧ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿ ಸಾರು ಅನ್ನ ಅಥವಾ ಹಸುವಿನ ಹಾಲು ಅನ್ನ ಕೊಡುವದು. ಇದರಿಂದ ಸಮಸ್ತ ಮೂಲರೋಗ ಗುಣವಾಗುವದು.

೧೯. ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿ ಗಂಧಕ ೨ ತೊಲೆ ಇವು ಖಲ್ವದಲ್ಲಿ ಅರದು * ಕಲಿಕಾರಿ ೧ ತೊಲೆ, ಬಿಳೀಕಾಡು ಸೂರಣದಗಡ್ಡೆ ೧ ತೊಲೆ ಈ ಯರಡಕ್ಕೆ ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಬೆಂಬೂದಿ ಯಲ್ಲಿ ಹೊತಿಟ್ಟು ಬೇಯಿಸಿ ತೆಗೆದುಕೊಳ್ಳುವದು. ಶುದ್ಧಿಮಾಡಿದ ಜಾಪಾಳ ೧ ತೊಲೆ ಹಾಕಿ ಎಲ್ಲವನ್ನು ತುಪ್ಪಸವರಿದ ಕುಡಿಕೆಯಲ್ಲಿ ಹಾಕಿ ಬಿಸಿಬರುವವರಿಗೆ ಬೇಯಿಸಿ ಕಲ್ವದಲ್ಲಿ ಹಾಕಿ ಚನ್ನಾಗಿ ಅರೆದು ೨ ಗುರುಗಂಜಿಯಷ್ಟು ಮಾತ್ರೆಗಳು ಮಾಡಿ ನೆರಳಲ್ಲಿ ವಣಗಿಸಿ ಬೆಳಿಗ್ಯೆ ೧ ಮಾತ್ರೆ ಬಾಯಿಯಲ್ಲಿ ಹಾಕಿಕೊಂಡು ಬಿಸಿ ನೀರು ಕುಡಿಯುವದು. ಹೀಗೆ ೫ ದಿವಸ ತೆಗೆದುಕೊಳ್ಳಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಮಸ್ತ ಮೂಲರೋಗ ಗುಣ ವಾಗುವದು.

೨೦. ಚಿಟ್ಟರಳೆಣ್ಣೆ ೨ ಶೇರು, ಬಿಳೀಈರುಳ್ಳಿ ರಸ ೧ ಶೇರು, ಲೋಳಿಸರದ ರಸ ೧ ಶೇರು, ಶುದ್ಧಿಮಾಡಿದ ಬಿಳೇದೂಪ ೧ ಪಾವು ಇವು ಎಲ್ಲವನ್ನು ಶೇರಿಸಿ ಪಕ್ವವಾಗಿ ಕಾಯಿಸಿ ಬೆಳಿಗ್ಯೆಹೊತ್ತು ಬಿಸಿನೀರಿನಲ್ಲಿ ೧ ತೊಲೆ ಕೊಡಬೇಕು.

* ಈ ಮೂಲಿಕೆಯನ್ನು ತೆಲುಗಿನಲ್ಲಿ ಚನ್ನಚರ್ಲಗಡ್ಡ, ಪೊತ್ತಿದುಂಪ ಎಂತಲೂ, ತಮಿಳಿ ನಲ್ಲಿ ಕಾರ್ತಿಕ್ಕಿಳಂಗು ಅಥವಾ ಕಲಪ್ಪಯಿಕ್ಕಿಳಂಗು ಎಂತಲೂ, ಹಿಂದಿಯಲ್ಲಿ ಕಲಿಹಾರಿ ಯೆಂತಲೂ ಹೇಳುವರು.

ಹೀಗೆ ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ರಕ್ತಮೂಲ ಗುಣವಾಗುವದು.

೨೧. ಶುದ್ಧಿಮಾಡಿದ ಗೇರುಬೀಜ ೧೦, ಒಳ್ಳೆಯುಳ್ಳು ‖ ಶೇರು, ಬೆಲ್ಲ ೧ ಶೇರು, ಒಣಕೊಬ್ಬರಿ ‖ ಶೇರು ಇವುಗಳನ್ನು ವರಳಲ್ಲಿ ಹಾಕಿ ಚನ್ನಾಗಿ ಕುಟ್ಟಿ ರುಬ್ಬಿ ಕಡಲೇಕಾಳುಗಾತ್ರ ಮಾತ್ರೆಮಾಡಿ ಹಸುವಿನ ತುಪ್ಪದಲ್ಲಿ ಕೊಡಬೇಕು. ಹೀಗೆ ಬೆಳಿಗ್ಗೆಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಹಿಸಾರು ಅನ್ನ. ಇದರಿಂದ ಸಮಸ್ತ ಮೂಲರೋಗ ಗುಣವಾಗುವದು.

೨೨. ಮೂಲಂಗಿಸೊಪ್ಪಿನ ರಸ ೧ ಪಾವು, ಗಾಂಧಾರಿಸೊಪ್ಪಿನ ರಸ ೧ ಪಾವು, ಹಸುವಿನ ತುಪ್ಪ ‖ ಶೇರು ಇವು ಘೃತಪಕ್ವವಾಗಿ ಕಾಯಿಸಿ ಇಳಿಸಿಕೊಳ್ಳುವಾಗ ಗೋಮೂತ್ರ ಶಿಲಾಜಿತು ಭಸ್ಮ ‖ ತೊಲೆ ಹಾಕಿ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ‖ ತೊಲೆಯಂತೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ಹಸುವಿನ ಹಾಲು ಅನ್ನ. ಇದರಿಂದ ರಕ್ತಮೂಲ ಗುಣವಾಗುವದು.

೨೩. ಶುದ್ಧಿಮಾಡಿದ ಗೇರುಬೀಜ ೨೦ ಎರಡೆರಡಾಗಿ ಒಡೆದು ಒಂದು ಕಬ್ಬಿಣದ ಬಾಂಡ್ಲಿಯಲ್ಲಿ ಹಾಕಿ ಅರ್ಧ ಸೊಲಿಗೆ ಹಸುವಿನ ತುಪ್ಪ ಹಾಕಿ ಒಲೆಯ ಮೇಲಿಟ್ಟು ಕಾಯಿಸಿ ಬಟ್ಟೆಯಲ್ಲ ಶೋಧಿಸಿಕೊಳ್ಳುವದು. ಒಳ್ಳೆಯುಳ್ಳು ‖ ಶೇರು, ಒಳ್ಳೆಬೆಲ್ಲ ೧ ಶೇರು ಎಲ್ಲವನ್ನು ವರಳಲ್ಲಿ ಹಾಕಿ ರುಬ್ಬಿ ಇಟ್ಟುಕೊಳ್ಳುವದು. ಪ್ರತಿದಿನ ಪ್ರಾತಃಕಾಲ ಕಾಲು ತೊಲೆ ತೆಗೆದುಕೊಳ್ಳುವದು. ಈರೀತಿ ೭ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಮೂಲರೋಗ ಗುಣವಾಗುವದು.

೨೪. ಮೂಲಕ್ಕೆ ಸುವರ್ಣಕಂದಲೇಹ:—ಚೂರ್ಣದಗಡ್ಡೆ ೧೬ ತೊಲೆ, ಯಾಲಕ್ಕಿ ‖ ತೊಲೆ, ಕಲಿಕಾಹಾರಿ ೨ ತೊಲೆ, ಚಿತ್ರಮೂಲ ೧ ತೊಲೆ, ಶೊಂಟಿ ೧ ತೊಲೆ, ಮೆಣಸು ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿ ಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೪ ತೊಲೆ, ವಾಯುವಿಳಂಗ ೧ ತೊಲೆ, ಹಿಪ್ಪಲಿ ೧ ತೊಲೆ, ಮೋಡಿ ೧ ತೊಲೆ, ದಾಲಚಿನ್ನಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಒಂದು ಬಾಂಡ್ಲಿಯಲ್ಲಿ ಹಳೇಬೆಲ್ಲ ೬೪ ತೊಲೆ ಹಾಕಿ ನೀರುಹಾಕಿ ಒಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದ ಕೂಡಲೇ ಮೇಲ್ಕಂಡ ಚೂರ್ಣ ಹಾಕಿ ಪಕ್ವವಾಗಿ ಲೇಹವನ್ನು ತಯಾರುಮಾಡಿ ಹಸುವಿನತುಪ್ಪ ೧ ಶೇರು ಹಾಕಿ ಕಲಸಿ ಇಟ್ಟುಕೊಳ್ಳುವದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಲೇಹ ಸೇವನೆಮಾಡುವದು. ಈರೀತಿ ೨೦ ದಿವಸ ತೆಗೆದುಕೊಳ್ಳಬೇಕು. ಇಚ್ಛಾಪತ್ಯ ಶಲದಿ ಪದಾರ್ಥ ವರ್ಜಿತ. ಇದರಿಂದ ಸಮಸ್ತ ಮೂಲರೋಗ ಗುಣವಾಗುವದು.

೨೫. ಕೋಳಿಹಿಕ್ಕೆ ೩ ತೊಲೆ, ಮೈಲತುತ್ತಿ ॥ ತೊಲೆ ಇವುಗಳನ್ನು ಅರದು ಇಟ್ಟುಕೊಳ್ಳುವದು ವರಳಲ್ಲಿ ಬೆಂಕಿ ಹಾಕಿ ಅದರಮೇಲೆ ಮೇಲ್ಕಂಡ ಚೂರ್ಣ ೧ ತೊಲೆ ಹಾಕಿ ರಂಧ್ರವಿರುವ ರಾಗಿಕಲ್ಲು ಮುಚ್ಚಿ ಆಸನಕ್ಕೆ ಹೊಗೆ ಕೊಡಬೇಕು. ಹೀಗೆ ೫ ದಿನ ಮಾಡಿದರೆ ಮೊಳೆಗಳು ಕರಗಿಹೋಗುವದು.

೨೬. ಸೂರ್ತಿಬೆಳಗಾರ ಅರಳುಮಾಡಿದ್ದು ಖಲ್ವದಲ್ಲಿ ಹಾಕಿ ಅರದು ಇದಕ್ಕೆ ತಕ್ಕಷ್ಟು ಹಸುವಿನ ಬೆಣ್ಣೆ ಹಾಕಿ ಕಲಸಿ ಮೂಲಕ್ಕೆ ಹಚ್ಚುತ್ತಾಬಂದರೆ ಗುಣ ವಾಗುವದು.

೨೭. ಲೋಳೆಸರ ಕತ್ತಿಯಲ್ಲಿ ಕುಯಿದರೆ ಅರಸಿನ ಬಣ್ಣದ ರಸ ಬರುತ್ತೆ. ಈ ರಸದ ಸಮ ಚಿಟ್ಟೆರಳೆಣ್ಣೆ ಹಾಕಿ ಗಾಜಿನ ಬಟ್ಲಲ್ಲಿ ಹಾಕಿ ಬಿಸಲಲ್ಲಿ ಇಟ್ಟರೆ ಘಟ್ಟಿಯಾಗುತ್ತೆ. ಇದನ್ನು ಮೊಳೆಗಳಿಗೆ ದಿನವಹಿ ಲೇಪಿಸುತ್ತಾಬಂದರೆ ಗುಣ ವಾಗುವದು.

೨೮. ೩ ತೊಲೆ ಇರುವ ಒಂದೇ ಗಡ್ಡೆ ಮೈಲತುತ್ತ ತಂದು ಬೆಂಕಿಯಲ್ಲಿ ಸುಟ್ಟು ಖಲ್ವದಲ್ಲಿ ಅರದು ಅದಕ್ಕೆ ಕಾಚೀಸೊಪ್ಪಿನ ರಸ ಹಾಕಿ ಅರದು ಬಿಸಲಲ್ಲಿ ಒಣಗಿಸಿ ಚೂರ್ಣಮಾಡಿ ಇಟ್ಟುಕೊಳ್ಳುವದು. ೧ ಭಾಗ ಚೂರ್ಣಕ್ಕೆ ೩ ಭಾಗ ಹಸುವಿನಬೆಣ್ಣೆ ಹಾಕಿ ಕಲಸಿ ಮೊಳೆ ಇರುವ ಸ್ಥಳದಲ್ಲಿ ಹಚ್ಚುತ್ತಾಬಂದರೆ ಗುಣವಾಗುವದು. ಇದರಿಂದ ಒಳಮೊಳೆ, ಹೊರಮೊಳೆ ನಿವಾರಣೆ ಆಗುವದು.

೨೯. ಮೈಲತುತ್ತಿ ಸುಟ್ಟಿದ್ದು ಕಾಲು ತೊಲೆ, ಮುರದಾರಶಿಂಗಿ ॥ ತೊಲೆ, ಪಾಲುತುತ್ತ ೧ ತೊಲೆ, ಜಂಗಾಲುಪಚ್ಚೆ ॥ ತೊಲೆ, ಬಿಳೀಕಾಚು ೨ ತೊಲೆ, ಹಸುವಿನಬೆಣ್ಣೆ ೮ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ಇದಕ್ಕೆ ಬಿಳೀಹಾಲುವಾಣದಸೊಪ್ಪಿನ ರಸ ಹಾಕಿ ಅರದು ಇಟ್ಟುಕೊಳ್ಳುವದು. ಇದು ಪ್ರತಿದಿನ ಬೆಳಿಗ್ಗೆ ಮೊಳೆಗಳಿಗೆ ಹಚ್ಚುತ್ತಾಬರುವದು. ಇದರಿಂದ ಒಳಮೊಳೆ, ಹೊರಮೊಳೆ ಗುಣವಾಗುವದು.

೩೦. ಮುರದಾರುಸಿಂಗಿ ॥ ತೊಲೆ, ಮೈಲತುತ್ತಿ ಕಾಲು ತೊಲೆ, ಜಂಗಾಲ್ ಪಚ್ಚೆ ॥ ತೊಲೆ, ಅರಿದಳ ॥ ತೊಲೆ, ಮಣಿಶಿಲೆ ॥ ತೊಲೆ ಇವುಗಳನ್ನು ಕಲ್ವದಲ್ಲಿ ಹಾಕಿ ಬಿಳೀಹಾಲುವಾಣದ ಸೊಪ್ಪಿನ ರಸ ಹಾಕಿ ಅರೆದು ಬಿಲ್ಲೆಮಾಡಿ ಒಣಗಿಸಿ ೨ ಹಣತೆಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ಕುಕ್ಕುಟಪುಟ ಇಟ್ಟುಕೊಳ್ಳುವದು. ಇದನ್ನು ತೆಗದು ಖಲ್ವದಲ್ಲಿ ಹಾಕಿ ಹಸುವಿನಬೆಣ್ಣೆ ೧೦ ತೊಲೆ ಹಾಕಿ ಚನ್ನಾಗಿ ಅರದು ಇಟ್ಟುಕೊಳ್ಳುವದು. ಒಳಮೊಳೆ, ಹೊರ ಮೊಳೆ ಇವುಗಳಿಗೆ ಲೇಪಿಸುತ್ತಾಬಂದರೆ ಗುಣವಾಗುವದು.

೩೧. ಒಂದು ಕಬ್ಬಿಣದ ಬಾಂಡ್ಲಿಯಲ್ಲಿ ಹಸುವಿನತುಪ್ಪ ೧ ಪಾವು ಹಾಕಿ ಒಲೆಯಮೇಲಿಟ್ಟು ಕಾಯಿಸುತ್ತಿರುವಾಗ ಹೊಟ್ಟು ತೆಗೆದ ಬೆಳ್ಳುಳ್ಳಿ ೧ ತೊಲೆ

ಹಾಕಿ ಕೆಂಪಗೆ ಆಗುವವರಿವಿಗು ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡು ಇಟ್ಟು ಕೊಳ್ಳುವದು. ಈ ಗಟ್ಟಿಯಾದ ತುಪ್ಪವನ್ನು ಒಂದು ಬಿಳಿ ಬಟ್ಟೆಗೆ ಲೇಪಿಸಿ ಆಸನಕ್ಕೆ ಕಟ್ಟಲು ಹೊರವೊಳೆ, ಒಳವೊಳೆ, ರಕ್ತಹೋಗುವದು ಗುಣವಾಗುವದು. ಈರೀತಿ ೫ ದಿವಸ ಕಟ್ಟಬೇಕು.

೩೨. ಅರಿದಳ ೧ ತೊಲೆ, ಕರೇಜೀರಿಗೆ ೧ ತೊಲೆ, ಹಿಂಗು ೧ ತೊಲೆ, ಹುಚ್ಚುಹೀರೇಕಾಯಿ ಚೂರ್ಣ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಖಲ್ವದಲ್ಲಿ ಹಾಕಿ ಹರಳೆಣ್ಣೆ ಹಾಕಿ ಅರದು ಗೋಲಿಗಾತ್ರ ಮಾತ್ರೆ ಮಾಡಿ ಇಟ್ಟು ಕೊಳ್ಳುವದು. ಮಣ್ಣಿನಲ್ಲಿ ಗುಣಿ ತೆಗೆದು ಬೆಂಕಿಕೆಂಡಗಳು ಹಾಕಿ ಅದರಮೇಲೆ ಒಂದು ಮಾತ್ರೆಯನ್ನು ಹಾಕಿ ಆಸನಕ್ಕೆ ಹೊಗೆಕೊಡಲು ವೊಳೆಗಳು ಕರಗಿಹೋಗುವದು. ಈರೀತಿ ಗುಣವಾಗುವವರಿವಿಗು ಹೊಗೆ ಕೊಡುವದು.

೩೩. ಬೆಪ್ಪಾಲೆಚಕ್ಕೆ ತಂದು ವಣಗಿಸಿ ಇಟ್ಟುಕೊಳ್ಳುವದು. ಕಬ್ಬಿಣದ ತಗಡಿನ ಮೇಲೆ ಚಕ್ಕೆಯನ್ನು ನೀರಿನಿಂದ ಗಂಧ ತೆಯಿದು ವೊಳೆಗೆ ಹಚ್ಚಿದರೆ ಕರಗಿಹೋಗುವದು ಈರೀತಿ ಕರಗಿಹೋಗುವವರಿವಿಗೂ ಹಾಕುತ್ತಾಬರುವದು.

೩೪. ಬೇಲದ ಮರಗಳಲ್ಲಿ ಇರುವೆಗಳು ಕವಡೆಗಳಂತೆ ಗೂಡುಗಳನ್ನು ಕಟ್ಟಿರುವುವು. ಅದನ್ನು ತೆಗೆದುಕೊಂಡು ಬಂದು ಕುಟ್ಟಿ ಚೂರ್ಣಮಾಡಿ ಹೊತ್ತಿಗೆ ಅರ್ಧತೊಲೆ ಚೂರ್ಣವನ್ನು ಒಳಕಲ್ಲಿನಲ್ಲಿ ಹುಣಸೇ ಇದ್ದಲಿನ ಬೆಂಕಿಯನ್ನು ಹಾಕಿ ಅದರಮೇಲೆ ಚೂರ್ಣ ಹಾಕಿ, ಮೇಲೆ ಬೀಸುವಕಲ್ಲಿನ ಮೇಲ್ಭಾಗವನ್ನು ಮುಚ್ಚಿ ಆ ರಂಧ್ರಕ್ಕೆ ಸರಿಯಾಗಿ ಆಸನವನ್ನಿಟ್ಟು ಕುಳ್ಳಿರಿಸುವುದು. ಈರೀತಿ ೩ ದಿನ ೨ ಹೊತ್ತು ಮಾಡುವುದು. ಇದಕ್ಕೆ ಪತ್ಯ ಹಾಲು ಅನ್ನ ೩ ದಿನ, ಸೀಸಾರು ಅನ್ನ ೩ ದಿನ. ಇದರಿಂದ ಮೂಲವ್ಯಾಧಿ, ಆಸನಪವಿತ್ರ, ಆಸನನೂತಿ, ಗಂಡಾಮಾಲೆ, ಭಗಂದರ ಸಹ ಗುಣವಾಗುವುದು.

೩೫. ಇಂಗಳದಹಣ್ಣಿನ ಮೈಣ ೧ ತೊಲೆ, ಶುದ್ಧಿಮಾಡಿದ ತಾಂಬ್ರದರಾಪುಡಿ ೧ ತೊಲೆ, ಈಶ್ವರಿಬೇರು ೧ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ಚನ್ನಾಗಿ ಅರದು ವೊಳೆಗಳಿಗೆ ಲೇಪಿಸಿ ಸಾಂಬ್ರಾಣಿಹೊಗೆ ಕೊಡುವದು. ಹೀಗೆ ಬೆಳಿಗ್ಗೆಹೊತ್ತು ೭ ದಿನ ಮಾಡುವದು. ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವೊಳೆಗಳು ಬಿದ್ದುಹೋಗುವದು ಅಥವಾ ಕರಗಿ ಹೋಗುವದು.



# ಹತ್ತೊಂಭತ್ತನೆಯ ಅಧ್ಯಾಯ.

## ಅಜೀರ್ಣರೋಗ–ಔಷಧಗಳು.

### ಅಜೀರ್ಣರೋಗ ಲಕ್ಷಣ.

ಅಧಿಕವಾಗಿ ಜಲಪಾನವನ್ನು ಮಾಡುವಿಕೆ, ಅಕಾಲದಲ್ಲಿ ಭೋಜನ ಮಾಡುವಿಕೆ, ಮಲಮೂತ್ರಗಳನ್ನು ಬಂಧಿಸುವಿಕೆ, ಅಕಾಲದಲ್ಲಿ ನಿದ್ರಿಸುವಿಕೆ, ಅಧಿಕವಾಗಿ ಊಟಮಾಡುವಿಕೆ, ಮೇಲೆಮೇಲೆ ತಿನ್ನುವಿಕೆ ಇವುಗಳಿಂದ ತಿನ್ನಲ್ಪಟ್ಟ ಅನ್ನವು ಜೀರ್ಣಿಸುವುದಿಲ್ಲ ಹೀಗೆತಿಂದ ಅನ್ನವು ಜೀರ್ಣಿಸದೆ ಹೊಟ್ಟೆಯಲ್ಲಿರುವುದೇ ಅಜೀರ್ಣರೋಗವು.

ಈ ಅಜೀರ್ಣರೋಗದಲ್ಲಿ ಆಮಾಜೀರ್ಣವು, ವಿದಗ್ಧಾಜೀರ್ಣವು, ವಿಷ್ಟಬ್ಧಾಜೀರ್ಣವು, ರಸಶೇಷಾ ಜೀರ್ಣವು ಎಂಬದಾಗಿ ನಾಲ್ಕು ವಿಧಗಳಾಗಿರುವುವು.

ಆಹಾರವು ಜೀರ್ಣಿಸದೆ ಮಲದಲ್ಲಿಯಾದರೂ, ವಾಂತಿಯಲ್ಲಿಯಾದರೂ ಕಲೆತು ಹೊರಹೊರಡುವುದು ಆಮಾಜೀರ್ಣವೆಂತಲೂ, ಹುಳಿತೇಗುಗಳಿಂದ ಹೊರಹೊರಡುವುದು ವಿದಗ್ಧಾ ಜೀರ್ಣವೆಂತಲೂ, ಹೊಟ್ಟೆಯು ಉಬ್ಬಿರುವುದಕ್ಕೆ ವಿಷ್ಟಬ್ಧಾಜೀರ್ಣವೆಂತಲೂ, ಅನ್ನದಲ್ಲಿಚ್ಛೆಯಿಲ್ಲದಿರುವುದಕ್ಕೆ ರಸಶೇಷಾ ಜೀರ್ಣವೆಂತಲೂ ತಿಳಿಯುವುದು.

ಅಜೀರ್ಣವುಳ್ಳವರಿಗೆ ಹೊಟ್ಟೆ ಉಬ್ಬರಿಸಿ ದೇಹದಲ್ಲಿಯೂ ಹೊಟ್ಟೆಯಲ್ಲಿಯೂ ಸೂಜಿಗಳಿಂದ ಚುಚ್ಚಿದಂತೆ ವಾತವೇದನೆಯುಂಟಾಗುವುದು. ಇದು ವಿಷೂಚಿಯೆಂದು ಹೇಳಲ್ಪಡುವುದು.

### ಅಜೀರ್ಣರೋಗಕ್ಕೆ ಚಿಕಿತ್ಸೆಗಳು.

೧. ಸಾಮುದ್ರಾದಿ ಚೂರ್ಣ:—ಉಪ್ಪು, ಪಾದರಿಲವಣ, ಸೈಂಧವಲವಣ, ಯವಕ್ಷಾರ, ಓಮ, ಅಳಲೇಕಾಯಿಶಿಪ್ಪೆ, ಹಿಪ್ಪಲಿ, ಶೊಂಟಿ, ಶುದ್ಧಿಮಾಡಿದ ಹಿಂಗು ವಾಯುವಿಳಂಗ ಇವುಗಳನ್ನು ಸಮಭಾಗ ತೆಗೆದುಕೊಂಡು ಚೂರ್ಣಿಸಿ ಮೂರು ಬೆರಳಿನಲ್ಲಿ ಬರುವಷ್ಟು ಚೂರ್ಣವನ್ನು ಅನ್ನಕ್ಕೆ ಹಾಕಿಕೊಂಡು ತುಪ್ಪದೊಡನೆ ಕಲೆಸಿ ಐದು ತುತ್ತುಗಳನ್ನು ತಿನ್ನಲು ಅಜೀರ್ಣವಾಯುವು, ಗುದವಾಯುವು, ಗುಲ್ಮವಾಯುವು, ವಾತಪ್ರಮೇಹವು, ವಿಷಮವಾತವು, ವಿಷೂಚಿ, ಕಾಮಾಲೆ, ಪಾಂಡುವು, ಶ್ವಾಸ, ಕಾಸ ಇವುಗಳೆಲ್ಲವೂ ಪರಿಹಾರವಾಗುವುವು

೨. ಹಿಂಗ್ವಾಷ್ಟಕ ಚೂರ್ಣ:—ಶೊಂಟಿ, ಹಿಪ್ಪಲಿ, ಮೆಣಸು, ಓಮ, ಸೈಂಧವಲವಣ, ಜೀರಿಗೆ, ಷಾಜೀರಿಗೆ, ಶುದ್ಧಿಮಾಡಿದ ಹಿಂಗು ಇವುಗಳನ್ನು ಸಮಾಂಶವಾಗಿ ಚೂರ್ಣಿಸಿ ೧ ತೊಲೆ ಅನ್ನಕ್ಕೆ ೧ ತೊಲೆ ಚೂರ್ಣವನ್ನು ತುಪ್ಪ

ದೊಡನೆ ಬೆರಸಿ ೧ ತುತ್ತು ಸೇವಿಸಲು ವಾತಗುಲ್ಮವನ್ನು ಪರಿಹಾರಮಾಡುವು ದಲ್ಲದೆ ಅಗ್ನಿದೀಪನವನ್ನೂ ಉಂಟುಮಾಡುವುದು.

೩. ಬಡಬಾನಲ ಚೂರ್ಣ:—ಸಮುದ್ರಲವಣ, ಸೌವರ್ಚಲವಣ, ಸೈಂಧವ ಲವಣ, ಯವಕ್ಷಾರ, ಸಜ್ಜುಕ್ಷಾರ, ಅಜಾವೊದ, ಅಳಲೇಕಾಯಿಸಿಪ್ಪೆ, ಹಿಪ್ಪಲಿ, ಶೊಂಟಿ, ಶುದ್ಧಿಮಾಡಿದ ಹಿಂಗು, ವಾಯುವಿಳಂಗ ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ೧ ತೊಲೆ ಚೂರ್ಣ ಊಟಮಾಡುವ ಸಮಯದಲ್ಲಿ ತುಪ್ಪ ಅನ್ನದಲ್ಲಿ ಕಲಸಿ ತಿನ್ನುವದು ಅಥವಾ ಊಟಕ್ಕೆ ಮೊದಲೇ ಚೂರ್ಣ ವನ್ನು ತುಪ್ಪದಲ್ಲಿ ಕಲಿಸಿ ತಿನ್ನಬಹುದು. ಅಯಿದು ತುತ್ತು ತಿಂದು ೧ ತೊಲೆ ಚೂರ್ಣ ತುಪ್ಪ ಅನ್ನದಲ್ಲಿ ಕಲಸಿ ಅದರಮೇಲೆ ಸ್ವಲ್ಪ ಬಿಸಿನೀರು ಕುಡಿದು ಊಟಮಾಡುವದು. ಹೀಗೆ ಬೆಳಿಗ್ಗೆಹೊತ್ತು ೭ ದಿವಸ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಕಲ ಅಜೀರ್ಣ, ಅರುಚಿ, ಹೊಟ್ಟೆಉಬ್ಬರ, ಗುಲ್ಮ, ಗಡ್ಡೆ, ಶೂಲೆ, ಹೊಟ್ಟೆನೋವು ಗುಣವಾಗುವದು.

೪. ಅಜೀರ್ಣವಾಯುವಿಗೆ:—ತ್ರಿಕಟುಕ, ಹಿಪ್ಪಲಿಮೂಲ, ಶುದ್ಧಿಮಾಡಿದ ಹಿಂಗು, ಕೊತ್ತಂಬರಿಬೀಜ, ಚವ್ಯ, ಚಿತ್ರಮೂಲ, ಅಗಿಲುಶೊಂಟಿ, ಸೈಂಧರ ಲವಣ, ಸಮುದ್ರಲವಣ, ಸೌವರ್ಚಲವಣ, ಯಾಲಕ್ಕಿ, ದಾಲಚಿನ್ನಿ, ಲವಂಗ ಪತ್ರೆ, ಯವಕ್ಷಾರ, ಸಜ್ಜುಕ್ಷಾರ, ರಾಮಗುಳ್ಳ, ಹೆಗ್ಗುಳ್ಳ, ಆನೇನೆಗ್ಗಿಲು, ಬಿಳೇಜೀರಿಗೆ, ವೋಮ, ಗಜಹಿಪ್ಪಲಿ, ವಾಯುವಿಳಂಗ ಇವು ಸಮಭಾಗ ಕುಟ್ಟಿ ಚೂರ್ಣಮಾಡಿ ಶೋಧಿಸಿ ಮೂರು ಬೆರಳಿನಲ್ಲಿ ಬಂದಷ್ಟು ಚೂರ್ಣ ಮೊದಲುಸಲ ಅನ್ನಕ್ಕೆ ಕಲಸಿ ಊಟಮಾಡುವದು. ಹೀಗೆ ಬೆಳಿಗ್ಗೆಹೊತ್ತು ೭ ದಿವಸ ತೆಗೆದು ಕೊಳ್ಳಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಅಜೀರ್ಣವಾಯು, ಪಿತ್ತಾಧಿಕ್ಯ, ಗುಲ್ಮ, ವಾಯು, ಕಾಮಾಲೆ, ಪಾಂಡು, ಶ್ವಾಸ, ಖಾಸ ಇವು ಗುಣವಾಗುವದು.

೫ ದಾವಾಗ್ನಿ ಚೂರ್ಣ:—ವೋಮ, ವಾಯುವಿಳಂಗ, ಶುದ್ಧಿಮಾಡಿದ ಹಿಂಗು, ಸೈಂಧರಲವಣ, ಬಿಡಾಲವಣ, ಕಾಚುಲವಣ, ಸೌವರ್ಚಲವಣ, ಸಮುದ್ರ ಲವಣ, ಅಳಲೇಕಾಯಿಸಿಪ್ಪೆ, ಶೊಂಟಿ, ಹಿಪ್ಪಲಿ, ಮೆಣಸು, ಚವ್ಯ, ಮೋಡಿ, ತುಂಗಮುಸ್ತೆ, ಕಟುಕರೋಹಿಣಿ, ಚಿತ್ರಮೂಲ, ಬಿಳೇಜೀರಿಗೆ, ಕರೇಜೀರಿಗೆ, ಚಂಗಲಕೋಷ್ಟ, ನೆಲಗುಳ್ಳ, ಹೆಗ್ಗುಳ್ಳ, ಶುದ್ಧಿಮಾಡಿದ ಲಾಲುತಿಗಡೆ, ಗಜ ಹಿಪ್ಪಲಿ, ಅಗುಳುಶೊಂಟಿ, ಗಂಟುಭಾರಂಗಿ, ಯವಕ್ಷಾರ, ಸಜ್ಜುಕ್ಷಾರ, ಮರ ದರಿಸಿನ ಇವು ಸಮಭಾಗತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇದರಸಮ ರಾಯಪುಡಿಸಕ್ಕರೆ ಕಲಸಿ ಕಾಲುತೊಲೆ, ಅರ್ಧತೊಲೆ ಜೇನುತುಪ್ಪದಲ್ಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಗೆಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ

ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವಾತ, ಅಜೀರ್ಣ ಗುಲ್ಮ, ಪಾಂಡು, ಕಾಮಾಲೆ, ಅರುಚಿ, ಮಂದಾಗ್ನಿ ಇವು ಗುಣವಾಗುವವು.

೬. ಬಡಬಾನಲ ಚೂರ್ಣ:—ಶುದ್ಧಿಮಾಡಿದ ಹಿಂಗು ೧ ತೊಲೆ, ಚವ್ಯ ೨ ತೊಲೆ, ವಾಯುವಿಳಂಗ ೩ ತೊಲೆ, ಸೈಂಧರಲವಣ ೪ ತೊಲೆ, ಸೌವರ್ಚಲವಣ ೫ ತೊಲೆ, ಶೊಂಟಿ ೬ ತೊಲೆ, ಮೆಣಸು ೭ ತೊಲೆ, ಹಿಪ್ಪಲಿ ೮ ತೊಲೆ, ಚಂಗಲ ಕೋಷ್ಟ ೯ ತೊಲೆ, ಅಳಲೇಕಾಯಿಸಿಪ್ಪೆ ೧೦ ತೊಲೆ, ಚಿತ್ರಮೂಲ ೧೧ ತೊಲೆ, ಅಜಾವೊದ ೧೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇದರ ಸಮ ಸಕ್ಕರೆ ಬೆರಸಿ, ಹೊತ್ತಿಗೆ ಕಾಲುತೊಲೆ ಬಿಸಿನೀರಿನಲ್ಲ ಕೊಡುವದು ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ ಇದರಿಂದ ವಾಯು, ಅರುಚಿ, ಪಂಚಗುಲ್ಮ, ಪಂಚಕಾಸ, ಮಂದಾಗ್ನಿ, ಅಜೀರ್ಣ ಇವು ಗುಣವಾಗುವದು.

೭. ದಾವಾನಲ ಚೂರ್ಣ:—ಶೊಂಟಿ, ಹಿಪ್ಪಲಿ, ಮೆಣಸು, ಅಳಲೇಕಾಯಿ ಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ವೋಮ, ವಾಯುವಿಳಂಗ, ಚವ್ಯ, ಚಿತ್ರಮೂಲ, ಮೋಡಿ, ಬಿಳೀಜೀರಿಗೆ, ಕೊತ್ತುಂಬರಿಬೀಜ, ಗಂಟುಭಾರಂಗಿ, ಸಣ್ಣರಾಸ್ಮೆ, ಕಹಿಪಡವಲ, ಕೋಲಮುರಕನಚಕ್ಕೆ, ಮಂಗರವಳ್ಳಿ, ಸೈಂಧರ ಲವಣ ಇವು ಜಿನಸಿಗೆ ೧-೧ ತೊಲೆ, ಶುದ್ಧಿಮಾಡಿದ ಲಾಲುತಿಗಡೆ ೫ ತೊಲೆ, ಇವು ಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ಕಾಲುತೊಲೆ, ಅರ್ಧತೊಲೆ ಬಿಸಿನೀರಿನಲ್ಲಿ ತೆಗೆದುಕೊಳ್ಳುವದು. ಈರೀತಿ ಬೆಳಿಗ್ಗೆಹೊತ್ತು ೭ ದಿವಸ ಕೊಡ ಬೇಕು ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವಾಯು, ಅಗ್ನಿಮಾಂದ್ಯ, ಅರೋಚಕ, ಹೊಟ್ಟೆ ಉಬ್ಬರ, ಮಲಬಂಧ, ಕೆಮ್ಮು, ಉಬ್ಬಸ, ವಾತಪೈತ್ಯ, ಗುಲ್ಮ, ಶ್ಲೇಷ್ಮಜ್ವರ ಗುಣವಾಗುವದು.

೮. ಬಡಬಾಗ್ನಿ ಚೂರ್ಣ:—ಅಗಿಲುಶೊಂಟಿ, ಆಡುಸೋಗೆ, ಅಮೃತಬಳ್ಳಿ, ಶುದ್ಧಿಮಾಡಿದ ಲಾಲುತಿಗಡೆ, ಚಿತ್ರಮೂಲ, ನೆಲಗುಳ್ಳ, ಮೆಣಸು, ಚಿಟ್ಟಾಮುಟ್ಟಿ ಬೇರು, ಹಿಪ್ಪಲಿ, ಮೋಡಿ, ಗಂಟುಭಾರಂಗಿ, ಬಿಳೀಜೀರಿಗೆ ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಸಮಸಕ್ಕರೆ ಬೆರಸಿ ಹೊತ್ತಿಗೆ ಕಾಲು ತೊಲೆ, ಅರ್ಧತೊಲೆ ಪ್ರಮಾಣ ಬಿಸಿನೀರಿನಲ್ಲಿ ಕೊಡುವದು. ಹೀಗೆ ಬೆಳಿಗ್ಗೆ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವಾತಪಿತ್ತ, ಪಾಂಡು, ಪಂಚಗುಲ್ಮ, ಹೊಟ್ಟೆವುಬ್ಬರ ಇವು ಗುಣ ವಾಗುವದು.

೯. ಪಂಚಲವಣ, ತ್ರಿಫಲ, ತ್ರಿಕಟುಕ, ಸಜ್ಜಕ್ಷಾರ, ವೋಮ, ಯವಕ್ಷಾರ, ಬಿಳೀಜೀರಿಗೆ, ಸೂರ್ತಿಬೆಳಗಾರ ಅರಳುಮಾಡಿದ್ದು, ಅಗಿಲುಶೊಂಟಿ,

ಬಿಳೀಕೊಮ್ಮೇಬೇರು, ಚಿತ್ರಮೂಲ, ಭದ್ರಮುಸ್ತೆ, ಬಾಗೆಯಬೇರು, ಚವುಕಾರ, ಸಬ್ಬಕ್ಷಿಬೀಜ, ವಾಯುವಿಳಂಗ, ಅತಿಬಜೆ, ಗಜಹಿಪ್ಪಲಿ, ಹಿಪ್ಪಲಿಮೂಲ, ಅರಿಸಿನ, ದಂತಿಮೂಲ, ಲವಂಗಪತ್ರಿ, ದಾಲಚಿನ್ನಿ, ಗಜ್ಜುಗದಪಪ್ಪು, ಶುದ್ಧಿಮಾಡಿದ ಮುತ್ತುಕಪಬೀಜ, ಶುದ್ಧಿಮಾಡಿದ ಲಾಲುತಿಗಡೆ, ಪರ್ಪಾಷ್ಟಕ ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಇದರ ಸಮ ಅಳಲೇಕಾಯಿಸಿಪ್ಪೆ ತಂದು ಕುಟ್ಟಿ ಚೂರ್ಣಮಾಡಿ ಎಲ್ಲವನ್ನು ಬೆರಸಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲುತೊಲೆ ಹಸುವಿನ ತುಪ್ಪದಲ್ಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಂಚಗುಲ್ಮ, ಕ್ಷಯ, ಪಾಂಡು, ಪಾರ್ಶ್ವಶೂಲೆ, ಹೊಟ್ಟೆಶೂಲೆ, ಕಾಮಾಲೆ, ಆಮ್ಲಪಿತ್ತ, ಮಂದಾಗ್ನಿ, ಅಜೀರ್ಣ, ಹೊಟ್ಟೆ ಉಬ್ಬರ, ಜಂತಿನ ಬಾಧೆ, ಹೊಟ್ಟೆಕ್ರಿಮಿ ಇವು ಗುಣವಾಗುವದು.

೧೦ ದಾವಾಗ್ನಿ ಚೂರ್ಣ:—ವೋಮ, ವಾಯುವಿಳಂಗ, ಶುದ್ಧಿಮಾಡಿದ ಹಿಂಗು, ಸೈಂಧರಲವಣ, ಬಿಡಾಲವಣ, ಕಾಚಲವಣ, ಸೌವರ್ಚಲವಣ, ಸಮುದ್ರಲವಣ, ಅಳಲೇಕಾಯಿಸಿಪ್ಪೆ, ಶೊಂಟಿ, ಹಿಪ್ಪಲಿ, ಮೆಣಸು, ಚವ್ಯ, ವೋಡಿ, ತುಂಗಮುಸ್ತೆ, ಕಟುಕರೋಹಿಣಿ, ಚಿತ್ರಮೂಲ, ಬಿಳೀಜೀರಿಗೆ, ಕರೇಜೀರಿಗೆ, ಚಂಗಲಕೋಷ್ಟ, ನೆಲಗುಳ್ಳ, ಹೆಗ್ಗುಳ್ಳ, ಶುದ್ಧಿಮಾಡಿದ ಲಾಲುತಿಗಡೆ, ಗಜಹಿಪ್ಪಲಿ, ಅಗಳುಶೊಂಟಿ, ಈಶ್ವರಿಬೇರು, ಗಂಟುಭಾರಂಗಿ, ಯವಕ್ಷಾರ, ಸಜ್ಜಕ್ಷಾರ, ಬಜೆ, ಅತಿಬಜೆ, ಅರಸಿನ ಇವು ಜಿನಸಿಗೆ ೧-೧ ತೊಲೆ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇದರ ಸಮ ರಾಯಿಪುಡಿ ಸಕ್ಕರೆ ಹಾಕಿ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲುತೊಲೆ, ಅರ್ಧತೊಲೆ ಜೇನುತುಪ್ಪದಲ್ಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವಾತ, ಗುಲ್ಮ ಪಾಂಡು, ಕಾಮಾಲೆ, ಅರುಚಿ, ಮಂದಾಗ್ನಿ, ಹೊಟ್ಟೆನೋವು, ಉಬ್ಬರ, ತೇಗು, ಯಕೃತ್‌ರೋಗಗಳು ಗುಣವಾಗುತ್ತೆ.

೧೧. ನುಸ್ಕಾ ಹುಬ್ಬೂಬೆ ಹಾಜೀಮಾ ಕಾಮ್‌ಕ ಖುವತೆ ಬಹ:—ನಮ್ಮಕ್ಕೆ ಸಿಯಾ ೬ ಮಾಷ, ನಮ್ಮಕ್ಕೆ ಲಾಹೋರಿ ೬ ಮಾಷ, ನಮ್ಮಕ್ಕೆ ಹಿಂದಿ ೬ ಮಾಷ, ನಮ್ಮಕ್ಕೆ ತಾಂ (ತಿನ್ನುವ ಉಪ್ಪು) ೬ ಮಾಷ, ಶುದ್ಧಿಮಾಡಿದ ನವಾಸಾಗರ ೬ ಮಾಷ, ಸೈಂದಾನಮ್ಮಕ್ ೬ ಮಾಷ, ಸ್ವಾಗಾಬಿರಿಯಾ (ಬೆಳಗಾರ) ೬ ಮಾಷ, ಫಿಲ್‌ಫಿಲೆಸಿಯಾ ೬ ಮಾಷ, ಫಿಲ್‌ಫಿಲೆಸುಫೇದ್ ೬ ಮಾಷ, ಬಾಲೇಫಿಲ್‌ಫಿಲ್ ೬ ಮಾಷ, ಪುದೀನಾಖುಷ್ಕ್ ೬ ಮಾಷ, ಜಂಜಬೀರ್‌ಖುಷ್ಕ್ ೧೨ ಮಾಷ, ಸಿರ್‌ಕಾ

ಪಾವುಬಾಟಲ್, ಜುಮ್ಲಾ ೧೨ ದಿನಸುಗಳು ಬೆಳಗಾರವನ್ನು ಅರಳುಮಾಡಿ ಎಲ್ಲವನ್ನೂ ಚೂರ್ಣಿಸಿ ವಸ್ತ್ರಗಾಳಿತ ಮಾಡಬೇಕು. ನಂತರ ಒಂದು ಚೈನಾಬಟ್ಲಿನಲ್ಲಿ ಹಾಕಿ ಅದರಮೇಲೆ ಸಿರ್ಕಾ (ಕಾಡಿ) ಹಾಕಿ ಬೆರಳಿನಿಂದ ಕದಡಬೇಕು. ಎರಡು ದಿನಗಳು ನೆರಳಿನಲ್ಲಿಟ್ಟದ್ದು ಕಡಲೇಪ್ರಮಾಣ ಮಾತ್ರೆಗಳು ಮಾಡಬೇಕು. ಬೆಳಿಗ್ಗೆ ಸಾಯಂಕಾಲ ೧-೧ ಮಾತ್ರೆಯನ್ನು ಬಾಯಲ್ಲಿ ಹಾಕಿಕೊಂಡು ಬಿಸಿನೀರು ಕುಡಿಯಬೇಕು. ಹೀಗೆ ೭ ದಿವಸ ತೆಗೆದುಕೊಳ್ಳಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರ ಗುಣ:—ಅಜೀರ್ಣ, ಶೂಲೆರೋಗ ಮತ್ತು ಮೂತ್ರಪಿಂಡೆ ಅಥವಾ ಗುರ್ದಾಗಳಿಗೆ ಉಪಯೋಗವಾಗುತ್ತೆ.

೧೨. ಹುಬ್ಬೆಜರ್‌ನಬ್:—ಜಂಜಬೀಲ್ ೨ ಪಲಾಲ್, ಕರೇಮೆಣಸು ೧ ಪಲಾಲ್, ಬಾಲಮೆಣಸು ೧ ಪಲಾಲ್, ಇಲಾಚಿದಾನಾ ೧ ಪಲಾಲ್, ಜರ್‌ನಬ್ ೧ ಪಲಾಲ್, ಕಬಾಬಾ ೧ ಪಲಾಲ್, ತೇಜ್‌ಪಾತ್ ಅರ್ಧ ಪಲಾಲ್, ದಾರ್‌ಚಿನ್ನಿ ನೀಂಪಲಾಲ್, ಬಾಲಾಯಸುಫೇದ್ ಅರ್ಧ ಫಲಾಲ್, ಶುದ್ಧಿಮಾಡಿದ ಚೋಪ್ ಚಿನ್ನಿ ಅರ್ಧ ಫಲಾಲ್, ಜರ್‌ನಬಾತ್ ನೀಂಪಲಾಲ್, ಜೋಜೆಬಿಯಾ ಸವಾ ದೋದಿರಂ, ಕರ್ಣಫಲ್ ೨। ತೊಲೆ, ಜೀರಾಸುಫೇದ್ ನೀಂಪಲಾಲ್, ಅಮಿಲಾ ಮೊಖೆಷರ್ ನೀಂಪಲಾಲ್, ಬಿಳೀಸಕ್ಕರೆ ಸಮತೂಕ, ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಸಕ್ಕರೆ ಪಾಕ ತೆಗದುಕೊಂಡು ಲೇಹಮಾಡಿಕೊಳ್ಳುವದು. ತಿರಿಗಿ ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ಇಟ್ಟುಕೊಳ್ಳುವದು. ಹೊತ್ತಿಗೆ ೧-೨-೩ ದಿರಂ ಕೊಡುವದು. ದೊಡ್ಡವರಿಗೆ ಮಕ್ಕಳಿಗೆ ಉಪಯೋಗಿಸುವದು. ಇದರಿಂದ ನಚ್ಚುಜ್ವರ, ಪಿತ್ತ, ವಾಂತಿಬೇದಿ, ದೇಹಕ್ಷೀಣಿಸಿ ಇರುವದು ಗುಣವಾಗಿ ಜೀರ್ಣಶಕ್ತಿಯನ್ನುಂಟುಮಾಡುವದು ಮಕ್ಕಳಿಗೆ ಬೇದಿ ಆಗುವದು ನಿಲ್ಲುವದು. ಬೆಳಿಗ್ಯೆ ಸಾಯಂಕಾಲ ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ.

೧೩. ವಜ್ರಕ್ಷಾರ ಚೂರ್ಣ:—ಸಮುದ್ರಲವಣ, ಸೈಂಧರಲವಣ, ಕಾಚಲವಣ, ಸೌವರ್ಚಲವಣ, ಯವಕ್ಷಾರ, ಸೂರ್ತಿಬೆಳಗಾರ ಅರಳುಮಾಡಿದ್ದು, ಸಜ್ಜಕ್ಷಾರ ಇವು ಸಮಭಾಗ ತಂದು ಖಲ್ವದಲ್ಲಿ ಹಾಕಿ ಯಕ್ಕದಹಾಲಿನಲ್ಲಿ ೧ ದಿನ ಅರಿಯುವದು. ಎರಡನೆಯ ದಿನ ಕೋಲುಕಳ್ಳಿ ಹಾಲಿನಲ್ಲಿ ಅರಿಯುವದು. ಒಂದು ಮಡಿಕೆಯಲ್ಲಿ ಯಕ್ಕದಯಲೆ ೧ ಪದರ ಹರಡಿ, ಅದರಮೇಲೆ ಮೇಲ್ಕಂಡ ಚೂರ್ಣ ಒಂದು ಪದರ ಹರಡಿ, ಅದರಮೇಲೆ ಯಕ್ಕದಯಲೆ ಹರಡಿ, ಅದರ ಮೇಲೆ ಚೂರ್ಣ ಹರಡಿ, ಅದರಮೇಲೆ ಯಕ್ಕದ ಯಲೆಯನ್ನು ಹರಡಿ ಮುಚ್ಚಳ ಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ೧ ಮೊಳಪುಟ ಹಾಕಿ ತೆಗೆದು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು ಇದಕ್ಕೆ ಸಮಭಾಗ ಶೊಂಟಿ, ಹಿಪ್ಪಲಿ, ಮೆಣಸು, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಬಿಳೇಜೀರಿಗೆ,

ಅರಸಿನ, ಚಿತ್ರಮೂಲ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಎಲ್ಲವನ್ನು ಶೇರಿಸಿ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲು ತೊಲೆ ಚೂರ್ಣ ಬಿಸಿನೀರಿನಲ್ಲಿ ಕೊಡುವದು ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಲ್ಮ, ಶೂಲೆ, ಶೋಭೆ, ಉದರರೋಗ, ಅಗ್ನಿಮಾಂದ್ಯ ಅಜೀರ್ಣ ಸಹ ಗುಣವಾಗುವದು.

೧೪. ನಮ್ಮಕೆ ಸುಲೇಮಾನಿ:—ನಮ್ಮಕೇಸಂಗ್, ನಮ್ಮಕೇಸಾಂಬರ್, ನೌಸಾಗರ ಇವು ದಿನಸು ೧ಕ್ಕೆ ೭ ತೊಲೆ, ಈ ಪ್ರತಿಯೊಂದು ಉಪ್ಪು ಪ್ರತ್ಯೇಕ ಪುಡಿಮಾಡಿ ಅಳತೆ ಅರ್ಧ ಸೇರು ನೀರಿನಲ್ಲಿ ಹಾಕಿ ಒಲೆಯಮೇಲಿಟ್ಟು ಚನ್ನಾಗಿ ಕಾಯಿಸಿ ಶೋಧಿಸಿ ಒಂದು ಮಡಕೆಯಲ್ಲಿ ಹಾಕಿ ಪುನಹ ಕಾಯಿಸಿದರೆ ಘಟ್ಟಿಯಾದ ಉಪ್ಪು ಆಗುವದು. ತುಖ್ಮೆಕರ್ಪುಸ್, ನಾಃಖಾ (ಓಮ), ಫಿಲ್‌ಫಿಲೆಸಿಯಾ (ಮೆಣಸು), ಜಂಜಬೀಲ್ (ಶುಂಠಿ), ಖರಃಫಲ್ (ಲವಂಗ), ಜೀರೆಸಿಯಾ (ಕರೇಜೀರಿಗೆ), ಜೋಸ್‌ಬುವಾ (ಜಾಕಾಯಿ), ಬಿಸ್‌ಬಾಸಾ (ಜಾಪತ್ರೆ), ಇವು ಪ್ರತಿಯೊಂದು ೧ ತೊಲೆ, ಅರ್ದ್ಧಂಬರ್ದ್ಧವಾಗಿ ಕುಟ್ಟಿ France Vinigar (ಫ್ರಾನ್ಸ್ ವಿನಿಗರ್) ನಲ್ಲಿ ಹಾಕಿ ಒಂದು ರಾತ್ರಿ ನೆನೆಯಿಡಬೇಕು. ನಂತರ ಹಳೇ ಮಡಕೆಯಲ್ಲಿ ಹಾಕಿ ಚನ್ನಾಗಿ ನೀರು ಹಿಂಗುವಂತೆ ಕಾಯಿಸಬೇಕು ನಂತರ ಮೇಲ್ಕಂಡ ಉಪ್ಪು ಮತ್ತು ಈ ಸಾಮಾನುಗಳು ಸಹಾ ಒಂದು ಬೋಕಿನಲ್ಲಿ ಹಾಕಿ ಮೇಲೆ ಬಟ್ಟೆ ಹೊದಿಸಿ ಚನ್ನಾಗಿ ಒಣಗಿಸಬೇಕು ನಂತರ ಚನ್ನಾಗಿ ಕುಟ್ಟಿ ವಸ್ತ್ರಗಾಳಿತ ಮಾಡಿ ಗಾಜಿನ ಕಾರ್ಕು ಇರುವ ಸೀಸಾಯಿನಲ್ಲಿ ಹಾಕಿ ೨೧ ದಿನಗಳು ಭೂಮಿಯಲ್ಲಿ ಹೂತಿಟ್ಟು ನಂತರ ಉಪಯೋಗಿಸಬೇಕು. ದೊಡ್ಡವರಿಗೆ ೧ ಕಡಲೇ ಪ್ರಮಾಣ, ಚಿಕ್ಕವರಿಗೆ ಅರ್ಧದಿಂದ ೧ ಹೆಸರುಕಾಳು ಪ್ರಮಾಣ ಜೇನುತುಪ್ಪದಲ್ಲಿ ಕೊಡುವದು. ಇದರಿಂದ ಹೊಟ್ಟೇನೋವು, ಅಜೀರ್ಣ, ಪಿತ್ತಸಮ್ಮಂಧವಾದ ರೋಗಗಳು ಗುಣವಾಗುವವು.

೧೫. ಗುಲಾಬಿಹುವ್ವಿನ ಮಾತ್ರೆ:—ಸೋಪುಬೀಜ ೯ ಮಾಷ, ಒಣಗಿದ ಪುದೀನ ೯ ಮಾಷ, ಕಪೂರ್‌ಕಚರಿ ೩ ಮಾಷ, ಚಿಕ್ಕಯಾಲಕ್ಕಿ ೩ ಮಾಷ, ದೊಡ್ಡಯಾಲಕ್ಕಿ ೬ ಮಾಷ, ತಾಳೀಸಪತ್ರೆ ೩ ಮಾಷ, ಜಟಾಮಾಂಸಿ ೩ ಮಾಷ, ಷಾತುರ ೩ ಮಾಷ, ಹಲಿಲೆಜಂಗಿ ೧ ತೊಲೆ, ರುಮ್ಮಿಮುಸ್ತಕಿ ೯ ಮಾಷ, ಸುನಾಮುಖಿ ೧॥ ತೊಲೆ, ಆಮಿಲಾಖುಷ್ಕ್ ೬ ಮಾಷ, ಪೋಸ್ತೆಬಲೀಲಾ ೯ ಮಾಷ, ಅಜವಾಃ ೬ ಮಾಷ, ಸಿಹಿದಾಳಿಂಬರೆ ರಸ ೧ ತೊಲೆ, ಜರೀಷಕ್ ೧ ತೊಲೆ, ಸಮುಕ್ದಾನ ೯ ಮಾಷ, ಗುಲಾಬಿಮೊಗ್ಗು ೭ ಮಾಷ, ವಾಯುವಿಳಂಗ ೬ ಮಾಷ, ಬೀಕೆ ಶೀತರಜ್‌ಹಿಂದಿ ೩ ಮಾಷ, ಚಿತ್ರಮೂಲದಯಲೆ ೬ ಮಾಷ, ಚವುಳು ಉಪ್ಪು

೬ ಮಾಷ, ಕರ್ಮಾನಿಜೀರ ೩ ಮಾಷ, ಅಜಮೂರ್ಶ ೩ ಮಾಷ, ಕರೇಮೆಣಸು ೩ ಮಾಷ, ಬಾಲಮೆಣಸು ೩ ಮಾಷ, ಶುದ್ಧಿಮಾಡಿದ ಯಣ್ಣೆ ಬೆಳಗಾರ ಅರಳು ಮಾಡಿದ್ದು ೪ ಮಾಷ, ದಾಲ್ಚಿನ್ನಿ ೩ ಮಾಷ, ಕರೇ ಉಪ್ಪು ೯ ಮಾಷ, ಲಾಹುರಿ ಉಪ್ಪು ೬ ಮಾಷ, ಸಾಂಬ್ರಿ ಉಪ್ಪು ೬ ಮಾಷ, ಬಿಳೀಜೀರಿಗೆ ೩ ಮಾಷ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಖಲ್ವದಲ್ಲಿ ಹಾಕಿ ಮೇಲ್ಕಂಡ ಸಿಹಿದಾಳಿಂಬರೆ ರಸ ೧ ತೊಲೆ ಹಾಕಿ ಪನ್ನೀರು ಹಾಕಿ ಚನ್ನಾಗಿ ಅರದು ಕಾಲು ತೊಲೆ ಪ್ರಮಾಣ ಮಾತ್ರೆ ಮಾಡುವದು. ರಾತ್ರಿ ಮಲಗಿಕೊಳ್ಳುವಾಗ ೧ ಮಾತ್ರೆ ಬಾಯಿಯಲ್ಲಿ ಹಾಕಿಕೊಂಡು ಅರಪಾವು ಹಸುವಿನಹಾಲು ಕುಡಿಯಬೇಕು. ಹೀಗೆ ರಾತ್ರಿಹೊತ್ತು ೬-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ಹುಳಿ ಶಲದಿ ವರ್ಜಿತ. ಇದರಿಂದ ಮಲಬದ್ಧ, ವಾಯು, ಪಿತ್ತ, ಕೆಮ್ಮಲು ಗುಣವಾಗಿ ಜೀರ್ಣಶಕ್ತಿಯನ್ನುಂಟುಮಾಡುವದು. ಖಾಸಶ್ವಾಸ, ವಾಯುನಿವಾರಣೆ ಆಗುವದು.

೧೬. ಅಗ್ನಿಮುಖ ಚೂರ್ಣ:—ಶೊಂಟಿ, ಹಿಪ್ಪಲಿ, ಮೆಣಸು, ಬಿಳೀಜೀರಿಗೆ, ಚಿತ್ರಮೂಲ, ವೋಮ, ವಾಯುವಿಳಂಗ, ಬಜೆ, ಮೋಡಿ, ಗಂಟುಭಾರಂಗಿ, ಗಜಹಿಪ್ಪಲಿ, ಜಾಕಾಯಿ, ಚಂಗಲಕೋಷ್ಟ, ಸೌವರ್ಚಲವಣ, ಯವಕ್ಷಾರ, ಶುದ್ಧಿಮಾಡಿದ ಹಿಂಗು ಇವು ಸಮಭಾಗ, ಇದಕ್ಕೆ ಸಮಭಾಗ ಅಳಲೇಕಾಯಿಸಿಪ್ಪೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಹೊತ್ತಿಗೆ ಕಾಲುತೊಲೆ ಚೂರ್ಣ ಜೇನುತುಪ್ಪದಲ್ಲಿಯಾದರು, ಶೊಂಟಿಕಷಾಯ, ಬಿಸಿನೀರು, ಹಸುವಿನತುಪ್ಪ ಇವುಗಳ ಅನುಪಾನದಲ್ಲಿ ಕೊಡುವದು ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೬-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಅಜೀರ್ಣ, ೮೦ ವಾತ, ಪಾಂಡು, ಶೋಭೆ, ಕಾಮಾಲೆ, ಶ್ವಾಸಖಾಸ ಗುಣವಾಗುವದು.

೧೭. ಮಂದಾಗ್ನಿಗೆ ಚಿತ್ರಕಾದಿ ಚೂರ್ಣ:—ಚಿತ್ರಮೂಲ, ಶೊಂಟಿ, ಶುದ್ಧಿಮಾಡಿದ ಹಿಂಗು, ಹಿಪ್ಪಲಿ, ಮೋಡಿ, ಚವ್ಯ, ಅಜಾವೊದ, ಮೆಣಸು ಇವು ಜಿನಸಿಗೆ ೨ ತೊಲೆ, ಸಜ್ಜುಕ್ಷಾರ, ಯವಕ್ಷಾರ, ಸೈಂಧರಲವಣ, ಸೌವರ್ಚಲವಣ, ಬಿಡಾಲವಣ, ಸಮುದ್ರಲವಣ, ಸಾಂಬರಲವಣ ಇವು ಜಿನಸಿಗೆ ೧ ತೊಲೆ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಮಾದವಾಳದ ಹಣ್ಣಿನ ರಸದಲ್ಲಿ ಅಥವಾ ಹುಳಿದಾಳಿಂಬರೆ ಹಣ್ಣಿನ ರಸದಲ್ಲ ಭಾವನೆಮಾಡಿ ಒಣಗಿಸಿ ಶೋಧಿಸಿ ಇಟ್ಟುಕೊಳ್ಳುವದು ಹೊತ್ತಿಗೆ ಕಾಲುತೊಲೆ ಬಿಸಿನೀರಿನಲ್ಲಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು ಇದಕ್ಕೆ ಪತ್ಯ ತೊಗರೀಬೇಳೆ ಸೀಸಾರು ಅನ್ನ. ಇದರಿಂದ ಗುಲ್ಮ, ಸಂಗ್ರಹಣಿ, ಆಮವಾತ,

ಕಫರೋಗ ಗುಣವಾಗಿ ಅಗ್ನಿದೀಪನವನ್ನುಂಟುಮಾಡಿ ಬಾಯಿಗೆ ರುಚಿ ಕೊಡುವದು.

೧೮. ಮಂದಾಗ್ನಿಗೆ ಬಡಬಾನಲ ಚೂರ್ಣ:—ಸೈಂಧರಲವಣ ೧ ತೊಲೆ, ಮೋಡಿ ೨ ತೊಲೆ, ಹಿಪ್ಪ ೩ ತೊಲೆ, ಚವ್ಯ ೪ ತೊಲೆ, ಚಿತ್ರಮೂಲ ೫ ತೊಲೆ, ಶೊಂಟಿ ೬ ತೊಲೆ, ಆಳಲೇಕಾಯಿಸಿಪ್ಪೆ ೭ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿಕೊಳ್ಳುವದು. ಹೊತ್ತಿಗೆ ಕಾಲುತೊಲೆ ಬಿಸಿನೀರಿನಲ್ಲಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇಚ್ಛಾಪತ್ಯ ಶಲದಿಪದಾರ್ಥ ವರ್ಜಿತ. ಇದರಿಂದ ಅಗ್ನಿದೀಪನವನ್ನುಂಟು ಮಾಡುವದು.

೧೯. ತಾಳೀಸಾದಿ ಮಾತ್ರೆ:—ತಾಳೀಸಪತ್ರೆ ೧ ತೊಲೆ, ಮೆಣಸು ೨ ತೊಲೆ, ಶೊಂಟಿ ೩ ತೊಲೆ, ಹಿಪ್ಪಲಿ ೪ ತೊಲೆ, ತವಕ್ಷೀರ ೫ ತೊಲೆ, ಯಾಲಕ್ಕಿ ‖ ತೊಲೆ, ದಾಲಚಿನ್ನಿ ‖ ತೊಲೆ, ಸಣ್ಣನೆಗ್ಗಿಲು ೧ ತೊಲೆ, ಅಮೃತಬಳ್ಳಿ ೧ ತೊಲೆ, ಶ್ರೀಗಂಧದಚಕ್ಕೆ ೧ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿಹಾಕಿ ಹಸೇಶೊಂಟಿ ರಸದಲ್ಲಿ ಅರದು ಗುರುಗಂಜಿಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಜೇನುತುಪ್ಪದಲ್ಲಿ ಕಲಸಿಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭-೧೪ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವಾತ, ಶ್ಲೇಷ್ಮ ಚರ್ದಿ, ಗ್ರಹಣಿ, ಪಾಂಡು, ಜ್ವರ, ಖಾಸಶ್ವಾಸ, ಮಂದಾಗ್ನಿ ಗುಣವಾಗುವದು.

೨೦. ಏಲಾದಿಚೂರ್ಣ:—ಯಾಲಕ್ಕಿ ೧ ತೊಲೆ, ದಾಲಚಿನ್ನಿ ೨ ತೊಲೆ, ಲವಂಗಪತ್ರೆ ೩ ತೊಲೆ, ನಾಗಕೇಸರಿ ೪ ತೊಲೆ, ಮೆಣಸು ೫ ತೊಲೆ, ಹಿಪ್ಪಲಿ ೬ ತೊಲೆ, ಶೊಂಟಿ ೭ ತೊಲೆ (ಹಿಪ್ಪಲಿ, ಶೊಂಟಿ ಇವುಗಳನ್ನು ಸುಮಾರಾಗಿ ಹುರಿದುಹಾಕುವದು.) ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು ಸಕ್ಕರೆ ೨೮ ತೊಲೆ ಹಾಕಿ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲು ತೊಲೆ, ‖ ತೊಲೆ ಜೇನುತುಪ್ಪದಲ್ಲಿ ಕೊಡುವದು. ಈರೀತಿ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ದೀಪನ, ಪಾಚನ, ಕಫ, ಕಾಸಶ್ವಾಸ, ರಕ್ತಪಿತ್ತ, ಗಳರೋಗ ಇವು ಗುಣವಾಗುವದು.

೨೧. ಭುಕ್ತಾಂಜರಿಮಾತ್ರೆ:—ಶೊಂಟಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಮೋಡಿ ೧ ತೊಲೆ, ಚವ್ಯ ೧ ತೊಲೆ, ಚಿತ್ರಮೂಲ ೧ ತೊಲೆ, ಶುದ್ಧಿಮಾಡಿದ ಹಿಂಗು ಕಾಲುತೊಲೆ, ಸೈಂಧರಲವಣ ೧ ತೊಲೆ, ಬಿಳೇಜೀರಿಗೆ ೧ ತೊಲೆ, ಯಾಲಕ್ಕಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ

ಕೊಳ್ಳುವದು. ಇವುಗಳನ್ನು ಖಲ್ವದಲ್ಲಿ ಹಾಕಿ ಹೇರಳೇಹಣ್ಣಿನ ರಸದಲ್ಲಿ ಅರದು ಕಡಲೇಕಾಳುಗಾತ್ರ ಮಾತ್ರೆಮಾಡುವದು. ಹೊತ್ತಿಗೆ ೧ ಮಾತ್ರೆ ಜೇನುತುಪ್ಪದಲ್ಲಿ ಕಲಸಿಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು ಇಚ್ಛಾಪಥ್ಯ ಶಲದಿಪದಾರ್ಥ ವರ್ಜಿತ. ಇದರಿಂದ ಅಜೀರ್ಣ, ಅಗ್ನಿಮಾಂದ್ಯ, ಹೊಟ್ಟೆವುಬ್ಬರ, ಉದರರೋಗ ಇವು ಗುಣವಾಗಿ ಹಸಿವನ್ನುಂಟು ಮಾಡುವದು.

೨೨ ಅಜೀರ್ಣಕ್ಕೆ ಹಪುಷಾದಿಚೂರ್ಣ:—ಬೋಡತರ, ಅಳಲೇಕಾಯಿ ಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಹೊಂಗೇಬೇರಿನ ತಿಗಡು, ಹಿಪ್ಪಲಿ, ಶುದ್ಧಿಮಾಡಿದ ಹೇಮಕ್ಷೀರಿ ಅಂದರೆ ದತ್ತೂರಿಬೇರು, ಶುದ್ಧಿಮಾಡಿದ ಲಾಲ ತಿಗಡು, ನೀರುಬೊಮ್ಮೆಸೊಪ್ಪು ವಣಗಿದ್ದು, ಕಟುಕರೋಹಿಣಿ, ಬಜೆ, ನೀಲಿ ಸೊಪ್ಪು ವಣಗಿದ್ದು, ಸೈಂಧರಲವಣ, ಸೌವರ್ಚಲವಣ ಇವು ಸಮಭಾಗತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು ಹೊತ್ತಿಗೆ ಕಾಲುತೊಲೆ ಚೂರ್ಣ ಬಿಸಿನೀರಿನಲ್ಲಿ ಕೊಡುವದು. ಹೀಗೆ ಬೆಳಿಗ್ಗೆಹೊತ್ತು ೭ ದಿವಸ ಕೊಡಬೇಕು. ಇಚ್ಛಾಪಥ್ಯ ಚಲದಿಪದಾರ್ಥ ವರ್ಜಿತ. ಇದರಿಂದ ಅರ್ಜೀರ್ಣ, ಪ್ಲೀಹ, ಗುಲ್ಮ, ಹೊಟ್ಟೆವುಬ್ಬರ, ಅಗ್ನಿಮಾಂದ್ಯ, ಕಾಮಾಲೆ, ಪಾಂಡು ಇವುಗಳು ಗುಣವಾಗುವವು.

---

# ಇಪ್ಪತ್ತನೆಯ ಅಧ್ಯಾಯ.

## ಕ್ರಿಮಿರೋಗ – ಔಷಧಗಳು.

### ಕ್ರಿಮಿರೋಗ ಲಕ್ಷಣ.

ಜ್ವರವು, ಮುಖವಿವರ್ಣವು, ಶೂಲೆ, ಹೃದ್ರೋಗವು, ವಾಂತಿ, ಭ್ರಮೆ, ಅನ್ನದ್ವೇಷ, ಅತಿಸಾರ, ಹೊಟ್ಟೆನೋವು, ಮುಂದಬೇದಿ ಇವುಗಳು ಕೂಡಿದ್ದರೆ ಜಂತುರೋಗವೆಂಬದಾಗಿ ತಿಳಿಯಬೇಕು.

ಕ್ರಿಮಿಗಳಿದ್ದರೆ ಕಫದಿಂದ ಬಾಯಲ್ಲಿ ನೀರುಸುರಿಯುವಿಕೆ, ಆಹಾರವು ಜೀರ್ಣವಾಗದಿರುವಿಕೆ ಇವುಗಳನ್ನುಂಟುಮಾಡುವುದಲ್ಲದೆ ಅಂತಹ ರೋಗಿಗೆ ಅರುಚಿ. ಮೂರ್ಛೆ, ಜ್ವರ, ವಾಂತಿ, ಹೊಟ್ಟೆಯುಬ್ಬರ, ಶರೀರವು ಸಣ್ಣನಾಗುವಿಕೆ ಮೊದಲಾದ ಲಕ್ಷಣಗಳಿರುತ್ತವೆ.

ರಕ್ತಜ ಕ್ರಿಮಿಗಳಿಂದ ಕುಷ್ಠ ಅಂದರೆ ಚರ್ಮರೋಗಗಳು ಉತ್ಪತ್ತಿಯಾಗುವುದು.

ಪುರೀಷಜ ಕ್ರಿಮಿಗಳಿಂದ ಮಲವು ಉಂಡೆಗಳಾಗಿ ಬೀಳುವಿಕೆ, ಶೂಲೆ, ಮಲಬಂಧವು, ಶರೀರವು ಸಣ್ಣನಾಗುವಿಕೆ, ಹೊಟ್ಟೆಯಲ್ಲಿ ಕೆರೆದಂತಾಗುವಿಕೆ, ಶರೀರವು ಬಿಳೀವರ್ಣವಾಗುವಿಕೆ, ಶೋಭೆ ಇವುಗಳು ಸಂಭವಿಸುವುದು. ಮತ್ತು ಆ ಕ್ರಿಮಿಗಳು ಸ್ವಸ್ಥಾನವನ್ನು ಬಿಟ್ಟು ಇತರ ಸ್ಥಾನಗಳಲ್ಲಿ ಸಂಚರಿಸುವಾಗ ರೋಮಾಂಚನವಾಗುವಿಕೆ, ಅಗ್ನಿಮಾಂದ್ಯ, ಗುದಸ್ಥಾನದಲ್ಲಿ ತುರಿ (ನವೆ) ಇವುಗಳುಂಟಾಗುವುದು.

## ಕ್ರಿಮಿರೋಗಕ್ಕೆ ಚಿಕಿತ್ಸೆಗಳು.

೧ ಹಾವುಮೆಕ್ಕೆಕಾಯಿ (ಯರುಪುಚ್ಚಕಾಯಿ) ಒಣಗಿದ್ದು ೩ ತೊಲೆ, ಒರಗೆಸಾಯಿ (ನೆಲಕುಂಬಳದಯಲೆ) ೬ ತೊಲೆ, ಸೆನಾಮುಕಿ ೩ ತೊಲೆ, ತುಕ್ಮ ಕೊಂಗಯಿ ೩ ತೊಲೆ, ಕಬಾಬ್‌ಚಿನ್ನಿ ೧|| ತೊಲೆ, ಬಿಳೀಜೀರಿಗೆ ೧ ತೊಲೆ, ಶೊಂಟಿ ೧ ತೊಲೆ, ಖುರಾಸಾನಿ ಅಜವಾ‍ನ ೧|| ತೊಲೆ, ಜಂಗ್ಲಿಹಲ್ದ ೧|| ತೊಲೆ, ಮುಸಾಂಬರ ೧ ತೊಲೆ, ಲವಂಗ ೧ ತೊಲೆ, ದಾಲ್‌ಚಿನ್ನಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇಟ್ಟುಕೊಳ್ಳುವದು. ಒಂದು ಬಾಂಡ್ಲಿಯಲ್ಲಿ ೧|| ಶೇರು ಜೇನುತುಪ್ಪ ಹಾಕಿ ವಲೆಯಮೇಲೆ ಇಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣಹಾಕಿ ಪಕ್ವವಾಗಿ ಲೇಹಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲುತೊಲೆ ಅಥವಾ ೬ ಆಣೆ ತೂಕ ರಾತ್ರಿಕಾಲ ಊಟಮಾಡಿ ಮಲಗಿಕೊಳ್ಳುವಾಗ ಕೊಡಬೇಕು ಈರೀತಿ ೨-೩ ದಿವಸ ಕೊಡುವದು. ಅನಂತರ ಚಿಟ್ಟಿರಳೆಣ್ಣೆ ಕುಡಿಸಿದರೆ ಕ್ರಿಮಿಗಳು ಬಿದ್ದುಹೋಗುವದು.

೨. ಕೊಡಸಿಗೆಚಕ್ಕೆ ೧ ತೊಲೆ, ಬೇವಿನಚಕ್ಕೆ ೧ ತೊಲೆ, ಶೊಂಟಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಬಜೆ ೧ ತೊಲೆ, ಶುದ್ಧಿಮಾಡಿದ ಲಾಲುತಿಗಡು ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಹಸುವಿನಮೂತ್ರ ಹಾಕಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಕುಡಿದರೆ ಎಲ್ಲಾ ವಿಧವಾದ ಹುಳಗಳು ಬೀಳುವುವು.

೩. ವಾಯುವಿಳಂಗ ೧ ತೊಲೆ, ಶುದ್ಧಿಮಾಡಿದ ಮುತ್ತುಕದಬೀಜ || ತೊಲೆ, ಮೆಣಸು ೧ ತೊಲೆ, ಪರಂಗಿಕಾಯಿ ೫ ತೊಲೆ, ಬೆಲ್ಲ ೧೦ ತೊಲೆ, ಒಂದು ಬಾಂಡ್ಲಿಯಲ್ಲಿ ಬೆಲ್ಲಹಾಕಿ ನೀರುಹಾಕಿ ವಲೆಯಮೇಲೆ ಇಟ್ಟು ಉರಿಹಾಕಿ ಕಾಯಿಸಿ ತಂತುಪಾಕ ಬಂದಕೂಡಲೇ ಪರಂಗಿಕಾಯಿ ತುರದುಹಾಕಿ ಅನಂತರ ಜಿನಸುಗಳ ಚೂರ್ಣಹಾಕಿ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ಗಜ್ಜುಗದಷ್ಟು ೩ ದಿನ ಕೊಡಬೇಕು. ಇದರಿಂದ ಗುಣ:—ಹೊಟ್ಟೆಯಲ್ಲಿರುವ ಕ್ರಿಮಿ, ಹುಳ ನಾಶವಾಗುತ್ತೆ.

೪. ಹುಚ್ಚುಬೇವಿನ (ತುರಕಬೇವು) ಚಕ್ಕೆ ತಂದು ಕುಟ್ಟಿ ನೀರುಹಾಕಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಹೊತ್ತಿಗೆ ಅರಪಾವಿನಷ್ಟು ಕಷಾಯ ಕುಡಿದರೆ ಕ್ರಿಮಿಗಳು ಬಿದ್ದುಹೋಗುವದು.

೫. ಒಳ್ಳೇ ಬೇವಿನಚಕ್ಕೆ ತಂದು ಕುಟ್ಟಿ ನೀರುಹಾಕಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಹೊತ್ತಿಗೆ ಅರಪಾವಿನಷ್ಟು ಕಷಾಯ ಕುಡಿದರೆ ಕ್ರಿಮಿಗಳು ಬಿದ್ದುಹೋಗುವದು.

೬. ಮುತ್ತುಕದಬೇರು ತಂದು ಸುಟ್ಟು ಬೂದಿಮಾಡಿ ಕಾಲುತೊಲೆಯಷ್ಟು ತಣ್ಣೀರಿನಲ್ಲಿ ಕಲಸಿ ಕುಡಿಯುವದು. ಈರೀತಿ ಬೆಳಿಗ್ಯೆ ಹೊತ್ತು ೩ ದಿನ ಕುಡಿಯುವದು. ಇದರಿಂದ ಕ್ರಿಮಿಗಳು ಬಿದ್ದುಹೋಗುವದು.

೭. ತುಂಗೇಗಡ್ಡೆ ||| ತೊಲೆ, ಇಲೀಕಿವಿಸೊಪ್ಪು ||| ತೊಲೆ, ಅಳಲೇಕಾಯಿಸಿಪ್ಪೆ ||| ತೊಲೆ, ತಾರೇಕಾಯಿಸಿಪ್ಪೆ ||| ತೊಲೆ, ನೆಲ್ಲೀಕಾಯಿ ||| ತೊಲೆ, ತುಪ್ಪದ ದೇವದಾರು ||| ತೊಲೆ, ದಾಳಿಂಬರಬೇರು ||| ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡು ಹಿಪ್ಪಲಿ ೨ ಆಣೆ ತೂಕ, ವಾಯುವಿಳಂಗ ೨ ಆಣೆ ತೂಕ ಇವು ಎರಡು ಕುಟ್ಟಿ ಚೂರ್ಣ ಮಾಡಿ ಶೋಧಿಸಿ ಕಷಾಯದಲ್ಲಿ ಕಲಸಿ ಕುಡಿದರೆ ಹೊಟ್ಟೆಯಲ್ಲಿರುವ ಕ್ರಿಮಿಗಳು ಬಿದ್ದುಹೋಗುವದು.

೮. ಕೀಟಮರ್ದನ ರಸ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿ ಮಾಡಿದ ಹವಳಸರಿಗಂಧಕ ೨ ತೊಲೆ, ಅಜಾವೊದ ೩ ತೊಲೆ, ವಾಯುವಿಳಂಗ ೪ ತೊಲೆ, ಶುದ್ಧಿಮಾಡಿದ ವಿಷಮುಷ್ಟಿಬೀಜ ೧ ತೊಲೆ, ಶುದ್ಧಿಮಾಡಿದ ಮುತ್ತುಕದಬೀಜ ೩ ತೊಲೆ ಇವುಗಳನ್ನು ಚೂರ್ಣಮಾಡಿ ಜೇನುತುಪ್ಪದಲ್ಲಿ ಅರದು ಇಟ್ಟುಕೊಂಡು ಕಡಲೇಪ್ರಮಾಣ ಮಾತ್ರೆಮಾಡಿ ೧ ಮಾತ್ರೆ ಸೇವಿಸಿ ತುಂಗೇಗಡ್ಡೆ ಕಷಾಯ ಕುಡಿದರೆ ಹೊಟ್ಟೆಯಲ್ಲಿರುವ ಕ್ರಿಮಿಗಳು ಸತ್ತುಬೀಳುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ.

೯. ಕ್ರಿಮಿಘಾತಿನೀ ವಟಿ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿ ಮಾಡಿದ ಹವಳಸರಿಗಂಧಕ ೨ ತೊಲೆ, ಅಜಾವೊದ ೩ ತೊಲೆ, ವಾಯುವಿಳಂಗ ೪ ತೊಲೆ, ಶುದ್ಧಿಮಾಡಿದ ಮುತ್ತುಕದಬೀಜ ೪ ತೊಲೆ, ತುಂಬೇಬೀಜ ೬ ತೊಲೆ, ಇವು ಖಲ್ವದಲ್ಲಿ ಹಾಕಿ ಜೇನುತುಪ್ಪದಲ್ಲಿ ಅರದು ಕಡಲೇಕಾಳುಪ್ರಮಾಣ ಮಾತ್ರೆ ಮಾಡಿ ಸೇವನೆಮಾಡಲು ಸಮಸ್ತ ಕ್ರಿಮಿಗಳು ನಿರ್ನಾಶ-ವಾಗುವದು ದಾಹವಾದರೆ ತುಂಗೇಗಡ್ಡೆ ಕಷಾಯ ಕೊಡುವದು. ಕ್ರಿಮಿ ಬಿದ್ದನಂತರ ಇಲೀಕಿವಿ ಸೊಪ್ಪು ಕಷಾಯ ಮಾಡಿ ಸಕ್ಕರೆ ಬೆರಸಿ ಕುಡಿಯಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ.

೧೦ ತ್ರಿಫಲಾದಿ ಕಷಾಯ :— ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಇಲೀಕಿವಿಸೊಪ್ಪು, ನುಗ್ಗೇಸೊಪ್ಪು ಇವುಗಳನ್ನು ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿಕೊಂಡು ಇದಕ್ಕೆ ಸಣ್ಣ ಹಿಪ್ಪಲಿಚೂರ್ಣ ಮತ್ತು ವಾಯುವಿಳಂಗ ಚೂರ್ಣವನ್ನು ಬೆರಸಿ ಕುಡಿಯಲು ಕ್ರಿಮಿರೋಗ ನಿರ್ನಾಮ ವಾಗುವದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ.

೧೧. ಶುದ್ಧಿಮಾಡಿದ ಮುತ್ತುಕದಬೀಜ ೧ ತೊಲೆ, ದಾಳಿಂಬರೆಬೇರಿನ ತಿಗಡು ೨ ತೊಲೆ, ಅಜಾಮೊದ ೧ ತೊಲೆ, ಚೋರಿವೋಮ ೧ ತೊಲೆ, ವಾಯುವಿಳಂಗ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ಕರೇಜೀರಿಗೆ ॥ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇದಕ್ಕೆ ಸಮ ಸಕ್ಕರೆಬೆರಸಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲುತೊಲೆ ಚೂರ್ಣವನ್ನು ಶರೀರಪ್ರಕೃತಿ ಅನುಸರಿಸಿ ಚಿಟ್ಟೆರಳೆಣ್ಣೆಯಲ್ಲಿ ಕಲಸಿ ಕೊಟ್ಟರೆ ಕ್ರಿಮಿಗಳು ಬೇದಿಯಲ್ಲಿ ಬಿದ್ದುಹೋಗುವದು

೧೨ ತೊಟ್ಲಗಿಡದ ಯಲೆಯನ್ನು ಹಸಿ ಅಕ್ಕಿ ಕಚ್ಚಿನಲ್ಲಿ ಅರದು ಹೊಕ್ಕಳಿಗೆ ಲೇಪಮಾಡಲು ಕ್ರಿಮಿಗಳು ಬಿದ್ದುಹೋಗುವದು.

೧೩. ಬಾಳೇಹುವ್ವ ತಂದು ಸುಟ್ಟು ಕರುಕುಮಾಡಿದ್ದು ಕಾಲುತೊಲೆ, ಬೆಲ್ಲ ಕಾಲುತೊಲೆ ಇವು ಎರಡು ಖಲ್ವದಲ್ಲಿ ಹಾಕಿ ಅರದು ಸೇವಿಸಲು ಕ್ರಿಮಿಗಳು ಬಿದ್ದುಹೋಗುತ್ತೆ. ಈರೀತಿ ೩ ದಿವಸಕ್ಕೆ ಒಂದಾವರ್ತಿ ೩ ಸಲ ತೆಗೆದುಕೊಂಡರೆ ಎಲ್ಲಾ ಕ್ರಿಮಿಗಳು ಬಿದ್ದುಹೋಗುತ್ತೆ. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ.

೧೪. ಮಾಜೂನೆ ಗೆಂಡ್ವೆಕೆವಾಸ್ತೆ :— ಪಲಾಸ್‌ಪಾಪಡಾ (ಮುತ್ತುಕದ ಬೀಜ) ನೀರಿನಲ್ಲಿ ನೆನೆಯಿಸಿ ಮೇಲಿನಹೊಟ್ಟು ತೆಗೆದು ಬಿಸಲಿನಲ್ಲಿ ವಣಗಿಸಿ ತುಪ್ಪದಲ್ಲಿ ಹುರಿದುಕೊಂಡು ಚೂರ್ಣಮಾಡಿದ್ದು ೧ ತೊಲೆ, ವಾಯುವಿಳಂಗ ೧ ತೊಲೆ, ಚೋರಿವೋಮ ೧ ತೊಲೆ, ಬಿದರುಪ್ಪು ॥ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಒಂದು ಬಾಂಡ್ಲಿಯಲ್ಲಿ ಕಲ್ಲುಸಕ್ಕರೆ ಶೇರುಪಾವು ಹಾಕಿ ಸ್ವಲ್ಪ ನೀರುಹಾಕಿ ವಲೆಯಮೇಲೆ ಇಟ್ಟು ಕಾಯಿಸಿ ತಂತುಪಾಕ ಬಂದ ಕೂಡಲೇ ಮೇಲ್ಕಂಡ ಚೂರ್ಣಹಾಕಿ ಪಕ್ವವಾಗಿ ಲೇಹಮಾಡಿ ಇಟ್ಟುಕೊಳ್ಳುವದು. ದೊಡ್ಡವರಿಗೆ ಅರ್ಧತೊಲೆ, ಮಕ್ಕಳಿಗೆ ಕಾಲುತೊಲೆ ಕೊಡಬೇಕು. ಹೀಗೆ ಕ್ರಿಮಿಗಳು ಹೋಗುವವರಿವಿಗು ಕೊಡುವದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ.

# ಇಪ್ಪತ್ತೊಂದನೆಯ ಅಧ್ಯಾಯ.

## ಪಾಂಡುರೋಗ— ಔಷಧಗಳು.

### ಪಾಂಡುರೋಗ ಲಕ್ಷಣ.

ಪಾಂಡುರೋಗವು ವಾತಜ, ಪಿತ್ತಜ, ಕಫಜ, ಸನ್ನಿಪಾತಜ, ಮೃತ್ತಿಕೆ ತಿನ್ನುವದರಿಂದ ಉಂಟಾದ್ದು ಎಂದು ಐದು ವಿಧಗಳಾಗಿರುವುದು.

ಚರ್ಮವು, ಮುಖವು, ಮೂತ್ರವು ಇವು ಕಪ್ಪುಬಣ್ಣವಾಗಿಯಾಗಲಿ, ಕೆಂಪು ಬಣ್ಣವಾಗಿಯಾಗಲಿ ಉಂಟಾಗಿ ಕಂಪವು, ಮೈನೋವು, ಭ್ರಮೆ, ಊತ ಈ ಲಕ್ಷಣಗಳಿದ್ದರೆ ವಾತ ಪಾಂಡುವೆಂದು ತಿಳಿಯುವುದು.

ಚರ್ಮವು, ಮೂತ್ರವು, ಮಲವು, ನೇತ್ರಗಳು ಹಳದಿಬಣ್ಣವುಳ್ಳದ್ದಾಗಿ ದಾಹ, ಜ್ವರ, ಮಲವು ತೆಳುವಾಗಿರುವಿಕೆ ಈ ಲಕ್ಷಣಗಳಿದ್ದರೆ ಪಿತ್ತ ಪಾಂಡುವೆಂದು ತಿಳಿಯುವುದು.

ಚರ್ಮವು, ಮೂತ್ರವು, ಮಲವು, ನೇತ್ರಗಳು ಬಿಳುಪಾಗಿದ್ದು ಅಗ್ನಿ ಮಾಂದ್ಯ, ಶರೀರ ಭಾರ ಈ ಲಕ್ಷಣಗಳಿದ್ದರೆ ಕಫಪಾಂಡ ವೆಂದು ತಿಳಿಯುವದು.

ಮೂರು ದೋಷಗಳ ಲಕ್ಷಣಗಳು ಕಲೆತಿರುವುದು ಸನ್ನಿಪಾತ ಪಾಂಡು ವೆಂದು ತಿಳಿಯುವುದು.

ಪ್ರಬಲವಾದ ವಾತ, ಪಿತ್ತ, ಕಫಗಳ ಲಕ್ಷಣಗಳು ತೋರಿದ್ದಾದರೆ ಮೃತ್ತಿಕೆ ಯನ್ನು ತಿನ್ನುವುದರಿಂದುಂಟಾದ ಪಾಂಡುವೆಂದು ತಿಳಿಯುವುದು.

ಮತ್ತು ಪಾಂಡುರೋಗದಲ್ಲಿ ಪಿತ್ತಪ್ರಕೋಪ ಪದಾರ್ಥಗಳನ್ನು ಸೇವಿಸುವುದ ರಿಂದ ಕಾಮಲಾರೋಗವು ಹುಟ್ಟುವುದು. ಅದರಲ್ಲಿ ಕಣ್ಣುಗಳು, ಮುಖವು, ಉಗುರುಗಳು, ಶರೀರವು ಇವು ಹಳದಿಯಾಗಿರುವುದು. ಮಲಮೂತ್ರಗಳು ಕೆಂಪು, ಹಳದಿಬಣ್ಣಗಳುಳ್ಳದ್ದಾಗಿರುವದು. ಮತ್ತು ಅಗ್ನಿಮಾಂದ್ಯವು, ಅಜೀರ್ಣವು, ಅರೋಚಕವು, ದೌರ್ಬಲ್ಯವು ಮೊದಲಾದ ಲಕ್ಷಣಗಳಿರುವುದು.

ಕಾಮಲಾರೋಗಕ್ಕೆ ಚಿಕಿತ್ಸೆಯನ್ನು ಮಾಡದೆ ಉದಾಸೀನ ಮಾಡಿದರೆ ಕುಂಭಕಾಮಲಾ ಹುಟ್ಟುವುದು. ಅದರಲ್ಲಿ ಮಲಮೂತ್ರಗಳು ಹಳದಿಯಾಗಿರುವುದು. ಶರೀರದಲ್ಲಿ ಊತ, ನೇತ್ರಗಳು ಕೆಂಪಾಗಿರುವಿಕೆ, ವಾಂತಿ ಮೊದಲಾದ ಲಕ್ಷಣಗಳಿರು ವುದು ಇದು ಕಷ್ಟಸಾಧ್ಯ.

ವಾತ, ಪಿತ್ತ ಪ್ರಕೋಪಗಳಿಂದ ಹುಟ್ಟಿದ ಹಲೀಮಕವೆಂಬ ರೋಗದಲ್ಲಿ ಶರೀರವು ಕಪ್ಪಾಗಿಯಾಗಲಿ, ಬಿಳ್ಪಗಾಗಲಿ, ಹಸುರಾಗಿಯಾಗಲಿ ಇದ್ದು ನೇತ್ರ ಗಳಲ್ಲಿ ಮಂಕು, ಅಗ್ನಿಮಾಂದ್ಯವು, ಮಂದಜ್ವರವು, ಶರೀರದಲ್ಲಿ ನೋವು

ಶ್ವಾಸವು, ಕಾಸವು, ದಾಹ, ಭ್ರಮೆ, ಅರುಚಿ ಮೊದಲಾದ ಲಕ್ಷಣಗಳಿರುವುದು. ಇದು ಕಷ್ಟಸಾಧ್ಯವು.

## ಪಾಂಡುರೋಗದಲ್ಲಿ ಅಸಾಧ್ಯ ಲಕ್ಷಣ.

೧ ಜ್ವರ, ವಾಂತಿ, ಕೆಮ್ಮು, ಶೋಭೆ, ಅತಿಸಾರಗಳಿದ್ದರೆ ಅಸಾಧ್ಯವು.

೨. ಶೋಭೆ, ಕಣ್ಣು ಉಗರು ಮತ್ತು ನೋಡಿದ ಪದಾರ್ಥಗಳು ಸಹ ಹಳದೀಬಣ್ಣವಾಗಿ ಕಾಣಿಸುವಿಕೆ, ನಿದ್ರೆ, ಮೈಸುಡೋಣ, ಜ್ವರ, ವಾಂತಿ, ಮೂರ್ಛೆ, ಬಿಕ್ಕಳಿಕೆ, ಅತಿಸಾರಗಳಿಂದ ಯುಕ್ತವಾಗಿ ಕಾಲಿನಿಂದ ಗಂಡುಸರಿಗೂ ಮುಖದಿಂದ ಹೆಂಗಸರಿಗೂ ಶೋಭೆ ವೃದ್ಧಿಯಾದ ಪಾಂಡುರೋಗವು ಅಸಾಧ್ಯವು.

೩. ಕುಕ್ಷಿ, ಗುಹ್ಯಗಳಲ್ಲಿ ಹುಟ್ಟಿದ ಶೋಭೆ ಗಂಡಸರಿಗೂ ಹೆಂಗಸರಿಗೂ ಕಾಲು ಮುಖಗಳಲ್ಲಿ ವೃದ್ಧಿಯಾದರೆ ಅಸಾಧ್ಯವು.

೪. ಹೆಂಗಸಿಗೆ ಕಾಂತಿ ಅಧಿಕವಾಗೋದು, ಯೋನಿದ್ರವಿಸುವದು ಇವು ಇರುವ ಪಾಂಡುರೋಗವು ಅಸಾಧ್ಯವು.

೫. ವಾಂತಿ, ಜ್ವರ, ಊರ್ಧ್ವಶ್ವಾಸ, ಅತಿಸಾರಗಳುಳ್ಳದ್ದಾದರೆ ಅಸಾಧ್ಯವು.

## ಪಾಂಡುರೋಗ ಚಿಕಿತ್ಸೆಗಳು.

೧. ಸರ್ವವ್ಯಾಧಿಗಳಿಗೆ ಮಂಡೂರ:—ಶುದ್ಧಿಮಾಡಿದ ಹಳೇಕಿಟ್ಟವನ್ನು ತಂದು ನಿಂಬೇಕಾಯಿ ಪ್ರಮಾಣ ಹೊಡದು ನಾಲ್ಕುಪಾಲು ತ್ರಿಫಲೆಯ ಕಷಾಯದಲ್ಲಿ ಆ ಕಿಟ್ಟವನ್ನು ಕೊಲಮಿಯಲ್ಲಿ ಕೆಂಪಗೆ ಕಾಯಿಸಿ ೭ ಸಲ ಆ ತ್ರಿಫಲೆಯ ಕಷಾಯದಲ್ಲಿ ಅದ್ದಿ ಒಣಗಿಸಿ ಆಮೇಲೆ ಈ ಕಿಟ್ಟನನ್ನು ಪುಡಿಮಾಡಿ ಈ ತ್ರಿಫಲೆ ಕಷಾಯ ಹಾಕಿ ಆ ಕಷಾಯದಲ್ಲಿ ಅರೆದು ಅರೆದು ೭ ಸಲ ಮೊಳಪುಟ ಹಾಕುವದು. ಗರುಗದಸೊಪ್ಪಿನ ರಸದಲ್ಲಿ ೭ ಸಲ ಪುಟ, ಕರೀಲಕ್ಕಲಿಸೊಪ್ಪಿನ ರಸದಲ್ಲಿ ೩ ಸಲ ಪುಟ, ಎಕ್ಕದಸೊಪ್ಪಿನ ರಸದಲ್ಲಿ ೩ ಸಲ ಪುಟ, ಕಿರುಗುಳ್ಳದಸೊಪ್ಪಿನ ರಸದಲ್ಲಿ ೩ ಸಲ ಪುಟ, ಹೆಗ್ಗುಳ್ಳದಸೊಪ್ಪಿನ ರಸದಲ್ಲಿ ೩ ಸಲ ಪುಟ, ಯಲವುಸಂದಿಸೊಪ್ಪಿನ ರಸದಲ್ಲಿ ೩ ಸಲ ಪುಟ, ಬಿಳೇಕೊಮ್ಮೆಸೊಪ್ಪಿನ ರಸದಲ್ಲಿ ೩ ಸಲ ಪುಟ, ಕರೇಕಾಚಿ ಸೊಪ್ಪಿನ ರಸದಲ್ಲಿ ೩ ಸಲ ಪುಟ, ಮಂಗರವಳ್ಳಿ ರಸದಲ್ಲಿ ೩ ಸಲ ಪುಟ, ಹೊನಗೊನೆಸೊಪ್ಪಿನ ರಸದಲ್ಲಿ ೩ ಸಲ ಪುಟ ಈ ರಸಗಳಲ್ಲಿ ಪ್ರತ್ಯೇಕ ಪ್ರತ್ಯೇಕ ಒಂದೊಂದು ರಸದಲ್ಲಿ ಒಂದು ಸರ್ತಿ ಮರ್ದನೆಮಾಡಿ ಪ್ರತ್ಯೇಕವಾಗಿ ೪೧ ಸಲ ಪುಟವನ್ನು ಹಾಕಿ ಒಣಗಿಸಿದನಂತರ ಇದನ್ನು ಚನ್ನಾಗಿ ಚೂರ್ಣವನ್ನು ಮಾಡಿ ಗರುಗದಸೊಪ್ಪಿನ ರಸದಲ್ಲಿ ಅರೆದು ೧ ಹಣತೂಕ ಪ್ರಮಾಣ ಮಾತ್ರೆ ಮಾಡಿ ೧ ಮಾತ್ರೆಯನ್ನು ಹಿಪ್ಪಲಿ ಚೂರ್ಣ, ಜೇನುತುಪ್ಪದಲ್ಲಿಯಾಗಲಿ ಅಥವಾ ಹಸೀ ಶುಂಟೀ ರಸದಲ್ಲಾಗಲಿ ತೆಗೆದುಕೊಳ್ಳುವದು. ಹೀಗೆ ಬೆಳಿಗ್ಗೆ ಸಾಯಂಕಾಲ

೭-೧೪ ದಿನ ಕೊಡುವದು. ಇದಕ್ಕೆ ಪತ್ಯ ಹಸುವಿನಹಾಲು ಅನ್ನ. ಇದರಿಂದ ಕ್ಷಯ, ಪಾಂಡು, ಶೋಭೆ, ಕಾಮಾಲೆ ಗುಣವಾಗುವದು.

೨. ಹಂಸ ಮಂಡೂರ:—ಇಂಗಳೀಕ ೫ ತೂಕ (ಕೋಳಿಮೊಟ್ಟೆಯ ಬಿಳೇ ಜನಿಯಲ್ಲಿ ಅರ್ಧ ಘಂಟೆ ಚುರುಕುಕೊಡುವದು), ಮಂಡೂರ ೫ ತೂಕ, ಶುದ್ಧಿ ಮಾಡಿದ ಹವಳಸರಿಗಂಧಕ ೩ ತೂಕ, ಶುದ್ಧಿಮಾಡಿದ ನಾಭಿ ೨ ತೂಕ, ಶುದ್ಧಿ ಮಾಡಿದ ಜಾಪಾಳ ೧ ತೂಕ ಇವುಗಳನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲಿ ೧ ದಿನ, ಗರುಗದಸೊಪ್ಪಿನ ರಸದಲ್ಲಿ ೧ ದಿನ, ಹಸೀಶೊಂಟೀ ರಸದಲ್ಲಿ ೧ ದಿನ ಅರದು ಮೆಣಸು ಪ್ರಮಾಣ ಮಾತ್ರೆಮಾಡಿ ಬೆಳಿಗ್ಗೆಹೊತ್ತು ಬಿಸಿನೀರಿನಲ್ಲಿ ೧ ಮಾತ್ರೆಯಂತೆ ೫ ದಿನ ಕೊಡುವದು. ಇದಕ್ಕೆ ಪತ್ಯ ಹಸುವಿನಹಾಲು ಅನ್ನ. ಇದರಿಂದ ಪಾಂಡು, ಶೋಭೆ, ಕಾಮಾಲೆ, ಯಕೃತ್ತು, ಪ್ಲೀಹ, ಜ್ವರ ಗುಣವಾಗುವದು.

೩. ಶೊಂಟಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಅಳಲೇ ಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಕಾಡುಮೆಣಸಿನಬೇರು ೧ ತೊಲೆ, ಕರೇವುಪ್ಪಿಚಕ್ಕೆ ೧ ತೊಲೆ, ಬಿಳೇವುಪ್ಪಿಚಕ್ಕೆ ೧ ತೊಲೆ, ಒಣಗಿದ ಗರುಗದಸೊಪ್ಪು ೩ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿಕೊಳ್ಳುವದು. ಒಂದು ಬಾಂಡ್ಲಿಯಲ್ಲಿ ತಾಟಿಬೆಲ್ಲ ಅರ್ಧಶೇರು ಹಾಕಿ ನೀರುಹಾಕಿ ವಲೆಯಮೇಲಿಟ್ಟು ಉರಿಹಾಕಿ ತಂತುವಾಕ ಬಂದಕೂಡಲೇ ಮೇಲ್ಕಂಡ ಚೂರ್ಣವನ್ನುಹಾಕಿ ಪಕ್ವವಾಗಿ ಲೇಹಮಾಡಿ ಇಳಿಸಿಕೊಳ್ಳುವಾಗ ಜೇನುತುಪ್ಪ ೧ ಪಾವು, ಮಂಡೂರ ೧ ತೊಲೆ, ಶುದ್ಧಿಮಾಡಿದ ಗಂಧಕಭಸ್ಮ ಅರ್ಧ ತೊಲೆ ಹಾಕಿ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ೧ ಗಜ್ಜುಗದಷ್ಟು ತೆಗೆದುಕೊಳ್ಳುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಾಂಡು, ಕಾಮಾಲೆ, ಶೋಭೆ ಗುಣವಾಗುವದು.

೪. ವಾಯುವಿಳಂಗ, ಬಿಳೇಕೊಮ್ಮೇಬೇರು ಕೊಳವಳಿಕೆ ಗಿಡದಬೇರು ಇವು ಮೂರು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಮಂಡೂರ ೨ ಆಣೆತೂಕ, ಸ್ವಲ್ಪ ಜೇನುತುಪ್ಪಹಾಕಿ ಕಲಸಿ ಕುಡಿಯುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಾಂಡು, ಕಾಮಾಲೆ, ಶೋಭೆ ಗುಣವಾಗುವದು.

೫. ಬಿಳೇಕೊಮ್ಮೇಬೇರು, ನೆಲಬೇವು, ಕಹಿಪಡವಲ, ಶೊಂಟಿ ಇವು ಜಿನಸಿಗೆ ॥ ತೊಲೆ, ಕಟುಕರೋಹಿಣಿ ಕಾಲುತೊಲೆ, ಮರದರಿಸಿನ ಕಾಲುತೊಲೆ, ಅಳಲೇಕಾಯಿಸಿಪ್ಪೆ ಕಾಲುತೊಲೆ, ಅಡಿಕೆಚಿಟ್ಟು (ತೆಲುಗು ಆಟುಕಮಾಮಿಡಿ)

ಬೇರು ಕಾಲುತೊಲೆ, ಉಪ್ಪೇಬೇರು ಕಾಲುತೊಲೆ, ಕೊಳವಳಿಕೆಬೇರು ಕಾಲು ತೊಲೆ, ಕಿರುನೆಲ್ಲಿ ೧ ಹಿಡಿ, ಮೆಣಸು ಕಾಲುತೊಲೆ, ಕೊತ್ತುಂಬರಿಬೀಜ ೨ ಆಣೆ ತೂಕ, ಜೀರಿಗೆ ಕಾಲುತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಕಷಾಯ ಕಾಯಿಸುವಾಗ ಲವಂಗ ೪, ಹಿಪ್ಪಲಿ ೨, ತಾಳೀಸಪತ್ರೆ ೨|| ಆಣೆ ತೂಕ ಇವು ಮೂರು ಜಿನಸು ಬಟ್ಟೆಯಲ್ಲಿ ಗಂಟುಕಟ್ಟಿ ಕಷಾಯ ಬೇಯಿಸುವಾಗ ಹಾಕಿ ಅಷ್ಟಾವ ಶೇಷ ಕಷಾಯ ಕಾಯಿಸಿ ಶೋಧಿಸಿಕೊಂಡು ಇದಕ್ಕೆ ಮೇಲ್ಕಂಡ ಲವಂಗ, ಹಿಪ್ಪಲಿ, ತಾಳೀಸಪತ್ರೆ, ಅರೆದು ಸೇರಿಸಿದಲ್ಲಿ, ಹೊತ್ತಿಗೆ ೧ ತೊಲೆ ಕಷಾಯ ಕುಡಿಯುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಮೂತ್ರ ಆಗದೇ ಇದ್ದರೆ ೨ ಆಣೆ ತೂಕ ಪೆಟ್ಲುಪ್ಪುಭಸ್ಮ ಕಷಾಯದಲ್ಲಿ ಕಲಸಿ ಕೊಡುವದು. ಮೂತ್ರ ಸರಿಯಾಗಿ ಆದರೆ ಪೆಟ್ಲುಪ್ಪುಭಸ್ಮ ಕೊಡಕೂಡದು. ರೋಗಿಗೆ ಬೇದಿ ಆಗುತ್ತಾ ಇದ್ದರೆ ಕಟುಕರೋಹಿಣಿ, ಚೇದುಪೊಳ್ಳ, ನೆಲಬೇವು ಇವು ಹಾಕಕೂಡದು. ಇದಕ್ಕೆ ಪತ್ಯ ಹಸುವಿನಹಾಲು ಅನ್ನ.

೬. ಬಿಳೀಕೊಮ್ಮೆಬೇರು, ಶುದ್ಧಿಮಾಡಿದ ಲಾಲುತಿಗಡು, ವಾಯುವಿಳಂಗ, ತುಪ್ಪದ ದೇವದಾರು, ಅರಸಿನ, ಮರದರಿಸಿನ, ಚಂಗಲಕೋಷ್ಟ, ಚಿತ್ರಮೂಲ, ಚಿಟ್ಟೆಹರಳುಬೇರು, ಚವ್ಯ, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಕೊಡಸಿಗೆಚಕ್ಕೆ, ಕಟುಕರೋಹಿಣಿ, ಹಿಪ್ಪಲಿಮೂಲ, ತುಂಗೇಗಡ್ಡೆ, ಅತಿಬಜೆ ಇವು ಜಿನಸಿಗೆ ೧ ತೊಲೆ, ಮಂಡೂರ ೫ ತೊಲೆ, ಇವುಗಳನ್ನು ಖಲ್ವದಲ್ಲಿಹಾಕಿ ಗರುಗದಸೊಪ್ಪಿನ ರಸದಿಂದ ಅರದು ಅವರೇಕಾಳು ಪ್ರಮಾಣ ಮಾತ್ರೆ ಮಾಡಿ ಹಸುವಿನಮಜ್ಜಿಗೆಯಲ್ಲಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಾಂಡು, ಕಾಮಾಲೆ ಗುಣವಾಗುವದು.

೭. ಅಡಕೆಚಿಟ್ಟೆನಬೇರು ೧ ತೊಲೆ, ತುಪ್ಪದದೇವದಾರು ೧ ತೊಲೆ, ಚಿಕ್ಕ ಹಾವುಮೆಕ್ಕೇಕಾಯಿ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ಸಣ್ಣರಾಸ್ಮೆ ೧ ತೊಲೆ, ಬಿಳೀಕೊಮ್ಮೆಬೇರು ೧ ತೊಲೆ, ಕಿರಹಾಲೇಬೀಜ ೧ ತೊಲೆ, ಮರಾಟಿ ಮೊಗ್ಗು ೧ ತೊಲೆ, ಶುದ್ಧಿಮಾಡಿದ ಕೆಂಪುಲಾಲುತಿಗಡೆ ೧ ತೊಲೆ, ಕೊಳವಳಿಕೆ ಬೀಜ ೧ ತೊಲೆ, ಗೋಮೂತ್ರ ಶಿಲಾಜಿತುಭಸ್ಮ ೧ ತೊಲೆ, ಹೊಟ್ಟುಸುಲಿದ ಬೆಳ್ಳುಳ್ಳಿ ೧ ತೊಲೆ, ಯವಕ್ಷಾರ ೧ ತೊಲೆ, ಅರಸಿನ ಕಾಲು ತೊಲೆ, ಮೇಕೆಹಿಕ್ಕೆ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಶುದ್ಧಿ ಮಾಡಿದ ಜಾಪಾಳ || ತೊಲೆ, ಮಂಡೂರ ೧ ತೊಲೆ, ಇವುಗಳೆಲ್ಲವನ್ನು ಖಲ್ವದಲ್ಲಿ ಹಾಕಿ ಒಂದೆಲಗದಸೊಪ್ಪಿನ ರಸದಲ್ಲಿ ೧ ದಿನ ಭಾವನೆ, ಜುಟ್ಟುವೇಸೊಪ್ಪಿನ ರಸದಲ್ಲಿ ೧ ದಿನ ಭಾವನೆ, ಹಸೇಶುಂಟಿ ರಸದಲ್ಲಿ ೧ ದಿನ ಭಾವನೆ, ಮೇಕೇ ಮೂತ್ರದಲ್ಲ ೨ ದಿನ ಭಾವನೆಮಾಡಿ ಒಣಗಿಸಿ ಚೂರ್ಣಮಾಡಿ ಶೋಧಿಸಿಕೊಳ್ಳುವದು.

ಬೆಳಿಗ್ಯೆಹೊತ್ತು ॥ ತೊಲೆ ಚೂರ್ಣವನ್ನು ಬಿಸಿನೀರಿನಲ್ಲಿ ಕೊಡುವದು. ಹೀಗೆ ೭ ದಿನ ಕೊಡಬೇಕು. ಇದಕ್ಕೆ ಪತ್ಯ ಹಸುವಿನಹಾಲು ಅನ್ನ. ಮೇಲ್ಪತ್ಯ ೨ ದಿನ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಮಹೋದರ, ಜಲೋದರ, ಪಸರಿಕೆ, ಕಾಮಾಲೆ, ಪಾಂಡು, ಪಿತ್ತಪಾಂಡು ಗುಣವಾಗುವದು.

೮. ಮೋಮ ೬ ತೊಲೆ, ಅಳಲೇಕಾಯಿಸಿಪ್ಪೆ ೬ ತೊಲೆ, ತುಂಬೇಗಿಡ ಸಮೂಲ ಒಣಗಿದ್ದು ೬ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಕೊಳ್ಳುವದು. ಒಂದು ಬಾಂಡ್ಲಿಯಲ್ಲಿ ಹಳೇಬೆಲ್ಲ ೧೮ ತೊಲೆ ಹಾಕಿ ಒಲೆಯ ಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಹಾಕಿ ಕಲಸಿ ಪಕ್ವವಾಗಿ ಲೇಹ ಮಾಡಿಕೊಳ್ಳುವದು. ಹೊತ್ತಿಗೆ ಯಲಚೀಬೀಜದ ಪ್ರಮಾಣ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭-೧೪ ದಿವಸ ಕೊಡುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಾಂಡು, ಕಾಮಾಲೆ ಗುಣವಾಗುವದು.

೯. ಶೊಂಟಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಹೊಟ್ಟು ಸುಲಿದ ಬೆಳ್ಳುಳ್ಳಿ ೧ ತೊಲೆ, ಬಿಳೇವುಪ್ಪೇಸೊಪ್ಪು ಒಣಗಿದ್ದು ೫ ತೊಲೆ, ಮಂಗರ ವಳ್ಳಿ ಒಣಗಿದ್ದು ೧ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವ ದಲ್ಲಿ ಹಾಕಿ ಗರುಗದಸೊಪ್ಪಿನ ರಸದಲ್ಲಿ ಅರದು ಯಲಚೀಬೀಜದಷ್ಟು ಮಾತ್ರೆ ಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ೧ ಮಾತ್ರೆ ಬಿಸಿನೀರಿನಲ್ಲಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಾಂಡು, ಕಾಮಾಲೆ, ಶೋಫೆ ಗುಣವಾಗುವದು.

೧೦. ಅಳಲೇಕಾಯಿಸಿಪ್ಪೆ ೩ ತೊಲೆ, ತಾರೇಕಾಯಿಸಿಪ್ಪೆ ೩ ತೊಲೆ, ನೆಲ್ಲೀ ಕಾಯಿ ೩ ತೊಲೆ, ಸುನಾಮುಕಿ ೩ ತೊಲೆ, ಬಿಡಾಲವಣ ೧॥ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಹೊತ್ತಿಗೆ ಕಾಲುತೊಲೆ ಚೂರ್ಣ ಜೇನುತುಪ್ಪದಲ್ಲಿ ಕಲಸಿ ತೆಗೆದುಕೊಳ್ಳಬೇಕು. ಹೀಗೆ ಬೇಗ್ಯೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಿತ್ತ ಪಾಂಡು ಗುಣವಾಗುವದು.

೧೧. ಪಟ್ಲುಪ್ಪು ೭ ತೊಲೆ, ಜೀರಿಗೆ ೧ ತೊಲೆ, ಯಾಲಕ್ಕಿ ಕಾಲುತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹಳೇಹುಣಿಸೇಹಣ್ಣು ಅರ್ಧ ಸೇರು ಇವುಗಳನ್ನೆಲ್ಲ ಒರಳಲ್ಲಿ ಹಾಕಿ ಚನ್ನಾಗಿ ಅರದು ಇಟ್ಟುಕೊಳ್ಳುವದು. ಹೊತ್ತಿಗೆ ೧ ತೊಲೆ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡ ಬೇಕು. ಇದಕ್ಕೆ ಪತ್ಯ ಹಸುವಿನಮಜ್ಜಿಗೆ ಅನ್ನ ಅಥವಾ ತೊಗರೀಬೇಳೆ ಸಿಹಿ ಸಾರು ಅನ್ನ. ಇದರಿಂದ ಊದುಪಾಂಡು, ಪಿತ್ತಪಾಂಡು ಗುಣವಾಗುವದು.

೧೨. ಒಂದು ಮಡಿಕೆಯಲ್ಲಿ ನೀರು ಹಾಕಿ ಬಾಯಿಗೆ ಬಟ್ಟೆಕಟ್ಟಿ ಅದರ ಮೇಲೆ ೧ ಹಿಡಿ ಜುಟ್ಟುವೇಸೊಪ್ಪು ಹಾಕಿ ಮುಚ್ಚಳ ಮುಚ್ಚಿ ವಲೆಯಮೇಲೆ ಇಟ್ಟು ಉರಿಹಾಕಿ ಕಾಯಿಸಿ ಸೊಪ್ಪನ್ನು ತೆಗೆದು ರಸವನ್ನು ಶೋಧಿಸಿಕೊಳ್ಳುವದು. ಮೆಣಸು ೭, ಹೊಟ್ಟುಸುಲಿದ ಬೆಳ್ಳುಳ್ಳಿಯಿಲಕು ೭ ಇವುಗಳನ್ನು ಅರದು ಕಲಸಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ಉಪ್ಪಿಲ್ಲದ ಹಸುವಿನ ಮಜ್ಜಿಗೆ ಅನ್ನ ಕೊಡುವದು ಇದರಿಂದ ಪಾಂಡು ರೋಗ ಗುಣವಾಗುವದು.

೧೩. ಬಿಳೇಯಕ್ಕದಯಲೆ ೭||, ಮೆಣಸು ೩, ಈರುಳ್ಳಿ ತುಂಡುಮಾಡಿದ್ದು ೩ ಇವುಗಳನ್ನು ಖಲ್ವದಲ್ಲಿ ಹಾಕಿ ಅರದು ಬೆಳಿಗ್ಯೆಹೊತ್ತು ಗಜ್ಜುಗದ ಗಾತ್ರ ಕೊಡುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಮಸ್ತ ಪಾಂಡುರೋಗ ಗುಣವಾಗುವದು

೧೪. ಕೊತ್ತುಂಬರಿಸೊಪ್ಪಿನ ರಸ ೧ ಪಾವು, ಹೊನಗೊನೆಸೊಪ್ಪಿನ ರಸ ೧ ಪಾವು, ಗರುಗದಸೊಪ್ಪಿನ ರಸ ೧ ಪಾವು, ಹೊಮ್ಮುಗಳಿಸೊಪ್ಪಿನ ರಸ ೧ ಪಾವು, ಕೆರೇಹಿಪ್ಪಲಿಸೊಪ್ಪಿನ ರಸ ೧ ಪಾವು, ಹೇರಳೇಕಾಯಿ ರಸ ೧ ಪಾವು, ಸುರಸುರಿಕೆಸೊಪ್ಪಿನ ರಸ ೧ ಪಾವು ಇವುಗಳೆಲ್ಲವನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ಅದಕ್ಕೆ ರಾಯಿಪುಡಿ ಸಕ್ಕರೆ ೧|| ಶೇರು ಹಾಕಿ ವಲೆಯಮೇಲೆ ಇಟ್ಟು ಉರಿ ಹಾಕಿ ತಂತುಪಾಕ ಬಂದಕೂಡಲೇ ಜೀರಿಗೆ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ಯಾಲಕ್ಕಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಹಾಕಿ ಜೇನುತುಪ್ಪ ೧ ಪಾವು, ಹಸುವಿನತುಪ್ಪ || ಶೇರು ಹಾಕಿ ಪಕ್ವವಾಗಿ ಲೇಹವನ್ನು ಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ಯಲಚೀಬೀಜದ ಪ್ರಮಾಣ ತೆಗೆದು ಕೊಳ್ಳಬೇಕು. ಹೀಗೆ ಬೆಳಿಗ್ಯೆ ಸಾಯಂಕಾಲ ೧೪ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಿತ್ತ ಪಾಂಡು ಗುಣವಾಗುವದು.

೧೫. ಕುಪ್ಪೇಸೊಪ್ಪಿನಯಲೆ, ಹೊಟ್ಟುತೆಗೆದ ಬೆಳ್ಳುಳ್ಳಿ, ಮೆಣಸು ಇವು ಮೂರು ಸಮತೂಕ ತಂದು ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ಯಲಚೀಬೀಜದ ಗಾತ್ರ ಮಾತ್ರೆ ಮಾಡಿ ಹೊತ್ತಿಗೆ ೧ ಮಾತ್ರೆ ಬಿಸಿನೀರಿನಲ್ಲಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ಉಪ್ಪಿಲ್ಲದ ಗಂಜಿ ಅನ್ನ ಅಥವಾ ಉಪ್ಪಿಲ್ಲದ ಅನ್ನ ರೊಟ್ಟಿ ಹಸುವಿನತುಪ್ಪ ಕೊಡು ವದು. ಇದರಿಂದ ಪಾಂಡುರೋಗ ಗುಣವಾಗುವದು.

೧೬. ತಪಸಿಚಕ್ಕೆ ವಣಗಿದ್ದು ೧ ತೂಕ, ಮೆಣಸು ೧ ತೂಕ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ತೊಳಧ ಯಳ್ಳು ೧ ತೂಕ,

ತಾಟೇಬೆಲ್ಲ ೧ ತೊಲೆ ಇವುಗಳನ್ನೆಲ್ಲ ವರಳಲ್ಲಿ ಹಾಕಿ ಚನ್ನಾಗಿ ಕುಟ್ಟಿ ಮಂಡೂರ ಕಾಲುತೊಲೆ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ಯಲಚೀಬೀಜದ ಪ್ರಮಾಣ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಾಂಡು, ಕಾಮಾಲೆ, ಪಸರಿಕೆ ಗುಣವಾಗುವದು.

೧೭. ಗರುಗದಸೊಪ್ಪಿನಬೇರು, ಕೊಳವಳಿಕೆಬೇರು, ಬಿಳೀಕೊಮ್ಮೇಬೇರು, ಕೆಂಪುಕಾಚಿಬೇರು, ಸೈಂಧರಲವಣ, ಬಿಡಾಲವಣ, ಸೌವರ್ಚಲವಣ, ಪಾದರಿ ಲವಣ, ಚೌಳುಪ್ಪು, ಮೆಣಸು, ಬಾಲಮೆಣಸು, ವೋಮ, ಖುರಾಸಾನಿವೋಮ, ಚೋರವೋಮ, ತಾಳೀಸಪತ್ರೆ, ಶೊಂಟಿ, ಸೋಪುಬೀಜ, ಬಿಳೀಜೀರಿಗೆ, ಕರೇ ಜೀರಿಗೆ ಇವು ದಿನಸಿಗೆ ೧ ತೊಲೆ ಪ್ರಕಾರ ಕುಟ್ಟಿಚೂರ್ಣಮಾಡಿ ಶೋಧಿಸಿಕೊಳ್ಳು ವದು. ಮಂಡೂರ ೫ ತೊಲೆ ಇವು ಎಲ್ಲವನ್ನು ಕಲಸಿ ಹೊತ್ತಿಗೆ ೨ ಆಣೆ ತೂಕ ಚೂರ್ಣ ಜೇನುತುಪ್ಪದಲ್ಲಿ ಕಲಸಿ ಕೊಡಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಾಂಡು, ಕಾಮಾಲೆ, ಪಸರಿಕೆ ಗುಣವಾಗುವದು.

೧೮. ಶೊಂಟಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಕರೇ ಉಪ್ಪೇಚಕ್ಕೆ ೨ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೪ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಇದಕ್ಕೆ ಲೋಹಸಿಂಧೂರ ॥ ತೊಲೆ, ಮಂಡೂರ ॥ ತೊಲೆ ಹಾಕಿ ಗರುಗದಸೊಪ್ಪಿನ ರಸದಲ್ಲಿ ಅರಬು ಕಡಲೇಕಾಳು ಪ್ರಮಾಣ ಮಾತ್ರೆ ಮಾಡಿ ಹೊತ್ತಿಗೆ ೧ ಮಾತ್ರೆ ಜೇನುತುಪ್ಪದಲ್ಲಿ ಕಲಸಿ ಕೊಡಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೨೦-೪೦ ದಿನ ಕೊಡುವದು. ಇದಕ್ಕೆ ಪಥ್ಯ ತೋಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಾಂಡು, ಕಾಮಾಲೆ ಗುಣ ವಾಗುವದು.

೧೯. ಶೊಂಟಿ, ಮೆಣಸು, ಹಿಪ್ಪಲಿ, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಯಷ್ಟಿಮಧುಕ, ಅಮೃತಬಳ್ಳಿ, ಚಿತ್ರಮೂಲ, ಭದ್ರಮುಸ್ತೆ ಇವು ದಿನಸಿಗೆ ॥ ತೊಲೆ, ವಾಯುವಿಳಂಗ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಮಂಡೂರ ೨॥ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಗರುಗದಸೊಪ್ಪಿನ ರಸದಲ್ಲಿ ಅರದು ಕಡಲೇಕಾಳು ಪ್ರಮಾಣ ಮಾತ್ರೆ ಮಾಡು ವದು. ಹೊತ್ತಿಗೆ ೧ ಮಾತ್ರೆ ಜೇನುತುಪ್ಪದಲ್ಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೧೪ ದಿನ ಕೊಡಬೇಕು ಇದಕ್ಕೆ ಪಥ್ಯ ಉಪ್ಪಿಲ್ಲದ ಹಸುವಿನ ಮಜ್ಜಿಗೆ ಅನ್ನ. ಇದರಿಂದ ಪಾಂಡು, ಕಾಮಾಲೆ ಗುಣವಾಗುವದು.

೨೦. ಮಂಡೂರವಟಕ:—ತ್ರಿಫಲೆ, ತ್ರಿಕಟುಕ, ಚವ್ಯ, ಮೋಡಿ, ಚಿತ್ರಮೂಲ, ತುಪ್ಪದದೇವದಾರು, ಲವಂಗಚಕ್ಕೆ, ಮರದರಿಸಿನ, ತುಂಗೇಗಡ್ಡೆ, ವಾಯುವಿಳಂಗ ಇವು ಜಿನಸಿಗೆ ।।। ತೊಲೆ ತಂದು ಕುಟ್ಟಿ ಚೂರ್ಣಮಾಡಿ ಗೋಮೂತ್ರದಲ್ಲಿ ಬೇಯಿಸಿ ಖಲ್ವದಲ್ಲಿ ಹಾಕಿ ಇದಕ್ಕೆ ಹೇಮಮಾಕ್ಷಿಕ ಭಸ್ಮ ।।। ತೊಲೆ, ಲೋಹಮಂಡೂರ ೧೦।। ತೊಲೆ ಹಾಕಿ ಚನ್ನಾಗಿ ಅರದು ಕಡಲೇಪ್ರಮಾಣ ಮಾತ್ರೆ ಮಾಡಿ ಮಜ್ಜಿಗೆ ಅನುಪಾನದಲ್ಲಿ ಕೊಡುವದು. ಹೀಗೆ ೭-೧೪ ದಿನ ಬೆಳಿಗ್ಯೆ ಸಾಯಂಕಾಲ ಕೊಡುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕಾಮಾಲೆ, ಪಾಂಡು, ಪ್ರಮೇಹ, ಮೂಲರೋಗ, ಊತ, ಕುಷ್ಠ, ಕಫವಿಕಾರಗಳು, ಅಜೀರ್ಣ, ಪ್ಲೀಹ ಇವು ಗುಣವಾಗುವದು.

೨೧. ಲೋಹಾಸವ:—ಲೋಹಭಸ್ಮ, ಶೊಂಟಿ, ಮೆಣಸು, ಹಿಪ್ಪಲಿ, ತ್ರಿಫಲೆ, ಅಜಾಮೊದ, ವಾಯುವಿಳಂಗ, ತುಂಗೇಗಡ್ಡೆ, ಚಿತ್ರಮೂಲ ಇವು ಜಿನಸಿಗೆ ೧೨ ತೊಲೆ, ಧಾತಕಿಕುಸುಮ ೬೦ ತೊಲೆ, ಇವುಗಳನ್ನು ಚೂರ್ಣಮಾಡಿ ೬೪ ಪಲ ಜೇನುತುಪ್ಪ, ೧೦೦ ಪಲ ಬೆಲ್ಲ, ೨ ದ್ರೋಣ ನೀರುಹಾಕಿ ಇವುಗಳನ್ನೆಲ್ಲ ತುಪ್ಪದ ಮಡಿಕೆಯಲ್ಲಿ ಹಾಕಿ ಮುಚ್ಚಳಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ೧ ತಿಂಗಳು ಇಟ್ಟಿರುವದು. ಆಮೇಲೆ ಚೀಲುಮಣ್ಣು ತೆಗದು ಉಪಯೋಗ ಮಾಡುವದು. ಹೊತ್ತಿಗೆ ಕಾಲುತೊಲೆಯಿಂದ ।। ತೊಲೆವರಿವಿಗೆ ಕೊಡಬೇಕು. ಈರೀತಿ ೨೦-೪೦ ದಿವಸ ೨ ಹೊತ್ತು ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಅಗ್ನಿದೀಪನವಾಗಿ ಪಾಂಡುರೋಗ, ಗುಲ್ಮ, ಹೃದ್ರೋಗ, ಮೂಲವ್ಯಾಧಿ, ಕುಷ್ಠ, ಪ್ಲೀಹರೋಗ, ಉದರರೋಗ, ಕೆಮ್ಮು, ಉಬ್ಬಸ, ಅರುಚಿ ಇವು ಗುಣವಾಗುವದು.

೨೨ ಪುನರ್ನವಾದಿ ಕಷಾಯ:— ಬಿಳೇಕೊಮ್ಮೆ, ಅಳಲೇಕಾಯಿಸಿಪ್ಪೆ, ಬೇವಿನಚಕ್ಕೆ, ಮರದರಿಸಿನ, ಕಟುಕರೋಹಿಣಿ, ಕಹಿಪಡವಲ, ಅಮೃತಬಳ್ಳಿ, ಶೊಂಟಿ ಇವುಗಳನ್ನು ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಇದರಲ್ಲಿ ಸ್ವಲ್ಪ ಗೋಮೂತ್ರ ಬೆರಸಿ ಕುಡಿಸಲು ಪಾಂಡುರೋಗ, ಖಾಸರೋಗ, ಉದರರೋಗ, ಶ್ವಾಸರೋಗ, ಪಿತ್ತಶೂಲೆರೋಗ, ಶರೀರವೂತ ಇವು ಗುಣವಾಗುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ.

೨೩. ಬಿಳೇವುಪ್ಪಿಚಕ್ಕೆ ೪ ತೊಲೆ, ಕರೇವುಪ್ಪಿಚಕ್ಕೆ ೪ ತೊಲೆ, ಮೆಣಸು ೨ ತೊಲೆ ಇವು ಮೂರು ಕುಟ್ಟಿ ಚೂರ್ಣಮಾಡಿ ಶೋಧಿಸಿ ಮಂಡೂರ ೨।। ತೊಲೆ ಹಾಕಿ ಎಲ್ಲವನ್ನು ಕಲಸಿ ಹೊತ್ತಿಗೆ ೨ ಆಣೆ ತೂಕ ಚೂರ್ಣ ಜೇನುತುಪ್ಪದಲ್ಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭-೧೪ ದಿನ

ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಸರಿಕೆ, ಪಾಂಡು ಗುಣವಾಗುವದು.

೨೪ ಕೆಂಪುವೃತ್ತರೇಣಿಸೊಪ್ಪು ತಂದು ಕುಟ್ಟಿ ಬಟ್ಟೆಯಲ್ಲಿ ಶೋಧಿಸಿ ಕೊಂಡ ರಸ ೧ ಸೊಲಿಗೆ, ಹಳೇಬೆಲ್ಲ ಹಸೀ ಅಡಿಕೆಗಾತ್ರ ಇವು ಎರಡು ಕಲಸಿ ಬೆಳಿಗ್ಗೆಹೊತ್ತು ಕುಡಿಯುವದು. ಹೀಗೆ ಬೆಳಿಗ್ಯೆಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ಸಪ್ಪೆ ಅನ್ನ. ಇದರಿಂದ ಊದುಪಾಂಡು ಗುಣವಾಗುವದು.

೨೫. ದೊಡ್ಡಮರದಚಕ್ಕೆ ೧ ಪಾವು, ಮೋಡಿ ೧ ಪಾವು ಇವು ಎರಡು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇದಕ್ಕೆ ಮಂಡೂರ ೧ ತೊಲೆ ಶೇರಿಸಿ ಎಲ್ಲವನ್ನು ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ೨ ಆಣೆ ತೂಕ ಚೂರ್ಣವನ್ನು ಜೇನು ತುಪ್ಪದಲ್ಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೨೦-೪೦ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಾಂಡು, ಶೋಭೆ, ಪಸರಿಕೆ, ಕಾಮಾಲೆ ಗುಣವಾಗುವದು.

೨೬. ಲವಂಗ ೧ ತೊಲೆ, ಹಿಪ್ಪಲಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿಕೊಳ್ಳುವದು. ಬಾಣಂತಿಬೋಳ ೨ ಆಣೆ ತೂಕ, ಗಜ್ಜುಗದ ಕುಡಿ ೧ ಹಿಡಿ ಇವು ಎಲ್ಲವನ್ನು ಖಲ್ವದಲ್ಲಿ ಹಾಕಿ ತಣ್ಣೀರಿನಲ್ಲಿ ಅರದು ಯಲಚೀ ಬೀಜದಷ್ಟು ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಜೇನುತುಪ್ಪದಲ್ಲಿ ಕಲಸಿಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ಮಜ್ಜಿಗೆ ಅನ್ನ. ಇದರಿಂದ ಹಸುರುಕಾಮಾಲೆ, ಊದುಕಾಮಾಲೆ, ಪಾಂಡು ಗುಣವಾಗುವದು

೨೭. ಬಿಳೀವುಪ್ಪಿಚಕ್ಕೆ, ಗರುಗದಸೊಪ್ಪು, ನೀರುಬೊಮ್ಮಸೊಪ್ಪು ಇವು ಸಮವಾಗಿ ಅರದದ್ದು ಗಜ್ಜುಗದಗಾತ್ರ, ಇದಕ್ಕೆ ಕಲ್ಕದ್ರವ್ಯ ಲವಂಗ, ಯಾಲಕ್ಕಿ, ಜೀರಿಗೆ ಇವುಗಳನ್ನು ಹಸುವಿನಹಾಲಿನಿಂದ ಅರದು ಕೊಡುವದು. ಹೀಗೆ ಬೆಳಿಗ್ಯೆ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ಹಸುವಿನ ಹಾಲು ಅನ್ನ. ಇದರಿಂದ ಊದುಕಾಮಾಲೆ, ಶೋಭೆ, ಕಾಮಾಲೆ, ಪಾಂಡು ಗುಣವಾಗುವದು.

೨೮. ಬಿಳೀಜೀರಿಗೆ ೬ ತೊಲೆ, ಯಾಲಕ್ಕಿ ೧। ತೊಲೆ, ಹಿಪ್ಪಲಿ ೧। ತೊಲೆ, ಶೊಂಟಿ ೧। ತೊಲೆ, ಬಾಣಂತಿಬೋಳ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿ ಇದಕ್ಕೆ ಸಮ ರಾಯಪುಡಿ ಸಕ್ಕರೆ ಹಾಕಿ ಕಲಸಿ ಹೊತ್ತಿಗೆ ೩ ಬೆರಳಿನಲ್ಲಿ ಬಂದಷ್ಟು ಚೂರ್ಣ ಹಸುವಿನ ಹಾಲಿನಲ್ಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ಹಸುವಿನಹಾಲು ಅನ್ನ. ಇದರಿಂದ ಪಾಂಡುರೋಗ ಗುಣವಾಗುವದು.

೨೯. ವ್ಯೋಷಾದಿ ವಟಿಕ:— ಶೊಂಟಿ, ಹಿಪ್ಪಲಿ, ಮೆಣಸು, ವಾಯುವಿಳಂಗ, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ತುಂಗೇಗಡ್ಡೆ

ಇವು ಜಿನಸಿಗೆ ೧ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇದಕ್ಕೆ ಮಂಡೂರ ‖ ತೊಲೆ ಶೇರಿಸಿ ಎಲ್ಲವನ್ನು ಕಲಸಿ ಖಲ್ವದಲ್ಲಿ ಹಾಕಿ ಗರುಗದಸೊಪ್ಪಿನ ರಸದಲ್ಲಿ ಅರದು ಕಡಲೇಕಾಳಷ್ಟುಗಾತ್ರ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಜೇನುತುಪ್ಪದಲ್ಲಿ ಕಲಸಿಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕಾಮಾಲೆ, ಪಾಂಡು, ಹೃದ್ರೋಗ ಗುಣವಾಗುವದು.

೩೦. ಬಿಳೇಕೊಮ್ಮೆಬೇರು, ಮರದರಿಸಿನ, ಅಳಲೇಕಾಯಿಸಿಪ್ಪೆ, ಅಮೃತಬಳ್ಳಿ, ತುಪ್ಪದದೇವದಾರು, ಶುದ್ಧಿಮಾಡಿದ ಮೈಸಾಕ್ಷಿ ಗುಗ್ಗುಳ ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಒಂದು ಬಾಂಡ್ಲಿಯಲ್ಲಿ ಹಾಕಿ ಮೇಕೆ ಮೂತ್ರ ||| ಶೇರುಹಾಕಿ ವಲೆಯಮೇಲಿಟ್ಟು ಕಾಯಿಸಿ ಖಲ್ವದಲ್ಲಿ ಹಾಕಿ ಅರದು ಯಲಚೀಬೀಜದಷ್ಟು ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಬಿಸಿನೀರಿನಲ್ಲಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶೋಭೆ, ಪಾಂಡು, ಕೀಲುವಾಯು ಗುಣವಾಗುವದು.

೩೧. ಅಳಲೇಕಾಯಿಸಿಪ್ಪೆ ೧ ತೊಲೆ, ಶೊಂಟಿ ೨ ತೊಲೆ, ಬಿಳೇಕೊಮ್ಮೆಬೇರು ೩ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿಕೊಂಡು ೧ ಹಣತೂಕ ಮಂಡೂರ, ಗೋಮೂತ್ರ ‖ ತೊಲೆ, ಜೇನುತುಪ್ಪ ಕಾಲುತೊಲೆ ಹಾಕಿ ಬೆಳಿಗ್ಯೆಹೊತ್ತು ಕೊಡುವದು. ಈರೀತಿ ಬೆಳಿಗ್ಯೆಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶೋಭೆ, ಪಾಂಡು, ಕಾಮಾಲೆ ಗುಣವಾಗುವದು.

೩೨. ಮಂಡೂರವಟಕ :—ಶೊಂಟಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ತುಪ್ಪದದೇವದಾರು ೧ ತೊಲೆ, ಮರದರಿಸಿನ ೧ ತೊಲೆ, ಚಿತ್ರಮೂಲ ೧ ತೊಲೆ, ವಾಯುವಿಳಂಗ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಮಂಡೂರ ೨‖ ತೊಲೆ ಹಾಕಿ ಗರುಗದಸೊಪ್ಪಿನ ರಸದಲ್ಲಿ ಅರದು ಕಡಲೇಕಾಳು ಪ್ರಮಾಣ ಮಾತ್ರೆ ಕಟ್ಟುವದು. ಹೊತ್ತಿಗೆ ೧ ಮಾತ್ರೆ ಬೆಳಿಗ್ಯೆ ಸಾಯಂಕಾಲ ೭-೧೪ ದಿವಸ ಈ ಅನುಪಾನಗಳಲ್ಲಿ ಕೊಡುವದು. ಜೇನುತುಪ್ಪ, ಹಸುವಿನ ಹಾಲು, ಬಿಸಿನೀರು, ಹಸೀಶೊಂಟಿ ರಸ ಇವುಗಳಲ್ಲಿ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಾಂಡು, ಕಾಮಾಲೆ, ಶೋಭೆ, ಮಹೋದರ ಗುಣವಾಗುವದು.

೩೩. ಬಿಳೇವುಪ್ಪಿಚಕ್ಕೆ, ಕರೇವುಪ್ಪಿಚಕ್ಕೆ, ಮಂಗಾರಿಬೇರು, ಬಿಲ್ಪತ್ರಿ ಬೇರು, ಅಳಲೇಕಾಯಿಸಿಪ್ಪೆ, ಮೆಣಸು, ಶೊಂಟಿ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯುವದು. ಹೀಗೆ ಬೆಳಿಗ್ಯೆ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಾಂಡುರೋಗ ಗುಣವಾಗುವದು.

೩೪. ಅಳಲೇಕಾಯಿಸಿಪ್ಪೆ, ನೆಲ್ಲೀಕಾಯಿ, ತುಂಗೇಗಡ್ಡೆ, ಲಾವಂಚ, ನಾಗ ಕೇಸರಿ, ಅತಿಮಧುರ, ಕಲ್ಲುನಾರುಭಸ್ಮ, ಕರ್ಪೂರಶಿಲಾಜಿತುಭಸ್ಮ, ಮುಡಿವಾಳ, ದುಂಪರಾಸ್ಮೆ, ಶ್ರೀಗಂಧದಚಕ್ಕೆ, ಕಚೋರ, ಪಚ್ಚೆಸೊಪ್ಪು, ಸೋಪುಬೀಜ, ಕೊತ್ತಂಬರಿಬೀಜ, ಬಿಳೇಜೀರಿಗೆ, ದ್ರಾಕ್ಷಿ, ಕರೇಜೀರಿಗೆ, ವೋಮ, ಖುರಾಸಾನಿ ವೋಮ, ಲವಂಗ, ದಾಲಚಿನ್ನಿ, ಮೆಣಸು, ಯಾಲಕ್ಕಿ, ಜಾಕಾಯಿ, ವೋಡಿ, ಹಿಪ್ಪಲಿ, ಕಸ್ತೂರಿಅರಿಸಿನ, ಜಾಪತ್ರೆ, ಶೊಂಟಿ ಇವು ಜಿನಸಿಗೆ ೧ ತೊಲೆ, ಆನೇ ನೆಗ್ಗಿಲುಸಮೂಲ ॥ ಶೇರು, ಸಣ್ಣನೆಗ್ಗಿಲು ೧ ಪಾವು, ಮಜ್ಜಿಗೆಗಡ್ಡೆ ೧ ಪಾವು ಇವು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಒಂದು ಬಾಂಡ್ಲಿಯಲ್ಲಿ ರಾಯಿಪುಡಿಸಕ್ಕರೆ ೨| ಶೇರುಹಾಕಿ ನೀರುಹಾಕಿ ವಲೆಯಮೇಲೆ ಇಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣಹಾಕಿ ಪಕ್ವವಾಗಿ ಲೇಹಮಾಡಿ ಜೇನುತುಪ್ಪ ೧ ಪಾವು, ಹಸುವಿನತುಪ್ಪ ॥ ಶೇರು ಹಾಕಿ ಕಲಸಿ ಇಟ್ಟುಕೊಳ್ಳು ವದು. ಹೊತ್ತಿಗೆ ಯಲಚೀಬೀಜದ ಪ್ರಮಾಣ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೨೦-೪೦ ದಿನ ತೆಗೆದುಕೊಳ್ಳಬೇಕು. ಇಚ್ಛಾಪತ್ಯ, ಶಲದಿಪದಾರ್ಥ ವರ್ಜಿತ. ಇದರಿಂದ ಕಾಮಾಲೆ, ಪಾಂಡು, ಮೇಹವಾಯು, ಕೀಲುವಾಯು, ಗುಣವಾಗಿ ಧಾತುವೃದ್ಧಿ ಆಗುವದು.

೩೫. ಕಿರುನೆಲ್ಲಿಸಮೂಲ ವಣಗಿದ್ದು, ಬಿಳೇಕೊಮ್ಮೇಬೇರು, ತಾಳೀಸಪತ್ರಿ, ಲವಂಗ, ಜಾಕಾಯಿ ಇವು ಸಮಭಾಗತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ಕಾಲುತೊಲೆ ಚೂರ್ಣ ಹಸುವಿನಹಾಲಿನಲ್ಲಿ ಕಲಸಿಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ಹಸುವಿನಹಾಲು ಅನ್ನ. ಇದರಿಂದ ಕಾಮಾಲೆ, ಪಸರಿಕೆ ಗುಣವಾಗುವದು.

೩೬. ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಚಿತ್ರಮೂಲ, ನೀರುಬೊಮ್ಮೆಸೊಪ್ಪು, ಬಿಳೇಕೊಮ್ಮೇಬೇರು, ಶೊಂಟಿ ಇವು ಸಮಭಾಗ ತಂದು ಕುಟ್ಟಿ ಹಸುವಿನಮೂತ್ರಹಾಕಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಇದಕ್ಕೆ ೨ ಆಣಿ ತೂಕ ಮಂಡೂರಹಾಕಿ ಕಲಸಿ ಕುಡಿಯುವದು. ಹೀಗೆ ಬೆಳಿಗ್ಯೆ ಹೊತ್ತು ೭ ದಿವಸ ಕೊಡುವದು. ಇದಕ್ಕೆ ಪತ್ಯ ಹಸುವಿನಹಾಲು ಅನ್ನ. ಇದರಿಂದ ಶೋಭೆ, ಪಾಂಡು ಗುಣವಾಗುವದು.

೩೭. ಅಳಲೇಕಾಯಿಸಿಪ್ಪೆ, ದೊಡ್ಡಗುಳ್ಳ, ರಾಮಗುಳ್ಳ, ಕಕ್ಕೆಚಕ್ಕೆ, ಬಿಳೇಕೊಮ್ಮೇಬೇರು, ನೀರುಬೊಮ್ಮೇಸೊಪ್ಪು, ಶೊಂಟಿ ಇವು ಸಮಭಾಗ ತಂದು ಕುಟ್ಟಿ ಮೇಕೆಮೂತ್ರಹಾಕಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯುವದು. ಹೀಗೆ ಬೆಳಿಗ್ಯೆಹೊತ್ತು ೭ ದಿನ ಕೊಡುವದು. ಇದಕ್ಕೆ ಪತ್ಯ ಹಸುವಿನ ಹಾಲು ಅನ್ನ. ಇದರಿಂದ ಶೋಭೆ, ಪಾಂಡು ಗುಣವಾಗುವದು.

೩೮. ಕಕ್ಕೇಚಕ್ಕೆ, ಶೊಂಟಿ, ಅಳಲೇಕಾಯಿಸಿಪ್ಪೆ, ಬಿಳೇಕೊಮ್ಮೇ ಬೇರು ಇವು ಸಮಭಾಗ ತಂದು ಕುಟ್ಟಿ ಮೇಕೆಮೂತ್ರಹಾಕಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಇದಕ್ಕೆ ೨ ಆಣೆತೂಕ ಮಂಡೂರಹಾಕಿ ಕಲಸಿ ಕುಡಿಯುವದು. ಹೀಗೆ ಬೆಳಿಗ್ಯೆಹೊತ್ತು ೭ ದಿವಸ ಕೊಡುವದು. ಇದಕ್ಕೆ ಪತ್ಯ ಹಸುವಿನ ಹಾಲು ಅನ್ನ. ಇದರಿಂದ ಶೋಭೆ, ಪಾಂಡು ಗುಣವಾಗುವದು.

೩೯. ಕೊಳವಳಿಕೆಬೇರು, ನೀರುಬೊಮ್ಮೇಬೇರು, ಶೀಸೋರೇಕಾಯಿಬೇರು, ಬೇವಿನಬೇರಿನಚಕ್ಕೆ, ಶೊಂಟಿ, ಹಿಪ್ಪಲಿ, ಅಳಲೇಕಾಯಿಸಿಪ್ಪೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯುವದು. ಹೀಗೆ ಬೆಳಿಗ್ಯೆಹೊತ್ತು ೭ ದಿವಸ ಕೊಡುವದು. ಇದಕ್ಕೆ ಪತ್ಯ ಹಸುವಿನಹಾಲು ಅನ್ನ. ಇದರಿಂದ ಪಾಂಡು, ಶೋಭೆ ಗುಣವಾಗುವದು

೪೦. ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಅರಸಿನ ॥ ತೊಲೆ, ಮರದರಿಸಿನ ೧ ತೊಲೆ, ಕಟುಕರೋಹಿಣಿ ೧ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಲೋಹಭಸ್ಮ ೧ ತೊಲೆ ಹಾಕಿ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ೨ ಆಣೆತೂಕ ಚೂರ್ಣ ಜೇನುತುಪ್ಪದಲ್ಲಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕಾಮಾಲೆ ಗುಣವಾಗುವದು.

೪೧. ಅಮೃತಬಳ್ಳಿ ೨ ತೊಲೆ, ಮೆಣಸು ೧ ತೊಲೆ, ಹೊಟ್ಟುಸುಲಿದ ಬೆಳ್ಳುಳ್ಳಿ ॥ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಹೊತ್ತಿಗೆ ಕಾಲುತೊಲೆ ಚೂರ್ಣವನ್ನು ಮೇಕೆಹಾಲಿನಲ್ಲಿ ಕಲಸಿ ಕುಡಿಯುವದು. ಹೀಗೆ ಬೆಳಿಗ್ಯೆಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶೋಭೆ, ಕಾಮಾಲೆ ಗುಣವಾಗುವದು.

೪೨. ಕಕ್ಕೆಯಲೆರಸ, ನೆಲಕುಂಬಳದ ಗಡ್ಡೆರಸ, ನೆಲ್ಲೀಕಾಯಿ ರಸ, ಕೊಳವಳಿಕೆಬೇರಿನ ರಸ ಇವು ನಾಲ್ಕು ರಸ ಒಂದಾಗಿಸೇರಿಸಿದ್ದು ೪ ತೊಲೆ, ತ್ರಿಕಟುಕಚೂರ್ಣ ೧ ತೊಲೆ ಹಾಕಿ ಅರೆದು ಕೊಡುವದು. ಹೀಗೆ ಬೆಳಿಗ್ಯೆಹೊತ್ತು

೭ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕಾಮಾಲೆ ಗುಣವಾಗುವದು.

೪೩. ನೆಲಕುಂಬಳದಸೊಪ್ಪು ತಂದು ಕುಟ್ಟಿ ಸ್ವಲ್ಪ ಬಿಳೇಬೆಲ್ಲಹಾಕಿ ಹಸುವಿನ ಮೊಸರಿನಲ್ಲಿ ಅರದು ಗಜ್ಜುಗದಗಾತ್ರ ಮಾತ್ರೆಮಾಡಿ ಬೆಳಿಗ್ಯೆ ೧ ಮಾತ್ರೆ ಬಿಸಿನೀರಿನಲ್ಲಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಊದುಕಾಮಾಲೆ ಗುಣವಾಗುವದು.

೪೪. ಮುತ್ತುಗದಹುವ್ವು ||| ತೊಲೆ ತಂದು ಒಂದು ಹೊಸಮುಚ್ಚಳದಲ್ಲಿ ಹಾಕಿ ನೀರಿನಲ್ಲಿ ಕಲಸಿ ರಾತ್ರಿಮಂಜಿನಲ್ಲಿ ಇಟ್ಟುಬಿಡುವದು. ಬೆಳಿಗ್ಯೆಹೊತ್ತು ತೆಗೆದು ಚನ್ನಾಗಿ ಹಿಸಿಕಿ ಬಟ್ಟೆಯಲ್ಲಿ ಶೋಧಿಸಿಕೊಂಡು ಕಾಲುತೊಲೆ ಕಲ್ಲುಸಕ್ಕರೆ ಹಾಕಿ ಕುಡಿಯುವದು. ಹೀಗೆ ಬೆಳಿಗ್ಯೆಹೊತ್ತು ೭ ದಿನ ಕೊಡುವದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಾಂಡು, ಕಾಮಾಲೆ, ಪಸರಿಕೆ ಗುಣವಾಗುವದು.

೪೫. ಕೊಳವಳಿಕೆಬೇರು, ಕಿರುನೆಲ್ಲಿಸೊಪ್ಪು, ಮರಕಾಡೆಸೊಪ್ಪು, ತೊಂಡೇಗಡ್ಡೆ, ಹುವ್ವರಸಿಚಕ್ಕೆ, ಗರುಗದಸೊಪ್ಪು, ತೊಟ್ಲಬೇರು, ನೆಗ್ಗಿಲಬೇರು, ಪುಲ್ಲಂಪುರುಸೇಸೊಪ್ಪು, ಚಿಲಕೀರೇಬೇರು, ರಾಮಗುಳ್ಳದಬೇರು, ದೊಡ್ಡಮರದಚಕ್ಕೆ, ಹಿಪ್ಪಲಿ, ಅಳಲೇಕಾಯಿಸಿಪ್ಪೆ, ಕರೇಜೀರಿಗೆ, ಬಿಳೇಜೀರಿಗೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವದು. ಬೆಳಿಗ್ಯೆಹೊತ್ತು ಅರಪಾವು ಕಷಾಯ ಸ್ವಲ್ಪ ಜೇನುತುಪ್ಪಹಾಕಿ ಕಲಸಿ ಕುಡಿಯುವದು. ಹೀಗೆ ಬೆಳಿಗ್ಯೆಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಶೋಭೆ, ಕಾಮಾಲೆ, ಪಾಂಡು, ಮಹೋದರ, ಪಸರಿಕೆ ಗುಣವಾಗುವದು.

---

## ಇಪ್ಪತ್ತೆರಡನೆಯ ಅಧ್ಯಾಯ.

### ರಕ್ತಪಿತ್ತರೋಗ—ಔಷಧಗಳು.

#### ರಕ್ತಪಿತ್ತರೋಗ ಲಕ್ಷಣ.

ಮಿಥ್ಯಾಹಾರ ವಿಹಾರಾದಿಗಳಿಂದ ಪಿತ್ತವು ಪ್ರಕೋಪವನ್ನು ಹೊಂದಿ ರಕ್ತವನ್ನು ದುಷ್ಟವಾಗಿಮಾಡಿ ಊರ್ಧ್ವಭಾಗದಿಂದಲೂ, ಅಧೋಭಾಗದಿಂದಲೂ ಸ್ರಾವವನ್ನುಂಟುಮಾಡುವದು. ಊರ್ಧ್ವಭಾಗದಲ್ಲಿ ಮೂಗು, ನೇತ್ರಗಳು,

ಕರ್ಣಗಳು ಇವುಗಳಿಂದಲೂ, ಅಧೋಭಾಗದಲ್ಲಿ ಶಿಶ್ನ, ಯೋನಿ, ಗುದ ಇವುಗಳಿಂದ ರಕ್ತವು ಸ್ರವಿಸುವುದು. ಮತ್ತು ಈ ಎರಡು ಕಡೆಗಳಿಂದಲೂ ಸಹ ರಕ್ತವು ಸ್ರವಿಸುವುದು ಇದೇ ರಕ್ತಪಿತ್ತವೆಂಬುವುದು. ಇದು ವಾತ, ಪಿತ್ತ, ಕಫಗಳಿಂದುತ್ಪನ್ನವಾಗಿ ಮೂರುವಿಧವಾಗಿ ವ್ಯವಹರಿಸಲ್ಪಡುವುದು. ಅಂತಹ ರಕ್ತಪಿತ್ತವು ಊರ್ಧ್ವಗಾಮಿಯೆಂತಲೂ, ಅಧೋಗಾಮಿಯೆಂತಲೂ, ಉಭಯಗಾಮಿಯೆಂತಲೂ ಮೂರುವಿಧ. ಅದರಲ್ಲಿ ಊರ್ಧ್ವಗಾಮಿಯು ಕಫಸಂಬಂಧವುಳ್ಳದ್ದಾಗಿಯೂ, ಅಧೋಗಾಮಿಯು ವಾತಸಂಬಂಧವುಳ್ಳದ್ದಾಗಿಯೂ, ಉಭಯಗಾಮಿ ಉಭಯಸಂಬಂಧವುಳ್ಳದ್ದಾಗಿಯೂ ಇರುವುದು.

## ರಕ್ತಪಿತ್ತದಲ್ಲಿ ಅಸಾಧ್ಯಲಕ್ಷಣ.

೧. ಬಾಯಿಯಲ್ಲಿಯೂ ಗುದದ್ವಾರದಲ್ಲಿಯೂ ಸಹ ರಕ್ತಬೀಳುತ್ತಿದ್ದರೆ ಆ ರಕ್ತಪಿತ್ತವು ಅಸಾಧ್ಯವು.

೨. ತ್ರಿದೋಷದಿಂದ ಹುಟ್ಟಿ ಅಗ್ನಿಮಾಂದ್ಯವುಳ್ಳ ರಕ್ತಪಿತ್ತವು ಅಸಾಧ್ಯವು.

೩. ವ್ಯಾಧಿಯಿಂದ ಕ್ಷೀಣನಾಗಿ ಭೋಜನವಿಲ್ಲದೆ ಇರುವ ವೃದ್ಧನಾದ ಮನುಷ್ಯನಿಗೆ ಈ ರಕ್ತಪಿತ್ತವು ಇದ್ದರೆ ಅಸಾಧ್ಯವು

೪. ರಕ್ತಕ್ಷಯವಾಗಿ ಅಂತರಿಕ್ಷವು ತಲೇಮೇಲೆ ಬೀಳುವಂತೆ ಕಾಣುವ ರಕ್ತಪಿತ್ತವು ಅಸಾಧ್ಯವು.

## ಓಕರಿಕೆ ರಕ್ತಪಿತ್ತದಲ್ಲಿ ಅಸಾಧ್ಯ ಲಕ್ಷಣ.

೧. ರಕ್ತವಾಂತಿ, ಕಣ್ಣುಕೆಂಪು, ರಕ್ತದೋಷಾದಿಯಲ್ಲಿ ಕೆಂಪಾಗಿ ದಿಕ್ಕುಗಳು ಕಾಣುವದು, ಇವುಗಳುಳ್ಳ ರಕ್ತಪಿತ್ತವೂ ಓಕರಿಕೆಯೂ ಅಸಾಧ್ಯವು.

೨. ಇಂದ್ರಚಾಪದ (ಕಾಮನಬಿಲ್ಲು) ರಂಗಿನಂತೆ ಅತಿರಕ್ತಸ್ರಾವವು, ಅನೇಕರೂಪ ಕಾಣೋದು, ಕಿವಿ, ಮುಖ, ಹೃದಯ, ರೋಮಕೂಪಗಳಲ್ಲಿ ರಕ್ತಸ್ರಾವವು, ಹೊದ್ದಬಟ್ಟೆಯಲ್ಲಿ ಅತಿದುರ್ಗಂಧಗಳುಳ್ಳ ರಕ್ತಪಿತ್ತವು, ಓಕರಿಕೆಯು ಅಸಾಧ್ಯವು

## ರಕ್ತಪಿತ್ತ ಚಿಕಿತ್ಸೆಗಳು.

೧. ಕಕ್ಕೇಬಂಕೆ, ನೆಲ್ಲೀಕಾಯಿ ಇವುಗಳನ್ನು ಕಷಾಯವಿಟ್ಟು ಅದರಲ್ಲಿ ಜೇನುತುಪ್ಪ, ಸಕ್ಕರೆ ಬೆರಸಿ ಸೇವಿಸಿದರೂ, ಅಥವಾ ಬಿಳೇತಿಗಡೆ, ಅಳಲೇಕಾಯಿ ಇವುಗಳ ಕಷಾಯವಿಟ್ಟು ಅದರಲ್ಲಿ ಜೇನುತುಪ್ಪ, ಸಕ್ಕರೆ, ಬೆರಸಿ ಸೇವಿಸಿದರೂ ಬೇದಿಗಳಾಗಿ ಊರ್ಧ್ವಗತವಾದ ರಕ್ತಪಿತ್ತವು ಪರಿಹಾರವಾಗುವದು.

೨. ದಾಳಿಂಬರೆ ಹುವ್ವಿನರಸ, ಗರಿಕೆರಸ, ಹಸೇವಾವಿನಬೀಜದರಸ, ಬಿಳೀ ಈರುಳ್ಳಿ ರಸ ಇವುಗಳಲ್ಲಿ ಯಾವುದನ್ನಾದರೂ ಮೂಗಿನಲ್ಲಿ ಹಾಕಲು ಮೂಗಿನಿಂದ ಸೋರುತ್ತಿರುವ ರಕ್ತರೋಗವು ನಿವಾರಣೆಯಾಗುವುದು.

೩. ಆಡುಸೋಗೆ ರಸದಲ್ಲಿ ಜೇನುತುಪ್ಪ, ಸಕ್ಕರೆಗಳನ್ನು ಕಲೆಸಿ ಸೇವಿಸಲು ಅಧಿಕ ಘೋರವಾದ ರಕ್ತಪಿತ್ತವು ಪರಿಹಾರವಾಗುವುದು.

೪. ಮುಡಿವಾಳ, ಕೊತ್ತಂಬರೀಬೀಜ, ಶೊಂಟಿ, ಶ್ರೀಗಂಧ, ಅತಿಮಧುರ, ಆಡುಸೋಗೆ ರಸ, ಕರೇಲಾವಂಚ ಇವುಗಳನ್ನು ಸಮಭಾಗವಾಗಿ ಕುಟ್ಟಿ ಕಷಾಯ ಮಾಡಿ ಅದರಲ್ಲಿ ಸಕ್ಕರೆ ಜೇನುತುಪ್ಪಗಳನ್ನು ಸೇರಿಸಿ ಸೇವಿಸಲು ರಕ್ತಪಿತ್ತವು ಶಮನವಾಗುವುದಲ್ಲದೆ ದಾಹ, ಪಿತ್ತ, ಜ್ವರ ಇವುಗಳೆಲ್ಲ ಗುಣವಾಗುವುವು.

೫. ಆಡುಸೋಗೆ, ದ್ವೀಪದ್ರಾಕ್ಷಿ, ಅಳಲೇಕಾಯಿ ಇವುಗಳನ್ನು ಸಮಭಾಗವಾಗಿ ಕುಟ್ಟಿ ಕಷಾಯವಿಟ್ಟು ಅದರಲ್ಲಿ ಸಕ್ಕರೆ, ಜೇನುತುಪ್ಪ, ಹಿಪ್ಪಲಿ ಚೂರ್ಣಗಳನ್ನು ಬೆರಸಿ ಸೇವಿಸಲು ರಕ್ತಪಿತ್ತ, ಶ್ವಾಸ ಇವು ಪರಿಹಾರವಾಗುವುವು.

೬. ಅತ್ತಿಯಹಣ್ಣು, ಕುಂಬಳದಹಣ್ಣು, ಅಳಲೇಕಾಯಿ, ಖರ್ಜೂರ, ದ್ವೀಪದ್ರಾಕ್ಷಿ ಇವುಗಳಲ್ಲಿ ಯಾವುದನ್ನಾದರೂ ಜೇನುತುಪ್ಪದಲ್ಲಿ ಅರೆದು ಸೇವಿಸಲು ರಕ್ತಪಿತ್ತವು ಗುಣವಾಗುವುದು.

೭. ಹಸೇಶೊಂಟಿ, ಕಾವೀಕಲ್ಲು, ಧಾತಕೀಕುಸುಮ, ಅತಿಮಧುರ ಇವುಗಳನ್ನು ಸಮಭಾಗವಾಗಿ ಚೂರ್ಣಿಸಿ ಅದಕ್ಕೆ ಮೊಲೆಹಾಲನ್ನು ಸುರಿದು ಮೂಗಿನಲ್ಲಿ ಸುರಿಯಲು ರಕ್ತಪಿತ್ತವು ಗುಣವಾಗುವುದು.

೮. ಅತ್ತಿಹಣ್ಣಿಗೆ ಸಮವಾಗಿ ಹಳೇಬೆಲ್ಲವನ್ನಾಗಲೀ, ಜೇನುತುಪ್ಪವನ್ನಾಗಲೀ ಸೇರಿಸಿ ಭಕ್ಷಿಸಲು ನಾಸಿಕಾರಕ್ತವು ಗುಣವಾಗುವುದು.

೯. ಅಳಲೇಕಾಯಿ, ದಾಳಿಂಬರೇಹುವ್ವು, ಗರಿಕೆ, ಅರಗು, ಇವುಗಳನ್ನು ಸಮಭಾಗವಾಗಿ ಗ್ರಹಿಸಿ ನೀರನ್ನು ಚಿಮುಕಿಸಿ ಕುಟ್ಟಿ ರಸವನ್ನು ತೆಗೆದು ಮೂಗಿನಲ್ಲಿ ಬಿಡಲು ದೀರ್ಘಕಾಲದಿಂದ ಸ್ರವಿಸುತ್ತಿರುವ ನಾಸಿಕಾರಕ್ತವು ಗುಣವಾಗುವುದು.

೧೦. ಕುಂಕುಮಕೇಸರಿಯನ್ನು ಮೇಕೆಯಹಾಲಿನಿಂದರೆದು ಕುದಿಸಿ ಸೇವಿಸಲು ಊರ್ಧ್ವಮುಖವಾಗಿ ಸ್ರವಿಸುವ ರಕ್ತಪಿತ್ತವು ಗುಣವಾಗುವುದು. ಇದಕ್ಕೆ ಪಥ್ಯ:—ಮೇಕೆಹಾಲಿನಲ್ಲಿ ಅನ್ನವನ್ನು ಊಟಮಾಡಬೇಕು.

೧೧. ಆಕಳಹಾಲಿನಲ್ಲಿ ಅತಿಮಧುರವನ್ನುಹಾಕಿ ಚನ್ನಾಗಿ ಕಾಯಿಸಿ ಕಿಂಚಿದುಷ್ಣವಾಗಿರುವಾಗ ಅದರಲ್ಲಿ ಸಕ್ಕರೆ ಜೇನುತುಪ್ಪಹಾಕಿ, ಸೇವಿಸಲು ರಕ್ತಪೈತ್ಯವು ಶೀಘ್ರವಾಗಿ ಗುಣವಾಗುವುದು.

೧೨. ಮುತ್ತುಗದ ಹೂವನ್ನು ನೀರಿನಿಂದ ಅರೆದು ಅದರಲ್ಲಿ ಸಕ್ಕರೆ ಕಲೆಸಿ ಸೇವಿಸಿದರೂ, ಅಥವಾ ಮುತ್ತುಗದ ಹೂವುಗಳನ್ನು ಕಷಾಯವಿಟ್ಟು ಅದರಲ್ಲಿ ಸಕ್ಕರೆ ಬೆರಸಿ ಸೇವಿಸಿದರೂ, ಅಥವಾ ಹಸುವಿನಸಗಣಿ ರಸದಲ್ಲಾದರೂ, ಕುದುರೆ ಲದ್ದಿ ರಸದಲ್ಲಾದರೂ, ಜೇನುತುಪ್ಪ, ತುಪ್ಪಗಳನ್ನು ಬೆರೆಸಿ ಸೇವಿಸಿದರೂ ರಕ್ತಪಿತ್ತವು ನಿವಾರಣೆಯಾಗುವುದು.

೧೩. ಅಷ್ಟಮಧುಕ, ದಾಳಿಂಬರೆಹುವ್ವಿನ ರೇಕುಗಳು, ಮೊಲೆಹಾಲಿನಲ್ಲಿ ತೆಯಿದು ತಲೇಮೇಲೆ ಹಾಕುವುದು. ಮತ್ತು ಮೂಗಿನಲ್ಲಿ ಬಿಡುವುದು. ತಕ್ಷಣವೆ ಮೂಗಿನಿಂದ ರಕ್ತ ಬೀಳುವುದು ನಿಲ್ಲುತ್ತೆ. ಈಪ್ರಕಾರ ೩ ದಿವಸ ಮಾಡಿದರೆ ಎಂದಿಗೂ ರಕ್ತ ಬೀಳುವದೇ ಇಲ್ಲ.

---

# ಇಪ್ಪತ್ತುಮೂರನೆಯ ಅಧ್ಯಾಯ.

---

## ರಾಜಯಕ್ಷ್ಮರೋಗ—ಔಷಧಗಳು.

---

### ರಾಜಯಕ್ಷ್ಮ (ಕ್ಷಯ) ರೋಗ ಲಕ್ಷಣ.

ಕ್ಷಯರೋಗವು ವಾತ, ಪಿತ್ತ, ಶ್ಲೇಷ್ಮ, ಸನ್ನಿಪಾತ, ಉರಕ್ಷತಗಳಿಂದ ಉತ್ಪನ್ನವಾಗಿ ಐದು ವಿಧವಾಗಿರುವುದು.

ಹೆಗಲು, ಶಿರಸ್ಸು, ಪಾರ್ಶ್ವಗಳು, ಕಾಲುಗಳು, ಕೈಗಳು ಇವುಗಳಲ್ಲಿ ತಾಪವು ಸರ್ವಧಾತುಗಳನ್ನೂ ಆಶ್ರಯಿಸಿರುವ ಜ್ವರವು ಇವು ರಾಜಯಕ್ಷ್ಮದ ಸಾಮಾನ್ಯ ಲಕ್ಷಣಗಳು.

ವಾತಕ್ಷಯದಲ್ಲಿ ಸ್ವರಭೇದವು, ಶೂಲೆ, ಹೆಗಲುಗಳಲ್ಲಿಯೂ, ಪಾರ್ಶ್ವಗಳಲ್ಲಿಯೂ ಸೆಳೆಯುವಿಕೆಯುಂಟಾಗುವುದು.

ಪಿತ್ತಕ್ಷಯದಲ್ಲಿ ಜ್ವರವು, ತಾಪವು, ಅತಿಸಾರವು, ರಕ್ತಪಿತ್ತವು ಮೊದಲಾದ ಲಕ್ಷಣಗಳು ಕಾಣುವುದು.

ಕಫಕ್ಷಯದಲ್ಲಿ ಶಿರೋಭಾರವು, ಅನ್ನದಲ್ಲಿಚ್ಛೆಯಿಲ್ಲದಿರುವಿಕೆ, ಕಾಸವು, ಕಂಠನಾಳಗಳು ಶಿಥಿಲವಾಗುವಿಕೆ ಮೊದಲಾದ ಲಕ್ಷಣಗಳು ಕಾಣುವುದು.

ಸನ್ನಿಪಾತ ಕ್ಷಯದಲ್ಲಿ ವಾತ, ಪಿತ್ತ, ಶ್ಲೇಷ್ಮ ಲಕ್ಷಣಗಳೆಲ್ಲವು ಕಾಣುವುದು.

ಉರಃಕ್ಷತಕ್ಷಯದಲ್ಲಿ:—ಶಕ್ತಿಮೀರಿ ಕ್ರೂರಕರ್ಮಗಳನ್ನು ಮಾಡುವುದರಿಂದ ಎದೆಯಲ್ಲಭಿಘಾತವುಂಟಾಗುವುದರಿಂದ ಉರಃಕ್ಷತವು ಬಲಿಷ್ಠವಾಗಿ ಕ್ಷಯವು ಹುಟ್ಟುವುದು. ಅದರಲ್ಲಿ ಎದೆಶೀಳಿದಂತಿರುವಿಕೆ, ಎದೆನೋವು, ಉರಿ, ಪೀಡೆ, ಪಾರ್ಶ್ವಗಳು ಕ್ಷೀಣಿಸುವಿಕೆ, ವೀರ್ಯವು, ಕಾಂತಿ, ಬಲವು ನಶಿಸುವಿಕೆ, ಮಲವು ಅಧಿಕವಾಗಿ ಹೊರಡುವಿಕೆ, ಅಗ್ನಿಮಾಂದ್ಯವು ಮೊದಲಾದ ಲಕ್ಷಣಗಳಿರುವುದು. ಈ ವ್ಯಾಧಿಯುಳ್ಳ ಮನುಷ್ಯನು ಶ್ಯಾಮವರ್ಣವಾಗಿಯೂ, ದುರ್ಗಂಧಯುಕ್ತವಾಗಿಯೂ, ಹಳದೀವರ್ಣವಾಗಿಯೂ, ಕಠಿನವಾಗಿಯೂ, ಕಫದಿಂದೊಡ

ಗೂಡಿದ ರಕ್ತವನ್ನು ಅನೇಕಸಲ ಬಾಯಿಯಿಂದ ವಾಂತಿಮಾಡುವನು, ಅಥವಾ ಉಗುಳುವನು.

## ಕ್ಷಯರೋಗದಲ್ಲಿ ಅಸಾಧ್ಯ ಲಕ್ಷಣ.

೧ ಶೋಭೆ ಹುಟ್ಟಿದಮೇಲೆ ಹುಟ್ಟಿದ ವಾತಮಿಶ್ರವಾದ ಕ್ಷಯವು, ಜ್ವರ ಅತಿಸಾರ ದೌರ್ಬಲ್ಯಗಳು ಇದ್ದರೆ ಅಸಾಧ್ಯವು.

೨ ಮುಖ ಹಸ್ತಕಾಲುಗಳಲ್ಲಿ ಕಾರ್ಶ್ಯವು, ದೇಹವು ತೂರ್ಯಾಡುವ ಕ್ಷಯವು ಅಸಾಧ್ಯವು.

೩. ಪಾರ್ಶ್ವಶೂಲೆ, ರಕ್ತವಮನ, ಮೈಯಲ್ಲಿ ತಾಪಗಳುಳ್ಳ ಕ್ಷಯವು ಅಸಾಧ್ಯವು.

೪. ಕಣ್ಣು ಬಿಳಪು, ಅನ್ನದ್ವೇಷ, ಊರ್ಧ್ವಶ್ವಾಸ ಕಷ್ಟದಿಂದ ಅಧಿಕ ಮೂತ್ರವಾಗೋದು ಹೀಗಿದ್ದರೆ ಅಸಾಧ್ಯವು.

೫. ಹೃದಯಶೂಲೆ, ರಕ್ತವಾಂತಿ, ಕಾಸ, ಮೂತ್ರದಲ್ಲಿ ರಕ್ತ, ಪಾರ್ಶ್ವ, ಪೃಷ್ಠ ಕಟಿಗಳು ಒಣಗಿರುವ ಕ್ಷಯವು ಅಸಾಧ್ಯವು.

೬. ಬಲ ಕಡಿಮೆಯಾಗಿರುವದು, ಅತಿರೋಗ ಉಂಟಾಗುವ ಕ್ಷಯವು ಅಸಾಧ್ಯವು.

## ಕ್ಷಯಕ್ಕೆ ಚಿಕಿತ್ಸೆಗಳು.

೧. ಹಿಪ್ಪಲ್ಯಾದಿ ರಸಾಯನ:—ಹಿಪ್ಪಲಿ ೧೬ ತೊಲೆ, ಶೊಂಟಿ ೪ ತೊಲೆ, ಬಿಳೇಜೀರಿಗೆ ೪ ತೊಲೆ ಇವು ಮೂರು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲೆ ಇಟ್ಟು ಸುಮಾರಾಗಿ ಹುರಿದುಕೊಳ್ಳುವದು. ವಾಯುವಿಳಂಗ ೪ ತೊಲೆ, ಗಂಟು ಭಾರಂಗಿ ೪ ತೊಲೆ, ಮೆಣಸು ೪ ತೊಲೆ, ನೋಡಿ ೨ ತೊಲೆ, ಚಿತ್ರಮೂಲ ೨ ತೊಲೆ, ಚವ್ಯ ೨ ತೊಲೆ, ತ್ರಿಜಾತಕ ೬ ತೊಲೆ, ತ್ರಿಫಲೆ ೬ ತೊಲೆ, ಜಾಕಾಯಿ ೨ ತೊಲೆ, ಗರುಗದಸೊಪ್ಪು ಒಣಗಿದ್ದು ೨ ತೊಲೆ ಇವುಗಳನ್ನೆಲ್ಲಾ ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಒಂದು ಬಾಂಡ್ಲಿಯಲ್ಲಿ ೫ ಶೇರು ಸಕ್ಕರೆ ಹಾಕಿ ನೀರುಹಾಕಿ ಒಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣಹಾಕಿ ಲೋಹಭಸ್ಮ ೨ ತೊಲೆ, ಜೇನುತುಪ್ಪ ೧ ಶೇರು ಹಾಕಿ ಚನ್ನಾಗಿ ಕಲಸಿ ಒಂದು ಜಾಡಿಯಲ್ಲಿ ಹಾಕಿ ಮುಚ್ಚಳ ಮುಚ್ಚಿ ೧೫ ದಿನ ಧಾನ್ಯಪುಟದಲ್ಲಿಟ್ಟು ತೆಗೆದುಕೊಳ್ಳುವದು. ಹೊತ್ತಿಗೆ ೨ ಆಣೆ ತೂಕ, ೪ ಆಣೆ ತೂಕ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕ್ಷಯ, ಪಾಂಡು, ಶೋಭೆ, ಕಾಮಾಲೆ, ಶ್ವಾಸಖಾಸ ಗುಣವಾಗುವದು.

೨. ಯಾಲಕ್ಕಿ ಕಾಲುತೊಲೆ, ಹಜರಅಲ್ಲಿಹುದ ಕಾಲುತೊಲೆ, ಮುತ್ತಿನ ಭಸ್ಮ ಕಾಲುತೊಲೆ, ಕಾರೋಬಾಪನ್ನೀರಿನಲ್ಲಿ ಅರದದ್ದು ಕಾಲುತೊಲೆ, ಸೊಗದೇ

ಬೇರು ಕಾಲುತೊಲೆ, ತಬಾಷಿರ ಕಾಲುತೊಲೆ, ಸತ್ತಿಗುಲ್ಲು ಕಾಲುತೊಲೆ, ಬಿಳೀ ಕಲ್ಲುಸಕ್ಕರೆ ೩|| ತೊಲೆ, ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣ ಮಾಡಿ ಅರಿಯುವ ಜಿನಸುಗಳನ್ನು ಅರದು ಎಲ್ಲವನ್ನು ಕೇರಿಸಿ ಇಟ್ಟುಕೊಳ್ಳುವದು. ದೊಡ್ಡವರಿಗೆ ಹೊತ್ತಿಗೆ ೨ ಗುರುಗಂಜಿ ತೂಕ ಚೂರ್ಣ ಹಸುವಿನಹಾಲಿನಲ್ಲಿ ಕಲಸಿ ಕೊಡಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಮಕ್ಕಳಿಗೆ ೧ ಗುರುಗಂಜಿ ತೂಕ ಚೂರ್ಣ ಮಲೆಹಾಲಿನಲ್ಲಿ ಕೊಡಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕ್ಷಯದ ಬಾಬತು ಜ್ವರ, ತರಹ ತರಹವಾದ ಜ್ವರಗಳು ಗುಣವಾಗುವವು.

೩. ಅಮೃತಬಳ್ಳಿಸತು ೨ ತೊಲೆ, ತಬಾಷಿರ ೨ ತೊಲೆ, ಯಾಲಕ್ಕಿ ೧ ತೊಲೆ, ಬಿಳೀಜೀರಿಗೆ ೨ ತೊಲೆ, ಒಣಗಿದ ಕಿರನೆಲ್ಲಿಸೊಪ್ಪು ೩ ತೊಲೆ, ಕೊತ್ತುಂಬರಿಬೀಜ ೨ ತೊಲೆ, ಗೋಣಿಬೀಜ ೨ ತೊಲೆ, ಕಾಹುಬೀಜ ೨ ತೊಲೆ, ಬಿಳೀಕಲ್ಲುಸಕ್ಕರೆ ೫ ತೊಲೆ, ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಅರಿಯುವ ಜಿನಸುಗಳನ್ನು ಅರದು ಎಲ್ಲವನ್ನು ಕೇರಿಸಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲುತೊಲೆ ಹಸುವಿನಹಾಲಿನಲ್ಲಿ ಕಲಸಿ ಕೊಡಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕ್ಷಯದಬಾಬತು ಜ್ವರ, ಮೂಳೆ ಒಳಗಿನ ಜ್ವರ ಗುಣವಾಗುವದು.

೪. ತಬಾಷಿರ ೧| ತೊಲೆ, ಗೋಣಿಬೀಜ ೧| ತೊಲೆ, ನಿಷಾಷ್ತಾ ೧| ತೊಲೆ, ಗುಲಾಬಿಹುವ್ವ ||| ತೊಲೆ, ಸೋರೇಬೀಜದಪಪ್ಪು ||| ತೊಲೆ, ಖರಬೂಜಬೀಜದ ಪಪ್ಪು ||| ತೊಲೆ, ಸೌತೇಬೀಜದಪಪ್ಪು ||| ತೊಲೆ, ಕೊತ್ತುಂಬರಿಬೀಜ ||| ತೊಲೆ, ಗುಲೇಬನಫ್ಷಾ ೨|| ತೊಲೆ, ಶ್ರೀಗಂಧದಚಕ್ಕೆ | ತೊಲೆ, ಕತ್ತಿರಾ || ತೊಲೆ, ರುಬ್ಬಿಸೋಸ್ || ತೊಲೆ, ನಿಲೋಫರ || ತೊಲೆ, ತುರಂಜಬಿ ೨|| ತೊಲೆ, ಷಿರಖಿಸ್ತು ೨|| ತೊಲೆ, ಕುಂಕುಮಕೇಸರಿ ೨ ಆಣೆತೂಕ, ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಅರಿಯುವ ಜಿನಸುಗಳನ್ನು ಅರದು ಎಲ್ಲವನ್ನು ಕೇರಿಸಿ ಖಲ್ವದಲ್ಲಿ ಹಾಕಿ ಜವೆ ತಂದು ನೀರಿನಲ್ಲಿ ಒಂದು ರಾತ್ರಿ ನೆನೆಯಿಸಿ ಬೆಳಿಗ್ಗೆ ಜವೆ ಮತ್ತು ನೀರು ವರಳಲ್ಲಿ ಹಾಕಿ ರುಬ್ಬಿ ಹಾಲನ್ನು ಬಟ್ಟೆಯಲ್ಲಿ ಶೋಧಿಸಿಕೊಂಡು ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ಮುಕ್ಕಾಲು ತೊಲೆಯಷ್ಟು ಬಿಲ್ಲೆ ಕಟ್ಟ ತಕ್ಕದ್ದು ಬೆಳಿಗ್ಗೆ ಸಾಯಂಕಾಲ ೨ ಹೊತ್ತು ಹಸುವಿನ ಹಾಲಿನಲ್ಲಿ ಕಲಸಿ ಕೊಡಬೇಕು. ಹೀಗೆ ೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕ್ಷಯಸಮ್ಮಂಧವಾದ ಜ್ವರ, ಬೇದಿಕಟ್ಟುವದು,

ಬಗಲಲ್ಲಿ ನೋವುಬರುವದು, ದಾಹ ಇರುವದು, ದೇಹ ವಣಗಿಯಿರುವದು ಇವುಗಳು ಗುಣವಾಗುವದು.

೫. ತಬಾಷಿರ ೧| ತೊಲೆ, ಗೋಣೀಬೀಜ ೧| ತೊಲೆ, ನಿಷಾಷ್ತಾ ೧| ತೊಲೆ, ಗುಲಾಬಿಹುವ್ವ ||| ತೊಲೆ, ಸೋರೇಬೀಜದಪಪ್ಪು ||| ತೊಲೆ, ಕತ್ತಿರಾ || ತೊಲೆ, ಗುಲೇಬನಪಷಾ ೨|| ತೊಲೆ, ತುರಂಜಬೀ೯ ೨|| ತೊಲೆ, ಕೊತ್ತುಂಬರಿ ಬೀಜ ||| ತೊಲೆ, ರುಬ್ಬೆಸೂಸ || ತೊಲೆ, ತಾವರೇಹುವ್ವ || ತೊಲೆ, ಕುಂಕುಮ ಕೇಸರಿ ೨ ಆಣೆ ತೂಕ, ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಅರಿಯುವ ಜಿನಸುಗಳನ್ನು ಅರದು ಎಲ್ಲವನ್ನು ಶೇರಿಸಿ ಖಲ್ವದಲ್ಲಿ ಹಾಕಿ ಜವೆ ತಂದು ನೀರಿನಲ್ಲಿ ಒಂದು ರಾತ್ರಿ ನೆನೆಯಿಸಿ ಬೆಳಿಗ್ಯೆ ಜವೆ ಮತ್ತು ನೀರು ವರಳಲ್ಲಿ ಹಾಕಿ ರುಬ್ಬಿ ಹಾಲನ್ನು ಬಟ್ಟೆಯಲ್ಲಿ ಶೋಧಿಸಿಕೊಂಡು ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ಮುಕ್ಕಾಲು ತೊಲೆಯಷ್ಟು ಬಿಲ್ಲೆ ಕಟ್ಟತಕ್ಕದ್ದು. ಬೆಳಿಗ್ಯೆ ಸಾಯಂಕಾಲ ೨ ಹೊತ್ತು ಹಸುವಿನ ಹಾಲಿನಲ್ಲಿ ಕಲಸಿ ಕೊಡಬೇಕು. ಹೀಗೆ ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಉಷ್ಣಸಮ್ಮಂಥವಾದ ಜ್ವರ, ಕ್ಷಯ, ಪುಡಿಕೆಮ್ಮು, ಪಿತ್ತಜ್ವರ, ಹೊಟ್ಟೆನೋವು, ಬೇದಿ ಆಗುವದು ಇವುಗಳು ಗುಣವಾಗುವದು.

೬. ಹಸೇ ಅರಗು ಹೊಸದಾಗಿ ಇರುವದು ತಂದು ಖಲ್ವದಲ್ಲಿ ಹಾಕಿ ತಣ್ಣೀರಿನಲ್ಲಿ ಅರದು ಬಟ್ಟೆಯಲ್ಲಿ ಶೋಧಿಸಿಕೊಂಡು ಇದಕ್ಕೆ ಸಮಭಾಗ ಬೂದುಕುಂಬಳಕಾಯಿ ರಸ ಹಾಕಿ ಕಲಸಿ ಹೊತ್ತಿಗೆ ೩ ತೊಲೆ ಕೊಡಬೇಕು ಹೀಗೆ ಬೆಳಿಗ್ಯೆ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ರಕ್ತಕ್ಷಯ, ಉರಃಕ್ಷತ, ಕ್ಷಯರೋಗ ಇವು ಗುಣವಾಗುವದು.

೭. ಶುದ್ಧಿಮಾಡಿದ ಪರಂಗಿಚಕ್ಕೆ || ಶೇರು, ಶೊಂಟಿ || ಶೇರು, ಮೆಣಸು ೧ ಪಾವು, ಹಿಪ್ಪಲಿ ೧ ತೊಲೆ, ಲವಂಗ ೧ ತೊಲೆ, ದಾಲಚಿನ್ನಿ ೧ ತೊಲೆ, ಲವಂಗಪತ್ರೆ ೧ ತೊಲೆ, ನಾಗಕೇಸರಿ ೨ ತೊಲೆ, ವಾಯುವಿಳಂಗ ೩ ತೊಲೆ, ಚವ್ಯ ೧ ತೊಲೆ, ಮರದರಿಸಿನ ೧ ತೊಲೆ, ನೆಲತಂಗಡಿ || ಶೇರು, ನೆಲಗೊರಿಮಿಡಿ ೩ ತೊಲೆ, ತುಂಗೇಗಡ್ಡೆ ೩ ತೊಲೆ, ಸೈಂಧರಲವಣ ೨ ತೊಲೆ, ಅಳಲೇಕಾಯಿ ಸಿಪ್ಪೆ ೨ ತೊಲೆ, ತಾರೇಕಾಯಿಸಿಪ್ಪೆ ೪ ತೊಲೆ, ನೆಲ್ಲೀಕಾಯಿ ೮ ತೊಲೆ, ಬಿಳೇ ಜೀರಿಗೆ ೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಇದರ ಸಮ ರಾಯಿಪುಡಿಸಕ್ಕರೆ ಹಾಕಿ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲು ತೊಲೆ ಚೂರ್ಣ ಬಿಸಿನೀರಿನಲ್ಲಿ ತೆಗೆದುಕೊಳ್ಳುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ

ಸಿಹಿಸಾರು ಅನ್ನ. ಇದರಿಂದ ಮೇಹಸಮ್ಮಂಧದಿಂದ ಹುಟ್ಟಿದ ನಂಜು, ಜ್ವರ, ತಪನ, ಕ್ಷಯ, ಕಾಲುಚಳುಕು ಇವು ಗುಣವಾಗುವದು.

೮. ಕರ್ಪೂರಾದಿ ಚೂರ್ಣ:—ಶುದ್ಧಿಮಾಡಿದ ಆರತಿಕರ್ಪೂರ ೧ ತೊಲೆ, ಮುತ್ತುಗದಚಕ್ಕೆ ೧ ತೊಲೆ, ತಕ್ಕೋಲ ೧ ತೊಲೆ, ಜಾಕಾಯಿ ೧ ತೊಲೆ, ಲವಂಗಪತ್ರೆ ೧ ತೊಲೆ, ಲವಂಗ ೧ ತೊಲೆ, ಶೊಂಟಿ ೧ ತೊಲೆ, ಮೆಣಸು ೧ ತೊಲೆ, ಚವ್ಯ ೧ ತೊಲೆ, ಚಿತ್ರಮೂಲ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಇದರ ಸಮ ಸಕ್ಕರೆ ಬೆರಸಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲುತೊಲೆ ಚೂರ್ಣ ಜೇನುತುಪ್ಪದಲ್ಲಿ ಆಗಲಿ ಹಸುವಿನತುಪ್ಪದಲ್ಲಿ ಆಗಲಿ ಕಲಸಿ ಕೊಡು ವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕ್ಷಯ, ಅರೋಚಕ, ಕೆಮ್ಮಲು, ಉಬ್ಬಸ, ಗುಲ್ಮ ಇವುಗುಣವಾಗುವವು.

೯. ಗಸಗಸೆ ||| ತೊಲೆ, ಬಿದರುಪ್ಪು ೧| ತೊಲೆ, ಗೋಣಿಬೀಜ ೧| ತೊಲೆ, ಸೋರೇಬೀಜದ ಪಪ್ಪು ೨|| ತೊಲೆ, ಹತ್ತಿಬೀಜದ ಪಪ್ಪು ೬| ತೊಲೆ, ತಾವರೆ ಬೀಜದ ಪಪ್ಪು ೧|| ತೊಲೆ, ನಿಷಾಷ್ತಾ ೧| ತೊಲೆ, ಖಿತ್ತುಮಿ ೩ ತೊಲೆ, ಕೊತ್ತುಂಬರಿಬೀಜ ೧| ತೊಲೆ, ಶ್ರೀಗಂಧದ ಚಕ್ಕೆ ೨||| ತೊಲೆ, ಜಾಲೀಬಂಕೆ ||| ತೊಲೆ, ಕತ್ತಿರಾ ||| ತೊಲೆ, ಗುಲಾಬಿಹುವ್ವ ೧|| ತೊಲೆ, ಕಾಹುಬೀಜ ೧| ತೊಲೆ, ಬಿಳೇಕಲ್ಲುಸಕ್ಕರೆ ೫ ತೊಲೆ ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಅರಿಯುವ ಜಿನಸುಗಳನ್ನು ಅರದು ಎಲ್ಲವನ್ನು ಶೇರಿಸಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲುತೊಲೆ, ಅರ್ಧತೊಲೆ ಹಸುವಿನಹಾಲಿನಲ್ಲಿ ಕಲಸಿ ಕೊಡಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡುವದು. ಇದ ರಿಂದ ಕ್ಷಯ, ತಪನ, ಅತಿವುಷ್ಣದಬಾಬತು ಜ್ವರ, ಎದೆಯಲ್ಲಿ ಗಾಬರಿಗಾಬರಿ ಯಾಗಿ ಇರುವದು ಇವುಗಳು ಗುಣವಾಗುವವು.

೧೦. ಬಿದರುಪ್ಪು ೩ ತೊಲೆ, ಅಮೃತಬಳ್ಳಿ ಸಕ್ಕರೆ ೧ ಶೇರು, ಗುಲಾಬಿ ಮೊಗ್ಗು ೧ ಶೇರು, ಯಾಲಕ್ಕಿ ೨ ತೊಲೆ, ಬಿಳೇಕಲ್ಲುಸಕ್ಕರೆ ೨ ಶೇರು ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಅರಿಯುವ ಜಿನಸುಗಳನ್ನು ಅರದು ಎಲ್ಲವನ್ನು ಶೇರಿಸಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲುತೊಲೆ ಚೂರ್ಣ ಗಾವುಜಬಾ ಧೃತಿಯಲ್ಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕ್ಷಯ, ಕೈಕಾಲುವುರಿ, ಜ್ವರ, ಪುಡಿಕೆಮ್ಮು, ಸಂತಾಪ, ತಪನ, ಅತಿ ವುಷ್ಣ ಇವುಗಳು ಗುಣವಾಗುವವು.

೧೧. ಲವಂಗಾದಿ ಚೂರ್ಣ :—ಲವಂಗ ೧ ತೊಲೆ, ಯಾಲಕ್ಕಿ ೧ ತೊಲೆ, ದಾಲಚಿನ್ನಿ ೧ ತೊಲೆ, ನಾಗಕೇಸರಿ ||ತೊಲೆ, ಜಾಕಾಯಿ ೧ ತೊಲೆ, ಲಾವಂಚ || ತೊಲೆ, ಶೊಂಟಿ ೧ ತೊಲೆ, ಕರೇಜೀರಿಗೆ || ತೊಲೆ, ಕೃಷ್ಣಾಗರು || ತೊಲೆ, ತವಕ್ಷೀರ ೧ ತೊಲೆ, ಜಟಾಮಾಂಸಿ || ತೊಲೆ, ಕರಿನೈದಿಲೆಹುವ್ವು ೧ ತೊಲೆ, ಹಿಪ್ಪಲಿ ೨ ತೊಲೆ, ಶ್ರೀಗಂಧದಚಕ್ಕೆ ೧ ತೊಲೆ, ಮೋಡಿ || ತೊಲೆ, ಮುಡಿವಾಳ || ತೊಲೆ, ತಕ್ಕೋಲ || ತೊಲೆ ಇವುಗಳನ್ನು ಕುಟ್ಟಿ ಚೂರ್ಣವಮಾಡಿ ಶೋಧಿಸಿ ಕೊಂಡು ಇದರಸಮ ಸಕ್ಕರೆ ಬೆರಸಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲು ತೊಲೆ ಚೂರ್ಣ ಜೇನುತುಪ್ಪದಲ್ಲಿ ಕಲಸಿಕೊಡುವದು. ಹೀಗೆ ಬೆಳಿಗ್ಗೆ ಸಾಯಂ ಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕ್ಷಯ, ಖಾಸ, ತಮಕಶ್ವಾಸ, ಅರುಚಿ, ಗುಲ್ಮ, ಬಿಕ್ಕಳಿಕೆ, ವಾತಪಿತ್ತ ಇವುಗಳು ಗುಣವಾಗಿ ಅಗ್ನಿದೀಪನವನ್ನುಂಟುಮಾಡುತ್ತೆ.

೧೨. ಹಿಪ್ಪಲಿ ಲೇಹ :—ಹಿಪ್ಪಲಿ ೨೦ ತೊಲೆ, ಸಣ್ಣರಾಶ್ಮಿ ೫ ತೊಲೆ, ಕೊತ್ತುಂಬರಿಬೀಜ ೧ ತೊಲೆ, ಮೆಣಸು ೫ ತೊಲೆ, ಶೊಂಟಿ ೫ ತೊಲೆ, ಚವ್ಯ ೧ ತೊಲೆ, ಮೋಡಿ ೧ ತೊಲೆ, ಅತಿಮಧುರ ೫ ತೊಲೆ, ನೆಲ್ಲೀಕಾಯಿ ೫ ತೊಲೆ, ಬಿಳೇಜೀರಿಗೆ ೨ ತೊಲೆ, ಕರೇಜೀರಿಗೆ ೨ ತೊಲೆ, ಯಾಲಕ್ಕಿ ೧ ತೊಲೆ, ತುಂಗೇ ಗಡ್ಡೆ ೫ ತೊಲೆ, ಶುದ್ಧಿಮಾಡಿದ ಅಶ್ವಗಂಧಿ ೫ ತೊಲೆ, ಖುರಾಸಾನಿವೋಮ ೧ ತೊಲೆ, ಬಾಲಮೆಣಸು ೧ ತೊಲೆ, ತಾಳೀಸಪತ್ರೆ ೫ ತೊಲೆ, ಅಳಲೇಕಾಯಿ ಸಿಪ್ಪೆ ೫ ತೊಲೆ, ದಾಲಚಿನ್ನಿ ೨ ತೊಲೆ, ಲವಂಗಪತ್ರೆ ೧ ತೊಲೆ, ಲವಂಗ ೨ ತೊಲೆ, ಜಾಕಾಯಿ ೨ ತೊಲೆ, ಲಾವಂಚ ೧ ತೊಲೆ, ಜಾಪತ್ರೆ ೨ ತೊಲೆ, ರಾಮಗುಳ್ಳಕಾಯಿ ೫ ತೊಲೆ, ಮುಳ್ಳುಸೊಂಡೇಕಾಯಿ ೫ ತೊಲೆ, ಗರುಗದ ಸೊಪ್ಪು ೫ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಒಂದು ಬಾಂಡ್ಲಿಯಲ್ಲಿ ಹಳೇಬೆಲ್ಲ ೮ ಶೇರು ಹಾಕಿ ನೀರುಹಾಕಿ ಒಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಹಾಕಿ ಜೇನು ತುಪ್ಪ ೨ ಶೇರು ಹಾಕಿ ಪಕ್ವವಾಗಿ ಲೇಹವನ್ನು ಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ಯಲಚೀಬೀಜದ ಪ್ರಮಾಣ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕ್ಷಯ, ಕೆಮ್ಮು, ಉಬ್ಬಸ, ಶ್ವಾಸಖಾಸ ಗುಣವಾಗುವದು.

೧೩. ತಾಳೀಸಪತ್ರೆ ಚೂರ್ಣ :—ತಾಳೀಸಪತ್ರೆ ೪೦ ತೊಲೆ, ಶೊಂಟಿ ೩ ತೊಲೆ, ಹಿಪ್ಪಲಿ ೩ ತೊಲೆ, ಮೆಣಸು ೩ ತೊಲೆ, ಅಳಲೇಕಾಯಿಸಿಪ್ಪೆ ೩ ತೊಲೆ, ತಾರೇಕಾಯಿಸಿಪ್ಪೆ ೬ ತೊಲೆ, ನೆಲ್ಲೀಕಾಯಿ ೯ ತೊಲೆ, ದೊಡ್ಡಯಾಲಕ್ಕಿ

೩ ತೊಲೆ, ಚಿಕ್ಕಯಾಲಕ್ಕಿ ೩ ತೊಲೆ, ಜಾಕಾಯಿ ೧ ತೊಲೆ, ಲವಂಗ ೧ ತೊಲೆ, ತುಂಗೇಗಡ್ಡೆ ೩ ತೊಲೆ, ಅತಿಮಧುರ ೩ ತೊಲೆ, ಕರ್ಕಾಟಕಶೃಂಗಿ ೩ ತೊಲೆ, ದಾಲಚಿನ್ನಿ ೧ ತೊಲೆ, ಲವಂಗಪತ್ರಿ ೨ ತೊಲೆ, ಚವ್ಯ ೧ ತೊಲೆ, ವಾಯು ವಿಳಂಗ ೧ ತೊಲೆ, ಸಣ್ಣರಾಷ್ಮೆ ೩ ತೊಲೆ, ಬಾಲಮೆಣಸು ೩ ತೊಲೆ, ವೋಮ ೧ ತೊಲೆ, ಖುರಾಸಾನಿವೋಮ ೧ ತೊಲೆ, ಚಂಗಲಕೋಷ್ಟ ೧ ತೊಲೆ, ಅಕ್ಕಲಕರೆ ೩ ತೊಲೆ, ಕೊತ್ತುಂಬರಿಬೀಜ ೧ ತೊಲೆ, ನೆಲತಾಟಿಗಡ್ಡೆ ೩ ತೊಲೆ, ಶುದ್ಧಿಮಾಡಿದ ಅಶ್ವಗಂಧಿ ೩ ತೊಲೆ, ಲಾವಂಚ ೧ ತೊಲೆ, ಮುಳ್ಳುಸೊಂಡೇ ಹಣ್ಣು ೩ ತೊಲೆ, ರಾಮಗುಳ್ಳಕಾಯಿ ೩ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿಕೊಳ್ಳುವದು. ಗೋರೋಜನ ಕಾಲುತೊಲೆ ಖಲ್ವದಲ್ಲಿ ಹಾಕಿ ಅರದು ಮೇಲ್ಕಂಡ ಚೂರ್ಣಕ್ಕೆ ಶೇರಿಸಿಕೊಳ್ಳುವದು. ಸಕ್ಕರೆ ೪೦ ತೊಲೆ ಇವು ಗಳನ್ನೆಲ್ಲ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲುತೊಲೆ ಚೂರ್ಣ ಹಸೇ ಶೊಂಟಿ ರಸದಲ್ಲಿ, ಜೇನುತುಪ್ಪದಲ್ಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀ ಬೇಳೆ ಸಿಹಿಸಾರು ಅನ್ನ. ಇದರಿಂದ ಕ್ಷಯ, ಕೆಮ್ಮು, ಖಾಸಶ್ವಾಸ, ಪಾಂಡು, ಕಾಮಾಲೆ, ಅರುಚಿ ಇವುಗಳು ಗುಣವಾಗಿ ಅಗ್ನಿದೀಪನವನ್ನುಂಟು ಮಾಡುವದು. ಕ್ಷಯಕ್ಕೆ ಮಾದವಾಳದ ಹಣ್ಣಿನ ರಸದಲ್ಲಿ ಕೊಡುವದು.

೧೪. ಶೊಂಟಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಅಕ್ಕಲ ಕರೆ ೧ ತೊಲೆ, ಬಾಲಮೆಣಸು ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ, ತಾಳೀಸಪತ್ರೆ ೧೪ ತೊಲೆ, ಸಣ್ಣರಾಷ್ಮೆ ೧ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಹೊತ್ತಿಗೆ ಕಾಲುತೊಲೆ ಚೂರ್ಣ ಜೇನುತುಪ್ಪದಲ್ಲಿ, ಹಸೇಶೊಂಟಿ ರಸದಲ್ಲಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಕ್ಷಯಕ್ಕೆ ಹಸುವಿನತುಪ್ಪದಲ್ಲಿ ಕಲಸಿ ಕೊಡಬೇಕು. ಇದರಿಂದ ಕೆಮ್ಮು, ಶ್ವಾಸಖಾಸ ಗುಣವಾಗುವದು.

೧೫ ವಾಸಾದಿ ಲೇಹ :—ಆಡುಸೋಗೆ ಸೊಪ್ಪು ೩೦೦ ತೊಲೆ ತಂದು ಕುಟ್ಟಿ ಚತುರ್ಥಾಂಶ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವದು. ಕಲ್ಲುಸಕ್ಕರೆ ೩೦೦ ತೊಲೆ ಇವು ಎರಡು ಒಂದು ಬಾಂಡ್ಲಿಯಲ್ಲಿ ಹಾಕಿ ವಲೆಯಮೇಲೆ ಇಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಅಳಲೇ ಕಾಯಿಸಿಪ್ಪೆ ೮ ತೊಲೆ, ಹಿಪ್ಪಲಿ ೬ ತೊಲೆ, ಯಾಲಕ್ಕಿ ೩ ತೊಲೆ, ಲವಂಗ ೩ ತೊಲೆ, ದಾಲಚಿನ್ನಿ ೩ ತೊಲೆ, ನಾಗಕೇಸರಿ ೩ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಮೇಲ್ಕಂಡ ಪಾಕಕ್ಕೆ ಹಾಕಿ

ಜೇನುತುಪ್ಪ ೧೨ ತೊಲೆ ಹಾಕಿ ಕಲಸಿ ಪಕ್ವವಾಗಿ ಲೇಹವನ್ನು ಮಾಡಿ ಇಟ್ಟು ಕೊಳ್ಳುವದು. ಹೊತ್ತಿಗೆ ಯಲಚೀಬೀಜದ ಪ್ರಮಾಣ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ರಕ್ತಪಿತ್ತ, ಕ್ಷತಕ್ಷಯ, ಖಾಸ, ಶ್ವಾಸ, ಯಕ್ಷ್ಮ ಇವುಗಳು ಗುಣವಾಗುವದು.

೧೬ ಅಮೃತಾರ್ಣವರಸ:—ನಾಗಭಸ್ಮ, ವಂಗಭಸ್ಮ, ಕಾಂತಭಸ್ಮ, ಅಭ್ರಕಭಸ್ಮ, ರಸಸಿಂಧೂರ ಇವು ಒಂದೊಂದು ಭಾಗ, ಇದಕ್ಕೆ ಸಮ ಅಮೃತ ಬಳ್ಳಿ ಸಕ್ಕರೆ ಇವುಗಳನ್ನು ಖಲ್ವದಲ್ಲಿ ಹಾಕಿ ಮುತ್ತುಕದಹುವ್ವಿನ ರಸದಲ್ಲಿ೧ ಜಾವ ಅರೆದು, ಬಿಲ್ವಪತ್ರಿಬೇರಿನ ಕಷಾಯದಲ್ಲಿ ೧ ಜಾವ, ಆಡುಸೋಗೆಸೊಪ್ಪಿನ ರಸ ದಲ್ಲಿ೧ ಜಾವ, ಕಬ್ಬಿನ ರಸದಲ್ಲಿ೧ ಜಾವ ಅರೆದು ಗುರುಗಂಜಿ ಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಕಲ್ಲುಸಕ್ಕರೆ ಚೂರ್ಣದಲ್ಲಿ ಕ್ಷಯಕ್ಕೆ ಕೊಡುವದು. ಹೀಗೆ ಬೆಳಿಗ್ಗೆಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ಹಸುವಿನಹಾಲು ಅನ್ನ. ಇನ್ನು ಇತರ ಅನುಪಾನಗಳಿಂದ ಕೊಟ್ಟರೆ ವಾತ, ಪೈತ್ಯ, ಶ್ಲೇಷ್ಮ, ಗುಲ್ಮ, ಮೇಹ, ಅಸ್ತಿಗತಜ್ವರ, ಪಾಂಡು, ಕಾಮಾಲೆ, ಶ್ವಾಸಖಾಸ ಗುಣವಾಗುವದು.

ಚವ್ಯನಪ್ರಾಶ್ಯಾವ ಲೇಹ:—ಪಾದರಿ, ನರುವಲು, ಶಿವನೆ, ಬಿಲ್ವ, ದೊಡ್ಡಮರ ಇವುಗಳ ಚಕ್ಕೆ, ನೆಗ್ಗಲು, ಶಾಲಿಪರ್ಣಿ, ಪೃಶ್ನಿಪರ್ಣಿ, ಹೆಗ್ಗುಳ್ಳ, ನೆಲಗುಳ್ಳ, ದೊಡ್ಡಹಿಪ್ಪಲಿ, ಸಣ್ಣಹಿಪ್ಪಲಿ, ಕರ್ಕಾಟಕಶೃಂಗಿ, ದ್ರಾಕ್ಷಿ, ಅಮೃತಬಳ್ಳಿ, ಆಳಲೇಕಾಯಿಸಿಪ್ಪೆ, ಕಳ್ಳಂಗಡ್ಲೆ, ಕಿರುನೆಲ್ಲಿ, ಆಡುಸೋಗೆ, ಋದ್ಧಿ ಎಂಬ ಮೂಲಿಕೆ, ಜೀವಂತಿಕಾ ಎಂದರೆ ಹಾಲೇಬಳ್ಳಿ, ಕಚೋರ, ಜೀವಕ, ಋಷಭಕ, ಭದ್ರಮುಸ್ತೆ, ಚಂಗಲಕೋಷ್ಟ, ಕಾಕನಾಸಿಕಾ ಎಂದರೆ ಗಣಿಕೆಯ ಗಿಡದಲ್ಲಿ ಭೇದ, ಕಾಡು ಉದ್ದು, ಕಾಡು ಹೆಸರು, ಹಂದಿಗಡ್ಡೆ, ಕೊಮ್ಮೇಬೇರು, ಕಾಕೋಲಿ, ಕ್ಷೀರಕಾಕೋಲಿ, ತಾವರೆ, ಮೇದಾ, ಮಹಾ ಮೇದ, ಸಣ್ಣಯಾಲಕ್ಕಿ, ಅಗಿಲುಗಂಧ, ರಕ್ತಚಂದನ, ಈ ಹಿಂದೆ ಹೇಳಿದ ಎಲ್ಲಾ ವಸ್ತುಗಳೂ ಒಂದೊಂದು ಪಲದಷ್ಟು ಕೂಡಿಸಿ ದಪ್ಪನಾಗಿ ಚೂರ್ಣ ಮಾಡಿ ದೊಡ್ಡ ಪಾತ್ರೆಯಲ್ಲಿ ಹಾಕಿ ಜೊತೆಯಲ್ಲಿ ಐದುನೂರು ನೆಲ್ಲಿಯಕಾಯಿ ಗಳನ್ನೂ ಹಾಕಿ ಒಂದು ದ್ರೋಣಪರಿಮಾಣ ನೀರನ್ನು ಸುರಿದು ಬೇಯಿಸುತ್ತ ಎಂಟನೆಯ ಒಂದು ಭಾಗ ಕಷಾಯವನ್ನು ನಿಲ್ಲಿಸಿಕೊಂಡು ಬೆಂದ ನೆಲ್ಲಿಯ ಕಾಯಿಗಳನ್ನೆಲ್ಲಾ ಬಟ್ಟೆಯಲ್ಲಿ ಹಾಕಿ ಹಿಂಡಿ ಬೇರೆಯಾಗಿರಿಸಿಕೊಂಡು ಕಷಾಯ ವನ್ನು ಶೋಧಿಸಿಕೊಳ್ಳುವುದು, ಬೇರೊಂದು ಪಾತ್ರೆಗೆ ಏಳು ಪಲ ಹಸುವಿನ ತುಪ್ಪವನ್ನು ಹಾಕಿ ಅದರಲ್ಲಿ ಹಿಂಡಿ ಇರಿಸಿಕೊಂಡಿರುವ ನೆಲ್ಲಿಯಕಾಯಿ

ಗಳನ್ನೆಲ್ಲಾ ಹಾಕಿ ದೀಪಾಗ್ನಿಯಿಂದ ಸ್ವಲ್ಪವಾಗಿ ಹುರಿದು ಬೇರೆಯಾಗಿ ಶೋಧಿಸಿ ಇರಿಸಿಕೊಂಡಿರುವ ಕಷಾಯವನ್ನು ಆ ಹುರಿದ ನೆಲ್ಲಿಕಾಯಿನ ಜೊತೆಗೆ ಸುರಿದು ಅದಕ್ಕೆ ಐವತ್ತುಪಲ ಕಲ್ಲುಸಕ್ಕರೆಯನ್ನು ಸೇರಿಸಿ ಪಕ್ವ ಮಾಡುತ್ತಾ ಲೇಹಪಾಕಕ್ಕೆ ಬಂದಮೇಲೆ ಎರಡುಪಲ ಹಿಪ್ಪಲಿ, ನಾಲ್ಕುಪಲ ಬಿದರುಪ್ಪು ಇವುಗಳ ಚೂರ್ಣವನ್ನೂ, ಲವಂಗಪಟ್ಟೆ, ಯಾಲಕ್ಕಿ, ತಾಳೀಸ ಪತ್ರೆ, ನಾಗಕೇಸರಿ ಈ ವಸ್ತುಗಳು ಪ್ರತಿಯೊಂದೂ ಮೂರು ಮೂರು ಶಾಣ (ಅಂದರೆ ಪ್ರತ್ಯೇಕ ಒಂದೂವರೆ ತೊಲ) ಸೇರಿಸಿ ಚೂರ್ಣಮಾಡಿ ಆ ಚೂರ್ಣ ವನ್ನೂ ಅದರಲ್ಲಿ ಕಲೆಸಿ ಚನ್ನಾಗಿ ಪಕ್ವಮಾಡಿ ಇಳಿಸಿಕೊಂಡು ಆರಿದಮೇಲೆ ಅದರಲ್ಲಿ ಆರುಪಲ ಜೇನುತುಪ್ಪವನ್ನು ನೇರಿಸಿಕೊಳ್ಳಬೇಕು. ಹೀಗೆ ಸಿದ್ಧ ವಾದ ಲೇಹ್ಯಕ್ಕೆ ಚ್ಯವನಪ್ರಾಶವೆಂದು ಹೆಸರು. ಈ ಲೇಹವನ್ನು ಸೇವಿಸ ಬೇಕಾದಲ್ಲಿ ಜಠರಾಗ್ನಿ ಪಾಟವವನ್ನು ನೋಡಿಕೊಂಡು ಪರಿಮಾಣವನ್ನು ಗೊತ್ತು ಮಾಡಿಕೊಳ್ಳಬೇಕು. ಕ್ಷಯಿಸಿ ಹೋದವರು ಅಂದರೆ ಕೃಶರಾದವರು, ಹುಡು ಗರು, ಮುದುಕರು, ಅಭಿಘಾತಾದಿಗಳಿಂದ ಕ್ಷೀಣರಾದವರು, ಮಿತಿಮಾರಿ ಸ್ತ್ರೀಸಂಪರ್ಕಮಾಡಿ ಕ್ಷಯಿಸಿಹೋದವರು, ಕ್ಷಯರೋಗಿಗಳು, ಹೃದಯರೋಗ ವುಳ್ಳವರು (ಹೃದಯ ದೌರ್ಬಲ್ಯ) ಸ್ವರಕ್ಷೀಣರು ಅಂದರೆ ಶಕ್ತಿಹೀನರಾಗಿ ಧ್ವನಿ ಕುಗ್ಗಿಹೋದವರು ಇಂತವರೆಲ್ಲರೂ ಸೇವಿಸಬಹುದು. ಕೆಮ್ಮು, ಉಬ್ಬಸ, ಅಕಾರಣವಾದ ಬಾಯಾರಿಕೆ, ವಾತರಕ್ತ, ಉರೋಗ್ರಹ, ವಾತ ಪಿತ್ತ, ಶುಕ್ರದೋಷ, ಮೂತ್ರದೋಷಗಳು ಇವುಗಳನ್ನೆಲ್ಲಾ ನಿವಾರಣೆ ಮಾಡು ತ್ತದೆ. ಬುದ್ಧಿಶಕ್ತಿ, ಜ್ಞಾಪಕಶಕ್ತಿ, ಹೆಂಗಸರ ಸಮಾಗಮ ವಿಷಯದಲ್ಲಿ ಉಲ್ಲಾಸ, ಶರೀರದಕಾಂತಿ, ದೇಹವರ್ಣ, ಮನಸ್ಸಿನ ಪ್ರಸನ್ನತೆ ಇವುಗಳನ್ನೆ ಉಂಟುಮಾಡುತ್ತದೆ. ಇದನ್ನು ಸೇವಿಸುತ್ತಬಂದಲ್ಲಿ ಸಮಸ್ತ ರೋಗಗಳಿಗೂ ಕಾರಣಭೂತವಾದ ಅಜೀರ್ಣ ರೋಗವು ಹತ್ತಿರ ಸೇರುವುದಿಲ್ಲ.

೧೭. ಕ್ಷಯಸಂಜೀವನೀ ಲೇಹ :—ಕಿರುನೆಲ್ಲಿಸೊಪ್ಪು ೪ ತೊಲೆ, ಆಡು ಸೋಗೆಸೊಪ್ಪು ೪ ತೊಲೆ, ಶೀತೊಂಡೇಸೊಪ್ಪು ೨ ತೊಲೆ, ಕಾಕಿತೊಂಡೇಸೊಪ್ಪು ೨ ತೊಲೆ, ಬಿಳೇಕೊಮ್ಮೆಸೊಪ್ಪು ೨ ತೊಲೆ, ದೊಡ್ಡಬಾಗೇಬೇರು ೨ ತೊಲೆ, ಒಂದೆಲೆಹೊನ್ನೆ ೨ ತೊಲೆ, ಪಾದರಿಬೇರು ೪ ತೊಲೆ, ನೆಲನೆಲ್ಲಿಬೇರು ೪ ತೊಲೆ, ನೈದಿಲೆಗಡ್ಡೆ ೪ ತೊಲೆ, ಬಿಲ್ಪತ್ರೆಬೇರು ೪ ತೊಲೆ, ಮೂರೆಲೆಹೊನ್ನೆ ೪ ತೊಲೆ, ಸುರಸುರಿಕೆಸೊಪ್ಪು ೪ ತೊಲೆ, ಒಳ್ಳೆ ತುಳಸಿಸೊಪ್ಪು ೪ ತೊಲೆ, ಕೊಡಸಿಗೆಬೇರು ೪ ತೊಲೆ, ಸೊಗದೇಬೇರು ೪ ತೊಲೆ, ಶುದ್ಧಿಮಾಡಿದ ಅಶ್ವಗಂಧಿ ೪ ತೊಲೆ, ನೆಲತಾಟಿಗಡ್ಡೆ ೪ ತೊಲೆ, ತಾವರೇಗಡ್ಡೆ ೪ ತೊಲೆ, ನೆಲಕುಂಬಳಗಡ್ಡೆ ೪ ತೊಲೆ, ಮಜ್ಜಿಗೆಗಡ್ಡೆ ೪ ತೊಲೆ, ತುಂಗೇಗಡ್ಡೆ ೪ ತೊಲೆ, ರಾಮಗುಳ್ಳ ೪ ತೊಲೆ, ಹೆಗ್ಗುಳ್ಳ ೪ ತೊಲೆ, ಅಮೃತಬಳ್ಳಿ ೪ ತೊಲೆ, ದೊಡ್ಡಮರದಚಕ್ಕೆ ೪ ತೊಲೆ,

ದ್ರಾಕ್ಷಿ ೧೬ ತೊಲೆ, ಶೊಂಟಿ ೨ ತೊಲೆ, ಮೆಣಸು ೨ ತೊಲೆ, ಅಳಲೇಕಾಯಿಸಿಪ್ಪೆ ೮ ತೊಲೆ, ಜಾಕಾಯಿ ೧ ತೊಲೆ, ಲವಂಗ ೨ ತೊಲೆ, ಆನೇನೆಗ್ಗಿಲು ೪ ತೊಲೆ, ಸಣ್ಣನೆಗ್ಗಿಲು ೪ ತೊಲೆ, ಅತಿಮಧುರ ೨ ತೊಲೆ, ಜಟಾಮಾಂಸಿ ೧ ತೊಲೆ, ಚಂಗಲಕೋಷ್ಟ ೧ ತೊಲೆ, ಕಟುಕರೋಹಿಣಿ ೧ ತೊಲೆ, ಗಂಟುಭಾರಂಗಿ ೪ ತೊಲೆ, ತಾಳೀಸಪತ್ರೆ ೪ ತೊಲೆ, ಸಣ್ಣರಾಸ್ಮೆ ೧ ತೊಲೆ, ಅಗರುಚಕ್ಕೆ ೧ ತೊಲೆ, ಬಿಳೇಜೇರಿಗೆ ೨ ತೊಲೆ, ಬಾಲಮೆಣಸು ೧ ತೊಲೆ, ಕುಂಕುಮಕೇಸರಿ ॥ ತೊಲೆ, ನಸುಗುನ್ನಿಬೀಜ ೨ ತೊಲೆ, ಶ್ರೀಗಂಧದಚಕ್ಕೆ ೧ ತೊಲೆ, ರಕ್ತಚಂದನ ೧ ತೊಲೆ, ಲಾವಂಚ ೧ ತೊಲೆ, ಕರ್ಕಾಟಕಶೃಂಗಿ ೨ ತೊಲೆ, ಚಿಟ್ಕಾಮುಟ್ಟೆ ೨ ತೊಲೆ, ಪೇರಾಮುಟ್ಟೆ ೨ ತೊಲೆ, ಕಚೋರ ೧ ತೊಲೆ, ತಾವರೆಬೀಜ ೪ ತೊಲೆ, ಬಿದರುಪ್ಪು ೪ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ೭ ಶೇರು ಹಸೇನೆಲ್ಲೀಕಾಯಿ ತಂದು ಒಂದುಬಟ್ಟೆಯಲ್ಲಿ ಗಂಟುಕಟ್ಟಿ ಒಂದು ಮಡಿಕೆಯಲ್ಲಿ ನೀರುಹಾಕಿ ಅದರಲ್ಲಿ ಈ ಗಂಟನ್ನು ಇಟ್ಟು ಒಲೆಯಮೇಲಿಟ್ಟು ಉರಿಹಾಕಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಇಟ್ಟುಕೊಳ್ಳುವದು. ನೆಲ್ಲೀಕಾಯಿ ಚನ್ನಾಗಿ ಕಿವಚಿ ಬೀಜಬಿಸಾಡಿ ಚನ್ನಾಗಿ ಕಿವಚಿ ಬಟ್ಟೆಯಲ್ಲಿ ಹಿಂಡಿ ರಸವನ್ನು ಕಷಾಯಕ್ಕೆ ಹಾಕಿಬಿಡುವದು. ನೆಲ್ಲೀಕಾಯಿ ಸಿಪ್ಪೆಯನ್ನು ಒಂದು ಬಾಂಡ್ಲಿಯಲ್ಲಿಹಾಕಿ ಒಲೆಯಮೇಲಿಟ್ಟು ಉರಿಹಾಕಿ ಹಸುವಿನತುಪ್ಪ ೩॥ ಶೇರು ಹಾಕಿ ಜೇನುತುಪ್ಪದ ಬಣ್ಣದಂತೆ ಉರಿದು ಇಟ್ಟುಕೊಂಡು ಈ ಕಷಾಯವನ್ನು ಹಾಕಿ ಸಕ್ಕರೆ ೧೪ ಶೇರುಹಾಕಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣಗಳನ್ನು ಹಾಕಿ ಲೇಹ್ಯವನ್ನುಪಕ್ವಮಾಡಿದನಂತರ ಜೇನುತುಪ್ಪ ೩॥ ಶೇರು ಹಾಕಿ ಎಲ್ಲವನ್ನು ಚನ್ನಾಗಿ ಕಲಸಿ ಇಳಿಸಿಕೊಳ್ಳುವಾಗ ಹಿಪ್ಪಲಿ ೪ ತೊಲೆ, ಲವಂಗಪತ್ರೆ ೧॥ ತೊಲೆ, ಯಾಲಕ್ಕಿ ೧॥ ತೊಲೆ, ನಾಗಕೇಸರಿ ೧॥ ತೊಲೆ, ದಾಲಚಿನ್ನಿ ೨ ತೊಲೆ, ತವಕ್ಷೀರ ೪ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಮೇಲ್ಕಂಡ ಲೇಹ್ಯಕ್ಕೆ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲುತೊಲೆ, ಅರ್ಧತೊಲೆ ಪ್ರಮಾಣ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೨೦ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕ್ಷಯ, ಉಬ್ಬಸ, ರಕ್ತಪಿತ್ತ, ಶರೀರ ಕೃಶತ್ವ ಇವುಗಳನ್ನು ನಿವಾರಣೆ ಮಾಡಿ ಧಾತುವೃದ್ಧಿಯನ್ನುಂಟುಮಾಡುವದು.

೧೮. ಶತಾವರಿಲೇಹ:—ಮಜ್ಜಿಗೆಗಡ್ಡೆ ೧೬ ತೊಲೆ, ಶುದ್ಧಿಮಾಡಿದ ಅಶ್ವಗಂಧಿ ೪ ತೊಲೆ, ನೆಲತಾಟಿಗಡ್ಡೆ ೪ ತೊಲೆ, ಸೊಗದೇಬೇರು ೪ ತೊಲೆ, ಅತಿಮಧುರ ೨ ತೊಲೆ, ಲಾವಂಚ ೨ ತೊಲೆ, ನಾಗಕೇಸರಿ ೧ ತೊಲೆ, ರಾಮಗುಳ್ಳದ ಬೇರು ೪ ತೊಲೆ, ನೆಲ್ಲೀಕಾಯಿ ೪ ತೊಲೆ, ಬಿಳೇಜೇರಿಗೆ ೨ ತೊಲೆ, ಹಿಪ್ಪಲಿ ೪ ತೊಲೆ, ಶೊಂಟಿ ೪ ತೊಲೆ, ಮೆಣಸು ೨ ತೊಲೆ, ಯಾಲಕ್ಕಿ ೧ ತೊಲೆ, ಅಳಲೇ

ಕಾಯಿಸಿಪ್ಪೆ ೪ ತೊಲೆ, ಜಾಕಾಯಿ ೧ ತೊಲೆ, ಲವಂಗಪತ್ರೆ ೨ ತೊಲೆ, ಆನೇ ನೆಗ್ಗಿಲು ೪ ತೊಲೆ, ತಾವರೇಗಡ್ಡೆ ೪ ತೊಲೆ, ನೆಲಕುಂಬಳಗಡ್ಡೆ ೪ ತೊಲೆ, ತುಂಗೇ ಗಡ್ಡೆ ೪ ತೊಲೆ, ಜಟಾಮಾಂಸಿ ೧ ತೊಲೆ, ತಾಳೀಸಪತ್ರೆ ೨ ತೊಲೆ, ಕರ್ಕಾಟಕ ಶೃಂಗಿ ೨ ತೊಲೆ, ಅಮೃತಬಳ್ಳಿ ೪ ತೊಲೆ, ಚಿಟ್ಟಾಮುಟ್ಟೆ ೧ ತೊಲೆ, ಪೇರಾ ಮುಟ್ಟೆ ೧ ತೊಲೆ, ಕಿರುನೆಲ್ಲಿ ೪ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ದ್ರಾಕ್ಷಿ ೮ ತೊಲೆ ನೀರುಹಾಕಿ ರುಬ್ಬಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವದು. ಒಂದುಬಾಂಡ್ಲಿಯಲ್ಲಿ ೭ ಶೇರು ಸಕ್ಕರೆಹಾಕಿ ಅದರಲ್ಲಿ ಮೇಲ್ಕಂಡ ದ್ರಾಕ್ಷಿ ಶೋಧಿಸಿದ್ದನ್ನು ಹಾಕಿ ಸ್ವಲ್ಪ ನೀರುಹಾಕಿ ಒಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣವನ್ನುಹಾಕಿ ಜೇನು ತುಪ್ಪ ೨ ಶೇರುಹಾಕಿ ಪಕ್ವವಾಗಿ ಲೇಹವನ್ನುಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲುತೊಲೆ, ಅರ್ಧತೊಲೆ ಸೇವನೆಮಾಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೨೦-೪೦ ದಿನ ಕೊಡಬೇಕು. ಇಚ್ಛಾಪತ್ಯ ಚಲದಿ ಪದಾರ್ಥ ವರ್ಜಿತ. ಇದರಿಂದ ರಕ್ತಪಿತ್ತ, ಆಮ್ಲಪಿತ್ತ, ಕಾಮಾಲೆ, ಪಾಂಡು, ಕ್ಷಯ, ಶ್ವೇತಪ್ರದರ, ಶುಕ್ಲನಷ್ಟ ಗುಣವಾಗುವದು.

೧೯. ದ್ರಾಕ್ಷಾದಿಲೇಹ :—ಶೊಂಟಿ ೧ ತೊಲೆ, ಹಿಪ್ಪಲಿ ೨ ತೊಲೆ, ಮೆಣಸು ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀ ಕಾಯಿ ೩ ತೊಲೆ, ಜಾಕಾಯಿ ‖ ತೊಲೆ, ಜಾಪತ್ರೆ ‖ ತೊಲೆ, ಲವಂಗ ೧ ತೊಲೆ, ದಾಲಚಿನ್ನಿ ೨ ತೊಲೆ, ಲವಂಗಪತ್ರೆ ‖ ತೊಲೆ, ಯಾಲಕ್ಕಿ ೧ ತೊಲೆ, ಕೊತ್ತುಂ ಬರಿಬೀಜ ೧ ತೊಲೆ, ಬಿಳೀಜೀರಿಗೆ ೨ ತೊಲೆ, ಸೋಪುಬೀಜ ೨ ತೊಲೆ, ಚಂಗಲ ಕೋಷ್ಟ ೧ ತೊಲೆ, ಜಟಾಮಾಂಸಿ ೧ ತೊಲೆ, ಬಾಲಮೆಣಸು ೧ ತೊಲೆ, ಅತಿ ಮಧುರ ೨ ತೊಲೆ, ಖರ್ಜೂರ ೨ ತೊಲೆ, ತಾಳೀಸಪತ್ರೆ ೪ ತೊಲೆ, ತಾವರೆಗಡ್ಡೆ ೪ ತೊಲೆ, ತಾವರೆಕುಸುಮ ೪ ತೊಲೆ, ಹಿಪ್ಪೆಹುವ್ವ ೨ ತೊಲೆ, ಶ್ರೀಗಂಧದಚಕ್ಕೆ ೧ ತೊಲೆ, ತವಕ್ಷೀರ ೩ ತೊಲೆ, ಭದ್ರಮುಸ್ತೆ ೨ ತೊಲೆ, ಆನೇನೆಗ್ಗಿಲು ೪ ತೊಲೆ, ಶುದ್ಧಿಮಾಡಿದ ಅಶ್ವಗಂಧಿ ೪ ತೊಲೆ, ನಾಯಿತೊಳಸಿಬೀಜ ೧ ತೊಲೆ, ಮಜ್ಜಿಗೆ ಗಡ್ಡೆ ೪ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಕುಂಕುಮಕೇಸರಿ ‖ ತೊಲೆ ಖಲ್ವದಲ್ಲಿ ಹಾಕಿ ನೀರುಹಾಕಿ ಅರದುಕೊಳ್ಳುವದು. ಇದನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ದ್ರಾಕ್ಷಿ ೧‖ ಶೇರು ತಂದು ವರಳಲ್ಲಿಹಾಕಿ ನೀರುಹಾಕಿ ರುಬ್ಬಿ ಬಾಂಡ್ಲಿಯಲ್ಲಿ ಹಾಕುವದು. ರಾಯುಪುಡಿಸಕ್ಕರೆ, ೮ ಶೇರುಹಾಕಿ ವಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಹಾಕಿ ಜೇನುತುಪ್ಪ ೧ ಶೇರುಹಾಕಿ ಪಕ್ವವಾಗಿ ಲೇಹವನ್ನುಮಾಡಿ ಇಟ್ಟುಕೊಳ್ಳು ವದು. ಹೊತ್ತಿಗೆ ಕಾಲುತೊಲೆ, ಅರ್ಧತೊಲೆ ಸೇವನೆಮಾಡುವದು. ಹೀಗೆ ಬೆಳಿಗ್ಯೆ

ಸಾಯಂಕಾಲ ೨ ಹೊತ್ತು ೨೦-೪೦ ದಿನ ಕೊಡಬೇಕು. ಇಚ್ಛಾಪತ್ಯ ಚಲದಿ ಪದಾರ್ಥ ವರ್ಜಿತ. ಇದರಿಂದ ರಕ್ತಪಿತ್ತ, ಆಮ್ಲಪಿತ್ತ, ಕ್ಷಯ, ಶ್ವೇತಪ್ರದರ, ಶುಕ್ಲನಷ್ಟ ಇವು ಗುಣವಾಗುವದು.

೨೦. ಲಾಕ್ಷಾದಿತೈಲ:—ಅವಲಕ್ಕಿ ಅರಗು ೬೦ ತೊಲೆ ತಂದು ೪ ಶೇರು ನೀರುಹಾಕಿ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ೧ ಶೇರು ತೆಗೆದುಕೊಳ್ಳುವದು. ತುಪ್ಪದ ದೇವದಾರು ೧ ತೊಲೆ, ಕಟುಕರೋಹಿಣಿ ೧ ತೊಲೆ, ಸಣ್ಣರಾಸ್ಮೆ ೧ ತೊಲೆ, ಅಶ್ವಗಂಧಿ ೧ ತೊಲೆ, ಚಂಗಲಕೋಷ್ಟ ೧ ತೊಲೆ, ಶ್ರೀಗಂಧದಚಕ್ಕೆ ೧ ತೊಲೆ, ಅರಸಿನ ॥ ತೊಲೆ, ತುಂಗೇಗಡ್ಡೆ ೧ ತೊಲೆ, ಮರದರಿಸಿನ ॥ ತೊಲೆ, ಅತಿಮಧುರ ೧ ತೊಲೆ, ಕಸ್ತೂರಿಅರಿಸಿನ ೧ ತೊಲೆ, ಲಾವಂಚ ೧ ತೊಲೆ, ಸೊಗದೇಬೇರು ೧ ತೊಲೆ, ಹಾವುನಂಜಿನಸೊಪ್ಪು ೧ ತೊಲೆ, ತಕ್ಕೋಲ ೧ ತೊಲೆ, ಕರ್ಕಾಟಕ ಶೃಂಗಿ ೨ ತೊಲೆ, ರೇಣುಕಬೀಜ ೧ ತೊಲೆ ಇವುಗಳನ್ನು ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿಕೊಳ್ಳುವದು. ಮೊಸರು ಬಟ್ಟೆಯಲ್ಲಿ ಗಂಟುಕಟ್ಟಿ ನೀರು ತೆಗೆದುಕೊಂಡದ್ದು ೧ ಶೇರು, ಒಳ್ಳೆಣ್ಣೆ ೨ ಶೇರು ಇವುಗಳನ್ನು ಒಂದು ಬಾಂಡ್ಲಿ ಯಲ್ಲಿ ಹಾಕಿ ಒಲೆಯಮೇಲೆ ಇಟ್ಟು ಉರಿಹಾಕಿ ಬಟ್ಟೆಯಲ್ಲಿ ಶೋಧಿಸಿಕೊಳ್ಳು ವದು. ಈ ತೈಲ ಶರೀರಕ್ಕೆ ಲೇಪನಮಾಡಿ ಅಭ್ಯಂಗನವಂ ಮಾಡಿಸಲು ಜ್ವರ, ಶ್ವಾಸ, ಅಪಸ್ಮಾರ, ಶೋಭೆ, ಅಸ್ಥಿಗತಜ್ವರ, ಕ್ಷಯ ಗುಣವಾಗುವದು. ಪತ್ಯ ಹಸುವಿನಹಾಲು ಅನ್ನ ಅಥವಾ ತೊಗರೀಬೇಳೆ ಸಿಹಿಸಾರು ಅನ್ನ.

೨೧. ಮಾತುಲುಂಗ ರಸಾಯನ:—ಮಾದವಾಳದ ಹಣ್ಣಿನ ರಸ ೧ ಪಾವು, ನಿಂಬೇಹಣ್ಣಿನ ರಸ ೧ ಪಾವು, ಹಸೇಶೊಂಟಿ ರಸ ೧ ಪಾವು, ದಾಳಿಂಬರೆಹಣ್ಣಿನ ರಸ ೧ ಪಾವು, ಹೇರಳೆಹಣ್ಣಿನ ರಸ ೧ ಪಾವು, ನೆಲ್ಲೀಕಾಯಿ ರಸ ೧ ಪಾವು, ಸಕ್ಕರೆ ೪॥ ಶೇರು ಇವುಗಳೆಲ್ಲವನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇ ಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಈ ಚೂರ್ಣವನ್ನು ಹಾಕುವದು. ಲವಂಗ ॥ ತೊಲೆ, ಶೊಂಟಿ ೨ ತೊಲೆ, ಮೆಣಸು ॥ ತೊಲೆ, ಹಿಪ್ಪಲಿ ॥ ತೊಲೆ, ಮೋಡಿ ೧ ತೊಲೆ, ತುಪ್ಪದದೇವದಾರು ॥ ತೊಲೆ, ಬಿಳೇಜೀರಿಗೆ ೨ ತೊಲೆ, ಮುಡಿವಾಳ ೧ ತೊಲೆ, ಲಾವಂಚ ೧ ತೊಲೆ, ತುಂಗೇಗಡ್ಡೆ ೧ ತೊಲೆ, ಸೈಂಧರ ಲವಣ ೧ ತೊಲೆ, ಅತಿಮಧುರ ೧ ತೊಲೆ, ಲವಂಗಪತ್ರೆ ೧ ತೊಲೆ, ಕರ್ಕಾಟಕ ಶೃಂಗಿ ೧ ತೊಲೆ, ಕೊತ್ತುಂಬರಿಬೀಜ ೨ ತೊಲೆ, ಯಾಲಕ್ಕಿ ೨ ತೊಲೆ, ದ್ರಾಕ್ಷಿ ೪ ತೊಲೆ, ಖರ್ಜೂರ ೪ ತೊಲೆ, ಕುಂಕುಮಕೇಸರಿ ಕಾಲುತೊಲೆ ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಅರಿಯುವ ಜಿನಸು ಗಳನ್ನು ಅರದು ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಜೇನುತುಪ್ಪ ।॥ ಶೇರು ಹಾಕಿ ಕಲಸಿ ಪಕ್ವವಾಗಿ ಲೇಹವನ್ನು ಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲು

ತೊಲೆ, ಅರ್ಧತೊಲೆ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೨೦-೪೦ ದಿನ ಕೊಡಬೇಕು. ಇಚ್ಛಾಪಥ್ಯ ಚಲದಿಪದಾರ್ಥ ವರ್ಜಿತ. ಇದರಿಂದ ಕ್ಷಯ, ಉರಿಪೈತ್ಯ, ಪಿತ್ತ, ವಾಂತಿ, ಅರೋಚಕ ಇವು ಗುಣವಾಗುವದು. ಗರ್ಭಿಣಿಸ್ತ್ರೀಯರಿಗೆ ಸಂಭವಿಸುವ ವಾಂತಿ, ಬಲಹೀನತೆ ಇವುಗಳನ್ನು ಹೋಗಲಾಡಿಸಿ ಗರ್ಭಾಶಯಕ್ಕೆ ಬಲವನ್ನುಂಟುಮಾಡುವದು.

೨೨. ಕೂಷ್ಮಾಂಡ ಘೃತ:—ಬೂದಕುಂಬಳಕಾಯಿ ರಸ ೪ ಶೇರು, ಆಡುಸೋಗೇಸೊಪ್ಪಿನ ರಸ ೧ ಶೇರು, ಮಜ್ಜಿಗೆಗಡ್ಡೆ ರಸ ೧ ಶೇರು, ನೆಲಕುಂಬಳಗಡ್ಡೆ ರಸ ೧ ಶೇರು, ಹಸುವಿನಹಾಲು ೪ ಶೇರು, ಹಸುವಿನತುಪ್ಪ ೪ ಶೇರು, ಜೇನುತುಪ್ಪ ೨ ಶೇರು ಇವು ಎಲ್ಲವನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ವಲೆಯ ಮೇಲಿಟ್ಟು ಉರಿಹಾಕಿ ಘೃತಪಕ್ವವಾದ ಕೂಡಲೇ ಈ ಚೂರ್ಣ ಹಾಕುವದು. ಶೊಂಟಿ ೩ ತೊಲೆ, ಮೆಣಸು ೩ ತೊಲೆ, ಹಿಪ್ಪಲಿ ೩ ತೊಲೆ, ಬಿದರುಪ್ಪು ೩ ತೊಲೆ, ಅತಿಮಧುರ ೩ ತೊಲೆ, ಬಿಳೇಜೀರಿಗೆ ೩ ತೊಲೆ, ಜಟಾಮಾಂಸಿ ೩ ತೊಲೆ, ಯಾಲಕ್ಕಿ ೩ ತೊಲೆ, ಲವಂಗ ೩ ತೊಲೆ, ದಾಲಚಿನ್ನಿ ೩ ತೊಲೆ, ಚಂಗಲಕೋಷ್ಟ ೧ ತೊಲೆ, ತುಂಗೇಗಡ್ಡೆ ೩ ತೊಲೆ, ಕಲ್ಲುಹೂವ್ವು ೩ ತೊಲೆ, ಶ್ರೀಗಂಧದಚಕ್ಕೆ ೩ ತೊಲೆ, ಸೊಗದೇಬೇರು ೩ ತೊಲೆ, ಲಾವಂಚ ೩ ತೊಲೆ, ಅಳಲೇಕಾಯಿಸಿಪ್ಪೆ ೩ ತೊಲೆ, ತಾರೇಕಾಯಿಸಿಪ್ಪೆ ೬ ತೊಲೆ, ನೆಲ್ಲೀಕಾಯಿ ೧೨ ತೊಲೆ, ಕೊತ್ತುಂಬರಿಬೀಜ ೩ ತೊಲೆ, ಲವಂಗಪತ್ರೆ ೩ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಮೇಲ್ಕಂಡ ಪಾತ್ರೆಯಲ್ಲಿ ಹಾಕಿ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ‖ ತೊಲೆ ಕೊಡಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೨೦-೪೦ ದಿನ ಕೊಡುವದು. ಇಚ್ಛಾಪಥ್ಯ ಚಲದಿಪದಾರ್ಥ ವರ್ಜಿತ ಇದರಿಂದ ಮೂಳೆವಳಗಳ ಜ್ವರ, ಕ್ಷಯಸಮ್ಮಂಧವಾದ ಎಲ್ಲಾ ರೋಗ, ಹೆಂಗಸರ ಯೋನಿಸಮ್ಮಂಧವಾದ ಎಲ್ಲಾ ರೋಗ, ಮುಟ್ಟಿನದೋಷ ಇವು ಗುಣವಾಗಿ ಬಂಜೆಯು ಗರ್ಭಧರಿಸುವಳು.

೨೩. ಅಶ್ವಗಂಧಿಲೇಹ:—ಶುದ್ಧಿಮಾಡಿದ ಅಶ್ವಗಂಧಿ ೬೦ ತೊಲೆ, ಚಾತುರ್ಜಾತಕ, ಕೊತ್ತುಂಬರಿಬೀಜ, ದ್ರಾಕ್ಷಿ, ಖರ್ಜೂರ, ಶ್ರೀಗಂಧದಚಕ್ಕೆ, ಮುಡಿವಾಳ, ಲವಂಗ, ಹಿಪ್ಪಲಿ, ಮೋಡಿ, ತಾವರೆಗಡ್ಡೆ, ಜಾಕಾಯಿ, ಜಟಾಮಾಂಸಿ, ಅಳಲೇಕಾಯಿಸಿಪ್ಪೆ, ಬಿದರುಪ್ಪು, ತ್ರಿಕಟುಕ ಇವುಗಳು ಜಿನಸಿಗೆ ೧ ವರಹ ತೂಕ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಒಂದು ಬಾಂಡ್ಲಿಯಲ್ಲಿ ಸಕ್ಕರೆ ೧೫೦ ತೊಲೆ, ಹಸುವಿನಹಾಲು ೪ ಶೇರು ಹಾಕಿ ವಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣಹಾಕಿ ಜೇನುತುಪ್ಪ ೧ ಶೇರು, ಹಸುವಿನತುಪ್ಪ ೨ ಶೇರು ಹಾಕಿ ಪಕ್ವವಾಗಿ ಲೇಹಮಾಡಿಕೊಳ್ಳುವದು.

ಪ್ರಯೋಗ ‖ ತೊಲೆಯಿಂದ ‖| ತೊಲೆವರಿವಿಗೆ ತೆಗೆದುಕೊಳ್ಳಬೇಕು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೪೦ ದಿನ ಕೊಡುವದು. ಪತ್ಯ ಚಲದಿ ಪದಾರ್ಥ ವರ್ಜಿತ. ಇದರಿಂದ ಕ್ಷಯ, ಕಾಮಾಲೆ, ಪಿತ್ತವಿಕಾರ, ದೌರ್ಬಲ್ಯ, ಶೋಷೆ ಗುಣವಾಗುವದು. ಶಕ್ತಿ ಮತ್ತು ದೇಹಧಾತುಗಳು ವೃದ್ಧಿಯಾಗುವವು.

೨೪. ಆಡುಸೋಗೆ ೧ ತೊಲೆ, ಅಮೃತಬಳ್ಳಿ ೧ ತೊಲೆ, ಹಿಪ್ಪಲಿ ೧ ತೊಲೆ, ಲವಂಗ ೧ ತೊಲೆ, ಯಾಲಕ್ಕಿ ‖ ತೊಲೆ, ದಾಲಚಿನ್ನಿ ೧ ತೊಲೆ, ನಾಗಕೇಸರಿ ‖ ತೊಲೆ, ಜಾಕಾಯಿ ‖ ತೊಲೆ, ಲಾವಂಚ ‖ ತೊಲೆ, ಶೊಂಟಿ ೧ ತೊಲೆ, ಕರೇಜೀರಿಗೆ ‖ ತೊಲೆ, ಕೃಷ್ಣಾಗರು ‖ ತೊಲೆ, ಜಟಾಮಾಂಸಿ ‖ ತೊಲೆ, ತಾವರೇಹುವ್ವ ‖ ತೊಲೆ, ಶ್ರೀಗಂಧದಚಕ್ಕೆ ೧ ತೊಲೆ, ವೋಡಿ ‖ ತೊಲೆ, ಮುಡಿವಾಳ ‖ ತೊಲೆ, ಬಾಲಮೆಣಸು ‖ ತೊಲೆ, ರಾಮಗುಳ್ಳ ೧ ತೊಲೆ, ಹೆಗ್ಗುಳ್ಳ ೧ ತೊಲೆ, ಕೊತ್ತುಂಬರಿಬೀಜ ೧ ತೊಲೆ, ತುಪ್ಪದದೇವದಾರು ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಒಂದು ಬಾಂಡ್ಲಿಯಲ್ಲಿ ಸಕ್ಕರೆ ೩ ಶೇರು ಹಾಕಿ ನೀರುಹಾಕಿ ವಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣಹಾಕಿ ಜೇನುತುಪ್ಪ ‖ ಶೇರು ಹಾಕಿ ಕಲಸಿ ಲೇಹ ಪಕ್ವಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲುತೊಲೆ, ಅರ್ಧತೊಲೆ ತೆಗೆದುಕೊಳ್ಳಬೇಕು. ಈರೀತಿ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೨೦-೪೦ ದಿವಸ ಕೊಡಬೇಕು. ಇಚ್ಛಾಪತ್ಯ, ಹುಳಿ ಚಲದಿ ವರ್ಜಿತ. ಇದರಿಂದ ಕ್ಷಯ, ಬಾಣಂತಿಕ್ಷಯ, ಪುರಾಣಜ್ವರ, ಅಸ್ತಿಗತಜ್ವರ ಇವುಗಳು ಗುಣವಾಗುವದು.

೨೫. ಶುದ್ಧಿಮಾಡಿದ ಪರಂಗಿಚಕ್ಕೆ ‖ ಶೇರು, ಶೊಂಟಿ ‖ ಶೇರು, ಮೆಣಸು ೧ ಪಾವು, ಹಿಪ್ಪಲಿ ೧ ತೊಲೆ, ಲವಂಗ ೧ ತೊಲೆ, ದಾಲಚಿನ್ನಿ ೧ ತೊಲೆ, ಲವಂಗಪತ್ರಿ ೧ ತೊಲೆ, ನಾಗಕೇಸರಿ ೨ ತೊಲೆ. ವಾಯುವಿಳಂಗ ೩ ತೊಲೆ, ಚವ್ಯ ೧ ತೊಲೆ, ಮರದರಿಸಿನ ೩ ತೊಲೆ, ನೆಲತಂಗಡಿ ‖ ಶೇರು, ನೆಲಗೊರಿಮಿಡಿ ೩ ತೊಲೆ, ನೆಲಬೇವು ೩ ತೊಲೆ, ಸೈಂಧರವಲಣ ೨ ತೊಲೆ, ಅಳಲೇಕಾಯಿಸಿಪ್ಪೆ ೨ ತೊಲೆ, ತಾರೇಕಾಯಿಸಿಪ್ಪೆ ೪ ತೊಲೆ, ನೆಲ್ಲೀಕಾಯಿ ೮ ತೊಲೆ, ಬಿಳೇಜೀರಿಗೆ ೩ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇದರ ಎರಡರಷ್ಟು ರಾಯಿಪುಡಿ ಸಕ್ಕರೆ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲುತೊಲೆ, ಅರ್ಧ ತೊಲೆ ಚೂರ್ಣ ಜೇನುತುಪ್ಪದಲ್ಲಿ ಕಲಸಿಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೨೦ ದಿವಸ ಕೊಡಬೇಕು. ಇಚ್ಛಾಪತ್ಯ ಚಲದಿಪದಾರ್ಥ ವರ್ಜಿತ. ಇದರಿಂದ ಮೇಹಕಾರಕದಿಂದ ಹುಟ್ಟಿದ ನಂಜು, ಜ್ವರ, ತಪನ, ಕ್ಷಯ, ಕಾಲುಚಳುಕು ಇವು ಗುಣವಾಗುವವು.

# ಇಪ್ಪತ್ತುನಾಲ್ಕನೆಯ ಅಧ್ಯಾಯ.

## ಕಾಸರೋಗ—ಔಷಧಗಳು.

### ಕಾಸರೋಗ ಲಕ್ಷಣ.

ವಾತ, ಪಿತ್ತ, ಶ್ಲೇಷ್ಮಗಳು ಪ್ರಕೋಪಿಸಿ ಹೃದಯ (ಉರಃ) ಸ್ಥಾನವನ್ನಾಶ್ರಯಿಸಿಕೊಂಡು ಕ್ಷಯರೂಪಕವಾಗಿ ಕ್ರಮವಾಗಿ ವಾತಕಾಸ, ಪಿತ್ತಕಾಸ, ಕಫಕಾಸ, ಉರಃಕ್ಷತಕಾಸ, ಕ್ಷಯಕಾಸಗಳೆಂದು ೫ ವಿಧಗಳಾದ ಕಾಸಗಳು ಹುಟ್ಟಿ ಕ್ರಮೇಣ ಒಂದಕ್ಕಿಂತಲು ಒಂದು ಪ್ರಬಲವಾಗಿ ಅನೇಕ ಕಾಸಕ್ಷಯರೋಗಂಗಳು ಹುಟ್ಟುವುವು.

ವಾತಕಾಸದಲ್ಲಿ ಹೃದಯವು, ಕಣ್ಣುಗಳ ಪಕ್ಕಗಳು, ಶಿರಸ್ಸು, ಉದರವು, ಪಾರ್ಶ್ವಗಳು ಇವುಗಳಲ್ಲಿ ಬಾಧೆಯಾಗುವಿಕೆ, ಮುಖವು ಕ್ಷೀಣಿಸಿರುವಿಕೆ; ಬಲವು, ಕಂಠಸ್ವರವು, ಓಜಸ್ಸು ಇವು ಕ್ಷಯಿಸುವಿಕೆ, ಯಾವಾಗಲೂ ಕಾಸವೇಗವು ಅನುಸರಿಸಿರುವಿಕೆ, ಕಫವು ಅಥವ ಪುಡಿಕೆಮ್ಮಲುಂಟಾಗುವಿಕೆ, ಕಂಠಧ್ವನಿ ಬದಲಾಯಿಸಿರುವಿಕೆ ಈ ಲಕ್ಷಣಂಗಳು ಕಾಣುವುದು.

ಪಿತ್ತಕಾಸದಲ್ಲಿ ಉದರದಲ್ಲಿ ತಾಪ, ಜ್ವರ, ಬಾಯಿ ಒಣಗುವಿಕೆ, ಬಾಯಿ ಕಹಿಯಾಗಿರುವಿಕೆ, ದಾಹ, ಹಳದೀವಾಂತಿಗಳು, ಕಫವು ಬಾಯಿಂದ ಬೀಳುವಿಕೆ ಮೊದಲಾದ ಲಕ್ಷಣಗಳಿರುವುದು.

ಕಫಕಾಸದಲ್ಲಿ ಬಾಯಿ ಜಿಗುಟಾಗಿರುವಿಕೆ, ತಲೆನೋವು, ಶರೀರವೆಲ್ಲವೂ ಕಫದಿಂದ ತುಂಬಿರುವಿಕೆ, ಅನ್ನದಲ್ಲಿಚ್ಛೆಯಿಲ್ಲದಿರುವಿಕೆ, ಶರೀರ ಭಾರ, ಕೆಮ್ಮಲಿನಲ್ಲಿ ಕಠಿನವಾಗಿ ಮುದ್ದೆಯಾಗಿರುವ ಕಫವು ಬೀಳುವಿಕೆ ಮೊದಲಾದ ಲಕ್ಷಣಗಳು ಕಾಣುವುದು.

ಉರಃಕ್ಷತ ಕಾಸದಲ್ಲಿ ಕಂಠದಲ್ಲಿ ಬಾಧೆ, ಜ್ವರ, ಶ್ವಾಸ, ಬೆರಳುಗಿಣ್ಣುಗಳಲ್ಲಿ ನೋವು, ಸ್ವರವು ಬದಲಾಯಿಸುವಿಕೆ, ದಾಹ ಮೊದಲಾದ ಲಕ್ಷಣಗಳು ಇರುವುದು. ಅಂತಹ ರೋಗಿಯ ಧ್ವನಿಯು ಪಾರಿವಾಳದ ಮರಿಯ ಧ್ವನಿಯನ್ನು ಹೋಲುವುದು.

ಕ್ಷಯಕಾಸದಲ್ಲಿ ಶರೀರವೆಲ್ಲಾ ನೋವು, ಜ್ವರ, ತಾಪ, ಮೂರ್ಛೆ, ಬಲಕ್ಷಯವು, ದ್ರವವಿಲ್ಲದ ಕಫವು ಬಾಯಿಯಿಂದ ಬೀಳುವಿಕೆ, ಮಾಂಸವು ನಶಿಸುವಿಕೆ, ಕೀವಿನಿಂದ ಕೂಡಿದ ರಕ್ತವನ್ನು ಬಾಯಿಂದ ಹೊರಡಿಸುವಿಕೆ ಮೊದಲಾದ ಲಕ್ಷಣಗಳು ಉಂಟಾಗಿರುವುದು.

## ಕಾಸರೋಗದಲ್ಲಿ ಅಸಾಧ್ಯ ಲಕ್ಷಣ.

೧. ಬಲ, ಮಾಂಸಗಳು ಕಮ್ಮಿಯಾಗುವ ಕೆಮ್ಮು ಉಂಟಾದರೆ ಅಸಾಧ್ಯವು.

## ಕಾಸಶ್ವಾಸರೋಗದಲ್ಲಿ ಅಸಾಧ್ಯ ಲಕ್ಷಣ.

೧. ಜ್ವರ, ವಾಂತಿ, ಕೆಮ್ಮು, ಶೋಭೆ, ನೀರಡಿಕೆ, ಅತಿಸಾರಗಳಿದ್ದರೆ ಅಸಾಧ್ಯವು.

## ಕಾಸರೋಗಕ್ಕೆ ಚಿಕಿತ್ಸೆಗಳು.

೧. ಹಿಪ್ಪಲ್ಯಾದಿ ಲೇಹ:—ಒಂದು ಬಾಂಡ್ಲಿಯಲ್ಲಿ ಮೇಕೆ ಮೂತ್ರ ೧ ಶೇರು ಹಾಕಿ, ರಾಮಗುಳ್ಳ ಸಮೂಲ ತಂದು ಕುಟ್ಟಿ ರಸ ತೆಗೆದು ಬಟ್ಟೆಯಲ್ಲಿ ಶೋಧಿಸಿದ್ದು ೧ ಶೇರು, ಹಳೇಬೆಲ್ಲ ೩ ಶೇರು ಇವು ಮೂರು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ೧ ಶೇರು ಹಿಪ್ಪಲಿಚೂರ್ಣ, ಶೊಂಟಿ ‖ ಶೇರು ಕುಟ್ಟಿ ಶೋಧಿಸಿ ಬಾಂಡ್ಲಿಯಲ್ಲಿ ಹಾಕಿ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ಯಲಚೀಬೀಜದ ಪ್ರಮಾಣ ತೆಗೆದುಕೊಳ್ಳಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಬಹಳದಿನದ ಕೆಮ್ಮು, ಗೂರ್ಲು, ಉಬ್ಬಸ ಗುಣವಾಗುವದು.

೨. ರಾಮಗುಳ್ಳಕಾಯಿಬೀಜ ೧ ಶೇರು, ಹಿಪ್ಪಲಿ ‖ ಶೇರು, ಶೊಂಟಿ ೧ ಪಾವು, ಸೂರ್ತಿಬೆಳಗಾರ ಅರಳುಮಾಡಿದ್ದು ಕಾಲುತೊಲೆ ಇವುಗಳು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಹೊತ್ತಿಗೆ ೨ ಆಣೆ ತೂಕ ಚೂರ್ಣ ಜೇನುತುಪ್ಪದಲ್ಲಿ ಕಲಸಿ ತೆಗೆದುಕೊಳ್ಳುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೆಮ್ಮು, ಉಬ್ಬಸ ಗುಣವಾಗುವದು.

೩. ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ, ಶೊಂಟಿ ೪ ತೊಲೆ, ತಾರೇಕಾಯಿಸಿಪ್ಪೆ ೪ ತೊಲೆ, ಅಳಲೇಕಾಯಿಸಿಪ್ಪೆ ೪ ತೊಲೆ, ದುಂಪರಾಶ್ಮಿ ೧ ತೊಲೆ, ಹಿಪ್ಪಲಿ ೪ ತೊಲೆ, ಮೋಡಿ ೧ ತೊಲೆ, ವೋಮ ೧ ತೊಲೆ, ಲವಂಗ ೧ ತೊಲೆ, ರಾಮಗುಳ್ಳಕಾಯಿ ೧ ಶೇರು ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಒಂದು ಬಾಂಡ್ಲಿಯಲ್ಲಿ ೪ ಶೇರು ಹಳೇಬೆಲ್ಲ ಹಾಕಿ ವಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಹಾಕಿ ಪಕ್ವವಾಗಿ ಲೇಹವನ್ನು ಮಾಡಿಕೊಳ್ಳುವದು. ಹೊತ್ತಿಗೆ ಯಲಚೀಬೀಜದ ಪ್ರಮಾಣ ಜೇನುತುಪ್ಪದಲ್ಲಿ ಕಲಸಿ ತೆಗೆದುಕೊಳ್ಳಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ಹಸುವಿನ ಹಾಲು ಅಥವಾ ಮೇಕೇಹಾಲು ಅನ್ನ. ಇದರಿಂದ ಕೆಮ್ಮು, ಉಬ್ಬಸ ಗುಣವಾಗುವದು.

೪. ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ, ಸೊಂಟಿ ೪ ತೊಲೆ, ರಾಮುಗುಳ್ಳಕಾಯಿ ೮ ತೊಲೆ, ಆಡುಸೋಗೆಸೊಪ್ಪು ೪ ತೊಲೆ, ಹಿಪ್ಪಲಿ ೪ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಹೊತ್ತಿಗೆ ೨ ಆಣೆ ತೂಕ ಚೂರ್ಣ ಜೇನುತುಪ್ಪದಲ್ಲಿ ಕಲಸಿಕೊಡುವದು. ಹೀಗೆ ಬೆಳಗ್ಗೆ ಸಾಯಂಕಾಲ ೨ ಹೊತ್ತು ೬-೧೪ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೆಮ್ಮು ಗುಣವಾಗುವದು.

೫. ಹಿಪ್ಪಲಿ ೧ ತೊಲೆ, ಬಿಡಾಲವಣ ೧ ತೊಲೆ, ಶೊಂಟಿ ೧ ತೊಲೆ, ಲವಂಗ ೧ ತೊಲೆ, ಯಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ, ಮೆಣಸು ೧ ತೊಲೆ, ಯಕ್ಕದಹುವ್ವು ೪ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಖಲ್ವದಲ್ಲಿ ಹಾಕಿ ಜೇನುತುಪ್ಪ ಸೇರಿಸಿ ಅರದು ಅವರೇಕಾಳು ಪ್ರಮಾಣ ಮಾತ್ರೆಮಾಡಿ ತೆಗೆದುಕೊಳ್ಳುವದು. ಹೀಗೆ ಬೆಳಗ್ಗೆ ಸಾಯಂಕಾಲ ೨ ಹೊತ್ತು ೬ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೆಮ್ಮು ಗುಣವಾಗುವದು.

೬. ಹಿಪ್ಪಲಿ ೪ ತೊಲೆ, ಲವಂಗ ೪ ತೊಲೆ, ತಾಳೀಸಪತ್ರೆ ೪ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಖಲ್ವದಲ್ಲಿ ಹಾಕಿ ಆಡುಸೋಗೆಯಲೆಯ ರಸದಲ್ಲಿ ಚನ್ನಾಗಿ ಅರದು ಕಡಲೇಕಾಳು ಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಜೇನುತುಪ್ಪದಲ್ಲಿ ಕಲಸಿ ಕೊಡುವದು. ಹೀಗೆ ಬೆಳಗ್ಗೆ ಸಾಯಂಕಾಲ ೨ ಹೊತ್ತು ೬ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೆಮ್ಮು ಗುಣವಾಗುವದು.

೭. ಸೈಂಧರಲವಣ ೨ ತೊಲೆ, ಸೌವರ್ಚಲವಣ ೨ ತೊಲೆ, ಬಿಡಾಲವಣ ೨ ತೊಲೆ, ಪಾದರಿಲವಣ ೨ ತೊಲೆ, ಸಮುದ್ರಲವಣ ೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಮುಳ್ಳುಸೊಂಡೆಹಣ್ಣು ೧ ಶೇರು ತಂದು ಒಂದು ಮಡಿಕೆಯಲ್ಲಿ ಹಾಕಿ ೨ ಶೇರು ಹಸುಪಿನಮೂತ್ರ ಹಾಕಿ ಬಿಸಲಿನಲ್ಲಿ ಒಣಗಿಸಿ ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು ಮೇಲ್ಕಂಡ ಲವಣಗಳು ಎಲ್ಲವನ್ನು ಶೇರಿಸಿ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ೨ ಆಣೆ ತೂಕ ಚೂರ್ಣ ಜೇನುತುಪ್ಪದಲ್ಲಿ ಕಲಸಿಕೊಡುವದು. ಹೀಗೆ ಬೆಳಗ್ಗೆ ಸಾಯಂಕಾಲ ೨ ಹೊತ್ತು ೬ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೆಮ್ಮು, ಉಬ್ಬಸ ಗುಣವಾಗುವದು.

೮. ತುಂಗೇಗಡ್ಡೆ ೨ ತೊಲೆ, ಜಾಕಾಯಿ ॥ ತೊಲೆ, ಶ್ರೀಗಂಧದಚಕ್ಕೆ ॥ ತೊಲೆ, ಹಿಪ್ಪಲಿ ೧ ತೊಲೆ, ಕರ್ಕಾಟಕಶೃಂಗಿ ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ, ಎಡಮುರಿಕಾಯಿ ೪ ತೊಲೆ

ಇವುಗಳನ್ನು ಕುಟ್ಟಿ ಚೂರ್ಣಮಾಡಿ ಈರುಳ್ಳಿ ರಸದಲ್ಲಿ ಕಲಸಿ ಬಿಸಲಿನಲ್ಲಿ ಒಣಗಿಸಿಕೊಳ್ಳುವದು. ಇದಕ್ಕೆ ಪ್ರತಿಪಾಕ:—ಗಸಗಸೆ ೧ ತೊಲೆ, ಕೊತ್ತಂಬರಿ ಬೀಜ ॥ ತೊಲೆ, ಬಾದಾಮಿಪೊಪ್ಪು ॥ ತೊಲೆ, ಕಲ್ಲುಸಕ್ಕರೆ ॥ ತೊಲೆ ಇವುಗಳನ್ನು ಬಿಸಿನೀರಿನಲ್ಲಿ ಅರದು ಬಟ್ಟೆಯಲ್ಲಿ ಶೋಧಿಸಿಕೊಂಡು ಹಾಲು ತೆಗೆದುಕೊಳ್ಳುವದು. ಮೇಲ್ಕಂಡ ಔಷಧ ಕಾಲುತೊಲೆ ಈ ಹಾಲಿನಲ್ಲಿ ಕಲಸಿ ಕುಡಿಯುವುದು. ಹೀಗೆ ಬೆಳಿಗ್ಯೆಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ಹಸುವಿನ ಹಾಲು ಅನ್ನ. ಇದರಿಂದ ಉಷ್ಣದಿಂದ ಹುಟ್ಟಿದ ಖಾಸಗುಣವಾಗುವದು.

೯. ಸಮುದ್ರಪಾಲಕಾಯಿ ಮೇಕೆಮೂತ್ರದಲ್ಲಿ ಗಂಧತೆಗೆದು ಹೊತ್ತಿಗೆ ೧ಆಣೆ ತೂಕದಂತೆ ಕೊಡುವುದು. ಹೀಗೆ ಬೆಳಿಗ್ಯೆಹೊತ್ತು ೫ ದಿನ ಕೊಡಬೇಕು ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ ಇದರಿಂದ ಕೆಮ್ಮು ಗುಣವಾಗುವದು.

೧೦. ಲವಂಗಾದಿ ಚೂರ್ಣ:—ಲವಂಗ ೧ ತೊಲೆ, ಮೆಣಸು ೧ ತೊಲೆ, ಯಾಲಕ್ಕಿ ೧ ತೊಲೆ, ಶೊಂಟಿ ೧ ತೊಲೆ, ಗಂಟುಭಾರಂಗಿ ೧ ತೊಲೆ, ವಾಯುವಿಳಂಗ ೧ ತೊಲೆ, ತುಂಗೇಗಡ್ಡೆ ೧ ತೊಲೆ, ಚಂಗಲಕೋಷ್ಟ ೧ ತೊಲೆ, ಹಿಪ್ಪಲಿ ೮ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ೨ ಆಣೆ ತೂಕ ಚೂರ್ಣ ಜೇನುತುಪ್ಪದಲ್ಲಿ ಕಲಸಿ ತೆಗೆದುಕೊಳ್ಳುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೭ ದಿವಸ ಕೊಡಬೇಕು. ಇದರಿಂದ ಕೆಮ್ಮು, ಅರೋಚಕ, ಗುಲ್ಮ ಇವು ಗುಣವಾಗುವದು.

೧೧. ವಿಳಂಗಾದಿ ಚೂರ್ಣ:—ವಾಯುವಿಳಂಗ ೧ ತೊಲೆ, ಶೊಂಟಿ ೧ ತೊಲೆ, ಸಣ್ಣರಾಸ್ಮೆ ೧ ತೊಳೆ, ಹಿಪ್ಪಲಿ ೧ ತೊಲೆ, ಶುದ್ಧಿಮಾಡಿದ ಹಿಂಗು ಕಾಲುತೊಲೆ, ಸೈಂಧರಲವಣ ೧ ತೊಲೆ, ಗಂಟುಭಾರಂಗಿ ೧ ತೊಲೆ, ಯವಕ್ಷಾರ ಕಾಲುತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಹೊತ್ತಿಗೆ ೨ ಆಣೆ ತೂಕ ಚೂರ್ಣ ಜೇನುತುಪ್ಪದಲ್ಲಿ ಕಲಸಿ ತೆಗೆದುಕೊಳ್ಳುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೆಮ್ಮು, ಉಬ್ಬಸ, ಬಿಕ್ಕಳಿಕೆ, ಅಗ್ನಿಮಾಂದ್ಯ ಗುಣವಾಗುವದು.

೧೨. ಶೃಂಗಾದಿಚೂರ್ಣ:—ಕರ್ಕಾಟಕಶೃಂಗಿ ೧ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಶೊಂಟಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ರಾಮಗುಳ್ಳದಬೇರು ೧ ತೊಲೆ, ಗಂಟುಭಾರಂಗಿ ೧ ತೊಲೆ, ಚಂಗಲಕೋಷ್ಟ ೧ ತೊಲೆ, ಸೈಂಧರಲವಣ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಹೊತ್ತಿಗೆ ೨ ಆಣೆತೂಕ ಚೂರ್ಣ ಜೇನುತುಪ್ಪದಲ್ಲಿ ಕಲಸಿ ತೆಗೆದುಕೊಳ್ಳುವದು. ಹೀಗೆ ಬೆಳಿಗ್ಯೆ ಸಾಯಂ

ಕಾಲ ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೆಮ್ಮು, ಉಬ್ಬಸ ಗುಣವಾಗುವದು.

೧೩. ಕೊತ್ತುಂಬರಿಬೀಜ ೧ ತೊಲೆ, ಆಡುಸೋಗೆಸೊಪ್ಪು ೧ ತೊಲೆ ಇವುಗಳನ್ನು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಸ್ವಲ್ಪ ಜೇನುತುಪ್ಪಹಾಕಿ ಕಲಸಿ ಕೊಡಬೇಕು. ಹೀಗೆ ಬೆಳಿಗ್ಗೆಹೊತ್ತು ೩ ದಿನ ಕೊಡಬೇಕು. ಇದಕ್ಕೆ ಪತ್ಯ ಹಸುವಿನಹಾಲು ಅನ್ನ. ಇದರಿಂದ ಕೆಮ್ಮಲಿನಲ್ಲಿ ರಕ್ತಬೀಳುವದು ಗುಣವಾಗುವದು.

೧೪. ಮುಂಡಗಳ್ಳಿಬೇರು ಒಣಗಿದ್ದು ೪ ತೊಲೆ, ಲವಂಗ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೨ ತೊಲೆ, ಅರಸಿನ ೨ ತೊಲೆ, ಜಾಪತ್ರೆ ೧ ತೊಲೆ, ದಾಲಚಿನ್ನಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ಅವರೇಕಾಳು ಪ್ರಮಾಣ ಹಸುವಿನ ತುಪ್ಪದಲ್ಲಿ ಕಲಸಿಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೆಮ್ಮು, ಉಬ್ಬಸ ಗುಲ್ಮ ಇವು ಗುಣವಾಗುವದು.

೧೫. ನೆಗ್ಗಿಲುಬೇರು, ಚಿತ್ರಮೂಲದ ಬೇರಿನತಿಗಡು, ಆಡುಸೋಗೆಸೊಪ್ಪು, ಇಂಗಳದ ಬೇರಿನ ತಿಗಡು, ಶೊಂಟಿ, ಹಿಪ್ಪಲಿ, ಮೆಣಸು, ಗಜಹಿಪ್ಪಲಿ, ವಾಯುವಿಳಂಗ, ಲವಂಗ, ಜಾಪತ್ರೆ, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ ಇವು ಸಮಭಾಗತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇದರ ಸಮ ಸಕ್ಕರೆ ಬೆರಸಿ ಇಟ್ಟುಕೊಳ್ಳುವದು. ಹೊತ್ತಿಗೆ ೨ ಆಣೆ ತೂಕ ಚೂರ್ಣ ಜೇನುತುಪ್ಪದಲ್ಲಿ ಆಗಲಿ ಬಿಸಿನೀರಿನಲ್ಲಿ ಆಗಲಿ ಕೊಡುವದು. ಹೀಗೆ ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೆಮ್ಮು, ಉಬ್ಬಸ, ಶ್ವಾಸಕಾಸ ಗುಣವಾಗುವದು.

೧೬. ಆಡುಸೋಗೆಸೊಪ್ಪಿನ ರಸ ॥ ಶೇರು, ಮೇಕೇಹಾಲು ೧ ಶೇರು, ಕಲ್ಲುಸಕ್ಕರೆ ೧॥ ಶೇರು ಇವು ಮೂರು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಕನ್ನೈದಿಲೆಗಡ್ಡೆ ೧ ತೊಲೆ, ಬಿಳೇಗರಿಕೇ ಬೇರು ೧ ತೊಲೆ, ತುಂಗೇಗಡ್ಡೆ ೧ ತೊಲೆ, ಶ್ರೀಗಂಧದಚಕ್ಕೆ ೧ ತೊಲೆ, ತಾವರೇ ಗಡ್ಡೆ ೧ ತೊಲೆ, ದ್ರಾಕ್ಷಿ ೧ ತೊಲೆ, ಯಷ್ಟಿಮಧುಕ ೧ ತೊಲೆ, ನೆಲಕುಂಬಳದ ಬೇರು ೧ ತೊಲೆ, ಲಾಮಂಚ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಪಕ್ವವಾಗಿ ಘೃತವನ್ನು ಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ॥ ತೊಲೆ ತೆಗೆದುಕೊಳ್ಳುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ಹಸುವಿನಹಾಲು ಅನ್ನ. ಇದರಿಂದ ರಕ್ತಕಾಸ ಗುಣವಾಗುವದು.

೧೭. ಅಕ್ಕಲಕರೆ ೧ ತೊಲೆ, ಲವಂಗ ೧ ತೊಲೆ, ಹಿಪ್ಪಲಿ ೧ ತೊಲೆ, ಸಣ್ಣ ರಾಸ್ಮೆ ೧ ತೊಲೆ, ಹೊಮ್ಮುಗಳಿಹುವ್ವ ೧ ತೊಲೆ, ಗರುಗದಹುವ್ವ ೧ ತೊಲೆ, ಅಂತರಗಂಗೆ (ಹಸುವಿನತುಪ್ಪದಲ್ಲಿ ಸುಮಾರಾಗಿ ಹುರಿಯುದದ್ದು) ೧ ತೊಲೆ, ಮುಳ್ಳು ಸೊಂಡೇಹಣ್ಣು ೧ ತೊಲೆ, ಮೆಣಸು ೧ ತೊಲೆ, ಶುದ್ಧಿಮಾಡಿದ ಯಣ್ಣಿಬೆಳಗಾರ ಅರಳುಮಾಡಿದ್ದು ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ರಾಯಿಪುಡಿಸಕ್ಕರೆ ‖ ಶೇರು ತಂದು ಒಂದುಬಾಂಡ್ಲಿಯಲ್ಲಿ ಹಾಕಿ ನೀರು ಹಾಕಿ ವಲೆಯಮೇಲೆ ಇಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣಹಾಕಿ ಪಕ್ವವಾಗಿ ಲೇಹವನ್ನುಮಾಡಿ ಜೇನುತುಪ್ಪ ೧ ಪಾವುಹಾಕಿ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ಯಲಚೀಬೀಜದ ಪ್ರಮಾಣ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದರಿಂದ ಕೆಮ್ಮು ಉಬ್ಬಸ ಗುಣವಾಗುವದು.

೧೮. ಸೂರ್ತಿಬೆಳಗಾರ ೧ ತೊಲೆ, ಯಣ್ಣಿಬೆಳಗಾರ ೧ ತೊಲೆ ಇವು ಯರಡು ಯಮ್ಮೆಸಗಣಿಯಲ್ಲಿ ಏಳಾವರ್ತಿ ಶುದ್ಧಿಮಾಡಿ ಒಂದು ಮಡಿಕೆ ತೊಳೆದು ಅದರಲ್ಲಿ ಮೇಲ್ಕಂಡ ೨ ಜಿನಸುಗಳನ್ನು ಹಾಕಿ ಬೆಂಕಿ ಕೆಂಡದಮೇಲೆ ಇಟ್ಟರೆ ನೀರು ಹೀರಿ ಅರಳಾಗುವದು. ಖರ್ಜೂರ ೨ ತೊಲೆತಂದು ಬೀಜತೆಗದು ಒಂದು ದಿನ ಮಲೆಹಾಲಿನಲ್ಲಿ ನೆನೆಯಿಸಿ ಖಲ್ವದಲ್ಲಿ ಹಾಕಿ ಮೇಲ್ಕಂಡ ಸೂರ್ತಿಬೆಳಗಾರ ಯಣ್ಣಿಬೆಳಗಾರ ಅರಳನ್ನು ಹಾಕಿ ಅಫೀಂ ಕಾಲುತೊಲೆ, ಕುಂಕುಮಕೇಸರಿ ಕಾಲುತೊಲೆ ಹಾಕಿ ಮಲೆಹಾಲಿನಲ್ಲಿ ಅರದು ಕಡಲೇಕಾಳು ಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಜೇನುತುಪ್ಪದಲ್ಲಿ ಕಲಸಿಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೆಮ್ಮು ಗುಣವಾಗುವದು.

೧೯. ಅಳಲೇಕಾಯಿಸಿಪ್ಪೆ ೨ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ಶೊಂಟಿ ೧ ತೊಲೆ, ಮೆಣಸು ೨ ತೊಲೆ, ಹಿಪ್ಪಲಿ ೪ ತೊಲೆ, ಕರೇಜೀರಿಗೆ ೧ ತೊಲೆ, ಬಿಳೇಜೀರಿಗೆ ೧ ತೊಲೆ, ಜಾಪತ್ರೆ ೧ ತೊಲೆ, ವಾಯುವಿಳಂಗ ೧ ತೊಲೆ, ಚವ್ಯ ೧ ತೊಲೆ, ಚಂಗಲಕೋಷ್ಟ ೧ ತೊಲೆ, ಸಣ್ಣರಾಸ್ಮೆ ೨ ತೊಲೆ, ಸೈಂಧರಲವಣ ೧ ತೊಲೆ, ತಾಳೀಸಪತ್ರೆ ೪ ತೊಲೆ, ವೋಮ ೧ ತೊಲೆ, ಲವಂಗ ೨ ತೊಲೆ, ಶುದ್ಧಿಮಾಡಿದ ಅಶ್ವಗಂಧಿ ೪ ತೊಲೆ, ಕಾಡುಮೆಣಸಿನಬೇರು ೪ ತೊಲೆ, ಮುಳ್ಳು ಸೊಂಡೇಬೇರು ೪ ತೊಲೆ, ಅಮೃತಬಳ್ಳಿ ೨ ತೊಲೆ, ಚಿತ್ರಮೂಲ ೧ ತೊಲೆ, ತುಂಗೇಗಡ್ಡೆ ೨ ತೊಲೆ, ಕರ್ಕಾಟಕಶೃಂಗಿ ೧ ತೊಲೆ, ನಸುಗುನ್ನಿಬೇರು ೧ ತೊಲೆ, ಗಂಟುಭಾರಂಗಿ ೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಒಂದು ಬಾಂಡ್ಲಿಯಲ್ಲಿ ಹಳೇಬೆಲ್ಲ ೨ ಶೇರು ಹಾಕಿ ರಾಮುಗುಳ್ಳ ಸಮೂಲದ ರಸ ೧‖ ಶೇರು ಹಾಕಿ ವಲೆಯಮೇಲೆ ಇಟ್ಟು ಉರಿಹಾಕಿ ತಂತುಪಾಕ ಬಂದ

ಕೂಡಲೇ ಮೇಲ್ಕಂಡ ಚೂರ್ಣಹಾಕಿ ಪಕ್ವವಾಗಿ ಲೇಹಮಾಡಿ ಜೇನುತುಪ್ಪ || ಶೇರು ಹಾಕಿ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ಯಲಚೀಬೀಜದ ಪ್ರಮಾಣ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೆಮ್ಮು, ಉಬ್ಬಸ ಗುಣವಾಗುವದು.

೨೦ ಸಣ್ಣರಾಸ್ಮೆ ೧ ಪಾವು ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು ಒಂದು ಬಾಂಡ್ಲಿಯಲ್ಲಿ ಜೇನುತುಪ್ಪ ೧ ಪಾವು ಹಾಕಿ ವಲೆಯಮೇಲಿಟ್ಟು ಉರಿಹಾಕಿ ಮೇಲ್ಕಂಡ ಚೂರ್ಣಹಾಕಿ ಕಲಸಿ ಪಕ್ವವಾಗಿ ಲೇಹಮಾಡಿಕೊಳ್ಳುವದು. ಹೊತ್ತಿಗೆ ಯಲಚೀಬೀಜದ ಪ್ರಮಾಣ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೆಮ್ಮು ಗುಣವಾಗುವದು.

೨೧. ಕಾಕಳಾಸಿಂಗಿ(ಇದು ಯುನಾನಿ ಹೆಸರು)ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಜೇನುತುಪ್ಪ ಹಾಕಿ ಅರದು ಮೆಣಸಿನಕಾಳು ಪ್ರಮಾಣ ಮಾತ್ರೆ ಮಾಡುವದು. ದೊಡ್ಡವರಿಗೆ ಒಂದೇಮಾತ್ರೆ ದವಡೆಯಲ್ಲಿ ಇಟ್ಟುಕೊಂಡು ಬಂದ ನೀರು ನುಂಗುತ್ತಾ ಬರುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಉಷ್ಣದಿಂದ ಹುಟ್ಟಿದ ಕೆಮ್ಮು, ಶೀತದಿಂದ ಹುಟ್ಟಿದ ಕೆಮ್ಮು ಗುಣವಾಗುವದು.

೨೨. ಅಗಸೇಬೀಜ ೪ ತೊಲೆ, ಕರೇಮೆಣಸು || ತೊಲೆ, ಸೂರ್ತಿಬೆಳಗಾರ ಅರಳುಮಾಡಿದ್ದು ಕಾಲುತೊಲೆ, ರುಮ್ಮಿಮಸ್ತಕಿ ಕಾಲುತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಖಲ್ವದಲ್ಲಿ ಹಾಕಿ ಶುದ್ಧಿಮಾಡಿದ * ಜೇನುತುಪ್ಪ ಹಾಕಿ ಅರದು ಕಡಲೇ ಪ್ರಮಾಣ ಮಾತ್ರೆ ಕಟ್ಟುವದು. ಹೊತ್ತಿಗೆ ೧ ಮಾತ್ರೆ ಕೊಡಬೇಕು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಎಲ್ಲಾ ತರಹ ಕೆಮ್ಮು ಗುಣವಾಗುವದು.

೨೩. ಹಸನು ಮುಸಾಂಬ್ರ ೨ ತೊಲೆ, ಶುದ್ಧಿಮಾಡಿದ ಸಕ್‌ಮುನಿಯಾ ೧ ಮಾಷ, ತರಚೂತ್ ೩|| ಮಾಷ, ರೇವಲಚಿನ್ನಿ ೧ ದಿರಂ, ಬನಪ್‌ಷಾ ೧ ದಿರಂ, ಗುಲೇಸುರಕ್ ೧ ದಿರಂ, ಮುಲ್ಠೀ ೧ ದಿರಂ, ರುಬ್ಬೇರೇವನ್ ೧ ಮಾಷ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಬಿಸಿನೀರಿನಿಂದ ಅರದು ಕಡಲೇಕಾಳಷ್ಟು ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಬಾಯಿಯಲ್ಲಿ ಹಾಕಿಕೊಂಡು ೧ ಗುಟುಕು ಬಿಸಿನೀರು ಕುಡಿಯುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೭ ದಿವಸ ಕೊಡುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೆಮ್ಮುಲು ಗುಣವಾಗುವದು.

* ಜೇನುತುಪ್ಪವನ್ನು ಬಾಂಡ್ಲಿಯಲ್ಲಿ ಹಾಕಿ ಕಾಯಿಸಿ ಮೇಲೆ ಬರುವ ನೊರೆಯನ್ನು ಕಾಲುಘಂಟೆ ಹೊತ್ತು ತೆಗೆದುಹಾಕುತ್ತಾ ಬಂದರೆ ಶುದ್ಧಿಯಾಗುವುದು.

೨೪. ನಿಷಾಷತ್ತಾ, ಕರೇಜಾಲಿ ಬಂಕೆ, ರುಬ್ಬೆಸೂಸು, ಗಸಗಸೆ, ಅಫೀಂ ಇವು ಸಮತೂಕ ತಂದು ಕುಟ್ಟಿ ಚೂರ್ಣಮಾಡಿ ಖಲ್ವದಲ್ಲಿ ಹಾಕುವದು. ಬೇದಾನ ನೀರಿನಿಂದ ಕಿವಿಚಿ ಬಟ್ಟೆಯಲ್ಲಿ ಶೋಧಿಸಿಕೊಂಡು ಖಲ್ವದಲ್ಲಿ ಹಾಕಿ ಅರೆದು ಗುರುಗಂಜಿ ಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ರಾತ್ರಿಹೊತ್ತು ಮಲಗಿಕೊಳ್ಳುವಾಗ ದವಡೆಯಲ್ಲಿ ಇಟ್ಟುಕೊಂಡು ಬಂದ ನೀರು ನುಂಗುತ್ತಾ ಬರುವದು ಹೀಗೆ ರಾತ್ರಿಹೊತ್ತು ೩ ದಿನ ಕೊಡುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಉಷ್ಣಸಮ್ಮಂಧವಾದ ಕೆಮ್ಮಲು ಗುಣವಾಗುತ್ತೆ. ಎಂಥಾದ್ದೇ ಆಗಲಿ ಕೆಮ್ಮು ಕೆಮ್ಮಿನಿಂದ ವಾಂತಿ ಆಗುತ್ತಾ ಇದ್ದಲ್ಲಿ ನಿವಾರಣೆ ಆಗುತ್ತೆ.

೨೫. ವಾಸಾದಿಲೇಹ:—ಆಡುಸೋಗೆ ಸೊಪ್ಪಿನ ರಸ ೨ ಶೇರು, ಸಕ್ಕರೆ ೧ ಶೇರು, ಹಿಪ್ಪಲಿ ಚೂರ್ಣಮಾಡಿದ್ದು ೬ ತೊಲೆ, ಹಸುವಿನತುಪ್ಪ ೬ ತೊಲೆ ಇವುಗಳನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲೆ ಇಟ್ಟು ಉರಿಹಾಕಿ ಪಕ್ವವಾಗಿ ಲೇಹಮಾಡಿ ಜೇನುತುಪ್ಪ ೧ ಶೇರು ಹಾಕಿ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ಯಲಚೀಬೀಜದ ಪ್ರಮಾಣ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೆಮ್ಮು, ಕ್ಷೀಣದೇಹ, ಬಹು ಆಯಾಸ, ಪಾರ್ಶ್ವಶೂಲೆ, ಹೃದಯಶೂಲೆ, ರಕ್ತಪಿತ್ತ, ಜ್ವರ ಇವುಗಳು ಗುಣವಾಗುವದು.

---

# ಇಪ್ಪತ್ತೈದನೆಯ ಅಧ್ಯಾಯ.

## ಶ್ವಾಸರೋಗ—ಔಷಧಗಳು.

### ಶ್ವಾಸ ಲಕ್ಷಣ.

ಶ್ವಾಸರೋಗವು:—ಕ್ಷುದ್ರಶ್ವಾಸವು, ತಮಕಶ್ವಾಸವು, ಊರ್ಧ್ವಶ್ವಾಸವು, ಮಹಾಶ್ವಾಸವು, ಛಿನ್ನಶ್ವಾಸವು ಎಂಬದಾಗಿ ಐದು ವಿಧವಾಗಿರುವುದು.

ಕ್ಷುದ್ರಶ್ವಾಸದಲ್ಲಿ ಸ್ವಲ್ಪವಾಗಿ ವಾತವು ಪ್ರಕೋಪಿಸಿ ಶ್ವಾಸವನ್ನುಂಟುಮಾಡುವುದು. ಅದರಲ್ಲಿ ಶರೀರಕ್ಕೆ ಯಾವ ವಿಧವಾದ ಬಾಧೆಯೂ ಉಂಟಾಗಲಾರದು. ಸ್ವಲ್ಪ ಕಾಲದಲ್ಲಿಯೇ ನಿವೃತ್ತಿಯಾಗುವುದು.

ತಮಕಶ್ವಾಸದಲ್ಲಿ ವಾತವು ಪ್ರಕೋಪಿಸಿ ಪ್ರತಿಲೋಮವಾಗಿ ಸಂಚರಿಸುತ್ತಾ ಕಫವನ್ನು ಪ್ರಕೋಪಗೊಳಿಸುವುದು. ಆ ಕಫವು ಕಂಠಕ್ಕೆ ಅಡ್ಡಬೀಳುವುದರಿಂದ ಘುರಘುರ ಧ್ವನಿಯಿಂದ ಶ್ವಾಸವು ಬರುತ್ತಿರುವುದು. ಅಂತಹ ಶ್ವಾಸದಿಂದ ಮೋಹವು, ದಾಹ, ಅಡಿಗಡಿಗೆ ಕೆಮ್ಮು, ಕೆಮ್ಮಿದಾಗ ಕಂಠದಿಂದ ಕಫವು

ಹೊರಟರೆ ಸುಖವಾಗಿರುವಿಕೆ, ಕಣ್ಣುಗಳು ಮೇಲಕ್ಕೆ ಉಬ್ಬಿರುವಿಕೆ, ವರ್ಷ ಕಾಲವು ಶೀತಕಾಲವು ಇವುಗಳಲ್ಲಿ ವೃದ್ಧಿಯಾಗುವಿಕೆ ಮೊದಲಾದ ಲಕ್ಷಣ ಗಳಿರುವುದು.

ಊರ್ಧ್ವಶ್ವಾಸದಲ್ಲಿ ಅಧಿಕ ದೀರ್ಘವಾದ ನಿಶ್ವಾಸ ವಾತವು ಊರ್ಧ್ವ ವಾಗಿ ಹೊರಡಿಸಿ ಆ ನಿಶ್ವಾಸವನ್ನು ಪುನಹ ಒಳಕ್ಕೆ ತಿರುಗಿಸದಿರುವಿಕೆ, ಕಫವು ಕಂಠದಲ್ಲಿ ಅಡ್ಡಬೀಳುವಿಕೆ, ಊರ್ಧ್ವ ದೃಷ್ಟಿ, ಹೇಳಲಾರದ ಬಾಧೆ, ಬಾಯಿ ಬಿಳು ಪಾಗಿರುವಿಕೆ ಮೊದಲಾದ ಲಕ್ಷಣಗಳಿರುವುವು.

ಮಹಾಶ್ವಾಸದಲ್ಲಿ ಊರ್ಧ್ವವಾಗಿ ಎಳೆಯಲ್ಪಟ್ಟ ವಾತವುಳ್ಳದ್ದಾಗಿರುವಿಕೆ, ಶಬ್ದದಿಂದ ಕೂಡಿ ಬಹಳ ಕಷ್ಟವಾಗಿ ಮದಿಸಿದ ಎತ್ತನ್ನು ಬಂಧಿಸಿದ್ದರೆ ಅದು ಕೋಪದಿಂದ ಕೂಗುವ ಶಬ್ದದಂತೆ ನಿಟ್ಟುಸಿರನ್ನು ಬಿಡುವಿಕೆ, ನೇತ್ರಗಳು ಚಂಚಲವಾಗಿರುವಿಕೆ, ಕಣ್ಣುಗಳನ್ನು ಬಾಯನ್ನು ತೆರೆದುಕೊಂಡಿರುವಿಕೆ, ಮಲ ಮೂತ್ರಗಳು ಬಂಧಿಸುವಿಕೆ ಮೊದಲಾದ ಲಕ್ಷಣಗಳಿರುವುವು.

ಛಿನ್ನಶ್ವಾಸದಲ್ಲಿ :—ವಿಭಿನ್ನವಾಗಿ ಶ್ವಾಸವನ್ನು ಬಿಡುವಿಕೆ, ಒಂದಾ ನೊಂದು ಸಮಯದಲ್ಲಿ ಹೃದಯದಲ್ಲಾಗುವ ಬಾಧೆಯಿಂದ ಶ್ವಾಸವನ್ನು ಬಿಡದಿರುವಿಕೆ, ಹೊಟ್ಟೆಯುಬ್ಬರ, ಬೆವರುವುದು, ವಸ್ತಿ ದಹಿಸಿದಂತಿರು ವುದು, ಕಣ್ಣುಗಳಲ್ಲಿ ನೀರುಸುರಿಯುವಿಕೆ ಮೊದಲಾದ ಲಕ್ಷಣಗಳಿರುವುವು.

## ಶ್ವಾಸದಲ್ಲಿ ಅಸಾಧ್ಯ ಲಕ್ಷಣ.

೧. ಯಾವ ಮನುಷ್ಯನು ಆಹಾರವನ್ನು ಸ್ವಲ್ಪವಾಗಿ ತೆಗದುಕೊಂಡರೂ ಶ್ಲೇಷ್ಮಾಧಿಕ್ಯವು, ನಿಟ್ಟುಸುರು, ಶ್ವಾಸ ಒಳಗೆ ಹೋಗುವಾಗ ಸಣ್ಣನಾಗುವ ರೀತಿ, ಗಂಟ್ಲಿನಲ್ಲಿ ಶ್ಲೇಷ್ಮ ಮತ್ತು ತಾಪ ಇವುಗಳಿದ್ದರೆ ಅಸಾಧ್ಯವು.

೨. ಯಾವನಿಗೆ ಶ್ವಾಸವು ಕಿರಿದಾಗಿ ಬರುವದೋ, ಮೈಯೆಲ್ಲಾ ನಡುಗು ವದೋ, ತಲೆ ಹಿಡಿದುಕೊಳ್ಳುವದೋ ಅದು ಅಸಾಧ್ಯವು.

೩. ಮೂರುದೋಷ ವೈಷಮ್ಯಗಳಿಂದ ಊರ್ಧ್ವಭಾಗದಲ್ಲಿ ಹುಟ್ಟುವ ಶ್ವಾಸವು ಅಸಾಧ್ಯವು.

## ಶ್ವಾಸಖಾಸೆಕ್ಕೆ ಚಿಕಿತ್ಸೆಗಳು.

೧. ಎಳೇಬಂದರಿಸೊಪ್ಪು ತಂದು ಮೇಕೆಹಾಲು ಹಾಕಿ ಕುಟ್ಟಿ ರಸ ತೆಗೆದು ಶೋಧಿಸಿಕೊಂಡು ಬೆಳಿಗ್ಗೆಹೊತ್ತು ೧ ತೊಲೆ ಕೊಡಬೇಕು. ಹೀಗೆ ೫ ದಿವಸ ಕೊಡುವದು. ದಾಹವಾದರೆ ಮೇಕೇಹಾಲು ಕುಡಿಯುವದು. ಇದಕ್ಕೆ ಪತ್ಯ ಮೇಕೇಹಾಲು ಅನ್ನ. ಇದರಿಂದ ಶ್ವಾಸಖಾಸ ಗುಣವಾಗುವದು.

೨. ಯಕ್ಕದಹುವ್ವ ೧ ತೊಲೆ, ಲವಂಗ ೧ ತೊಲೆ, ಮೆಣಸು ೧ ತೊಲೆ ಇವು ಮೂರನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಖಲ್ವದಲ್ಲಿ ಹಾಕಿ

ತಣ್ಣೀರಿನಿಂದ ಅರದು ಗುರುಗಂಜಿ ಗಾತ್ರ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಜೇನುತುಪ್ಪದಲ್ಲಿ ಕಲಸಿಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶ್ವಾಸಖಾಸ ಗುಣವಾಗುವದು.

೩. ಉತ್ತರೇಣಿಸಮೂಲ ಸುಟ್ಟಬೂದಿ, ಶುದ್ಧಿಮಾಡಿದ ಯಣ್ಣಿಬೆಳಗಾರ ಅರಳುಮಾಡಿದ್ದು, ಸೈಂಧರಲವಣ, ಅಳಲೇಕಾಯಿಸಿಪ್ಪೆ, ಕರ್ಕಾಟಕಶೃಂಗಿ ಇವು ಐದು ಸಮಭಾಗ, ಇದಕ್ಕೆ ಎರಡು ಭಾಗ ಗಂಟುಭಾರಂಗಿ, ಹಿಪ್ಪಲಿ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು ಹೊತ್ತಿಗೆ ೨ ಆಣಿ ತೂಕ ಚೂರ್ಣ ಹಸೀ ಶೊಂಟಿಯಲ್ಲಿ, ಗರುಗದಸೊಪ್ಪಿನ ರಸದಲ್ಲಿ, ಜೇನುತುಪ್ಪದಲ್ಲಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶ್ವಾಸಖಾಸ, ಕೆಮ್ಮು ಗುಣವಾಗುವದು.

೪. ಶೊಂಟಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಸಣ್ಣರಾಸ್ಮೆ ೨ ತೊಲೆ, ಅಳಲೇಕಾಯಿಸಿಪ್ಪೆ ೨ ತೊಲೆ, ಲವಂಗ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ರಾಮಗುಳ್ಳಕಾಯಿ ಹಸೇದು ೮ ತೊಲೆ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಒಂದು ಬಾಂಡ್ಲಿಯಲ್ಲಿ ಹಾಕಿ ಹಳೇಬೆಲ್ಲ ೧೨ ತೊಲೆ ಹಾಕಿ ವಲೆಯಮೇಲೆ ಇಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಹಾಕಿ ಪಕ್ವವಾಗಿ ಲೇಹಮಾಡಿ ಇಟ್ಟುಕೊಳ್ಳುವದು ಹೊತ್ತಿಗೆ ಯಲಚೀಬೀಜದ ಪ್ರಮಾಣ ಕೊಡಬೇಕು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶ್ವಾಸಖಾಸ ಗುಣವಾಗುವುದು.

೫. ಒಂದು ಮಡಿಕೆಯಲ್ಲಿ ಹಸುವಿನಮೂತ್ರ ಹಾಕಿ ಬಾಯಿಗೆ ಬಟ್ಟೆಕಟ್ಟಿ ಅದರಮೇಲೆ ರಾಮಗುಳ್ಳಸಮೂಲ ೧ ಶೇರು ಹಾಕಿ ಮುಚ್ಚಳ ಮುಚ್ಚಿ ವಲೆಯ ಮೇಲೆ ಇಟ್ಟು ಉರಿಹಾಕಿ ಬೇಯಿಸಿ ತೆಗೆದು ಕುಟ್ಟಿ ಬಟ್ಟೆಯಲ್ಲಿ ಶೋಧಿಸಿ ಕೊಂಡ ರಸ ೧ ಪಾವು, ಆಡುಸೋಗೇಸೊಪ್ಪಿನ ರಸ ೧ ಪಾವು, ಹಳೇಬೆಲ್ಲ ೧ ಶೇರು ಇವುಗಳನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ವಲೆಯಮೇಲೆ ಇಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಈ ಕೆಳಗಿನ ಚೂರ್ಣ ಹಾಕುವದು. ಅಕ್ಕಲಕರೆ ೧ ತೊಲೆ, ಗಂಟುಭಾರಂಗಿ ೧ ತೊಲೆ, ಹಿಪ್ಪಲಿ ೧ ತೊಲೆ, ಹಿಪ್ಪಲಿಮೂಲ ೧ ತೊಲೆ, ಅಗಿಲುಶೊಂಟಿ ೧ ತೊಲೆ, ಸಣ್ಣರಾಸ್ಮೆ ೧ ತೊಲೆ, ಅಳಲೇಕಾಯಿ ಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ಸೈಂಧರಲವಣ ೧ ತೊಲೆ, ಚಿತ್ರಮೂಲ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಮೇಲ್ಕಂಡ

ಬಾಂಡ್ಲಿಯಲ್ಲಿ ಹಾಕಿ ಪಕ್ವವಾಗಿ ಲೇಹವನ್ನು ತಯಾರುಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ಯಲಚೀಬೀಜದ ಪ್ರಮಾಣ ತೆಗೆದುಕೊಳ್ಳುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶ್ವಾಸಖಾಸ ಗುಣವಾಗುವದು.

೬. ಮೆಣಸು ಅರ್ಧ ಪಾವು, ಲವಂಗ ಅರ್ಧ ತೊಲೆ ಇವು ಎರಡು ಕುಟ್ಟಿ ಚೂರ್ಣಮಾಡಿ ಶೋಧಿಸಿ ನೀರಿನಿಂದ ಅರೆದು ಬತ್ತಾಸಿನಂತೆ ಬಿಲ್ಲೆಮಾಡಿ ತುಪ್ಪದಲ್ಲಿ ಸುಟ್ಟುಕೊಳ್ಳುವದು. ಬೆಳಿಗ್ಗೆ ಸಾಯಂಕಾಲ ೨ ಹೊತ್ತು ಹೊತ್ತಿಗೆ ಕಾಲುತೊಲೆ ತಿನ್ನುವದು. ಹೀಗೆ ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ ಅಥವಾ ಹಸುವಿನಹಾಲು ಅನ್ನ. ಅನಂತರ ಈ ಔಷಧವನ್ನು ಕೊಡಬೇಕು ರಾಮುಗುಳ್ಳದಕಾಯಿ ಬಲಿತಿರುವದನ್ನು ೧ ಸೇರು ತಂದು ಇದರ ಮೂತಿ ಕಿತ್ತುಹಾಕಿ ಅದರಲ್ಲಿ ಹಿಪ್ಪಲಿ ೧, ಲವಂಗ ೧ ಇಟ್ಟು ಎಷ್ಟುಕಾಯಿ ಇದೆಯೋ ಅಷ್ಟಕ್ಕು ಇದೇಪ್ರಕಾರವಾಗಿ ಇಟ್ಟು ೧ ಶೇರು ಸುಣ್ಣಕಲ್ಲು ತಂದು ಒಂದು ಮಡಿಕೆಯಲ್ಲಿ ೧ ಪದರ ಸುಣ್ಣಕಲ್ಲು ಹಾಸಿ ಅದರ ಮೇಲೆ ಕಾಯಿ ಹಾಸಿ ಇದರಂತೆಯೇ ಸುಣ್ಣಕಲ್ಲು ೧ ವರಸೆ, ಕಾಯಿ ೧ ವರಸೆ ಹಾಕಿ ಸುಮಾರಾಗಿ ನೀರುಹಾಕಿ ಪಕ್ವವಾಗಿ ಆದಮೇಲೆ ಸುಣ್ಣ ತೆಗದುಹಾಕಿ ಕಾಯಿಗಳನ್ನು ತೆಗೆದುಕೊಂಡು ಬಿಸಲಿನಲ್ಲಿ ಒಣಗಿಸಿ ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಹೊತ್ತಿಗೆ ೧ ನಸ್ಯದ ಚುಟಿಕಿಯಷ್ಟು ಜೇನುತುಪ್ಪದಲ್ಲಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೨೦-೪೦ ದಿವಸ ಕೊಡುವದು. ಇದಕ್ಕೆ ಪತ್ಯ ಚಲದಿ ಪದಾರ್ಥ ವರ್ಜಿತ. ಇದರಿಂದ ಶ್ವಾಸಖಾಸ, ಉಬ್ಬಸ ಗುಣವಾಗುವದು.

೭ ಬ್ರಂಹದಂಡೀಬೇರು ತಿಗಡು ತಂದು ಚನ್ನಾಗಿ ಒಣಗಿಸಿ ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಹೊತ್ತಿಗೆ ೧ ನಶ್ಯದ ಚುಟಿಕಿಯಷ್ಟು ಜೇನುತುಪ್ಪದಲ್ಲಿ ಕಲಸಿಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶ್ವಾಸಖಾಸ, ಉಬ್ಬಸ ಗುಣವಾಗುವದು.

೮. ಅಕ್ಕಲಕರೆ ೧ ತೊಲೆ, ಗಂಟುಭಾರಂಗಿ ೧ ತೊಲೆ, ಲವಂಗ ೧ ತೊಲೆ, ರಾಮುಗುಳ್ಳದಬೀಜ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಹೊತ್ತಿಗೆ ಅವರೇಕಾಳು ಪ್ರಮಾಣ ಜೇನುತುಪ್ಪದಲ್ಲಿ ಕಲಸಿಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶ್ವಾಸಖಾಸ, ಉಬ್ಬಸ ಗುಣವಾಗುವದು.

೯. ಬಿಡಾಲವಣ ೧ ತೊಲೆ, ಹಿಪ್ಪಲಿ ೧ ತೊಲೆ, ಸೂರ್ತಿ ಬೆಳಗಾರ ೧ ತೊಲೆ, ಯವಕ್ಷಾರ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಯಕ್ಕದಹಾಲಿನಲ್ಲಿ ಅರದು ಬಿಸಲಿನಲ್ಲಿ ಒಣಗಿಸುವದು ಹೀಗೆ ೭ ಸಲ ಯಕ್ಕದಹಾಲಿನಲ್ಲಿ ಅರದು ಬಿಲ್ಲೆಮಾಡಿ ಒಣಗಿಸಿ ೨ ಹಣತೆಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಒಣಗಿಸಿ ೧ ಮೊಳ ಪುಟಹಾಕಿ ಸಾಂಗಶೀತಲ ವಾದಮೇಲೆ ತೆಗೆದು ಖಲ್ವದಲ್ಲಿ ಹಾಕಿ ಅರದು ಇಟ್ಟುಕೊಳ್ಳುವದು. ಹೊತ್ತಿಗೆ ೧ ಗುರುಗಂಜಿ ಪ್ರಮಾಣ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಈ ಕೆಳಗೆ ಬರದ ಅನುಪಾನಗಳಲ್ಲಿ ಕೊಡುವದು. ಉಷ್ಣಶರೀರಕ್ಕೆ ಶುದ್ಧಿಮಾಡಿದ ಪರಂಗಿ ಚಕ್ಕೆ ಚೂರ್ಣ, ಬಿಳೇ ಮುಳ್ಳುಶಾವಂತಿಗೆಹೂವಿನ ಚೂರ್ಣ, ಸಕ್ಕರೆ ಇವುಗಳ ಅನುಪಾನದಲ್ಲಿ ಕೊಡುವದು. ರೋಗಕ್ಕೆ ತಕ್ಕ ಇನ್ಯಾವ ಅನುಪಾನಗಳಿಂದಾದರು ಉಪಯೋಗಿಸಬಹುದು. ಇದಕ್ಕೆ ಪತ್ಯ ಹಸುವಿನಹಾಲು ಅನ್ನ. ಇದರಿಂದ ಸಮಸ್ತ ಖಾಸಶ್ವಾಸ, ರಕ್ತಖಾಸ ಗುಣವಾಗುವದು

೧೦. ಹೊಮ್ಮುಗಳಿಹೂವು ೧ ತೊಲೆ, ಅಕ್ಕಲಕರೆ ೧ ತೊಲೆ, ಹಿಪ್ಪಲಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ೨ ಆಣೆ ತೂಕ ಚೂರ್ಣ ಜೇನುತುಪ್ಪದಲ್ಲಿ ಆಗಲಿ ಅಥವಾ ಸಕ್ಕರೆಯಲ್ಲಿ ಆಗಲಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶ್ವಾಸಖಾಸ, ನಾಲಿಗೆಮೇಲೆ ಬರುವದೋಷ ಗುಣವಾಗುವದು.

೧೧. ಮೆಣಸು ೧ ಶೇರು ತಂದು ಮುಂಡೆಗಳ್ಳಿ ಹಾಲಿನಲ್ಲ ನೆನೆಯಿಸಿ ಮುಂಡೆಗಳ್ಳಿ ತುಂಡುಗಳಿಗೆ ರಂಧ್ರಮಾಡಿ ಮೆಣಸನ್ನು ಅದರಲ್ಲಿಟ್ಟು ಬಾಯಿಗೆ ಅದೇ ತುಂಡನ್ನು ಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ೧ ಮೊಳ ಪುಟಹಾಕುವದು. ಅನಂತರ ಮೆಣಸನ್ನು ತೆಗೆದು ಬಿಸಲಿನಲ್ಲಿ ಒಣಗಿಸಿ ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಹೊತ್ತಿಗೆ ೨ ಆಣೆ ತೂಕ ಚೂರ್ಣ ಹಸುವಿನತುಪ್ಪದಲ್ಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಯೆಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶ್ವಾಸಖಾಸ, ಉಬ್ಬಸ ಗುಣವಾಗುವದು.

೧೨. ರಾಮುಗುಳ್ಳಕಾಯಿ ರಸ ೨ ಶೇರು, ಒಳ್ಳೆ ತುಳಸೀಸೊಪ್ಪಿನ ರಸ ೧ ಪಾವು, ಸುರಸುರಿಕೆಸೊಪ್ಪಿನ ರಸ ‖ ಶೇರು, ಆಡುಸೋಗೇಸೊಪ್ಪಿನ ರಸ ೧ ಶೇರು, ಬಿಳೇವುಪ್ಪಿನೊಪ್ಪಿನ ರಸ ೧ ಪಾವು, ಹಳೇಬೆಲ್ಲ ೫ ಶೇರು ಇವುಗಳನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಈ ಕೆಳಗೆ ಬರೆದ ಚೂರ್ಣವನ್ನು ಹಾಕುವದು. ಶೊಂಟಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೪ ತೊಲೆ, ಅಳಲೇಕಾಯಿಸಿಪ್ಪೆ ೨ ತೊಲೆ, ತಾರೇಕಾಯಿಸಿಪ್ಪೆ

೨ ತೊಲೆ, ಗಜಹಿಪ್ಪಲಿ ೨ ತೊಲೆ, ಲವಂಗ ೧ ತೊಲೆ, ಗಂಟುಭಾರಂಗಿ ೨ ತೊಲೆ, ಜಾಪತ್ರೆ ೧ ತೊಲೆ, ಅಕ್ಕಲಕರೆ ೧ ತೊಲೆ, ಚಂಗಲಕೋಷ್ಟ ॥ ತೊಲೆ, ಶುದ್ಧಿ ಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಪಕ್ವವಾಗಿ ಲೇಹವನ್ನು ಮಾಡಿ ಜೇನುತುಪ್ಪ ॥ ಶೇರು, ಹಸುವಿನತುಪ್ಪ ೧ ಶೇರು ಹಾಕಿ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ಯಲಚೀಬೀಜದ ಪ್ರಮಾಣ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶ್ವಾಸಖಾಸ, ಉಬ್ಬಸ ಗುಣವಾಗುವದು.

೧೩. ಸಣ್ಣರಾಸ್ಮೆ ೧ ತೊಲೆ, ಹಿಪ್ಪಲಿ ೧ ತೊಲೆ, ಗಂಟುಭಾರಂಗಿ ೧ ತೊಲೆ, ಕರ್ಕಾಟಕಶೃಂಗಿ ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ, ರಾಮುಗುಳ್ಳದಬೀಜ ಸುಮಾರಾಗಿ ಹುರದದ್ದು ೫ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ೨ ಆಣೆ ತೂಕ ಚೂರ್ಣ ಜೇನುತುಪ್ಪದಲ್ಲಿ ಕಲಸಿಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೆಮ್ಮು, ಶ್ವಾಸಖಾಸ ಗುಣವಾಗುವದು.

೧೪. ಆಡುಸೋಗೆಸೊಪ್ಪಿನ ರಸ ೧ ಪಾವು, ಕಾಡುಮೆಣಸಿಗೆಸೊಪ್ಪಿನ ರಸ ೧ ಪಾವು, ಒಳ್ಳೇತುಲಸೀಸೊಪ್ಪಿನ ರಸ ೧ ಪಾವು, ಬೋಡೆತರಸೊಪ್ಪಿನ ರಸ ೧ ಪಾವು, ಹಂಸಪಾದಿಸೊಪ್ಪಿನ ರಸ ೧ ಪಾವು, ಸುರಸುರಿಕೆಸೊಪ್ಪಿನ ರಸ ೧ ಪಾವು, ರಾಮುಗುಳ್ಳದಸೊಪ್ಪಿನ ರಸ ೧ ಪಾವು, ಬಿಳೀಗುಳ್ಳದಸೊಪ್ಪಿನ ರಸ ೧ ಪಾವು, ಹಳೇಬೆಲ್ಲ ೫ ಶೇರು ಇವುಗಳನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ವಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಈ ಕೆಳಗಿನ ಚೂರ್ಣವನ್ನು ಹಾಕುವದು. ತಾಳೀಸಪತ್ರೆ ೨ ತೊಲೆ, ಶೊಂಟಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಗಂಟುಭಾರಂಗಿ ೨ ತೊಲೆ, ಅಗಿಲುಶೊಂಟಿ ೧ ತೊಲೆ, ಮೋಡಿ ॥ ತೊಲೆ, ಚವ್ಯ ॥ ತೊಲೆ, ಚಿತ್ರಮೂಲ ॥ ತೊಲೆ, ಕರ್ಕಾಟಕಶೃಂಗಿ ೧ ತೊಲೆ, ಚಂಗಲಕೋಷ್ಟ ॥ ತೊಲೆ, ಸೈಂಧರಲವಣ ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಮೇಲ್ಕಂಡ ಬಾಂಡ್ಲಿಯಲ್ಲ ಹಾಕಿ ಪಕ್ವವಾಗಿ ಲೇಹವನ್ನು ಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ಯಲಚೀಬೀಜದ ಪ್ರಮಾಣ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೆಮ್ಮು, ಶ್ವಾಸಖಾಸ, ಉಬ್ಬಸ ಗುಣವಾಗುವದು.

೧೫. ತಾರೇಕಾಯಿಸಿಪ್ಪೆ, ಎಕ್ಕದಬೇರಿನಚಕ್ಕೆ, ಶೊಂಟಿ, ಗಂಟುಭಾರಂಗಿ, ಹಿಪ್ಪಲಿ, ಅಳಲೇಕಾಯಿಸಿಪ್ಪೆ, ನೆಲ್ಲೀಕಾಯಿ ಇವು ಸಮಭಾಗತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯುವದು. ಹೀಗೆ ಬೆಳಿಗ್ಗೆ ಹೊತ್ತು ೭ ದಿವಸ ಕೊಡುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶ್ವಾಸಖಾಸ ಗುಣವಾಗುವದು.

೧೬. ಕಟುಕರೋಹಿಣಿ, ಎಕ್ಕದಬೇರಿನಚಕ್ಕೆ, ಅಳಲೇಕಾಯಿಸಿಪ್ಪೆ, ಆಡುಸೋಗೆಸೊಪ್ಪು, ಅಮೃತಬಳ್ಳಿ, ಶೊಂಟಿ, ಕೊತ್ತುಂಬರಿಬೀಜ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿಕೊಂಡು ಕುಡಿಯುವದು. ಹೀಗೆ ಬೆಳಿಗ್ಗೆಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀ ಬೇಳೆ ಸಿಹಿಸಾರು ಅನ್ನ. ಇದರಿಂದ ಶ್ವಾಸಖಾಸ ಗುಣವಾಗುವದು.

೧೭. ತಾಳೀಸಾದಿ ಚೂರ್ಣ:—ತಾಳೀಸಪತ್ರೆ ೧ ತೊಲೆ, ಮೆಣಸು ೨ ತೊಲೆ, ಶೊಂಟಿ ೩ ತೊಲೆ, ಹಿಪ್ಪಲಿ ೪ ತೊಲೆ, ಬಿದರುಪ್ಪು ೫ ತೊಲೆ, ಯಾಲಕ್ಕಿ ೬ ಆಣೆ ತೂಕ, ದಾಲಚಿನ್ನಿ ೬ ಆಣೆ ತೂಕ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇದರಸಮ ಸಕ್ಕರೆ ಬೆರಸಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲುತೊಲೆ ಚೂರ್ಣ ಜೇನುತುಪ್ಪದಲ್ಲಿ ಆಗಲಿ ಬಿಸನೀರಿನಲ್ಲಿ ಆಗಲಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶ್ವಾಸಕಾಸ, ಜ್ವರ, ವಾಂತಿ, ಹೊಟ್ಟೆವುಬ್ಬರ, ಪ್ಲೀಹೆ, ಪಾಂಡು, ಬಾಯಿ ರುಚಿಕೆಟ್ಟಿರುವದು, ಸಂಗ್ರಹಣಿ, ಅತಿಸಾರ ಇವು ಗುಣವಾಗುವದು.

೧೮. ತಾಳೀಸಾದಿ ಚೂರ್ಣ:—ತಾಳೀಸಪತ್ರೆ ೮ ತೊಲೆ, ಮೆಣಸು ೧ ತೊಲೆ, ಶೊಂಟಿ ೧ ತೊಲೆ, ಹಿಪ್ಪಲಿ ೪ ತೊಲೆ, ಬಿದರುಪ್ಪು ೧ ತೊಲೆ, ಯಾಲಕ್ಕಿ ‖ ತೊಲೆ ದಾಲಚಿನ್ನಿ ೧ ತೊಲೆ, ಅಕ್ಕಲಕರೆ ೨ ತೊಲೆ, ತುಂಗೇಗಡ್ಡೆ ೧ ತೊಲೆ, ಜಾಕಾಯಿ ೧ ತೊಲೆ, ಲವಂಗ ೧ ತೊಲೆ, ಸಣ್ಣರಾಸ್ಮೆ ೨ ತೊಲೆ, ಅಮೃತಬಳ್ಳಿ ೨ ತೊಲೆ, ಮಂಜಿಷ್ಟೆ ೧ ತೊಲೆ, ಕರ್ಕಾಟಕಶೃಂಗಿ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಇದರಸಮ ಸಕ್ಕರೆ ಬೆರಸಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲುತೊಲೆ ಚೂರ್ಣ ಜೇನುತುಪ್ಪ, ಬಿಸನೀರಿನಲ್ಲಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೭-೧೪ ದಿವಸ ಕೊಡಬೇಕು. ಇದರಿಂದ ಶ್ವಾಸಖಾಸ, ಅರೋಚಕ, ಅಗ್ನಿಮಾಂದ್ಯ, ನಚ್ಚುಜ್ವರ, ದಾಹ, ಅಜೀರ್ಣವಾಯು, ಪಾಂಡುರೋಗ, ಹೊಟ್ಟೆವುಬ್ಬರ ಗುಣವಾಗುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ.

೧೯. ಗೋದಿಹಿಟ್ಟು ೧ ಪಾವು ತಂದು ನೀರುಹಾಕಿ ಗಟ್ಟಿಯಾಗಿ ಕಲಸಿ ಯರಡು ಚಿಪ್ಪುಮಾಡಿ ಅದರಲ್ಲಿ ಬಿಳೀ ಯಕ್ಕದಹುವ್ವ ರೇಕು ಬಿಡಿಸಿ ಅದರಲ್ಲಿ

ಇಟ್ಟು ಮೇಲೆ ಬೇಕಾದಷ್ಟು ಲವಂಗ ಹಾಕಿ ಅದರಮೇಲೆ ಯಕ್ಕದಹುವ್ವಿನ ರೇಕುಹಾಕಿ ಯರಡುಚಿಪ್ಪು ಹೊಂದಿಸಿ ಉಸುರುಹೋಗದಂತೆ ಬೆಂಬೂದಿಯಲ್ಲಿ ರಾತ್ರಿಯಿಟ್ಟು ಬೆಳಿಗ್ಗೆ ಲವಂಗವನ್ನು ತೆಗದು ಒಣಗಿಸಿ ಇಟ್ಟುಕೊಳ್ಳುವದು. ಹೊತ್ತಿಗೆ ೧ ಲವಂಗ ತಿನ್ನುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶ್ವಾಸಕಾಸ, ಉಬ್ಬಸ, ಗೂರ್ಲು ಗುಣವಾಗುವದು.

೨೦. ಶುದ್ಧಿಮಾಡಿದ ಹಿಂಗು ೧ ತೊಲೆ, ಆರತಿ ಕರ್ಪೂರ ॥ ತೊಲೆ, ಅಫೀಂ ಕಾಲುತೊಲೆ ಇವು ಮೂರನ್ನು ಖಲ್ವದಲ್ಲಿಹಾಕಿ ಸಾರಾಯಿಹಾಕಿ ಚನ್ನಾಗಿ ಅರದು ಉದ್ದಿನಕಾಳಷ್ಟು ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಹಸುವಿನ ತುಪ್ಪದಲ್ಲಿ ಕಲಸಿ ತಿಂದು ಸ್ವಲ್ಪ ಬಿಸಿನೀರು ಕುಡಿಯುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶ್ವಾಸಖಾಸ ಗುಣವಾಗುವುದು

೨೧. ಜೂಫಾ ೩ ತೊಲೆ, ಪರ್‌ಶಿಯಾವುಷಾ ೨ ತೊಲೆ, ಹಿಪ್ಪಲಿ ॥ ತೊಲೆ, ರುಬ್ಬೀಸೂಸು ॥ ತೊಲೆ, ಅಳಲೇಕಾಯಿಸಿಪ್ಪೆ ॥ ತೊಲೆ, ಶೊಂಟಿ ಕಾಲುತೊಲೆ, ಸೋಪುಬೀಜ ಕಾಲುತೊಲೆ, ಕರ್ಕಾಟಕಶೃಂಗಿ ॥ ತೊಲೆ, ಬಡಗೊನ್ನಿ ೧೫ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಇಟ್ಟುಕೊಳ್ಳುವದು. ಕಾಡುಈರುಳ್ಳಿ ೧ ಶೇರು ತಂದು ಬಿದರುದಬ್ಬೆಯಿಂದ ಸಣ್ಣಗೆ ಕುಯಿದು ಒಂದು ಕಲಾಯಿಪಾತ್ರೆಯಲ್ಲಿ ಹಾಕಿ ನೀರುಹಾಕಿ ಕಲಸಿ ವಲೆಯಮೇಲಿಟ್ಟು ಉರಿಹಾಕಿ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವದು. ಇದನ್ನು ತಿರಿಗಿ ಒಂದು ಕಲಾಯಿಪಾತ್ರೆಯಲ್ಲಿ ಹಾಕಿ ಸಕ್ಕರೆ ೨॥ ಶೇರುಹಾಕಿ ಸ್ವಲ್ಪ ನೀರುಹಾಕಿ ವಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣಹಾಕಿ ಜೇನುತುಪ್ಪ ೧। ಶೇರುಹಾಕಿ ಪಕ್ವವಾಗಿ ಲೇಹವನ್ನುಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ಯಲಚೀಬೀಜದ ಪ್ರಮಾಣ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೧೫-೨೦ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೆಮ್ಮು, ಕಾಸಶ್ವಾಸ ಗುಣವಾಗುವದು.

೨೨. ಅಕ್ಕಲಕರೆ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಲವಂಗ ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ಖುರಾಸಾನಿವೋಮ ೧ ತೊಲೆ, ಬಿಳೇಯಕ್ಕದ ಹುವ್ವ ೧ ತೊಲೆ, ರಾಮುಗುಳ್ಳದಹುವ್ವ ೧ ತೊಲೆ, ತುಂಬೇಹುವ್ವ ೧ ತೊಲೆ, ಉತ್ತರೇಣಿಸಮೂಲ ಸುಟ್ಟ ಬೂದಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿಕೊಳ್ಳುವದು. ಅಫೀಂ ೧ ತೊಲೆ ಖಲ್ವದಲ್ಲಿ ಹಾಕಿ ಮಂಗರವಳ್ಳಿ ತಂದು ಬೆಂಬೂದಿಯಲ್ಲಿ ಇಟ್ಟು ರಸ ತೆಗೆದು ಚನ್ನಾಗಿ ಅರದು ಮೇಲ್ಕಂಡ

ಚೂರ್ಣ ಹಾಕಿ ಮಂಗರವಳ್ಳಿ ರಸದಲ್ಲಿ ಅರದು ಮೆಣಸಿನಕಾಳು ಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಮೆಣಸಿನ ಕಷಾಯದಲ್ಲಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಎಲ್ಲಾ ತರಹ ಕೆಮ್ಮಲು ಮತ್ತು ಕಾಸಶ್ವಾಸ ಗುಣವಾಗುವದು.

೨೩. ಅಕ್ಕಲಕರೆ, ಬಾಲಮೆಣಸು, ಸುನಾಮುಕಿ, ಹಿಪ್ಪಲಿ, ಪೆಟ್ಲುಪ್ಪು, ಶುದ್ಧಿಮಾಡಿದ ಆರ್ತಿಕರ್ಪೂರ, ಯಾಲಕ್ಕಿ, ಸ್ವರ್ನಕಾವಿ, ರಾಯಿಪುಡಿ ಸಕ್ಕರೆ ಈ ಜಿನಸು ೧-೧ ತೊಲೆ ಪ್ರಕಾರ ತಂದು ಚೂರ್ಣಮಾಡಿ ಹೊಮ್ಮುಗಳಿಹುವ್ವ, ಅಂತರಗಂಗೆ, ಗರುಗದಹುವ್ವ ಇವು ಮೂರನ್ನು ೧||-೧|| ತೊಲೆ ಪ್ರಕಾರ ತುಪ್ಪ ದಲ್ಲಿ ಹುರದು ಚೂರ್ಣಮಾಡಿ ಎಲ್ಲವನ್ನು ಖಲ್ವದಲ್ಲಿ ಹಾಕಿ ಜೇನುತುಪ್ಪದಲ್ಲಿ ಚನ್ನಾಗಿ ಅರದು ಗುರುಗಂಜಿಗಾತ್ರ ಮಾತ್ರೆಮಾಡುವದು. ಹೊತ್ತಿಗೆ ೧ ಮಾತ್ರೆ ಜೇನುತುಪ್ಪದಲ್ಲಿ ಕಲಸಿಕೊಡಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದ ರಿಂದ ಶ್ವಾಸಕಾಸ, ಗೂರ್ಲು, ಕೆಮ್ಮು ಗುಣವಾಗುವದು.

೨೪. ಹಣ್ಣಾದ ಬಾಳೇಯಲೇ ತಂದು ಸುಟ್ಟು ಕರುಕುಮಾಡಿ ಅವರೇ ಕಾಳು ಪ್ರಮಾಣ ಜೇನುತುಪ್ಪದಲ್ಲಿ ಕಲಸಿ ತೆಗೆದುಕೊಂಡರೆ ತಕ್ಷಣ ಶ್ವಾಸಕಾಸ ಗುಣವಾಗುವದು.

೨೫. ಗಾಜುಲವಣ ೨ ತೊಲೆ, ಬಿಡಾಲವಣ ೨ ತೊಲೆ, ಸೈಂಧರಲವಣ ೨ ತೊಲೆ, ಪೆಟ್ಲುಪ್ಪು ೨ ತೊಲೆ, ಶುದ್ಧಿಮಾಡಿದ ಅನ್ನಬೇದಿ ೨ ತೊಲೆ ಇವು ಗಳನ್ನು ಖಲ್ವದಲ್ಲಿ ಹಾಕಿ ಲೋಳಿಸರದ ರಸದಲ್ಲಿ ಅರದು ಬಿಲ್ಲೆಮಾಡಿ ೨ ಹಣತೆ ಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಕುಕ್ಕುಟ ಪುಟ ಹಾಕುವದು. ಈ ಔಷಧವನ್ನು ಹೊತ್ತಿಗೆ ೧ ಹಣ ತೂಕ ಜೇನುತುಪ್ಪದಲ್ಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶ್ವಾಸಕಾಸ, ಕೆಮ್ಮು ಗುಣವಾಗಿ ಹೊಟ್ಟೆಯಲ್ಲಿರುವ ಗಡ್ಡೆ ಕರಗಿಹೋಗುವದು.

೨೬. ಹಿಪ್ಪಲಿ ೪ ತೊಲೆ, ಮೋಡಿ ೧ ತೊಲೆ, ತುಂಗೇಗಡ್ಡೆ ೨ ತೊಲೆ, ಶ್ರೀ ಗಂಧದಚಕ್ಕೆ ೧ ತೊಲೆ, ಲಾವಂಚ ೧ ತೊಲೆ, ಯಾಲಕ್ಕಿ ೧ ತೊಲೆ, ಲವಂಗಪತ್ರೆ ೧ ತೊಲೆ, ನಾಗಕೇಸರಿ ೧ ತೊಲೆ, ಜಟಾಮಾಂಸಿ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ವಾಯುವಿಳಂಗ ೧ ತೊಲೆ, ಚಿತ್ರಮೂಲ ೧ ತೊಲೆ, ಅರಸಿನ ೧ ತೊಲೆ, ಚಂಗಲ ಕೋಷ್ಟ ೧ ತೊಲೆ, ಶೊಂಟಿ ೧ ತೊಲೆ, ಅಕ್ಕಲಕರೆ ೧ ತೊಲೆ, ಮೆಣಸು ೨ ತೊಲೆ, ಲವಂಗ ೧ ತೊಲೆ, ದಾಲಚಿನ್ನಿ ೧ ತೊಲೆ, ಚವ್ಯ || ತೊಲೆ, ಅತಿಮಧುರ || ತೊಲೆ,

ತಾಳೀಸಪತ್ರಿ ೨ ತೊಲೆ, ಅಳಲೇಕಾಯಿಸಿಪ್ಪೆ ೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಹೊತ್ತಿಗೆ ಕಾಲುತೊಲೆ ಚೂರ್ಣ ಜೇನುತುಪ್ಪದಲ್ಲಿ ಕಲಸಿಕೊಡಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡುವದು. ಇದರಿಂದ ಕೆಮ್ಮಲು, ಶ್ವಾಸಕಾಸ ಗುಣವಾಗುವದು.

೨೭. ಒಳ್ಳೀ ಅರಸಿನ ೬ ತೊಲೆ ತಂದು ಒಂದು ಮಡಿಕೆಯಲ್ಲಿ ಅರ್ಧ ಸುಣ್ಣಕಲ್ಲು ಹಾಕಿ ಅದರಮೇಲೆ ಅರಸಿನ ಹಾಕಿ ಅದರಮೇಲೆ ಸುಣ್ಣಕಲ್ಲು ಹಾಕಿ ಕತ್ತೇಮೂತ್ರ ಹಾಕಿ ವಲೆಯಮೇಲೆ ಇಟ್ಟು ಉರಿಹಾಕಿ ೧ ಘಳಿಗೆ ಬೇಯಿಸಿ ಅರಸಿನವನ್ನು ನೀರಿನಲ್ಲಿ ತೊಳದು ಬಿಸಲಿನಲ್ಲಿ ಒಣಗಿಸಿ ಇಟ್ಟುಕೊಳ್ಳುವದು. ಮೆಣಸು ೩ ತೊಲೆ, ಹಿಪ್ಪಲಿ ೩ ತೊಲೆ ಮೇಲ್ಕಂಡ ಅರಸಿನ ಇವು ಮೂರು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇಟ್ಟುಕೊಳ್ಳುವದು. ಹೊತ್ತಿಗೆ ೧ ನಶ್ಯದ ಚುಟಕಿಯಷ್ಟು ಜೇನುತುಪ್ಪದಲ್ಲಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೆಮ್ಮಲು, ಉಬ್ಬಸ, ಶ್ವಾಸಕಾಸ ಗುಣವಾಗುವದು.

## ಇಪ್ಪತ್ತಾರನೆಯ ಅಧ್ಯಾಯ.

## ಹಿಕ್ಕಾರೋಗ—ಔಷಧಗಳು.

### ಹಿಕ್ಕಾರೋಗ (ಬಿಕ್ಕಳಿಕೆ) ಲಕ್ಷಣ.

ಹಿಕ್ಕಾ (ಬಿಕ್ಕು) ರೋಗವು ಕ್ಷುದ್ರ, ಅನ್ನಜ, ಗಂಭೀರ, ಯಮಲ, ಮಹತಿ ಎಂಬದಾಗಿ ಐದುವಿಧಗಳಾಗಿರುತ್ತದೆ

ವಾತವು ಸ್ವಲ್ಪವಾಗಿ ಪ್ರಕೋಪಿಸಿ ಗುಂಡಿಗೆಯ ಮೇಲಕ್ಕೆನೋಕಿ ಅಲ್ಲಿಂದ ಶಬ್ದವನ್ನು ಹೊರಡಿಸುವುದನ್ನು ಕ್ಷುದ್ರಹಿಕ್ಕ ಎಂದು ತಿಳಿಯುವುದು.

ಅನ್ನವು, ನೀರು ಇವುಗಳನ್ನು ಸೇವಿಸುವುದರಿಂದ ವಾತಪ್ರಕೋಪವಾಗಿ ಗುಂಡಿಗೆಗೆ ಮೇಲ್ಭಾಗಕ್ಕೆ ತಗಲಿ ಶಬ್ದವನ್ನು ಹೊರಹೊರಡಿಸುವದು ಅನ್ನಜಹಿಕ್ಕ ಎಂದು ತಿಳಿಯುವುದು.

ನಾಭಿಸ್ಥಾನದಲ್ಲಿ ಗಂಭೀರವಾಗಿ ಶಬ್ದವು ಹೊರಹೊರಟು ಅದು ಅವಯವಗಳೆಲ್ಲವನ್ನು ಮೇಲಕ್ಕೆ ಸೆಳೆಯುತ್ತಿರುವುದನ್ನು ಗಂಭೀರಹಿಕ್ಕ ಎಂದು ತಿಳಿಯುವುದು.

ವಾತವು ಊರ್ಧ್ವಗಾಮಿಯಾಗಿ ಯಾವಾಗಲೂ ಎರಡು ಬಿಕ್ಕಳಿಕೆಗಳು ಬರುವುದನ್ನು ಯಮಲಹಿಕ್ಕಾ ಎಂದು ತಿಳಿಯುವುದು.

ವಾತವು ಊರ್ಧ್ವವಾಗಿ ಸಂಧಿಗಳನ್ನೊದರುತ್ತಾ ಶರೀರಕ್ಕೆ ಕಂಪನವನ್ನುಂಟು ಮಾಡುತ್ತಾ ಎಡೆಬಿಡದೆ ಬರುವ ಬಿಕ್ಕಳಿಕೆಯನ್ನು ಮಹತೀಹಿಕ್ಕ ಎಂದು ತಿಳಿಯುವುದು.

## ಬಿಕ್ಕಳಿಕೆ ರೋಗದಲ್ಲಿ ಅಸಾಧ್ಯ ಲಕ್ಷಣ.

೧. ನಿಟ್ಟುಸುರು, ನೀರಡಿಕೆ, ಬುದ್ಧಿವಿಕಾರ, ಕಣ್ಣುತಿರುಗುವಿಕೆ, ಶರೀರ ಕಾರ್ಶ್ಯ, ಬಿಕ್ಕಳಿಕೆಗಳಿದ್ದರೆ ಅಸಾಧ್ಯವು.

## ಹಿಕ್ಕಾರೋಗಕ್ಕೆ ಚಿಕಿತ್ಸೆಗಳು.

೧. ಬ್ಯಾಲದಯಲೆ ಎಳೇದಾಗಿರುವದು ತಂದು ಕುಟ್ಟಿ ಬಟ್ಟೆಯಲ್ಲಿ ಶೋಧಿಸಿ ರಸ ತೆಗೆದದ್ದು ೨ ತೊಲೆ, ಹಿಪ್ಪಲಿ ಚೂರ್ಣಮಾಡಿದ್ದು ೨ ಆಣೆ ತೂಕ, ಜೇನುತುಪ್ಪ ಸ್ವಲ್ಪ ಇವು ಮೂರು ಕಲಸಿ ಕುಡಿಯಲು ಬಿಕ್ಕಳಿಕೆ ಗುಣವಾಗುವದು.

೨. ಹಳೇ ಹುಣಿಸೇಹಣ್ಣು ೨ ತೊಲೆ, ಬಿಳೇಜೀರಿಗೆ ೨ ತೊಲೆ ಇವು ಎರಡು ವರಳಲ್ಲಿ ಹಾಕಿ ಕುಟ್ಟಿ ತುಪ್ಪದ ದೀವಿಗೆಯಲ್ಲಿ ಕರ್ರಗಾಗುವಂತೆ ಸುಟ್ಟು ಚೂರ್ಣಮಾಡಿ ೨ ಹಣ ತೂಕ ಜೇನುತುಪ್ಪದಲ್ಲಿ ಕಲಸಿ ಕೊಡಲು ಬಿಕ್ಕಳಿಕೆ ಗುಣವಾಗುವದು.

೩. ಆಲದಹಣ್ಣು ತಂದು ಜೇನುತುಪ್ಪದಲ್ಲಿ ಅರದು ನಾಲಿಗೆಗೆ ಸವರುವದು. ಈರೀತಿ ೩ ದಿನ ಕೊಡಲು ಬಿಕ್ಕಳಿಕೆ ಗುಣವಾಗುವದು.

೪. ನೆಲ್ಲು (ಭತ್ತ) ಉರಿದು ಅರಳುಮಾಡಿದ್ದು ೩ ತೊಲೆ, ತವಕ್ಷೀರ ೧ ತೊಲೆ, ದ್ರಾಕ್ಷಿ ೧ ತೊಲೆ, ಹಿಪ್ಪಲಿ ೧ ತೊಲೆ, ಲವಂಗ ॥ ತೊಲೆ ಇವುಗಳು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಬೆಳಿಗ್ಗೆಹೊತ್ತು ॥ ತೊಲೆ ಚೂರ್ಣ ಜೇನುತುಪ್ಪದಲ್ಲಿ ಕೊಡುವದು. ಹೀಗೆ ಬೆಳಿಗ್ಗೆಹೊತ್ತು ೩ ದಿನ ಕೊಟ್ಟರೆ ಬಿಕ್ಕಳಿಕೆ ಗುಣವಾಗುವದು.

೫. ಅರಗು ಪುಡಿಮಾಡಿ ಬೆಂಕಿಮೇಲೆ ಹಾಕಿ ಕಂಬಳಿಹೊದ್ದುಕೊಂಡು ಕುಂಭಶಾಕ ಕೊಡುವದು. ಹೀಗೆ ಬೆಳಿಗ್ಗೆಹೊತ್ತು ೩ ದಿನ ಮಾಡಿದರೆ ತೀಕ್ಷ್ಣವಾದ ಬಿಕ್ಕಳಿಕೆ ಗುಣವಾಗುವದು.

೬. ಕರೀಬಟ್ಟೆಯನ್ನು ತುಪ್ಪದಲ್ಲಿ ಅದ್ದಿ ಬತ್ತಿಮಾಡಿ ದೀಪಕ್ಕೆ ಹಚ್ಚಿ ಆರಿಸಿ ಆ ಬತ್ತಿ ಹೊಗೆಯನ್ನು ಮೂಗಿಗೆ ಕೊಡುವದು. ಹೀಗೆ ಬೆಳಿಗ್ಗೆಹೊತ್ತು ದಿನ ಮಾಡಿದರೆ ಬಿಕ್ಕಳಿಕೆ ಗುಣವಾಗುವದು.

೭. ಹುಣಿಸೇಸಾರು, ನವಲುಗರಿ, ಕೆಮ್ಮಣ್ಣು ಬಟ್ಟಿ ಇವು ಮೂರು ಸಮಭಾಗ ತಂದು ಸುಟ್ಟು ಬೂದಿ ಮಾಡಿಕೊಳ್ಳುವದು. ಹೊತ್ತಿಗೆ ೧ ಆಣೆ ತೂಕ ಜೇನು ತುಪ್ಪದಲ್ಲಿ ಕಲಸಿ ಹೊಟ್ಟೆಗೆ ಸ್ವಲ್ಪ ಸ್ವಲ್ಪವಾಗಿ ಮೇಲೆಮೇಲೆ ನೆಕ್ಕಿಸುವದು. ಹೀಗೆ ಬೆಳಿಗ್ಯೆ, ಮಧ್ಯಾಹ್ನ, ಸಾಯಂಕಾಲ ೩ ಸಲ ಕೊಡಲು ಬಿಕ್ಕಳಿಕೆ ಗುಣ ವಾಗುವದು.

೮. ಬ್ಯಾಲದಚಿಪ್ಪು (ಕರಟ) ಗಂಧಾ ತೆಯಿದು ಸಕ್ಕರೆ ಆಗಲಿ ಜೇನುತುಪ್ಪ ವಾಗಲಿ ಕಲಸಿಕೊಡುವದು. ಹೀಗೆ ಬೆಳಿಗ್ಯೆ, ಮಧ್ಯಾಹ್ನ, ಸಾಯಂಕಾಲ ೩ ಸಲ ಕೊಡಲು ಬಿಕ್ಕಳಿಕೆ ಗುಣವಾಗುವದು.

೯. ಹಸುವಿನತುಪ್ಪ ೨ ತೊಲೆ, ಶೊಂಟಿ ಚೂರ್ಣಮಾಡಿದ್ದು ೧॥ ತೊಲೆ, ಸ್ವಲ್ಪ ಸಕ್ಕರೆ ಹಾಕಿ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ॥ ತೊಲೆ ತೆಗೆದು ಕೊಳ್ಳಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಬಿಕ್ಕಳಿಕೆ ಗುಣವಾಗುವದು.

೧೦. ಕಾರೇಗಿಡದಬೇರು, ಬೇವಿನಸೊಪ್ಪು, ದ್ರಾಕ್ಷಿ, ಗೋಮೂತ್ರ ಇವು ಸಮಭಾಗ ಅರದು ಹೊತ್ತಿಗೆ ಕಾಲುತೊಲೆ ಜೇನುತುಪ್ಪದಲ್ಲಿ ಕಲಸಿ ಕೊಡುವದು. ಹೀಗೆ ೩ ಸಲ ಕೊಟ್ಟಲ್ಲಿ ಬಿಕ್ಕಳಿಕೆ ಗುಣವಾಗುವದು.

೧೧. ಹಿಪ್ಪಲಿ ॥ ತೊಲೆ, ಮೋಡಿ ॥ ತೊಲೆ ಇವು ಎರಡು ಕುಟ್ಟಿ ಚೂರ್ಣ ಮಾಡಿ ಬೆಲ್ಲ ೨ ತೊಲೆ, ಆಲದಮರದಚಕ್ಕೆ ನೀರಿನಲ್ಲಿ ಗಂಧ ತೆಗೆದದ್ದು ಇವು ನಾಲ್ಕು ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ॥ ತೊಲೆ ಕೊಡುವದು. ಹೀಗೆ ೩ ಸಲ ಕೊಟ್ಟಲ್ಲಿ ಬಿಕ್ಕಳಿಕೆ ಗುಣವಾಗುವದು.

೧೨. ರಾತ್ರಿತಂದ ತಣ್ಣೀರು ೧ ಪಾವು, ಜೇನುತುಪ್ಪ ಕಾಲುಪಾವು ಇವು ಎರಡು ಕಲಸಿಕೊಡುವದರಿಂದ ಬಿಕ್ಕಳಿಕೆ ಗುಣವಾಗುವದು.

೧೩. ಚಲುವೆಮಾಡಿದ ಬಟ್ಟೆ ಬತ್ತಿಮಾಡಿ ಬೆಂಕಿಹಚ್ಚಿಸಿ ಅದರ ಹೊಗೆ ಯನ್ನು ನುಂಗಿದರೆ ಬಿಕ್ಕಳಿಕೆ ಗುಣವಾಗುವದು.

೧೪. ಉತ್ತರೇಣಿಅಕ್ಕಿ, ಹಣ್ಣು ಆಲದಯಲೆ ಇವು ಎರಡು ಸುಟ್ಟು ಭಸ್ಮ ಮಾಡಿ ಜೇನುತುಪ್ಪದಲ್ಲಿ ಆಗಲಿ, ಹಸುವಿನ ತುಪ್ಪಲ್ಲಿ ಆಗಲಿ ಕಲಸಿ ಕೊಡಲು ಬಿಕ್ಕಳಿಕೆ ಗುಣವಾಗುವದು.

೧೫. ಹುರಳಿ, ತಪಸಿಚಕ್ಕೆ ಇವುಗಳನ್ನು ಕಷಾಯಹಾಕಿ ಬಟ್ಟೆಯಲ್ಲಿ ಶೋಧಿಸಿ ಕುಡಿದರೆ ಬಿಕ್ಕಳಿಕೆ ಗುಣವಾಗುವದು.

೧೬. ಉತ್ತರೇಣಿಅಕ್ಕಿ ಕಾಲುತೊಲೆ, ಹಿಪ್ಪಲಿ ಕಾಲುತೊಲೆ ಇವು ಎರಡು ಕುಟ್ಟಿ ಚೂರ್ಣಮಾಡಿ ಶೋಧಿಸಿ ಜೇನುತುಪ್ಪದಲ್ಲಿ ಕಲಸಿ ಕೊಡಲು ಬಿಕ್ಕಳಿಕೆ ಗುಣವಾಗುವದು.

೧೭. ಯಲುವಸಂಧಿ, ಚಿಟ್ಟಾಮುಟ್ಟಿಬೇರು, ರಾಮುಗುಳ್ಳ, ನಾಯಿತುಲಸಿ, ಶೊಂಟಿ, ಮರದರಿಸಿನ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಹಿಪ್ಪಲಿಚೂರ್ಣ, ಜೇನುತುಪ್ಪಹಾಕಿ ಕಲಸಿ ಕುಡಿದರೆ ಬಿಕ್ಕಳಿಕೆ, ವಾಂತಿ ಗುಣವಾಗುವದು.

೧೮. ಹಿಪ್ಪಲಿ, ಯಷ್ಟಿಮಧುಕ, ಕೊತ್ತುಂಬರಿಬೀಜ, ಯಾಲಕ್ಕಿ, ಲಾವಂಚ, ಚವ್ಯ, ಅಮೃತಬಳ್ಳಿ, ಬಿಲ್ಪತ್ರೆಬೇರು ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಸ್ವಲ್ಪ ಜೇನುತುಪ್ಪ ಹಾಕಿ ಕಲಸಿಕೊಟ್ಟರೆ ಬಿಕ್ಕಳಿಕೆ, ವಾಂತಿ ಗುಣವಾಗುವದು.

೧೯. ಸಣ್ಣರಾಸ್ಮೆ, ಅಮೃತಬಳ್ಳಿ, ದಾಲಚಿನ್ನಿ, ಯಾಲಕ್ಕಿ, ಹಿಪ್ಪಲಿ, ಲಾವಂಚ, ಯಷ್ಟಿಮಧುಕ, ಬಿಲ್ಪತ್ರೆಬೇರು ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಸ್ವಲ್ಪ ಜೇನುತುಪ್ಪ ಹಾಕಿ ಕಲಸಿಕೊಟ್ಟರೆ ಬಿಕ್ಕಳಿಕೆ, ವಾಂತಿ ಗುಣವಾಗುವದು.

೨೦. ಮಾದವಾಳದ ಬೇರಿನತಿರುಳು ಚೂರ್ಣಮಾಡಿದ್ದು ೧ ತೊಲೆ, ಸೈಂಧರ ಲವಣ ಕಾಲುತೊಲೆ ಇವು ಎರಡು ಸೇರಿಸಿ ಜೇನುತುಪ್ಪದಲ್ಲಿ ಕಲಸಿ ತೆಗೆದುಕೊಳ್ಳುವದು. ಈರೀತಿ ೫ ಸಲ ಕೊಟ್ಟಲ್ಲಿ ಬಿಕ್ಕಳಿಕೆ ಗುಣವಾಗುವದು.

೨೧. ಬೂಂದಿತಂದು ಬಾಳೇಹಣ್ಣಿನಲ್ಲಿ ಕಲಸಿ ತಿಂದರೆ ಬಿಕ್ಕಳಿಕೆ ನಿಲ್ಲುವದು.

೨೨. ಹಿಪ್ಪಲಿ, ಕೊತ್ತುಂಬರಿಬೀಜ ಇವು ಕುಟ್ಟಿ ಚೂರ್ಣಮಾಡಿ ಹೊತ್ತಿಗೆ ಕಾಲುತೊಲೆ ಜೇನುತುಪ್ಪದಲ್ಲಿ ಕಲಸಿಕೊಟ್ಟರೆ ಬಿಕ್ಕಳಿಕೆ ಗುಣವಾಗುವದು.

೨೩. ಚಂಗಲಕೋಷ್ಟ, ಚಿತ್ರಮೂಲ, ಅಳಲೇಕಾಯಿಸಿಪ್ಪೆ, ಶೊಂಟಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಅದರಲ್ಲಿ ಮುಳ್ಳುಶಾಮಂತಿಗೆಹುವ್ವಿನ ಚೂರ್ಣ ಕಾಲುತೊಲೆ ಹಾಕಿ ಕಲಸಿ ಕುಡಿಯಲು ಪಂಚವಿಧ ಬಿಕ್ಕಳಿಕೆಗಳು ಗುಣವಾಗುವದು.

೨೪. ಶ್ರೀಗಂಧದಚಕ್ಕೆ, ಮಹಿಸಾಕ್ಷಿಗುಗ್ಗುಳ, ಎತ್ತಿನಕೊಂಬು, ಹಾವಿನ ಪೊರೆ, ಚಂಗಲಕೋಷ್ಟ, ಅರಸಿನ, ನವಿಲುಗರಿ ಇವು ಸಮಭಾಗ ತಂದು ಧೂಪ ಹಾಕಲು ಪಂಚವಿಧ ಬಿಕ್ಕಳಿಕೆಗಳು ಗುಣವಾಗುವದು.

೨೫. ನವಿಲುಗರಿ ಸುಟ್ಟಕರುಕು, ಸಣ್ಣಹಿಪ್ಪಲಿ, ಯಾಲಕ್ಕಿ ಇವು ಮೂರು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಹೊತ್ತಿಗೆ ೨ ಆಣೆ ತೂಕ ಚೂರ್ಣ ಜೇನುತುಪ್ಪದಲ್ಲಿ ಕಲಸಿ ನಾಲಿಗೆಗೆ ಮೇಲೆಮೇಲೆ ಲೇಪಿಸಲು ಬಿಕ್ಕಳಿಕೆ ಗುಣವಾಗುವದು.

೨೬. ಸಾಂಬ್ರಾಣಿಯನ್ನು ನೀರಿನಿಂದ ಅರದು ಬಟ್ಟೆಗೆ ಸವರಿ ಒಣಗಿಸಿ ಬತ್ತಿಮಾಡಿ ಇಟ್ಟುಕೊಳ್ಳುವದು. ಬತ್ತಿಗೆ ಬೆಂಕಿ ಹತ್ತಿಸಿ ಹೊಗೆಯನ್ನು

ಮೂಗಿನ ಒಂದು ನೊಳ್ಳೆಹಿಡಿದು ಒಂದು ಸೊಳ್ಳೆಯಲ್ಲಿ ಹೊಗೆ ಸೇದುವದು. ಈರೀತಿ ಮಾಡಿದರೆ ಬಿಕ್ಕಳಿಕೆ ಗುಣವಾಗುವದು.

೨೭. ಹವಳಸರಿಗಂಧಕ, ಬಿಳೇಜೀರಿಗೆ ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಬೆಂಕಿಯಲ್ಲಿಹಾಕಿ ದುಪಟಿ ಗುಬರುಹಾಕಿ ಹೊಗೆ ಕೊಟ್ಟಲ್ಲಿ ಬಿಕ್ಕಳಿಕೆ ಗುಣವಾಗುವದು.

೨೮. ಅತಿಮಧುರ, ಶೊಂಟಿ, ನೆಲ್ಲೀಕಾಯಿ ಇವು ಮೂರು ಸಮಭಾಗ ತಂದು ಕುಟ್ಟಿ ಚೂರ್ಣಮಾಡುವದು. ಹೊತ್ತಿಗೆ ॥ ತೊಲೆ ಚೂರ್ಣ ಜೇನು ತುಪ್ಪದಲ್ಲಿ ಕಲಸಿ ನೆಕ್ಕಿಸುವದು. ಹೀಗೆ ಬಿಕ್ಕಳಿಕೆ ನಿಲ್ಲುವವರಿವಿಗು ಕೊಡುವದು.

೨೯. ಲವಂಗ ೪, ಹಿಪ್ಪಲಿ ೪, ಯಷ್ಟಿಮಧುಕ ೧ ಚಿಟಕಿ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಈರುಳ್ಳಿ ೨ ರಸತೆಗೆದು ತಾಟಿಬೆಲ್ಲ ಮತ್ತು ಚೂರ್ಣಹಾಕಿ ಕಲಸಿಕೊಟ್ಟರೆ ಬಿಕ್ಕಳಿಕೆ ಗುಣವಾಗುವದು

೩೦. ತೆಂಗಿನಕಾಯಿಬೇರು, ಹಿಪ್ಪಲಿ, ನವಿಲುಗರಿ ಇವುಮೂರು ಸಮಭಾಗ ತಂದು ಸುಟ್ಟು ಭಸ್ಮಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ೨-ಆಣೆತೂಕ ಭಸ್ಮವನ್ನು ಜೇನುತುಪ್ಪದಲ್ಲಿ ಕಲಸಿಕೊಡುವದು. ಹೀಗೆ ಬಿಕ್ಕಳಿಕೆ ನಿಲ್ಲುವವರಿವಿಗು ಕೊಡುವದು.

೩೧. ನವಿಲಿನಗರಿ ಸುಟ್ಟಕರುಕು, ಹಿಪ್ಪಲಿ, ಯಷ್ಟಿಮಧುಕ ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಒಂದು ಯೇಡಿಕಾಯಿತಂದು ಕುಟ್ಟಿ ರಸ ತೆಗೆದುಕೊಂಡು ಅದರಲ್ಲಿ ಜೇನುತುಪ್ಪ ಸ್ವಲ್ಪ, ಸಕ್ಕರೆ ಸ್ವಲ್ಪ ಮೇಲ್ಕಂಡ ಚೂರ್ಣ ಸ್ವಲ್ಪಹಾಕಿ ಗಂಡೌಷಧ (ನಾಲಿಗೆಗೆ ಲೇಪನಮಾಡುವ ಔಷಧ) ಮಾಡಿ ಕೊಡಲು ಬಿಕ್ಕಳಿಕೆ ಗುಣವಾಗುವದು.

೩೨. ಒಂದು ಮಡಿಕೆಯಲ್ಲಿ ಹಸುವಿನ ಸಗಣಿಹಾಕಿ ಸ್ವಲ್ಪ ನೀರುಹಾಕಿ ಮಂದವಾಗಿ ಕಲಸಿ ಅದರಲ್ಲಿ ನೆಲ್ಲುಬತ್ತ ಹಾಕಿ ಕಲಸಿ ಒಂದುರಾತ್ರಿ ಇಟ್ಟದ್ದು ಬೆಳಿಗ್ಗೆ ನೆಲ್ಲನ್ನು ತೆಗೆದುಕೊಂಡು ನೀರಿನಲ್ಲಿ ತೊಳೆದು ಸುಮಾರಾಗಿ ಒಣಗಿಸಿ ಹುರದು ಅವಲುಮಾಡಿಕೊಂಡು ಕುಟ್ಟಿ ಶೋಧಿಸಿ ಹೊತ್ತಿಗೆ ಯಲಚೀಬೀಜದ ಪ್ರಮಾಣ ಜೇನುತುಪ್ಪದಲ್ಲಿ ಕಲಸಿ ಕೊಡುವದು. ಹೀಗೆ ಬಿಕ್ಕಳಿಕೆ ನಿಲ್ಲುವ ವರಿವಿಗು ಕೊಡಬೇಕು.

೩೩. ಗಂಡೌಷಧ:—ನವಿಲಗರಿ ಸುಟ್ಟಕರುಕು, ಹಿಪ್ಪಲಿ, ಯಷ್ಟಿಮಧುಕ, ಸಕ್ಕರೆ, ಜೇನುತುಪ್ಪ ಇವು ಸಮಭಾಗ ಚನ್ನಾಗಿ ಅರದು ಗಂಡೌಷಧ ಮಾಡಲು ಬಿಕ್ಕಳಿಕೆ ಗುಣವಾಗುವದು.



# ಇಪ್ಪತ್ತೇಳನೆಯ ಅಧ್ಯಾಯ.

## ಮೂರ್ಛಾರೋಗ—ಔಷಧಗಳು.

### ಮೂರ್ಛಾ ಲಕ್ಷಣ.

ಮೂರ್ಛಾರೋಗವು:—ವಾತ, ಪಿತ್ತ, ಶ್ಲೇಷ್ಮ, ಸನ್ನಿಪಾತಗಳಿಂದುತ್ಪನ್ನವಾಗಿ ನಾಲ್ಕು ವಿಧವಾಗಿರುತ್ತದೆ.

ಮೂರ್ಛಾರೋಗದಲ್ಲಿ ವಾತಾದಿ ದೋಷಗಳು ಪ್ರಕೋಪವನ್ನು ಹೊಂದಿ ಜ್ಞಾನವಹ ಸ್ರೋತಸ್ಸುಗಳನ್ನಕಸ್ಮಾತ್ತಾಗಿ (ಸರಕ್ಕನೆ) ಆವರಿಸುವುದರಿಂದ ಶರೀರದಲ್ಲಿ ತಮೋಗುಣವು ವ್ಯಾಪಕವಾಗಿ ವಿಷಯಜ್ಞಾನವು ಅಳಿದು ಮುರಿದುಬಿದ್ದ ಮರದಂತೆ ರೋಗಿಯು ನೆಲಕ್ಕೆ ಬೀಳುವನು.

ವಾತಮೂರ್ಛೆಯಲ್ಲಿ ಕೃಶತ್ವವು, ಶರೀರದಲ್ಲಿ ನೋವು, ಆಕಾಶವು ಕಪ್ಪು, ಕೆಂಪು, ಬಿಳುಪಾಗಿ ಕಾಣಿಸುವುದು, ವರ್ಣವೈಕಲ್ಯವು, ಎದೆನೋವು ಮೊದಲಾದ ಲಕ್ಷಣಗಳು ಕಾಣುವುವು.

ಪಿತ್ತಮೂರ್ಛೆಯಲ್ಲಿ ಆಕಾಶವು ಕೆಂಪು, ಹಸುರು, ಹಳದಿ ವರ್ಣವಾಗಿ ಕಾಣಿಸುವಿಕೆ, ಮೂರ್ಛೆಯು ಇಳಿದಾಗ ಬೆವರುವಿಕೆ, ತಾಪ, ದಾಹ, ಕಣ್ಣುಗಳು ಹಸುರಾಗಿರುವಿಕೆ, ಮಲವು ಹಸುರಾಗಿರುವಿಕೆ ಮೊದಲಾದ ಚಿಹ್ನೆಗಳು ಕಾಣುವುವು.

ಶ್ಲೇಷ್ಮಮೂರ್ಛೆಯಲ್ಲಿ ಆಕಾಶವು ಮೇಘಾವೃತವಾಗಿಯೂ, ಅಂಧಕಾರಾವೃತವಾಗಿಯೂ ಕಾಣುವಿಕೆ, ಬಹಳ ಹೊತ್ತಿನವರೆಗೂ ತಿಳುವಳಿಕೆಯಿಲ್ಲದಿರುವಿಕೆ, ಶರೀರದಮೇಲೆ ಒದ್ದೆ ಬಟ್ಟೆಯನ್ನು ಹೊದಿಸಿದಂತಿರುವಿಕೆ, ಬಾಯಲ್ಲಿ ಬಿಳಿನೊರೆ ಬರುವಿಕೆ ಮೊದಲಾದ ಲಕ್ಷಣಗಳು ಕಾಣುವುವು.

ಸನ್ನಿಪಾತಮೂರ್ಛೆಯಲ್ಲಿ ವಾತ, ಪಿತ್ತ, ಕಫಲಕ್ಷಣಗಳೆಲ್ಲವೂ ಕಾಣುವುವು ಮತ್ತು ಅಂತಹ ಮನುಷ್ಯನು ನಿಶ್ಚೇಷ್ಟಿತನಾಗಿ ಮರದಂತೆ ಕೆಳಕ್ಕೆ ಬೀಳುವನು.

### ಮೂರ್ಛೆಗೆ ಚಿಕಿತ್ಸೆಗಳು.

೧. ಅಜಾಮೊದ ಕಾಲುತೊಲೆ, ಕರೇಎಳ್ಳು ॥ ತೊಲೆ, ಕೃಷ್ಣತುಲಸೀಯಲೆ ೧ ಹಿಡಿ, ಹಳೇಬೆಲ್ಲ ॥। ತೊಲೆ, ಹೊಟ್ಟುಸುಲಿದ ಬೆಳ್ಳುಳ್ಳಿ ೧ ತೊಲೆ ಇವುಗಳನ್ನು ವರಳಲ್ಲಿ ಹಾಕಿ ಚನ್ನಾಗಿ ಅರೆದು ಹೊತ್ತಿಗೆ ಗಜ್ಜೇಕಾಯಿಗಾತ್ರ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೧೧ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಾರ್ಶ್ವವಾಯು,

ಪಕ್ಷಗತವಾಯು, ವಾತಪಿತ್ತ, ವಾಯುವಿನಿಂದ ಹುಟ್ಟಿದ ಮೂರ್ಛೆ, ಕಲವರಿಕೆ ಗುಣವಾಗುವದು.

೨. ಚಂಗಲಕೋಷ್ಟ ೩ ತೊಲೆ, ಮೋಡಿ ೧ ತೊಲೆ, ಕಟುಕರೋಹಿಣಿ ೧ ತೊಲೆ, ಲವಂಗ ॥ ತೊಲೆ, ಹಿಪ್ಪಲಿ ೧ ತೊಲೆ, ಸೈಂಧರಲವಣ ॥ ತೊಲೆ, ಮರಾಟಿಮೊಗ್ಗು ಕಾಲುತೊಲೆ, ಬಿಳೇಜೀರಿಗೆ ॥ ತೊಲೆ, ಮೆಣಸು ೨ ತೊಲೆ, ವೋಮ ॥ ತೊಲೆ, ಕಸ್ತೂರಿ ೧ ಅಡ್ಡ ತೂಕ, ಹೊಟ್ಟುಸುಲಿದ ಬೆಳ್ಳುಳ್ಳಿ ಕಾಲು ತೊಲೆ, ಕೆಂಪುವುತ್ತರೇಣಿಬೇರಿನ ಬೊಬ್ಬಡೆ ೧ ತೊಲೆ, ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಅರಿಯುವ ಜಿನಸುಗಳನ್ನು ಖಲ್ವದಲ್ಲಿ ಹಾಕಿ ಅರದು ಎಲ್ಲವನ್ನು ಖಲ್ವದಲ್ಲಿ ಹಾಕಿ ಹಸೀಶುಂಟೀ ರಸದಲ್ಲಿ ಅರದು ಯಲಚೀಬೀಜದ ಪ್ರಮಾಣ ಮಾತ್ರೆಮಾಡುವದು. ಹೊತ್ತಿಗೆ ೧ ಮಾತ್ರೆ ಜೇನುತುಪ್ಪದಲ್ಲಿ ಕಲಸಿಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೪೦ ದಿನ ಕೊಡಬೇಕು. ಇದಕ್ಕೆ ಪತ್ಯ ೭ ದಿನ ಹುಳಿಯಿಲ್ಲದ ಹುರಳೀಕಟ್ಟು ಅನ್ನ. ೭ ದಿನ ತೊಗರೀಬೇಳೆ ಸಿಹಿಸಾರು ಅನ್ನ. ೭ ದಿನ ಹುರಳೀಕಟ್ಟು ಅನ್ನ. ೭ ದಿನ ತೊಗರೀಬೇಳೆ ಸಿಹಿಸಾರು ಅನ್ನ. ಈರೀತಿ ಒಂದು ಮಂಡಲಕ್ಕೆ ೭ ವಾರ ೪೯ ದಿನ ಆಗುತ್ತೆ. ಹೀಗೆ ೪೮ ದಿನ ಕೊಡಬೇಕು. ಇದರಿಂದ ಮೂರ್ಛೆ ಗುಣವಾಗುತ್ತೆ.

೩. ಬಿಳೀ ಆಮೆ ಮಾಂಸವನ್ನು ತಂದು ಮೆಣಸು, ಜೀರಿಗೆ, ಉಪ್ಪುಹಾಕಿ ಹಸುವಿನತುಪ್ಪದಲ್ಲಿ ಹುರದು ೧-೨ ತೊಲೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೫-೭ ದಿನ ಕೊಡಬೇಕು. ಆಮೆಯಲ್ಲಿರುವ ಪಿತ್ತ ತೆಗೆದು ಮೆಣಸು ನೆನೆಹಾಕಿ ಪ್ರತಿದಿನ ಒಂದು ಮೆಣಸು ತಿನ್ನುತ್ತಾಬಂದರೆ ಮೂರ್ಛೆ ಗುಣವಾಗುವದು. ಪತ್ಯ ವಾಯುಪದಾರ್ಥ ವರ್ಜ್ಯ.

೪ ಗಂಡ್ರಕೊತ್ತಿ ಅಂದರೆ ಮರಗಳಲ್ಲಿ ಗೂಡುಕಟ್ಟುವ ಕೆಂಪಗೆಯಿರುವ ದೊಡ್ಡ ಗೊದ್ದ ಇದರ ಮೊಟ್ಟೆ ೧ ತೊಲೆ, ಗಾಳದಹುಳ ೧ ತೊಲೆ ಇವು ಎರಡು ಹಸುವಿನಮಜ್ಜಿಗೆಯಲ್ಲಿ ಹಾಕಿ ೧ ಘಳಿಗೆ ಬೇಯಿಸಿ ಅನಂತರ ಖಲ್ವಕ್ಕೆ ಹಾಕಿ ಕತ್ತೆಹಾಲಿನಲ್ಲಿ ಅಥವಾ ಕರೇಮೇಕೆ ಹಾಲಿನಲ್ಲಾಗಲಿ ಒಂದು ದಿನ ಅರದು ಕಡಲೇ ಕಾಳು ಪ್ರಮಾಣ ಮಾತ್ರೆಮಾಡುವದು. ಹೊತ್ತಿಗೆ ೧ ಮಾತ್ರೆ ಕತ್ತೆಹಾಲಿನಲ್ಲಿ ಅಥವಾ ಕರೇಮೇಕೇ ಹಾಲಿನಲ್ಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂ ಕಾಲ ೨ ಹೊತ್ತು ೫-೭-೧೧ ದಿನ ಕೊಡಬೇಕು. ಸನ್ನಿಪಾತಕಕ್ಕೆ ಮೇಲ್ಕಂಡ ಮಾತ್ರೆ ಕತ್ತೇಲದ್ದೀ ತಂದು ರಸ ತೆಗದು ಅದರಲ್ಲಿ ೧ ಮಾತ್ರೆ ಕಲಸಿ ಕೊಡಲು ಗುಣವಾಗುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ.

೫. ಕಕ್ಕೆಮೇಣ ೨ ತೊಲೆ, ಲಾವಂಚ ೨ ತೊಲೆ, ನಾಗಕೇಸರಿ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೪ ತೊಲೆ, ಶೊಂಟಿ ೧ ತೊಲೆ, ತಾವರೇಗಡ್ಡೆ ೧ ತೊಲೆ, ನಸುಗುನ್ನಿಬೇರು ॥ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಒಂದು ಬಾಂಡ್ಲಿಯಲ್ಲಿ ಹಸೇಶೊಂಟೀ ರಸ ೧೬ ತೊಲೆ ಹಾಕಿ ಹಳೇಬೆಲ್ಲ ೧೬ ತೊಲೆ ಹಾಕಿ ವಲೆಯಮೇಲೆ ಇಟ್ಟು ಉರಿಹಾಕಿ ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಹಾಕಿ ಜೇನುತುಪ್ಪ ೧ ಪಾವು ಹಾಕಿ ಕಲಸಿ ಪಕ್ವವಾಗಿ ಲೇಹಮಾಡಿ ಇಟ್ಟುಕೊಳ್ಳುವದು ಹೊತ್ತಿಗೆ ಕಾಲುತೊಲೆ, ಅರ್ಧತೊಲೆ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಮೂರ್ಛೆ ಗುಣವಾಗುವದು.

೬. ಕಂಬು ಅಕ್ಕಿ (ಸಜ್ಜೆ) ತವುಡು ತೆಗದು ಬೀಸಿ ಹಸಿಟ್ಟು ಮಾಡಿಕೊಳ್ಳುವದು. ಈ ಹಸಿಟ್ಟು ಅರಪಾವು, ರಾಯಿಪುಡಿ ಸಕ್ಕರೆ ೧ ತೊಲೆ, ಒಂದು ಬಾಂಡ್ಲಿಯಲ್ಲಿ ಹಾಕಿ ನೀರುಹಾಕಿ ವಲೆಯಮೇಲೆ ಇಟ್ಟು ಉರಿಹಾಕಿ ಕಾಯಿಸಿ ಚನ್ನಾಗಿ ನೀರುಕಾದು ಕುದಿಯುವ ಸಮಯದಲ್ಲಿ ಮೇಲ್ಕಂಡ ಹಸಿಟ್ಟು ಸಕ್ಕರೆ ಹಾಕಿ ಕೀರು ಕಾಯಿಸಿದಂತೆ ಕಾಯಿಸಿ ಇಳಿಸಿಕೊಂಡು ಆರಿಸಿ ಕುಡಿಯುವದು. ಹೀಗೆ ಬೆಳಿಗ್ಯೆ ಹೊತ್ತು ೬ ದಿನ ಕೊಡುವದು. ಮಧ್ಯಾಹ್ನ ಸಾಯಂಕಾಲ ರಾಗಿ ಅಂಬಲಿ ಅಥವಾ ಹುರಿದ ರಾಗಿಹಿಟ್ಟು ನೀರಿನಲ್ಲಿ ಕಲಸಿ ತಿನ್ನುವದು. ಇದರಿಂದ ಮೂರ್ಛೆ ಗುಣವಾಗುವದು.

೭. ಚಿಟ್ಟುಹರಳುಯಣ್ಣೆ ೧ ಪಾವು, ಚಿಟ್ಟುಂಡೆಸೊಪ್ಪು ೧ ಹಿಡಿ ಕೈಯಿಂದ ಚನ್ನಾಗಿ ಹಿಸಿಕಿ ಒಂದು ಬಾಂಡ್ಲಿಯಲ್ಲಿ ಹಾಕಿ ವಲೆಯಮೇಲೆ ಇಟ್ಟು ಕಾಯಿಸಿ ಶೋಧಿಸಿಕೊಳ್ಳುವದು. ಬೆಳಿಗ್ಯೆಹೊತ್ತು ೧ ತೊಲೆ ಕೊಡಬೇಕು. ಹೀಗೆ ೬ ದಿನ ಕೊಡುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಮೂರ್ಛೆ ಗುಣವಾಗುವದು.

# ಇಪ್ಪತ್ತೆಂಟನೆಯ ಅಧ್ಯಾಯ.

## ಉನ್ಮಾದರೋಗ—ಔಷಧಗಳು.

### ಉನ್ಮಾದರೋಗ ಲಕ್ಷಣ.

ಉನ್ಮಾದರೋಗವು ವಾತ, ಪಿತ್ತ, ಶ್ಲೇಷ್ಮ, ಸನ್ನಿಪಾತ, ವಿಷ, ದುಃಖಂಗಳಿಂದ ಉತ್ಪನ್ನವಾಗಿ ಆರು ವಿಧಗಳಾಗಿರುವುದು. ಅಧಿಕ ವೃದ್ಧಿಯನ್ನು ಹೊಂದಿ

ಹೃದಯಕ್ಕೆ ಊರ್ಧ್ವಭಾಗದಲ್ಲಿ ಸಂಚರಿಸುವ ವಾತಾದಿದೋಷಗಳು ಮನೋವಹಂಗಳಾದ ಧಮನಿಗಳನ್ನಾಶ್ರಯಿಸಿ ಮನಸ್ಸನ್ನು ಭ್ರಮಿಸುವಂತೆ ಮಾಡುವುದೇ ಉನ್ಮಾದವೆನ್ನಲ್ಪಡುವುದು. ಮನಸ್ಸನ್ನು ಚಲಿಸುವಂತೆ ಮಾಡುವುದು ಉನ್ಮಾದವೆಂದು ಭಾವವು.

ವಾತೋನ್ಮಾದದಲ್ಲಿ:—ಹಾಸ್ಯವು, ಕಿರುನಗೆ, ನೃತ್ಯವು, ಗಾನವು, ಮಾತುಗಳು, ಅವಯುವವಿನ್ಯಾಸವು, ರೋದನವು, ದೇಹವು ಪರುಷವಾಗಿರುವಿಕೆ, ಕೃಶತೆ ಹೊಂದುವಿಕೆ, ಅರುಣವರ್ಣವಾಗಿರುವಿಕೆ, ಆಹಾರವು ಜೀರ್ಣವಾದಾಗ ಬಾಧೆ ಹೆಚ್ಚಾಗಿರುವಿಕೆ ಮೊದಲಾದ ಲಕ್ಷಣಂಗಳು ಕಾಣುವುವು.

ಪಿತ್ತೋನ್ಮಾದದಲ್ಲಿ:—ತಾಳ್ಮೆಯಿಲ್ಲದಿರುವಿಕೆ, ಆರ್ಭಾಟವನ್ನು ಮಾಡುವಿಕೆ, ದಿಗಂಬರವಾಗಿರುವಿಕೆ, ಇತರರನ್ನು ಭಯಪಡಿಸುವಿಕೆ, ಓಡುವಿಕೆ, ಶರೀರವು ಉಷ್ಣವಾಗಿರುವಿಕೆ, ಕಾರಣವಿಲ್ಲದೆ ಕೋಪವುಂಟಾಗಿರುವಿಕೆ, ನೆರಳಿನಲ್ಲಿ ನೀರಿನಲ್ಲಿ ಶೀತಲಪದಾರ್ಥಗಳಲ್ಲಿ ಅಭಿಲಾಷೆ, ಮುಖವು ಹಳದಿಯಾಗಿರುವಿಕೆ ಮೊದಲಾದ ಲಕ್ಷಣಗಳಿರುವುವು.

ಕಫೋನ್ಮಾದದಲ್ಲಿ :—ಮಾತಾಡುವಿಕೆ ಮೊದಲಾದ ವ್ಯಾಪಾರಗಳು ಮಂದವಾಗಿರುವಿಕೆ, ಅರೋಚಕವು, ಅತಿನಿದ್ರೆ, ವಾಂತಿ, ಬಾಯಿಯಲ್ಲಿ ಜೊಲ್ಲು, ಅನ್ನವು ತಿಂದರೆ ರೋಗವು ವೃದ್ಧಿಯಾಗುವಿಕೆ, ಉಗುರು, ಚರ್ಮವು ಬಿಳುಪಾಗಿರುವಿಕೆ ಮೊದಲಾದ ಲಕ್ಷಣಗಳು ಕಾಣುವುವು.

ಸನ್ನಿಪಾತೋನ್ಮಾದದಲ್ಲಿ :—ವಾತ, ಪಿತ್ತ, ಕಫ ಲಕ್ಷಣಗಳೆಲ್ಲವೂ ಕಾಣುವುವು.

ವಿಷೋನ್ಮಾದದಲ್ಲಿ:—ಕಣ್ಣುಗಳು ಕೆಂಪಾಗುವಿಕೆ, ದೇಹಬಲವು, ಇಂದ್ರಿಯಬಲವು, ಕಾಂತಿ ಇವು ನಶಿಸುವಿಕೆ, ಮುಖದಲ್ಲಿ ಕಪ್ಪುಕಲೆತ ವರ್ಣವಾಗಿ ಕಾಣುವಿಕೆ ಮೊದಲಾದ ಲಕ್ಷಣಗಳು ಕಾಣುವುವು.

ದುಃಖೋನ್ಮಾದದಲ್ಲಿ :—ಅಸಂಬದ್ಧವಾಗಿ, ವಿಚಿತ್ರವಾಗಿ ಮಾತಾಡುವಿಕೆ, ಮನಸ್ಸಿನಲ್ಲಿರುವ ರಹಸ್ಯಾಂಶಗಳನ್ನು ಹೇಳುವಿಕೆ, ವಿರುದ್ಧ ಜ್ಞಾನವುಂಟಾಗುವಿಕೆ, ಗಾನಮಾಡುವಿಕೆ, ನಗುವಿಕೆ, ಅಳುವಿಕೆ, ಮೂಢಚಿತ್ತನಾಗುವಿಕೆ ಮುಂತಾದ ಚಿಹ್ನೆಗಳು ಕಾಣುವುವು.

## ಉನ್ಮಾದರೋಗದಲ್ಲಿ ಅಸಾಧ್ಯ ಲಕ್ಷಣ.

೧. ಕಣ್ಣು ದೊಡ್ಡದಾಗಿ ಬಿಡುವದು, ಜಾಗ್ರತೆಯಾಗಿ ನಡಿಯುವದು, ತುಟಿಯನ್ನು ನಾಲಿಗೆಯಿಂದ ಸರ್ವದಾ ನೆಕ್ಕುವದು, ಸರ್ವದಾ ನಿದ್ರೆಮಾಡುವದು, ಭಾರಿಭಾರಿಗೂ ಬೀಳೋಣ, ಅತಿಕಂಪನ, ಮತ್ತು ಪರ್ವತದಿಂದಲೂ ಆನೆಮೇಲಿನಿಂದಲೂ ಯೆತ್ತರದಿಂದಲೂ ಬೀಳೋಣ, ಇಂಥಾದ್ದು ರೋಗಹುಟ್ಟಿ ಹದಿಮೂರು ವರುಷವಾಗಿದ ರೆ ಅಸಾಧ್ಯವು.

## ಉನ್ಮಾದಕ್ಕೆ ಚಿಕಿತ್ಸೆಗಳು.

೧. ಏಲಾದಿ ರಸಾಯನ:—ಸುರಸುರಿಕೆಸೊಪ್ಪಿನ ರಸ ೧ ಪಾವು, ಮಜ್ಜಿಗೆ ಗಡ್ಡೆ ರಸ ೧ ಪಾವು, ಬೂದಿಕುಂಬಳಕಾಯಿ ರಸ ೧ ಪಾವು, ಕಬ್ಬಿನ ರಸ ೧ ಪಾವು, ಹಸುವಿನ ಹಾಲು ೧ ಶೇರು, ದ್ರಾಕ್ಷಿ ೪ ತೊಲೆ, ಖರ್ಜೂರ ೨ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ನೀರುಹಾಕಿ ಅರದು ಬಟ್ಟೆಯಲ್ಲಿ ಶೋಧಿಸಿಕೊಳ್ಳುವದು. ಇವುಗಳನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ಸಕ್ಕರೆ ೩ ಶೇರು ಹಾಕಿ ಒಲೆಯಮೆಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಈ ಚೂರ್ಣವನ್ನು ಹಾಕುವದು. ಅತಿಮಧುರ ೧ ತೊಲೆ, ಹಿಪ್ಪಲಿ ೧ ತೊಲೆ, ದಾಲಚಿನ್ನಿ ೧ ತೊಲೆ, ಲವಂಗಪತ್ರಿ ೧ ತೊಲೆ, ಯಾಲಕ್ಕಿ ೨ ತೊಲೆ, ಶ್ರೀಗಂಧದಚಕ್ಕೆ ೧ ತೊಲೆ, ಸೊಗದೇಬೇರು ೧ ತೊಲೆ, ತುಂಗೇಗಡ್ಡೆ ೧ ತೊಲೆ, ತಾವರೆಕುಸುಮ ೧ ತೊಲೆ, ನೆಲ್ಲೀಕಾಯಿ ೨ ತೊಲೆ, ನೈದಿಲೆಗಡ್ಡೆ ೧ ತೊಲೆ, ಬಿಳೇಜೀರಿಗೆ ೨ ತೊಲೆ, ಕಚೋರ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಮೇಲ್ಕಂಡ ಬಾಂಡ್ಲಿಯಲ್ಲಿಹಾಕಿ ಜೇನುತುಪ್ಪ ೧ ಶೇರು, ಹಸುವಿನತುಪ್ಪ ॥ ಶೇರು ಹಾಕಿ ಕಲಸಿ ರಸಾಯನಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲುತೊಲೆ, ಅರ್ಧತೊಲೆ ಕೊಡಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೨೦-೪೦ ದಿನ ಕೊಡಬೇಕು. ಇಚ್ಛಾಪತ್ಯ ಶಲದಿಪದಾರ್ಥ ವರ್ಜಿತ. ಇದರಿಂದ ಉನ್ಮಾದ, ಅಪಸ್ಮಾರ, ರಕ್ತಪೈತ್ಯ, ಶಿರೋಭ್ರಮಣೆ, ಮೂರ್ಛೆ, ವಾತ, ಅರೋಚಕ, ಕ್ಷಯ, ಜ್ವರ, ದೇಹ ನಿಶ್ಯಕ್ತಿಯಾಗಿ ಇರುವದು, ಕೆಮ್ಮು, ಉಬ್ಬಸ ಇವು ಗುಣವಾಗುವವು.

೨. ಬ್ರಾಹ್ಮೀಘೃತ:—ಒಂದೆಲಗದಸೊಪ್ಪಿನ ರಸ ೨ ಶೇರು, ಹಸುವಿನ ತುಪ್ಪ ೨ ಶೇರು, ಶೊಂಟಿ, ಮೆಣಸು, ಹಿಪ್ಪಲಿ, ಶುದ್ಧಿಮಾಡಿದ ಲಾಲುತಿಗಡು, ಬಜೆ, ಕಕ್ಕೇಬೇರಿನ ತ್ವಕ್ಕು, ಕರ್ಕಾಟಕಶೃಂಗಿ, ಮರದರಿಸಿನ, ಯಾಲಕ್ಕಿ, ಕುಂಕುಮಕೇಶರಿ, ಶ್ರೀಗಂಧದಚಕ್ಕೆ, ತುಪ್ಪದದೇವದಾರು ಇವು ಜಿನಸಿಗೆ ೧ ತೊಲೆ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಎಲ್ಲವನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ವಲೆಯಮೇಲೆ ಇಟ್ಟು ಘೃತಪಕ್ವವಾಗಿ ಕಾಯಿಸಿ ಇಟ್ಟುಕೊಳ್ಳುವದು. ಹೊತ್ತಿಗೆ ೧ ತೊಲೆ ತೆಗೆದುಕೊಳ್ಳಬೇಕು. ಹೀಗೆ ಬೆಳಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಉನ್ಮಾದ ಗುಣವಾಗುವದು.

೩. ಸುರಸುರಿಕೆಸೊಪ್ಪಿನ ರಸ ೧ ಶೇರು, ಹೆಗ್ಗುಳ್ಳದ ರಸ ೧ ಶೇರು, ಮರದರಿಸಿನ ೧ ತೊಲೆ, ಕರ್ಕಾಟಕಶೃಂಗಿ ೧ ತೊಲೆ, ಕಟುಕರೋಹಿಣಿ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಸೈಂಧರಲವಣ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳು

ವದು. ಹಸುವಿನತುಪ್ಪ ೨ ಶೇರು ಇವು ಎಲ್ಲವನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲೆ ಇಟ್ಟು ಘೃತಪಕ್ವವಾಗಿ ಕಾಯಿಸಿ ಇಟ್ಟುಕೊಳ್ಳುವದು. ಹೊತ್ತಿಗೆ ೧ ತೊಲೆ ತೆಗೆದುಕೊಳ್ಳಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಉನ್ಮಾದ ಗುಣವಾಗುವದು.

೪. ಹಸೀಶುಂಠಿ ರಸ, ಕತ್ತೇಹಾಲು ಇವು ಎರಡು ಕಲಸಿ ಮೂಗಿಗೆ ೩-೪ ಬೊಟ್ಟು ಹಾಕುವದು. ಹೀಗೆ ಎರಡು ಮೂಗಿಗೆ ಹಾಕುವದು. ಇದರಿಂದ ಸಕಲ ಉನ್ಮಾದ ಗುಣವಾಗುವದು.

೫. ಕತ್ತೇಹಾಲು, ಮಾವಿನಮರದಮೇಲೆ ಇರುವ ಇರುವೆ ೧ ಹಿಡಿ, ಸಕ್ಕರೆ ಇವು ಮೂರು ಖಲ್ವದಲ್ಲಿ ಹಾಕಿ ಅರೆದು ಕುಡಿಯಲು ಸಕಲ ಉನ್ಮಾದ ಗುಣವಾಗುವದು.

೬. ಬ್ರಾಹ್ಮ್ಯಾದಿ ಸ್ವರಸ :— ಒಂದೆಲಗದ ರಸ, ಬೂದಿಕುಂಬಳಕಾಯಿ ರಸ, ಬಜೆ ರಸ, ಈಶ್ವರಿ ರಸ ಇವುಗಳೆಲ್ಲದರ ಸ್ವರಸ ೨ ತೊಲೆ, ಚಂಗಲಕೋಷ್ಟ ಚೂರ್ಣ ೧ ತೊಲೆ, ಜೇನುತುಪ್ಪ ೧ ತೊಲೆ ಬೆರಸಿ ಕುಡಿದರೆ ಉನ್ಮಾದ ಗುಣವಾಗುವದು. ಹೀಗೆ ಬೆಳಿಗ್ಗೆಹೊತ್ತು ೧೪ ದಿನ ತೆಗೆದುಕೊಳ್ಳುವದು. ಇದಕ್ಕೆ ಇಚ್ಛಾಪತ್ಯ ಶಲದಿಪದಾರ್ಥ ವರ್ಜಿತ.

೭. ಅಶ್ವಗಂಧಾದಿ ತೈಲ:—ಹಿರೇಮದ್ದಿನಗಡ್ಡೆ, ನಾರಂಬೇಳೆಬೇರು, ಬಜೆ, ಹೊಟ್ಟುಸುಲಿದ ಬೆಳ್ಳುಳ್ಳಿ, ಬಿಳೇಸಾಸುವೆ, ಸಣ್ಣರಾಸ್ಮೆ, ಅಳಲೇಕಾಯಿಸಿಪ್ಪೆ, ಬಿಳೇಗರಿಕೆ ಇವು ಜಿನಸಿಗೆ ೧। ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡುವದು. ಒಂದು ಬಾಂಡ್ಲಿಯಲ್ಲಿ ಒಳ್ಳೆಣ್ಣೆ ೨೦ ತೊಲೆ, ಗೋಮೂತ್ರ ೨೦ ತೊಲೆ, ಮೇಲ್ಕಂಡ ಚೂರ್ಣ ಇವುಗಳೆಲ್ಲವನ್ನು ಹಾಕಿ ಒಲೆಯಮೇಲಿಟ್ಟು ಪಕ್ವವಾಗಿ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವದು. ಈ ತೈಲವನ್ನು ತಲೆಗೆಹಾಕಿ ಅಭ್ಯಂಗನ ಮಾಡಿಸುತ್ತಾಬಂದರೆ ಸಕಲ ಉನ್ಮಾದ ಗುಣವಾಗುವದು.

೮. ಕೂಷ್ಮಾಂಡ ಘೃತ :—ಬೂದಿಕುಂಬಳಕಾಯಿ ರಸ ೧ ಶೇರು, ಅತಿ ಮಧುರ ಚೂರ್ಣ ೩ ತೊಲೆ, ಹಸುವಿನತುಪ್ಪ ೧ ಶೇರು ಇವೆಲ್ಲವನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಘೃತಪಕ್ವವಾಗಿ ಕಾಯಿಸಿ ತೆಗೆದು ಇಟ್ಟುಕೊಳ್ಳುವದು. ಬೆಳಿಗ್ಗೆಹೊತ್ತು ೧ ತೊಲೆ ತೆಗೆದುಕೊಳ್ಳುವದು. ಹೀಗೆ ೧೪ ದಿನ ತೆಗೆದುಕೊಳ್ಳುವದು. ಇಚ್ಛಾಪತ್ಯ ಶಲದಿಪದಾರ್ಥ ವರ್ಜಿತ. ಇದರಿಂದ ಸಕಲ ಉನ್ಮಾದ ಗುಣವಾಗುವದು.

೯. ಬಿಳೇಸಾಸುವೆ, ಬಜೆ, ಶುದ್ಧಿಮಾಡಿದ ಹಿಂಗು, ಹೊಂಗೇಬೀಜ, ತುಪ್ಪದದೇವದಾರು ಚಕ್ಕೆ, ಮಂಜಿಷ್ಟಿ, ಅಳಲೇಕಾಯಿಸಿಪ್ಪೆ, ತಾರೇಕಾಯಿ ಸಿಪ್ಪೆ, ನೆಲ್ಲೀಕಾಯಿ, ಪಟಿಕೆ ಅರಳುಮಾಡಿದ್ದು, ಮಾಲಕಂಗನಿಬೀಜ, ದಾಲ

ಚಿನ್ನಿ, ಶೊಂಟಿ, ಹಿಪ್ಪಲಿ, ಮೆಣಸು, ಬಾಗೇಬೀಜ, ಅರಸಿನ, ಮರದರಸಿನ ಇವು ಜಿನಸಿಗೆ ೧ ತೊಲೆ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಬೆಳಿಗ್ಗೆಹೊತ್ತು ೧ ತೊಲೆ ಚೂರ್ಣವನ್ನು ಗಂಡುಮೇಕೆ ಮೂತ್ರದಲ್ಲ ಕಲಸಿ ಕುಡಿಯುವದು. ಹೀಗೆ ಬೆಳಿಗ್ಗೆಹೊತ್ತು ೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಕಲ ಉನ್ಮಾದ ಗುಣವಾಗುವದು.

೧೦. ಇಂಗಳದಬೇರು ಉತ್ತರಕ್ಕೆ ಹೋಗಿರುವದನ್ನು ತಂದು ಕತ್ತೆಹಾಲಿನಲ್ಲಿ ಅರದು ಮೂಗಿಗೆ ೩-೪ ತೊಟ್ಟು ಹಾಕುವದು. ಹೀಗೆ ಎರಡು ಮೂಗಿಗೆ ಹಾಕಿದರೆ ಉನ್ಮಾದ ಗುಣವಾಗುವದು.

# ಇಪ್ಪತ್ತೊಂಭತ್ತನೆಯ ಅಧ್ಯಾಯ.

## ಅಪಸ್ಮಾರರೋಗ—ಔಷಧಗಳು.

### ಅಪಸ್ಮಾರರೋಗ ಲಕ್ಷಣ.

ಅಪಸ್ಮಾರರೋಗವು ವಾತ, ಪಿತ್ತ, ಶ್ಲೇಷ್ಮ, ಸನ್ನಿಪಾತಗಳಿಂದುತ್ಪನ್ನವಾಗಿ ನಾಲ್ಕು ವಿಧಗಳಾಗಿರುವುವು ವಾತಾದಿ ದೋಷಗಳ ಪ್ರಾಬಲ್ಯತೆಯಿಂದ ಶರೀರದಮೇಲೆ ಸ್ಮೃತಿತಪ್ಪಿ ಕತ್ತಲಲ್ಲಿ ಪ್ರವೇಶಿಸಿದ ಮನುಷ್ಯನಂತೆ ಜ್ಞಾನ ಶೂನ್ಯವಾಗಿ, ಕಣ್ಣುಗಳಂ ತಿರುಗಿಸುತ್ತಾ ಕೈಕಾಲುಗಳನ್ನೊದರುತ್ತಿರುವುದು ಅಪಸ್ಮಾರವೆಂದು ತಿಳಿಯುವುದು

ವಾತಾಪಸ್ಮಾರದಲ್ಲಿ ಚಳಿ, ಹಲ್ಲುಕಡಿಯುವಿಕೆ, ಬಾಯಲ್ಲಿ ನೊರೆ ಸುರಿಯುವಿಕೆ, ಶ್ವಾಸವನ್ನು ಬಿಡುವಿಕೆ, ಮನುಷ್ಯರನ್ನು ಪರುಷವಾಗಿಯೂ, ಅರುಣವಾಗಿಯೂ ಕಾಣುವಿಕೆ ಮೊದಲಾದ ಲಕ್ಷಣಗಳು ಕಾಣುವುವು.

ಪಿತ್ತಾಪಸ್ಮಾರದಲ್ಲಿ:—ಬಾಯಲ್ಲಿ ಹಳದಿನೊರೆ ಬರುವಿಕೆ; ಶರೀರವು, ಮುಖವು, ಕಣ್ಣುಗಳು, ಹಸುರಾಗಿರುವಿಕೆ, ಮನುಷ್ಯರ ರೂಪಗಳು ಹಳದಿಯಾಗಿ ಕಾಣುವಿಕೆ; ದಾಹ, ಉಷ್ಣವು ಮುಂತಾದ ಲಕ್ಷಣಗಳು ಕಾಣುವುವು.

ಕಫಾಪಸ್ಮಾರದಲ್ಲಿ:—ಬಾಯಲ್ಲಿ ಬಿಳಿಯನೊರೆ ಬರುವಿಕೆ, ಮುಖವು, ಕಣ್ಣುಗಳು ಬಿಳುಪಾಗಿರುವಿಕೆ, ಶರೀರವು ತಣ್ಣಗಿರುವಿಕೆ, ಭಾರ, ಯಾರನ್ನು ನೋಡಿದರೂ ಬೆಳ್ಳಗೆ ಕಾಣಿಸುವಿಕೆ, ಬಹಳ ಹೊತ್ತಿಗೆ ಜ್ಞಾನವುಂಟಾಗುವಿಕೆ ಮೊದಲಾದ ಲಕ್ಷಣಗಳು ಕಾಣುವುವು.

ಸನ್ನಿಪಾತಾಪಸ್ಮಾರದಲ್ಲಿ ತ್ರಿದೋಷ ಲಕ್ಷಣಂಗಳು ಕಾಣುವುವು.

## ಅಪಸ್ಮಾರರೋಗದಲ್ಲಿ ಅಸಾಧ್ಯ ಲಕ್ಷಣ.

೧. ಬಹಳವಾಗಿ ಕಂಪ, ಕ್ಷೀಣಬಲತ್ವ, ಹುಬ್ಬುಗಳು ಅಲ್ಲಾಡಿ ಕಣ್ಣು ತಿರುಗುತ್ತಿರುವದು ಹೀಗಿದ್ದರೆ ಅಸಾಧ್ಯವು.

೨. ತ್ರಿದೋಷದಿಂದ ಹುಟ್ಟಿದ್ದರೆ ಅಸಾಧ್ಯವು.

೩. ಅನ್ನದ್ವೇಷ ಬಲನಾಶಗಳಿದ್ದರೆ ಅಸಾಧ್ಯವು.

## ಅಪಸ್ಮಾರರೋಗಕ್ಕೆ ಚಿಕಿತ್ಸೆಗಳು.

೧ ಸೈಂಧರಲವಣ ೧ ತೊಲೆ, ಶುದ್ಧಿಮಾಡಿದ ಹಿಂಗು ೧ ತೊಲೆ ಇವು ಎರಡು ಖಲ್ವದಲ್ಲ ಹಾಕಿ ಚನ್ನಾಗಿ ಅರದುಕೊಳ್ಳುವದು. ಹಸುವಿನತುಪ್ಪ ೧೬ ತೊಲೆ, ಹಸುವಿನಮೂತ್ರ ೧೨ ತೊಲೆ ಇವುಗಳನ್ನ ಒಂದು ಬಾಂಡ್ಲಿಯಲ್ಲಿ ಹಾಕಿ ವಲೆಯಮೇಲೆ ಇಟ್ಟು ಕಾಯಿಸಿ ಮೂತ್ರ ಇಂಗುವವರಿವಿಗು ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವದು ಹೊತ್ತಿಗೆ ೧ ತೊಲೆ ತಿಗೆದುಕೊಳ್ಳಬೇಕು. ಹೀಗೆ ಬೆಳಿಗ್ಯೆಹೊತ್ತು ೧೪ ದಿನ ಕೊಡಬೇಕು ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ ಇದರಿಂದ ಅಪಸ್ಮಾರ ಗುಣವಾಗುವದು.

೨. ಒಂದೆಲಗದಸೊಪ್ಪಿನ ರಸದಲ್ಲ ಚಂಗಲಕೋಷ್ಟ ಚೂರ್ಣವನ್ನು ಮಾಡಿ ಕಲಸಿ ಕುಡಿಯುವದು. ಹೀಗೆ ಬೆಳಿಗ್ಯೆಹೊತ್ತು ೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಅಪಸ್ಮಾರ ಗುಣವಾಗುವದು.

೩ ಬಜೆ ಚೂರ್ಣವನ್ನು ಜೇನುತುಪ್ಪದಲ್ಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಯೆಹೊತ್ತು ೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಅಪಸ್ಮಾರ ಗುಣವಾಗುವದು.

೪. ಲಕ್ಕಲಿಸೊಪ್ಪು ೧ ತೊಲೆ, ಗಂಡುಮೇಕೇ ಮೂತ್ರ ೧೬ ತೊಲೆ, ಚಂಗಲಕೋಷ್ಟ ಕಾಲುತೊಲೆ, ಮಂಜಿಷ್ಟೆ ಕಾಲುತೊಲೆ, ಹೊಟ್ಟುಸುಲಿದ ಬೆಳ್ಳುಳ್ಳಿ ಕಾಲುತೊಲೆ, ಬಿಳೇಜೀರಿಗೆ ಕಾಲುತೊಲೆ, ಶೊಂಟಿ ಕಾಲುತೊಲೆ, ಮೆಣಸು ಕಾಲುತೊಲೆ, ಹಿಪ್ಪಲಿ ಕಾಲುತೊಲೆ, ಹಿಂಗು ೧ ಅಣೆ ತೂಕ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಎಲ್ಲವನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ವಲೆಯಮೇಲಿಟ್ಟು ಕಾಯಿಸಿ ಬಟ್ಟೆಯಲ್ಲ ಶೋಧಿಸಿಕೊಳ್ಳುವದು. ಎರಡು ಮೂಗಿಗು ೩-೪ ತೊಟ್ಟು ಹಾಕುತ್ತಾಬರುವದು ಇದರಿಂದ ಅಪಸ್ಮಾರ, ಉನ್ಮಾದ ಗುಣವಾಗುವದು

೫. ಬಜೆ, ಅಮೃತಬಳ್ಳಿ, ಶೊಂಟಿ, ಹಿಪ್ಪಲಿ, ಮೆಣಸು, ಇಪ್ಪೆಬಂಕೆ, ರುದ್ರಾಕ್ಷಿ, ಸೈಂಧರಲವಣ, ಜಾಕಾಯಿ, ಹೊಟ್ಟುಸುಲಿದ ಬೆಳ್ಳುಳ್ಳಿ ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ರಾಮುಗುಳ್ಳಕಾಯಿ ರಸದಲ್ಲಿ ಅರದು ಬಟ್ಟೆಯಲ್ಲ ಶೋಧಿಸಿಕೊಂಡು ಎರಡು ಮೂಗಿಗೆ ೩-೪ ತೊಟ್ಟು ಹಾಕಿದರೆ ಅಪಸ್ಮಾರ ಗುಣವಾಗುವದು.

೬. ಗಿರಿಕರ್ನಿಕೆಹುವ್ವ, ಬಜೆ, ಚೆಂಗಲಕೋಷ್ಟ ಇವು ಸಮಭಾಗ ಚೂರ್ಣ ಮಾಡಿ ಹಸುವಿನ ತುಪ್ಪ, ವಂದೆಲಗದ ರಸ ಇವುಗಳನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ವಲೆಯಮೇಲಿಟ್ಟು ಘೃತಪಕ್ವವಾಗಿ ಕಾಯಿಸಿ ಹೊತ್ತಿಗೆ ॥ ತೊಲೆ ಅಥವಾ ೧ ತೊಲೆ ಕೊಡುವದು. ಹೀಗೆ ಬೆಳಿಗ್ಯೆಹೊತ್ತು ೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಅಪಸ್ಮಾರ, ಉನ್ಮಾದ ಗುಣವಾಗುವದು.

# ಮುವ್ವತ್ತನೆಯ ಅಧ್ಯಾಯ.

## ವಾತರೋಗ—ಔಷಧಗಳು.

### ವಾತರೋಗ ಲಕ್ಷಣ.

ವಾತರೋಗವು ಆಕ್ಷೇಪಕ, ಹನುಸ್ತಂಭಾದಿ ಭೇದಗಳಿಂದ ೮೦ (ಎಂಭತ್ತು) ವಿಧಗಳಾಗಿರುವುವು. ಅವುಗಳನ್ನು ಈ ವಿಧವಾಗಿ ವಿವರಿಸಲ್ಪಡುತ್ತದೆ.

ವಾತವು ಕಫ ಪಿತ್ತಗಳಿಂದ ಕೂಡಿಯಾಗಲಿ, ಕೇವಲ ವಾತದಿಂದಲೇ ಆಗಲಿ, ಪ್ರಕುಪಿತವಾಗಿ ದೇಹದಲ್ಲಿರುವ ನಾಡಿಗಳನ್ನು ವ್ಯಾಪಿಸಿ ಶರೀರವನ್ನು ಆಗಾಗ್ಗೆ ನಡುಗಿಸತೊಡಗಿದರೆ ಆ ರೋಗವು ಆಕ್ಷೇಪಕವೆನ್ನಲ್ಪಡುವುದು.

ನಾಲಿಗೆಯನ್ನು ಅಧಿಕವಾಗಿ ಕೆರೆಯುವಿಕೆ, ದ್ರವವಿಲ್ಲದ ಕಠಿನಪದಾರ್ಥ ಗಳನ್ನು ಊಟಮಾಡುವಿಕೆ ಈ ಕಾರಣಗಳಿಂದ ದವಡೆಗಳ ಕೆಳಭಾಗದಲ್ಲಿ ವಾತವು ಸೇರಿ ದವಡೆಗಳ ಕೀಲುಗಳು ಸಡಲಿ ಬಾಯಿ ತೆರೆದರೆ ಮುಚ್ಚಿಕೊಳ್ಳಲಾರದೆಯು, ಮುಚ್ಚಿಕೊಂಡರೆ ತೆರೆಯುವುದಕ್ಕಾಗದೆಯು ಇರುವುದು. ಇದರಲ್ಲಿ ಮಾತಾಡು ವಿಕೆ, ಅಗಿಯುವಿಕೆ ಇವುಗಳು ಅಧಿಕ ಕಷ್ಟವಾಗಿರುವುದು ಈ ರೋಗವು ಹನು ಸ್ತಂಭವೆನ್ನಲ್ಪಡುವುದು.

ವಾತವು ಪ್ರಕೋಪವಾಗಿ ತೊಡೆಗಳನ್ನಾಶ್ರಯಿಸಿ, ತೊಡೆಗಳನ್ನು ಸ್ತಂಭಿಸಿ ಕದಲದಂತೆ ಮಾಡಿದರೆ ಆ ರೋಗವು ಊರುಸ್ತಂಭವೆನ್ನಲ್ಪಡುವುದು.

ವಾತವು ಪ್ರಕುಪಿತವಾಗಿ ರಕ್ತದಲ್ಲಿ ಸೇರಿ ಶಿರಸ್ಸಿನಲ್ಲಿರುವ ಸಿರೆಗಳನ್ನಾಶ್ರ ಯಿಸಿ, ಸಿರೆಗಳನ್ನು ವೇದನಾಯುಕ್ತವಾಗಿಯೂ, ಜ್ಞಾನಶೂನ್ಯವಾಗಿಯೂ ಮಾಡಿ ದರೆ ಆ ರೋಗವು ಶಿರೋಗ್ರಹವೆನ್ನಲ್ಪಡುವುದು.

ವಾತವು ಪ್ರಕುಪಿತವಾಗಿ ಶರೀರಕ್ಕೆ ಮೇಲ್ಪಕ್ಕದಲ್ಲಿರುವ ಬೆನ್ನು, ಕತ್ತಿನ ಮೇಲ್ಭಾಗ ಇವುಗಳನ್ನು ಆಶ್ರಯಿಸಿರುವ ಸ್ನಾಯು ಸಿರಾ ಕಂಡರಂಗಳನ್ನಾಶ್ರ

ಯಿಸಿ ಶೋಷಿಸಿ ಮೇಲಕ್ಕೆ ಶರೀರವನ್ನು ಬಗ್ಗಿಸಿದರೆ ಆ ವಾತವು ಬಾಹ್ಯಾಯಾಮ ವೆನ್ನಲ್ಪಡುವುದು.

ವಾತವು ಪ್ರಕುಪಿತವಾಗಿ ಬೆರಳುಗಳು ಮೊಳಕಾಲು ಜಠರವು, ಹೃದಯವು, ಎದೆ, ಕಂಠ ಇವುಗಳನ್ನಾಶ್ರಯಿಸಿ ವೇಗದಿಂದ ಕೂಡಿ ಶರೀರದಲ್ಲಿರುವ ಸ್ನಾಯು, ಸಿರಾ, ಕಂಡರಂಗಳಂ ಕೆಡಿಸಿ ಶರೀರ ಮಧ್ಯಭಾಗವನ್ನು ಧನುಸ್ಸಿನಂತೆ ಒಳ ಪಕ್ಕಕ್ಕೆ ಬಗ್ಗಿಸುವುದು. ಇದರಲ್ಲಿ ನೇತ್ರಗಳು ಸ್ತಂಭಿಸಿರುವುದು. ಪಾರ್ಶ್ವ ಗಳಲ್ಲಿ ನೋವು, ನೊರೆ ವಾಂತಿಯಾಗುವಿಕೆ ಈ ಲಕ್ಷಣಗಳಿರುವ ರೋಗವು ಅಂತ ರಾಯಾಮವೆನ್ನಲ್ಪಡುವುದು.

ಕೋಷ್ಠಗತವಾಗಿರುವ ವಾತವು ಪ್ರಕುಪಿತವಾಗಿ ಪಾರ್ಶ್ವಗಳಲ್ಲಿ ಶೂಲೆಯ ನ್ನುಂಟುಮಾಡುವುದು. ಈ ರೋಗವು ಪಾರ್ಶ್ವಶೂಲೆಯನ್ನಲ್ಪಡುವುದು.

ವಾತವು ಪ್ರಕುಪಿತವಾಗಿ ಕಟಿ (ನಡು) ಸ್ಥಾನವನ್ನಾಶ್ರಯಿಸಿ ಸ್ತಂಭಿಸಿದರೆ ಆ ರೋಗವು ಕಟಿಗ್ರಹವೆನ್ನಲ್ಪಡುವುದು.

ಪ್ರಕುಪಿತವಾದ ವಾತವು ಕಫದಿಂದ ಕೂಡಿ ಸಿರೆಗಳಲ್ಲ ವ್ಯಾಪಿಸಿ ದೇಹ ವನ್ನು ದಂಡೆದಂತೆ ಸ್ತಂಭಿಸಿದರೆ ಅದು ದಂಡಾಪತಾನಕವೆನ್ನಲ್ಪಡುವುದು.

ವಾತವು ಪ್ರಕುಪಿತವಾಗಿ ಮೊಣಕಾಲು, ತೊಡೆಗಳು ಮೊದಲಾದವುಗಳಲ್ಲಿ ಶೂಲೆಯನ್ನುಂಟುಮಾಡುವುದು ಈ ರೋಗವು ಖಿಲ್ಲೀವಾತವೆನ್ನಲ್ಪಡುವುದು.

ವಾತವು ಪ್ರಕುಪಿತವಾಗಿ ವಾಕ್ಕನ್ನು ವಹಿಸಿರುವ ಸಿರೆಗಳನ್ನಾಶ್ರಯಿಸಿ ನಾಲಿಗೆಯನ್ನು ಕದಲದಂತೆ ಮಾಡುವುದು. ಇದರಲ್ಲಿ ಅನ್ನ ಊಟಮಾಡುವಿಕೆ, ನೀರು ಕುಡಿಯುವಿಕೆ ಇವು ಕಷ್ಟವಾಗಿರುವುವು ಈ ರೋಗವು ಜಿಹ್ವಾಸ್ತಂಭ ವೆನ್ನಲ್ಪಡುವುದು.

ಗಟ್ಟಿಯಾಗಿ ಮಾತಾಡುವಿಕೆ, ಕಠಿನಪದಾರ್ಥಗಳನ್ನು ಅಗಿಯುವಿಕೆ, ಅಧಿಕ ವಾಗಿ ನಗುವಿಕೆ, ಭಾರವನ್ನು ಹೊರುವಿಕೆ, ನಿಮ್ನೋನ್ನತ ಸ್ಥಲಗಳಲ್ಲಿ ನಿದ್ರಿಸು ವಿಕೆ, ಈ ಕಾರಣಗಳಿಂದ ಶಿರಸ್ಸು, ಮೂಗು, ತುಟಿಗಳು, ಗಡ್ಡವು, ಹಣೆ, ನೇತ್ರಮ ಧ್ಯವು ಇವುಗಳಲ್ಲಿ ವಾತವು ಪ್ರಕುಪಿತವಾಗಿ ಮುಖದಲ್ಲಿ ನೋವುಂಟಾಗಿರುವುದು. ಇದರಿಂದ ಬಾಯಿ ಸ್ವಲ್ಪ ವಕ್ರವಾಗಿಯು, ಕಂಠವು ಡೊಂಕಾಗಿಯು ಇರುವಿಕೆ, ತಲೆ ನಡುಗುವಿಕೆ, ಬಾಯಲ್ಲಿ ಮಾತು ಬರದಿರುವಿಕೆ, ಕಣ್ಣುಗಳು, ಕಣ್ಣುಪಾಪೆ ಗಳು ಮೊದಲಾದುವು ಕೂಡ ಡೊಂಕಾಗಿರುವುವು. ಈ ರೋಗವು ಅರ್ದಿತವಾತ ವೆನ್ನಲ್ಪಡುವುದು.

ವಾತವು ಪ್ರಕುಪಿತವಾಗಿ ಅರ್ಧಶರೀರದಲ್ಲಿ ವ್ಯಾಪಿಸಿ ಆ ಭಾಗದಲ್ಲಿ ಸಿರಾ ಸ್ನಾಯುಗಳನ್ನು ಶೋಷಿಸಿ ಸಂಧಿಗಳನ್ನು ಶಿಥಿಲಮಾಡಿ ಸ್ಪರ್ಶಜ್ಞಾನವನ್ನು ಕ್ಷಯಗೊಳಿಸಿ ಚಲನಾದಿ ವ್ಯಾಪಾರಗಳನ್ನು ಸಾಮರ್ಥ್ಯವಿಲ್ಲದಂತೆ ಮಾಡುವುದು.

ಇದು ಎಡ, ಬಲ ಪಕ್ಕಗಳಿಲ್ಲಿಲ್ಲಾದರೂ ಎಲ್ಲಿಯಾದರೂ ಸಂಭವಿಸಬಹುದು. ಇದು ಪಕ್ಷಾಘಾತವೆನ್ನಲ್ಪಡುವುದು.

ವಾತರಕ್ತ ವ್ಯಾಧಿಯಿಂದ ಮೊಣಕಾಲುಗಳಲ್ಲಿ ನರಿಯ ತಲೆಯಂತೆ ಊತವು ಹುಟ್ಟಿ ಅಧಿಕ ನೋವನ್ನುಂಟುಮಾಡಿದರೆ ಅದು ಕ್ರೋಷ್ಟುಕಶೀರ್ಷವೆನ್ನಲ್ಪಡುವುದು.

ವಾತವು ಪ್ರಕುಪಿತವಾಗಿ ಕಫದೊಂದಿಗೆ ಸೇರಿ ಶಿರಸ್ಸನ್ನೂ ಹಿಂದುಗಡೆ ಇರುವ ದೊಡ್ಡನರವನ್ನು ಸ್ತಂಭಿಸುವಂತೆ ಮಾಡಿದರೆ ಅದು ಮನ್ಯಾಸ್ತಂಭವೆನ್ನಲ್ಪಡುವುದು.

ಕಟಿಪ್ರದೇಶವನ್ನಾಶ್ರಯಿಸಿರುವ ವಾತವು ಪ್ರಕೋಪಿಸಿ ತೊಡೆಗಳಲ್ಲಿರುವ ಕಂಡರಗಳನ್ನು ವ್ಯಾಪಿಸಿ ಕಾಲುಗಳೆರಡೂ ಕುಂಟುವಂತೆ ಮಾಡಿದರೆ ಅದು ಪಂಗುವಾತವೆನ್ನಲ್ಪಡುವುದು.

ನಡೆಯುವುದಕ್ಕೆ ಪ್ರಾರಂಭಿಸಿದಾಗ ಅದರುವಿಕೆ, ಕುಂಟುತ್ತಾ ನಡೆಯುವಿಕೆ, ಸಂಧಿಗಳೆಲ್ಲವು ಶಿಥಿಲವಾಗುವಿಕೆ ಈ ಲಕ್ಷಣಗಳಿದ್ದರೆ ಅದು ಕಲಾಯಖಂಜವೆನ್ನಲ್ಪಡುವುದು.

ಮಲಮೂತ್ರಾಶಯಗಳಲ್ಲಿ ನೋವು ಹುಟ್ಟಿ ಗುದೋಪಸ್ಥಗಳನ್ನು ಭೇದಿಸಿದಹಾಗೆ ಅಧೋಭಾಗದಲ್ಲಿ ವ್ಯಾಪಿಸಿದರೆ ಅದು ತೂನೀವಾತವೆನ್ನಲ್ಪಡುವುದು.

ಗುದೋಪಸ್ಥಂಗಳಲ್ಲಿ ನೋವುಹುಟ್ಟಿ ವಾತವೇಗದಿಂದ ಊರ್ಧ್ವವಾಗಿ ಸಂಚರಿಸಿ ಪಕ್ವಾಶಯದಲ್ಲಿ ಸೇರಿದ್ದಾದರೆ ಅದು ಪ್ರತಿತೂನೀವಾತವೆನ್ನಲ್ಪಡುವುದು.

ಕಟಿಪ್ರದೇಶವನ್ನಾಶ್ರಯಿಸಿರುವ ವಾತವು ಪ್ರಕುಪಿತವಾಗಿ ಒಂದು ತೊಡೆಯ ಕಂಡರಗಳನ್ನು ವ್ಯಾಪಿಸಿ ಒಂದು ಕಾಲನ್ನು ಕುಂಟುವಹಾಗೆ ಮಾಡಿದರೆ ಅದು ಖಂಜವಾತವೆನ್ನಲ್ಪಡುವುದು.

ಬಹಳಕಾಲ ಕುಳಿತಿದ್ದು ಎದ್ದು ಕಾಲುಗಳನ್ನು ಕೆಳಗೆ ಇಡುವಾಗ ಕಾಲುಗಳಲ್ಲಿ ಸೂಜಿಗಳು ಚುಚ್ಚಿದಂತೆ ನೋವುಂಟಾಗಿ ಸ್ಪರ್ಶಜ್ಞಾನವು ಇಲ್ಲದಿದ್ದರೆ ಅದು ಪಾದಹರ್ಷವೆನ್ನಲ್ಪಡುವುದು ಅಂಡುಗಳಮೇಲೆ ನಡುವು ಪೃಷ್ಠಭಾಗವು, ತೊಡೆಗಳು, ಮೊಣಕಾಲುಗಳು (ಮಿಾನಖಂಡಗಳು) ಪಾದಗಳು ಇವುಗಳಲ್ಲಿ ವಾತವು ಪ್ರಕೋಪಿಸಿ ಕ್ರಮವಾಗಿ ಸ್ತಂಭವನ್ನು, ನೋವನ್ನು, ಛಳುಕುಗಳನ್ನು ಉಂಟುಮಾಡಿ ಕಂಪವನ್ನು ಹೊಂದಿಸಿದರೆ ಅದು ಗೃಧ್ರಸೀವಾತವೆನ್ನಲ್ಪಡುವುದು.

ಹೆಗಲುಗಳ ಮೇಲ್ಭಾಗ ಮೊದಲುಗೊಂಡು ಮೊಣಕೈವರೆವಿಗೆ ಮೇಲ್ಪಕ್ಕದಲ್ಲಿ ವ್ಯಾಪಿಸಿ, ಬೆರಳುಗಳಿಗೆ ಸಂಕೋಚವಿಕಾಸಗಳನ್ನುಂಟುಮಾಡುವ ಕಂಡರ

ಗಳಲ್ಲಿ ವಾತವು ದುಷ್ಟವಾಗಿ ಹಸ್ತಗಳಿಗೆ ಮುದುರುವಿಕೆ, ಚಾಚುವಿಕೆ ಮೊದಲಾದ ವ್ಯಾಪಾರಗಳನ್ನು ಇಲ್ಲದಂತೆ ಮಾಡಿದರೆ ಅದು ವಿಶ್ವಾಚೀವಾತವೆನ್ನಲ್ಪಡುವುದು.

ಹೆಗಲು, ಶಿರಸ್ಸುಗಳಲ್ಲಿ ವಾತವು ಪ್ರಕುಪಿತವಾಗಿ ಬಾಹುಮೂಲಗಳಲ್ಲಿರುವ ಸಿರೆಗಳನ್ನು ಮುದುರುವಂತೆ ಮಾಡಿದರೆ ಅದು ಅಪಬಾಹುಕವಾತವೆನ್ನಲ್ಪಡುವುದು.

ವಾತವು ಪ್ರಕುಪಿತವಾಗಿ ಹೃದಯದಲ್ಲಿ ಸೇರಿ ದೃಷ್ಟಿಯನ್ನು ಸ್ತಂಭಿಸುವಂತೆಮಾಡಿ ಜ್ಞಾನವು ನಶಿಸಿ ಕಂಠದಲ್ಲಿ ಧ್ವನಿಯನ್ನುಂಟುಮಾಡುವುದು. ಅಂತಹ ವಾತವು ಹೃದಯಸ್ಥಾನವನ್ನು ಬಿಟ್ಟಾಗ ಸ್ವಸ್ಥತೆಹೊಂದುವುದು ಮತ್ತೆ ಆ ವಾತವು ಹೃದಯವನ್ನಾಶ್ರಯಿಸಿದಾಗ ಮೂರ್ಛೆಯನ್ನುಂಟುಮಾಡುವುದು. ಇದು ಅಪತಾನಕವಾತವೆನ್ನಲ್ಪಡುವುದು.

ಪ್ರಕುಪಿತವಾದ ವಾತವು ವ್ರಣವನ್ನಾಶ್ರಯಿಸಿ ನೋವನ್ನುಂಟುಮಾಡಿದರೆ ಅದು ವ್ರಣಾಯಾಮವಾತವೆನ್ನಲ್ಪಡುವುದು.

ವಿಷಮಸ್ಥಳಗಳಲ್ಲಿ ನಡೆಯುವಿಕೆಯಿಂದಲಾದರು, ಶ್ರಮದಿಂದಲಾದರು ವಾತವು ಪ್ರಕೋಪಿಸಿ ಕಾಲಹಿಮ್ಮಡಿಗಳನ್ನಾಶ್ರಯಿಸಿ ನೋವನ್ನುಂಟುಮಾಡುವುದು ಇದು ವಾತಕಂಟಕವೆನ್ನಲ್ಪಡುವುದು.

ವಾತವು ಪ್ರಕೋಪವನ್ನು ಹೊಂದಿ ಹೃದಯಸ್ಥಾನದಲ್ಲಿ ನಿಂತು ಶಿರಸ್ಸಿನಲ್ಲಿಯು, ಕಣ್ಣುಗಳ ಪಕ್ಕಗಳಲ್ಲಿಯು ನೋವನ್ನುಂಟುಮಾಡಿ, ಶರೀರದಲ್ಲಿರುವ ಸಕಲಾವಯವಗಳನ್ನು ಧನುಸ್ಸಿನಂತೆ ಮಾಡುವುದು. ಅದರಲ್ಲಿ ಕಂಪವು ಮೂರ್ಛೆಗಳುಂಟಾಗುವವು. ಅಂತವನು ನಿಶ್ಚಲಂಗಳಾದ ನೇತ್ರಗಳುಳ್ಳವನಾಗಿ ನಿಟ್ಟುಸಿರನ್ನು ಬಿಡುವನು. ಇದು ಅಪತಂತ್ರಕವಾತವೆನ್ನಲ್ಪಡುವುದು.

ವಾತವು ಶರೀರದಲ್ಲೆಲ್ಲಾ ನೋವನ್ನುಂಟುಮಾಡಿದರೆ ಅದು ಅಂಗಭೇದವಾತವೆನ್ನಲ್ಪಡುವುದು.

ವಾತವು ಪ್ರಕುಪಿತವಾಗಿ ಶರೀರದಲ್ಲಿರುವ ಧಾತುಗಳನ್ನು ಶೋಷಿಸಿದರೆ ಅದು ಅಂಗಶೋಷವಾತವೆನ್ನಲ್ಪಡುವುದು.

ಪ್ರಕುಪಿತವಾದ ವಾತವು ಕಫದಿಂದಯುಕ್ತವಾಗಿ ಶಬ್ದವಾಹಿನಿಗಳಾದ ದಮನಿಗಳನ್ನು ಅಡ್ಡಗಿಸಿದರೆ ಮನುಜರು, ಮೂಕರು, ಬಿಕ್ಕರು, ಗದ್ಗದಕಂಠದಂತೆ ಮಾತಾಡುವವರೂ ಆಗುತ್ತಾರೆ. ಅವು ಕ್ರಮವಾಗಿ ಮೂಕವಾತವು, ಮಿಮ್ಮಿಣವಾತವು, ಗದ್ಗದವಾತವು ಎನ್ನಲ್ಪಡುವುವು.

ನಾಭಿಗೆ ಕೆಳಗಡೆ ಅಕ್ಕಸಾಲಿಯ ಕಬ್ಬಿಣದ ಅಡಿಗಲ್ಲಿನಂತೆ ಕಠಿಣವೂ, ಉನ್ನತವೂ, ವಿಸ್ತೀರ್ಣವೂ, ವರ್ತುಲವೂ ಆದ ಗ್ರಂಥಿಯು ಹುಟ್ಟಿ ಚಲಿಸುತ್ತ

ಲಾಗಲೀ, ನಿಶ್ಚಲವಾಗಿಯಾಗಲೀ ಇದ್ದರೆ ಅದು ವಾತಪ್ರಕೋಪದಿಂದುತ್ಪನ್ನವಾದ ಅಷ್ಠೀಲವೆನ್ನಲ್ಪಡುವುದು.

ಮೇಲೆ ಹೇಳಲ್ಪಟ್ಟ ಗ್ರಂಥಿಯೇ ಜಠರದಲ್ಲಿ ಅಡ್ಡವಾಗಿ ವ್ಯಾಪಿಸಿ ವಾತ ಮೂತ್ರಪುರೀಷಗಳಿಗೆ ಅಡ್ಡವಾಗಿದ್ದರೆ ಅದು ಪ್ರತ್ಯಷ್ಠೀಲವೆನ್ನಲ್ಪಡುವುದು.

ವಾತಪ್ರಕೋಪದಿಂದ ಮನುಷ್ಯನು ಕುಳ್ಳನಾದರೆ ಅದು ವಾಮನವಾತವೆನ್ನಲ್ಪಡುವುದು.

ವಾತಪ್ರಕೋಪದಿಂದ ಶರೀರದ ಹಿಂಭಾಗದಲ್ಲಿ ಗೂನುಂಟಾದರೆ ಅದು ಕುಬ್ಜವಾತವೆನ್ನಲ್ಪಡುವುದು.

ಹೀಗೆಯೇ ವಾತಪ್ರಕೋಪದಿಂದ ಶರೀರದಲ್ಲಿ ಪೀಡೆಯುಂಟಾದರೆ ಅಂಗಪೀಡೆಯೆಂತಲೂ, ಶೂಲೆಯುಂಟಾದರೆ ಅಂಗಶೂಲವೆಂತಲೂ, ಶರೀರದಲ್ಲಿ ಅವಯವಸಂಕೋಚವನ್ನು ಹೊಂದಿದರೆ ಸಂಕೋಚವಾತವೆಂತಲೂ, ಅವಯವವು ಸ್ತಂಭಿಸಿ ಚೇಷ್ಟೆಯನ್ನಳಿದರೆ ಸ್ತಂಭವಾತವೆಂತಲೂ, ಶರೀರದಲ್ಲಿ ಸ್ನೇಹವು ನಶಿಸಿ ರೂಕ್ಷವಾಗಿದ್ದರೆ ರೂಕ್ಷವಾತವೆಂತಲೂ, ಅವಯವಗಳಲ್ಲಿ ಛಳಕುಗಳುಂಟಾಗಿದ್ದರೆ ಅಂಗಭಂಗವಾತವೆಂತಲೂ, ಅವಯವಂಗಳು ಚೇತನಾರಹಿತಂಗಳಾದರೆ ಅಂಗವಿಭ್ರಂಶವಾತವೆಂತಲೂ, ವಾತವು ಪ್ರಕೋಪವನ್ನು ಹೊಂದಿ ಪಕ್ವಾಶಯದಲ್ಲಿ ಮಲವನ್ನು ಬಂಧಿಸಿದರೆ ಅದು ವಿಡ್ಗ್ರಹವಾತವೆಂತಲೂ, ವಾತಪ್ರಕೋಪದಿಂದ ಮಲವು ಗಟ್ಟಿಬಿದ್ದು ಮುಕ್ಕಿದರೂ ಹೊರಬೀಳದಿದ್ದರೆ ಅದು ಬದ್ಧವಿಟ್ಕವಾತವೆಂತಲೂ, ವಾತಪ್ರಕೋಪದಿಂದ ಯಾವ ರೋಗದಲ್ಲಾದರೂ ಆಕಳಿಕೆಗಳು ವಿಶೇಷವಾಗಿ ಬರುತ್ತಿದ್ದರೆ ಅದು ಅತಿಜೃಂಭವಾತವೆಂತಲೂ, ಆಮಾಶಯದಲ್ಲಿ ವಾತವು ಪ್ರಕೋಪಿಸಿ ವಿಶೇಷವಾಗಿ ತೇಗುಗಳು ಉಂಟಾದರೆ ಅದು ಅತ್ಯುದ್ಗಾರವಾತವೆಂತಲೂ, ವಾತಪ್ರಕೋಪದಿಂದ ಕರುಳುಗಳು ಅಧಿಕವಾಗಿ ಧ್ವನಿಮಾಡುತ್ತಿದ್ದರೆ ಅದು ಅಂತ್ರಕೂಜನವಾತವೆಂತಲೂ, ವಾತಪ್ರಕೋಪದಿಂದ ಅಪಾನವಾತವು ಅಧಿಕವಾಗಿ ಹೋಗುತ್ತಿದ್ದರೆ ಅದು ವಾತಪ್ರವೃತ್ತಿಯೆಂತಲೂ, ಅವಯವಗಳನ್ನು ಅದರುವಂತೆ ಮಾಡಿದರೆ ಅದು ಸ್ಫುರಣವಾತವೆಂತಲೂ, ವಾತವು ಸಿರೆಗಳನ್ನು ಉಬ್ಬುವಂತೆ ಮಾಡಿದರೆ ಅದು ಸಿರಾಪೂರಣವಾತವೆಂತಲೂ, ಶರೀರಕ್ಕೆ ಕಂಪನವನ್ನುಂಟುಮಾಡಿದರೆ ಅದು ಕಂಪವಾತವೆಂತಲೂ, ವಾತಪ್ರಕೋಪದಿಂದ ಶರೀರವು ಸಣ್ಣನಾದರೆ (ಸವೆದರೆ) ಅದು ಕಾರ್ಶ್ಯವಾತವೆಂತಲೂ, ಶರೀರವು ಕಪ್ಪುವರ್ಣವಾದರೆ ಶ್ಯಾಮವಾತವೆಂತಲೂ, ವಾತಪ್ರಕೋಪದಿಂದ ಸನ್ನಿಪಾತಗಳಲ್ಲಿ ಜ್ಞಾನಶೂನ್ಯವಾಗಿ ವಿರುದ್ಧವಾಗಿ ಮಾತಾಡುತ್ತಿದ್ದರೆ ಅದು ಪ್ರಲಾಪವಾತವೆಂತಲೂ, ಮೂತ್ರವು ಅಧಿಕವಾಗಿ ಅನೇಕಸಾರಿ ಹೋಗುತ್ತಿದ್ದರೆ ಅದು ಕ್ಷಿಪ್ರಮೂತ್ರ

ವಾತವೆಂತಲೂ, ನಿದ್ರೆಬಾರದಂತೆ ಮಾಡಿದರೆ ಅದು ನಿದ್ರಾನಾಶವಾತವೆಂತಲೂ, ಬೆವರನ್ನು ನಶಿಸಿದರೆ ಅದು ಸ್ವೇದನಾಶವಾತವೆಂತಲೂ, ಶರೀರದ ಬಲವನ್ನು ನಶಿಸಿದರೆ ಅದು ದೌರ್ಬಲ್ಯೋತ್ಪಾದಕವಾತವೆಂತಲೂ, ಶಕ್ತಿಯನ್ನು ನಾಶ ಮಾಡಿದರೆ ಅದು ಬಲಕ್ಷಯವಾತವೆಂತಲೂ, ಶುಕ್ರವನ್ನು ವಿಶೇಷವಾಗಿ ಪ್ರವರ್ತನೆಮಾಡಿಸಿದರೆ ಅದು ಶುಕ್ರಾತಿಪ್ರವರ್ತಕವಾತವೆಂತಲೂ, ಶುಕ್ರ ಧಾತುವು ಕ್ಷೀಣಿಸಿದರೆ ಅದು ಶುಕ್ರಕಾರ್ಶ್ಯವಾತವೆಂತಲೂ, ಶುಕ್ರಧಾತುವು ನಶಿಸಿದರೆ ಅದು ಶುಕ್ರಕ್ಷಯವಾತವೆಂತಲೂ, ಮನಸ್ಸಿಗೆ ಸ್ಥೈರ್ಯವಿಲ್ಲದಿದ್ದರೆ ಅದು ಅನವಸ್ಥಿತಚಿತ್ತವಾತವೆಂತಲೂ, ಶರೀರವು ಕಠಿನವಾದರೆ ಅದು ಕಾಠಿನ್ಯ ವಾತವೆಂತಲೂ, ನಾಲಿಗೆ ರುಚಿಯಿಲ್ಲದಿದ್ದರೆ ಅದು ವಿರಸಾಸ್ಯವಾತವೆಂತಲೂ, ಬಾಯಿ ಕಷಾಯ (ಒಗರು) ರಸದಿಂದ ಕೂಡಿದ್ದಾದರೆ ಅದು ಕಷಾಯ ವಕ್ತ್ರತಾ ವಾತವೆಂತಲೂ, ಪಕ್ವಾಶಯದಲ್ಲಿ ಗುಡುಗುಡುವೆಂಬ ಶಬ್ದವೂ ಅಧಿಕ ತೀವ್ರ ವಾದ ನೋವೂ ಉಂಟಾಗಿ ಗಾಳಿಯಿಂದ ತುಂಬಿದ ತೊಗಲುಚೀಲದಂತೆ ವಾತ ಪೂರಿತವಾಗಿದ್ದರೆ ಆಧ್ಮಾನವಾತವೆಂತಲೂ, ವಾತವು ಕಫದಿಂದ ಕೂಡಿ ಆಮಾ ಶಯದಲ್ಲಿ ಆಟೋಪಾದಿ ಲಕ್ಷಣಂಗಳುಂಟುಮಾಡಿದರೆ ಅದು ಪ್ರತ್ಯಾಧ್ಮಾನ ವಾತವೆಂತಲೂ, ಶರೀರವು ಶೀತಲವಾಗಿದ್ದರೆ ಅದು ಶೀತವಾತವೆಂತಲೂ, ಕೂದಲುಗಳಿಗೆ ರೋಮಾಂಚನವನ್ನುಂಟುಮಾಡಿದರೆ ಅದು ರೋಮಹರ್ಷ ವಾತವೆಂತಲೂ, ಮನಸ್ಸಿಗೆ ಭಯವುಂಟಾದರೆ ಅದು ಭೀರುವಾತವೆಂತಲೂ, ಅವಯವಂಗಳು ಎಳೆಯುತ್ತಿದ್ದರೆ ಅದು ತೋದವಾತವೆಂತಲೂ, ಅವಯವ ಗಳಲ್ಲಿ ತುರಿ ಅಧಿಕವಾಗಿದ್ದರೆ ಅದು ಕಂಡೂವಾತವೆಂತಲೂ, ನಾಲಿಗೆಗೆ ರಸಜ್ಞಾನವು ನಶಿಸಿದ್ದರೆ ಅದು ರಸಾಜ್ಞತವೆಂತಲೂ, ಮಾತು ಕೇಳಿಸದಿದ್ದಪಕ್ಷದಲ್ಲಿ, ಅದು ಶಬ್ದಾಜ್ಞತವೆಂತಲೂ, ಸ್ಪರ್ಶಜ್ಞಾನವು ನಶಿಸಿದರೆ ಅದು ಪ್ರಸುಪ್ತ ವಾತವೆಂತಲೂ, ವಾಸನೆ ತಿಳಿಯಬರದಿದ್ದರೆ ಅದು ಗಂಧಾಜ್ಞತವೆಂತಲೂ, ವಾತಪ್ರಕೋಪದಿಂದ ದೃಷ್ಟಿ ನಶಿಸಿದರೆ ಅದು ದೃಕ್ಕ್ಷಯವೆಂತಲೂ ಹೇಳ ಲ್ಪಡುವುವು.

ಈ ಎಂಭತ್ತುರೋಗಗಳು ಪ್ರಕೋಪವಾದ ವಾತದಿಂದ ಹುಟ್ಟುವ ರೋಗಗಳು.

## ವಾತರೋಗದಲ್ಲಿ ಅಸಾಧ್ಯ ಲಕ್ಷಣ.

೧. ಗರ್ಭಜನ್ಯವಾದ ರಕ್ತನಾಶಪಡಿಸಿದ ಅಭಿಘಾತಜನ್ಯ ವಾಯುವು ಅಸಾಧ್ಯವು.

೨. ಶರೀರ ಕೃಶವಾಗಿ ಕಣ್ಣುಗಳು ಪೊಳಸರಿಯುವದು, ಅತಿಮಾತಾಡು ವದು, ಮೂರುವರುಷಗಳಿಂದ ಕಫ ಕೂಡಿರುವದು ಈ ವಾಯುವು ಅಸಾಧ್ಯವು.

೩. ಮೈಯಲ್ಲಿ ಚಟ್ಟು, ದಾಹ, ಮಲಮೂತ್ರ ಅಪಾನವಾಯುಗಳ ಸ್ತಂಭ, ಮೂರ್ಛೆ, ಅರುಚಿ, ಅಗ್ನಿಮಾಂದ್ಯ, ಬಲಕ್ಷಯ, ಎಳುಚರ್ಮದ

ವರಿಗೂ ಭೇದಿಸಿರುವದು, ಕಿವಡು, ಮೈನಡಗುವದು, ನೆಲಕ್ಕೆಬೀಳುವದು, ಕಫದಿಂದ ಹೊಟ್ಟೆಯುಬ್ಬರ ಮತ್ತು ನೋವು, ಛಳಕುಗಳುಳ್ಳ ವಾಯುವು ಅಸಾಧ್ಯವು.

## ಆಮವಾತರೋಗದಲ್ಲಿ ಅಸಾಧ್ಯ ಲಕ್ಷಣ.

೧. ತ್ರಿದೋಷದಿಂದ ಹುಟ್ಟಿದ, ದೇಹದಲ್ಲಿ ಶೋಭೆಯುಳ್ಳ, ಸನ್ನಿಪಾತಾತ್ಮಕವಾದ ಆಮವಾತವು ಅಸಾಧ್ಯವು.

## ವಾತಪ್ರಕೋಪರೋಗಕ್ಕೆ ಅಸಾಧ್ಯ ಲಕ್ಷಣ.

೧. ಚರ್ಮಸ್ಪೃಗ್ನಾಶ, ಕಂಪನ, ಕೃಶತ್ವ, ಮಮತಾಶೂನ್ಯತ್ವ, ಮೂರ್ಛೆ, ವಾತದಿಂದ ಅನೇಕ ರೋಗೋತ್ಪತ್ತಿ ಇವುಗಳಿದ್ದು ಮೊದಲು ನೋಡಿದ ಪದಾರ್ಥವನ್ನು ಬೇರೆ ವಿಧವಾಗಿ ತಿಳಿಯೋಣವು ಇದ್ದರೆ ಅಸಾಧ್ಯವು.

## ಉರಸ್ತಂಭರೋಗದಲ್ಲಿ ಅಸಾಧ್ಯ ಲಕ್ಷಣ.

೧. ದಾಹಕಂಪನ ಉಳ್ಳದ್ದಾದರೆ ಅಸಾಧ್ಯವು.

## ಉದಾವರ್ತರೋಗದಲ್ಲಿ ಅಸಾಧ್ಯ ಲಕ್ಷಣ.

೧. ಬಾಯಾರಿಕೆ, ಬಲಕ್ಷಯ, ಶೂಲೆಯಿಂದ ಕೂಡಿದ ವಾಂತಿಯಲ್ಲಿ ಮಲವು ಬಿದ್ದರೆ ಅಸಾಧ್ಯವು.

## ಪಿಂಡಿಕಾವಾಯುರೋಗದಲ್ಲಿ ಅಸಾಧ್ಯ ಲಕ್ಷಣ.

೧. ಶರೀರದಲ್ಲಿರುವ ವಾಯುವು ಶಿಥಿಲವಾಗಿ ಮೂಗು ನಾಲಿಗೆಗಳು ಉಸರು ಬಿಡುವಾಗಲೂ ಮಾತನಾಡುವಾಗಲೂ ಅಧಿಕವಾಗಿ ತೋರಿದರೆ ಅಂತಸ್ಥವಾಯುವು ಬರುವಾಗ ಅತಿಸೂಕ್ಷ್ಮವಾಗಿ ಬಂದರೆ ಅಸಾಧ್ಯವು.

## ವಾತರೋಗ ಚಿಕಿತ್ಸೆಗಳು.

೧. ಚಿಟ್ಟೆರಳೆಣ್ಣೆ ೧ ಶೇರು, ಮುಂಡಕಳ್ಳಿಹಾಲು ೧ ಪಾವು, ಯಮ್ಮೆಸಗಣಿ ನೀರಿನಲ್ಲಿಹಾಕಿ ಕಲಸಿ ಬಟ್ಟೆಯಲ್ಲಿ ಶೋಧಿಸಿಕೊಂಡದ್ದು ‖ ಶೇರು ಇವು ಮೂರು ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವದು. ಬಿಳೀಈರುಳ್ಳಿ ರಸ ೧ ಪಾವು, ೩ ನಿಂಬೇಹಣ್ಣಿನ ರಸ, ಇದಕ್ಕೆ ಕಲ್ಕದ್ರವ್ಯ :—ಗಂಟುಭಾರಂಗಿ ೨ ತೊಲೆ, ಕರೇಜೀರಿಗೆ ೧ ತೊಲೆ, ಖುರಾಸಾನಿವೋಮ ೧ ತೊಲೆ, ವಾಯುವಿಳಂಗ ೧ ತೊಲೆ, ಸಣ್ಣದುಂಪರಾಸ್ಮೆ ೧ ತೊಲೆ, ಸೋಪುಬೀಜ ೧ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವದು. ಇವು ಎಲ್ಲವನ್ನು ಸೇರಿಸಿ ಯಣ್ಣೆಯನ್ನು ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವದು. ಪ್ರತಿದಿನ ಪ್ರಾತಃಕಾಲ ೬-೭ ತೊಟ್ಟು ಯಣ್ಣೆಯನ್ನು ಬಿಸಿ ನೀರಿನಲ್ಲಿ ಕೊಡುವದು. ಈರೀತಿ ೭ ದಿನಗಳು ತೆಗೆದುಕೊಳ್ಳುವದು. ಇದಕ್ಕೆ

ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಕಲ ವಾಯುಗಳು ಗುಣ ವಾಗುವದು.

೨. ಚಿಟ್ಟರಳಣ್ಣೆ ೧ ಶೇರು, ಮುಗಳಿಚಕ್ಕೆ ॥ ತೊಲೆ, ಗಂಡುಹುವ್ವರಸಿ ಚಕ್ಕೆ ॥ ತೊಲೆ, ಹೊಂಗೇಚಕ್ಕೆ ॥ ತೊಲೆ, ಬಿಳೇಹಾಲುವಾಣದಚಕ್ಕೆ ॥ ತೊಲೆ, ಬಿಳೇವುಪ್ಪಿಚಕ್ಕೆ ॥ ತೊಲೆ, ಶುದ್ಧಿಮಾಡಿದ ಪರಂಗಿಚಕ್ಕೆ ೨॥ ತೊಲೆ ಇವು ಗಳನ್ನು ಜಜ್ಜಿಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಕೊಳ್ಳುವದು. ಬಿಳೇಈರುಳ್ಳಿ ರಸ ೧ ಪಾವು ಎಲ್ಲವನ್ನು ಶೇರಿಸಿ ಯಣ್ಣೆ ಯನ್ನು ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವದು ಪ್ರತಿದಿನ ಪ್ರಾತಃಕಾಲ ೧ ತೊಲೆ ಯಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವದು. ಈರೀತಿ ೭ ದಿವಸ ಕೊಡ ಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ :— ಮೇಹವಾಯುವು, ಕೀಲುವಾಯು, ಚಳುಕು ನಿವಾರಣೆ ಆಗುವದು.

೩. ಚಿಟ್ಟರಳೆಣ್ಣೆ ೧॥ ಶೇರು, ಚಿತ್ರಮೂಲದ ಬೊಬ್ಬಡೆ ೪ ತೊಲೆ, ಶುದ್ಧಿ ಮಾಡಿದ ಪರಂಗಿಚಕ್ಕೆ ೪ ತೊಲೆ, ಗಂಟುಭಾರಂಗಿ ೨ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಲವಂಗ ೧ ತೊಲೆ, ಶೊಂಟಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಇವುಗಳನ್ನು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವದು. ಎಲ್ಲವನ್ನು ಶೇರಿಸಿ ಪಕ್ವವಾಗಿ ಯಣ್ಣೆಕಾಯಿಸಿ ಶೋಧಿಸಿಕೊಳ್ಳುವದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಯಷ್ಟು ಯಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವದು. ಹೀಗೆ ೭ ದಿವಸ ಕೊಡ ಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ :— ಉಷ್ಣವಾಯು, ಮೇಹವಾಯು ನಿವಾರಣೆ ಆಗುವದು.

೪. ತೆಂಗಿನಕಾಯಿಹಾಲು ೩ ಶೇರು, ಕಲ್ಲುಪ್ಪು ೧ ತೊಲೆ, ಬಿಡಾಲವಣ ೧ ತೊಲೆ, ಗಾಜುಲವಣ ೧ ತೊಲೆ, ಸಮುದ್ರಲವಣ ೧ ತೊಲೆ, ಚವುಳು ವುಪ್ಪು ೧ ತೊಲೆ, ಸೈಂಧರಲವಣ ೧ ತೊಲೆ, ಶೊಂಟಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಹೊಟ್ಟುಸುಲಿದ ಬೆಳ್ಳುಳ್ಳಿ ೧ ತೊಲೆ, ಶುದ್ಧಿಮಾಡಿದ ಹಿಂಗು ೧ ತೊಲೆ, ಶುದ್ಧಿಮಾಡಿದ ಜಾಪಾಳ ೩ ತೊಲೆ, ಇದರಲ್ಲಿ ಕುಟ್ಟುವ ಜಿನಸು ಗಳನ್ನು ಕುಟ್ಟಿ ಚೂರ್ಣಮಾಡಿ ಅರೆಯುವ ಜಿನಸುಗಳನ್ನು ಅರೆದು ಇವು ಎಲ್ಲ ವನ್ನು ಶೇರಿಸಿ ಪಕ್ವವಾಗಿ ಯಣ್ಣೆಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವದು. ಪ್ರತಿ ಪ್ರಾತಃಕಾಲ ಟೀಯಲ್ಲಿ ೫-೬ ತೊಟ್ಟುಗಳು ಕೊಡಬೇಕು. ಹೀಗೆ ೫-೭ ದಿವಸ ಕೊಡುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದ ರಿಂದ ಗುಣ :—ಸಮಸ್ತ ಮೇಹವಾಯುವು ನಿವಾರಣೆ ಆಗುವದು.

೫. ಚಿಟ್ಟರಳಣ್ಣೆ ೧ ಶೇರು, ಬುಡ್ಡಹಾಗಲಸೊಪ್ಪಿನ ರಸ ೧ ಶೇರು, ಹೊಟ್ಟು ತೆಗೆದ ಬೆಳ್ಳುಳ್ಳಿ ಅರದದ್ದು ೧ ಪಾವು, ಮೆಣಸು ೩ ತೊಲೆ ಚೂರ್ಣಮಾಡು

ವದು, ಇವುಗಳೆಲ್ಲವನ್ನು ಶೇರಿಸಿ ಪಕ್ವವಾಗಿ ಯಣ್ಣೆ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಕೊಳ್ಳುವದು. ಪ್ರತಿದಿನ ಪ್ರಾತಃಕಾಲ ಬಿಸಿನೀರಿನಲ್ಲಿ ೧ ತೊಲೆ ಯಣ್ಣೆಯನ್ನು ತೆಗೆದುಕೊಳ್ಳುವದು. ಈರೀತಿ ೭ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪತ್ಯ ತೊಗರಿಬೇಳೆ ಸಿಹಿಸಾರು ಅನ್ನ. ಇದರಿಂದ ಅಂಡವಾಯು, ಕೀಲುವಾಯು, ಮೇಹವಾಯು, ಮೇಹಪೊಡೆಗಳು ಗುಣವಾಗುವದು.

೬. ಚಿತ್ರಮೂಲದ ಬೇರಿನಪಟ್ಟೆ ೬ ತೊಲೆ, ಹಾವುಮೆಕ್ಕೇಬೇರು ೬ ತೊಲೆ, ಹಾವುತೊಂಡೇಗಡ್ಡೆ ೬ ತೊಲೆ, ಲಕ್ಕಲಿಸೊಪ್ಪಿನ ರಸ ೧ ಶೇರು, ವೋಮು ೪ ತೊಲೆ, ಹೊಟ್ಟುಸುಲಿದ ಬೆಳ್ಳುಳ್ಳಿ ೬ ತೊಲೆ, ತ್ರಿಕಟುಕ ೩ ತೊಲೆ, ಬಜೆ ೩ ತೊಲೆ ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಅರಿಯುವ ಜಿನಸು ಗಳನ್ನು ಅರದು ನೀರುಹಾಕಿ ಕಲಸಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕೊಂಡು ಚಿಟ್ಟರಳಣ್ಣೆ ೨|| ಶೇರು ಹಾಕಿ ಪಕ್ವವಾಗಿ ಯಣ್ಣೆಕಾಯಿಸಿ ಶೋಧಿಸಿ ಕೊಂಡು ಹೊತ್ತಿಗೆ || ತೊಲೆ ಬಿಸಿನೀರಿನಲ್ಲಿ ಕೊಡಬೇಕು. ಈರೀತಿ ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದೇ ಯಣ್ಣೆ ವಾಯುಗಳಿಗೆ ಮೇಲೆ ಲೇಪಿಸುವದು. ಇದರಿಂದ ಪಾರ್ಶ್ವವಾಯು ಗುಣವಾಗುವದು.

೭. ಚಿಟ್ಟರಳಣ್ಣೆ ೧|| ಶೇರು, ಬುಡ್ಡೆಹಾಗಲಸೊಪ್ಪಿನ ರಸ ೧ ಶೇರು, ಬಿಳೀಜೀರಿಗೆ ೧ ತೊಲೆ, ಮೆಣಸು ೧ ತೊಲೆ, ಹೊಟ್ಟುಸುಲಿದ ಬೆಳ್ಳುಳ್ಳಿ ೩ ತೊಲೆ, ಚಿತ್ರಮೂಲ ೧ ತೊಲೆ, ಮೋಡಿ ೧ ತೊಲೆ, ಗಂಟುಭಾರಂಗಿ ೧ ತೊಲೆ, ಇದರಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಅರಿಯುವ ಜಿನಸುಗಳನ್ನು ಅರದು ಎಲ್ಲವನ್ನು ಶೇರಿಸಿ ಪಕ್ವವಾಗಿ ಯಣ್ಣೆಕಾಯಿಸಿ ಶೋಧಿಸಿಕೊಳ್ಳುವದು. ಬೆಳಿಗ್ಗೆಹೊತ್ತು ಬಿಸಿನೀರಿನಲ್ಲಿ ೧ ತೊಲೆ ಕೊಡುವದು. ಈರೀತಿ ೭ ದಿವಸ ಕೊಡು ವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಮೇಹವಾಯು, ಮಲಬದ್ಧವಾಯು, ಅಗ್ನಿಮಾಂದ್ಯ, ಶೂಲೆ ಇವು ಗುಣವಾಗುವವು.

೮. ಚಿಟ್ಟರಳಣ್ಣೆ ೧ ಶೇರು, ಕತ್ತಿಕಿರುಬನಸೊಪ್ಪಿನ ರಸ ೧ ಶೇರು, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಲವಂಗ ೧ ತೊಲೆ (ಈ ಮೂರು ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಹಾಕುವದು.) ಇವುಗಳೆಲ್ಲವನ್ನು ಶೇರಿಸಿ ಯಣ್ಣೆ ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಯಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವದು. ಈರೀತಿ ೭ ದಿನ ಕೊಡು ವದು. ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಮಸ್ತ ವಾಯು ಗುಣವಾಗುವದು.

೯. ವಾರಾಹಿ ಚೂರ್ಣ:—ನೆಲತಾಟಿಗಡ್ಡೆ ೩ ಪಲ, ಅಳಲೇಕಾಯಿಸಿಪ್ಪೆ || ಪಲ, ತಾರೇಕಾಯಿಸಿಪ್ಪೆ ೧ ಪಲ, ನೆಲ್ಲೀಕಾಯಿ ೨ ಪಲ, ಚಿತ್ರಮೂಲ || ಪಲ,

ಮಜ್ಜಿಗೆಗಡ್ಡೆ ॥ ಪಲ, ಶುದ್ಧಿಮಾಡಿದ ಅಶ್ವಗಂಧಿ ೨ ಪಲ, ಅತಿಮಧುರ ೧ ಪಲ, ಆನೇನೆಗ್ಗಿಲು ॥ ಪಲ, ಅರಸಿನ ॥ ಪಲ, ಶೊಂಟಿ ೧ ಪಲ, ಜಾಕಾಯಿ ಕಾಲುಪಲ, ಜಾಪತ್ರೆ ಕಾಲುಪಲ, ಯಾಲಕ್ಕಿ ಕಾಲುಪಲ, ತುತ್ತಿಬೀಜ ೨ ಪಲ, ನೀರುಗೊಬ್ಬಿಬೀಜ ೧ ಪಲ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಇದಕ್ಕೆ ಸಮ ರಾಯಪುಡಿಸಕ್ಕರೆ ಕಲಸಿ ಹೊತ್ತಿಗೆ ॥ ತೊಲೆ ಚೂರ್ಣ ಬಿಸಿನೀರಿನಲ್ಲಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಮೇಹವಾಯು ಗುಣವಾಗುವದು.

೧೦. ಪರಂಗ್ಯಾದಿ ಚೂರ್ಣ :—ಯಾಲಕ್ಕಿ, ಲವಂಗ, ಲವಂಗಪತ್ರೆ, ದಾಲ್ಚಿನ್ನಿ, ನಾಗಕೇಸರಿ, ವೋಮ, ಶೊಂಟಿ, ಹಿಪ್ಪಲಿ, ಮೋಡಿ, ಚಿತ್ರಮೂಲ, ಜಾಕಾಯಿ, ಜಾಪತ್ರೆ, ಮೆಣಸು, ತುಪ್ಪದ ದೇವದಾರು, ಬಿಳೀಜೀರಿಗೆ, ಕರೇಜೀರಿಗೆ, ತಾಳೀಸಪತ್ರೆ, ಅಳಲೇಕಾಯಿಸಿಪ್ಪೆ ಇವು ಜಿನಸು ೧ ಕ್ಕೆ ೩ ವರಹತೂಕ, ಇದಕ್ಕೆ ಸಮಭಾಗ ಶುದ್ಧಿಮಾಡಿದ ಪರಂಗಿಚಕ್ಕೆ ಇವುಗಳೆಲ್ಲವನ್ನು ಕುಟ್ಟಿ ಚೂರ್ಣಮಾಡಿ ವಸ್ತ್ರಗಳಿತಮಾಡಿ ಇದಕ್ಕೆ ಸಮ ರಾಯಿಪುಡಿಸಕ್ಕರೆ ಬೆರಸಿ ಇಟ್ಟುಕೊಳ್ಳುವದು. ಹೊತ್ತಿಗೆ ೩ ಬೆರಳಿನಲ್ಲಿ ಬಂದಷ್ಟು ಚೂರ್ಣ ಹಸುವಿನತುಪ್ಪ, ಜೇನುತುಪ್ಪದಲ್ಲಿ ಕಲಸಿಕೊಡುವದು. ಹೀಗೆ ಬೆಳಿಗ್ಯೆಸಾಯಂಕಾಲ ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಮೇಹವಾಯು, ಆಮ್ಲಪಿತ್ತ ನಿವಾರಣೆ ಆಗುವದು

೧೧. ಅಶ್ವಗಂಧಿ, ಚಿಟ್ಟಾಮುಟ್ಟಿ, ಪೇರಾಮುಟ್ಟಿ, ದಶಮೂಲಗಳು, ಯಲಚಿಹಣ್ಣು, ಸಣ್ಣರಾಸ್ಮೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡು ಬೆಳಿಗ್ಯೆ ೨ ತೊಲೆ ಸಾಯಂಕಾಲ ೨ ತೊಲೆ ತೆಗೆದುಕೊಳ್ಳುವದು. ಈರೀತಿ ೭ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವಾಯುವು ಗುಣವಾಗುವದು.

೧೨. ಚಿತ್ರಮೂಲ, ಕೊಡಸಿಗೆಬೀಜ, ಅಗುಳುಶೊಂಟಿ, ಕಟುಕರೋಹಿಣಿ, ಅತಿಬಜೆ, ಅಳಲೇಕಾಯಿಸಿಪ್ಪೆ ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಹೊತ್ತಿಗೆ ಅರ್ಧತೊಲೆ ಜೇನುತುಪ್ಪದಲ್ಲಿ ಕೊಡುವದು. ಈರೀತಿ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭-೧ಳ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವಾಯುವು ಗುಣವಾಗುವದು.

೧೩. ಚಿತ್ರಮೂಲ, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ವೋಮ, ಶೊಂಟಿ, ಹಿಪ್ಪಲಿ, ಮೆಣಸು, ಶುದ್ಧಿಮಾಡಿದ ಗೇರುಬೀಜ

ಇವು ಜಿನಸಿಗೆ ೧-೧ ತೊಲೆ, ಬಿಳೇಧೂಪ ೧ ದಿವಸ ಗೋಮೂತ್ರದಲ್ಲಿ ನೆನೆಯಿಟ್ಟು ನೀರಿನಲ್ಲಿ ತೊಳದು ಬಿಸಲಿನಲ್ಲಿಟ್ಟು ವಣಗಿಸಿ ಶುದ್ಧಿಮಾಡಿಕೊಂಡದ್ದು ೪ ತೊಲೆ, ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಅರಿಯುವ ಜಿನಸುಗಳನ್ನು ಅರದು ಕೊಳ್ಳುವದು. ಹಳೇಬೆಲ್ಲ ೮ ತೊಲೆ ಇವುಗಳೆಲ್ಲವನ್ನು ವರಳಲ್ಲಿ ಹಾಕಿ ಕುಟ್ಟಿ ಎಲ್ಲ ವನ್ನು ಶೇರಿಸಿಕೊಂಡು ಹೊತ್ತಿಗೆ ಕಾಲುತೊಲೆಯಂತೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿ ಸಾರು ಅನ್ನ. ಇದರಿಂದ ವಾಯುವು ನಿವಾರಣೆ ಆಗುವದು.

೧೪. ಸಣ್ಣರಾಸ್ಮೆ, ಹಿಪ್ಪಲಿ, ತುಪ್ಪದದೇವದಾರು, ಶೊಂಟಿ, ಚಿಟ್ಟರಳು ಬೇರು ಇವುಗಳು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡು ಹೊತ್ತಿಗೆ ೨ ತೊಲೆಯಷ್ಟು ತೆಗೆದುಕೊಳ್ಳುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಪ್ತಧಾತುಗತವಾಯು, ಆಮವಾಯು, ಸರ್ವಾಂಗವಾಯು ಗುಣವಾಗುವದು.

೧೫ ಮಹಾರಾಸ್ನಾದಿ ಪಂಚಕ ಕಷಾಯ:—ಸಣ್ಣರಾಸ್ಮೆ ೩ ಭಾಗ, ಚಿಟ್ಟಾಮುಟ್ಟಬೇರು, ಚಿಟ್ಟರಳುಬೇರು, ತಪ್ಪದದೇವದಾರು, ಬಜೆ, ಆಡು ಸೋಗೆ, ಶೊಂಟಿ, ಅಳಲೇಕಾಯಿಸಿಪ್ಪೆ, ಚವ್ಯ, ತುಂಗೇಗಡ್ಡೆ, ಬಿಳೇಕೊಮ್ಮೆ, ಅಮೃತಬಳ್ಳಿ, ಶುದ್ಧಿಮಾಡಿದ ಪರಂಗಿಚಕ್ಕೆ, ಸೋಪುಬೀಜ, ಸಣ್ಣನೆಗ್ಗಿಲು ಬೇರು, ಅಶ್ವಗಂಧಿ, ಅತಿಬಜೆ, ಕಕ್ಕೆಚಕ್ಕೆ, ಹಿಪ್ಪಲಿ, ನೆಲಗುಳ್ಳ, ಹೆಗ್ಗುಳ್ಳ ಇವೆಲ್ಲವು ೧-೧ ಭಾಗದಂತೆ ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿಕೊಂಡು ಇದಕ್ಕೆ ಶೊಂಠಿಚೂರ್ಣ, ಹಿಪ್ಪಲಿಚೂರ್ಣ, ಶುದ್ಧಿ ಮಾಡಿದ ಮೈಸಾಕ್ಷಿಗುಗ್ಗುಳ, ವೋಮದಚೂರ್ಣ, ಚಿಟ್ಟರಳಣ್ಣೆ ಇವುಗಳಲ್ಲಿ ಯಾವದಾದರು ವಂದನ್ನು ಕಲಸಿ ತೆಗೆದುಕೊಳ್ಳಬೇಕು. ಹೊತ್ತಿಗೆ ೨ ತೊಲೆ ಯಷ್ಟು ಕಷಾಯ ತೆಗೆದುಕೊಳ್ಳಬೇಕು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದ ರಿಂದ ಸರ್ವಾಂಗ ಕಂಪವಾಯು, ಕುಬ್ಜವಾಯು, ಪಕ್ಷಗತವಾಯು, ಅಪಬಾಹು ವಾಯು, ಗೃಧ್ರಸಿವಾಯು, ಆಮವಾಯು, ಶ್ಲೀಪದ (ಆನೆಕಾಲುರೋಗ), ಅಪತಾನಕವಾಯು, ಅಂತ್ರವೃದ್ಧಿ, ಆಧ್ಮಾನವಾಯು, ಬಿಕ್ಕಳಿಕೆ, ಮೊಣಕಾಲು ವಾಯು, ಶುಕ್ರಗತದೋಷ, ಅಂಡವಾಯು, ಮೇಢ್ರವಾಯು, ಸ್ತ್ರೀಯರ ಯೋನಿ ರೋಗ, ವಂಧ್ಯತ್ವ ಪರಿಹಾರವಾಗುವದಲ್ಲದೆ ಗರ್ಭೋತ್ಪತ್ತಿ ಸಹಾ ಉಂಟಾಗುವದು.

೧೬. ಏರಂಡಾದಿ ಕಷಾಯ:—ಚಿಟ್ಟರಳುಬೇರು, ಬಿಲ್ಪತ್ರೆಬೇರು, ರಾಮಗುಳ್ಳ, ಹೆಗ್ಗುಳ್ಳ, ಪಾದರೀಲವಣ, ಶೊಂಟಿ, ಹಿಪ್ಪಲಿ, ಮೆಣಸು, ಹಿಂಗು,

ದಾಳಿಂಬರೆಬೇರಿನಚಕ್ಕೆ, ಸೈಂಧರಲವಣ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಹೊತ್ತಿಗೆ ೨ ತೊಲೆಯಂತೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಧನುರ್ವಾತ ಗುಣವಾಗುವದು.

೧೭. ಚಿಟ್ಟರಳು ಪಪ್ಪನ್ನು ೩ ತೊಲೆಯಷ್ಟು ಚನ್ನಾಗಿ ಅರದು ಹಸುವಿನ ಹಾಲಿನಲ್ಲಿ ಕಾಯಿಸಿ ತೆಗೆದುಕೊಂಡರೆ ಗೃಧ್ರಸಿವಾಯು ಗುಣವಾಗುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ.

೧೮. ವಾತಗಜಸಿಹ್ಮ ರಸ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ ಇವು ಎರಡನ್ನು ಖಲ್ವದಲ್ಲಿ ಹಾಕಿ ಅರದುಕೊಳ್ಳುವದು. ಚಿತ್ರಮೂಲ ೧ ತೊಲೆ, ಶೊಂಟಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ತುಂಗೇಗಡ್ಡೆ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ ಇವುಗಳನ್ನು ಚೂರ್ಣಮಾಡಿ ಶೋಧಿಸಿಕೊಂಡು ಗರುಗದಸೊಪ್ಪಿನ ರಸದಲ್ಲಿ ಅರದು ಗುರುಗಂಜಿ ಗಾತ್ರ ಮಾತ್ರೆಮಾಡಿ ನೆರಳಲ್ಲಿ ಒಣಗಿಸಿ ತಕ್ಕ ಅನುಪಾನಗಳಲ್ಲಿ ಬೆಳಿಗ್ಯೆ ೧ ಮಾತ್ರೆ ಸಾಯಂಕಾಲ ೧ ಮಾತ್ರೆ ೭ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಕುಷ್ಟ, ಪ್ರಮೇಹ, ಶ್ಲೇಷ್ಮರೋಗ, ವಾತಪ್ರಕೋಪ, ಕ್ಷಯರೋಗ ಮೊದಲಾದ ವಾತರೋಗಗಳು ನಿವಾರಣೆ ಆಗುವದು.

೧೯. ರಸೋನಕಲ್ಪ:—ಹೊಟ್ಟುಸುಲಿದ ಬೆಳ್ಳುಳ್ಳಿ ಎರಡೆರಡಾಗಿ ಶೀಳಿ ಮಜ್ಜಿಗೆಯಲ್ಲಿ ಒಂದು ರಾತ್ರಿ ನೆನೆಹಾಕಿ ಬೆಳಿಗ್ಯೆ ತೆಗದು ಖಲ್ವದಲ್ಲಿ ಅರದದ್ದು ಕಾಲುತೊಲೆ, ಸೌವರ್ಚಲವಣ, ವೋಮ, ಸುಟ್ಟಹಿಂಗು, ಸೈಂಧರಲವಣ, ತ್ರಿಕಟುಕ, ಜೀರಿಗೆ ಇವುಗಳು ಸಮಭಾಗದ ಚೂರ್ಣ ೧ ತೊಲೆ ಎಲ್ಲವನ್ನು ಶೇರಿಸಿ ಕಲಸಿ ಚಿಟ್ಟರಳುಬೇರಿನ ಕಷಾಯದಲ್ಲಿ ೧ ಆಣೆ ತೂಕ ಚೂರ್ಣಹಾಕಿ ತೆಗದುಕೊಂಡರೆ ಸರ್ವಾಂಗವಾತ, ಏಕಾಂಗವಾತ, ಅರ್ದಿತವಾತ, ಅಪತಂತ್ರಕವಾತ, ಅಪಸ್ಮಾರ, ಉನ್ಮಾದ, ಊರುಸ್ತಂಭವಾತ, ಗೃಧ್ರಸೀವಾತ, ಬೆನ್ನು, ಎದೆ, ಸೊಂಟ, ಪಕ್ಕಗಳು, ಹೊಟ್ಟೆ ಇವುಗಳಲ್ಲಿ ಬರುವ ಚಳುಕು, ಜಂತುಹುಳುಗಳ ಬಾಧೆ, ಅಜೀರ್ಣ ಇವುಗಳು ಗುಣವಾಗುವದು. ಇದಕ್ಕೆ ಪತ್ಯ:—ಬಿಸಲಿನಲ್ಲಿ ತಿರುಗಾಡಬಾರದು, ಅಧಿಕವಾಗಿ ನೀರು ಕುಡಿಯಬಾರದು, ಹಾಲು ಕುಡಿಯಬಾರದು, ಬೆಲ್ಲ ತಿನ್ನಬಾರದು ಈರೀತಿ ಇರಬೇಕು. ಬೆಳಿಗ್ಯೆ ಸಾಯಂಕಾಲ ೭ ದಿವಸ ತೆಗೆದುಕೊಳ್ಳಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ.

೨೦. ಯೋಗರಾಜ ಗುಗ್ಗುಲ:—ಶೊಂಟಿ, ಹಿಪ್ಪಲಿ, ಚವ್ಯ, ಮೋಡಿ, ಚಿತ್ರಮೂಲ, ಶುದ್ಧಿಮಾಡಿದ ಹಿಂಗು, ಅಜಮೊದ, ಸಾಸುವೆ, ಸೋಪುಬೀಜ, ಬಿಳೇಜೀರಿಗೆ, ರೇಣುಕೆ, ಕೊಡಸಿಗೆಬೀಜ, ವಿಷಬೊದ್ದಿ, ವಾಯುವಿಳಂಗ, ಗಜ ಹಿಪ್ಪಲಿ, ಕಟುಕರೋಹಿಣಿ, ಅತಿಬಜೆ, ಗಂಟುಭಾರಂಗಿ ಬಜೆ, ಗೊಡ್ಡುಮಂಜಿ ಇವು ದಿನಸು ೧ಕ್ಕೆ ೫ ಆಣೆ ತೂಕ, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲಿಕಾಯಿಸಿಪ್ಪೆ ಇವು ಮೂರು ೧ ತೊಲೆ, ಇವುಗಳನ್ನು ಚೂರ್ಣಮಾಡಿ ಇದಕ್ಕೆ ಸಮಭಾಗ ಬಿಳೇಧೂಪ ಅರದು ಒಂದು ಕಬ್ಬಿಣದ ಬಾಂಡ್ಲಿಯಲ್ಲಿ ಹಾಕಿ ವಲೆಯ ಮೇಲಿಟ್ಟು ಕರಗಿಸಿ ಮೇಲ್ಕಂಡ ಚೂರ್ಣ ಹಾಕಿ ಕಲಸಿ ಅದರಲ್ಲಿ ವಂಗಭಸ್ಮ, ರೌಪ್ಯಭಸ್ಮ, ನಾಗಭಸ್ಮ, ಅಭ್ರಕಭಸ್ಮ, ಮಂಡೂರಭಸ್ಮ, ರಸಸಿಂಧೂರ ಇವುಗಳು ಪ್ರತಿಯೊಂದು ೩ ತೊಲೆ ಪ್ರಕಾರ ಹಾಕಿ ಚನ್ನಾಗಿ ಬೆರಸಿ ೪ ಗುರುಗಂಜಿ ತೂಕ ಮಾತ್ರೆಗಳನ್ನು ಮಾಡಿ ಪಳಗಿದ ತುಪ್ಪದ ಮಡಿಕೆಯಲ್ಲಿ ಇಟ್ಟುಕೊಂಡು ಪ್ರತಿದಿನ ಬೆಳಿಗ್ಯೆ ಸಾಯಂಕಾಲ ೧-೧ ಮಾತ್ರೆ ಸೇವಿಸುತ್ತಾಬರುವದು. ಇದರಿಂದ ತ್ರಿದೋಷ, ಸಮಸ್ತವಾತರೋಗಗಳು, ಕುಷ್ಠಗಳು, ಮೂಲರೋಗ, ಸಂಗ್ರಹಣಿ, ಪ್ರಮೇಹ, ವಾತರಕ್ತ, ನಾಭಿಶೂಲೆ, ಭಗಂದರ, ಉದಾವರ್ತ, ಕ್ಷಯರೋಗ, ಗುಲ್ಮ, ಅಪಸ್ಮಾರ, ಅಗ್ನಿಮಾಂದ್ಯ, ಶ್ವಾಸ, ಕಾಸ, ಅರುಚಿ, ಶುಕ್ರದೋಷ, ಆರ್ತವದೋಷ ಇವುಗಳು ಗುಣವಾಗುವದು.

೨೧. ಮಹಾತಿಕ್ತಘೃತ:—ಹಾಲೆಚಕ್ಕೆ, ಅತಿಬಜೆ, ಕಕ್ಕೆಬಂಕೆ, ಕಟುಕ ರೋಹಿಣಿ, ವಿಷಬೊದ್ದಿ, ತುಂಗೇಗಡ್ಡೆ, ಲಾವಂಚ, ತ್ರಿಫಲೆ, ಪರ್ಪಾಟಕ, ಕಹಿಪಡವಲ, ಬೇವಿನಚಕ್ಕೆ, ಮಂಜಿಷ್ಟಿ, ಹಿಪ್ಪಲಿ, ತಾವರೆಹುವ್ವು, ಕಚೋರ, ಶ್ರೀಗಂಧದಚಕ್ಕೆ, ನಸುಗುನ್ನಿಬೀಜ, ದಾಸವಾಳ, ಅರಸಿನ, ಮರದರಸಿನ, ಅಮೃತಬಳ್ಳಿ, ಸೊಗದೇಬೇರು, ಮಂಜಿನಾರು, ಆಡುಸೋಗೆ, ಮಜ್ಜಿಗೆಗಡ್ಡೆ, ಹೊಂಗೇಬೇರಿನಬೊಬ್ಬಡೆ, ಕೊಡಸಿಗೆಬೀಜ, ಅತಿಮಧುರ, ನೆಲಬೇವು ಇವು ಜಿನಸು ೧ಕ್ಕೆ ೧ ಆಣೆ ತೂಕ ತೆಗದುಕೊಂಡು ಕಲ್ಕವಂಮಾಡಿ ಇದಕ್ಕೆ ನಾಲ್ಕು ರಷ್ಟು ಹಸುವಿನತುಪ್ಪ, ತುಪ್ಪಕ್ಕೆ ಎರಡರಷ್ಟು ನೆಲ್ಲೀಕಾಯಿ ರಸ, ತುಪ್ಪಕ್ಕೆ ೮ ಭಾಗ ಅಧಿಕವಾಗಿ ನೀರು ಹುಯಿದು ತುಪ್ಪಮಿಗುವಹಾಗೆ ಕಾಯಿಸಿ ಶೋಧಿಸಿ ಕೊಂಡು ಹೊತ್ತಿಗೆ ಅರ್ಧತೊಲೆಯಂತೆ ಬೆಳಿಗ್ಯೆ ಸಾಯಂಕಾಲ ೭ ದಿವಸ ಸೇವಿ ಸುತ್ತಾ ಬರುವದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವಾತರಕ್ತ, ಕುಷ್ಠರೋಗ, ರಕ್ತಪಿತ್ತ. ರಕ್ತಾರ್ಶಸ್ಸು, ಪಾಂಡುರೋಗ, ಹೃದ್ರೋಗ, ಗುಲ್ಮ, ವಿಸರ್ಪ, ಸ್ತ್ರೀಯರ ಪ್ರದರರೋಗ, ಗಂಡಮಾಲೆ, ಕ್ಷುದ್ರರೋಗಗಳು ಗುಣವಾಗುವದು.

೨೨. ಸ್ವಚ್ಛಂದಭೈರವ ರಸ:—ಶುದ್ಧಿಮಾಡಿದ ಹವಳಸರಿಗಂಧಕ, ಶುದ್ಧಿ ಮಾಡಿದ ಪಾದರಸ ಇವು ಎರಡು ಖಲ್ವದಲ್ಲಿ ಹಾಕಿ ಅರೆದುಕೊಳ್ಳುವದು.

ಶುದ್ಧಿಮಾಡಿದ ತಾಳಕ, ಲೋಹಭಸ್ಮ, ಸುವರ್ಣಮಾಕ್ಷಿಕಭಸ್ಮ, ಅಳಲೇಕಾಯಿ ಸಿಪ್ಪೆ, ನೆಲನೆಲ್ಲಿ, ಕರೇಲಕ್ಕಲಿ, ತ್ರಿಕಟುಕ, ಸೂರ್ತಿಬೆಳಗಾರ ಅರಳುಮಾಡಿದ್ದು, ಶುದ್ಧಿಮಾಡಿದ ವತ್ಸನಾಭಿ ಇವು ಸಮಭಾಗ ಖಲ್ವದಲ್ಲಿ ಹಾಕಿ ಲಕ್ಕಲಿಸೊಪ್ಪಿನ ರಸದಲ್ಲಿ ೧ ದಿನ ಬೋಳದರಗದ ರಸದಲ್ಲಿ ೧ ದಿನ ಮರ್ದಿಸಿ ೨ ಗುರುಗಂಜಿ ಪ್ರಮಾಣ ಮಾತ್ರೆಗಳು ಮಾಡುವದು. ಬೆಳಿಗ್ಗೆಹೊತ್ತು ೧ ಮಾತ್ರೆ ಸಣ್ಣರಾಸ್ಮೆ, ಅಮೃತಬಳ್ಳಿ, ದೇವದಾರು, ಶೊಂಟಿ, ಚಿಟ್ಟರಳುಬೇರು ಇವುಗಳ ಕಷಾಯದಲ್ಲಿ ಶುದ್ಧಿಮಾಡಿದ ಮೈಸಾಕ್ಷಿಗುಗ್ಗಳ ಶೇರಿಸಿ ಸ್ವಲ್ಪ ಬೆಚ್ಚಗೆಮಾಡಿ ತೆಗೆದುಕೊಳ್ಳುವದು. ಈರೀತಿ ೭ ದಿವಸ ತೆಗೆದುಕೊಂಡರೆ ವಾತರೋಗಗಳು ಗುಣವಾಗುವದು.

೨. ಇಂಗಲೀಕದ ಮೈಣ:—ಇಂಗಲೀಕ ೧ ತೊಲೆಯನ್ನು ೩ ದಿನ ನಿಂಬೇಹಣ್ಣಿನ ರಸದಲ್ಲಿ ಇಟ್ಟು ನಂತರ ಮಲೆಹಾಲಿನಲ್ಲಿ ೩ ದಿನ ಇಟ್ಟು ತಣ್ಣೀರಿನಲ್ಲಿ ತೊಳೆದು ಖಲ್ವದಲ್ಲಿಹಾಕಿ ಅರೆದು ಕಬ್ಬಿಣದ ಸೌಟಿನಲ್ಲಿ ಹಾಕಿ ಬೆಂಕಿಯ ಮೇಲಿಟ್ಟು ಬಿಳೀಈರುಳ್ಳಿ ರಸ ೨೪ ತೊಲೆಯಲ್ಲಿ ಸ್ವಲ್ಪಸ್ವಲ್ಪ ರಸಹಾಕಿ ಕಡ್ಡಿಯಲ್ಲಿ ತಿರುವುತ್ತಾ ಮೈಣದಹಾಗೆ ಮಾಡಿ ಇಟ್ಟುಕೊಳ್ಳುವದು. ಪ್ರಯೋಗ:—೧ ಗುರುಗಂಜಿಯಷ್ಟು ತ್ರಿಫಲೆಯ ಕಷಾಯದಲ್ಲಿ ಬೆಳಿಗ್ಗೆಹೊತ್ತು ೩-೫-೭ ದಿನ ಕೊಡಬೇಕು. ಇದರಿಂದ ಸಮಸ್ತ ಮೇಹರೋಗಗಳು ಗುಣವಾಗುವದು. ಪತ್ಯ ಹಸುವಿನಹಾಲು ಅನ್ನ.

೨೪. ಸವ್ವೀರ ಮೈಣ:—ಶುದ್ಧಿಮಾಡಿದ ಸವ್ವೀರ ೧ ತೊಲೆ, ಪಟಕಿ ೧ ತೊಲೆ, ಸೂರ್ತಿಬೆಳಗಾರ ೧ ತೊಲೆ ಇವುಮೂರು ಖಲ್ವದಲ್ಲಿ ಹಾಕಿ ಚನ್ನಾಗಿ ಅರೆದು ಹೊಸಮಡಿಕೆಯಲ್ಲಿ ಹಾಕಿ ಬೆಂಕಿಯಮೇಲಿಟ್ಟು ನುಗ್ಗೇಸೊಪ್ಪಿನ ರಸ ೩ ತೊಲೆಯಲ್ಲಿ ಸ್ವಲ್ಪಸ್ವಲ್ಪ ಹಾಕಿ ಕಡ್ಡಿಯಿಂದ ತಿರುವುತ್ತಾ ಬರುವದು. ಅನಂತರ ಮೊಲೆಹಾಲು ೩ ತೊಲೆ, ನಾಯಿನಾಲಿಗೆಸೊಪ್ಪಿನ ರಸ ೩ ತೊಲೆ, ಮಂಗರವಳ್ಳಿ ರಸ ೩ ತೊಲೆ, ನುಗ್ಗೇಹುವ್ವಿನ ರಸ ೩ ತೊಲೆ, ನಂದಿಬಟ್ಟಲು ಹುವ್ವಿನ ರಸ ೩ ತೊಲೆ ಇವು ಪ್ರತಿಯೊಂದು ರಸದಲ್ಲಿಯು ಮೇಲೆ ಹೇಳಿದಂತೆ ಪ್ರತ್ಯೇಕ ಪ್ರತ್ಯೇಕವಾಗಿ ಕಡ್ಡಿಯಿಂದ ತಿರುವುತ್ತಾ ಚುರುಕು ಕೊಡುವದು. ಇದು ಮೈಣದಂತೆ ಆದಮೇಲೆ ಇಳಿಸಿಕೊಂಡು ಹೆಸರುಕಾಳಷ್ಟು ಮಾತ್ರೆಗಳನ್ನು ಮಾಡಿ ತಾಟಿಬೆಲ್ಲದಲ್ಲಿ ಇಟ್ಟುಕೊಡುವದು. ಬೆಳಿಗ್ಗೆ ೧ ಮಾತ್ರೆ, ಸಾಯಂಕಾಲ ೧ ಮಾತ್ರೆ ೩-೫-೭ ದಿನ ಕೊಡಬೇಕು. ಪತ್ಯ ಹಸುವಿನಹಾಲು ಅನ್ನ. ಇದರಿಂದ ಎಲ್ಲಾ ವಿಧವಾದ ಮೇಹವಾಯು ರೋಗಗಳು, ವಾತಶೂಲೆ, ಮೇಹಚಳುಕು, ಅಂಡವಾಯು ಗುಣವಾಗುವದು.

೨೫. ಹಾವುಮೆಕ್ಕೇಕಾಯಿನ ತಿಳಲು ೧ ತೊಲೆ, ವೋಮ ೧ ತೊಲೆ, ಹೊಟ್ಟುತೆಗೆದ ಬೆಳ್ಳುಳ್ಳಿ ೧ ತೊಲೆ, ಕರೇಅಳಲೇಕಾಯಿ ೧ ತೊಲೆ, ದಾಲಚಿನ್ನಿ ೧ ತೊಲೆ, ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಎಲ್ಲವನ್ನು ಶೇರಿಸಿ ಖಲ್ವ

ದಲ್ಲಿ ಹಾಕಿ ಚನ್ನಾಗಿ ಅರದು ಜೇನುತುಪ್ಪಹಾಕಿ ಕಲಸಿ ಕೂಗಟಿಕೆ ಬೀಜದಷ್ಟು ಮಾತ್ರೆಮಾಡಿ ಬೆಳಿಗ್ಯೆ ೧ ಮಾತ್ರೆ ಸಾಯಂಕಾಲ ೧ ಮಾತ್ರೆ ಕೊಟ್ಟು ಸ್ವಲ್ಪ ಬಿಸಿನೀರು ಕುಡಿಸಬೇಕು. ಇದರಿಂದ ಪಾರ್ಶ್ವವಾಯು (ಲಖ್ವಾ) ವಗೈರೆಗಳಿಗೆ ಸಣ್ಣನರಗಳಲ್ಲಿ ಇರತಕ್ಕ ಕೆಟ್ಟ ಕಲ್ಮಷ ಹೋಗಿ ಅದರಿಂದಾದ ವಾಯುರೋಗ ಗಳು ಗುಣವಾಗುವದು.

೨೬. ಯೋಗರಾಜ ಗುಗ್ಗುಳವಟಿಕ:—ಹಿಪ್ಪಲಿ, ಮೆಣಸು, ಶೊಂಟಿ, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ತುಂಗೇಗಡ್ಡೆ, ವಾಯು ವಿಳಂಗ, ಚವ್ಯ, ಚಿತ್ರಮೂಲ, ಲವಂಗ, ವೋಡಿ, ಬಿಳೀಜೀರಿಗೆ, ದೇವದಾರು, ಆಡುಸೋಗೆ, ಅತಿಬಜೆ, ಮರದರಿಸಿನ, ರೇಣುಕೆಬೀಜ, ತೂಪರಚಕ್ಕೆ, ಚಿಟ್ಟೆ ರಳುಬೇರು, ನೆಲಬೇವು, ಅಗುಳುಶೊಂಟಿ, ಕುರಟಿಗೆಬೀಜ, ಹಾವುಮೆಕ್ಕೆಬೇರು, ಚಿಟ್ಟಾಮುಟ್ಟೆ, ಹೊಟ್ಟುಸುಲಿದ ಬೆಳ್ಳುಳ್ಳಿ, ಸಾಸುವೆ, ಅಜಾವೊದ, ಆನೆನೆಗ್ಗಿಲು, ಗಂಟುಭಾರಂಗಿ, ಬಜೆ ಬಿಡಾಲವಣ, ಸೌವರ್ಚಲವಣ, ಯವಕ್ಷಾರ, ಸೈಂಧರ ಲವಣ, ಗಜಹಿಪ್ಪಲಿ ಇವು ಜಿನಸಿಗೆ ೧-೧ ತೊಲೆ, ಶುದ್ಧಿಮಾಡಿದ ಮೈಸಾಕ್ಷಿ ಗುಗ್ಗುಳ ೩ ಶೇರು ಇವುಗಳನ್ನೆಲ್ಲಾ ಚನ್ನಾಗಿ ಕುಟ್ಟಿ ವಸ್ತ್ರಗಳಿತಮಾಡಿಕೊಂಡು ಹೊತ್ತಿಗೆ ಕಾಲುತೊಲೆ ಜೇನುತುಪ್ಪ, ಹಸುವಿನತುಪ್ಪದಲ್ಲಿ ಬೆಳಿಗ್ಯೆ ಸಾಯಂ ಕಾಲ ೨ ಹೊತ್ತು ೭-೧೪ ದಿನಗಳು ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ ತೊಗರೀ ಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ರಕ್ತವಾಯು, ಪಾರ್ಶ್ವವಾಯು, ಯದೆ ಹಿಡಿದುಕೊಂಡವಾಯು, ಕುತ್ತಿಗೆ ಹಿಡಿದುಕೊಂಡವಾಯು, ಕಾಸಶ್ವಾಸ, ಮೂಲರೋಗ, ಭಗಂದರ, ಎದೆಶೂಲೆ, ಮಹೋದರ, ಹೊಟ್ಟೆಶೂಲೆ, ಅಜೀರ್ಣ, ಕ್ರಿಮಿರೋಗ, ವಣಗಿದಮೈ, ನಿತ್ರಾಣ, ನಿಶ್ಶಕ್ತಿ, ನಾಡಿಹುಣ್ಣು, ೮೦ ವಿಧ ವಾಯು, ಕುಷ್ಠವ್ಯಾಧಿ ಇವು ನಿವಾರಣೆ ಆಗುವದು.

೨೭. ಇಂಗಲೀಕ ಮೈಣ:—ಇಂಗಲೀಕ ೧ ತೊಲೆ, ೩ ದಿನ ನಿಂಬೇ ಹಣ್ಣಿನ ರಸದಲ್ಲಿ ಇಟ್ಟು ನಂತರ ಮಲೆಹಾಲಿನಲ್ಲಿ ೩ ದಿನ ಇಟ್ಟು ತಣ್ಣೀರಿನಲ್ಲಿ ತೊಳೆದುಕೊಂಡು ಖಲ್ವದಲ್ಲಿಹಾಕಿ ಅರದು ಕಬ್ಬಿಣದ ಸೌಟಿನಲ್ಲಿ ಹಾಕಿ ಹೊಟ್ಟು ಸುಲಿದ ಬೆಳ್ಳುಳ್ಳಿ ೧ ಶೇರು ಕುಟ್ಟಿ ರಸ ಬಟ್ಟೆಯಲ್ಲಿ ಶೋಧಿಸಿಕೊಳ್ಳುವದು. ಒಳ್ಳೆಣ್ಣೆದೀಪ ಹಚ್ಚಿಸಿ ಅದರಮೇಲೆ ಮೇಲ್ಕಂಡ ಸೌಟು ಇಟ್ಟು ಬೆಳ್ಳುಳ್ಳಿಯ ರಸ ಸ್ವಲ್ಪಸ್ವಲ್ಪ ಹಾಕುತ್ತಾ ಕಡ್ಡಿಯಿಂದ ತಿರವುತ್ತಾ ಬೆಳ್ಳುಳ್ಳಿಯ ರಸ ಮುಗಿಯುವವರಿವಿಗು ಮೈಣದಹಾಗೆ ಮಾಡಿ ಇಟ್ಟುಕೊಳ್ಳುವದು. ಬೆಳಿಗ್ಯೆ ೧ ಗುರುಗಂಜಿಯಷ್ಟು ಸಾಯಂಕಾಲ ೧ ಗುರುಗಂಜಿಯಷ್ಟು ಹಸುವಿನತುಪ್ಪದಲ್ಲಿ ಕಲಸಿ ಕೊಡುವದು. ಹೀಗೆ ೩-೫-೭ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ನರವಾಯುಗಳು, ಬಿಕ್ಕಳಿಕೆಯು, ಮೇಹಚಳುಕು, ಕೀಲುವಾಯು, ಕೀಲುನೋವು, ಪಾರ್ಶ್ವವಾಯು ಗುಣವಾಗುತ್ತೆ.

೨೮. ಶೀಗೇಕಾಯಿನಸೊಪ್ಪು ದೊಡ್ಡ ಹೇರಳೇಕಾಯಿನಷ್ಟು ತಂದು ಕುಟ್ಟಿ ರಸ ಬಟ್ಟೆಯಲ್ಲಿ ಶೋಧಿಸಿಕೊಳ್ಳುವದು. ಹುಚ್ಚೆಳ್ಳೆಣ್ಣೆ ೬ ತೊಲೆ ಹಾಕಿ ಎಲ್ಲ ವನ್ನು ಶೇರಿಸಿ ಒಂದೇಸಲ ಕುಡಿಯುವದು. ಈರೀತಿ ಬೆಳಿಗ್ಗೆಹೊತ್ತು ೩ ದಿನ ಕುಡಿಯುವದು. ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಉಷ್ಣ ವಾಯು, ಕೀಲುನೋವು ಗುಣವಾಗುವದು.

೨೯. ಸವ್ವೀರವೈಣ:—ಶುದ್ಧಿಮಾಡಿದ ಸವ್ವೀರ ೧ ವಾವು ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ಪಳಗಿದ ಮಡಿಕೆಯಲ್ಲಿ ಹಾಕಿ ಬೆಂಕಿಯಮೇಲಿಟ್ಟು ನುಗ್ಗೇ ಸೊಪ್ಪಿನ ರಸ ೧ ಪಾವು ಸ್ವಲ್ಪಸ್ವಲ್ಪ ರಸ ಹಾಕಿ ಕಡ್ಡಿಯಿಂದ ತಿರುವುತ್ತಾ ಬರು ವದು. ಅನಂತರ ಮಲೆಹಾಲು ೧ ಪಾವು, ಹಸುವಿನಹಾಲು ೧ ಪಾವು, ಯಲೆಕಳ್ಳಿ ರಸ ೧ ಪಾವು, ಶೊಂಟಿ ರಸ ೧ ಪಾವು, ಮಂಗರವಳ್ಳಿ ರಸ ೧ ಪಾವು, ನುಗ್ಗೇ ಹುವ್ವಿನ ರಸ ೧ ವಾವು ಸ್ವಲ್ಪಸ್ವಲ್ಪ ರಸಹಾಕಿ ಪ್ರತ್ಯೇಕ ಪ್ರತ್ಯೇಕವಾಗಿ ಕಡ್ಡಿ ಯಿಂದ ತಿರುವುತ್ತಾ ಬರುವದು. ಇದು ವೈಣದಂತೆ ಆದಮೇಲೆ ಇಳಿಸಿ ತೆಗೆದು ಇಟ್ಟುಕೊಳ್ಳುವದು. ಹೊತ್ತಿಗೆ ಹೆಸರುಕಾಳು ಪ್ರಮಾಣ ತಾಟಬೆಲ್ಲದಲ್ಲಿಟ್ಟು ನುಂಗುವದು. ಈರೀತಿ ಬೆಳಿಗ್ಗೆಹೊತ್ತು ೩-೫-೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಮಸ್ತ ವಾಯುಗಳು ಮೇಹವಾಯು, ಸವಾಯಿ, ಮೇಹಕಾರಕಗಳು ಗುಣವಾಗುವವು.

೩೦. ಪರಂಗ್ಯಾದಿ ಚೂರ್ಣ:—ಶೊಂಟಿ, ಹಿಪ್ಪಲಿ, ಲವಂಗ, ದಾಲಚಿನ್ನಿ, ಲವಂಗಪತ್ರೆ, ಗಂಟುಭಾರಂಗಿ, ನಾಗಕೇಸರಿ, ಯಾಲಕ್ಕಿ, ಅಜಾವೊದ, ಜಾಕಾಯಿ, ಜಾಪತ್ರೆ, ತಾಳೇಸಪತ್ರೆ, ಮೆಣಸು, ತುಪ್ಪದ ದೇವದಾರು, ಸಣ್ಣ ರಾಸ್ಮೆ, ಚಂಗಲಕೋಷ್ಟ, ವಾಯುವಿಳಂಗ ಇವು ಜಿನಸು ೧ಕ್ಕೆ ಅರ್ಧತೊಲೆ, ಇದಕ್ಕೆ ಸಮಭಾಗ ಶುದ್ಧಿವಮಾಡಿದ ಪರಂಗಿಚಕ್ಕೆ ಹಾಕಿ ಎಲ್ಲವನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಹೊತ್ತಿಗೆ ॥ ತೊಲೆ ಚೂರ್ಣ ಜೇನು ತುಪ್ಪದಲ್ಲಿ ಕಲಸಿ ಕೊಡಬೇಕು ಈರೀತಿ ೧೨ ದಿವಸ ಕೊಡುವದು. ಇದಕ್ಕೆ ಪತ್ಯ ಹಸುವಿನಹಾಲು ಅನ್ನ. ಇದರಿಂದ ವಾಯುಗಳು, ಮೇಹವ್ರಣಗಳು, ಪೊಡೆಗಳು ಗುಣವಾಗುವವು.

೩೧. ಪರಂಗ್ಯಾದಿ ಲೇಹ:—ಶುದ್ಧಿಮಾಡಿದ ಪರಂಗಿಚಕ್ಕೆ ೧ ಶೇರು ತಂದು ಅವರೇಕಾಳಷ್ಟು ತುಂಡುಗಳು ಮಾಡಿ ಬಟ್ಟೆಯಲ್ಲಿ ಗಂಟುಕಟ್ಟಿ ಒಂದು ಮಡಿಕೆ ಯಲ್ಲಿ ಸುಣ್ಣಕಲ್ಲು ಅಚ್ಚೇರು ಹಾಕಿ ಅದರಮೇಲೆ ಮೇಲ್ಕಂಡ ಗಂಟುಯಿಟ್ಟು ಅದರಮೇಲೆ ಅಚ್ಚೇರು ಸುಣ್ಣಕಲ್ಲು ಹಾಕಿ ನೀರು ಹುಯಿದು ವಲೆಯಮೇಲೆ ಯಿಟ್ಟು ೧ ಜಾವ ಬೇಯಿಸುವದು. ಅನಂತರ ಬಟ್ಟೆಗಂಟು ತೆಗೆದುಕೊಂಡು ತಣ್ಣೀರಿನಲ್ಲಿ ತೊಳೆದು ಬಟ್ಟೆ ತೆಗದುಹಾಕಿ ಬಿಸಲಿನಲ್ಲಿಟ್ಟು ಒಣಗಿಸಿಕೊಳ್ಳು

ವದು. ಮುಂಡೆಕಳ್ಳಿ ತಂದು ಸಣ್ಣದಾಗಿ ಕತ್ತರಿಸಿ ಒಂದು ಮಡಕೆಗೆ ಹಾಕಿ ಅದಕ್ಕೆ ಗೋಮೂತ್ರ ೧ ಶೇರು ಹಾಕಿ ಬಾಯಿಗೆ ಬಟ್ಟೆಕಟ್ಟಿ ಅದರಮೇಲೆ ಮೇಲ್ಕಂಡ ಶುದ್ಧಿಮಾಡಿದ ಪರಂಗಿಚಕ್ಕೆಯಿಟ್ಟು ಮೇಲೆ ಮುಚ್ಚಳಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ವಲೆಯಮೇಲೆಯಿಟ್ಟು ಮೂತ್ರ ಹಿಂಗುವವರಿಗು ಬೇಯಿಸಿ ತೆಗದು ಒಣಗಿಸಿ ಇಟ್ಟುಕೊಳ್ಳುವದು. ಇದೇರೀತಿ ಶ್ರೀತುಳಸಿ ರಸದಲ್ಲಿ ೧ ಭಾವನೆ, ಗರುಗಪಸೊಪ್ಪಿನ ರಸದಲ್ಲಿ ೧ ಭಾವನೆ, ಕರೇಲಕ್ಕಲಿಸೊಪ್ಪಿನ ರಸದಲ್ಲಿ ೧ ಭಾವನೆ, ಆಡಿನ ಹಾಲಿನಲ್ಲಿ ೧ ಭಾವನೆ, ಹಸುವಿನ ಹಾಲಿನಲ್ಲಿ ೧ ಭಾವನೆಮಾಡಿ ಒಣಗಿಸಿಕೊಳ್ಳುವದು. ಅನಂತರ ಹಸುವಿನತುಪ್ಪದಲ್ಲಿ ಈ ಚೂರ್ಣಹಾಕಿ ಸುಮಾರಾಗಿ ಹುರದುಕೊಳ್ಳುವದು. ತ್ರಿಕಟುಕ ೩ ತೊಲೆ, ಲವಂಗ, ಲವಂಗಪತ್ರೆ, ದಾಲಚಿನ್ನಿ, ನಾಗಕೇಸರಿ, ವಾಯವಿಳಂಗ, ಜಾಕಾಯಿ, ಚಿತ್ರಮೂಲ, ಶುದ್ಧಿಮಾಡಿದ ಲಾಲುತಿಗಡು, ಗಂಟುಭಾರಂಗಿ, ಬ್ರಹ್ಮದಂಡೆ, ಭದ್ರಮುಸ್ತೆ, ಗಜಹಿಪ್ಪಲಿ, ವೋಮ, ಮೋಡಿ, ಮರದರಿಸಿನ, ಸಣ್ಣರಾಸ್ಮೆ ಕರ್ಕಾಟಕಶೃಂಗಿ, ಕಟುಕರೋಹಿಣಿ, ಅಕ್ಕಲಕರೆ, ಜಂಗಲಕೋಷ್ಟ, ತಾಳೀಸಪತ್ರೆ, ಗ್ರಂಧಿಕತಗರ, ಜಟಾಮಾಂಸಿ ಇವು ಜಿನಸಿಗೆ ೧ ತೊಲೆ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಕಷಾಯದ ಜಿನಸು :—ಕರೇವುಪ್ಪಿ, ಬಿಳೇವುಪ್ಪಿ, ಚಿಕ್ಕನೆಗ್ಗಿಲುಬೇರು, ಬಿಲ್ಪತ್ರೆಬೇರು, ನೆಲಕುಂಬಳದಗಡ್ಡೆ, ಒಂದೆಲಗದಬೇರು, ಪಾದ್ರಿಬೇರು, ಶ್ರೀತುಳಸಿಬೇರು ಇದು ಸಮಾಂಶ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಇಟ್ಟುಕೊಳ್ಳುವದು. ಮೇಲ್ಕಂಡ ಚೂರ್ಣಕ್ಕೆ ಎರಡೆರಷ್ಟು ರಾಯಪುಡಿಸಕ್ಕರೆ ಒಂದು ಬಾಂಡ್ಲಿಯಲ್ಲಿ ಕಷಾಯ ಹಾಕಿ ವಲೆಯಮೇಲೆಯಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೆ ಮೇಲ್ಕಂಡ ಚೂರ್ಣಹಾಕಿ ಜೇನುತುಪ್ಪ ಅಚ್ಚೇರುಹಾಕಿ ಪಕ್ವವಾಗಿ ಲೇಹ ತಯಾರುಮಾಡಿ ೧೧ ದಿವಸ ಧಾನ್ಯಪುಟದಲ್ಲಿಟ್ಟು ತೆಗೆದುಕೊಳ್ಳುವದು. ಹೊತ್ತಿಗೆ ಯಲಚೀಬೀಜದಷ್ಟು ಬೆಳಿಗ್ಯೆ ಸಾಯಂಕಾಲ ೭-೧೪ ದಿನ ಕೊಡುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಅಶೀತಿವಾಯುಗಳು, ಕಾಸ, ಉಬ್ಬಸ, ವಿಂಶತಿಮೇಹ, ಸಕಲ ವಾಯುಗಳು ಗುಣವಾಗುವವು.

೩೨. ಶೊಂಟಿ ೩ ತೊಲೆ, ಶುದ್ಧಿಮಾಡಿದ ಪರಂಗಿಚಕ್ಕೆ ೨ ತೊಲೆ, ಮೆಣಸು ೧ ತೊಲೆ, ಲವಂಗಚಕ್ಕೆ ॥ ತೊಲೆ, ಶುದ್ಧಿಮಾಡಿದ ಬಿಳೇಧೂಪ ೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಜೇನುತುಪ್ಪ ೧೫ ತೊಲೆ ಒಂದು ಬಾಂಡ್ಲಿಯಲ್ಲಿ ಹಾಕಿ ವಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬರುತ್ತಲೇ ಮೇಲ್ಕಂಡ ಚೂರ್ಣಹಾಕಿ ಲೇಹದಂತೆ ಮಾಡಿ ಹೊತ್ತಿಗೆ ॥ ತೊಲೆಯಂತೆ ಬೆಳಿಗ್ಯೆ ಸಾಯಂಕಾಲ ೯ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವಾಯುಗಳು ಗುಣವಾಗುವದು.

೩೩. ಹೊಂಗೇಚಕ್ಕೆ ರಸ ೧ ಪಾವು, ಮೆಣಸು ೧ ಪಾವು, ಬೆಲ್ಲ ೧ ಪಾವು, ಒಳ್ಳೆಯೆಳ್ಳು ೧ ಪಾವು, ಒಣಕೊಬರಿ ೧ ಪಾವು ಇವುಗಳನ್ನು ವರಳಿನಲ್ಲಿ ಹಾಕಿ ಚನ್ನಾಗಿ ಕುಟ್ಟಿ ಲೇಹದಂತೆ ಮಾಡಿ ಹೊತ್ತಿಗೆ || ತೊಲೆಯಂತೆ ಬೆಳಿಗ್ಯೆ ಸಾಯಂಕಾಲ ೯ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವಾಯುವು ಗುಣವಾಗುವದು.

೩೪ ಶುದ್ಧಿಮಾಡಿದ ಹಿಂಗು ೧ ತೊಲೆ, ಸೈಂಧರಲವಣ ೧ ತೊಲೆ, ಸೂರ್ತಿ ಬೆಳಗಾರ ಅರಳುಮಾಡಿದ್ದು ೧ ತೊಲೆ, ಬಿಡಾಲವಣ ೧ ತೊಲೆ, ಶೊಂಟಿ ೩ ತೊಲೆ, ಲವಂಗ ೧ ತೊಲೆ, ಮೋಡಿ ೧ ತೊಲೆ, ಹೊಟ್ಟುಸುಲಿದ ಜೆಳ್ಳುಳ್ಳಿ ೩ ತೊಲೆ ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಅರಿಯುವ ಜಿನಸುಗಳನ್ನು ಅರೆದು ಎಲ್ಲವನ್ನು ಕಲ್ವದಲ್ಲಿ ಹಾಕಿ ನುಗ್ಗೇಚಕ್ಕೆ ರಸದಲ್ಲಿ ಮರ್ದಿಸಿ ಯಲಚೀಬೀಜದಷ್ಟು ಮಾತ್ರೆಗಳು ಮಾಡಿ ಬೆಳಿಗ್ಯೆ ೧ ಮಾತ್ರೆ ಸಾಯಂಕಾಲ ೧ ಮಾತ್ರೆ ಬಾಯಲ್ಲಿ ಹಾಕಿಕೊಂಡು ಬಿಸಿನೀರು ಕುಡಿಯುವದು. ಹೀಗೆ ೭ ದಿವಸ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೈಕಾಲು ಚಳುಕು, ಸಮಸ್ತ ವಾಯುಗಳು ಗುಣವಾಗುವದು.

೩೫. ಸೌವರ್ಚಲವಣ, ಬಿಡಾಲವಣ, ಪಾದರಿಲವಣ, ಚೌಳುಪ್ಪು, ಯವಕ್ಷಾರ, ಸಜ್ಜುಕ್ಷಾರ, ತವಕ್ಷೀರ, ಸೂರ್ತಿಬೆಳಗಾರ ಅರಳುಮಾಡಿದ್ದು, ಶುದ್ಧಿಮಾಡಿದ ಹಿಂಗು, ಮೋಡಿ ಇವು ಜಿನಸಿಗೆ ೧-೧ ತೊಲೆ ಇವೆಲ್ಲವನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಮುಂಡಗಳ್ಳಿಹಾಲಿನಲ್ಲಿ ಮರ್ದಿಸಿ ಹಣತೆಯಲ್ಲಿಟ್ಟು ಒಣಗಿಸಿ ಮೇಲೆ ಹಣತೆ ಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಕುಕ್ಕುಟ ಪುಟಹಾಕಿ ತೆಗೆದುಕೊಂಡು ಖಲ್ವದಲ್ಲಿ ಹಾಕಿ ತಣ್ಣೀರಿನಲ್ಲಿ ಅರದು ಕಡಲೇಕಾಳು ಪ್ರಮಾಣ ಮಾತ್ರೆಮಾಡಿ ಬೆಳಿಗ್ಯೆಹೊತ್ತು ೧ ಮಾತ್ರೆ ಬೆಲ್ಲದಲ್ಲಿಟ್ಟು ಕೊಡುವದು ಈರೀತಿ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ ಇದರಿಂದ ಸಕಲ ವಾಯುಗಳು, ಮುಖ್ಯವಾಗಿ ಹೊಟ್ಟೆನೋವು, ಅಜೀರ್ಣ, ಶೂಲೆ ಗುಣವಾಗುವವು.

೩೬. ಯೋಗರಾಜ ಗುಗ್ಗುಲ :—ಹಿಪ್ಪಲಿ, ಮೋಡಿ, ಚವ್ಯ, ಚಿತ್ರಮೂಲ, ಶೊಂಟಿ, ವಾಯುವಿಳಂಗ, ಕೊಡಸಿಗೆಬೀಜ, ಅಗಿಲುಶೊಂಟಿ, ಬಜೆ, ಶುದ್ಧಿಮಾಡಿದ ಹಿಂಗು, ಸಾಸುವೆ, ಗಂಟುಭಾರಂಗಿ, ಬಿಳೇಜೀರಿಗೆ, ಅತಿಬಜೆ, ರೇಣುಕೆ, ಗಜಹಿಪ್ಪಲಿ, ಖುರಾಸಾನಿವೋಮ, ಕಟುಕರೋಹಿಣಿ ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇದಕ್ಕೆ ದ್ವಿಗುಣ ತ್ರಿಫಲೆಚೂರ್ಣ, ಇದಕ್ಕೆಲ್ಲಾ ಸಮ ಶುದ್ಧಿಮಾಡಿದ ಮೈಸಾಕ್ಷಿಗುಗ್ಗುಲ ಶೇರಿಸಿ ಚೂರ್ಣಮಾಡಿ ಎಲ್ಲವನ್ನು ಶೇರಿಸಿಕೊಳ್ಳುವದು. ಹೊತ್ತಿಗೆ || ತೊಲೆ ಪ್ರಮಾಣ ಬೆಳಿಗ್ಯೆ ಸಾಯಂಕಾಲ

ಜೇನುತುಪ್ಪದಲ್ಲಿ ಕಲಸಿ ೭ ದಿವಸ ತೆಗೆದುಕೊಳ್ಳಬೇಕು. ಇದಕ್ಕೆ ಪತ್ಯ ತೊಗರೀ ಬೇಳೆ ಸಿಹಿಸಾರು ಅನ್ನ. ಇದರಿಂದ ಮೇಹವಾಯು, ಮೂಲರೋಗ, ಗುಲ್ಮ ರೋಗ, ಮೇಹವ್ರಣ, ಕುಷ್ಠ ಇವುಗಳು ಗುಣವಾಗುವವು.

೩೭. ಗುಗ್ಗಿಲ ತ್ರಿಫಲೆ ಕಷಾಯದಿಂದ ಡೋಲಾಯಂತ್ರದಲ್ಲಿ ೪ ಗಳಿಗೆ ಬೇಯಿಸಿ ತಣ್ಣೀರಿನಲ್ಲಿ ೧೦ ಸಲ ತೊಳದು ಬಿಸಲಿನಲ್ಲಿ ಒಣಗಿಸಿ ಇರಿಸಿಕೊಂಡದ್ದು ೧ ಪಾವು, ತ್ರಿಫಲ, ದಾಲಚಿನ್ನಿ, ಲವಂಗಪತ್ರೆ, ನಾಗಕೇಸರಿ, ಯಾಲಕ್ಕಿ ಈ ಜಿನಸಿಗಳು ಪ್ರತಿಯೊಂದು ೧-೧ ಪಾವು, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಹೊತ್ತಿಗೆ ॥ ತೊಲೆ ಹಸುವಿನತುಪ್ಪದಲ್ಲಿ ಕೊಡಬೇಕು. ಹೀಗೆ ಬೆಳಿಗ್ಯೆ ಸಾಯಂಕಾಲ ೧೧ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಮೇಹ, ಮೇಹವಾಯು ಗುಣವಾಗುವದು.

೩೮. ವೋಮ ೧ ಶೇರು, ಹಿಪ್ಪಲಿ ೧ ಪಾವು, ಮೆಣಸು ೧ ಪಾವು, ಉಪ್ಪು ೧ ಪಾವು, ಚಿತ್ರಮೂಲ ೧॥ ತೊಲೆ, ಶುದ್ಧಿಮಾಡಿದ ಹಿಂಗು ॥ ತೊಲೆ, ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಅರಿಯುವ ಜಿನಸುಗಳನ್ನು ಅರದು ಎಲ್ಲವನ್ನು ಶೇರಿಸಿ ಇಟ್ಟುಕೊಳ್ಳುವದು ಹಳೇಬೆಲ್ಲ ೨ ಶೇರು ತಂದು ಒಂದು ಬಾಂಡ್ಲಿಯಲ್ಲಿ ಹಾಕಿ ನೀರುಹಾಕಿ ವಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣಹಾಕಿ ಪಕ್ವವಾಗಿ ಲೇಹಮಾಡಿ ಹೊತ್ತಿಗೆ ॥ ತೊಲೆಯಂತೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭-೧೪ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವಾಯುವು, ಕೈಕಾಲು ನೋವು, ಹೊಟ್ಟೆಕುಟ್ಟು, ಹೊಟ್ಟೆ ವುಂತ ಗುಣವಾಗುವದು.

೩೯. ವಾ ತ ರಾ ಕ್ಷ ಸಿ ಕ ಷಾ ಯ :—ಯಕ್ಕದಬೇರು, ಚಿತ್ರಮೂಲ, ಇಂಗಳದಬೇರು, ಗರುಗದಸೊಪ್ಪು, ಸುಗ್ಗೀಬೇರು, ತುಪ್ಪದದೇವದಾರು, ಬಿಳೇಕೊಮ್ಮೆ, ಬೋಳದರಗ, ಚಿಟ್ಟೆರಳುಬೇರು, ತಪಶಿಚಕ್ಕೆ, ಬಜೆ, ಶೊಂಟಿ, ಮೆಣಸು, ವೋಮ, ಸಣ್ಣರಾಸ್ಮೆ, ಮೋಡಿ, ಚವ್ಯ, ಹೊಟ್ಟುಸುಲಿದ ಬೆಳ್ಳುಳ್ಳಿ, ಚಂಗಲಕೋಷ್ಟ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಹೊತ್ತಿಗೆ ೨ ತೊಲೆ, ಹಿಪ್ಪಲಿಚೂರ್ಣ ಕಾಲುತೊಲೆ ಬೆರಸಿ ತೆಗೆದು ಕೊಳ್ಳಬೇಕು. ಹೀಗೆ ಬೆಳಿಗ್ಯೆ ಸಾಯಂಕಾಲ ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಕಲ ವಾಯುಗಳು ಗುಣವಾಗುವದು.

೪೦. ಶೊಂಟಿ ೨ ತೊಲೆ, ಮೋಡಿ ೨ ತೊಲೆ, ಮೆಣಸು ೨ ತೊಲೆ, ಚವ್ಯ ೨ ತೊಲೆ, ವೋಮ ೨ ತೊಲೆ, ಸಣ್ಣರಾಸ್ಮೆ ೪ ತೊಲೆ, ತಪಶಿಚಕ್ಕೆ ೫ ತೊಲೆ,

ಇಂಗಳದಚಕ್ಕೆ ೫ ತೊಲೆ, ಶುದ್ಧಿಮಾಡಿದ ಲಾಲುತಿಗಡೆ ೫ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಹೊತ್ತಿಗೆ ॥ ತೊಲೆ ಚೂರ್ಣ ಬಿಸಿನೀರಿನಲ್ಲಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೭ ದಿವಸ ಕೊಡುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವಾಯುವು ಗುಣವಾಗುವದು.

೪೧. ಬಿಳೇಜೀರಿಗೆ, ವೋಮ, ಹೊಟ್ಟುತೆಗೆದ ಬೆಳ್ಳುಳ್ಳಿ ಇವು ಸಮಭಾಗ, ಇದಕ್ಕೆ ಸಮ ಶುದ್ಧಿಮಾಡಿದ ಗೇರುಬೀಜ, ಗೇರುಬೀಜದ ಸಮ ಎಳ್ಳು, ಎಳ್ಳಿಗೆ ಸಮ ಬೆಲ್ಲ ಇವುಗಳನ್ನು ಚನ್ನಾಗಿ ಕುಟ್ಟಿ ಖಲ್ವದಲ್ಲಿ ಹಾಕಿ ಗರುಗದಸೊಪ್ಪಿನ ರಸದಲ್ಲಿ ಮರ್ದಿಸಿ ಯಲಚೀಬೀಜದಷ್ಟು ಮಾತ್ರೆಗಳು ಮಾಡಿ ಹೊತ್ತಿಗೆ ೧ ಮಾತ್ರೆ ಬಾಯಲ್ಲಿ ಹಾಕಿಕೊಂಡು ತಣ್ಣೀರು ಕುಡಿಯುವದು. ಈರೀತಿ ಬೆಳಿಗ್ಗೆಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಾರ್ಶ್ವವಾಯು ಗುಣವಾಗುವದು.

೪೨. ಯೋಗರಾಜ ಗುಗ್ಗುಲ:—ಶೊಂಟಿ, ಹಿಪ್ಪಲಿ, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಮೆಣಸು, ಭದ್ರಮುಸ್ತೆ, ವಾಯುವಿಳಂಗ, ಚವ್ಯ, ಚಿತ್ರಮೂಲ, ಯಾಲಕ್ಕಿ, ಗ್ರಂಥಿಕತಗರ, ಬಿಳೇಜೀರಿಗೆ, ಕರೇಜೀರಿಗೆ, ರೇಣುಕೆ, ತುಪ್ಪದದೇವದಾರು, ವೋಡಿ, ಬಜೆ, ಅತಿಬಜೆ, ಅರಸಿನ, ಮರದರಿಸಿನ, ಅಗಿಲುಶೊಂಟೆ, ಮಂಜಿನಾರುಬೇರು, ಹಾವುಮೆಕ್ಕೇಬೇರು, ಹೊಟ್ಟುಸುಲಿದ ಬೆಳ್ಳುಳ್ಳಿ, ಚಿಟ್ಟಾಮುಟ್ಟಿಬೇರು, ಶುದ್ಧಿಮಾಡಿದ ಹಿಂಗು, ಸಾಸುವೆ, ಅಜಾವೊದ, ಗಂಟುಭಾರಂಗಿ, ಕೋಲುಮುರುಕುಚಕ್ಕೆ, ಬಿಡಾಲವಣ, ಸೌವರ್ಚಲವಣ, ಸೈಂಧರಲವಣ, ಗಜಹಿಪ್ಪಲಿ ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇದಕ್ಕೆ ಸಮಭಾಗ ಶುದ್ಧಿಮಾಡಿದ ಮೈಸಾಕ್ಷಿಗುಗ್ಗುಲ ಚೂರ್ಣ ಶೇರಿಸಿ ಎಲ್ಲವನ್ನು ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ॥ ತೊಲೆ ಚೂರ್ಣ ಹಸುವಿನ ತುಪ್ಪದಲ್ಲಾಗಲಿ, ಜೇನುತುಪ್ಪದಲ್ಲಾಗಲಿ ಕಲಸಿ ತೆಗೆದುಕೊಳ್ಳಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೭-೧೪ ದಿವಸ ಕೊಡುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ: ಇದರಿಂದ ಸಕಲ ವಾಯುಗಳು ಗುಣವಾಗುವದು.

೪೩. ಮಹಾಲಶುನಪಿಷ್ಟ:—ಪಂಚಕೋಲ, ಅಶ್ವಗಂಧಿ, ಸಜ್ಜಕ್ಷಾರ, ಯವಕ್ಷಾರ, ಪಂಚಲವಣ, ಸಣ್ಣರಾಸ್ಮೆ, ಶುದ್ಧಿಮಾಡಿದ ಹಿಂಗು, ಮೆಣಸು, ಗಜಹಿಪ್ಪಲಿ, ವಾಯುವಿಳಂಗ, ಬಿಳೇಜೀರಿಗೆ, ವೋಮ, ಅರಿಸಿನ, ಹಾವುನಂಜಿನ ಸೊಪ್ಪು, ಚಂಗಲಕೋಷ್ಟ, ಅಗಿಲುಶುಂಠಿ, ಬಿಳೇಕೊಮ್ಮೇಬೇರು, ತಪಸಿಚಕ್ಕೆ, ಸೋಪುಬೀಜ ಇವು ಜಿನಸಿಗೆ ೧-೧ ತೊಲೆ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಹೊಟ್ಟುಸುಲಿದ ಬೆಳ್ಳುಳ್ಳಿ ೧। ಶೇರು ವರಳಲ್ಲಿ ಹಾಕಿ ರುಬ್ಬಿ ಚಿಟ್ಟರಳೆಣ್ಣೆ

೧। ಶೇರು ಹಾಕಿ ಮೇಲ್ಕಂಡ ಎಲ್ಲಾ ಜಿನಸುಗಳನ್ನು ಕಲಸಿ ಒಂದು ಪಳಗಿದ ಮಡಿಕೆಯಲ್ಲಿ ಹಾಕಿ ಮುಚ್ಚಳ ಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಧಾನ್ಯ ಪುಟದಲ್ಲಿ ೧೦ ದಿನ ಇಟ್ಟು ತೆಗೆದುಕೊಂಡು ಹೊತ್ತಿಗೆ ಗಜ್ಜುಗದ ಪ್ರಮಾಣ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡುವದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಅಶೀತವಾತ, ಧನುರ್ವಾತ, ಪಕ್ಷಾಘಾತ, ಸೂಚಿಕಾವಾತ, ಸರ್ವಾಂಗಸನ್ನಿವಾತ, ಶಿರೋವಾತ, ವಾತಗುಲ್ಮ, ಮಂದಾಗ್ನಿ ಇವು ಗುಣವಾಗುವದು.

೪೪. ವೃದ್ಧದಾರುಕ ಚೂರ್ಣ:—ಹಿಪ್ಪಲಿ, ಮೋಡಿ, ಚವ್ಯ, ಚಿತ್ರಮೂಲ, ಶೊಂಟಿ, ದಾಲಚಿನ್ನಿ, ಲವಂಗಪತ್ರಿ, ನಾಗಕೇಸರಿ, ಯಾಲಕ್ಕಿ, ಲವಂಗ, ಜಾಕಾಯಿ, ಜಾಪತ್ರಿ, ಮೆಣಸು, ತುಪ್ಪದದೇವದಾರು, ದುಂಪರಾಸ್ಮೆ, ಚಂಗಲಕೋಷ್ಟ, ವಾಯುವಿಳಂಗ, ವೋಮ, ಬಿಳೇಜೀರಿಗೆ, ಗಂಟುಭಾರಂಗಿ, ತಾಳೀಸಪತ್ರಿ ಇವು ಸಮಭಾಗ, ಇದಕ್ಕೆ ಸಮ ಶುದ್ಧಿಮಾಡಿದ ಪರಂಗಿಚಕ್ಕೆ ಇವೆಲ್ಲವನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇದಕ್ಕೆ ಸಮಸಕ್ಕರೆ ಹಾಕಿ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ॥ ತೊಲೆ ಚೂರ್ಣ ಜೇನುತುಪ್ಪದಲ್ಲಿ ಆಗಲಿ ಅಥವಾ ಬಿಸಿನೀರಿನಲ್ಲಿ ಆಗಲಿ ತೆಗೆದುಕೊಳ್ಳುವದು. ಈರೀತಿ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿವಸ ಕೊಡುವದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಊರುಸ್ತಂಭವಾತ, ಆಮವಾತ, ಧನುರ್ವಾತ, ಸುಪ್ತವಾತ ಮೊದಲಾದ ಸಮಸ್ತ ವಾಯುರೋಗಗಳು ಗುಣವಾಗುವದು.

೪೫ ವಾತರಾಕ್ಷಸ ಚೂರ್ಣ:—ರಾಮಗುಳ್ಳ, ಇಂಗಳದಹಣ್ಣು, ಕೋಲುಮುರಕನಚಕ್ಕೆ, ಚವ್ಯ, ಚಿತ್ರಮೂಲ, ಆಡುಸೋಗೆಸೊಪ್ಪು, ಜುಟ್ಟುವೇಸೊಪ್ಪು, ಕರೇಲಕ್ಕಲಿಸೊಪ್ಪು, ಬಲರಾಕ್ಷಸಿಗಡ್ಡೆ, ಕಾಡುಚೂರ್ಣದಗಡ್ಡೆ, ಹಾವುಮೆಕ್ಕೆಕಾಯಿ, ಮಂಗರವಳ್ಳಿ, ಗರುಗದಸೊಪ್ಪು ಇವು ಜಿನಸಿಗೆ ೧-೧ ತೊಲೆ, ತ್ರಿಕಟುಕ, ವಾಯುವಿಳಂಗ, ಅಜಾಮೋದ, ಖುರಾಸಾನಿವೋಮ, ಚಂಗಲಕೋಷ್ಟ, ಜಾಕಾಯಿ, ಜಾಪತ್ರಿ, ಲವಂಗ, ಲವಂಗಪತ್ರಿ, ತಾಳೀಸಪತ್ರಿ ಅಗಿಲುಶೊಂಟಿ, ದುಂಪರಾಸ್ಮೆ, ಯವಕ್ಷಾರ, ಸೈಂಧರಲವಣ, ತ್ರಿಫಲೆ, ಅಕ್ಕಲಕರೆ, ಅತಿಮಧುರ, ಕರ್ಕಾಟಕಶೃಂಗಿ, ರೇಣುಕೆ, ಜಟಾಮಾಂಸಿ, ಶುದ್ಧಿಮಾಡಿದಹಿಂಗು, ಧಾತಕೀಕುಸುಮ, ಶುದ್ಧಿಮಾಡಿದ ಪರಂಗಿಚಕ್ಕೆ, ಮೋಡಿ, ಗಂಟುಭಾರಂಗಿ ಇವು ಜಿನಸಿಗೆ ೨-೨ ತೊಲೆ, ಇವುಗಳೆಲ್ಲವನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಹೊತ್ತಿಗೆ ॥ ತೊಲೆ ಚೂರ್ಣ ಜೇನುತುಪ್ಪದಲ್ಲಿ ಕಲಸಿ ತೆಗೆದುಕೊಳ್ಳುವದು. ಹೀಗೆ ಬೆಳಿಗ್ಗೆ ಸಾಯಂಕಾಲ೨ ಹೊತ್ತು ೧೪ ದಿವಸ ಸೇವನೆಮಾಡುವದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೀಲುವಾಯು, ಡಮರುಕವಾಯು, ಪಾರ್ಶ್ವವಾಯು, ಶಿರೋವಾಯು ಮೊದಲಾದ ವಾತರೋಗಗಳೆಲ್ಲಾ ಗುಣವಾಗುವದು.

೪೬. ನೆಲತಾಟಿಗಡ್ಡೆ ೨ ತೊಲೆ, ವೋಮ ೧ ತೊಲೆ, ಪಾದರಸ ಭಸ್ಮ ಕಾಲುತೊಲೆ, ಶುದ್ಧಿಮಾಡಿದ ಗೇರುಬೀಜ ‖ ತೊಲೆ, ಸುಟ್ಟಕೊಬರಿ ೧‖| ತೊಲೆ, ತಾಟಿಬೆಲ್ಲ ೪‖| ತೊಲೆ, ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣ ಮಾಡಿ ಅರಿಯುವ ಜಿನಸುಗಳನ್ನು ಅರದು ಎಲ್ಲವನ್ನು ಒರಳಲ್ಲಿ ಹಾಕಿ ಕುಟ್ಟಿ ಕಡಲೆಕಾಳಿನಷ್ಟು ಮಾತ್ರೆಮಾಡಿ ಬೆಳಿಗ್ಯೆ ೧ ಮಾತ್ರೆ ಬಾಯಲ್ಲಿ ಹಾಕಿಕೊಂಡು ಬಿಸಿನೀರು ಕುಡಿಯುವದು. ಹೀಗೆ ೭ ದಿವಸ ಕೊಡಬೇಕು. ಇದಕ್ಕೆ ಪತ್ಯ ಹಸುವಿನ ಹಾಲು ಅನ್ನ. ಇದರಿಂದ ಪಾರ್ಶ್ವವಾಯು ಗುಣವಾಗುವದು.

೪೭. ಶೊಂಟಿ, ಮೆಣಸು, ನಾಗಕೇಸರಿ, ವಾಯುವಿಳಂಗ, ಲವಂಗ, ಗಂಟು ಭಾರಂಗಿ, ಶುದ್ಧಿಮಾಡಿದ ಪರಂಗಿಚಕ್ಕೆ, ಚಿತ್ರಮೂಲ, ಬಿತ್ತ್ತದಗಡ್ಡೆ, ಹಾಲು ವಾಣದಬೇರುಬೊಬ್ಬಡೆ, ತೊಟ್ಲಬೇರುಬೊಬ್ಬಡೆ, ಖುರಾಸಾನಿವೋಮ, ನೆಲ ತಾಟಿಗಡ್ಡೆ, ಮಜ್ಜಿಗೆಗಡ್ಡೆ, ತಾಳೀಸಪತ್ರೆ, ಸೈಂಧರಲವಣ ಇವು ಜಿನಸಿಗೆ ೧-೧ ತೊಲೆಯಂತೆ ತಂದು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿಕೊಂಡು ಸ್ವಲ್ಪ ಜೇನುತುಪ್ಪ ಹಾಕಿ ಕಲಸಿ ಹೊತ್ತಿಗೆ ೨ ತೊಲೆ, ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡುವದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಮೇಹವಾಯು, ಬೆನ್ನುನೋವು ಗುಣವಾಗುವದು.

೪೮. ಮುಂಡಕಳ್ಳಿಹಾಲು ತಂದು ದಪ್ಪವಾದ ಬಟ್ಟೆಗೆ ೧ ಭಾವನೆಮಾಡಿ ಬಿಸಲಿನಲ್ಲಿ ಒಣಗಿಸುವದು. ಈರೀತಿ ೭ ಭಾವನೆ ಮಾಡುವದು. ಕಸ್ತೂರಿ ಅರ ಸಿನ ಮುಂಡಕಳ್ಳಿಹಾಲಿನಲ್ಲಿ ಅರದು ೭ ಭಾವನೆಮಾಡಿ ಬಿಸಲಿನಲ್ಲಿ ಒಣಗಿಸಿಕೊಳ್ಳು ವದು. ದೊಡ್ಡ ತಂಗಡಿಕಟ್ಟೆಗೆಗೆ ಈ ಬಟ್ಟೆ ಸುತ್ತಿ ಚಿಟ್ಟರಳಣ್ಣೆಯಲ್ಲಿ ನೆನಸಿ ಬೆಂಕಿ ಹಚ್ಚಿಸಿ ಕೆಳಗೆ ಒಂದು ಬಟ್ಟಲು ಇಡುವದು. ತೈಲಬರುತ್ತದೆ. ಈ ತೈಲ ವನ್ನು ವೀಳೆದೆಲೆಯಲ್ಲಿ ೨ ಬೊಟ್ಟು ಹಾಕಿ ಮಡಚಿ ಅಗಿದು ತಿನ್ನುವದು. ಈರೀತಿ ಬೆಳಿಗ್ಯೆಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೀಲುವಾಯು, ಚಳುಕು ಗುಣವಾಗುವದು.

೪೯. ಪರಂಗ್ಯಾದಿ ಚೂರ್ಣ:—ಜಾಕಾಯಿ, ಜಾಪತ್ರೆ, ಲವಂಗ, ಹಿಪ್ಪಲಿ, ತಾಳೀಸಪತ್ರೆ, ಅಕ್ಕಲಕರೆ, ಚಂಗಲಕೋಷ್ಟ, ಅತಿಮಧುರ, ಬಿಳೇಜೀರಿಗೆ, ಕರೇ ಜೀರಿಗೆ, ಶುಂಠಿ, ಅಗಿಲುಶೊಂಟಿ, ವೋಮ, ದಾಲಚಿನ್ನಿ, ಗಜಹಿಪ್ಪಲಿ, ಆಳಲೇ ಕಾಯಿಸಿಪ್ಪೆ, ಗಂಟುಭಾರಂಗಿ, ಚಿರಾಯಿತ, ಸೂರ್ತಿಬೆಳಗಾರ ಅರಳುಮಾಡಿದ್ದು, ಬಜೆ, ದುಂಪರಾಷ್ಮೆ, ಮರದರಿಸಿನ, ಮೆಣಸು ಇವು ಸಮಭಾಗ, ಇದಕ್ಕೆ ಸಮ ಭಾಗ ಶುದ್ಧಿಮಾಡಿದ ಪರಂಗಿಚಕ್ಕೆ ಇವುಗಳೆಲ್ಲವನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇದಕ್ಕೆ ಗರುಗದಸೊಪ್ಪಿನ ರಸದಲ್ಲಿ ೧ ದಿನ ಭಾವನೆಮಾಡಿ ಬಿಸಲಿನಲ್ಲಿ

ಒಣಗಿಸುವದು. ಲಕ್ಕಲಿಸೊಪ್ಪಿನ ರಸದಲ್ಲಿ ೧ ದಿನ ಭಾವನೆ, ಜುಟ್ಟುವೇ ಸೊಪ್ಪಿನ ರಸದಲ್ಲಿ ೧ ದಿನ ಭಾವನೆಮಾಡಿ ಬಿಸಲಿನಲ್ಲಿ ಒಣಗಿಸಿಕೊಳ್ಳುವದು. ಇದಕ್ಕೆ ಸಮಭಾಗ ಸಕ್ಕರೆ ಕಲಸಿ ಹೊತ್ತಿಗೆ ||| ತೊಲೆ ಜೇನುತುಪ್ಪದಲ್ಲಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೭ ದಿನಸ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಮಸ್ತ ವಾಯುಗಳು ಗುಣವಾಗುವದು.

೫೦. ಚೇಕೊಡತಿಸೊಪ್ಪಿನ ರಸ ೧ ಸೊಲಿಗೆ, ಬುಡ್ಡಹಾಗಲಸೊಪ್ಪಿನ ರಸ ೧ ಸೊಲಿಗೆ, ಕಾಚೀಸೊಪ್ಪಿನ ರಸ ೧ ಸೊಲಿಗೆ, ಗಜ್ಜುಗದಸೊಪ್ಪಿನಕುಡಿ ೧ ಹಿಡಿ ರಸ ತೆಗದದ್ದು, ಮೆಣಸು ಚೂರ್ಣಮಾಡಿದ್ದು ಅರ್ಧಸೊಲಿಗೆ, ಹಸುವಿನತುಪ್ಪ ೪ ಸೊಲಿಗೆ ಇವು ಎಲ್ಲವನ್ನು ಘೃತಪಕ್ವವಾಗಿ ಕಾಯಿಸಿ ಹೊತ್ತಿಗೆ || ತೊಲೆ ಬೆಳಿಗ್ಗೆಹೊತ್ತು ತೆಗೆದುಕೊಳ್ಳಬೇಕು. ಈರೀತಿ ೫ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೀಲುವಾಯು ಗುಣವಾಗುವವು.

೫೧. ಗುಗ್ಗುಲಾದಿ ಚೂರ್ಣ:—ಶುದ್ಧಿಮಾಡಿದ ಹಿಂಗು, ಶೊಂಟಿ, ಮೆಣಸು, ಗಜಹಿಪ್ಪಲಿ, ಸಣ್ಣಹಿಪ್ಪಲಿ, ವೋಮ, ಕರೇಜೀರಿಗೆ, ಬಿಳೇಜೀರಿಗೆ, ವಾಯುವಿಳಂಗ, ಚಂಗಲಕೋಷ್ಟ, ಅಕ್ಕಲಕರೆ, ಕಟುಕರೋಹಿಣಿ, ಶುದ್ಧಿಮಾಡಿದ ಲಾಲುತಿಗಡು, ಸೈಂಧರಲವಣ, ಅರಿಸಿನ, ಅಮೃತಬಳ್ಳಿ, ಲವಂಗ, ನಾಗಕೇಸರಿ, ತಕ್ಕೋಲ, ಜಾಪತ್ರಿ, ಬಿಳೇಸಾಸುವೆ, ರೇಣುಕೆ, ಹಿಪ್ಪಲಿಮೂಲ, ಚಿತ್ರಮೂಲ, ಕೊತ್ತುಂಬರಿ ಬೀಜ, ಕೋಲುಮುಕ್ಕನಬೀಜ, ಚವ್ಯ ಇವೆಲ್ಲಾ ಸಮಭಾಗ ಕುಟ್ಟಿ ಚೂರ್ಣ ಮಾಡಿ ಶೋಧಿಸಿಕೊಳ್ಳುವದು. ಇದಕ್ಕೆ ಸಮಭಾಗ ಶುದ್ಧಿಮಾಡಿದ ಮೈಸಾಕ್ಷಿ ಗುಗ್ಗುಲ ಚೂರ್ಣಮಾಡಿ ಶೋಧಿಸಿ ಎಲ್ಲವನ್ನು ಸೇರಿಸಿ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ || ತೊಲೆ ಗೋಮೂತ್ರದಲ್ಲ ಆಗಲಿ, ಮೇಕೆಮೂತ್ರದಲ್ಲಿ ಆಗಲಿ, ಬಿಸಿನೀರಿನಲ್ಲಿ ಆಗಲಿ ೭-೧೪ ದಿನ ಕೊಡಬೇಕು. ಇದಕ್ಕೆ ಪತ್ಯ ತೊಗರೀ ಬೇಳೆ ಸಿಹಿಸಾರು ಅನ್ನ. ಇದರಿಂದ ಕೀಲುವಾಯು, ಕಾಲುಜೋಮು, ಊತ, ಶೋಭೆ, ಶೂಲೆ, ಗುಲ್ಮ, ವಾಯುಗಳು ಗುಣವಾಗುವವು.

೫೨. ವರಂಗ್ಯಾದಿಲೇಹ:—ಕಹಿಪಡವಲ, ಬೇವಿನಚಕ್ಕೆ, ತಪಸಿಚಕ್ಕೆ, ಚಿತ್ರಮೂಲ, ಕರೇಲಕ್ಕಲಿಬೇರು, ಇಂಗಳದಗಿಡದ ಬೇರು, ಬಿಳೇವುಪ್ಪೆಚಕ್ಕೆ, ಕರೇವುಪ್ಪೆಚಕ್ಕೆ ಇವು ಜಿನಸಿಗೆ ೧-೧ ಪಾವು ತಂದು ಚನ್ನಾಗಿ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವದು. ತುಪ್ಪದದೇವದಾರು, ಅಶ್ವಗಂಧಿ, ಸೈಂಧರಲವಣ, ವಾಯುವಿಳಂಗ, ಗಂಟುಭಾರಂಗಿ, ಲವಂಗ, ಜಟಾಮಾಂಸಿ, ನಾಗಕೇಸರಿ, ಅರಸಿನ, ಮರದರಿಸಿನ, ಜಾಕಾಯಿ, ಬಿಳೇಯಕ್ಕದ

ಬೇರಿನಚಕ್ಕೆ, ಶೊಂಟಿ, ಮೆಣಸು, ಹಿಪ್ಪಲಿ, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಆಗಿಲುಶೊಂಟಿ, ಯಾಲಕ್ಕಿ, ಹಾವುಮೆಕ್ಕೆಬೇರು, ಬಿಳಿಹಿಂಡಿಬೇರು, ಆನೇನೆಗ್ಗಿಲು ಇವು ಜಿನಸಿಗೆ ‖ ತೊಲೆಯಂತೆ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಶುದ್ಧಿಮಾಡಿದ ವೈಸಾಕ್ಷಿಗುಗ್ಗುಲ ೧ ಶೇರು ಇದು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಜೆಲ್ಲ ೨ ಶೇರು ತಂದು ಒಂದು ಬಾಂಡ್ಲಿಯಲ್ಲ ಹಾಕಿ ಅದಕ್ಕೆ ಮೇಲ್ಕಂಡ ಕಷಾಯವನ್ನು ಹಾಕಿ ಒಲೆಯಮೇಲಿಟ್ಟು ಉರಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಹಾಕಿ ಜೇನುತುಪ್ಪ ೨ ಶೇರು ಹಾಕಿ ಪಕ್ವವಾಗಿ ಲೇಹ ತಯಾರ್ಮಾಡಿಕೊಳ್ಳುವದು. ಹೊತ್ತಿಗೆ ‖ ತೊಲೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೬-೧೪ ದಿನ ತೆಗೆದುಕೊಳ್ಳಬೇಕು ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಮಸ್ತ ವಾಯುಗಳು ಗುಣವಾಗುವದು.

೫೩. ವಾರುಣ್ಯಾದಿ ತೈಲ :—ಉತ್ತರ ದಿಕ್ಕಿನಲ್ಲಿ ಹೋಗಿರುವ ಹಾವುಮೆಕ್ಕೇಕಾಯಿ ಬೇರು ೯ ತೊಲೆ ತಂದು ಕುಟ್ಟುವದು, ಒಳ್ಳೆಣ್ಣೆ ೧೨ ತೊಲೆ ನೀರು ೧೨ ತೊಲೆ ಹಾಕಿ ಪಕ್ವವಾಗಿ ಕಾಯಿಸಿ ಶೋಧಿಸಿಕೊಂಡು ಈ ತೈಲವನ್ನು ೧‖ ತೊಲೆ ಪ್ರಮಾಣ ಅನ್ನದಲ್ಲ ಹಾಕಿ ಸೇವಿಸುವದರಿಂದ ಕೈ ನಡುಗುವಿಕೆ, ತಲೆ ನಡುಗುವಿಕೆ ಇವುಗಳು ಗುಣವಾಗುವದು. ಹೀಗೆ ರೋಗ ಗುಣವಾಗುವವರಿವಿಗು ಸೇವಿಸಬೇಕು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ.

೫೪. ಶುದ್ಧಿಮಾಡಿದ ಇಂಗಳೀಕ ೧ ತೊಲೆ, ಶುದ್ಧಿಮಾಡಿದ ರಸಕರ್ಪೂರ ‖ ತೊಲೆ, ಶುದ್ಧಿಮಾಡಿದ ನಾಭಿ ೧ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ಇದಕ್ಕೆ ಕರೇಕಾಚಿಸೊಪ್ಪಿನ ರಸದಲ್ಲಿ ೧ ದಿನ ಮರ್ದನೆ, ಕೆಂಪುಕಾಚಿಸೊಪ್ಪಿನ ರಸದಲ್ಲ ೧ ದಿನ ಮರ್ದನೆ, ಗರುಗದಸೊಪ್ಪಿನ ರಸದಲ್ಲ ೧ ದಿನ ಮರ್ದನೆ, ಹಾಗಲದಸೊಪ್ಪಿನ ರಸದಲ್ಲಿ ೧ ದಿನ ಮರ್ದನೆ, ಜುಟ್ಟುವೇಸೊಪ್ಪಿನ ರಸದಲ್ಲಿ ೧ ದಿನ ಮರ್ದನೆ, ಲಕ್ಕಲಿಸೊಪ್ಪಿನ ರಸದಲ್ಲ ೧ ದಿನ ಮರ್ದನೆಮಾಡಿ ಉದ್ದಿನಕಾಳು ಪ್ರಮಾಣ ಮಾತ್ರೆಮಾಡಿ ನೆರಳಿನಲ್ಲ ಒಣಗಿಸಿಕೊಳ್ಳುವದು ಪಾರಿವಾಳದ ಹಕ್ಕಿಗೆ ೧ ಮಾತ್ರೆ ರಾತ್ರಿ ತಿನ್ನಿಸುವದು. ಬೆಳಗ್ಯೆ ಕುಯಿದು ಮಸಾಲೆ ಹಾಕಿ ತುಪ್ಪದಿಂದ ಬೇಯಿಸಿ ಗೋಧಿರೊಟ್ಟಿ ತುಪ್ಪ ಇದು ಊಟಮಾಡುವದು. ಈ ರೀತಿ ೯ ದಿವಸ ೯ ಹಕ್ಕಿ ತಿನ್ನುವದು, ಅಥವಾ ಮೇಕೆ ಮಾಂಸವನ್ನು ಕುಯಿದು ವಣಗಾಕಿ ಮಸಾಲೆ ಹಾಕಿ ತಿನ್ನಬಹುದು. ಮಾತ್ರೆಯನ್ನು ಜೇನುತುಪ್ಪದಲ್ಲಿ ಕಲಸಿ ತಿನ್ನಬಹುದು. ನೀರುಕುಡಿಯುವದಕ್ಕೆ ಅರ್ಧ ಬಿಸಿನೀರು ಅರ್ಧ ಜೇನುತುಪ್ಪ ಹಾಕಿ ಕಲಸಿಕೊಡುವದು, ರಾಗಿರೊಟ್ಟಿ ಚನ್ನಾಗಿ ಸುಟ್ಟು ತುಪ್ಪ ರೊಟ್ಟಿ ಮಾಂಸ ತಿನ್ನುವದು. ನೆಲ್ಲುಹುಲ್ಲು ಹಾಸಿ ಅದರಮೇಲೆ ಮಲಗಬೇಕು. ಇದ

ರಿಂದ ಪಾರ್ಶ್ವವಾಯು (ಲಕ್ವಾ), ಧನುರ್ವಾಯು, ಚಕ್ಷುವಾಯು ಗುಣವಾಗುವದು.

## ವಾಯುರೋಗಗಳಿಗೆ ಮೇಲೆ ಲೇಪಿಸುವ ತೈಲಗಳು.

೧. ಎಕ್ಕದಗಿಡದಸಮೂಲದ ರಸ ೧ ಪಾವು, ಮೇಕೆಹಾಲು ಅರಪಾವು, ಹುಣಿಸೇಸೊಪ್ಪಿನ ರಸ ಅರಪಾವು, ಕರೇಲಕ್ಕಲಿಸೊಪ್ಪಿನ ರಸ ಅರಪಾವು, ಒಳ್ಳೆಣ್ಣೆ ೧ ಶೇರು ಇವುಗಳನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ಪಕ್ವವಾಗಿ ಕಾಯಿಸಿ ಬಟ್ಟೆಯಲ್ಲ ಶೋಧಿಸಿಕೊಳ್ಳುವದು. ಇದು ಸಮಸ್ತ ವಾಯುಗಳಿಗೆ ಲೇಪಿಸುತ್ತಾ ಬಂದರೆ ಗುಣವಾಗುವದು.

೨. ಚಿಟ್ಟೆರಳುಬೇರಿನ ರಸ ೪ ತೊಲೆ, ಲಕ್ಕಲಿಸೊಪ್ಪಿನ ರಸ ೪ ತೊಲೆ, ಎಕ್ಕದಹಣ್ಣೆಲೆ ರಸ ೪ ತೊಲೆ, ಕೋಲುಕಳ್ಳಿಹಣ್ಣಾಗಿರುವ ಕಡ್ಡಿಗಳ ರಸ ೪ ತೊಲೆ, ನುಗ್ಗೇಬೇರಿನಚಕ್ಕೆ ರಸ ೪ ತೊಲೆ, ಚಿತ್ರಮೂಲದಬೇರಿನಚಕ್ಕೆ ರಸ ೪ ತೊಲೆ, ಬೇವಿನಬೇರಿನಚಕ್ಕೆರಸ ೪ ತೊಲೆ, ಹೊಂಗೇಬೇರಿನಚಕ್ಕೆರಸ ೪ ತೊಲೆ, ಒಳ್ಳೆಣ್ಣೆ ೨ ಶೇರು ಇವುಗಳನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ಪಕ್ವವಾಗಿ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಇಟ್ಟುಕೊಳ್ಳುವದು. ಈ ತೈಲವನ್ನು ಸಮಸ್ತ ವಾಯುಗಳಿಗೆ ಮೇಲೆ ಲೇಪಿಸುತ್ತಾಬರಲು ಗುಣವಾಗುವದು.

೩. ತುಪ್ಪದದೇವದಾರು, ಹಿಂಗು, ಚಂಗಲಕೋಷ್ಟ, ಸೋಪುಬೀಜ, ಸೈಂಧರಲವಣ, ಬಜೆ ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಜುಟ್ಟುವೇಸೊಪ್ಪಿನ ರಸದಲ್ಲಿ ಅರದು ಶರೀರಕ್ಕೆ ಲೇಪನಮಾಡಿ ಬಿಸಿನೀರು ಸ್ನಾನಮಾಡಿದರೆ ಅಸ್ಥಿಗತ ವಾಯುಗಳು ಗುಣವಾಗುವದು.

೪. ಸೋಪುಬೀಜ, ತುಪ್ಪದದೇವದಾರು, ವತ್ಸನಾಭಿ, ಹಿಂಗು, ಸೈಂಧರ ಲವಣ ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಲಕ್ಕಲಿಸೊಪ್ಪಿನ ರಸದಲ್ಲಿ ಅರದು ಶರೀರಕ್ಕೆ ಲೇಪನಮಾಡಿ ಬಿಸಿನೀರು ಸ್ನಾನಮಾಡಬೇಕು. ಈ ರೀತಿ ೩ ದಿನ ಮಾಡಿದರೆ ಅಸ್ಥಿಗತವಾಯು, ಕಟಿಗತವಾಯು, ಸಂಧಿಗತವಾಯು ಗುಣವಾಗುವದು.

೫. ತೆಂಗಿನಚಿಪ್ಪು ಸಣ್ಣಗೆ ತುಂಡುಗಳುಮಾಡಿ ಸುಮಾರು ೧೦ ಶೇರು ಹಿಡಿಯುವಷ್ಟು ಗಡಿಗೆಯಲ್ಲಿ ಮುಕ್ಕಾಲು ಗಡಿಗೆಗೆ ತುಂಬಿ ಅದರಮೇಲೆ ಬಿಳೇ ಧೂಪ ೫ ತೊಲೆ, ಹವಳಸರಿಗಂಧಕ ೫ ತೊಲೆ, ಕವಡೆಸಾಂಬ್ರಾಣಿ ೫ ತೊಲೆ, ಮಾಲಕಂಗನಿಬೀಜ ೫ ತೊಲೆ, ದಾಲಚಿನ್ನಿ ೭॥ ತೊಲೆ ಇವುಗಳು ಚೂರ್ಣಮಾಡಿ ಮೇಲ್ಕಂಡ ತುಂಬಿ ಇರುವ ಚಿಪ್ಪಿನಮೇಲೆ ಹಾಕಿ ಪುನಃ ತೆಂಗಿನಚಿಪ್ಪು ತುಂಡುಗಳು ಗಡಿಗೆಯ ಕಂಠದವರಿವಿಗು ತುಂಬಿ ಬಾಯಿಗೆ ಬಿಲ್ಲೆಯಿಟ್ಟು ಕೆಮ್ಮಣ್ಣು ಬಟ್ಟೆ ಚೀಲುಮಾಡಿ ಗಡಿಗೆಗೆ ಕೆಳಗೆ ೫ ರಂಧ್ರ ಹಾಕಿ ಗುಂಡಿತೆಗದು ಕೆಳಗೆ

ಮೊಗೆಯನ್ನು ಇಟ್ಟು ಅದರಮೇಲೆ ಸದರೀ ಗಡಿಗೆಯು ಇಟ್ಟು ಸುತ್ತು ಕೆಮ್ಮಣ್ಣು ಬಟ್ಟಿ ಚೀಲುಮಾಡಿ ಬೆರಣಿಯಿಟ್ಟು ಪಾತಾಳ ಯಂತ್ರದಂತೆ ತೈಲ ಇಳಿಸಿಕೊಳ್ಳ ಬೇಕು. ಈ ತೈಲವನ್ನು ಮೇಲೆ ಲೇಪಿಸಬೇಕು. ಇದರಿಂದ ಘಟ್ಟಿಯಾಗಿ ಇರುವ ಗಡ್ಡೆ ಕರುಗುತ್ತೆ ಮತ್ತು ವಡಿಯುತ್ತೆ. ಕೀಲುನೋವಿಗೆ ಊತಾ ಇರುವದಕ್ಕೆ ನೋವು ತೆಗಿಯುತ್ತೆ ನೂತಿ ಮೊದಲಾದ ಹುಣ್ಣನ್ನು ಮಾಯಿಸುತ್ತೆ. ಹುಳ ಮೊದಲಾದವುಗಳನ್ನೆಲ್ಲಾ ಕೆಡವುತ್ತೆ.

೭. ವಿಷಮುಷ್ಟಿಬೀಜ ೧ ತೊಲೆ ತುಂಡುತುಂಡಾಗಿ ಕತ್ತರಿಸುವದು. ಅಫೀಂ ೨ ತೊಲೆ ಚಿಕ್ಕಚಿಕ್ಕ ತುಂಡುಮಾಡಬೇಕು. ಹಸುವಿನಹಾಲು ೬ ತೊಲೆ, ಒಳ್ಳೆಣ್ಣೆ ೧೨ ತೊಲೆ ಇವುಗಳೆಲ್ಲವನ್ನು ಶೇರಿಸಿ ಒಂದು ಬಾಂಡ್ಲಿಯಲ್ಲಿ ಹಾಕಿ ಪಕ್ವವಾಗಿ ಕಾಯಿಸಿ ಶೋಧಿಸಿ ಇಳಿಸಿಕೊಳ್ಳುವದು. ವಾಯುನೋವುಗಳಿಗೆ ಪ್ರತಿ ದಿನ ಎರಡಾವರ್ತಿ ಲೇಪಿಸುವದು. ಇದರಿಂದ ಅಸಾಧ್ಯವಾದ ಕೀಲುವಾಯು, ಅದರುವಾಯು, ನರವಾಯು, ಶೆಳಿಯುವವಾಯು, ವಾಯುನೋವು, ಊತ ಇವು ಗಳು ಗುಣವಾಗುತ್ತೆ.

೭. ಒಂದು ಶೀಸೆಗೆ ಸಾಸುವೆತುಂಬಿ ಬಾಯಿಗೆ ಜಲ್ಲಡಿಕಂಬೀ ಬಿಗಿದು ನೆಲದಲ್ಲ ಒಂದು ಬಟ್ಲುಹೂತು ಅದರಮೇಲೆ ಒಂದುಮಡಕೆ ಬೋರಲಾಕಿ ಆ ಮಡಿ ಕೆಗೆ ಮಧ್ಯ ಸೀಸಾಯಿ ಮೂತಿ ಹಿಡಿಯುವಂತೆ ರಂಧ್ರಮಾಡಿ ಆ ರಂಧ್ರದೊಳಗೆ ಸೀಸಾಯಿಮೂತಿಯಿಟ್ಟು ಶೀಸೆಗೆ ಕೆಮ್ಮಣ್ಣುಬಟ್ಟೆ ಮೂರುವರಸೆ ಸುತ್ತಿ ಬಿಸಿಲಿ ನಲ್ಲಿ ಒಣಗಿಸಿ ಬೆರಣಿಮುಚ್ಚಿ ಪುಟಹಾಕಿದರೆ ತೈಲಬರುತ್ತದೆ. ಈ ತೈಲವನ್ನು ವಾಯುನೋವುಗಳಿಗೆ ಮಿತವಾಗಿ ಮೇಲೆ ಸವರುತ್ತಾ ಬರುವದು. ಇದರಿಂದ ಕೀಲುವಾಯು, ಕೀಲುನೋವು ಮೊದಲಾದ ರೋಗಗಳು ಗುಣವಾಗುವದು.

೮. ಪೊಪ್ಪಳಿಚಕ್ಕೆ, ಲವಂಗ, ವೋಮ, ಹಿಪ್ಪಲಿ, ಶೊಂಟಿ, ಮರದರಿಸಿನ, ವಿಷಮುಷ್ಟಿಬೀಜ, ಚಂಗಲಕೋಷ್ಟ, ಮೆಣಸು, ವಾಯುವಿಳಂಗ, ನಾಗಕೇಸರಿ, ಲವಂಗಚಕ್ಕೆ, ಕರೇಜೀರಿಗೆ, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ತುಂಗ ಮುಸ್ತೆ, ನಂಜಿನಚಕ್ಕೆ, ಕಚೋರ, ಜಾಕಾಯಿ, ಮೋಡಿ, ರಕ್ತಬೋಳ, ಮುಸಾಂಬರ, ಬಜೆ, ಮುಡಿವಾಳ, ಅಕ್ಕಲಕರೆ, ಅಗುಳುಶೊಂಟಿ, ಜೀರಿಗೆ, ಸಣ್ಣ ರಾಸ್ಮೆ, ಕವಡೆಸಾಂಬ್ರಾಣಿ ಇವು ಜಿನಸಿಗೆ ॥ ತೊಲೆ ತಂದು ಕುಟ್ಟಿ ಚೂರ್ಣ ಮಾಡಿ ಶೋಧಿಸಿಕೊಳ್ಳುವದು. ಚಿಟ್ಟರಳೆಣ್ಣೆ ೨ ಶೇರು, ಅಚ್ಚೆಳ್ಳೆಣ್ಣೆ ೨ ಶೇರು, ಕೊಬರಿಯಣ್ಣೆ ೧ ಪಾವು, ಹಸುವಿನತುಪ್ಪ ೧ ಪಾವು, ಜೇನುಮ್ಯೇಣ ೧ ಪಾವು, ಅಫೀಂ ಕಾಲುತೊಲೆ ಇವುಗಳನ್ನೆಲ್ಲಾ ಶೇರಿಸಿ ಒಂದು ಬಾಂಡ್ಲಿಯಲ್ಲಿ ಹಾಕಿ ಪಕ್ವ ವಾಗಿ ಕಾಯಿಸಿ ಶೋಧಿಸಿ ಇಟ್ಟುಕೊಳ್ಳುವದು. ಇದನ್ನು ವಾಯುಗಳಿಗೆ, ವಾಯುವಿನಿಂದ ಊತವಿರುವದಕ್ಕೆ, ಕೀಲುವಾಯು, ನಡುವುನೋವು ಇವುಗಳಿಗೆ ಲೇಪಿಸುತ್ತಾಬರಲು ಗುಣವಾಗುವದು.

೯. ಕೋಳಿಮೊಟ್ಟೆ ೨೦ ತಂದು ನೀರಿನಲ್ಲಿ ಚನ್ನಾಗಿ ಬೇಯಿಸಿ ಒಳಗಿರುವ ಅರಸಿನಬಣ್ಣದ್ದು ತೆಗದುಕೊಂಡು ಪುಡಿಪುಡಿಮಾಡಿ ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಉರಿಹಾಕುವದು. ಚನ್ನಾಗಿ ಬೇಯಿಸಿದನಂತರ ಬಾಂಡ್ಲಿ ವೋರೆಮಾಡಿ ಸೌಟನಿಂದ ಒತ್ತುತ್ತಾಬಂದರೆ ತೈಲಬರುವದು. ಅದನ್ನು ತೆಗೆದು ಬೇರೆ ಬಟ್ಟಲಿಗೆ ಹಾಕಿ ಅದಕ್ಕೆ ಸವು ನವಿಲುತುಪ್ಪ ಹಾಕಿ ಬೆಂಕಿಯಮೇಲಿಟ್ಟು ಕರಗಿಸಿ ತೆಗೆದುಕೊಳ್ಳುವದು. ಸದರಿ ತೈಲ ನೋವು ಇರುವ ಸ್ಥಳಕ್ಕೆ ಉಜ್ಜುತ್ತಾ ಬರುವದು. ಇದರಿಂದ ಕಾಲುನೋವು, ವಾಯುನೋವು, ಕೀಲುವಾಯು ಇವುಗಳು ಗುಣವಾಗುವದು.

೧೦. ಯಕ್ಕದಹಾಲು ೧ ಪಾವು, ಮೇಕೆಹಾಲು ೧ ಪಾವು, ಕರೇಲಕ್ಕಲಿ ಸೊಪ್ಪಿನ ರಸ ೧ ಪಾವು, ಹುಣಿಸೇಸೊಪ್ಪಿನ ರಸ ೧ ಪಾವು, ಒಳ್ಳೆಣ್ಣೆ ೧ ಪಾವು ಹಾಕಿ ಪಕ್ವವಾಗಿ ತೈಲಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವದು. ಸದರಿ ತೈಲ ನೋವು ಇರುವ ಸ್ಥಳಕ್ಕೆ ಉಜ್ಜುತ್ತಾ ಬರುವದು. ಇದರಿಂದ ಕೈಕಾಲು ನೋವು, ವಾಯುನೋವು, ಕೀಲುವಾಯು ಇವುಗಳು ಗುಣವಾಗುವದು.

೧೧. ಒಳ್ಳೆಣ್ಣೆ ೧ ಶೇರು, ಉಪ್ಪೇಬೇರಿನ ರಸ ೧ ಶೇರು, ಲವಂಗ ೧ ತೊಲೆ, ವಾಯುವಿಳಂಗ ೧ ತೊಲೆ, ಹಿಪ್ಪಲಿ ೧ ತೊಲೆ, ಪರಂಗಿಚಕ್ಕೆ ೧ ತೊಲೆ, ಶೊಂಟಿ ೧ ತೊಲೆ, ಯಕ್ಕದಬೇರಿನ ರಸ ೪ ತೊಲೆ ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಎಲ್ಲವನ್ನು ಶೇರಿಸಿ ಪಕ್ವವಾಗಿ ತೈಲಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವದು. ಸದರಿತೈಲ ನೋವು ಇರುವ ಸ್ಥಳಕ್ಕೆ ಉಜ್ಜುತ್ತಾ ಬರುವದು. ಇದರಿಂದ ಕೈಕಾಲುನೋವು, ವಾಯುನೋವು, ಕೀಲುವಾಯು ಇವುಗಳು ಗುಣವಾಗುವದು.

೧೨. ಎಳೇಬಂದರಿಸೊಪ್ಪು ತಂದು ಚನ್ನಾಗಿ ಕುಟ್ಟಿ ಚಿಟ್ಟೆರಳಣ್ಣೆಯಲ್ಲಿ ಹಾಕಿ ನೋವಿರುವ ಊತವಿರುವ ಜಾಗಕ್ಕೆ ಬೆಚ್ಚಗೆಮಾಡಿ ಕಟ್ಟುವದು. ಇದರಿಂದ ಸಮಸ್ತ ವಾಯುನೋವುಗಳು ಗುಣವಾಗುವದು.

೧೩. ತೆಂಗಿನಚಿಪ್ಪು ೧೦೦ ಸಣ್ಣಗೆ ತುಂಡುಗಳು ಮಾಡುವದು ಪೋಮ ೧ ಶೇರು, ಚಿತ್ರಮೂಲ ೧ ಶೇರು ಇವು ಒಂದು ಗಡಿಗೆಯಲ್ಲಿ ತುಂಬಿ ಬಾಯಿಗೆ ಬಿಲ್ಲೆಕೊಟ್ಟು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಗಡಿಗೆಗೆ ಕೆಳಗೆ ೫ ರಂಧ್ರಹಾಕಿ ಗುಂಡಿತೆಗದು ಕೆಳಗೆ ಮೊಗೆಯಿಟ್ಟು ಅದರಮೇಲೆ ಗಡಿಗೆಯಿಟ್ಟು ಸುತ್ತು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಗಡಿಗೆಯ ಮೇಲ್ಭಾಗದವರಿಗೆ ಬೆರಣಿಯಿಟ್ಟು ಪಾತಾಳಯಂತ್ರದಂತೆ ತೈಲ ಇಳಿಸಿಕೊಳ್ಳುವದು. ವಾಯುನೋವುಗಳಿಗೆ ಈ ತೈಲವನ್ನು ಮೇಲೆ ಲೇಪಿಸಿ ಅದರಮೇಲೆ ಯಕ್ಕದಯಲೆಗೆ ತೈಲವನ್ನು ಲೇಪಿಸಿ ಬೆಂಕಿಶಾಕ ತೋರಿಸಿ ನೋವು ಇರುವ ಸ್ಥಳಕ್ಕೆ ಕಟ್ಟಿದರೆ ಸಮಸ್ತ ವಾಯುಗಳು ಗುಣವಾಗುವವು.

೧೪. ವಿಷಮುಷ್ಟಿ ತೈಲ:—ವಿಷಮುಷ್ಟಿಬೀಜ ೧| ಶೇರು, ಒಳ್ಳೆಣ್ಣೆ ೨|| ಶೇರು, ಅಫೀಂ ೧ ತೊಲೆ, ಕುಂಕುಮಕೇಸರಿ ಕಾಲುತೊಲೆ ಇವು ಎರಡು ಖಲ್ವದಲ್ಲಿ ಹಾಕಿ ನೀರಿನಲ್ಲಿ ಅರದುಕೊಳ್ಳುವದು. ಶೊಂಟಿ ೩ ತೊಲೆ ಕುಟ್ಟಿ ಚೂರ್ಣಮಾಡುವದು. ಇವುಗಳೆಲ್ಲವನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯ ಮೇಲಿಟ್ಟು ಕಾಯಿಸಿ ವಿಷಮುಷ್ಟಿಬೀಜ ಕರ್ರಗೆ ಆಗುವಹಾಗೆ ಕಾಯಿಸಿ ಬಟ್ಟೆ ಯಲ್ಲಿ ಶೋಧಿಸಿಕೊಳ್ಳುವದು. ಈ ತೈಲವನ್ನು ವಾಯುನೋವುಗಳಿಗೆ ಮೇಲೆ ಲೇಪಿಸುತ್ತಾಬರುವದು. ಇದರಿಂದ ಕೀಲುವಾಯು, ಪಾರ್ಶ್ವವಾಯು ಮೊದ ಲಾದ ಎಲ್ಲಾ ತರಹದ ವಾಯುಗಳು ಗುಣವಾಗುವದು.

೧೫. ನಾರಸಿಂಹ ತೈಲ:—ಜುಟ್ಟುವೇಸೊಪ್ಪಿನ ರಸ ೧ ಪಾವು, ಮುಂಡೆ ಕಳ್ಳಿಯಲಿ ರಸ ೧ ಪಾವು, ಹೊಟ್ಟುತೆಗೆದ ಬೆಳ್ಳುಳ್ಳಿಗಡ್ಡೆ ರಸ ೧ ಪಾವು, ಹಣ್ಣು ಯಕ್ಕದಯಲಿ ರಸ ೧ ಪಾವು, ಹುಚ್ಚುಕತ್ತಾಳಿ ರಸ ೧ ಪಾವು, ಕರೇಲಕ್ಕಲಿ ಸೊಪ್ಪಿನ ರಸ ೧ ಪಾವು, ಚೌಂಡಗಿಸೊಪ್ಪಿನ ರಸ ೧ ಪಾವು, ಜೇಗೊಡತಿಸೊಪ್ಪಿನ ರಸ ೧ ಪಾವು, ಬಿಳೇವುಪ್ಪೇಸೊಪ್ಪಿನ ರಸ ೧ ಪಾವು, ಹಾಲುವಾಣದಸೊಪ್ಪಿನ ರಸ ೧ ಪಾವು, ಕರೇವುಪ್ಪೇಸೊಪ್ಪಿನ ರಸ ೧ ಪಾವು, ನುಗ್ಗೇಚಕ್ಕೆ ರಸ ೧ ಪಾವು, ಬೋಡತರದಸೊಪ್ಪಿನ ರಸ ೧ ಪಾವು, ವಿಷಮದಾರಿಸೊಪ್ಪಿನ ರಸ ೧ ಪಾವು, ವಾತನಾರಾಯಣಿಸೊಪ್ಪಿನ ರಸ ೧ ಪಾವು, ಹಾವುಮೆಕ್ಕೇಕಾಯಿಬೇರಿನ ರಸ ೧ ಪಾವು, ಇದಕ್ಕೆ ಕಲ್ಕದ್ರವ್ಯ:—ವಾಯುವಿಳಂಗ ೨ ತೊಲೆ, ವೋಮ ೨ ತೊಲೆ, ಚಿತ್ರಮೂಲ ೨ ತೊಲೆ, ಮೋಡಿ ೨ ತೊಲೆ, ಲವಂಗ ೨ ತೊಲೆ, ಶೊಂಟಿ ೨ ತೊಲೆ, ರಾಮಗುಳ್ಳದಬೇರು ೨ ತೊಲೆ, ಪರಂಗಿಚಕ್ಕೆ ೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿಕೊಳ್ಳುವದು. ಬೇವಿನಯಣ್ಣೆ ೬ ಶೇರು ಇವುಗಳನ್ನೆಲ್ಲಾ ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲೆ ಇಟ್ಟು ಉರಿಹಾಕಿ ಪಕ್ವವಾಗಿ ಯಣ್ಣೆ ಕಾಯಿಸಿ ಶೋಧಿಸಿಕೊಂಡನಂತರ ತಿರಿಗಿ ಬಾಂಡ್ಲಿಯಲ್ಲಿ ಹಾಕಿ ಕೋಳಿಮೊಟ್ಟೆ ೨೪ ತಂದು ಬೇಯಿಸಿ ಹೊಟ್ಟುತೆಗೆದು ಮೇಲಿನ ಬಿಳುಪು ತೆಗೆದುಹಾಕಿ ಒಳಗಿರುವ ಹಳದಿಬಂಡಾರ ತೆಗೆದುಕೊಂಡು ಪುಡಿಪುಡಿಯಾಗಿ ಕಲಸಿ ಯಣ್ಣೆಯಲ್ಲ ಹಾಕಿ ಒಲೆಯಮೇಲೆ ಇಟ್ಟು ಉರಿಹಾಕಿ ಪಕ್ವವಾಗಿ ಯಣ್ಣೆಕಾಯಿಸಿ ಶೋಧಿಸಿ ಇಟ್ಟು ಕೊಳ್ಳುವದು. ಇದನ್ನು ವಾಯುಗಳಿಗೆ ಬೆಳಿಗ್ಯೆ ಮೇಲೆ ಲೇಪನಮಾಡಿ ಸಾಯಂ ಕಾಲ ಬಿಸಿನೀರು ಸ್ನಾನಮಾಡುವದು, ಸಾಯಂಕಾಲ ಲೇಪನಮಾಡಿ ಬೆಳಿಗ್ಯೆ ಬಿಸಿನೀರು ಸ್ನಾನಮಾಡುತ್ತಾ ಬರುವದು. ಇದರಿಂದ ಸರ್ವಾಂಗವಾಯು, ಧನು ರ್ವಾಯು, ಕೀಲುವಾಯು ಗುಣವಾಗುವದು.

೧೬. ನಾರಾಯಣ ತೈಲ:—ಅಶ್ವಗಂಧಿಬೇರು, ಚಿಟ್ಟಾಮುಟ್ಟೆ, ಬಿಲ್ಪತ್ರೆ ಬೇರು, ಪಾದರಿಬೇರು, ನೆಲಗುಳ್ಳ, ಹೆಗ್ಗುಳ್ಳ, ಸಣ್ಣನೆಗ್ಗಿಲು, ಬೇವಿನಚಕ್ಕೆ,

ಅತಿಬಲಾ ಎಂದರೆ ಕಳ್ಳಂಗಡ್ಲೆಯಲ್ಲಿಯೇ ಒಂದುವಿಧ, ಶಿವನೆಯಚಕ್ಕೆ, ಬಿಳೇ ಕೊಮ್ಮೆಯಬೇರು, ಸಾರಣೆಯಗಿಡ, ನರುವಲಸೊಪ್ಪು (ನೆಲ್ಲಿಂಯಲ್ಲಿ ಭೇದ) ಇವುಗಳು ಪ್ರತಿಯೊಂದೂ ಹತ್ತು ಪಲದಷ್ಟು ಸೇರಿಸಿ (ಒಂದು ಸಾವಿರದ ಇಪ್ಪತ್ತು ನಾಲ್ಕು ತೊಲಕ್ಕೆ ಒಂದು ದ್ರೋಣವೆಂದು ಹೆಸರ.) ನಾಲ್ಕುದ್ರೋಣ ನೀರಿನಲ್ಲಿ ಕಷಾಯವಿಟ್ಟು ಕಾಯಿಸಿ ಒಂದು ದ್ರೋಣಕ್ಕೆ ಇಳಿಸಿಕೊಂಡು ಅದರ ಜೊತೆಗೆ ಒಂದು ಆಢಕ (ಇನ್ನೂರೈವತ್ತಾರು ತೊಲ) ಎಳ್ಳಿನೆಣ್ಣೆಯನ್ನು ಸೇರಿಸಿ ಅಷ್ಟೇ ಮಜ್ಜಿಗೆಗಡ್ಡೆ ರಸವನ್ನೂ ಸೇರಿಸಿ ಎಣ್ಣೆಯ ನಾಲ್ಕರಷ್ಟು ಹಸುವಿನಹಾಲನ್ನೂ ಸೇರಿಸಿ ಮತ್ತೆ ಕಾಯುವುದಕ್ಕಿರಿಸಬೇಕು. ಚಂಗಲಕೋಷ್ಟ, ಯಾಲಕ್ಕಿ, ಶ್ರೀಗಂಧ, ಕಳ್ಳಂಗಡ್ಲೆ, ಬಜೆ, ಜಟಾಮಾಂಸಿ, ಸೈಂಧರಲವಣ, ಸಣ್ಣರಾಸ್ಮೆ, ಹಾವುನಂಜಿನಸೊಪ್ಪು, ತುಪ್ಪದದೇವದಾರು, ಒಂದೆಲೆಹೊನ್ನೆ, ಮೂರೆಲೆಹೊನ್ನೆ, ಕಾಡುಹೆಸರು, ಕಾಡುಉದ್ದು, ಗ್ರಂಥಿಕತಗರ, ಇವುಗಳು ಪ್ರತಿಯೊಂದೂ ಎರಡೆರಡು ಪಲದಷ್ಟು ಸಂಗ್ರಹಿಸಿ ಕಲ್ಕಮಾಡಿಕೊಂಡು ಆ ಕಲ್ಕವನ್ನೂ ಕಾಯಿಸುತ್ತಿರುವದರೊಡನೆ ಸೇರಿಸಿ ಮಂದಾಗ್ನಿಯಿಂದ ತೈಲಪಾಕಕ್ರಮದಲ್ಲಿ ಕಾಯಿಸಿ ಶೋಧಿಸಿಕೊಳ್ಳುವದು. ಈ ತೈಲವು ಅಭ್ಯಂಗಕ್ಕೂ ನಸ್ಯದಂತೆ ಮೂಗಿನಿಂದ ಸೇದುವುದಕ್ಕೂ, ಹೊಟ್ಟೆಗೆ ತೆಗೆದುಕೊಳ್ಳುವದಕ್ಕೂ ಗುದದ್ವಾರದಿಂದ ಬಸ್ತಿ (ಎನಿಮಾ) ಕೊಡುವುದಕ್ಕೂ ಉಪಯೋಗವಾಗುತ್ತದೆ. ಈ ತೈಲದಿಂದ ಪಕ್ಷವಾಯು, ಹನುಸ್ತಂಭ, ಮನ್ಯಾಸ್ತಂಭ,ಗಳಗ್ರಹ, ಖಲ್ಲತ್ವಗಳೆಂಬ ರೋಗಪ್ರಕರಣದಲ್ಲಿ ಹೇಳಿರುವ ವಾತರೋಗಗಳು, ಕಿವಿಕೇಳದೆ ಹೋಗುವಣ, ನಡೆಯುವುದಕ್ಕಾಗದಿರೋಣ, ಕಟಿಗ್ರಹವೆಂದರೆ ಸೊಂಟ ಹಿಡಿಯೋಣ, ದೇಹವೆಲ್ಲಾ ಒಣಗಿ ಸಣ್ಣನಾಗುತ್ತಾ ಬರುವದು, ಇಂದ್ರಿಯ ಧ್ವಂಸವೆಂದರೆ ವಾಯುರೋಗದಿಂದುಂಟಾದ ಇಂದ್ರಿಯಗಳು ಕೆಡೋಣ, ರಕ್ತವು ಕ್ಷಯಿಸುತ್ತಿರೋಣ, ಶುಕ್ರವು ಕ್ಷಯಿಸೋಣ, ಜ್ವರ, ಕ್ಷಯರೋಗ, ಅಂತ್ರವೃದ್ಧಿ ಎಂಬ ವೃಷಣವಾಯು, ಹಲ್ಲಿನರೋಗಗಳು, ತಲೆ ಹಿಡಿದುಕೊಳ್ಳುವದು, ಪಕ್ಕಶೂಲೆ, ವಾಯುಹಿಡಿದು ಕುಂಟನಾಗುವುದು, ಬುದ್ಧಿ ಕೆಟ್ಟುಹೋಗುವುದು, ಗೃಧ್ರಸಿ ಎಂಬ ವಾತರೋಗ, ಇವುಗಳಲ್ಲದೆ ಸಮಸ್ತ ಅವಯವಗಳಲ್ಲಿಯೂ ಸಂಭವಿಸುವ ಎಲ್ಲಾಬಗೆಯ ವಾತರೋಗಗಳೂ ಗುಣವಾಗುತ್ತವೆ.

೧೭. ಒಳ್ಳೆಣ್ಣೆ ತೂಕದ ೨ ಶೇರು, ನಾರಂಬೇಳೆಸೊಪ್ಪಿನ ರಸ ತೂಕದ ೧ ಶೇರು ಇದನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ವಲೆಯಮೇಲಿಟ್ಟು ಕಾಯಿಸುತ್ತಿರುವಾಗ ಜೇನುಮೈಣ ೬ ತೊಲೆ, ಅರತಿಕರ್ಪೂರ ೬ ತೊಲೆ ಇವುಗಳನ್ನು ಹಾಕಿ ಪಕ್ವವಾಗಿ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವದು. ವಾಯುನೋವುಗಳಿಗೆ ಮೇಲೆ ಲೇಪಿಸುತ್ತಾಬಂದರೆ ಗುಣವಾಗುವದು.

೧೮. ತಪಸಿಚಕ್ಕೆ ರಸ ೧ ಶೇರು, ಒಳ್ಳೆಣ್ಣೆ ೨ ಶೇರು, ಹಸುವಿನಹಾಲು ೧ ಶೇರು, ಇದಕ್ಕೆ ಕಲ್ಕದ್ರವ್ಯ :—ವೇರಾಮುಟ್ಟೆ, ಸೊಗದೇಬೇರು, ಸಣ್ಣರಾಸ್ಮೆ, ಅಳಲೇಕಾಯಿಸಿಪ್ಪೆ, ವಾಯುವಿಳಂಗ, ಅರಶಿನ, ತುಪ್ಪದದೇವದಾರು, ಮುಳ್ಳು ಗೋರಂಟಿಬೇರು, ಕಲ್ಲುಪ್ಪು, ಬಜೆ, ಅಶ್ವಗಂಧಿ, ಮಂಜಿಷ್ಟೆ, ಚಿಟ್ಟೆರಳುಬೇರು, ಚಿತ್ರಮೂಲದಬೇರು, ಲಕ್ಕಲಿಬೇರು, ಚಂಗಲಕೋಷ್ಟ, ಲವಂಗಪಟ್ಟೆ, ಲವಂಗ ಇವು ಜಿನಸಿಗೆ ೪ ವರಹತೂಕ ತಂದು ಕುಟ್ಟಿ ಚೂರ್ಣವಂಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವದು. ಸಾಂಬ್ರಾಣಿ ೧ ತೊಲೆ, ಆರ್ತಿಕರ್ಪೂರ ೧ ತೊಲೆ ಇವು ಎಲ್ಲವನ್ನು ಶೇರಿಸಿ ಬಾಂಡ್ಲಿಯಲ್ಲಿ ಹಾಕಿ ಒಲೆಯ ಮೇಲಿಟ್ಟು ಪಕ್ವವಾಗಿ ಕಾಯಿಸಿ ಬಟ್ಟೆಯಲ್ಲ ಶೋಧಿಸಿಕೊಳ್ಳುವದು ಈ ತೈಲ ವನ್ನು ತಲೆಗೆ, ಶರೀರಕ್ಕೆ ಲೇಪನಮಾಡುವದು. ಇದರಿಂದ ಬಾಯಿ ಸೊಟ್ಟೆ ಬರುವ ವಾಯು, ಕೈಕಾಲು ಅದುರುವವಾಯು, ಪಕ್ಷಗತವಾಯು ಗುಣವಾಗು ವದು.

೧೯. ಸಾಂಬ್ರಾಣಿ ೧ ಶೇರು, ಕರೇಧೂಪ ೧ ಶೇರು ಇವು ಎರಡು ಪುಡಿಪುಡಿ ಯಾಗಿಮಾಡಿ ಒಂದು ಮಡಿಕೆಯಲ್ಲಿ ಹಾಕಿ ಮುಚ್ಚಳಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ಮಡಿಕೆ ತಳಕ್ಕೆ ೫ ರಂಧ್ರಹಾಕಿ ಗುಂಡಿತೆಗದು ಕೆಳಗೆ ಮೊಗೆಯಿಟ್ಟು ಅದರಮೇಲೆ ಮಡಿಕೆಯಿಟ್ಟು ಸುತ್ತು ಕೆಮ್ಮಣ್ಣುಬಟ್ಟೆ ಚೀಲುಮಾಡಿ ಮಡಿಕೆಯ ಮೇಲ್ಭಾಗದವರಿಗೆ ಬೆರಣಿಯಿಟ್ಟು ಪಾತಾಳ ಯಂತ್ರದಂತೆ ತೈಲ ಇಳಿಸಿಕೊಳ್ಳು ವದು. ಇದನ್ನು ವಾಯುನೋವುಗಳಿಗೆ, ತಲೇನೋವಿಗೆ ಮೇಲೆ ಲೇಪಿಸುತ್ತಾ ಬರಲು ಗುಣವಾಗುವದು.

೨೦. ಚಿಟ್ಟೆರಳಣ್ಣೆ ‖ ಶೇರು, ಒಳ್ಳೆಣ್ಣೆ ‖ ಶೇರು, ಹೊಟ್ಟುತೆಗದ ಬೆಳ್ಳುಳ್ಳಿ ರಸ ೧ ಪಾವು, ಹೊಂಗೇಬೇರು ೨ ತೊಲೆ, ಚಿಟ್ಟಾಮುಟ್ಟೆಬೇರು ೧ ತೊಲೆ, ವಿಷ ಬೊದ್ದಿಬೇರು ೨ ತೊಲೆ, ಈಶ್ವರಿಬೇರು ೨ ತೊಲೆ, ಚೇಗೊಡಿಶಿಬೇರು ೨ ತೊಲೆ, ಬೆಪ್ಪಾಲದಬೇರು ೨ ತೊಲೆ, ಚಿತ್ರಮೂಲದಬೇರು ೨ ತೊಲೆ, ಹಾವುಮೆಕ್ಕೆ ಕಾಯಿಬೇರು ೨ ತೊಲೆ, ಹಂಸಪಾದಿಬೇರು ೨ ತೊಲೆ ಈ ಬೇರುಗಳು ಪ್ರತಿ ಯೊಂದು ಚೆನ್ನಾಗಿ ಜಜ್ಜಿ ಕುಟ್ಟಿಹಾಕುವದು. ಈ ಬೇರುಗಳೆಲ್ಲವನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ನೀರುಹಾಕಿ ಒಲೆಯಮೇಲಿಟ್ಟು ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವದು. ಮೇಲ್ಕಂಡ ಯಣ್ಣೆಗಳು ಮತ್ತು ಬೆಳ್ಳುಳ್ಳಿಯ ರಸ ಮತ್ತು ಕಷಾಯ ಇವುಗಳನ್ನು ಪಕ್ವವಾಗಿ ಕಾಯಿಸಿ ಶೋಧಿಸಿ ಕೊಳ್ಳುವದು. ಇದರಿಂದ ಪಕ್ಷಾವಾತವಾಯು, ಪಾರ್ಶ್ವವಾಯು, ಬಾಯಿ ವಾರೆಯಾಗಿ ಹೋಗುವದು ಇವು ಗುಣವಾಗುವವು.

# ಮುವ್ವತ್ತೊಂದನೆಯ ಅಧ್ಯಾಯ.

## ಶೂಲೆರೋಗ— ಔಷಧಗಳು.

### ಶೂಲೆ ಲಕ್ಷಣ.

ಹೃದಯವು, ಪಾರ್ಶ್ವಗಳು, ಅಂಡುಗಳು, ಬೆನ್ನು, ಹೊಟ್ಟೆಯ ಕೆಳಭಾಗ ಇವುಗಳಲ್ಲಿ ಶೂಲೆಯು ಹುಟ್ಟಿದರೆ ವಾತಪ್ರಕೋಪದಿಂದ ಹುಟ್ಟಿದ್ದೆಂದು ತಿಳಿಯುವುದು. ಹೀಗೆ ಶೂಲೆಯು ಹುಟ್ಟಿದನಂತರ ನೋವು, ದಾಹವು, ಮೂರ್ಛೆ, ಮಲಮೂತ್ರಗಳಲ್ಲಿ ಬಂಧ, ಕಾಸಶ್ವಾಸವು, ಬಿಕ್ಕಳಿಕೆ, ಶರೀರಭಾರ, ಅರುಚಿ ಈ ಉಪದ್ರವಗಳುಂಟಾಗುವುವು. ಭುಜಿಸಿದ ಅನ್ನವು ಜೀರ್ಣವಾಗುವ ಸಮಯದಲ್ಲಿ ಹುಟ್ಟುವ ಶೂಲೆಯು ಪರಿಣಾಮಶೂಲೆಯೆನ್ನಲ್ಪಡುವುದು. ಉದರವು ಉಬ್ಬಿ ಪ್ರಾಣೋಪದ್ರವವಾಗಿರುವಿಕೆ, ಮಲಮೂತ್ರಗಳು ಬಂಧಿಸಿರುವಿಕೆ, ಯಾವ ಪದಾರ್ಥದಲ್ಲಿಯೂ ಪ್ರೀತಿಯಿಲ್ಲದಿರುವಿಕೆ, ಶರೀರದಲ್ಲಿ ವೇದನೆಯುಂಟಾಗುವಿಕೆ ಇಂತಹ ಲಕ್ಷಣಗಳುಂಟಾಗಿದ್ದರೆ ಪಿತ್ಥಶೂಲೆಯೆಂದು ತಿಳಿಯಬೇಕು.

### ಶೂಲೆರೋಗದಲ್ಲಿ ಅಸಾಧ್ಯ ಲಕ್ಷಣ.

೧. ತ್ರಿದೋಷದಿಂದ ಕೂಡಿಯಿದ್ದರೆ ಅಸಾಧ್ಯವು.

### ಶೂಲೆಗೆ ಚಿಕಿತ್ಸೆಗಳು.

೧. ಚಿಟ್ಟೆರಳೆಣ್ಣೆ ೧ ಸೊಲಿಗೆ, ಗಜ್ಜಿಕಾಯಿಪಪ್ಪು ೨ ತೊಲೆ, ಹೊಟ್ಟು ತೆಗೆದ ಬೆಳ್ಳುಳ್ಳಿ ೨ ತೊಲೆ ಇವುಗಳನ್ನು ಚನ್ನಾಗಿ ಕುಟ್ಟಿ ಪಕ್ವವಾಗಿ ಯಣ್ಣೆ ಕಾಯಿಸಿ ಶೋಧಿಸಿಕೊಳ್ಳುವದು. ಬೆಳಿಗ್ಯೆಹೊತ್ತು ಬಿಸಿನೀರಿನಲ್ಲಿ ೧ ತೊಲೆ ಯಣ್ಣೆ ಕೊಡಬೇಕು. ಈರೀತಿ ೩ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಮೇಹಶೂಲೆ ಸಹ ಗುಣವಾಗುವದು.

೨. ಒಂದು ಮಡಿಕೆಯಲ್ಲಿ ರಾಮಗುಳ್ಳ (ನೆಲಗುಳ್ಳ) ಗಿಡಸಮೂಲ ಕತ್ತರಿಸಿ ಹಾಕುವದು. ಆಡುಮುಟ್ಟದಗಿಡ ಸಮೂಲ ಕತ್ತರಿಸಿಹಾಕಿ ಅದರಮೇಲೆ ಕಲ್ಲುಪ್ಪು ಅರ್ಧಶೇರು ಹಾಕಿ ಪುನಹ ಮೇಲ್ಕಂಡ ಗಿಡಗಳು ಹಾಕಿ ಮುಚ್ಚಳ ಮುಚ್ಚಿ ಕೆಮ್ಮಣ್ಣುಬಟ್ಟೆ ಚೀಲುಮಾಡಿ ೧ ಮೊಳ ಪುಟಹಾಕುವದು. ಆ ಉಪ್ಪು ಕರಗುತ್ತೆ. ಹೊತ್ತಿಗೆ ೧ ಆಣೆತೂಕ ಜೇನುತುಪ್ಪದಲ್ಲಿ ಕಲಸಿ ಕೊಡಬೇಕು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ನಿಂಬೇಹಣ್ಣಿನ ರಸದಲ್ಲಿ ಸಹ ಕೊಡಬಹುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಹೊಟ್ಟೆಶೂಲೆ, ಪಾರ್ಶ್ವಶೂಲೆ ಗುಣವಾಗುವದು.

೩. ಶುಂಠಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಚಂಗಲ ಕೋಷ್ಟ ೧ ತೊಲೆ, ಬಜೆ ೧ ತೊಲೆ, ಶುದ್ಧಿಮಾಡಿದ ಮುತ್ತುಗದಬೀಜ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ಕಾಲುತೊಲೆ ಚೂರ್ಣ ಜೇನುತುಪ್ಪದಲ್ಲಿ ಕಲಸಿಕೊಡಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡುವದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಹೊಟ್ಟೆಶೂಲೆ, ಕ್ರಿಮಿಶೂಲೆ ಗುಣವಾಗುವದು.

೪. ಶುದ್ಧಿಮಾಡಿದ ಹಿಂಗು ಕಾಲುತೊಲೆ, ಸೈಂಧವಲವಣ ೧ ತೊಲೆ, ಶುದ್ಧಿಮಾಡಿದ ಮುತ್ತುಗದಬೀಜ ॥ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ಕಾಲುತೊಲೆ ಚೂರ್ಣ ಉತ್ತರೇಣಿಸೊಪ್ಪಿನ ರಸದಲ್ಲಿ ಕಲಸಿ ಕೊಡಬೇಕು. ಹೀಗೆ ಬೆಳಿಗ್ಗೆಹೊತ್ತು ೩-೫ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಹೊಟ್ಟೆಶೂಲೆ ಗುಣವಾಗುವದು.

೫. ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ, ಶುದ್ಧಿ ಮಾಡಿದ ಹಿಂಗು ಕಾಲುತೊಲೆ, ಸೈಂಧವಲವಣ ೧ ತೊಲೆ ಇವುಗಳನ್ನು ಖಲ್ವ ದಲ್ಲಿ ಹಾಕಿ ನುಗ್ಗೆಚಕ್ಕೆ ರಸದಲ್ಲಿ ಅರದು ಮೆಣಸು ಪ್ರಮಾಣ ಮಾತ್ರೆಗಳು ಮಾಡುವದು. ಹೊತ್ತಿಗೆ ೧ ಮಾತ್ರೆ ಜೇನುತುಪ್ಪದಲ್ಲಿ ಅಥವಾ ಹಸುವಿನ ತುಪ್ಪದಲ್ಲಿ ಕೊಡಬೇಕು ಈರೀತಿ ಬೆಳಿಗ್ಗೆಹೊತ್ತು ೩-೫ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಮಸ್ತ ಶೂಲೆ ಗಳು ಗುಣವಾಗವದು.

೬. ಪಂಚಲವಣ ೫ ತೊಲೆ, ಯವಕ್ಷಾರ ೧ ತೊಲೆ, ಸಜ್ಜುಕ್ಷಾರ ೧ ತೊಲೆ, ಸೂರ್ತಿಬೆಳಗಾರ ಅರಳುಮಾಡಿದ್ದು ೧ ತೊಲೆ, ಚಟುಕಾರ ೧ ತೊಲೆ, ತವಕ್ಷೀರ ೧ ತೊಲೆ, ಶುಂಠಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಅಳಲೇ ಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಲವಂಗ ೧ ತೊಲೆ, ಶುದ್ಧಿಮಾಡಿದ ಹಿಂಗು ॥ ತೊಲೆ, ಬಿದರುಪ್ಪು ೧ ತೊಲೆ, ಸಮುದ್ರದ ನೊರೆ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಖಲ್ವದಲ್ಲಿ ಹಾಕಿ ಹಶೀಶುಂಠಿ ರಸದಲ್ಲಿ ೪ ಜಾಮು ಅರದು, ಹೇರಳೆಹಣ್ಣಿನ ರಸದಲ್ಲಿ ೪ ಜಾಮು ಅರದು ಮೆಣಸಿನಕಾಳು ಪ್ರಮಾಣ ಮಾತ್ರೆಮಾಡುವದು. ಹೊತ್ತಿಗೆ ೧-೨ ಮಾತ್ರೆ ಹೇರಳೆಹಣ್ಣಿನ ರಸದಲ್ಲಿ, ಹಶೀಶುಂಠಿ ರಸದಲ್ಲಿ, ಜೇನುತುಪ್ಪದಲ್ಲಿ ಇವುಗಳಲ್ಲಿ ಯಾವದಾದರು ಒಂದರ ಅನುಪಾನದಿಂದ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡುವದು. ಇದಕ್ಕೆ ಪಥ್ಯ ಮೊದಲು ಹಸುವಿನ ಮಜ್ಜಿಗೆ ಅನ್ನ ತಿಂದು ಅನಂತರ ತೊಗರೀಬೇಳೆ ಸಿಹಿಸಾರು ಅನ್ನ ಊಟ ಮಾಡುವದು. ಇದರಿಂದ ಸಮಸ್ತ ಶೂಲೆ, ಪರಿಣಾಮಶೂಲೆ ಗುಣವಾಗುವದು.

೭. ಪಂಚಾಗ್ನಿ ಚೂರ್ಣ:—ಶುದ್ಧಿಮಾಡಿದ ಲಾಲ್‌ತಿಗಡೆ, ಮಂಗರವಳ್ಳಿ, ಚಿತ್ರಮೂಲ, ತಪಸಿಚಕ್ಕೆ, ಪಂಚಲವಣ, ಸಜ್ಜಕ್ಷಾರ, ಯವಕ್ಷಾರ, ಚವ್ಯ, ತ್ರಿಕಟುಕ, ತ್ರಿಫಲ, ಚಂಗಲಕೋಷ್ಟ, ಬಿಳೇಜೀರಿಗೆ, ಅರಸಿನ, ಸಣ್ಣರಾಸ್ಮೆ, ಲವಂಗ, ಶುದ್ಧಿಮಾಡಿದ ಹಿಂಗು, ಕೋಲುಮುರಕನಚಕ್ಕೆ, ಗಂಟುಭಾರಂಗಿ, ಮೋಡಿ, ಗರುಗದಸೊಪ್ಪು, ಶುದ್ಧಿಮಾಡಿದ ಅಶ್ವಗಂಧ, ಸುಂಗಮುಸ್ತೆ, ಈಶ್ವರಿಬೇರು, ಸೊಗದೇಬೇರು, ಕಟುಕರೋಹಿಣಿ, ಬಜೆ, ಗಜಹಿಪ್ಪಲಿ, ಅಗಿಲು ಶುಂಠಿ, ಬಿಳೇಕೊಮ್ಮೆಬೇರು, ಆನೇನೆಗ್ಗಿಲು, ರಾಮಗುಳ್ಳ, ಹೆಗ್ಗುಳ್ಳ ಇವು ಜಿನಸಿಗೆ ೧ ತೊಲೆ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಹೇರಳೆಹಣ್ಣಿನ ರಸದಲ್ಲಿ ೧ ದಿನ ಭಾವನೆ, ಮಾದವಾಳದಹಣ್ಣಿನ ರಸದಲ್ಲಿ ೧ ದಿನ ಭಾವನೆ, ಹಸೀಶುಂಠಿ ರಸದಲ್ಲಿ ೧ ದಿನ ಭಾವನೆಮಾಡಿ ಬಿಸಲಿನಲ್ಲಿ ಒಣಗಿಸಿ ಚೂರ್ಣಮಾಡಿ ಶೋಧಿಸಿ ಇಟ್ಟುಕೊಳ್ಳುವದು. ಹೊತ್ತಿಗೆ ॥ ತೊಲೆ ಚೂರ್ಣ ಬಿಸಿನೀರಿನಲ್ಲಿ ತೆಗೆದುಕೊಳ್ಳುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿವಸ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶೂಲೆ, ಕಂಪವಾತ, ಶೀತಜ್ವರ, ಮಂದಾಗ್ನಿ, ಹೃದಯಶೂಲೆ, ದಂತ ವಾತ, ತ್ರಯೋದಶಸನ್ನಿ ಸಹಾ ಗುಣವಾಗುವದು.

೮. ತ್ರಯೋದಶಾಗ್ನಿ ಚೂರ್ಣ:—ಗಜ್ಜುಗದಪಪ್ಪು ೧ ತೊಲೆ, ಸೈಂಧವ ಲವಣ ೧ ತೊಲೆ, ಶುದ್ಧಿಮಾಡಿದ ಹಿಂಗು ॥ ತೊಲೆ, ಶುಂಠಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಚಿತ್ರಮೂಲ ೧ ತೊಲೆ, ಆಳಲೇಕಾಯಿಸಿಪ್ಪೆ ೧ ತೊಲೆ, ಶುದ್ಧಿಮಾಡಿದ ಲಾಲ್‌ತಿಗಡು ೧ ತೊಲೆ, ಬಿಳೇಕೊಮ್ಮೆಬೇರು ೧ ತೊಲೆ, ಹೊಟ್ಟು ಸುಲಿದ ಬೆಳ್ಳುಳ್ಳಿ ೧ ತೊಲೆ, ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಅರಿಯುವ ಜಿನಸುಗಳನ್ನು ಖಲ್ವದಲ್ಲಿ ಹಾಕಿ ಅರದು ಎಲ್ಲವನ್ನು ಕಲಸಿ ಇಟ್ಟುಕೊಳ್ಳುವದು. ಬೆಳಿಗ್ಗೆಹೊತ್ತು ಕಾಲುತೊಲೆ ಅಥವಾ ಅರ್ಧತೊಲೆ ಚೂರ್ಣ ಚಿಟ್ಟೆರಳೆಣ್ಣೆಯಲ್ಲಿ ಕಲಸಿಕೊಡುವದು. ಹೀಗೆ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶೂಲೆ, ಗುಲ್ಮ, ಶೋಭೆ, ಅಗ್ನಿಮಾಂದ್ಯ ಸಹಾ ಗುಣವಾಗುವದು.

೯. ರಾಜೋಪಚಾರ ಚೂರ್ಣ:—ಪಂಚಕೋಲ, ತ್ರಿಫಲೆ, ವಾಯು ವಿಳಂಗ, ಶುಂಠಿ, ಹೊಟ್ಟುಸುಲಿದ ಬೆಳ್ಳುಳ್ಳಿ, ವೋಮ, ಅಗಿಲುಶುಂಠಿ, ಈಶ್ವರಿ ಬೇರು, ಬಿಳೇಕೊಮ್ಮೆ, ಗಜಹಿಪ್ಪಲಿ, ಚೌಳುಪ್ಪು, ಹೊಂಗೇಬೇರು, ಕರೇ ಜೀರಿಗೆ, ಬಿಳೇಜೀರಿಗೆ, ಮಂಗರವಳ್ಳಿ, ಸೂರಣದಗಡ್ಡೆ, ಬಲರಾಕ್ಷಸಿಗಡ್ಡೆ, ಅರಿಸಿನ, ಶುದ್ಧಿಮಾಡಿದ ನವಾಸಾಗರ, ಸಜ್ಜಕ್ಷಾರ, ಯವಕ್ಷಾರ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು, ಪಂಚಲವಣ, ಸಾಸುವೆ ಇವು ಜಿನಸಿಗೆ

೧ ತೊಲೆ, ಶುದ್ಧಿಮಾಡಿದ ಲಾಲ್‍ತಿಗಡೆ ೧೬ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿಕೊಳ್ಳುವದು. ಹೊತ್ತಿಗೆ ಕಾಲುತೊಲೆ ಅಥವಾ ಅರ್ಧತೊಲೆ ಚೂರ್ಣ ಬಾಯಿಯಲ್ಲಿ ಹಾಕಿಕೊಂಡು ಬಿಸಿನೀರು ಕುಡಿಯುವದು. ಹೀಗೆ ಬೆಳಿಗ್ಗೆ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಕ್ಷಶೂಲೆ, ಪಾರ್ಶ್ವಶೂಲೆ, ಅನ್ನದ್ವೇಷ, ಪಾಂಡು, ಶಿರೋರೋಗ, ಪುರಾಣಜ್ವರ, ಕಾಮಾಲೆ ಇವು ಗುಣವಾಗುವವು.

೧೦. ಹಿಂಗ್ವಾದಿ ಚೂರ್ಣ:—ಶುದ್ಧಿಮಾಡಿದ ಹಿಂಗು, ಚಿತ್ರಮೂಲ, ಶುಂಠಿ, ಅರಿಸಿನ, ಚಂಗಲಕೋಷ್ಟ, ವೋಡಿ, ಈಶ್ವರಿಬೇರು, ವೋಮ, ನೆಲ್ಲಿಕಾಯಿ, ವಿಷ್ಣುಕ್ರಾಂತಿ, ಮೆಣಸು, ಬಿಳೇಜೀರಿಗೆ, ಲವಂಗ, ಯವಕ್ಷಾರ, ಸಜ್ಜಕ್ಷಾರ, ಪಂಚಲವಣ ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ಕಾಲುತೊಲೆ ಅಥವಾ ಅರ್ಧತೊಲೆ ಚೂರ್ಣ ನಿಂಬೇಹಣ್ಣಿನ ರಸದಲ್ಲಾಗಲಿ, ಬಿಸಿನೀರಿನಲ್ಲಾಗಲಿ ತೆಗೆದುಕೊಳ್ಳುವದು. ಹೀಗೆ ಬೆಳಿಗ್ಗೆಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವಾತ, ಮಂದಾಗ್ನಿ, ಕ್ಷಯ, ಪಾಂಡು, ಶೂಲೆ ಗುಣವಾಗುವದು.

೧೧. ಸೈಂಧವಲವಣ ೩ ತೊಲೆ, ಗಾಜುಲವಣ ೬ ತೊಲೆ, ಕಲ್ಲುಪ್ಪು ೬ ತೊಲೆ, ಕರೇವುಪ್ಪು ೧೨ ತೊಲೆ, ಪೆಟ್ಲುಪ್ಪು ೨೪ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಒಂದು ಚಿಕ್ಕ ಗಡಿಗೆ ತಂದು ಅಡಿಯಲ್ಲಿ ೫೦ ಎಕ್ಕದಯಲೆ ಹಾಕಿ ಅದರಮೇಲೆ ಮೇಲ್ಕಂಡ ಚೂರ್ಣ ಒಂದು ಪದರ ಹಾಕಿ ಅದರಮೇಲೆ ೫೦ ಎಕ್ಕದಯಲೆ ಹಾಕಿ ಅದರಮೇಲೆ ಚೂರ್ಣ ಒಂದು ಪದರ ಹಾಕಿ ಅದರಮೇಲೆ ೫೦ ಎಕ್ಕದಯಲೆ ಹಾಕಿ ಅದರಮೇಲೆ ಚೂರ್ಣ ಒಂದು ಪದರ ಹಾಕಿ ಅದರಮೇಲೆ ೫೦ ಎಕ್ಕದಯಲೆ ಹಾಕಿ ಬಾಯಿಗೆ ಮುಚ್ಚಳ ಮುಚ್ಚಿ ಕೆಮ್ಮಣ್ಣು ಬಟ್ಟೆ ಚೀಲು ಮಾಡಿ ೧೦೦ ಬೆರಣಿಯಲ್ಲಿ ಪುಟಕಾಕಿದರೆ ಸುಣ್ಣ ಆಗುತ್ತದೆ. ಹೊತ್ತಿಗೆ ೧ ಹಣ ತೂಕ ಸುಣ್ಣ ಜೇನುತುಪ್ಪ, ಜೀರಿಗೆಕಷಾಯ, ಸೋಪಿನಕಷಾಯ ಈ ಅನುಪಾನಗಳಲ್ಲ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೩-೫-೭ ದಿನ ಕೊಡುವದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಮಸ್ತ ಶೂಲೆ, ಹೊಟ್ಟೆಗಡ್ಡೆ ಕರಗಿ ಗುಣವಾಗುವದು.

೧೨ ಗಜ್ಜುಗದಪಪ್ಪು ೧ ತೊಲೆ, ಶುದ್ಧಿಮಾಡಿದ ಹಿಂಗು ‖ ತೊಲೆ, ಸೈಂಧವಲವಣ ೧ ತೊಲೆ, ಶುಂಠಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಹೊಟ್ಟುಸುಲಿದ ಬೆಳ್ಳುಳ್ಳಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಖಲ್ವದಲ್ಲಿ ಹಾಕಿ ತಣ್ಣೀರಿನಿಂದ ಅರದು ಕಡಲೇಕಾಳು ಪ್ರಮಾಣ ಮಾತ್ರೆಮಾಡುವದು. ಹೊತ್ತಿಗೆ ೧ ಮಾತ್ರೆ ತಣ್ಣೀರಿನಿಂದ ಕೊಡುವದು.

ಹೀಗೆ ಬೆಳಿಗ್ಗೆ ಸಾಯಂಕಾಲ ೩-೫-೭ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಮಸ್ತ ಶೂಲಿಗಳು ಗುಣವಾಗುವವು.

೧೩. ನಿಂಬೇಕಾಯಿಬೀಜದಪಪ್ಪು ೨ ತೊಲೆ ಕಷಾಯ ಕಾಯಿಸಿ ಇದರಲ್ಲಿ ಉಗನಿಯುಲೆಯನ್ನು ಅರದು ಹಸೀ ಅಡಿಕೆಗಾಯಿಗಾತ್ರ ಉಂಡೆಮಾಡಿ ಕಷಾಯದಲ್ಲಿ ಬೆರಸಿ ಇದಕ್ಕೆ ೧ ತೊಲೆ ಬೆಲ್ಲ ಹಾಕಿ ಕಲಸಿ ಕುಡಿಸಲು ಮೋಹಭಳಕು, ಹೊಟ್ಟೆಶೂಲೆ ಗುಣವಾಗುವದು ಈರೀತಿ ಬೆಳಿಗ್ಗೆಹೊತ್ತು ೩ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ.

೧೪. ಶುಂಠಿ ೧ ತೊಲೆ, ಮೆಣಸು ೧ ತೊಲೆ, ಬಿಳೇಜೀರಿಗೆ ೧ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಇದಕ್ಕೆ ಹೊಟ್ಟು ಸುಲಿದ ಬೆಳ್ಳುಳ್ಳಿ ೩|| ತೊಲೆ, ಶುದ್ಧಿಮಾಡಿದ ಹಿಂಗು || ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ತಣ್ಣೀರಿನಲ್ಲಿ ಅರದು ಕಡಲೇಪ್ರಮಾಣ ಮಾತ್ರೆಮಾಡಿ ೧ ಮಾತ್ರೆ ಬಿಸಿನೀರಿನಲ್ಲಿ ಕಲಸಿ ಕೊಡಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೫-೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಕ್ಕಶೂಲೆ ಸಹಾ ಗುಣವಾಗುವದು.

೧೫. ಶುದ್ಧಿಮಾಡಿದ ಹಿಂಗು ೧ ತೊಲೆ, ಬೆಲ್ಲ ೧ ತೊಲೆ, ಚಂಗಲಕೋಷ್ಟ ೧ ತೊಲೆ, ಸೌವರ್ಚಲವಣ ೧ ತೊಲೆ, ಬಿಡಾಲವಣ ೧ ತೊಲೆ, ಯವಕ್ಷಾರ ೧ ತೊಲೆ ಇವುಗಳನ್ನು ಚೂರ್ಣಮಾಡಿ ೧ ಹಣತೂಕ ಬಿಸಿನೀರಿನಲ್ಲಾಗಲಿ ಅಥವಾ ನಿಂಬೇಹಣ್ಣಿನ ರಸದಲ್ಲಾಗಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೫-೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಹೃದಯಶೂಲೆ, ಗುಲ್ಮ ಗುಣವಾಗುವದು.

೧೬. ೨ ತೊಲೆ ಕೋಳಿಮೊಟ್ಟೆ ಮರಿಮಾಡಿದ ಚಿಪ್ಪು, ೨ ತೊಲೆ ಲವಂಗ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು ಹೊತ್ತಿಗೆ ೫ ಗುರುಗಂಜಿತೂಕ ನಿಂಬೇಹಣ್ಣಿನ ರಸದಲ್ಲಿ ಹಾಕಿ ಕೊಟ್ಟರೆ ಉಕ್ಕುಬರುತ್ತೆ ಇದನ್ನು ಕೊಡುವದು. ಒಂದೇಹೊತ್ತಿಗೆ ನಿಲ್ಲದೆಯಿದ್ದರೆ ೨-೩ ದಿನ ಕೊಡಬೇಕು. ಈ ರೀತಿ ಬೆಳಿಗ್ಗೆಹೊತ್ತು ಮಾತ್ರ ಕೊಡಬೇಕು. ಇದರಿಂದ ಹೊಟ್ಟೆಶೂಲೆ ಪರಿಣಾಮಶೂಲೆ ಗುಣವಾಗುವದು. ಮತ್ತೊಂದು ವಿಧ ಕಷಾಯದಲ್ಲಿ ಮೇಲ್ಕಂಡ ಚೂರ್ಣವನ್ನು ಸೇರಿಸಿ ಕುಡಿಯುವ ಕ್ರಮ:—ಸೈಂಧವಲವಣ ೧ ತೊಲೆ, ಶುಂಠಿ ೧ ತೊಲೆ, ಮೆಣಸು ೧ ತೊಲೆ ಇವುಗಳನ್ನು ಕಷಾಯಮಾಡಿ ಮೇಲ್ಕಂಡ ಚೂರ್ಣವನ್ನು ೫ ಗುರುಗಂಜಿ ತೂಕ ಬೆರಸಿ ದಿನಕ್ಕೆ ಎರಡಾವರ್ತಿ ೩ ದಿವಸ ಕುಡಿಯಲು

ಹೊಟ್ಟೆಶೂಲೆ, ಪರಿಣಾಮಶೂಲೆ ಸಂಪೂರ್ಣ ಗುಣವಾಗುವದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ.

೧೭. ತುಂಬೇಹುವ್ವ ೬ ತೊಲೆ, ಮೆಣಸು ೩ ತೊಲೆ, ಶುಂಠಿ ೩ ತೊಲೆ, ಬಿಳೇಜೀರಿಗೆ ೬ ತೊಲೆ, ಬಜೆ ೨ ತೊಲೆ, ಹೊಟ್ಟುಸುಲಿದ ಬೆಳ್ಳುಳ್ಳಿ ೬ ತೊಲೆ, ತಾಟಬೆಲ್ಲ ೧೨ ತೊಲೆ ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಎಲ್ಲವನ್ನು ಕೇರಿಸಿ ಖಲ್ವದಲ್ಲಿ ಹಾಕಿ ೧ ಜಾವ ಅರದು ಬಿಲ್ಲೆಮಾಡಿ ಒಂದು ಬೋಕಿ ಯಲ್ಲಿಟ್ಟು ಬೆಂಕಿಯಮೇಲೆ ಬಿಸಿಮಾಡಿ ಕಡಲೇಕಾಳು ಪ್ರಮಾಣ ಮಾತ್ರೆಮಾಡಿ ಬಿಸಿನೀರಿನಲ್ಲಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡುವದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಹೊಟ್ಟೇ ಶೂಲೆ, ಹೊಟ್ಟೆನೋವು ಸಹಾ ಗುಣವಾಗುವದು.

೧೮. ಶುದ್ಧಿಮಾಡಿದ ಹಿಂಗು ೧ ತೊಲೆ, ಶುಂಠಿ ೪ ತೊಲೆ, ಹಿಪ್ಪಲಿ ೭ ತೊಲೆ, ಬಜೆ ೨ ತೊಲೆ, ವೋಮ ೫ ತೊಲೆ, ಚಂಗಲಕೋಷ್ಟ ೮ ತೊಲೆ, ಬಿಳೇ ಜೀರಿಗೆ ೩ ತೊಲೆ, ಮೆಣಸು ೨ ತೊಲೆ, ಚಿತ್ರಮೂಲ ೩ ತೊಲೆ, ಅಳಲೇಕಾಯಿ ಸಿಪ್ಪೆ ೬ ತೊಲೆ, ಶುದ್ಧಿಮಾಡಿದ ಲಾಲ್‌ತಿಗಡು ೧೦ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಬೆಳಿಗ್ಯೆಹೊತ್ತು ಕಾಲುತೊಲೆ, ಅರ್ಧತೊಲೆ ಬಿಸಿನೀರಿ ನಲ್ಲಿ ಕೊಡುವದು. ಹೀಗೆ ಬೆಳಿಗ್ಯೆಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಕಲ ಶೂಲೆ ಗುಣ ವಾಗುವದು.

೧೯. ಉತ್ತರೇಣಿಸಮೂಲ ಸುಟ್ಟಭಸ್ಮ ೩ ಗುರುಗಂಜಿ ತೂಕ, ಹುಣಿಸೇ ಚಕ್ಕೆ ಸುಟ್ಟಭಸ್ಮ ೩ ಗುರುಗಂಜಿ ತೂಕ, ಸೈಂಧವಲವಣ ೩ ಗುರುಗಂಜಿ ತೂಕ ಇವು ಮೂರನ್ನು ಎಕ್ಕದಹಣ್ಣೆಲೆ ರಸ ೧ ತೊಲೆ, ನುಗ್ಗೇಚಕ್ಕೆ ರಸ ೧ ತೊಲೆ ಈ ಎರಡು ರಸಗಳನ್ನು ಬೆರಸಿ ಮೇಲ್ಕಂಡ ಭಸ್ಮಗಳನ್ನು ಲವಣವನ್ನು ಬೆರಸಿ ಬೆಳಿಗ್ಯೆಹೊತ್ತು ॥ ತೊಲೆ ಪ್ರಮಾಣ ತೆಗೆದುಕೊಳ್ಳಬೇಕು. ಈರೀತಿ ೩ ದಿವಸ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಮೇಹಶೂಲೆ, ಗುಲ್ಮ ಗುಣವಾಗುವದು.

೨೦. ಗಜ್ಜುಗದಪಪ್ಪು ೧ ತೊಲೆ, ಶುದ್ಧಿಮಾಡಿದ ಹಿಂಗು ॥ ತೊಲೆ, ಸೈಂಧವಲವಣ ೨ ತೊಲೆ, ಹೊಟ್ಟುತೆಗೆದ ಬೆಳ್ಳುಳ್ಳಿ ೩॥ ತೊಲೆ, ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಅರಿಯುವ ಜಿನಸುಗಳನ್ನು ಅರದು ಎಲ್ಲವನ್ನು ಖಲ್ವದಲ್ಲಿ ಹಾಕಿ ಕಡಲೇಕಾಳು ಪ್ರಮಾಣ ಮಾತ್ರೆಮಾಡು ವದು. ಹೊತ್ತಿಗೆ ೧ ಮಾತ್ರೆ ಬಿಸಿನೀರಿನಲ್ಲಿ ಕೊಡುವದು. ಹೀಗೆ ಬೆಳಿಗ್ಯೆ

ಸಾಯಂಕಾಲ ೨ ಹೊತ್ತು ೭ ದಿನ ಕೊಡುವದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸರ್ವ ವಿಧ ಶೂಲೆಗಳೂ ಗುಣವಾಗುವುವು.

೨೧. ೨೫ ಕೋಳಿಮೊಟ್ಟೆಗಳನ್ನು ಬೇಯಿಸಿ ಮೇಲಿನ ಚಿಪ್ಪು ಮತ್ತು ಬಿಳುಪಾಗಿರುವ ವಸ್ತುಗಳನ್ನು ಬಿಸಾಡಿ ಅರಿಸಿನ ಬಣ್ಣವುಳ್ಳದ್ದನ್ನು ತೆಗೆದು ಕೊಳ್ಳುವದು. ಹೊಟ್ಟುತೆಗೆದ ಬೆಳ್ಳುಳ್ಳಿ ೨೫ ತೊಲೆ ಇವು ಎರಡನ್ನು ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ರೊಟ್ಟೆಯಂತೆ ಬಿಲ್ಲೆಮಾಡಿ ಒಂದು ಬಾಂಡ್ಲಿಯಲ್ಲಿ ವಾರೆಯಾಗಿಯಿಟ್ಟು ಒಲೆಯಮೇಲೆಯಿಟ್ಟು ಉರಿಹಾಕಬೇಕು. ಈ ತೈಲ ಇಳಿ ಯುತ್ತಾಬರುತ್ತೆ ಅದನ್ನು ಆಗಾಗ್ಯೆ ಸೌಟನಿಂದ ಎತ್ತಿಕೊಳ್ಳುತ್ತಾ ಬರುವದು. ಈ ತೈಲಕ್ಕೆ ಕಸ್ತೂರಿ ೨ ಆಣೆ ತೂಕ ಕಲಸಿ ಇಟ್ಟುಕೊಳ್ಳುವದು ಹೊಟ್ಟೆಗೆ ದೊಡ್ಡವರು ೬ ಬೊಟ್ಟು ತೈಲ ವೀಳಯದೆಲೆಯಲ್ಲಿಟ್ಟು ತಿನ್ನುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಕ್ಕಶೂಲೆ, ಪಾರ್ಶ್ವವಾಯು, (ಲಕ್ವಾ) ಗುಣವಾಗುವದು.

೨೨. ಒಳ್ಳೆಣ್ಣೆ ೧ ಪಾವು, ಆರತಿಕರ್ಪೂರ ೧ ತೊಲೆ, ಅಫೀಂ ೧ ತೊಲೆ ಇವು ಮೂರು ಕಬ್ಬಿಣದ ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಕಾಯಿಸಿ ಇಳಿಸಿಕೊಳ್ಳುವದು. ಪಕ್ಕಶೂಲೆಗೆ ಮೇಲೆ ಸವರುತ್ತಾಬಂದರೆ ಗುಣವಾಗುವದು.

೨೩. ಹಸುವಿನತುಪ್ಪ ೧ ತೊಲೆ ಸೌಟನಲ್ಲಿ ಹಾಕಿ ಹಾಲುಹಿಂಗು ೧ ಉದ್ದಿನ ಕಾಳಷ್ಟು ಹಾಕಿ ಬೆಂಕಿಯಮೇಲಿಟ್ಟು ಕಾಯಿಸಿ ತಣ್ಣಗೆ ಆದಮೇಲೆ ಆ ತುಪ್ಪ ವನ್ನು ಕುಡಿಯುವದು. ಇದರಿಂದ ಎಂಥಾ ಅಸಾಧ್ಯ ಶೂಲೆಯಾದರೂ ಗುಣವಾಗು ವದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ.

೨೪. ಶೂಲೆಗಳಿಗೆ ಶಂಖವಟಿಕ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಸೈಂಧವಲವಣ ೨ ತೊಲೆ, ಸೂರಿ ಬೆಳಗಾರ ಅರಳುಮಾಡಿದ್ದು ೨ ತೊಲೆ, ಶುದ್ಧಿಮಾಡಿದ ಶಂಖಭಸ್ಮ ೧ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಅರದು ಇದಕ್ಕೆ ಶುಂಠಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಶುದ್ಧಿಮಾಡಿದ ಪರಂಗಿಚಕ್ಕೆ ೬ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಚಿತ್ರಮೂಲದ ಕಷಾಯದಲ್ಲಿ ೧ ಭಾವನೆ, ಹಶೀಶುಂಠಿ ರಸದಲ್ಲಿ ೧ ಭಾವನೆ ನಿಂಬೇಹುಳಿಯಲ್ಲ ೧ ಭಾವನೆ ಮಾಡಿ ಗುರುಗಂಜಿಗಾತ್ರ ಮಾತ್ರೆಮಾಡಿ ಶುಂಠಿ ಕಷಾಯದಲ್ಲ ಕೊಡುವದು. ಈರೀತಿ ಬೆಳಿಗ್ಯೆ ಸಾಯಂಕಾಲ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀ ಬೇಳೆ ಸಿಹಿಸಾರು ಅನ್ನ. ಇದರಿಂದ ೮ ವಿಧ ಗುಲ್ಮ, ೭ ವಿಧ ಶೂಲೆ ಗುಣ ವಾಗುವದು.

೨೫. ಶುದ್ಧಿಮಾಡಿದ ಪಾದರಸ ಕಾಲುತೊಲೆ, ಶುದ್ಧಿಮಾಡಿದ ರಸಕರ್ಪೂರ ಕಾಲುತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ॥ ತೊಲೆ, ಶುದ್ಧಿಮಾಡಿದ ನಾಭಿ ೨ ಆಣೆ ತೂಕ, ಶುದ್ಧಿಮಾಡಿದ ಹಿಂಗು ೨ ಆಣೆ ತೂಕ, ಹುಣಸೇಚಕ್ಕೆ ಸುಟ್ಟ ಭಸ್ಮ ೩ ತೊಲೆ, ಶಂಖಭಸ್ಮ ೩ ತೊಲೆ, ಮೆಣಸು ೨ ತೊಲೆ ಇವುಗಳನ್ನು ಖಲ್ವ ದಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲಿ ೧ ದಿನ ಅರದು ಹೆಸರುಕಾಳು ಪ್ರಮಾಣ ಮಾತ್ರೆಮಾಡುವದು. ಈ ಮಾತ್ರೆ ಹಶೀಶುಂಠಿ ರಸದಲ್ಲಿ, ಹೇರಳೆಹಣ್ಣಿನ ರಸ, ಜೇನುತುಪ್ಪ ಈ ಅನುಪಾನಗಳಲ್ಲಿ ಬೆಳಿಗ್ಗೆ ೧ ಮಾತ್ರೆ, ಸಾಯಂಕಾಲ ೧ ಮಾತ್ರೆ ಈರೀತಿ ೭ ದಿನ ಕೊಡುವದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಅಷ್ಟಾದಶಶೂಲೆ, ಮೇಹಶೂಲೆ ಗುಣವಾಗುವದು.

೨೬. ಶುದ್ಧಿಮಾಡಿದ ಮಣಿಸಿಲೆ ೧ ತೊಲೆ, ಶುದ್ಧಿಮಾಡಿದ ಪಾಲತುತ್ತ ೨ ತೊಲೆ, ಸುಣ್ಣ ೫ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಸುಣ್ಣದ ತಿಳಿನೀರಿ ನಲ್ಲಿ ಅರದು ಬಿಲ್ಲೆಮಾಡಿ ಒಣಗಿಸಿ ೨ ಹಣತೆಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಶೀಲು ಮಾಡಿ ಕುಕ್ಕುಟ ಪುಟಹಾಕಿ ಈ ಭಸ್ಮವನ್ನು ತೆಗೆದುಕೊಂಡು ಖಲ್ವದಲ್ಲಿ ಹಾಕಿ ಲೋಳೆಸರದ ರಸದಲ್ಲಿ ಅರದು ತೊಗರೀಕಾಳು ಪ್ರಮಾಣ ಮಾತ್ರೆಮಾಡಿ ಜೇನು ತುಪ್ಪ, ಹಸುವಿನತುಪ್ಪ ಇವುಗಳಲ್ಲಿ ಕೊಡುವದು. ಈರೀತಿ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೩-೫ ದಿವಸ ಕೊಡುವದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಮೇಹಶೂಲೆ, ಗುಣವಾಗುವದು.

೨೭. ನಾಗರಸ ಗಜಾಂಕುಶಂ :— ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿ ಮಾಡಿದ ಹವಳಸರಿಗಂಧಕ ೪ ತೊಲೆ, ಸೂರ್ತಿಬೆಳಗಾರ ಅರಳುಮಾಡಿದ್ದು ೧ ತೊಲೆ ಇವು ಮೂರು ಖಲ್ವದಲ್ಲಿ ಹಾಕಿ ಅರಿಯುವದು. ಮುತ್ತುಗದ ಚಕ್ಕೆ ಸುಟ್ಟಭಸ್ಮ ೧ ತೊಲೆ, ಎಳ್ಳುಕಡ್ಡಿ ಸುಟ್ಟಭಸ್ಮ ೧ ತೊಲೆ, ಹುಣಸೇಚಕ್ಕೆ ಸುಟ್ಟಭಸ್ಮ ೧ ತೊಲೆ, ಸೈಂಧವಲವಣ ೨ ತೊಲೆ, ಯವಕ್ಷಾರ ೨ ತೊಲೆ, ಕಲ್ಲುಪ್ಪು ೨ ತೊಲೆ, ಹಿಪ್ಪಲಿ ೪ ತೊಲೆ, ಶುಂಠಿ ೪ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ತಾಂಬ್ರಭಸ್ಮ ಕಾಲುತೊಲೆ, ಶುದ್ಧಿ ಮಾಡಿದ ಜಾಪಾಳ ೬ ತೊಲೆ ಇವುಗಳೆಲ್ಲವನ್ನು ಖಲ್ವದಲ್ಲ ಹಾಕಿ ನಿಂಬೇಹಣ್ಣಿನ ರಸದಲ್ಲಿ ಅರದು ಗುರುಗಂಜಿ ಪ್ರಮಾಣ ಮಾತ್ರೆಮಾಡಿ ಹೊತ್ತಿಗೆ ೧ ಮಾತ್ರೆ ಹಶೀಶುಂಠಿ ರಸದಲ್ಲಿ ಕೊಡಬೇಕು. ಹೀಗೆ ಬೆಳಿಗ್ಗೆಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸರ್ವಶೂಲೆಗಳು, ಪಂಚಗುಲ್ಮಗಳು, ವಾಯುವು, ಮೇಹಗ್ರಂಥಿ ಇವು ಗುಣವಾಗುವದು.

# ಮುವತ್ತೆರಡನೆಯ ಅಧ್ಯಾಯ.

## ಗುಲ್ಮ ರೋಗ—ಔಷಧಗಳು.

### ಗುಲ್ಮ ಲಕ್ಷಣ.

ಮಿತ್ಯಾಹಾರ ವಿಹಾರಗಳಿಂದ ವಾತಾದಿಗಳು ಪ್ರಕೋಪವನ್ನು ಹೊಂದಿ ಹೃದಯಕ್ಕೂ, ನಾಭಿಗೂ ಮಧ್ಯಭಾಗದಲ್ಲ ವರ್ತುಲಾಕಾರವಾಗಿ ಒಂದೊಂದು ಸಲ ಚಲಿಸುತ್ತಲೂ ಒಂದೊಂದು ಸಲ ಚಲಿಸದೆಯೂ ಇರುವ ಗ್ರಂಥಿಯು ಉಂಟಾಗುವುದು ಇದು ಗುಲ್ಮವೆನ್ನಲ್ಪಡುವುದು.

ಗುಲ್ಮರೋಗವು ವಾತ, ಪಿತ್ಥ, ಕಫ, ಸನ್ನಿಪಾತ, ವಾತಪಿತ್ಥ, ಪಿತ್ಥಶ್ಲೇಷ್ಮ ಶ್ಲೇಷ್ಮವಾತ, ರಕ್ತಗಳಿಂದ ಉತ್ಪನ್ನವಾಗಿ ಎಂಟು ವಿಧವಾಗಿರುವುದು.

ವಾತಗುಲ್ಮದಲ್ಲಿ:—ಗ್ರಂಥಿಯು ವ್ಯವಸ್ಥೆಯಿಲ್ಲದೆ ಒಂದೊಂದುಸಲ ನಾಭಿಯಲ್ಲಿಯೂ, ಒಂದೊಂದುಸಲ ಎರಡು ಪಕ್ಕಗಳಲ್ಲಿಯೂ, ಒಂದೊಂದುವೇಳೆ ವಸ್ತಿಯಲ್ಲಿಯೂ ಸಂಚರಿಸುವಿಕೆ, ಚಿಕ್ಕದು ದೊಡ್ಡದಾಗುವಿಕೆ, ಮಲಬಂಧವು, ಅಪಾನಬಂಧವು, ಛಳಿಜ್ವರವುಂಟಾಗುವಿಕೆ, ಹೃದಯವು, ಪಾರ್ಶ್ವಗಳು, ಹೆಗಲುಗಳು, ಶಿರಸ್ಸು, ಕುಕ್ಷಿ ಇವುಗಳಲ್ಲಿ ನೋವುಂಟಾಗುವಿಕೆ, ಅನ್ನವು ಜೀರ್ಣವಾಗುವಾಗ ಬಹಳ ಬಾಧೆಯಾಗುವಿಕೆ, ಅನ್ನವು ತಿಂದಮೇಲೆ ವಾಂತಿಯಾಗುವಿಕೆ ಮೊದಲಾದ ಚಿಹ್ನೆಗಳು ಕಂಡುಬರುವುವು.

ಪಿತ್ಥಗುಲ್ಮದಲ್ಲ:—ಜ್ವರವು, ದಾಹವು, ಮುಖವು ಶರೀರವು ಇವು ಕಪ್ಪಾಗಿರುವಿಕೆ, ಅನ್ನವನ್ನು ತಿನ್ನುವಾಗಲೂ, ಜೀರ್ಣವಾಗುವಾಗಲೂ ಅಧಿಕವಾದ ಶೂಲೆಯುಂಟಾಗುವಿಕೆ, ಮೈ ಬೆವರುವಿಕೆ, ಅಧಿಕ ಸಂತಾಪವಾಗುವಿಕೆ, ವ್ರಣದಂತೆ ಸ್ಪರ್ಶವನ್ನು ತಾಳದಿರುವಿಕೆ ಮೊದಲಾದ ಚಿಹ್ನೆಗಳು ಕಂಡುಬರುವುವು.

ಕಫಗುಲ್ಮದಲ್ಲಿ:—ಶರೀರವು ಮರದ ತುಂಡಿನೋಪಾದಿಯಲ್ಲಿರುವಿಕೆ, ಛಳಿಜ್ವರವು, ಶರೀರವು ಕೃಶತ್ವವನ್ನು ಹೊಂದುವಿಕೆ, ಕೆಮ್ಮು, ಅರುಚಿ, ಗುರುತ್ವವು, ಶೀತಲತ್ವವು, ಬಾಧೆ ಕೊಂಚವಾಗಿರುವಿಕೆ, ಕಠಿನವಾಗಿ ಬಹಳ ಉನ್ನತವಾಗಿರುವಿಕೆ ಈ ಲಕ್ಷಣಗಳಿರುವುವು.

ದ್ವಿದೋಷದಿಂದ ಹುಟ್ಟಿದ ಗುಲ್ಮಗಳಲ್ಲಿ ದೋಷದ್ವಯ ಲಕ್ಷಣಗಳೂ, ತ್ರಿದೋಷ ಗುಲ್ಮದಲ್ಲಿ ದೋಷತ್ರಯ ಲಕ್ಷಣಗಳನ್ನೂ ಉಂಟಾಗಿರುವುವೆಂದು ತಿಳಿಯುವುದು.

ಪ್ರಥಮ ಗರ್ಭ ಪ್ರಸವಕಾಲದಲ್ಲಿಯೂ, ಪರಿಪೂರ್ಣವಾಗದಿರುವ ಗರ್ಭವು ಸ್ರವಿಸಿದಾಗಲೂ, ಋತುಮತಿಯಾದ ಸಮಯದಲ್ಲಿಯೂ ಅಪಥ್ಯ ಪದಾರ್ಥಗಳನ್ನು

ಊಟಮಾಡುವುದರಿಂದ ವಾತವು ಪ್ರಕೋಪವನ್ನು ಹೊಂದಿ ರಕ್ತವನ್ನು ನಿರೋಧಿಸಿ, ಪಿತ್ಥಗುಲ್ಮಕ್ಕೆ ಸಮಾನವಾದ ಚಿಹ್ನೆಗಳುಳ್ಳ ರಕ್ತಗುಲ್ಮವು ಸ್ತ್ರೀಯರಿಗೆ ಸಂಭವಿಸುವುದು. ಇದರಲ್ಲಿ ರಕ್ತವು ಸ್ರವಿಸದಿರುವಿಕೆ, ಬಾಯಲ್ಲಿ ನೀರು ಹೊರಡುವಿಕೆ, ಮೊಲೆಯ ತೊಟ್ಟುಗಳು ಕಪ್ಪಾಗಿರುವಿಕೆ ಮೊದಲಾದ ಗರ್ಭ ಚಿಹ್ನೆಗಳೆಲ್ಲವೂ ಕಾಣುವುವು ಅಲ್ಲದೆ ಈ ಗ್ರಂಥಿಯು ಪಿಂಡಾಕಾರವಾಗಿ ಚಲಿಸುತ್ತಿರುವುದು ಆ ರಕ್ತಗುಲ್ಮಕ್ಕೆ ೧೦ ಮಾಸಗಳ ನಂತರ ಚಿಕಿತ್ಸೆಯನ್ನು ಮಾಡಬೇಕು.

## ಗುಲ್ಮರೋಗದಲ್ಲಿ ಅಸಾಧ್ಯ ಲಕ್ಷಣ.

೧. ಬಹಳ ದಿನ ಸಂಚಿತವಾದ ಉದರಶೂಲೆಯನ್ನುಂಟುಮಾಡುವ ತಲೆ ಮೊದಲಾದ ಸ್ಥಳಗಳಲ್ಲಿ ಸುತ್ತಿಕೊಂಡು ಕೂರ್ಮದೋಪಾದಿಯಲ್ಲಿ ದಪ್ಪನಾಗಿರುವಿಕೆ, ದುರ್ಬಲತ್ವ, ಅರುಚಿ, ಲಾಲಾ, ಛರ್ದಿ, ಓಕರಿಕೆ, ಬಾಯಾರಿಕೆ, ನೆಗಡಿ, ತಂದ್ರ ಇವುಗಳುಳ್ಳ ಗುಲ್ಮರೋಗವು ಅಸಾಧ್ಯವು.

೨. ಜ್ವರ, ಶ್ವಾಸ, ಛರ್ದಿ, ಅತಿಸಾರ ಇವುಗಳಿಂದ ಪೀಡಿತವಾಗುವುದು, ಹೃದಯ, ನಾಭಿ, ವಸ್ತಿ, ಪಾದ ಇವುಗಳಲ್ಲಿ ಶೋಭೆಯು, ಶೂಲೆಯುಳ್ಳ ಮನುಷ್ಯನ ಗುಲ್ಮರೋಗವು ಅಸಾಧ್ಯವು

೩. ದಮ್ಮು, ಶೂಲೆ, ಬಾಯಾರಿಕೆ, ಅನ್ನನೀರುಗಳಲ್ಲ ದ್ವೇಷ, ಅಕಸ್ಮಾತ್ ಗುಲ್ಮಗ್ರಂಥಿ ಚಲಿಸುವುದು, ದುರ್ಬಲತ್ವ ಇವುಗಳಿಂದ ಕೂಡಿದ ಗುಲ್ಮರೋಗವು ಅಸಾಧ್ಯವು.

೪. ಜ್ವರ, ದಮ್ಮು, ಕೆಮ್ಮು, ನೆಗಡಿ, ಆಲಸ್ಯ, ವಾಂತಿ, ಭ್ರಾಂತಿ ; ಗುದ, ನಾಭಿ, ಹೃದಯ, ಕೈಕಾಲು ಇವುಗಳಲ್ಲಿ ಶೋಭೆ ; ಕೃಶತ್ವ, ಅತಿಸಾರ, ಬಾಯಾರಿಕೆ, ಶೂಲೆ ಇವುಗಳಿಂದ ಕೂಡಿದ ಗುಲ್ಮರೋಗವು ಅಸಾಧ್ಯವು.

೫. ಬೇರೆಬೇರೆ ಗಂಟುಗಂಟಾಗಿರುವದು, ಗಟ್ಟಿಯಾಗಿರುವದು, ಕೂರ್ಮದಂತೆ ಮೇಲಿನಿಂದ ಕೆಳಕ್ಕೆ ಕೆಳಗಿನಿಂದ ಮೇಲಕ್ಕೆ ಬೆಳೆಯುತ್ತಾಬರುವ ನರಗಳಿಂದ ಕಟ್ಟಿಕೊಂಡಿರುವದು, ಜ್ವರ, ವಮನ, ಬಿಕ್ಕಳಿಕೆ, ನೆಗಡಿ ಇವುಗಳಿಂದ ಕೂಡಿರುವ ಗುಲ್ಮರೋಗವು ಅಸಾಧ್ಯವು.

## ಗುಲ್ಮಕ್ಕೆ ಚಿಕಿತ್ಸೆಗಳು.

೧. ಪಂಚಲವಣ ೫ ತೊಲೆ, ಚಿತ್ರಮೂಲ ೧ ತೊಲೆ, ಮಂಗರವಳ್ಳಿ ೧ ತೊಲೆ, ಬಲರಾಕ್ಷಸಿಗಡ್ಡೆ ೧ ತೊಲೆ, ಕಾಡುಸೂರಣದಗಡ್ಡೆ ೧ ತೊಲೆ, ಯವಕ್ಷಾರ ೧ ತೊಲೆ, ಸಜ್ಜುಕ್ಷಾರ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಬಿಳೇಜೀರಿಗೆ ೧ ತೊಲೆ, ಲವಂಗ ೧ ತೊಲೆ, ಲವಂಗಪತ್ರೆ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ

ಶೋಧಿಸಿಕೊಳ್ಳುವದು. ಹೊಟ್ಟೆಸುಲಿದ ಬೆಳ್ಳುಳ್ಳಿ ೧ ತೊಲೆ, ಶುದ್ಧಿಮಾಡಿದ ಜಾಪಾಳ ೫ ತೊಲೆ ಇವುಗಳೆಲ್ಲವನ್ನು ಖಲ್ವದಲ್ಲಿ ಹಾಕಿ ಹಸುವಿನಹಾಲಿನಲ್ಲಿ ಅರೆದು ಯಳಚೀಬೀಜದ ಪ್ರಮಾಣ ಮಾತ್ರೆಮಾಡಿ ಹೊತ್ತಿಗೆ ೧ ಮಾತ್ರೆಯಂತೆ ಬೆಳಿಗ್ಯೆ ಹೊತ್ತು ಹಸುವಿನತುಪ್ಪದಲ್ಲಿ ಕಲಸಿ ಕೊಡುವದು. ಹೀಗೆ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ ಇದರಿಂದ ಪಂಚಗುಲ್ಮ, ಪಿತ್ಥಗುಲ್ಮ, ವಾತಗುಲ್ಮ, ಶ್ಲೇಷ್ಮಗುಲ್ಮ, ಹುಟ್ಟುಗುಲ್ಮ, ಮೂಲವ್ಯಾಧಿ, ಶ್ವಾಸ ಖಾಸ, ಪಾಂಡು, ಮಹೋದರ, ಕಾಮಾಲೆ ಗುಣವಾಗುವದು

೨. ಶುದ್ಧಿಮಾಡಿದ ಪಾದರಸ ಕಾಲುತೊಲೆ, ಶುದ್ಧಿಮಾಡಿದ ಹವಳಸರಿ ಗಂಧಕ ಕಾಲುತೊಲೆ, ಶುದ್ಧಿಮಾಡಿದ ನಾಭಿ ಕಾಲುತೊಲೆ, ಶುದ್ಧಿಮಾಡಿದ ಹಿಂಗು ಕಾಲುತೊಲೆ, ಹುಣಸೇಚಕ್ಕೆ ಸುಟ್ಟಬೂದಿ ೩ ತೊಲೆ, ಶಂಖಭಸ್ಮ ಕಾಲು ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲಿ ೮ ಟನ ಅರೆದು ಕಡಲೇಪ್ರಮಾಣ ಮಾತ್ರೆಮಾಡಿ ಹೊತ್ತಿಗೆ ೧ ಮಾತ್ರೆ ಯಳನೀರಿನಲ್ಲಿ ಆಗಲಿ, ಹಶೀಶುಂಠಿ ರಸದಲ್ಲಿ ಆಗಲಿ ಕೊಡಬೇಕು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡುವದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಕಲ ಗುಲ್ಮ, ಸಕಲ ಶೂಲೆ ಗುಣವಾಗುವದು.

೩. ಗಂಧಕಾದಿ ಚೂರ್ಣ:—ಶುದ್ಧಿಮಾಡಿದ ಹವಳಸರಿಗಂಧಕ ೬ ತೊಲೆ, ವಾಯುವಿಳಂಗ ೩ ತೊಲೆ, ಶುಂಠಿ ೨ ತೊಲೆ, ಹಿಪ್ಪಲಿ ೨ ತೊಲೆ, ಮೆಣಸು ೨ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಚಿತ್ರಮೂಲ ೧ ತೊಲೆ, ಮೋಡಿ ೧ ತೊಲೆ, ಶುದ್ಧಿಮಾಡಿದ ಹಿಂಗು ೨ ಆಣೆ ತೂಕ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ಕಾಲುತೊಲೆ ಹಸುವಿನತುಪ್ಪದಲ್ಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ೮ ತರಹ ಗುಲ್ಮ. ಪಾಂಡು, ವಾಯು ಇವು ಗುಣವಾಗುವದು.

೪. ಬಿಳೀಕೊಮ್ಮೆಬೇರು ೧ ತೊಲೆ, ಹಶೀಶುಂಠಿ ೨ ತೊಲೆ, ಹಸುವಿನ ಹಾಲು ೧ ಪಾವು, ಅರಪಾವು ನೀರು, ಮೇಲ್ಕಂಡ ೨ ಜಿನಸುಗಳನ್ನು ಚನ್ನಾಗಿ ಕುಟ್ಟಿ ಎಲ್ಲವನ್ನು ಶೇರಿಸಿ ಪಕ್ವವಾಗಿ ಕಾಯಿಸಿ ಶೋಧಿಸಿ ಕುಡಿಯುವದು. ಹೀಗೆ ಬೆಳಿಗ್ಯೆಹೊತ್ತು ೫-೭ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಲ್ಮ, ಶೋಭೆ ಗುಣವಾಗುವದು.

೫. ಕರಬೇವಿನಸೊಪ್ಪು, ಸೈಂಧವಲವಣ, ಶುಂಠಿ, ಮೆಣಸು, ಹಿಪ್ಪಲಿ, ಬಿಳೀಕೊಮ್ಮೆಬೇರು ಇವು ಜಿನಸಿಗೆ ॥ ತೊಲೆ ತಂದು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ॥ ತೊಲೆ ಹಸುವಿನತುಪ್ಪ ಹಾಕಿ ಕೊಡಬೇಕು.

ಈರೀತಿ ಬೆಳಗಿನಹೊತ್ತು ೩ ದಿವಸ ಕೊಡುವದು. ಇದಕ್ಕೆ ಪಥ್ಯ ತೊಗರೀ ಬೇಳೆ ಸಿಹಿಸಾರು ಅನ್ನ. ಇದರಿಂದ ಗುಲ್ಮಶೂಲೆ ಗುಣವಾಗುವದು.

೬. ಅಳಲೇಕಾಯಿಸಿಪ್ಪೆ ೧ ತೊಲೆ, ಚಿತ್ರಮೂಲ ೧ ತೊಲೆ, ಶುಂಠಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಗಜ್ಜೀಕಾಯಿಪಪ್ಪು ೧ ತೊಲೆ, ಬಿಳೇಜೀರಿಗೆ ೧ ತೊಲೆ, ಕರೇಜೀರಿಗೆ ೧ ತೊಲೆ, ಶುದ್ಧಿಮಾಡಿದ ಹಿಂಗು ಕಾಲು ತೊಲೆ, ಹೊಟ್ಟುಸುಲಿದ ಬೆಳ್ಳುಳ್ಳಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ಕಾಲುತೊಲೆ, ಅರ್ಧತೊಲೆ ಒಳ್ಳೆಣ್ಣೆಯಲ್ಲಿ ಕಲಸಿ ಬೆಳಿಗ್ಯೆ ಪೊತ್ತು ೭ ದಿನ ಕೊಡಬೇಕು ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಆಮಾದಿಗುಲ್ಮ, ಮಂದಾಗ್ನಿ ಮೊದಲಾದ ರೋಗಗಳು ಗುಣವಾಗುವವು.

೭ ಮಂಗರವಳ್ಳಿ, ಚಿತ್ರಮೂಲ, ಗೋದಾವಲ್ಲಿ ಬಲರಾಕ್ಷಸಿಗಡ್ಡೆ, ಪಂಚ ಲವಣ, ಸೂರಣದಗಡ್ಡೆ, ಲಕ್ಕಲಿಸೊಪ್ಪು, ಒಳ್ಳೆಬೇವಿನಸೊಪ್ಪು, ಕರಬೇವಿನ ಸೊಪ್ಪು, ನೆಲಗೊರಿಪುಡಿ, ಬಿಳೇಕೊಮ್ಮೆಬೇರು, ರಾಮಗುಳ್ಳ, ವೋಮ, ಹೊಟ್ಟು ಸುಲಿದ ಬೆಳ್ಳುಳ್ಳಿ ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಅರ್ಧಶೇರು ನಿಂಬೇಹಣ್ಣಿನ ರಸ ಹಾಕಿ ಒಳ್ಳೆಣ್ಣೆ ಅರಪಾವು ಹಾಕಿ ೨ ಆಣೆ ತೂಕ ಶುದ್ಧಿಮಾಡಿದ ಹಿಂಗು ಹಾಕಿ ಕಾಯಿಸಿ ಯಳಚೀಬೀಜದ ಪ್ರಮಾಣ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಂಚಗುಲ್ಮ, ಹೊಟ್ಟೆನೋವು ಗುಣವಾಗುವದು.

೮. ದೊಡ್ಡ ಚಿಟ್ಟಾಮುಟ್ಟಿ ಉತ್ತರಕ್ಕೆ ಹೋಗಿರುವ ಬೇರು ಭಾನುವಾರದ ದಿವಸ ತಂದು ಕುಟ್ಟಿ ಚೂರ್ಣಮಾಡಿದ್ದು ೭॥ ತೊಲೆ, ಶುಂಠಿ ೧ ತೊಲೆ, ಅಳಲೇಕಾಯಿಸಿಪ್ಪೆ ॥ ತೊಲೆ, ತಾರೇಕಾಯಿಸಿಪ್ಪೆ ॥ ತೊಲೆ, ನೆಲ್ಲೀಕಾಯಿ ॥ ತೊಲೆ, ಪಂಚಲವಣ ೨॥ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ, ಬೆಲ್ಲ ೧೫ ತೊಲೆ ಇವುಗಳೆಲ್ಲವನ್ನು ಒರಳಲ್ಲಿ ಹಾಕಿ ಚನ್ನಾಗಿ ಕುಟ್ಟಿ ಇಟ್ಟುಕೊಳ್ಳು ವದು. ಹೊತ್ತಿಗೆ ೧ ಗಜ್ಜುಗದಷ್ಟು ತೆಗೆದುಕೊಳ್ಳಬೇಕು. ಹೀಗೆ ಬೆಳಿಗ್ಯೆ ಸಾಯಂ ಕಾಲ ೨ ಹೊತ್ತು ೭ ದಿನ ಕೊಡುವದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿ ಸಾರು ಅನ್ನ. ಇದರಿಂದ ೬ ವಿಧ ಗುಲ್ಮ ಗುಣವಾಗುವದು.

೯. ಅಮೃತಬಳ್ಳಿ, ಮೆಣಸು ಇವು ಸಮಭಾಗ ಕುಟ್ಟಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ॥ ತೊಲೆ ಚೂರ್ಣ ಬಿಸಿನೀರಿನಲ್ಲಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಲ್ಮ ಗುಣವಾಗುವದು.

* ಇದನ್ನು ತೆಲುಗಿನಲ್ಲಿ ಪುಲ್ಲಬಚ್ಚಲಿಗಡ್ಡ ಎಂತಲೂ ಸಂಸ್ಕೃತದಲ್ಲಿ ಭ್ರಮಣಿಕ, ಅಮ್ಲಿಕ ಎಂತಲೂ ಕರೆಯುವರು.

೧೦ ಬಜೆ ಹಾಗಲಬೇರು ತಂದು ಕುಟ್ಟಿ ಚೂರ್ಣಮಾಡಿ ॥ ತೊಲೆ ಬಿಸಿ ನೀರಿನಲ್ಲಿ ಕೊಡುವದು ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವಾತ ಗುಲ್ಮ ಗುಣವಾಗುವದು.

೧೧ ದಿವ್ಯಾಮೃತ ಚೂರ್ಣ:—ಪ್ರೋಮ ೧ ಶೇರು, ಶುದ್ಧಿಮಾಡಿದ ಯಣ್ಣೆ ಬೆಳಗಾರ ಅರಳುಮಾಡಿದ್ದು ೩ ವರಹತೂಕ, ಪಂಚಲವಣ ೩ ವರಹತೂಕ, ಸಜ್ಜಿಕ್ಷಾರ ೩ ವರಹತೂಕ, ಯವಕ್ಷಾರ ೩ ವರಹತೂಕ, ಚಬುಕಾರ ೩ ವರಹ ತೂಕ, ಶುದ್ಧಿಮಾಡಿದ ಹಿಂಗು ೩ ವರಹತೂಕ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿ ಇದಕ್ಕೆ ಗರುಗದಸೊಪ್ಪಿನ ರಸ ಹಾಕಿ ಬಿಸಲಿನಲ್ಲ ಒಣಗಿಸಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ಕಾಲುತೊಲೆ, ಅರ್ಧತೊಲೆ ಬಿಸಿನೀರಿನಲ್ಲಿ ತೆಗೆದುಕೊಳ್ಳುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೭ ದಿವಸ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಂಚಗುಲ್ಮಗಳು, ವಾಯು ಗುಣವಾಗುವದು.

೧೨. ಕಲ್ಲುಪ್ಪು ೩ ತೊಲೆ, ಮೆಣಸು ೩ ತೊಲೆ ಇವು ಎರಡು ಹುರಿಯು ವದು. ಅನಂತರ ಕಲ್ಲುಪ್ಪು ೩ ತೊಲೆ, ಮೆಣಸು ೩ ತೊಲೆ ಇವು ಎರಡನ್ನು ಹುರಿಯದೆ ಮೇಲ್ಕಂಡ ಹುರಿದ ಎರಡು ಜಿನಸುಗಳನ್ನು ಇದಕ್ಕೆ ಶೇರಿಸಿ ಒರಳಲ್ಲಿ ಹಾಕಿ ಹಸುವಿನಮಜ್ಜಿಗೆ ಹೊಯಿದು ರುಬ್ಬಿ ಬಿಲ್ಲೆಮಾಡಿ ಬೆಚ್ಚಗೆಮಾಡಿ ಇದನ್ನು ಮಜ್ಜಿಗೆಯಲ್ಲಿ ಕಲಸಿ ಹೊತ್ತಿಗೆ ಅರ್ಧ ಪಾವಿನಷ್ಟು ಮಜ್ಜಿಗೆ ಕುಡಿಯುವದು. ಈರೀತಿ ೩-೪ ದಿವಸ ಬೆಳಿಗ್ಗೆಹೊತ್ತು ಕೊಡುವದು. ಪಥ್ಯ ಮಜ್ಜಿಗೆ ಅನ್ನ. ಇದರಿಂದ ಪಂಚಗುಲ್ಮ ಗುಣವಾಗುವದು.

೧೩. ಹಾವುಮೆಕ್ಕೇಕಾಯಿ ತಂದು ಒಂದೊಂದು ಕಾಯಿ ನಾಲ್ಕುನಾಲ್ಕು ಭಾಗವಾಗಿ ಕುಯಿದು ಇದರ ಸಮಭಾಗ ಕಲ್ಲುಪ್ಪು ಹಾಕಿ ಇವು ಎರಡೂ ಕಲಸಿ ಒಂದು ಮಗೆಯಲ್ಲಿ ಹಾಕಿ ಮುಚ್ಚಳಮುಚ್ಚಿ ಕೆಮ್ಮಣ್ಣುಬಟ್ಟೆ ಶೀಲುಮಾಡಿ ೨೦ ದಿನ ಮೇಕೆ ಗೊಬ್ಬರದಲ್ಲಿ ಹೂಳಿಡುವದು. ಅನಂತರ ಅದನ್ನು ತೆಗೆದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ಕಾಲುತೊಲೆ ಬಿಸಿನೀರಿನಲ್ಲಿ ಕಲಸಿ ಕುಡಿಯುವದು. ಹೀಗೆ ಬೆಳಿಗ್ಗೆಹೊತ್ತು ೭ ದಿನ ಕೊಡುವದು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಪಂಚಗುಲ್ಮ ಗುಣವಾಗುವದು.

೧೪. ತೊಟ್ಲೆಬೇರು ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ಕಾಲುತೊಲೆ, ಅರ್ಧತೊಲೆ ಚೂರ್ಣ ಹಸುವಿನ ತುಪ್ಪದಲ್ಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀ ಬೇಳೆ ಸಿಹಿಸಾರು ಅನ್ನ. ಇದರಿಂದ ಗುಲ್ಮ ಗುಣವಾಗುವದು.

೧೫. ಚಂದ್ರಿಕಾದಿ ಲೇಹ್ಯ:—ಲವಂಗಪತ್ರೆ, ನಾಗಕೇಸರಿ, ಲಾವಂಚ, ಶುಂಠಿ, ಮೆಣಸು, ಹಿಪ್ಪಲಿ ಇವು ಸಮಭಾಗ ಕುಟ್ಟಿ ಚೂರ್ಣಮಾಡಿ ಶೋಧಿಸಿ ಇದರಸಮ ಬೆಲ್ಲ ಒಂದು ಬಾಂಡ್ಲಿಯಲ್ಲಿ ಹಾಕಿ ನೀರುಹಾಕಿ ಒಲೆಯ ಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣಹಾಕಿ ಪಕ್ವವಾಗಿ ಲೇಹವಮಾಡಿ ಇಟ್ಟುಕೊಂಡು ಹೊತ್ತಿಗೆ ಯಳಚೀಬೀಜದ ಪ್ರಮಾಣ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಲ್ಮ, ಹೊಟ್ಟೆವುಬ್ಬರ, ಮಂದಾಗ್ನಿ, ಅರುಚಿ, ಬಿಕ್ಕಳಿಕೆ, ಪಾಂಡು, ಖಾಸಶ್ವಾಸ ಇವು ಗುಣವಾಗುವವು.

೧೬. ಬಿಳೀಕೊಮ್ಮೇಬೇರು ೧ ಹಿಡಿ ಕೋಲುಕಳ್ಳಿಹಾಲಿನಲ್ಲಿ ೩ ದಿನ ನೆನೆಯಿಸಿ ತೆಗೆದುಕೊಂಡು ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ಒಂದು ಬಾಂಡ್ಲಿಯಲ್ಲಿ ಹಾಕಿ ಅದಕ್ಕೆ ಬಜೆಚೂರ್ಣ ೨ ತೊಲೆ, ಹೊಟ್ಟುಸುಲಿದ ಬೆಳ್ಳುಳ್ಳಿ ಚನ್ನಾಗಿ ಕುಟ್ಟಿದ್ದು ೬ ತೊಲೆ, ಹಸುವಿನತುಪ್ಪ ೧ ಪಾವು ಹಾಕಿ ಘೃತಪಕ್ವವಾಗಿ ಕಾಯಿಸಿ ಹೊತ್ತಿಗೆ ೧ ವರಹತೂಕ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಅಷ್ಟಾದಶ ಗುಲ್ಮ ಗುಣವಾಗುವದು.

೧೭. ಶುದ್ಧಿಮಾಡಿದ ಹಿಂಗು ॥ ತೊಲೆ, ಕಲ್ಲುಪ್ಪು ೧ ತೊಲೆ, ಹೊಟ್ಟು ಸುಲಿದ ಬೆಳ್ಳುಳ್ಳಿ ೧ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಅರದು ಹೊತ್ತಿಗೆ ಕಾಲುತೊಲೆ ಬಿಸಿನೀರಿನಲ್ಲಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಂಚಗುಲ್ಮ, ಹೊಟ್ಟೆಶೂಲೆ ಗುಣವಾಗುವದು.

೧೮. ಅಡವಿಸೂರಣದಗಡ್ಡೆ ೩ ತೊಲೆ, ಬಲರಾಕ್ಷಸಿಗಡ್ಡೆ ೩ ತೊಲೆ, ನೆಲಕುಂಬಳದಬೇರು ೩ ತೊಲೆ, ಮಂಗರವಳ್ಳಿ ೩ ತೊಲೆ, ಚಿತ್ರಮೂಲ ೩ ತೊಲೆ, ಮುಂಡಗಳ್ಳಿಚಿಗರು ೩ ತೊಲೆ, ಎಕ್ಕದಯಲೆಚಿಗರು ೩ ತೊಲೆ, ಬಾಳೇಗಡ್ಡೆ ರಸ ||| ಶೇರು, ಉಪ್ಪೇಬೇರು ೩ ತೊಲೆ ಇವುಗಳೆಲ್ಲವನ್ನು ಒಂದು ಮಡಿಕೆಯಲ್ಲಿ ಹಾಕಿ ಮುಚ್ಚಳ ಮುಚ್ಚಿ ಕೆಮ್ಮಣ್ಣುಬಟ್ಟೆ ಶೀಲುಮಾಡಿ ೧ ಮೊಳ ಪುಟ ಹಾಕುವದು. ಆ ಸುಟ್ಟ ಕರುಕನ್ನು ತೆಗೆದುಕೊಂಡು ಇದಕ್ಕೆ ಪಂಚಲವಣ ॥ ಶೇರು, ಶುದ್ಧಿಮಾಡಿದ ಅತಿಬಜೆ ॥ ಶೇರು, ಯಾಲಕ್ಕಿ ॥ ಶೇರು, ಶುಂಠಿ ॥ ಶೇರು, ಹಿಪ್ಪಲಿ ॥ ಶೇರು, ಮೆಣಸು ॥ ಶೇರು, ಶುದ್ಧಿಮಾಡಿದ ಹಿಂಗು ೧॥ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಹೊಟ್ಟುತೆಗೆದ ಬೆಳ್ಳುಳ್ಳಿ ೧ ಶೇರು ಚನ್ನಾಗಿ ಅರದುಕೊಳ್ಳುವದು. ಎಲ್ಲವನ್ನು ಒಟ್ಟಾಗಿ ಶೇರಿಸಿ ಕಲಸಿ ಇಟ್ಟುಕೊಳ್ಳುವದು. ಹೊತ್ತಿಗೆ ಕಾಲುತೊಲೆ, ಅರ್ಧತೊಲೆ ಚೂರ್ಣ ಹಸುವಿನ

ಮಜ್ಜಿಗೆಯಲ್ಲಿ ಕಲಸಿ ತೆಗೆದುಕೊಳ್ಳುವದು ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಲ್ಮ, ಮಹೋದರ ಗುಣವಾಗುವದು.

೧೯ ಶುಂಠಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಸೈಂಧವ ಲವಣ ೬ ತೊಲೆ, ಬಿಳೇಜೀರಿಗೆ ೬ ತೊಲೆ, ಪ್ರೋಮ ೬ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಹೊಟ್ಟುಸುಲಿದ ಬೆಳ್ಳುಳ್ಳಿ ೬ ತೊಲೆ ಖಲ್ವದಲ್ಲ ಹಾಕಿ ಚನ್ನಾಗಿ ಅರದು ಮೇಲ್ಕಂಡ ಚೂರ್ಣದಲ್ಲಿ ಬೆರಸಿ ಇಟ್ಟುಕೊಂಡು ಹೊತ್ತಿಗೆ ೩ ಬೆರಳಿನಲ್ಲಿ ಬಂದಷ್ಟು ಚೂರ್ಣ ಬಿಸಿನೀರಿನಲ್ಲಿ ತೆಗೆದುಕೊಳ್ಳಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ತೆಗೆದು ಕೊಳ್ಳಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ ಇದರಿಂದ ಪಂಚಗುಲ್ಮ, ವಾಯುವು ಗುಣವಾಗುವದು.

೨೦. ಕಳಿಂಗಾದಿ ಲೇಹ್ಯ :—ಹಾವುಮೆಕ್ಕೇಕಾಯಿ ೩೦ ರಸ ತೆಗೆದದ್ದು, ಮಂಗರವಳ್ಳಿ ರಸ ೧ ಶೇರು, ಎಕ್ಕದಯಲೆ ರಸ ೧ ಶೇರು, ನುಗ್ಗೇಚಕ್ಕೆ ರಸ ೧ ಶೇರು, ಜುಟ್ಟುವೇಸೊಪ್ಪಿನ ರಸ ೧ ಶೇರು, ಗರುಗದಸೊಪ್ಪಿನ ರಸ ೧ ಶೇರು, ರಾಮಗುಳ್ಳದಸೊಪ್ಪಿನ ರಸ ೧ ಶೇರು, ಮುಳ್ಳುಸೊಂಡೆಸೊಪ್ಪಿನ ರಸ ೧ ಶೇರು, ಬಿಳೀಗುಳ್ಳದಸೊಪ್ಪಿನ ರಸ ೧ ಶೇರು ಇವುಗಳೆಲ್ಲವನ್ನೂ ಒಂದು ಬಾಂಡ್ಲಿಯಲ್ಲಿ ಹಾಕಿ ಹಳೇಬೆಲ್ಲ ೧೧ ಶೇರು ಹಾಕಿ ಒಲೆಯಮೇಲೆ ಇಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ, ಲವಂಗ ಅರಪಾವು, ಪ್ರೋಮ ೩ ತೊಲೆ, ಬಿಳೀಜೀರಿಗೆ ೩ ತೊಲೆ, ತಾರೇಕಾಯಿಸಿಪ್ಪೆ ೬ ತೊಲೆ, ಕಲ್ಲುಹುವ್ವ ೬ ತೊಲೆ, ನೆಲ್ಲೀಕಾಯಿ ೧ ಶೇರು, ಕತ್ತಿಕಿರುಬನಸೊಪ್ಪು ೪ ತೊಲೆ, ಶುಂಠಿ ೩ ತೊಲೆ, ಹಿಪ್ಪಲಿ ೩ ತೊಲೆ, ಮೆಣಸು ೩ ತೊಲೆ, ಸೈಂಧವಲವಣ ೧ ತೊಲೆ, ಯವಕ್ಷಾರ ೧ ತೊಲೆ, ಶುದ್ಧಿಮಾಡಿದ ಹಿಂಗು ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಪಕ್ವವಾಗಿ ಲೇಹ್ಯಮಾಡಿ ಇಟ್ಟುಕೊಳ್ಳುವದು. ಹೊತ್ತಿಗೆ ಯಳಚೀ ಬೀಜದ ಪ್ರಮಾಣ ಬೆಳಿಗ್ಗೆಹೊತ್ತು ಕೊಡುವದು ೭-೧೪ ದಿವಸ ಕೊಡಬೇಕು. ಪೈತ್ಯಕ್ಕೆ ಜೇನುತುಪ್ಪದಲ್ಲಿ ಕೊಡುವದು. ವಾತಗುಲ್ಮಕ್ಕೆ ಬಿಸಿನೀರಿನಲ್ಲಿ ಕೊಡು ವದು. ಶ್ಲೇಷ್ಮಗುಲ್ಮಕ್ಕೆ ಗರುಗದ ರಸದಲ್ಲ ಕೊಡುವದು. ರಕ್ತಗುಲ್ಮಕ್ಕೆ ಹಸುವಿನಹಾಲಿನಲ್ಲ ಕೊಡುವದು. ಪಥ್ಯ ಹಸುವಿನಹಾಲು ಅನ್ನ. ಇದರಿಂದ ಹೊಟ್ಟೆಯಲ್ಲಿರುವ ಗಡ್ಡೆ ಸಹ ಕರಗುವದು.

೨೧. ಪಂಚಕೋಲಾಗ್ನಿ ಚೂರ್ಣ :— ಶುಂಠಿ, ಹಿಪ್ಪಲಿ, ಮೆಣಸು, ಮೋಡಿ, ಚವ್ಯ, ಚಿತ್ರಮೂಲ, ವಿಷಮುದಾರಿಬೇರು, ಮಂಗರವಳ್ಳಿ, ಗೋದಾ ವಲ್ಲಿ, ಇವು ಸಮಭಾಗತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ಕಾಲು

ತೊಲೆ, ಅರ್ಧತೊಲೆ ಬಿಸಿನೀರಿನಲ್ಲಿ ಕೊಡಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡುವದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಲ್ಮ, ಜ್ವರದಗಡ್ಡೆ ಗುಣವಾಗುವದು.

೨೨. ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿ ಗಂಧಕ ೨ ತೊಲೆ, ಪಟ್ಲುಪ್ಪು ೩ ತೊಲೆ ಇವು ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ಹೊತ್ತಿಗೆ ಅವರೇಕಾಳು ಪ್ರಮಾಣ ಬೇವಿನಯಣ್ಣೆಯಲ್ಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಲ್ಮ ಗುಣವಾಗುವದು.

೨೩. ಪಂಚಲವಣ ಅರಪಾವು, ಶುದ್ಧಿಮಾಡಿದ ಹಿಂಗು ೧|| ತೊಲೆ, ಚಿತ್ರಮೂಲ ೧|| ತೊಲೆ, ಪೊಡಪತ್ರೆ ೧|| ತೊಲೆ, ಹೊಟ್ಟುತೆಗೆದ ಬೆಳ್ಳುಳ್ಳಿ ೧೮ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ಮುಂಡಕಳ್ಳಿತುಂಡಿನ ವಳಗೆ ಯಿಟ್ಟು ಕೆಮ್ಮಣ್ಣುಬಟ್ಟೆ ಶೀಲುಮಾಡಿ ೧ ಮೊಳ ಪುಟಹಾಕಲು ಭಸ್ಮವಾಗುವದು. ಮುಂಡೆಕಳ್ಳಿತುಂಡಿನ ವಳಗೆಯಿರುವ ಭಸ್ಮವನ್ನು ತೆಗೆದು ಖಲ್ವದಲ್ಲಿ ಅರದು ಇಟ್ಟುಕೊಳ್ಳುವದು. ಹೊತ್ತಿಗೆ ೨ ಆಣೆ ತೂಕ ಭಸ್ಮವನ್ನು ಬಿಸಿನೀರಿನಲ್ಲಿ ಕಲಸಿ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಂಚಗುಲ್ಮ ಗುಣವಾಗುವದು.

೨೪. ಶುದ್ಧಿಮಾಡಿದ ಅರಿದಳ ೩ ತೊಲೆ, ಶುದ್ಧಿಮಾಡಿದ ಪಾಲತುತ್ತ ೨ ತೊಲೆ, ಸುಣ್ಣ ೫ ತೊಲೆ ಇವು ಮೂರನ್ನು ಖಲ್ವದಲ್ಲಿ ಹಾಕಿ ಸುಣ್ಣದ ತಿಳಿ ನೀರಿನಲ್ಲಿ ಅರದು ಬಿಲ್ಲೆಮಾಡಿ ಒಣಗಿಸಿ ೨ ಹಣತೆಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಶೀಲುಮಾಡಿ ಕುಕ್ಕುಟಪುಟ ಹಾಕಿ ತೆಗೆದು ಖಲ್ವದಲ್ಲಿ ಹಾಕಿ ಲೋಳೀಸರದ ರಸದಲ್ಲಿ ಅರದು ತೊಗರೀಕಾಳು ಪ್ರಮಾಣ ಮಾತ್ರೆ ಮಾಡುವದು. ಹೊತ್ತಿಗೆ ೧ ಮಾತ್ರೆ ಜೀರಿಗೆ ಕಷಾಯದಲ್ಲಿ ಕೊಡುವದು. ಹೀಗೆ ಬೆಳಿಗ್ಗೆಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಥ್ಯ ಸಪ್ಪೆಗಂಜಿ ಅನ್ನ. ಇದರಿಂದ ಗುಲ್ಮ ಗುಣವಾಗುವದು.

೨೫. ಪಂಚಕೋಲಾದಿ ಚೂರ್ಣ:—ಹಿಪ್ಪಲಿ, ಮೋಡಿ, ಚವ್ಯ, ಚಿತ್ರಮೂಲ, ಶುಂಠಿ, ಕಲ್ಲುಪ್ಪು, ಗಾಜುಲವಣ, ಸೈಂಧವಲಣವ, ಬಿಡಾಲವಣ, ಸೌವರ್ಚಲವಣ, ಬಿಳೀಜೀರಿಗೆ ವೋಮ, ಸಜ್ಜುಕ್ಷಾರ, ಯವಕ್ಷಾರ, ಮೆಣಸು, ಶುದ್ಧಿಮಾಡಿದ ಹಿಂಗು ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಮಾದವಾಳದ ಹಣ್ಣಿನ ರಸದಲ್ಲಿ ೧ ದಿನ ಅರದು, ಹೇರಳೆ

ಹಣ್ಣಿನ ರಸದಲ್ಲಿ ೧ ದಿನ ಅರದು ಬಿಸಲಿನಲ್ಲಿಟ್ಟು ಒಣಗಿಸಿ ಕುಟ್ಟಿ ಚೂರ್ಣ ಮಾಡಿ ಶೋಧಿಸಿಕೊಳ್ಳುವದು. ಹೊತ್ತಿಗೆ ಕಾಲುತೊಲೆ, ಅರ್ಧತೊಲೆ ಚೂರ್ಣ ಬಿಸಿನೀರಿನಲ್ಲಿ ಕೊಡುವದು ಹೀಗೆ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ ಇದರಿಂದ ಗುಲ್ಮ, ಶೂಲೆ ಗುಣವಾಗಿ ಹಸಿವನ್ನುಂಟುಮಾಡುವದು.

೨೬ ಚಿತ್ರಮೂಲ, ಶುಂಠಿ, ಹಿಪ್ಪಲಿ, ಮೆಣಸು, ವೋಮ, ಬಿಳೀಜೀರಿಗೆ ಇವು ಜಿನಸಿಗೆ ಒಂದೊಂದು ತೊಲೆ ತಂದು ಸುಮಾರಾಗಿ ಹುರಿದುಕೊಳ್ಳುವದು. ಸೈಂಧವಲವಣ ೧ ತೊಲೆ ಇವುಗಳನ್ನೆಲ್ಲಾ ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಶುದ್ಧಿಮಾಡಿದ ಹಿಂಗು ೨ ಆಣೆ ತೂಕ ಖಲ್ವದಲ್ಲಿ ಅರದು ಎಲ್ಲವನ್ನು ಶೇರಿಸಿಕೊಳ್ಳುವದು. ಈ ಚೂರ್ಣ ೩ ಬೆರಳಿಗೆ ಬಂದಷ್ಟು ಅನ್ನದಲ್ಲಿ ಕಲಸಿ ತುಪ್ಪಹಾಕಿ ಸೇವಿಸುವದು. ಈರೀತಿ ೭ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಲ್ಮ ಗುಣವಾಗುವದು.

೨೭. ಲವಣಸಿಂಧೂರ:—ತಿನ್ನುವ ಉಪ್ಪು, ಪೆಟ್ಲುಪ್ಪು, ಸೈಂಧವಲವಣ, ಚೌಳುಪ್ಪು, ಶುದ್ಧಿಮಾಡಿದ ಅನ್ನಬೇದಿ, ಪಟಿಕೆ, ಸೂರ್ತಿಬೆಳಗಾರ, ಶುದ್ಧಿ ಮಾಡಿದ ರಸಕರ್ಪೂರ ಇವು ಸಮತೂಕ ತಂದು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲಿ ೧ ಜಾವ ಅರದು, ಕುಪ್ಪೇಸೊಪ್ಪಿನ ರಸದಲ್ಲಿ ೧ ಜಾವ ಅರದು, ಆಡುಮುಟ್ಟದಸೊಪ್ಪಿನ ರಸದಲ್ಲಿ ೧ ಜಾವ ಅರದು, ಕರೇಹತ್ತಿಸೊಪ್ಪಿನ ರಸದಲ್ಲಿ ೧ ಜಾವ ಅರದು ಬಿಲ್ಲೆಮಾಡಿ ಒಣಗಿಸಿ ೨ ಹಣತೆಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಶೀಲುಮಾಡಿ ಒಂದುವೊಳ ಪುಟವಿಟ್ಟರೆ ಸಿಂಧೂರವಾಗುತ್ತೆ. ಹೊತ್ತಿಗೆ ೨ ಗುರುಗಂಜಿತೂಕ ಜೇನುತುಪ್ಪ, ಹಸುವಿನತುಪ್ಪ, ತಾಟಬೆಲ್ಲ, ಶುಂಠಿ, ಹಿಪ್ಪಲಿ, ಮೆಣಸು ಈ ಅನುಪಾನಗಳಲ್ಲಿ ಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವಾಯು, ಉಬ್ಬಸ, ಹುಳಿತೇಗು, ಎದೆಯಲ್ಲಿ ವತ್ತಿದಂತಾಗುವದು. ವಾಂತಿಯಾಗುವದು, ಮಂದಾಗ್ನಿ, ಅಜೀರ್ಣದ ವಾಯು, ಹೊಟ್ಟೆ ಉಬ್ಬರ, ಹೊಟ್ಟೆಯಲ್ಲಿ ಓಡಾಡಿದಹಾಗೆ ಆಗುವದು, ಗುಲ್ಮವಾಯು, ಹೊಟ್ಟೆಯಲ್ಲಿ ಗಡ್ಡೆ ಬೆಳದಿರುವದು. ಮಹೋದರ, ಮೈಕೈ ಊತ ಇವುಗಳು ಗುಣವಾಗುವವು.

೨೮. ಪಟಿಕಾರ ಅರಳುಮಾಡಿದ್ದು,ಶುದ್ಧಿಮಾಡಿದ ನವಾಸಾಗರ,ಪೆಟ್ಲುಪ್ಪು, ಚೌಳುಪ್ಪು, ಬಿದರುಪ್ಪು, ಗಾಜುಲವಣ, ಸೈಂಧವಲವಣ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳುಮಾಡಿದ್ದು ಇವು ಜಿನಸಿಗೆ ೩ ತೊಲೆ ತಂದು ಖಲ್ವದಲ್ಲಿ ಹಾಕಿ ತಾಟಬೆಲ್ಲ ೧ ಶೇರು ಹಾಕಿ ಖಲ್ವದಲ್ಲಿ ಅರದು ಇಟ್ಟುಕೊಳ್ಳುವದು. ಹೊತ್ತಿಗೆ ‖ ತೊಲೆ ಕೊಡಬೇಕು. ಈರೀತಿ ಬೆಳಗ್ಯೆ ಸಾಯಂಕಾಲ ೧೦ ದಿವಸ

ಕೊಡುವದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ ಇದರಿಂದ ಅಷ್ಟಗುಲ್ಮ ಗುಣವಾಗುವದು.

೨೯. ಶುಂಠಿ ೧ ತೊಲೆ, ಸೈಂಧವಲವಣ ೧ ತೊಲೆ ಇವು ಎರಡು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು. ಶುದ್ಧಿಮಾಡಿದ ಹಿಂಗು ॥ ತೊಲೆ ಇವು ಮೂರು ಖಲ್ವದಲ್ಲ ಹಾಕಿ ನುಗ್ಗೀಚಕ್ಕೆ ರಸದಲ್ಲ ಅರದು ಕಡಲೇಕಾಳು ಪ್ರಮಾಣ ಮಾತ್ರೆಮಾಡಿ ಬೆಳಿಗ್ಗೆಹೊತ್ತು ೧ ಮಾತ್ರೆ ಬಿಸಿನೀರಿನಲ್ಲಿ ಕೊಡುವದು. ಹೀಗೆ ೫ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಲ್ಮ, ಹೊಟ್ಟೇನೋವು, ಹೊಟ್ಟೇಹಿಡಿತ ಇವು ಗುಣವಾಗುವವು.

೩೦. ಶುಂಠಿ ೧ ತೊಲೆ, ಮೆಣಸು ೧ ತೊಲೆ, ಚಂಗಲಕೋಷ್ಟ ೧ ತೊಲೆ, ಅರಸಿನ ೧ ತೊಲೆ, ವೋಮ ೧ ತೊಲೆ, ಪಂಚಲವಣ ೫ ತೊಲೆ, ಯವಕ್ಷಾರ ೧ ತೊಲೆ, ಸಜ್ಜಕ್ಷಾರ ೧ ತೊಲೆ, ಶುದ್ಧಿಮಾಡಿದ ಯಣ್ಣೆಬೆಳಗಾರ ಅರಳು ಮಾಡಿದ್ದು ೧ ತೊಲೆ, ಮೋಡಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವದು ಹೊಟ್ಟುಸುಲಿದ ಬೆಳ್ಳುಳ್ಳಿ ೭ ತೊಲೆ, ಶುದ್ಧಿಮಾಡಿದ ಹಿಂಗು ೧ ತೊಲೆ ಇವು ಎರಡು ಖಲ್ವದಲ್ಲಿ ಹಾಕಿ ಚನ್ನಾಗಿ ಅರದು ಮೇಲ್ಕಂಡ ಚೂರ್ಣಕ್ಕೆ ಕಲಸಿ ಎಲ್ಲವನ್ನು ಶೇರಿಸಿ ಒರಳಲ್ಲಿ ಹಾಕಿ ರುಬ್ಬಿ ಲೇಹದಂತೆ ಮಾಡಿ ಹೊತ್ತಿಗೆ ಅವರೇಕಾಳು ಪ್ರಮಾಣ ಬಿಸಿನೀರಿನಲ್ಲ ಕೊಡುವದು. ಹೀಗೆ ಬೆಳಿಗ್ಗೆ ಸಾಯಂಕಾಲ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಕಲ ವಾತ, ಸಕಲ ಗುಲ್ಮ ಗುಣವಾಗುವವು.

# ಮುವತ್ತಮೂರನೆಯ ಅಧ್ಯಾಯ.

## ಮೂತ್ರರೋಗ—ಔಷಧಗಳು.

### ಮೂತ್ರಕೃಚ್ಛ್ರ ಲಕ್ಷಣ.

ಸ್ವಕಾರಣಗಳಿಂದ ಪ್ರಕೋಪಿಸಿದ ತ್ರಿದೋಷಗಳು ಪ್ರತ್ಯೇಕವಾಗಿಯಾದರೂ, ದ್ವಂದ್ವವಾಗಿಯಾದರೂ ನಿಜಮಲಗಳನ್ನು ನಾಭಿಯ ಕೆಳಭಾಗದಲ್ಲಿ ಸೇರಿಸಿ ಮೂತ್ರದ್ವಾರವನ್ನು ನಿರೋಧಿಸುತ್ತದೆ. ಹೀಗೆ ನಿರೋಧಿಸುವುದರಿಂದ ಮೂತ್ರವು ಅತಿಕಷ್ಟವಾಗಿ ವಿಸರ್ಜನೆಯಾಗುವುದು. ಈ ರೋಗವು ಮೂತ್ರಕೃಚ್ಛ್ರವೆಂದು ಹೇಳಲ್ಪಡುವುದು.

ಮೂತ್ರಕೃಚ್ಛ್ರವು ವಾತ, ಪಿತ್ತ, ಕಫ, ಸನ್ನಿಪಾತ, ಶುಕ್ರ, ಘಾತಜ, ಅಶ್ಮರೀ, ಕೃಚ್ಛ್ರಭೇದಗಳಿಂದ ಎಂಟು ವಿಧವಾಗಿರುವುದು.

ವಾತಜ ಮೂತ್ರಕೃಚ್ಛ್ರದಲ್ಲಿ:—ನಾಭಿಯ ಕೆಳಭಾಗದಲ್ಲಿಯೂ, ಮೇಢ್ರದಲ್ಲಿಯು ಅಧಿಕ ತೀಕ್ಷ್ಣವಾದ ನೋವುಂಟಾಗಿರುವಿಕೆ, ಹೆಚ್ಚುಕಷ್ಟದಿಂದ ಕೊಂಚ ಕೊಂಚವಾಗಿ ಮಾತುಮಾತಿಗೂ ಮೂತ್ರವನ್ನು ಬಿಡುವಿಕೆ ಮೊದಲಾದ ಲಕ್ಷಣಗಳಿರುವುವು

ಪಿತ್ತಜ ಮೂತ್ರಕೃಚ್ಛ್ರದಲ್ಲಿ:—ರಕ್ತವು, ನೋವು, ಉರಿ ಇವುಗಳಿಂದ ಕೂಡಿ ಹಳದಿಬಣ್ಣವುಳ್ಳ ಮೂತ್ರವು ಅತಿಕಷ್ಟವಾಗಿ ಹೊರಡುವುದು

ಶ್ಲೇಷ್ಮಜ ಮೂತ್ರಕೃಚ್ಛ್ರದಲ್ಲಿ:—ವಸ್ತಿಯಲ್ಲಿಯೂ, ಮೇಢ್ರದಲ್ಲಿಯೂ, ಗುರುತ್ವವೂ, ಊತವು ಉಂಟಾಗಿ ಹೆಚ್ಚು ಮಂದವಾಗಿರುವ ಮೂತ್ರವು ಹೊರಡುವುದು.

ದ್ವಂದ್ವಜ ಮೂತ್ರಕೃಚ್ಛ್ರದಲ್ಲಿ:—ದೋಷದ್ವಯ ಲಕ್ಷಣಗಳೂ, ಸನ್ನಿಪಾತಿಕ ಮೂತ್ರಕೃಚ್ಛ್ರದಲ್ಲಿ ತ್ರಿದೋಷಲಕ್ಷಣಗಳೂ ಕಾಣುವುವು.

ಶುಕ್ರಜ ಮೂತ್ರಕೃಚ್ಛ್ರದಲ್ಲಿ:—ಶುಕ್ರವು ವಾತಾದಿ ದೋಷಗಳಿಂದ ದುಷ್ಟವಾಗಿ ಮೂತ್ರಮಾರ್ಗವನ್ನು ಹೊಂದಿದಾಗ ಶುಕ್ರದಿಂದ ಕೂಡಿದ ಮೂತ್ರವು ಅಧಿಕ ಕಷ್ಟದಿಂದ ಹೊರಹೊರಡುವುದು. ಅಂತಹ ಸಮಯದಲ್ಲಿ ವಸ್ತಿಯಲ್ಲಿಯೂ, ಮೇಢ್ರದಲ್ಲಿಯೂ ಅಧಿಕ ನೋವುಂಟಾಗುವುದು.

ಪುರೀಷಜ ಮೂತ್ರಕೃಚ್ಛ್ರದಲ್ಲಿ:—ಮಲವನ್ನು ನಿರೋಧಿಸುವುದರಿಂದ ವಾತವು ಪ್ರಕುಪಿತವಾಗಿ ಹೊಟ್ಟೆಯುಬ್ಬರ, ವಾತಶೂಲೆ ಇವುಗಳುಂಟಾಗಿ ಮೂತ್ರಕೃಚ್ಛ್ರವುಂಟಾಗುವುದು.

ಘಾತಜ ಮೂತ್ರಕೃಚ್ಛ್ರದಲ್ಲಿ:—ಮೂತ್ರವನ್ನು ವಹಿಸುವ ಸ್ರೋತಸ್ಸುಗಳಲ್ಲಿ ಮುಳ್ಳು ಮೊದಲಾದ ಶಲ್ಯಗಳಿಂದ ಗಾಯವುಂಟಾದರೂ, ಅಭಿಘಾತವುಂಟಾದರೂ, ಮೂತ್ರವನ್ನು ನಿರೋಧಿಸುವುದರಿಂದ ಅತಿಕಷ್ಟವಾಗಿ ಮೂತ್ರಕೃಚ್ಛ್ರವುಂಟಾಗುವುದು. ಇದರಲ್ಲಿ ವಾತಜ ಮೂತ್ರಕೃಚ್ಛ್ರದ ಲಕ್ಷಣಗಳೆಲ್ಲವೂ ಕಂಡುಬರುವುವು.

ಅಶ್ಮರೀಜ ಮೂತ್ರಕೃಚ್ಛ್ರವು:—ಅಶ್ಮರೀವ್ಯಾಧಿಯಿಂದ ಹುಟ್ಟುವುದು. ಅದರಲ್ಲಿ ಮೂತ್ರದಲ್ಲಿ ಹುಟ್ಟುವ ಅಶ್ಮರಿಯೆಂಬ ಕಲ್ಲು ಮೊದಲು ಹೊರಟು ಮೂತ್ರಮಾರ್ಗವನ್ನು ಅಡ್ಡಗಿಸಿ ನಂತರ ನೋವಿನಿಂದ ಸ್ವಲ್ಪಸ್ವಲ್ಪವಾಗಿ ಮೂತ್ರವು ಬರುವುದು.

## ಮೂತ್ರಕೃಚ್ಛ್ರ ಚಿಕಿತ್ಸೆಗಳು.

೧. ಗೋಕ್ಷುರಾದಿ ಗುಗ್ಗುಳ:—ಇಪ್ಪತ್ತೆಂಟು ಪಲ ಪರಿಮಾಣ ಆನೆನೆಗ್ಗಲು ಮುಳ್ಳನ್ನು ಆರಿಸಿಕೊಂಡು ತಂದು ಅದರ ಆರರಷ್ಟು ನೀರಿನಲ್ಲಿ ಕಷಾಯವಿಟ್ಟು ಅರ್ಧಭಾಗ ನೀರು ನಿಲ್ಲುವಷ್ಟು ಕಷಾಯವನ್ನು ಮಾಡಿ ಇಳಿಸಿ ಶೋಧಿಸಿಕೊಂಡು

ಅದರಲ್ಲಿ ಏಳು ಪಲ ಶುದ್ಧವಾದ ಗುಗ್ಗುಳವನ್ನು ಹಾಕಿ ಮತ್ತೆ ಒಲೆಯಮೇಲಿರಿಸಿ ಕಾಯಿಸುವುದಕ್ಕೆ ಉಪಕ್ರಮಿಸಿ ಪಾಕವು ಬೆಲ್ಲದಪಾಕದ ಹದಕ್ಕೆ ಬಂದದ್ದನ್ನು ನೋಡಿ ಅದರಲ್ಲಿ ತ್ರಿಕಟುಕ (ಶುಂಠಿ, ಹಿಪ್ಪಲಿ, ಮೆಣಸು), ತ್ರಿಫಲ (ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ), ಭದ್ರಮುಸ್ತೆ ಈ ಏಳು ಪದಾರ್ಥಗಳನ್ನೂ ಒಂದೊಂದು ಪಲದಷ್ಟು ತೆಗೆದುಕೊಂಡು ಚೂರ್ಣಮಾಡಿ ಅದರಲ್ಲಿ ಸೇರಿಸಿ ಚನ್ನಾಗಿ ಕೂಡಿಸಿ ಮುದ್ದೆಯಾಗಿಮಾಡಿ ಇರಿಸಿಕೊಂಡು ಜೀರ್ಣಬಲವನ್ನು ಪರ್ಯಾಲೋಚಿಸಿಕೊಂಡು ಗುಳಿಗೆಗಳನ್ನು ಮಾಡಿ ಸೇವಿಸುತ್ತಾಬಂದಲ್ಲಿ ಮೇಹರೋಗ, ಮೂತ್ರಕೃಚ್ಛ್ರ, ಅಸೃಗ್ದರ, ಮೂತ್ರಾಘಾತ, ವಾತರಕ್ತ, ವಾತರೋಗಗಳು, ಶುಕ್ರದೋಷ, ಅಶ್ಮರಿ ಎಂದರೆ ಮೂತ್ರದೊಳಗಿನ ಕಲ್ಲು ಇವುಗಳನ್ನೆಲ್ಲಾ ಗುಣಪಡಿಸುತ್ತದೆ.

೨. ಚಂದ್ರಪ್ರಭಾಕರ ಮಾತ್ರೆ.—ಕಚೋರ, ಬಜೆ, ತುಂಗೇಗಡ್ಡೆ, ನೆಲಬೇವು, ಅಮೃತಬಳ್ಳಿ, ತುಪ್ಪದದೇವದಾರು, ಅರಸಿನ, ಅತಿಬಜೆ, ಮರದರಿಸಿನ, ಮೋಡಿ, ಚಿತ್ರಮೂಲ, ಕೊತ್ತುಂಬರಿಬೀಜ, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಚವ್ಯ, ವಾಯುವಿಳಂಗ, ಗಜಹಿಪ್ಪಲಿ, ಶುಂಠಿ, ಮೆಣಸು, ಹಿಪ್ಪಲಿ, ಯವಕ್ಷಾರ, ಸಜ್ಜಿಕ್ಷಾರ, ಸೈಂಧವಲವಣ, ಸೌವರ್ಚಲವಣ ಇದು ಜಿನಸು ೧ಕ್ಕೆ ಕಾಲುತೊಲೆ, ಶುದ್ಧಿಮಾಡಿದ ಲಾಲ್‌ಶಿಗಡೆ, ಲವಂಗಪತ್ರೆ, ದಾಲಚಿನ್ನಿ, ಯಾಲಕ್ಕಿ, ತವಕ್ಷೀರ ಇದು ಜಿನಸು ೧ಕ್ಕೆ ೧ ತೊಲೆ, ಕರ್ಪೂರಶಿಲಾಜಿತುಭಸ್ಮ ೮ ತೊಲೆ, ಶುದ್ಧಿಮಾಡಿದ ಬಿಳೇಧೂಪ ೮ ತೊಲೆ, ಬೂರಾಸಕ್ಕರೆ ೪ ತೊಲೆ ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಬಟ್ಟೆಯಲ್ಲಿ ಶೋಧಿಸಿಕೊಂಡು ಖಲ್ವದಲ್ಲಿ ಹಾಕಿ ತಣ್ಣೀರಿನಲ್ಲಿ ಅರದು ಕಡಲೆಪ್ರಮಾಣ ಮಾತ್ರೆಕಟ್ಟುವದು. ಬೆಳಗ್ಗೆ ೧ ಮಾತ್ರೆ, ಸಾಯಂಕಾಲ ೧ ಮಾತ್ರೆ ಬಾಯಿಯಲ್ಲಿ ಹಾಕಿಕೊಂಡು ಒಂದು ಗುಟುಕು ತಣ್ಣೀರು ಕುಡಿಯುವದು. ಹೀಗೆ ೭-೧೪ ದಿವಸ ಕೊಡಬೇಕು. ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—೨೦ ಪ್ರಮೇಹ, ಮೂತ್ರಕೃಚ್ಛ್ರ, ಮೂತ್ರಾಘಾತ, ಅಶ್ಮರೀರೋಗ, ಮಲಬದ್ಧ, ಶೂಲೆ, ಪಾಂಡುರೋಗ, ಕಾಮಾಲೆ, ನಡುವುನೋವು, ಶ್ವಾಸಖಾಸ, ಮೂಲರೋಗ, ಪ್ಲೀಹರೋಗ, ಹೊಟ್ಟೇನೋವು, ಸ್ತ್ರೀಯರಿಗೆ ಬರುವ ಪ್ರದರರೋಗ ನಿವಾರಣೆ ಆಗುವವು.

೩. ನೆಲತಾಟಿಗಡ್ಡೆ ೩ ತೊಲೆ, ಶ್ರೀಗಂಧದಚಕ್ಕೆ ೧ ತೊಲೆ, ಸೌತೇಕಾಯಿಬೀಜದಪಪ್ಪು ೧ ತೊಲೆ, ಕೊತ್ತುಂಬರಿಬೀಜ ೧ ತೊಲೆ, ತಾವರೆಕುಸುಮ ೧ ತೊಲೆ, ತಂಗಡಿಕುಸುಮ ೧ ತೊಲೆ, ತಂಗಡಿಬೀಜ ೧ ತೊಲೆ ಇವುಗಳಲ್ಲಿ ಕುಟ್ಟುವ ಜಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಅರಿಯುವ ಜಿನಸುಗಳನ್ನು ಅರೆದು ಎಲ್ಲವನ್ನು ಸೇರಿಸಿ ಹೊತ್ತಿಗೆ ॥ ತೊಲೆ ಚೂರ್ಣವನ್ನು ಹಸುವಿನ

ಹಾಲಿನಲ್ಲಿ ಕಲಸಿಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಪಥ್ಯ ಹಸುವಿನಹಾಲು ಅನ್ನ ಇದರಿಂದ ಗುಣ:—ಬಹುಮೂತ್ರ, ಉರಿಮೂತ್ರ, ಮೂತ್ರಕೃಚ್ಛ್ರ ನಿವಾರಣೆ ಆಗುವದು.

೪. ಚಿಲ್ಲದಬೀಜ ೧ ತೊಲೆ, ಯಳಚಿಮರದತಿಗುಡು ೧ ತೊಲೆ, ಮರದರಿಸಿನ ೧ ತೊಲೆ, ಅಮೃತಬಳ್ಳಿಸತ್ತು ೧ ತೊಲೆ, ನೆಲ್ಲಿಗಿಡದಬೇರು ೧ ತೊಲೆ, ಅರಿಶಿನ ೧ ತೊಲೆ, ತಂಗಡಿಬೀಜ ೧ ತೊಲೆ, ಆನೇನೆಗ್ಗಿಲು ೧ ತೊಲೆ, ಅಳಲೇಕಾಯಿ ಸಿಪ್ಪೆ ೧ ತೊಲೆ, ಭದ್ರಮುಸ್ತೆ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಬಾಳೇಹುವ್ವಿನ ರಸದಿಂದ ಭಾವನೆಮಾಡಿ ಬಿಸಲಿನಲ್ಲ ಒಣಗಿಸಿ ಕೊಳ್ಳುವದು. ಪ್ರತಿ ದಿನ ಪ್ರಾತಃಕಾಲ ॥ ತೊಲೆಯಷ್ಟು ಚೂರ್ಣ ಹಸುವಿನ ಮಜ್ಜಿಗೆಯಲ್ಲಿ ಕಲಸಿಕೊಡುವದು. ಹೀಗೆ ೭-೧೪ ದಿವಸ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಗುಣ:— ಸಮಸ್ತಪ್ರಮೇಹ, ಮೂತ್ರಕೃಚ್ಛ್ರ, ಸ್ತ್ರೀಯರ ಪ್ರದರ ನಿವಾರಣೆ ಆಗುವದು.

೫. ರಾಮಬಾಣ ಚೂರ್ಣ:—ಯಾಲಕ್ಕಿ ೧ ತೊಲೆ, ವಾಯುವಿಳಂಗ ೧ ತೊಲೆ, ತುಪ್ಪದದೇವದಾರು ೧ ತೊಲೆ, ಇಪ್ಪೇಹುವ್ವ ೧ ತೊಲೆ, ತುಂಬೇಬಂಕೆ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀ ಕಾಯಿ ೬ ತೊಲೆ, ಮರದರಿಸಿನ ೧೪ ತೊಲೆ, ತಂಗಡಿಬೀಜ ೨೮ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ರಾಯಿಪುಡಿಸಕ್ಕರೆ ೪೬ ತೊಲೆ ಹಾಕಿ ಕಲಸಿಕೊಳ್ಳಬೇಕು. ಹೊತ್ತಿಗೆ ॥ ತೊಲೆ ಚೂರ್ಣವನ್ನು ಹಸುವಿನ ಮಜ್ಜಿಗೆ ಯಲ್ಲಿ ಕಲಸಿಕೊಡುವದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭-೧೪ ದಿವಸ ಕೊಡಬೇಕು. ಪಥ್ಯ ಹಸುವಿನಹಾಲು ಅನ್ನ ಇದರಿಂದ ವಿಂಶತಿಮೇಹಗಳು, ಮೂತ್ರಕೃಚ್ಛ್ರ ನಿವಾರಣೆ ಆಗುವವು.

## ಮೂತ್ರಾಘಾತ ಲಕ್ಷಣ.

ಮೂತ್ರಮಾರ್ಗ ಅಡ್ಡಗಿಸಲ್ಪಡುವುದರ ದೆಸೆಯಿಂದ ನೋವಿನಿಂದ ಕೂಡಿ ತೊಟ್ಟುತೊಟ್ಟಾಗಿ ಮೂತ್ರವಿಸರ್ಜನೆಯಾಗುವಿಕೆ, ಮೂತ್ರಸ್ಥಾನದಿಂದ ಮೂತ್ರವು ಹೊರಹೊರಡುವಾಗ ಅದು ದುಷ್ಟ ಶುಕ್ರದಿಂದ ಕಲೆತು ಮುಂಚಿತವಾಗಿಯಾದರೂ, ನಂತರವಾದರೂ (ಭಸ್ಮದಿಂದ ಕಲೆತ ನೀರಿನಂತೆ) ಹೊರಹೊರಡುವುದು. ಇಂಥ ಲಕ್ಷಣಗಳುಂಟಾದರೆ ಮೂತ್ರಾಘಾತವೆಂದು ತಿಳಿಯುವುದು.

ಮೂತ್ರಾಘಾತರೋಗವು ವಾತಕುಂಡಲಿಕೆ, ವಾತಾಷ್ಠೀಲ, ವಾತವಸ್ತಿ, ಮೂತ್ರಾತೀತ, ಮೂತ್ರಜಠರ, ಮೂತ್ರಕ್ಷಯ, ಮೂತ್ರೋತ್ಸಂಗ, ಮೂತ್ರಗ್ರಂಥಿ, ಮೂತ್ರಶುಕ್ರ, ವಿಡ್ಘಾತ, ಮೂತ್ರಸಾದ, ಉಷ್ಣವಾತ, ವಸ್ತಿಕುಂಡಲಿಕೆ ಎಂಬ ಭೇದಗಳಿಂದ ಹದಿಮೂರು ತೆರನಾಗಿರುವುದು.

ವಾತಕುಂಡಲಿಕೆಯಲ್ಲಿ :—ವಾತವು ಪ್ರಕೋಪವನ್ನು ಹೊಂದಿ ಮೂತ್ರಾಶಯವನ್ನು ಪ್ರವೇಶಿಸಿ ಸುಳಿಗಾಳಿಯಂತೆ ಮೂತ್ರಕೋಶದಲ್ಲಿ ತಿರುಗುತ್ತಿರುವುದು. ಆದ್ದರಿಂದ ಮೂತ್ರವು ಅತಿ ಸ್ವಲ್ಪವಾಗಿ ನೋವಿನಿಂದ ಹೊರಡುತ್ತಿರುವುದು.

ವಾತಾಷ್ಠೀಲದಲ್ಲಿ :—ವಾತವು ವಸ್ತಿಯನ್ನು ಪೂರಿಸಿ, ಗುದವನ್ನಡ್ಡಗಿಸಿ ತೀವ್ರವಾದ ನೋವಿನಿಂದ ಕೂಡಿ ಮಲಮೂತ್ರ ಮಾರ್ಗಗಳನ್ನು ನಿರೋಧಿಸುವ ಕಲ್ಲಿನಂತೆ ಕಠಿನವಾದ ಅಷ್ಠೀಲವನ್ನುಂಟುಮಾಡುವುದು.

ವಾತವಸ್ತಿಯಲ್ಲಿ :—ಮೂತ್ರದ ವೇಗವನ್ನು ನಿರೋಧಿಸಿ ವಸ್ತಿಮುಖವನ್ನು ವಸ್ತಿಗತವಾದ ವಾತವು ಅಡ್ಡಗಿಸುವುದು ಆದ್ದರಿಂದ ಮೂತ್ರವು ಹೊರಹೊರಡದೆ ವಸ್ತಿಯಲ್ಲಿಯೂ, ಕುಕ್ಷಿಯಲ್ಲಿಯೂ ನೋವುಂಟಾಗುವುದು. ಈ ವ್ಯಾಧಿಯು ಬಹಳ ಕಷ್ಟಸಾಧ್ಯವು.

ಮೂತ್ರಾತೀತದಲ್ಲಿ :—ಮೂತ್ರವನ್ನು ಹೆಚ್ಚುಕಾಲದವರೆಗೆ ವಿಸರ್ಜಿಸದೆ ನಿರೋಧಿಸುವವರಿಗೆ ಮೂತ್ರವು ಶೀಘ್ರವಾಗಿ ಹೊರಡದೆ ನಿಧಾನವಾಗಿ ಹೊರಡುತ್ತಿರುವುದು.

ಮೂತ್ರಜಠರದಲ್ಲಿ :—ಮೂತ್ರವೇಗವನ್ನು ನಿರೋಧಿಸುವುದರಿಂದ ಅಪಾನವಾತವು ಪ್ರಕುಪಿತವಾಗಿ ಉದರವನ್ನು ತುಂಬಿಸಿ ನಾಭಿಯ ಕೆಳಗಡೆ ಅಧಿಕವಾದ ಉಬ್ಬರವನ್ನೂ, ಅತಿತೀವ್ರವಾದ ನೋವನ್ನೂ ಉಂಟುಮಾಡುವುದು.

ಮೂತ್ರಕ್ಷಯದಲ್ಲಿ :—ವಾತಪಿತ್ತಗಳು ಪ್ರಕೋಪವನ್ನು ಹೊಂದಿ ಉರಿಯನ್ನೂ ನೋವನ್ನೂ ಉಂಟುಮಾಡಿ ಮೂತ್ರವನ್ನು ಕಮ್ಮಿಮಾಡುತ್ತಾ ಬರುವುದು.

ಮೂತ್ರೋತ್ಸಂಗದಲ್ಲಿ :—ಮೂತ್ರವು ಹೊರಹೊರಡದೆ ವಸ್ತಿಯಲ್ಲಾಗಲಿ ಮೂತ್ರನಾಳಗಳಲ್ಲಾಗಲಿ ಮೇಢ್ರಾಗ್ರದಲ್ಲಿರುವ ಮಣಿಯಲ್ಲಾಗಲಿ ನಿಂತಿರುವುದು. ಬಲಾತ್ಕಾರವಾಗಿ ಮುಕ್ಕಿದರೆ ವಸ್ತ್ಯಾದಿಗಳಲ್ಲುಂಟಾಗುವ ಅಭಿಘಾತದಿಂದ ರಕ್ತ ದೊಡಗೂಡಿ ಸ್ವಲ್ಪಸ್ವಲ್ಪವಾಗಿ ಸ್ರವಿಸುವುದು.

ಮೂತ್ರಗ್ರಂಥಿಯಲ್ಲಿ :—ವಸ್ತಿಮುಖದ ಒಳಭಾಗದಲ್ಲಿ ವರ್ತುಲಾಕಾರವೂ, ಕಠಿಣವೂ, ಬಹಳ ಸೂಕ್ಷ್ಮಾಕಾರವೂ, ಅಶ್ಮರಿಗೆ ಸಮಾನವೂ ಆದ ಗ್ರಂಥಿಯು ಹುಟ್ಟುವುದು. ಆದುದರಿಂದ ಮೂತ್ರವು ರಕ್ತದಿಂದ ಕೂಡಿ ಅಧಿಕ ಕಷ್ಟವಾಗಿ ಪ್ರವರ್ತಿಸುವುದು.

ಮೂತ್ರಶುಕ್ರದಲ್ಲಿ :—ಮೂತ್ರವು ಬರುವಾಗ ಅದನ್ನು ನಿರೋಧಿಸಿ ಸ್ತ್ರೀಯರಲ್ಲಿ ರತಿಸುಖವನ್ನು ಮಾಡಿದರೆ ಶುಕ್ರವು ವಾತದಿಂದ ಸ್ಥಾನಪಲ್ಲಟವಾಗಿ

ಊರ್ಧ್ವವಾಗಿ ಪ್ರಸರಿಸಿ ಮೂತ್ರವು ಹೊರಡುವುದಕ್ಕೆ ಮುಂದಾದರೂ, ಹಿಂದಾದರೂ ಬೂದಿಬೆರೆತ ನೀರಿನಂತೆ ಸ್ರವಿಸುವುದು.

ವಿಡ್ವಿಘಾತದಲ್ಲಿ:—ವಾತದಿಂದ ಮಲವು ಊರ್ಧ್ವವಾಗಿ ಪ್ರಸರಿಸಿ ಮೂತ್ರ ಮಾರ್ಗವನ್ನು ಸೇರಿದ್ದಾದರೆ ಅಂತಹ ಮಲದಿಂದ ಕೂಡಿ ಮಲದಂತೆ ದುರ್ಗಂಧ ವಾಗಿ, ಮೂತ್ರವು ಅತಿಕಷ್ಟವಾಗಿ ಸ್ರವಿಸುವುದು

ಮೂತ್ರಸಾದದಲ್ಲಿ:—ಪಿತ್ಥವಾಗಲಿ, ಕಫವಾಗಲಿ, ಎರಡೂ ಸೇರಿಯಾಗಲಿ ವಾತದಿಂದ ಘನೀಭಾವವನ್ನು ಹೊಂದಿ ಹಳದಿಯಾಗಿಯಾಗಲಿ, ಕೆಂಪಾಗಿಯಾಗಲಿ ಬಿಳುಪಾಗಿಯಾಗಲಿ, ಮಂದವಾಗಿಯಾಗಲಿ ಮೂತ್ರವು ಅತಿ ಕಷ್ಟವಾಗಿ ಉರಿ ಯಿಂದ ಹೊರಡುವುದು.

ಉಷ್ಣವಾತದಲ್ಲಿ:—ಪಿತ್ಥವು ಪ್ರಕುಪಿತವಾಗಿ ವಸ್ತಿಯಲ್ಲ ಸೇರಿ ವಾತ ದೊಂದಿಗೆ ಬೆರೆತು ವಸ್ತಿ, ಮೇಢ್ರ, ಗುದಗಳಲ್ಲಿ ಉರಿಯನ್ನುಂಟುಮಾಡಿ ಹಳದಿ, ಕೆಂಪು, ರಕ್ತ ಈ ವರ್ಣಗಳುಳ್ಳ ಮೂತ್ರವನ್ನು ಮಾತುಮಾತಿಗೂ ಹೊರಡಿಸುವುದು.

ವಸ್ತಿಕುಂಡಲಿಕೆಯಲ್ಲಿ:—ಕ್ರೂರಕರ್ಮಗಳಿಂದ ಮೂತ್ರಾಶಯವು ಸ್ವಸ್ಥಾನ ದಿಂದ ಹೊರಹೊರಟು ಗರ್ಭದಂತೆ ಸ್ಥೂಲವಾಗಿರುವುದು. ಆದಕಾರಣ ಥಳಕು, ನೋವು, ಕಂಪವು, ಉರಿ ಇವುಗಳಿಂದ ಮೂತ್ರವು ಒಂದೊಂದು ತೊಟ್ಟಾಗಿ ಸ್ರವಿಸುವುದು. ಅಂತಹ ಸಮಯದಲ್ಲ ವಸ್ತಿಯನ್ನು ಕೈಯಿಂದ ಹಿಸಿಕಿದರೆ ಮೂತ್ರವು ಧಾರೆಯಾಗಿ ಬರುವುದು.

## ಮೂತ್ರಾಘಾತರೋಗದಲ್ಲಿ ಅಸಾಧ್ಯ ಲಕ್ಷಣ.

೧. ಕಫದಿಂದ ಉಂಟಾದ ಮೂತ್ರಾಘಾತವು ಜ್ವರ, ಶೋಷೆ, ಜಡತ್ವ ಇವು ಗಳಿಂದ ಕೂಡಿಯಿದ್ದು ಬಿಳುಪಾಗಿ ಗಟ್ಟಿಯಾಗಿ ಸ್ವಲ್ಪಸ್ವಲ್ಪವೆ ಮೂತ್ರಸ್ರಾವ ವಾಗುತ್ತಿದ್ದರೆ ಅಸಾಧ್ಯವು.

೨. ಶ್ಲೇಷ್ಮದಿಂದ ಗಂಟಲುಕಟ್ಟಿಕೊಂಡು ವಸ್ತಿಯಲ್ಲಿ ಪಿತ್ಥಾಧಿಕ್ಯವಾಗಿ ರುವ ಮೂತ್ರಾಘಾತವು ಅಸಾಧ್ಯವು.

೩. ವಸ್ತಿಯಲ್ಲಿ ಕುಂಡಲಾಕಾರವು, ತೋರಿ ತೃಟ್, ಮೋಹ, ಶ್ವಾಸ ಇವು ಗಳಿಂದ ಕೂಡಿದ ಮೂತ್ರಾಘಾತವು ಅಸಾಧ್ಯವು.

## ಮೂತ್ರಾಘಾತ ಚಿಕಿತ್ಸೆಗಳು.

೧. ಕರೀಹುರಳೀ, ಅಳಲೇಕಾಯಿಸಿಪ್ಪೆ, ಮುಳ್ಳು ಮುತ್ತುಗದಬೇರು, ಇವನ್ನಾದರೂ ಹುರಳೀ, ಚಿಟ್ಟೆರಳುಬೇರು, ಶುಂಠಿ ಇವನ್ನಾದರೂ ಕಷಾಯ ಮಾಡಿ ಹಿಂಗು ಸಹಿತ ಕೊಡಿಸಲು ಶರ್ಕರೆಯೆಂಬ ಮೂತ್ರಾಘಾತ ಶರ್ಕರೆ ಸಹಿತ ಪರಿಹಾರವಾಗುವದು.

೨. ಲಕ್ಕಲಿಬೇರು, ಹಿಪ್ಪಲಿ, ಮೋಡಿ, ಮೆಣಸು, ಚವ್ಯ, ಚಿತ್ರಮೂಲ, ಶುಂಠಿ, ಹೊಟ್ಟುಸುಲಿದ ಜೆಳ್ಳುಳ್ಳಿ, ಬಿಳೇಜೀರಿಗೆ, ನೆಗ್ಗಿಲಬೇರು, ಅಳಲೇ ಕಾಯಿಸಿಪ್ಪೆ, ಕೊಮ್ಮೇಬೇರು, ಅಡಕೆಪುಟ್ಟಿನಬೇರು, ಬೆಲ್ಲವತ್ತಿದಬೇರು, ಸಾರುಂಬೇಳೆಬೇರು, ಹುರಳಿ, ಚಿಟ್ಟಿರಳುಬೇರು, ಗಜ್ಜುಗದಬೇರು, ದೇವದಾರು, ಸಣ್ಣಗೋರಂಟಿಬೇರು, ಮುಳ್ಳುಮುತ್ತಗದಬೇರು, ಮಟಿಮಾಲಂಗಿಬೇರು ಇವಿಷ್ಟನ್ನೂ ಕಷಾಯಮಾಡಿ ಕೊಡಿಸಲು ಉದರಶೂಲೆ, ಕಲ್ಲುಕಟ್ಟು, ಶರ್ಕರಾಮೇಹ, ಮೂತ್ರಾಘಾತ ಇವೆಲ್ಲ ಪರಿಹರವು. ಕಷಾಯವನ್ನು ಕೊಡಿಸುವಾಗ ಹಿಂಗು ಸೈಂಧವಲವಣವೆರಸಿ ಕೊಡಿಸುವುದು.

## ಅಶ್ಮರೀ ಲಕ್ಷಣ.

ವಾತವು ಪ್ರಕುಪಿತವಾಗಿ ವಸ್ತಿಗತವಾದ ಮೂತ್ರವನ್ನು ಶುಕ್ರವನ್ನು ಪಿತ್ಥವನ್ನು ಕಫವನ್ನು ಕ್ರಮವಾಗಿ ಶೋಷಿಸುವಂತೆ ಮಾಡಿ ಆಕಳಿನಲ್ಲಿ ಗೋರೋಜನವು ಉತ್ಪತ್ತಿಯಾಗುವಂತೆ ಅಶ್ಮರಿಯನ್ನು ಹುಟ್ಟಿಸುವುದು.

ಅದರಲ್ಲಿ ವಾತಜಾಶ್ಮರಿಯಲ್ಲಿ :—ಬಹಳಬಾಧೆ, ಹಲ್ಲುಕಡಿಯುವಿಕೆ, ನಡುಗುವಿಕೆ, ಬಾಧೆಗೆ ತಾಳಲಾರದೆ ಮೇಢ್ರವನ್ನು ಕೈಯಿಂದ ಹಿಡಿದುಕೊಳ್ಳುವಿಕೆ, ಹೊಟ್ಟೆಯನ್ನು ಹಿಸಿಕಿಕೊಳ್ಳುವಿಕೆ, ಯಾವಾಗಲೂ ಬಾಧೆಯಿಂದ ಅರಚುತ್ತಿರುವಿಕೆ, ಅಪಾನವಾತದಿಂದ ಕೂಡಿ ಪುರೀಷವು ವಿಸರ್ಜನೆಯಾಗುವಿಕೆ, ತೊಟ್ಟುತೊಟ್ಟಾಗಿ ಮೂತ್ರವನ್ನು ಬಿಡುವಿಕೆ, ಅಶ್ಮರಿಯು ಅರುಣವರ್ಣವಾಗಿಯಾದರೂ, ನೀಲವರ್ಣವಾಗಿಯಾದರೂ ಮುಳ್ಳುಗಳಿಂದ ಕೂಡಿದಂತಿರುವಿಕೆ ಮೊದಲಾದ ಚಿಹ್ನೆಗಳಿರುವುವು.

ಪಿತ್ಥಜಾಶ್ಮರಿಯಲ್ಲಿ:—ನಾಭಿಯ ಕೆಳಹೊಟ್ಟೆಯು ಉರಿಯುವಿಕೆ, ಕೆಳಹೊಟ್ಟೆಯು ಬೇಯುತ್ತಿದ್ದಂತೆ ಬಿಸಿಯುಂಟಾಗಿರುವಿಕೆ, ಅಶ್ಮರಿ ರಕ್ತವರ್ಣವಾಗಿಯಾಗಲಿ, ನೀಲವರ್ಣವಾಗಿಯಾಗಲಿ ಗೇರುಬೀಜದಂತೆ ಕಠಿನವಾಗಿರುವಿಕೆ ಮೊದಲಾದ ಚಿಹ್ನೆಗಳು ಕಾಣುವುವು.

ಕಫಜಾಶ್ಮರಿಯಲ್ಲಿ :—ವಸ್ತಿಯಲ್ಲಿ ಸೂಜಿಗಳು ಚುಚ್ಚಿದಂತೆ ಛಳುಕು ತಣ್ಣಗೂ, ಗುರುತ್ವವಾಗಿಯೂ ಇರುವಿಕೆ, ಅಶ್ಮರಿಯು ಬಹಳ ದೊಡ್ಡದಾಗಿ ನುಣುಪುಂಟಾಗಿ ಜೇನುತುಪ್ಪದ ವರ್ಣವುಂಟಾಗಿರುವಿಕೆ ಮೊದಲಾದ ಚಿಹ್ನೆಗಳು ಕಂಡುಬರುವುವು.

ಶುಕ್ರಾಶ್ಮರಿಯಲ್ಲಿ :—ಯೌವನಕಾಲದಲ್ಲಿ ಪುರುಷನು ರತಿಸುಖ ಮಾಡದೆ ಶುಕ್ರವನ್ನು ನಿಗ್ರಹಿಸುವುದರಿಂದ ಸ್ವಸ್ಥಾನದಿಂದ ಚಲಿಸಿದ ಶುಕ್ರವು ಮೇಢ್ರವೃಷಣಗಳಿಗೆ ಮಧ್ಯಭಾಗದಲ್ಲಿರುವ ವಸ್ತಿಮುಖದಲ್ಲಿ ವಾತದಿಂದ ಶುಷ್ಕವಾಗಿ ಮೂತ್ರವನ್ನು ತಡೆಯುವುದು. ಅದರಿಂದ ವಸ್ತಿಯಲ್ಲಿ ಛಳುಕು, ಮೂತ್ರವು

ಕಷ್ಟದಿಂದ ಹೊರಡುವಿಕೆ, ವೃಷಣಗಳಲ್ಲಿ ಊತ ಮೊದಲಾದ ಚಿಹ್ನೆಗಳು ಕಾಣುವುವು.

## ಅಶ್ಮರೀರೋಗದಲ್ಲಿ ಅಸಾಧ್ಯ ಲಕ್ಷಣ.

೧ ನಾಭಿ, ವೃಷಣ ಇವುಗಳು ದಪ್ಪವಾಗಿ ಮತ್ತು ನೋವು, ಮೂತ್ರ ಕಟ್ಟುವಿಕೆ, ಬಿಳುಪಾಗಿರುವರೀತಿ ಇವುಗಳಿರುವ ಅಶ್ಮರೀರೋಗವು ಅಸಾಧ್ಯವು.

೨. ಅಂಡದಲ್ಲಿ ಚುಚ್ಚುವಿಕೆ, ಅಂಡವು ಒತ್ತುವುದು, ಮೂತ್ರಬಂಧ ಇವುಗಳಮೇಲೆ ಉಪರೋಗಗಳು ಹೆಚ್ಚಿದ ಅಶ್ಮರೀರೋಗವು ಅಸಾಧ್ಯವು.

## ಅಶ್ಮರೀ ಚಿಕಿತ್ಸೆಗಳು.

೧. ಚಿಲಕೀರೆಸೊಪ್ಪು ಸಮೂಲವಾಗಿ ಕಷಾಯುವಮಾಡಿ ಹಿಂಗುವೆರಸಿ ಕೊಡಿಸಲು ಮೂತ್ರಕೃಚ್ಛ್ರ, ಕಲ್ಲುಕಟ್ಟುಗಳು ಪರಿಹಾರವಾಗುವುವು.

೨. ಚಿಲ್ಲದಬೀಜ, ಆದಿತ್ಯಭಕ್ತ, ಆಷಾಢಿ, ನೆಗ್ಗಿಲಜೇರು ಇವಿಷ್ಟನ್ನೂ ಕಷಾಯುವಮಾಡಿ ಸ್ವಲ್ಪ ಹಿಂಗುಸಹಿತ ಕುಡಿಯಕೊಡೆ ಸಕಲ ವಾತದಿಂದುಂಟಾದ ಮೂತ್ರಕೃಚ್ಛ್ರ, ಕಲ್ಲುಕಟ್ಟು ಇವೆಲ್ಲವೂ ಪರಿಹಾರವಾಗುವುವು.

೩. ಆಳಲೇಕಾಯಿ, ನೆಗ್ಗಿಲಜೇರು, ಕಕ್ಕೆಮರದಚಕ್ಕೆ, ಹಿಟ್ಟುಳುಕನಬೇರು ತುರುಚನಬೇರು ಇವೆಲ್ಲವನ್ನೂ ಕಷಾಯುಮಾಡಿ ಕಲ್ಲುನಾರು ಚೂರ್ಣವಹಾಕಿ ಕುಡಿಯಕೊಡಿಸಲು ಶರ್ಕರಾಮೇಹ, ಮೂತ್ರಕೃಚ್ಛ್ರ, ಕಲ್ಲುಕಟ್ಟು ಇವುಗಳು ಪರಿಹಾರವಾಗುವುವು.

೪. ಲಕ್ಕಲಿಬೇರು, ಚಿಟ್ಟರಳುಬೇರು, ಕೊರಟಿಗೆಬೇರು, ನೆಗ್ಗಿಲು, ಕೊಮ್ಮೆ ಅಡಿಕೆಪುಟ್ಟನಬೇರು, ನೆಲಗುಳ್ಳ, ಕೊನ್ನಾರಿಗಡ್ಡೆ, ನುಗ್ಗೀಬೇರು, ಮುಟಮಾಲಂಗಿ ಬೇರು, ಹಿಪ್ಪಲಿ, ಹಿಟ್ಟುಳುಕನಬೇರು ಇವಿಷ್ಟನ್ನೂ ಸಮಾಂಶವಾಗಿ ಕಷಾಯುವಂ ಮಾಡಿ ತೆಗೆದುಕೊಳ್ಳಲು ಶರ್ಕರಾಮೇಹ, ಕಲ್ಲುಕಟ್ಟು, ಶೂಲೆಕಲ್ಲು, ವಿಪ್ರುತಿ, ಪ್ಲೀಹ, ಮತ್ತೆ ಮಿಕ್ಕಾದ ಉದರರೋಗಂಗಳೆಲ್ಲವೂ ಪರಿಹಾರವಾಗುವುವು.

೫. ಕರಿಬೇವಿನಸೊಪ್ಪನ್ನು ಅರೆದು ಕಲ್ಕವಮಾಡಿ ಬಿಸಿನೀರಿನಿಂದ ಕೊಡಿಸಲು ಆ ಕ್ಷಣದಲ್ಲಿಯೇ ನೋವು, ಕಲ್ಲುಕಟ್ಟಿನಿಂದ ಉಂಟಾದ ವ್ಯಾಧಿ ಪರಿಹಾರವಾಗುವುದು.

೬. ನುಗ್ಗೆಬೇರಿನ ಕಷಾಯುವನ್ನು ಆರಿಸಿ ಸ್ವಲ್ಪ ಬಿಸಿಯಾಗಿ ತೆಗದು ಕೊಳ್ಳಲು ಅಶ್ಮರೀ ಪರಿಹಾರವಾಗುವುದು.

೭. ಲಕ್ಕಲಿಯ ಬೇರನ್ನೂ, ಅರಿಸಿನವನ್ನೂ, ಕಷಾಯುವಮಾಡಿ ಕೊಡಿಸಿದರೂ, ಕಲ್ಕವಮಾಡಿ ಕೊಡಿಸಿದರೂ, ಕಲ್ಲುಕಟ್ಟಿನವ್ಯಾಧಿ ಪರಿಹಾರವಾಗುವುದು.

೮. ಕರೀಲಕ್ಕಲಿಯ ಬೇರನ್ನು ಎಳನೀರಿಂದರದು ಕುಡಿಯಕೊಡಲು ಶರ್ಕರಾಮೇಹ, ಕಲ್ಲುಕಟ್ಟು ಇವು ಪರಿಹಾರವಾಗುವುವು.

## ಬಹುಮೂತ್ರ ಲಕ್ಷಣ.

ಮೇಹರೋಗದಲ್ಲಿ ಶೀತಲದಿಂದ ಬಹುಮೂತ್ರವು ಉಂಟಾಗುವುದು. ಈ ರೋಗವು ವಾತಜ, ಪಿತ್ಥಜ, ಕಫಜ, ತ್ರಿದೋಷಗಳೆಂಬದಾಗಿ ನಾಲ್ಕು ಬಗೆಯಾಗಿರುವುದು.

ವಾತಜ ಬಹುಮೂತ್ರದಲ್ಲಿ:—ಮೂತ್ರವು ಅಧಿಕವಾಗುವುದು ಬಹಳ ನೋವಿನಿಂದ ಸ್ರವಿಸುವುದು, ಶರೀರವು ಬಲಹೀನವಾಗಿರುವುದು, ಆನಾಹವು, ಅಗ್ನಿಮಾಂದ್ಯವು ಈ ಲಕ್ಷಣಗಳು ಉಂಟಾಗುವುದು.

ಪಿತ್ಥಜ ಬಹುಮೂತ್ರದಲ್ಲಿ :—ಮೂತ್ರದ ಜೊತೆಯಲ್ಲಿ ಇಂದ್ರಿಯವು ಬೀಳುವುದು, ಶರೀರ ಬಲಹೀನವಾಗುವಿಕೆ, ಸ್ವರಕುಗ್ಗುವಿಕೆ, ಅನ್ನದ್ವೇಷ, ಅಗ್ನಿಮಾಂದ್ಯ, ನಾಭಿಯೊಳಗೆ ಸದಾ ಶೂಲೆ ಈ ಲಕ್ಷಣಗಳು ಉಂಟಾಗುವುದು.

ಕಫಜ ಬಹುಮೂತ್ರದಲ್ಲಿ :—ಮೂತ್ರದ ಕಡೆಯಲ್ಲಿ ಬಿಳುಪಾಗಿರುವುದು; ಶೂಲೆಯೂ, ತಾಪವೂ ಉಂಟಾಗುವುದು ; ಅನ್ನದ್ವೇಷ, ಅಗ್ನಿಮಾಂದ್ಯ, ಶ್ವಾಸ, ಕಾಸ, ಮದ, ಆಲಸ್ಯ, ಮೂತ್ರವೇದನೆಯು ಈ ಲಕ್ಷಣಗಳು ಉಂಟಾಗುವುವೆಂದು ತಿಳಿಯಬೇಕು.

ತ್ರಿದೋಷಜ ಬಹುಮೂತ್ರದಲ್ಲಿ:—ವಾತ, ಪಿತ್ಥ, ಕಫಗಳ ಬಹುಮೂತ್ರಗಳ ಲಕ್ಷಣಗಳೆಲ್ಲವೂ ಇರುವುದಲ್ಲದೆ ನಾಭಿಯೊಳಗೆ ಗ್ರಂಥರೂಪವಾಗಿರುವುದು, ಮಹಾ ಶೂಲೆಯಿಂದ ಕೂಡಿದ ಮೂತ್ರವೇಗವುಳ್ಳದ್ದಾಗಿರುವುದು; ಉರಿ, ಬಾಯಾರಿಕೆ, ಕೈಕಾಲುಗಳು ಸತ್ವಹೀನ, ದುರ್ಬಲತ್ವ, ವೀರ್ಯನಾಶ, ಅನ್ನದ್ವೇಷ, ಆನಾಹ, ಮಲಬದ್ಧತೆ, ಮೈಯುರಿ, ಹಗಲಿನಲ್ಲಿ ಅಲ್ಪಮೂತ್ರವಾಗುವಿಕೆ ಈ ಲಕ್ಷಣಗಳಿರುವುವು.

ಶರೀರವನ್ನು ಅತಿಯಾಗಿ ಆಯಾಸಗೊಳಿಸುವುದರಿಂದಲೂ ಅತಿಯಾದ ಮನೋಶ್ರಮೆಯಿಂದಲೂ, ಮದ್ಯಪಾನವನ್ನು ಮಿತಿಮೀರಿ ಮಾಡುವುದರಿಂದಲೂ ಪ್ರಮೇಹ, ಕೊರಕು (ಟಾಕಿ) ರೋಗಗಳಕಾರಣಗಳಿಂದಲೂ ಮೆದಳು ಕೆಟ್ಟುಹೋಗಿ ರಕ್ತದಲ್ಲಿ ಸಿಹಿಯಾದ ಪದಾರ್ಥವು ಏರ್ಪಡುತ್ತಿರುವುದರಿಂದಲೂ ಬಹುಮೂತ್ರ ರೋಗವು ಏರ್ಪಡುವುದು. ಆರಂಭದಲ್ಲ ಸಾಮಾನ್ಯವಾಗಿ ದಾಹವಾಗುತ್ತಾ ಮೂತ್ರವಿಸರ್ಜನೆಯು ಹೆಚ್ಚುತ್ತಿರುವುದು. ಈ ಮೂತ್ರದಲ್ಲಿ ಸಕ್ಕರೆಯು ಮಿಶ್ರವಾಗಿರುವುದೂ ಉಂಟು. ಇಲ್ಲದೇ ಇರುವುದೂ ಉಂಟು. ಬಹುಮೂತ್ರದ ಮೇಲೆ ನೊಣಗಳು ಇರುವೆಗಳೂ ಮುತ್ತುವುವು. ಮೂತ್ರರೋಗಿಯ ಮೂತ್ರವು ಬಟ್ಟೆಗೆ ತಗಲುವುದರಿಂದ ಅದು ಆರಿದನಂತರ ಬಿಳುಪಾದ ಪದಾರ್ಥವಿರುವಿಕೆಯನ್ನು ಕಾಣಬಹುದು. ದಿನೇದಿನೇ ರೋಗವು ಹೆಚ್ಚಿದಂತೆಲ್ಲ ಮೂತ್ರದಲ್ಲಿ ಶ್ವೇತಧಾತುವು ಹೊರಡುವುದಕ್ಕಾರಂಭಿಸುವುದು. ರೋಗವು ಪ್ರಕೋಪಾವಸ್ಥ

ಯನ್ನು ಹೊಂದಿದಮೇಲೆ ಕುರು, ರಾಜಹುಣ್ಣು, ಅಂಗವಿಕೃತಿರೋಗಗಳುಂಟಾಗ ಬಹುದು. ಒಂದುಸಾರಿ ಹಸಿವು ಹೆಚ್ಚಾಗಿಯೂ, ಮತ್ತೊಂದುಸಾರಿ ಕಡಿಮೆ ಯಾಗಿಯೂ ಆಗುವುದುಂಟು. ದೀರ್ಘವ್ಯಾಪಕವ್ಯಾಧಿಯಲ್ಲಿ ಹಲ್ಲಿನ ಒಸಡು ಬಾತುಕೊಂಡು ನಾಲಿಗೆ ಕೆಂಪು, ಅರಿಶಿನ ಮಿಶ್ರವಾದ ಬಣ್ಣವುಳ್ಳುದ್ದಾಗುವುದು. ಈ ರೋಗದಲ್ಲಿ ಮುಖ್ಯವಾಗಿ ಮೂತ್ರವು ಅಧಿಕವಾಗುವಿಕೆಯೇ ಅಲ್ಲದೆ ಶೋಷೆ, ತಾಪವುಂಟಾಗುವಿಕೆ, ಬಾಯಾರಿಕೆ, ಭ್ರಮೆ (ತಲೆಸುತ್ತು) ಯುಂಟಾಗುವಿಕೆ, ಸರ್ವಾವಯುವಗಳು ಸತ್ವವಿಲ್ಲದಿರುವಿಕೆ ಈ ಲಕ್ಷಣಗಳಿರುವುವು.

## ಬಹುಮೂತ್ರಕ್ಕೆ ಚಿಕಿತ್ಸೆಗಳು.

೧. ಶುದ್ಧಿಮಾಡಿದ ಶಂಖಪಾಷಾಣ ೨|| ತೊಲೆ, ಶುದ್ಧಿಮಾಡಿದ ಇಂಗ ಲೀಕ ೧|| ತೊಲೆ, ಶುದ್ಧಿಮಾಡಿದ ಮುರುದಾರಸಿಂಗಿ ||| ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಚನ್ನಾಗಿ ಅರೆದು ಬಾಯಿಗಳು ಸೇರುವ ೨ ಮಡಿಕೆ ತೆಗೆದು ಕೊಂಡು ಕೆಳಗಳಮಡಿಕೆಯಲ್ಲಿ ಖಲ್ವದಲ್ಲಿ ಅರೆದ ಚೂರ್ಣಹಾಕಿ ಮೇಲೆ ಬೋರ ಲಾಗಿ ಮಡಿಕೆಮುಚ್ಚಿ ಗೋಧಿವೆಹಸಿಟ್ಟು ಕೋಳಿಮೊಟ್ಟೆ ಬೇಯಿಸಿ ಅದರಲ್ಲಿರುವ ಚಂದ್ರ ಇವು ಎರಡು ನೀರಿನಲ್ಲಿ ಕಲಸಿ ಬಟ್ಟೆಯಲ್ಲಿ ಶೀಲುಮಾಡಿ ಒಲೆಯ ಮೇಲಿಟ್ಟು ೨ ಜಾವ ಉರಿಯನ್ನು ಸಣ್ಣನಾಗಿ ಹಾಕಬೇಕು. ಆದಿನ ಹಾಗೆಯೇ ಬಿಟ್ಟು ಮಾರನೇದಿನ ಮೇಗಳ ಮಡಿಕೆಗೆ ಸತಂಗಿಸಿರತಕ್ಕ ಭಸ್ಮವನ್ನು ಚನ್ನಾಗಿ ಕೆರೆದು ಇಟ್ಟುಕೊಳ್ಳಬೇಕು. ಹೊತ್ತಿಗೆ ಎಳ್ಳುಕಾಳಷ್ಟು ಭಸ್ಮ ಸ್ವಲ್ಪ ಜೇನಿನಲ್ಲಿ ಕಲಸಿ ಕೊಡಬೇಕು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡು ವುದು. ಇದರಿಂದ ಬಹುಮೂತ್ರ, ಎರಡು ಭುಜಗಳಲ್ಲಿ ಬರತಕ್ಕ ನೋವು ಗುಣ ವಾಗುತ್ತೆ. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ.

೨. ನೆಲತಂಗಡಿ ಹಸೇದು ೨ ಹಿಡಿ ತಂದು ಒರಳಲ್ಲಿ ಹಾಕಿ ಹಸುವಿನಹಾಲು ಹಾಕಿ ಕುಟ್ಟಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ತಪಸಿಚಕ್ಕೆ ೧ ಹಿಡಿ ತಂದು ಒರಳಲ್ಲಿ ಹಾಕಿ ಹಸುವಿನಹಾಲು ಹಾಕಿ ಕುಟ್ಟಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಎರಡು ರಸಗಳೂ ಶೇರಿ ೧ ಸೊಲಿಗೆ, ಇದಕ್ಕೆ ಜಾಕಾಯಿ, ಯಾಲಕ್ಕಿ, ಲವಂಗ ಇವು ಮೂರೂ ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಅರ್ಧತೊಲೆ ಚೂರ್ಣವನ್ನು ಮೇಲ್ಕಂಡ ರಸಗಳಲ್ಲಿ ಹಾಕಿ ಕಲಸಿ ಕುಡಿಯುವುದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೩ ದಿನ ಕೊಡುವುದು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಹರಿವೇಸೊಪ್ಪು ಬದನೇಕಾಯಿ, ಕೋಳೀಮಾಂಸ, ಮೇಕೇಮಾಂಸ ಮೊದಲಾದ ಉಷ್ಣಪದಾರ್ಥಗಳು ೨ ತಿಂಗಳು ಸೇವಿಸಕೂಡದು. ಮೂತ್ರ ಕಾಯಿಸಿದರೆ ಬೆಲ್ಲದಂತೆ ಆದರೆ ಬಹುಮೂತ್ರ ಎಂದು ತಿಳಿದುಕೊಳ್ಳ ಬೇಕು. ಇದರಿಂದ ಬಹುಮೂತ್ರ ಗುಣವಾಗುವುದು.

೩. ಕಿರುಗಡಿಸಿ ಅಂದರೆ ಹಿಂದುಸ್ತಾನಿಯಲ್ಲಿ ಗುಂಡಿಪಿಕ್ಕೇಕಿ ಬೂಟಿ ಅನ್ನುತ್ತಾರೆ. ಇದು ಬೆಲ್ಲದರುಚಿ ಕೆಡಿಸುವುದು. ಕಿರುಗಡಿಸಿಸೊಪ್ಪು ೪ ತೊಲೆ, ಮೆಂತ್ಯ ೧ ತೊಲೆ ನೀರಿನಲ್ಲಿ ನೆನೆಯಿಡುವುದು. ಬಿಳೀಗುರುಗಂಜಿ ೧ ತೊಲೆ, ನೀರಿನಲ್ಲಿ ನೆನೆಯಿಟ್ಟು ಹೊಟ್ಟು ತೆಗೆದುಹಾಕಿ ಇವುಮೂರೂ ಒರಳಲ್ಲಿ ಹಾಕಿ ರುಬ್ಬಿ ಅವರೇಕಾಳಷ್ಟು ಮಾತ್ರೆಗಳು ಮಾಡುವುದು. ಹೊತ್ತಿಗೆ ೧ ಮಾತ್ರೆ ರವೆ ಉಪ್ಪಿಟ್ಟಿನ ಮಧ್ಯೆ ಇಟ್ಟು ತುಪ್ಪದಲ್ಲಿ ಉರಿಳಿಸಿ ನುಂಗುವುದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಧ್ಯ ರವೆಅನ್ನ ರೊಟ್ಟಿ ಹಸುವಿನಹಾಲು ಆಗಬಹುದು. ಬೆಲ್ಲ ಸಕ್ಕರೆ ಕೂಡದು. ಇದರಿಂದ ಬಹುಮೂತ್ರ ಗುಣವಾಗುವುದು. ಬಾಯಾರಿಕೆ ಇದ್ದರೆ ಬಹುಮೂತ್ರಯನ್ನಿಸಿ ಕೊಳ್ಳುವುದು. ಬಾಯಾರಿಕೆ ಇಲ್ಲದೆ ಇದ್ದರೆ ಬಹುಮೂತ್ರವಲ್ಲ. ಬಾಯಾರಿಕೆ ಯಿಲ್ಲದೆ ಮೂತ್ರ ವಿಶೇಷವಾಗಿ ಆದರೆ ಮೂತ್ರಕೋಶ ಬಿಗಿತಪ್ಪಿಹೋಯಿತು ಎಂದು ಅರ್ಥ. ಆದಕ್ಕೆ ಅವಲಕ್ಕಿ ಸ್ವಲ್ಪ, ಹುರಿಕಡಲೆ, ಒಣಕೊಬರಿ ಸ್ವಲ್ಪ ಮೆಣಸು, ಬೆಲ್ಲಾ ಹಾಕಿ ಕುಟ್ಟಿ ಲೇಹದಂತೆ ಮಾಡಿ ಕೊಡುತ್ತಾ ಬಂದರೆ ನಿಂತು ಹೋಗುತ್ತೆ.

೪. ಬಿಲ್ಪತ್ರೆಕಾಯಿ ವಣಗಿದ್ದನ್ನು ತಂದು ಮೇಲಿನಸಿಪ್ಪೆ ತೆಗೆದುಹಾಕಿ ಒಳಗಿನದು ತೆಗೆದುಕೊಂಡು ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಹೊತ್ತಿಗೆ ೧ ತೊಲೆ ಚೂರ್ಣ ತಣ್ಣೀರಿನಲ್ಲಿ ಕಲಸಿ ಕೊಡುವುದು. ಹೀಗೆ ಬೆಳಿಗ್ಯೆ ಸಾಯಂ ಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಧ್ಯ ಹಸುವಿನಹಾಲು ಅನ್ನ.

೫. ಒಳ್ಳೆ ಬಿಳೀಗುರುಗಂಜಿಬೀಜ ನೀರಿನಲ್ಲ ನೆನೆಯಿಸಿ ಮೇಲಿನ ಹೊಟ್ಟು ತೆಗೆದು ಒಣಗಿಸಿ ಕುಟ್ಟಿ ಚೂರ್ಣಮಾಡಿದ್ದು ೬ ಆಣೆ ತೂಕ ಇದನ್ನು ೨ ಆಣೆ ತೂಕದಂತೆ ಮೂರುಪೊಟ್ಟಣ ಕಟ್ಟಿಕೊಳ್ಳುವುದು. ಕುರಿ ತೊಡೆಗಳಲ್ಲಿರತಕ್ಕ ೨ ನಲ್ಲಿ ತಂದು ಈ ನಲ್ಲಿಯೊಳಗಿರುವುದು ಕಬ್ಬಿಣದ ಮೊಳೆಯಿಂದ ತೋಡಿ ತೆಗೆದು ಕೊಂಡು ಒಂದು ಗಾಜಿನಬಟ್ಟಲಿನಲ್ಲಿ ಹಾಕಿ ಮೇಲ್ಕಂಡ ೨ ಆಣೆ ತೂಕ ಚೂರ್ಣ ಇವು ಎರಡು ಚನ್ನಾಗಿ ಕಲಸಿ ಅದೇ ಒಂದು ನಲ್ಲಿಗೆ ತುಂಬುವುದು. ಗೋಧಿ ರವೆ ಅರಪಾವು ತಂದು ನೀರಿನಲ್ಲಿ ಗಟ್ಟಿಗೆ ಕಲಸಿ ಇದೇ ಗೋಧಿ ಹಸಿಟ್ಟಿ ನಲ್ಲಿ ಕಡಬಿನಹಾಗೆ ಮಾಡಿ ಆ ನಲ್ಲಿ ಮುಚ್ಚಿಬಿಡವುದು. ಒಂದು ಮಡಿಕೆಯಲ್ಲಿ ನೀರುಹಾಕಿ ಬಟ್ಟೆಕಟ್ಟಿ ಆ ಒಟ್ಟೆಮೇಲೆ ಕಡುಬು ಇಟ್ಟು ಮುಚ್ಚಳ ಮುಚ್ಚಿ ಬೇಯಿಸುವುದು. ರಾತ್ರೆ ಊಟವಾದನಂತರ ಆ ನಲ್ಲಿ ಯೊಳಗಿರುವ ಔಷಧವನ್ನು ತಿಂದು ಕಡಬನ್ನು ತಿನ್ನುವುದು. ಇದೇರೀತಿ ೩ ದಿನ ರಾತ್ರೆ ಹೊತ್ತು ತೆಗೆದುಕೊಳ್ಳುವುದು. ಇದಕ್ಕೆ ಪಧ್ಯ ಹೆಸರುಬೇಳೆ ಕಿಚ್ಚಡಿ (ಹುಗ್ಗಿ) ತುಪ್ಪ ಅನ್ನವನ್ನು ಸೇವಿಸುವುದು. ಮಾಂಸ ತಿನ್ನುವವರಿಗೆ ಮೇಲ್ಕಂಡ ರೀತಿ ಕೊಡುವುದು. ಮಾಂಸತಿನ್ನದೇ ಇರುವವರಿಗೆ ೨ ಆಣೆ ತೂಕ ಮೇಲ್ಕಂಡ

ಚೂರ್ಣವನ್ನು ಗೋಧಿರವೆಯಲ್ಲಿ ಇಟ್ಟು ಕಡೆಬಿನಹಾಗೆ ಬೇಯಿಸಿ ಒಳಗಿರುವ ಔಷಧವನ್ನು ತಿಂದು ಕಡಬನ್ನು ತಿನ್ನುವುದು. ಈರೀತಿ ೩ ದಿವಸ ಕೊಡುವುದು. ಬಹುಮೂತ್ರ ರೋಗವಿರುವವರಿಗೆ ನಡುವು ಬಿದ್ದುಹೋಗುತ್ತೆ, ಸವದು ಇರುತ್ತಾರೆ, ಕೈಕಾಲು ಬಿದ್ದುಹೋಗುತ್ತೆ, ಮೂತ್ರದ್ವಾರ ಅಗಲವಾಗಿ ಆಗುತ್ತೆ. ಇದಕ್ಕೆ ಮೇಲ್ಕಂಡ ಔಷಧ ಕೊಟ್ಟರೆ ಆ ದ್ವಾರದಲ್ಲ ಕೊಬ್ಬು ಹೆಚ್ಚುತ್ತೆ.

೬. ತಂಗಡಿಬೇರು ಚೂರ್ಣ ೧ ಪಾವು, ಕಲ್ಲುಸಕ್ಕರೆ ೧ ಪಾವು, ಸೂರ್ತಿ ಬೆಳಗಾರ ಅರಳುಮಾಡಿದ್ದು ॥ ತೊಲೆ, ಯಾಲಕ್ಕಿ ॥ ತೊಲೆ, ವಂಗಭಸ್ಮ ॥ ತೊಲೆ, ಶೀಸಭಸ್ಮ ॥ ತೊಲೆ, ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಶೋಧಿಸಿ ಅರಿಯುವ ದಿನಸುಗಳನ್ನು ಅರೆದು ಎಲ್ಲವನ್ನೂ ಕಲಸಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆಯಷ್ಟು ಚೂರ್ಣ ಹಸುವಿನತುಪ್ಪದಲ್ಲ ಕಲಸಿ ಕೊಡುವುದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹುಮೂತ್ರ ಗುಣವಾಗುವುದು.

೭. ತಾಟಿ ಕಲ್ಲುಸಕ್ಕರೆ ೨ ತೊಲೆ, ಹಸನು ಕಲ್ಲುನಾರು ಚೂರ್ಣಮಾಡಿ ಶೋಧಿಸಿದ್ದು ೨ ತೊಲೆ, ಹಸುವಿನಮೊಸರು ಅರಪಾವು, ಉಗಿನಿಹಂಬಿನಹಾಲು ಅರಪಾವು ಈ ನಾಲ್ಕುಜಿನಸು ಕಲಸಿ ಬೆಳಿಗ್ಯೆಹೊತ್ತು ತೆಗೆದುಕೊಳ್ಳಬೇಕು. ಈರೀತಿ ೩ ದಿವಸ ಬೆಳಿಗ್ಯೆಹೊತ್ತು ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ.

೮. ಹಳೇಉಪ್ಪು ೭ ತೊಲೆ, ಪೆಟ್ಲುಪ್ಪು ೭ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಒಳ್ಳೆಣ್ಣೆ ೧ ಕಾಸಿಗೆ ಇವು ಮೂರನ್ನು ಚನ್ನಾಗಿ ಅರದು ೧೪ ಪೊಟ್ಣ ಕಟ್ಟಿ ಬೆಳಿಗ್ಯೆ ೧ ಪೊಟ್ಣ ಬಾಯಲ್ಲಿ ಹಾಕಿಕೊಂಡು ಮೇಲೆ ಎಳ್ಳುಕಷಾಯ ಕುಡಿಯಬೇಕು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹುಮೂತ್ರ ಗುಣವಾಗುವುದು.

೯. ಗೊರಮಿಡಿಬೀಜ ಕಾಲುತೊಲೆ, ಶುಂಠಿ ೧ ತೊಲೆ, ಬಿಳೇಉಪ್ಪೇಜೀರು ॥ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಒಂದು ಹೊತ್ತಿಗೆ ಹೆಣ್ಣುಕರು ಹಾಕಿರುವ ಎಮ್ಮೆಮೊಸರಿನಲ್ಲಿ ಗಂಡಸರಿಗೆ ಕೊಡುವುದು. ಗಂಡುಕರು ಹಾಕಿರುವ ಎಮ್ಮೆಮೊಸರಿನಲ್ಲಿ ಹೆಂಗಸರಿಗೆ ಕೊಡಬೇಕು. ಈರೀತಿ ಬೆಳಗ್ಯೆ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹುಮೂತ್ರ ಗುಣವಾಗುತ್ತೆ.

೧೦. ನೆಲತಾಟಿಗಡ್ಡೆ, ಖರ್ಜೂರ, ಬಾಳೇಹಣ್ಣು, ನೆಲಕುಂಬಳಗಡ್ಡೆ ಈ ನಾಲ್ಕು ಜಿನಸು ಪ್ರತಿಯೊಂದೂ ಅರ್ಧರ್ಧ ತೊಲೆ ತಂದು ಹಸುವಿನಹಾಲಿನಲ್ಲಿ

ಕಲಸಿ ತೆಗೆದುಕೊಳ್ಳಬೇಕು. ಈರೀತಿ ೭ ದಿವಸ ಬೆಳಿಗ್ಗೆ ಹೊತ್ತು ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹುಮೂತ್ರ ಗುಣವಾಗುವುದು.

೧೧. ೩ ತೊಲೆ ಕಲ್ಲುಹುವ್ವ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಕೊಳ್ಳುವುದು. ತಾಟಬೆಲ್ಲ ೩ ತೊಲೆ ಹಾಕಿ ಇವು ಎರಡು ಅರದು ಬೆಳಿಗ್ಗೆಹೊತ್ತು ೧ ಗಜ್ಜುಗದಷ್ಟು ಬಿಸಿನೀರಿನಲ್ಲಿ ಕೊಡುವುದು. ಈರೀತಿ ೩ ದಿನ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹುಮೂತ್ರ ಗುಣವಾಗುವುದು.

೧೨. ಶುದ್ಧಿಮಾಡಿದ ಪರಂಗಿಚಕ್ಕೆ ೫ ತೊಲೆ, ಲವಂಗ ॥ ತೊಲೆ, ಖರ್ಜೂರ ೨ ತೊಲೆ, ಅಳಲೇಕಾಯಿಸಿಪ್ಪೆ ॥ ತೊಲೆ, ತಾರೇಕಾಯಿಸಿಪ್ಪೆ ॥ ತೊಲೆ, ನೆಲ್ಲೀಕಾಯಿ ॥ ತೊಲೆ, ಮಜ್ಜಿಗೆಗಡ್ಡೆ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿ ಹೊತ್ತಿಗೆ ॥ ತೊಲೆ ಚೂರ್ಣ ಬಿಸಿನೀರಿನಲ್ಲಿ ತೆಗೆದುಕೊಳ್ಳುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹುಮೂತ್ರ ಗುಣವಾಗುವುದು.

೧೩. ತಂಗಡಿಸಮೂಲ, ಗೋಮೂತ್ರಶಿಲಾಜಿತು, ಮರದರಿಸಿನ ಇವು ಸಮ ಭಾಗ ತಂದು ತಂಗಡಿಸೊಪ್ಪಿನ ರಸದಲ್ಲಿ ರುಬ್ಬಿ ಆ ಮುದ್ದೆಯನ್ನು ಬಾಳೆಯ ಎಲೆಯಲ್ಲಿ ಸುತ್ತಿ ಕೆಮ್ಮಣ್ಣುಬಟ್ಟೆ ಶೀಲುಮಾಡಿ ಕುಕ್ಕುಟಪುಟವನ್ನು ಇಟ್ಟು ಒಳಗಿರುವ ಔಷಧವನ್ನು ಖಲ್ವದಲ್ಲಿ ಹಾಕಿ ಚನ್ನಾಗಿ ಅರೆದು ಹಸೀ ಅಡಿಕೆ ಕಾಯಿಗಾತ್ರ ಮಾತ್ರೆಮಾಡಿ ಹೊತ್ತಿಗೆ ೧ ಮಾತ್ರೆ ಜೇನುತುಪ್ಪದಲ್ಲಿ ತೆಗೆದು ಕೊಳ್ಳಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹುಮೂತ್ರ ಗುಣವಾಗುವುದು.

೧೪. ಅತ್ತೀಹಣ್ಣು ತಂದು ಬಿಸಲಿನಲ್ಲಿ ಒಣಗಿಸಿ ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಹೊತ್ತಿಗೆ ॥ ತೊಲೆ ಚೂರ್ಣ ಜೇನುತುಪ್ಪದಲ್ಲಿ ಕೊಡಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೭ ದಿನ ಕೊಡುವುದು ಇದಕ್ಕೆ ಪಥ್ಯ ಹಸುವಿನ ಹಾಲು ಅನ್ನ. ಇದರಿಂದ ಬಹುಮೂತ್ರ ಗುಣವಾಗುವುದು

೧೫ ದೊಡ್ಡಬೂರುಗದ ಮರದಬೇರು ತಂದು ಒರಳಲ್ಲಿ ಹಾಕಿ ಹಸುವಿನ ಮಜ್ಜಿಗೆ ಹಾಕಿ ಚನ್ನಾಗಿ ಕುಟ್ಟಿ ಒಟ್ಟೆಯಲ್ಲಿ ಶೋಧಿಸಿಕೊಂಡದ್ದು ಅರಪಾವು ಇದನ್ನು ಬೆಳಿಗ್ಗೆಹೊತ್ತು ೭ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ ಹಸುವಿನ ಮಜ್ಜಿಗೆ ಅನ್ನ. ಇದರಿಂದ ಬಹುಮೂತ್ರ, ಉರಿಮೂತ್ರ, ಮೂತ್ರಕೃಚ್ಛ್ರ ಗುಣವಾಗುವುದು

೧೬. ಬೇಲದಎಲೆ ಕುಟ್ಟಿದ ರಸ ೧ ಚಟಾಕು, ಅಡಿಕೆ ೧, ಬಿಳೇಜೀರಿಗೆ ಕಾಲುತೊಲೆ, ಸಕ್ಕರೆ ಕಾಲುತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ

ಮೇಲ್ಕಂಡ ರಸದಲ್ಲಿ ಕಲಸಿ ಬೆಳಿಗ್ಯೆಹೊತ್ತು ಕುಡಿಯುವುದು. ಈರೀತಿ ೭ ದಿನ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹುಮೂತ್ರ ಗುಣವಾಗುವುದು.

೧೭. ಹಣ್ಣುಯಕ್ಕದಯಲೆ, ಬೋಳತರಗದಯಲೆ, ಲಕ್ಕಲೀಸೊಪ್ಪು, ತಗ್ಗಿಸೊಪ್ಪು, ಅಳಲೇಕಾಯಿಸಿಪ್ಪೆ ಇವು ೫ ದಿನಸು ಸಮಭಾಗ ತಂದು ಸುಟ್ಟು ಬೂದಿಮಾಡಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಬೂದಿ ಮೇಕೆ ಹಾಲಿನಲ್ಲಿ ಕಲಸಿ ಕೊಡುವುದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹುಮೂತ್ರ ಗುಣವಾಗುವುದು.

೧೮. ತಾಳಕೇಶ್ವರ ರಸ :—ಪಾದರಸದ ಭಸ್ಮ, ವಂಗಭಸ್ಮ, ಲೋಹಭಸ್ಮ, ಅಭ್ರಕಶಿಂಧೂರ ಇವು ಸಮಭಾಗ ಖಲ್ವದಲ್ಲಿ ಹಾಕಿ ಜೇನುತುಪ್ಪದಲ್ಲಿ ಮರ್ಧಿಸಿ ಗುರುಗಂಜಿ ಪ್ರಮಾಣ ಮಾತ್ರೆಮಾಡುವುದು. ಹೊತ್ತಿಗೆ ೧ ಮಾತ್ರೆ, ಅತ್ತಿ ಹಣ್ಣಿನ ಚೂರ್ಣ ಕಾಲುತೊಲೆ ಇವು ಎರಡನ್ನೂ ಜೇನುತುಪ್ಪದಲ್ಲಿ ಕಲಸಿ ತೆಗೆದು ಕೊಳ್ಳಬೇಕು. ಈರೀತಿ ಬೆಳಿಗ್ಯೆಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹುಮೂತ್ರ ಗುಣವಾಗುವುದು.

೧೯. ತಂಗಡಿಬೇರಿನಚಕ್ಕೆ ನಿಂಬೇಕಾಯಿನಷ್ಟು ಚನ್ನಾಗಿ ಕುಟ್ಟಿ ಹಸುವಿನ ಮೊಸರಿನಲ್ಲಿ ಕಲಸಿ ಬೆಳಿಗ್ಯೆಹೊತ್ತು ತೆಗೆದುಕೊಳ್ಳಬೇಕು. ಈರೀತಿ ೩ ದಿವಸ ಕೊಡುವುದು. ಆನೇನೆಗ್ಗಿಲು ಸಮೂಲ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಬೆಳಿಗ್ಯೆಹೊತ್ತು ಕುಡಿಯುವುದು. ಈರೀತಿ ೩ ದಿವಸ ಬೆಳಿಗ್ಯೆಹೊತ್ತು ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ರಕ್ತಮೂತ್ರ ಗುಣವಾಗುವುದು.

೨೦. ಮರದರಿಸಿನ ೪ ತೊಲೆ, ಲವಂಗ ೧ ತೊಲೆ, ಖರ್ಜೂರ ೪ ತೊಲೆ, ಬೇಲದಬಂಕೆ ೧ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ತಂಗಡಿಹುವ್ವಿನ ರಸದಲ್ಲಿ ಅರದು ಬಿಲ್ಲೆಮಾಡಿ ಒಣಗಿಸಿ ಕುಟ್ಟಿ ಚೂರ್ಣಮಾಡಿ ಹೊತ್ತಿಗೆ ॥ ತೊಲೆ ಚೂರ್ಣ ಬಿಸಿನೀರಿನಲ್ಲಿ ಕೊಡುವುದು. ಹೀಗೆ ಬೆಳಿಗ್ಯೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹುಮೂತ್ರ ಗುಣವಾಗುವುದು.

೨೧. ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿ ಗಂಧಕ ೧ ತೊಲೆ, ವಂಗಭಸ್ಮ ೨ ತೊಲೆ, ಸಕ್ಕರೆ ೨ ತೊಲೆ, ಜೇನುತುಪ್ಪ ೨ ತೊಲೆ, ಇವುಗಳನ್ನು ಖಲ್ವದಲ್ಲಿ ಹಾಕಿ ಚನ್ನಾಗಿ ಅರೆದು ಹೊತ್ತಿಗೆ ೨ ಗುರು ಗಂಜಿಯಷ್ಟು ಅಮೃತಬಳ್ಳಿ ಕಷಾಯದಲ್ಲಿ ಕೊಡುವುದು. ಹೀಗೆ ಬೆಳಿಗ್ಗೆಹೊತ್ತು

೭ ದಿನ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹು ಮೂತ್ರ ಗುಣವಾಗುವುದು.

೨೨. ಕಿಡಗರಸಿಯಲೆ ಸಮೂಲ ತಂದು ಒಣಗಿಸಿ ವಸ್ತ್ರಗಳಿತಮಾಡಿ ಕೊಳ್ಳುವುದು. ೩ ಹಣತೂಕ ಚೂರ್ಣ ರಾಯಿಪುಡಿ ಸಕ್ಕರೆಯಲ್ಲಿ ಕಲಸಿ ಬಾಯಿಯಲ್ಲಿ ಹಾಕಿಕೊಂಡು ತಣ್ಣೀರು ಕುಡಿಯುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹುಮೂತ್ರ ಗುಣವಾಗುವುದು.

೨೩. ಒಂದು ಮಡಿಕೆಯಲ್ಲಿ ಒಂದು ಹಿಡಿ ಅಕ್ಕಿಹಾಕಿ ನೀರುಹಾಕಿ ಒಲೆಯ ಮೇಲಿಟ್ಟು ಕಾಯಿಸಿ ಒಂದು ಕುದಿ ಬಂದಕೂಡಲೇ ಚಿಟ್ಟೆರಳುಪೊಪ್ಪು ೨ ತೊಲೆ ನುಣ್ಣಗೆ ಅರೆದು ಮಡಿಕೆಯಲ್ಲಿ ಹಾಕಿ ಕಲಸಿ ಗಿಣ್ಣುಮಾಡಿದಂತೆ ಮಾಡಿ ಇಳಿಸಿ ಕೊಳ್ಳುವುದು. ಹೊತ್ತಿಗೆ ಗಜ್ಜುಗದಷ್ಟು ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೫ ದಿವಸ ಕೊಡಬೇಕು. ಇದಕ್ಕೆ ಪಥ್ಯ ಹಸುವಿನ ಹಾಲು ಅನ್ನ. ಇದರಿಂದ ಬಹುಮೂತ್ರ, ದಾಹ ಗುಣವಾಗುವುದು.

೨೪. ಗೊರಮಿಡಿಬೀಜ ಕಾಲುತೊಲೆ, ಶುಂಠಿ ಕಾಲುತೊಲೆ ಇವು ಎರಡು ಕುಟ್ಟಿ ಚೂರ್ಣಮಾಡಿ, ಗರಿಕೆಬೇರು ಕಾಲುತೊಲೆ ಚನ್ನಾಗಿ ಕುಟ್ಟಿ ಇವು ಮೂರೂ ಶೇರಿಸಿ ಗಂಡಸರಿಗೆ ಗಂಡುಕರುಹಾಕಿದ ಎಮ್ಮೆಯ ಮೊಸರಿನಲ್ಲಿ ಅರೆದು ಕುಡಿಸುವುದು. ಹೆಂಗಸರಿಗೆ ಹೆಣ್ಣುಕರುಹಾಕಿದ ಎಮ್ಮೆಯ ಮೊಸರಿನಲ್ಲಿ ಅರೆದು ಕುಡಿಸುವುದು. ಹೀಗೆ ಬೆಳಿಗ್ಗೆಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ಎಮ್ಮೆಯ ಮೊಸರು ಅನ್ನ. ಇದರಿಂದ ಬಹುಮೂತ್ರ ಗುಣವಾಗುವುದು.

೨೫. ಕತಕಾದಿ ರಸಾಯನ:—ಚಿಲ್ಲದಬೀಜ ೩ ತೊಲೆ ತಂದು ಕುಟ್ಟಿ ಯಳನೀರಿನಲ್ಲಿ ನೆನೆಹಾಕಿ ಮರುದಿನ ತೆಗೆದು ಹಸುವಿನಹಾಲಿನಲ್ಲಿ ರುಬ್ಬಿ ಇಟ್ಟು ಕೊಳ್ಳುವುದು. ಯಾಲಕ್ಕಿ ೧ ತೊಲೆ, ಅತಿಮಧುರ ೧ ತೊಲೆ, ತಂಗಡಿಬೀಜ ೧ ತೊಲೆ, ಸೊಗದೇಬೇರು ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇಟ್ಟುಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ೧೪ ತೊಲೆ ಸಕ್ಕರೆಹಾಕಿ ಒಲೆಯಮೇಲೆ ಇಟ್ಟು ಉರಿಹಾಕಿ ಕಾಯಿಸಿ ತಂತುಪಾಕ ಬಂದಕೂಡಲೇ ಚಿಲ್ಲದ ಬೀಜ ಅರದದ್ದನ್ನು ಹಾಕಿ ಚೂರ್ಣಹಾಕಿ ಪಕ್ವವಾಗಿ ಲೇಹ್ಯಮಾಡಿ ಹೊತ್ತಿಗೆ ಯಳಚೇಬೀಜದಷ್ಟು ಕೊಡುವುದು ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹುಮೂತ್ರ, ಚುರುಕು ಗುಣವಾಗುವುದು.

೨೬. ತಂಗಡಿಬೀಜ ತಂದು ಅತ್ತಿಹಾಲಿನಲ್ಲಿ ೩ ದಿನ ನೆನೆಯಿಸಿ ಖಲ್ವದಲ್ಲಿ ಹಾಕಿ ಅತ್ತಿಹಾಲಿನಲ್ಲಿ ಚನ್ನಾಗಿ ಅರೆದು ಯಳಚೇಬೀಜದಷ್ಟು ಮಾತ್ರೆಮಾಡಿ

ಅಕ್ಕಿತೊಳೆದ ನೀರಿನಲ್ಲಿ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹುಮೂತ್ರ ಗುಣವಾಗುವುದು.

೨೭. ಖುರಾಸಾನಿಪೋಮು ೧ ತೊಲೆ, ತುಂಗೇಗಡ್ಡೆ ೧ ತೊಲೆ, ನೆಲತಾಟಿ ಗಡ್ಡೆ ೨ ತೊಲೆ, ನಾಗಕೇಸರಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇದಕ್ಕೆ ವಂಗಭಸ್ಮ ‖ ತೊಲೆ ಹಾಕಿ ಕಲಸಿ ಖಲ್ವದಲ್ಲಿ ಹಾಕಿ ಹಿರೇ ಮದ್ದಿನಗಡ್ಡೆ ರಸದಲ್ಲಿ ಅರೆದು ಗುರುಗಂಜಿ ಪ್ರಮಾಣ ಮಾತ್ರೆಮಾಡುವುದು ಹೊತ್ತಿಗೆ ೧ ಮಾತ್ರೆ ಹಸುವಿನತುಪ್ಪದಲ್ಲಿ ಕಲಸಿ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪಥ್ಯ ಹಸುವಿನ ಹಾಲು ಅನ್ನ. ಇದರಿಂದ ಬಹುಮೂತ್ರ, ಮೂತ್ರಕೃಚ್ಛ್ರ, ಉರಿಮೂತ್ರ, ಮೇಹ ಗುಣವಾಗುವುದು.

೨೮. ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀ ಕಾಯಿ ೧ ತೊಲೆ, ಅಮೃತಬಳ್ಳಿ ೩ ತೊಲೆ, ತುಪ್ಪದದೇವದಾರು ೨ ತೊಲೆ, ಅರಸಿನ ೧ ತೊಲೆ, ಮರದರಿಸಿನ ೩ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಅಭ್ರಕಭಸ್ಮ ೧ ತೊಲೆ ಹಾಕಿ ಕಲಸಿ ಇಟ್ಟುಕೊಳ್ಳುವುದು. ಹೊತ್ತಿಗೆ ೨ ಆಣೆ ತೂಕ ಚೂರ್ಣ ಹಸುವಿನತುಪ್ಪದಲ್ಲಿ ಕಲಸಿ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹುಮೂತ್ರ ಗುಣವಾಗುವುದು.

೨೯. ನೆಲತಾಟಿಗಡ್ಡೆ ೧ ತೊಲೆ, ನೆಲಕುಂಬಳಗಡ್ಡೆ ೧ ತೊಲೆ, ಖರ್ಜೂರ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಹಸುವಿನಹಾಲಿನಲ್ಲಿ ಕಲಸಿ ಕೊಡುವುದು. ಹೀಗೆ ಬೆಳಿಗ್ಗೆ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹುಮೂತ್ರ ಗುಣವಾಗುವುದು.

೩೦. ತಂಗಡಿಯಲೆ ಚಿಗುರು, ತಂಗಡಿಹುವ್ವಿನ ಮೊಗ್ಗು ಇವು ಎರಡು ಹಸುವಿನಹಾಲಿನಲ್ಲಿ ಅರೆದು ಉಂಡೆಮಾಡಿ ಬಾಳೆಎಲೆಯಲ್ಲಿ ಇಟ್ಟು ಕೆಮ್ಮಣ್ಣು ಬಟ್ಟೆ ಸೀಲುಮಾಡಿ ಕುಕ್ಕುಟಪುಟಹಾಕಿ ಖಲ್ವದಲ್ಲ ಹಾಕಿ ಅರೆದು ಗಜ್ಜುಗದಷ್ಟು ಮಾತ್ರೆಮಾಡಿ ಹೊತ್ತಿಗೆ ೧ ಮಾತ್ರೆ ಒಳ್ಳೆಣ್ಣೆಯಲ್ಲಿ ಕಲಸಿ ತೆಗೆದುಕೊಳ್ಳುವುದು. ಗಂಡುಕರುಹಾಕಿದ ಎಮ್ಮೆಮೊಸರಿನಲ್ಲಿ ಕಲಸಿ ಕೊಡಬಹುದು. ಹೀಗೆ ಬೆಳಿಗ್ಗೆ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹುಮೂತ್ರ ಗುಣವಾಗುವುದು.

೩೧. ಅಮೃತಬಳ್ಳಿಸತ್ತು ೨ ತೊಲೆ, ಮಜ್ಜಿಗೆಗಡ್ಡೆ ೧ ತೊಲೆ, ನೆಲತಾಟಿ ಗಡ್ಡೆ ೧ ತೊಲೆ ಇವು ಕುಟ್ಟಿ ಚೂರ್ಣಮಾಡಿ ಶೋಧಿಸಿ ಸಕ್ಕರೆ ‖ ತೊಲೆ

ಹಾಕಿ ಎಲ್ಲವನ್ನೂ ಕಲಸಿ ಹೊತ್ತಿಗೆ ‖ ತೊಲೆ ಚೂರ್ಣ ಜೇನುತುಪ್ಪದಲ್ಲಿ ಕಲಸಿ ತೆಗೆದುಕೊಳ್ಳಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹುಮೂತ್ರ ಗುಣವಾಗುವುದು.

೩೨. ನೆಲತಂಗಡಿಸಮೂಲ ೩ ತೊಲೆ, ಶೀತೊಂಡೆಸಮೂಲ ೩ ತೊಲೆ, ಶುದ್ಧಿಮಾಡಿದ ಹಿರೇಮದ್ದಿನಗಡ್ಡೆ ೩ ತೊಲೆ ದುಸ್ಸಾರೆಸೊಪ್ಪಿನಸಮೂಲ ೩ ತೊಲೆ, ಕಲ್ಲುನಾರು ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಅತ್ತಿಬೇರು ಕಡಿದು ಹಾಲುತಂದು ಅದರಲ್ಲಿ ಮೇಲ್ಕಂಡ ಚೂರ್ಣ ಹಾಕಿ ಕಲಸಿ ಬಿಸಲಿನಲ್ಲಿ ಒಣಗಿಸಿ ಕುಟ್ಟಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ‖ ತೊಲೆ ಚೂರ್ಣ ಹಸುವಿನಹಾಲಿನಲ್ಲಿ ಕಲಸಿ ಕುಡಿಯುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹುಮೂತ್ರ ಗುಣವಾಗುವುದು.

೩೩. ತಂಗಡಿಸಮೂಲ ತಂದು ಕುಟ್ಟಿ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡದ್ದು ೨ ಶೇರು, ಮೆಣಸು ೧ ಪಾವು, ಬಿಳೇಜೀರಿಗೆ ೧ ಪಾವು, ಲವಂಗ ೧ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ತಾಳೀಸಪತ್ರೆ ೧ ತೊಲೆ, ಯಾಲಕ್ಕಿ ೧ ತೊಲೆ, ಕಲ್ಲುನಾರು ೧ ತೊಲೆ, ಹಿಪ್ಪಲಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡದ್ದು ೧ ಶೇರು, ಈ ಎರಡು ಕಷಾಯ ಒಂದು ಬಾಂಡ್ಲಿಯಲ್ಲಿ ಹಾಕಿ ಒಳ್ಳೆಣ್ಣೆ ೧ ಶೇರು, ಹೊಟ್ಟುಸುಲಿದ ಬೆಳ್ಳುಳ್ಳಿ ೧ ಪಾವು ಖಲ್ವದಲ್ಲಿ ಅರೆದು ಬಾಂಡ್ಲಿಯಲ್ಲಿ ಹಾಕುವುದು. ಕುಂಕುಮಕೇಸರಿ ‖ ತೊಲೆ ಖಲ್ವದಲ್ಲಿ ಹಾಕಿ ನೀರುಹಾಕಿ ಅರದು ಬಾಂಡ್ಲಿಯಲ್ಲಿ ಹಾಕುವುದು. ಕಲ್ಲುಸಕ್ಕರೆ ೨ ತೊಲೆ ಇವುಗಳನ್ನು ಒಲೆಯಲ್ಲಿಟ್ಟು ಉರಿಹಾಕಿ ಪಕ್ವವಾಗಿ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಹೊತ್ತಿಗೆ ಬಿಸಿನೀರಿನಲ್ಲಿ ೧ ತೊಲೆ ಕೊಡುವುದು. ಹೀಗೆ ಬೆಳಿಗ್ಗೆಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ಹಸುವಿನ ಹಾಲು ಅನ್ನ. ಇದರಿಂದ ಬಹುಮೂತ್ರ, ಮಧುಮೇಹ, ವಿಂಶತಿಮೇಹ ಗುಣವಾಗುವುದು.

೩೪. ಲವಂಗ ೧ ಪಾವು, ಹುಣಿಸೇಬೀಜದಪೊಪ್ಪು ೧ ಪಾವು ಇವುಗಳನ್ನು ಕುಟ್ಟಿ ಚೂರ್ಣಮಾಡಿ ಹಳೇತೆಂಗಿನಕಾಯಿಗೆ ತುಂಬಿ ಕೆಮ್ಮಣ್ಣುಬಟ್ಟೆ ಸೀಲುಮಾಡಿ ೧ ಮೊಳ ಪುಟಹಾಕಿ ತೆಗೆದು ಮೇಲಿನ ಚಿಪ್ಪು ಕೆರದು ಹಾಕಿ ಒರಳಲ್ಲಿ ಹಾಕಿ ಜೇನುತುಪ್ಪ ೧ ಪಾವು ಹಾಕಿ ರುಬ್ಬಿ ಲೇಹ್ಯದಹಾಗೆ ಮಾಡಿ ಇಟ್ಟುಕೊಳ್ಳುವುದು. ಹೊತ್ತಿಗೆ ೧ ಅವರೇಕಾಳು ಪ್ರಮಾಣ ಬೆಳಿಗ್ಗೆ ಸಾಯಂಕಾಲ ೨ ಹೊತ್ತು

೭ ದಿನ ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹುಮೂತ್ರ ಗುಣವಾಗುವುದು.

೩೫. ಪ್ರಮೇಹ ಗಜಕೇಸರಿ:—ಬೆಳ್ಳಿಭಸ್ಮ ೧ ತೊಲೆ, ಪಾದರಸಭಸ್ಮ ೧ ತೊಲೆ, ವಂಗಭಸ್ಮ ೨|| ತೊಲೆ, ಶೀಸಭಸ್ಮ ೨|| ತೊಲೆ, ಸೂರ್ತಿಬಿಳಗಾರ ಅರಳುಮಾಡಿದ್ದು ೨|| ತೊಲೆ, ಶುದ್ಧಿಮಾಡಿದ ನಾಭಿ || ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಲ್ಲಿ ಅರೆದು ಒಣಗಿಸಿ ಚೂರ್ಣಮಾಡಿ ಶೀಸೆಯಲ್ಲಿ ಇಟ್ಟುಕೊಳ್ಳುವುದು. ಹೊತ್ತಿಗೆ ೧ ಗುರುಗಂಜಿ ಪ್ರಮಾಣ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಈ ಕೆಳಗೆ ಬರೆದ ಅನುಪಾನಗಳಲ್ಲಿ ಕೊಡುವುದು. ಹಸುವಿನತುಪ್ಪ, ಹಸುವಿನಬೆಣ್ಣೆ, ಅಮೃತಬಳ್ಳಿ ರಸ, ಖರ್ಜೂರದ ಕಷಾಯ, ತಂಗಡಿ ಕಷಾಯ, ನೆಲತಾಟಿಗಡ್ಡೆ ಕಷಾಯ, ನೆಗ್ಗಿಲ ರಸ, ಬಿಳೇ ಹಿಂಡಿಸೊಪ್ಪಿನ ರಸ ಇವುಗಳಲ್ಲಿ ಯಾವುದರಲ್ಲಾದರೂ ಕೊಡುವುದು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಬಹುಮೂತ್ರ, ಪ್ರಮೇಹ, ವಿಂಶತಿ ಮೇಹ, ಮೂತ್ರಕೃಚ್ಛ್ರ ಇವು ಗುಣವಾಗುವುವು.

೩೬. ಜಾಕಾಯಿ, ಯಾಲಕ್ಕಿ, ನಾಗಕೇಸರಿ, ಶುದ್ಧಿಮಾಡಿದ ಪರಂಗಿ ಚಕ್ಕೆ, ಬೂರುಗದಬಂಕೆ, ದ್ರಾಕ್ಷಿ, ಖರ್ಜೂರ ಇವು ಜಿನಸು ೧ ಕ್ಕೆ ಕಾಲುತೊಲೆ ತಂದು ಚೂರ್ಣಮಾಡಿ ಇಟ್ಟುಕೊಳ್ಳುವುದು. ತಂಗಡಿಪಂಚಾಂಗ ೨|| ತೊಲೆ ಇದನ್ನು ಒಂದು ಮಡಿಕೆಯಲ್ಲಿ ಹಾಕಿ ೨ ಪಡಿ ಮಜ್ಜಿಗೆ, ೨ ಪಡಿ ನೀರುಹಾಕಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಮೇಲ್ಕಂಡ ಚೂರ್ಣ ಖಲ್ವಕ್ಕೆ ಹಾಕಿ ಈ ಕಷಾಯದಲ್ಲಿ ಅರೆದು ಗಜ್ಜುಗದಗಾತ್ರ ಮಾತ್ರೆ ಮಾಡುವುದು. ಹೊತ್ತಿಗೆ ೧ ಮಾತ್ರೆ ಹಸುವಿನತುಪ್ಪದಲ್ಲಿ ಕಲಸಿ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂ ಸಾಯಂಕಾಲ ೨ ಹೊತ್ತು ೭ ದಿನ ಕೊಡುವುದು. ಇದಕ್ಕೆ ಪಥ್ಯ ಹಸುವಿನ ಹಾಲು ಅನ್ನ. ಇದರಿಂದ ಬಹುಮೂತ್ರ ಗುಣವಾಗುವುದು.

---

# ಮುವ್ವತ್ತನಾಲ್ಕನೆಯ ಅಧ್ಯಾಯ.

## ಪ್ರಮೇಹರೋಗ— ಔಷಧಗಳು.

### ಪ್ರಮೇಹ ಲಕ್ಷಣ.

ದೋಷಯುಕ್ತವಾದ ಕಫದಿಂದ ಮೇದಸ್ಸು, ಮಾಂಸ, ಶುಕ್ಲ ಇವು ದುಷ್ಟಗಳಾಗಿ ಇಕ್ಷು, ಸುರಾ, ಪಿಷ್ಟ, ಸಾಂದ್ರ, ಶುಕ್ರ, ಉದಕ, ಲಾಲಾ, ಶೀತ, ಸಿಕತಾ, ಶನೈಃ ಎಂಬ ಹತ್ತು ಮೇಹಗಳು ಉತ್ಪತ್ತಿಯಾಗುವುವು.

ದೋಷಯುಕ್ತವಾದ ಪಿತ್ಥದಿಂದ ಮೇದಸ್ಸು ಮೊದಲಾದವುಗಳು ಕೆಟ್ಟು ಮಂಜಿಷ್ಠಾ, ಹಾರಿದ್ರಾ, ನೀಲ, ರಕ್ತ, ಕೃಷ್ಣ, ಕ್ಷಾರಗಳೆಂಬ ಆರುವಿಧವಾದ ಮೇಹರೋಗಗಳು ಉತ್ಪತ್ತಿಯಾಗುವುವು.

ದೋಷಯುಕ್ತವಾದ ವಾತದಿಂದ ಮೇದಸ್ಸು ಮೊದಲಾದವುಗಳು ದುಷ್ಟಗಳಾಗಿ ಹಸ್ತಿ, ವಸಾ, ಮಜ್ಜಾ, ಮಧುಗಳೆಂಬ ನಾಲ್ಕುವಿಧವಾದ ಮೇಹರೋಗಗಳು ಉತ್ಪತ್ತಿಯಾಗುವುವು

ಇಕ್ಷುಮೇಹದಲ್ಲಿ:—ಕಬ್ಬಿನ ರಸದಂತೆ ಅಧಿಕ ಮಧುರವಾದ ಮೂತ್ರವು ಹೊರಡುವುದು.

ಸುರಾಮೇಹದಲ್ಲಿ:—ಹೆಂಡದಂತೆ ಮೇಲೆ ತಿಳಿಯಾಗಿಯೂ ಅಧೋಭಾಗದಲ್ಲಿ ಮಂದವಾಗಿಯೂ ಇರುವ ಮೂತ್ರವು ಹೊರಡುವುದು.

ಪಿಷ್ಟಮೇಹದಲ್ಲಿ:—ಹಿಟ್ಟು ಬೆರೆದಂತೆ ಬೆಳ್ಳಗಿರುವ ಮೂತ್ರವು ಹೊರಡುವುದು.

ಸಾಂದ್ರಮೇಹದಲ್ಲಿ:—ಮೂತ್ರವನ್ನು ಬಿಟ್ಟಮೇಲೆ ಸ್ವಲ್ಪ ಕಾಲಕ್ಕೆ ಮೂತ್ರವು ಗಟ್ಟಿಯಾಗುವುದು.

ಶುಕ್ರಮೇಹದಲ್ಲಿ:—ಶುಕ್ರದಂತಹ ಮೂತ್ರವಾದರೂ ಶುಕ್ರದಿಂದ ಬೆರೆತ ಮೂತ್ರವಾದರೂ ಸ್ರವಿಸುವುದು.

ಉದಕಮೇಹದಲ್ಲಿ:—ಸ್ವಚ್ಛವಾಗಿಯೂ, ಅತ್ಯಧಿಕವಾಗಿಯೂ, ಬಿಳುಪು ವರ್ಣವುಳ್ಳದ್ದಾಗಿಯೂ, ತಣ್ಣಗಿರುವುದಾಗಿಯೂ, ಗಂಧರಹಿತವಾಗಿಯೂ, ಸ್ವಲ್ಪ ಕದಡಿಕೊಂಡು ಪಿಚ್ಛಿಲವಾದ ಮೂತ್ರವು ಸ್ರವಿಸುವುದು.

ಲಾಲಾಮೇಹದಲ್ಲಿ:—ಜೊಲ್ಲು ನೊರೆಯಂತೆ ಜಿಗಟಾಗಿ ಮೂತ್ರವು ಹೊರಡುವುದು.

ಶೀತಮೇಹದಲ್ಲಿ:—ಅಧಿಕ ಶೀತಲವೂ, ಮಧುರವೂ, ಆದ ಮೂತ್ರವು ಹೊರಡುವುದು.

ಶಿಕತಾ ಮೇಹದಲ್ಲಿ:—ಮರಳಿನಂತೆ ಸಣ್ಣದಾಗಿ ಕಠಿಣವಾಗಿರುವ ಕಫದ ಖಂಡಗಳಿಂದ ಕೂಡಿದ ಮೂತ್ರವು ಹೊರಡುವುದು.

ಶನೈರ್ಮೇಹದಲ್ಲಿ:—ಮಂದಗತಿಯಿಂದ ಸ್ವಲ್ಪ ಸ್ವಲ್ಪವಾಗಿ ಮೂತ್ರ ಹೊರಡುವುದು.

ಮಂಜಿಷ್ಠಾಮೇಹದಲ್ಲಿ:—ಮಂಜಿಷ್ಠೆಯ ಕಷಾಯದಂತಹ ವರ್ಣವುಂಟಾಗಿ ದುರ್ಗಂಧದಿಂದ ಕೂಡಿದ ಮೂತ್ರವು ಸ್ರವಿಸುತ್ತಿರುವುದು.

ಹಾರಿದ್ರಮೇಹದಲ್ಲಿ:—ಕಾರವಾಗಿ ಹಳದಿ ಬಣ್ಣವುಳ್ಳ ಮೂತ್ರವು ಸ್ರವಿಸುವುದು.

ನೀಲ ಮೇಹದಲ್ಲಿ:—ಕಪ್ಪುಬಣ್ಣವುಳ್ಳ ಮೂತ್ರವು ಸ್ರವಿಸುವುದು.

ರಕ್ತ ಮೇಹದಲ್ಲಿ:—ದುರ್ಗಂಧವಾಗಿಯೂ, ಉಷ್ಣವಾಗಿಯೂ, ಉಪ್ಪಾಗಿದ್ದು ರಕ್ತಕ್ಕೆ ಸಮಾನವಾದ ಬಣ್ಣವುಳ್ಳ ಮೂತ್ರವು ಸ್ರವಿಸುತ್ತಿರುವುದು.

ಕೃಷ್ಣಮೇಹದಲ್ಲಿ:—ಇದ್ದಲಿನಂತೆ ಕಪ್ಪಾದ ಮೂತ್ರವು ಸ್ರವಿಸುತ್ತಿರುವುದು.

ಕ್ಷಾರ ಮೇಹದಲ್ಲಿ:—ಗಂಧವು, ವರ್ಣವು, ರಸವು, ಸ್ಪರ್ಶವು, ಈ ನಾಲ್ಕರ ಕ್ಷಾರೋದಕಕ್ಕೆ ಸಮವಾದ ಮೂತ್ರವು ಹೊರಡುವುದು.

ಹಸ್ತಿಮೇಹದಲ್ಲಿ:—ಮೂತ್ರವು ವೇಗವಿಲ್ಲದೆ ಮಾಂಸಕ್ಕೂ ಚರ್ಮಕ್ಕೂ ಮಧ್ಯಭಾಗದಲ್ಲಿರುವ ನೀರಿನಂತೆ ಆಗಾಗ್ಗೆ ನಿಂತು ಮದಿಸಿದ ಆನೆಯಿಂದ ಸ್ರವಿಸುವರೀತಿಯಾಗಿ ಸ್ರವಿಸುವುದು.

ವಸಾಮೇಹದಲ್ಲಿ:—ವಸೆಯಿಂದ ಕೂಡಿಯಾಗಲಿ, ವಸೆಗೆಸಮಾನವಾದ ಬಣ್ಣವುಳ್ಳದ್ದಾಗಿಯಾಗಲಿ ಮೂತ್ರವು ಹೊರಡುತ್ತಿರುವುದು.

ಮಜ್ಜಾಮೇಹದಲ್ಲಿ:—ಮಜ್ಜೆಯಿಂದ ಕೂಡಿಯಾಗಲಿ, ಮಜ್ಜೆಗೆ ಸಮಾನವಾದ ಬಣ್ಣವುಳ್ಳದ್ದಾಗಿಯಾಗಲಿ ಆಗಾಗ್ಗೆ ಮೂತ್ರವು ಹೊರಡುತ್ತಿರುವುದು.

ಮಧುಮೇಹದಲ್ಲಿ:—ಕಷಾಯವೂ, ಮಧುರವೂ, ರೂಕ್ಷವೂ ಆದ ಮೂತ್ರವು ವಿಶೇಷವಾಗಿ ಸ್ರವಿಸುತ್ತಿರುವುದು.

## ಪ್ರಮೇಹರೋಗದಲ್ಲಿ ಅಸಾಧ್ಯ ಲಕ್ಷಣ.

೧. ಕಂಠ, ಹೃದಯ ಇವುಗಳು ಕಟ್ಟಿಕೊಳ್ಳುವಿಕೆ, ಸಕಲ ಪದಾರ್ಥದ ಮೇಲೆಯೂ ಅಪೇಕ್ಷೆ, ಶೂಲೆ, ನಿದ್ರಾಭಂಗ, ಶೋಷೆ, ಕೆಮ್ಮು, ಶ್ವಾಸ, ಕಡ್ಡಿಯಹಾಗೆ ಮೂತ್ರಸ್ರಾವ ಇವುಗಳುಳ್ಳ ವಾತಮೇಹವು ಅಸಾಧ್ಯವು.

೨. ಪಿತ್ಥ ಪ್ರಮೇಹವು ಗರ್ಭದಿಂದ ಹುಟ್ಟಿದ್ದರೆ ಅಸಾಧ್ಯವು.

೩. ಶ್ಲೇಷ್ಮಪ್ರಮೇಹದಲ್ಲಿ ಮೈಮೇಲೆ ಗುಳ್ಳೆಗಳು ಎದ್ದು ಮರ್ಮಸ್ಥಳಗಳಲ್ಲಿ ವಾಯುಹಿಡಿದು ಅಂಡ, ಸ್ತನ, ಭುಜ, ಗುದದ್ವಾರ, ತಲೆ, ಕಣ್ಣು, ಕೈಕಾಲು ಇವುಗಳಲ್ಲಿ ಗುಳ್ಳೆಗಳು ಏಳುವುದು, ಸ್ಥಿರವಾಗಿದ್ದ ಸಂತೋಷವು ನಷ್ಟವಾಗುವಿಕೆ, ದಾಹ, ಜ್ವರ, ಮತ್ತಿನಹಾಗೆ ಮಲಗಿರುವುದು ಇಂಥಾ ಪ್ರಮೇಹವು ಅಸಾಧ್ಯವು.

೪. ನೀರಡಿಕೆ, ಮೈಯುರಿ, ಗುಳ್ಳೆಗಳು, ವ್ರಣಗಳು, ಮಾಂಸಕರಗುವುದು, ಅತಿಸಾರ ಇವುಗಳುಳ್ಳ ಮೇಹವು ಅಸಾಧ್ಯವು.

## ಪ್ರಮೇಹ ಪಿಟಿಕಾ ಲಕ್ಷಣ.

ಹಿಂದೆ ಹೇಳಲ್ಪಟ್ಟ ಪ್ರಮೇಹಗಳನ್ನು ಶೀಘ್ರವಾಗಿ ಚಿಕಿತ್ಸೆಮಾಡದೆ ಉಪೇಕ್ಷಿಸಿದ್ದಾದರೆ ಪಿಟಕೆಗಳು ಹುಟ್ಟುವುವು.

ಇದರಲ್ಲಿ ಸುತ್ತಲೂ ಉನ್ನತವಾಗಿ ಮಧ್ಯಭಾಗದಲ್ಲಿ ಹಳ್ಳವಾಗಿದ್ದು ಮುಚ್ಚಳದಂತೆ ಇರುವುದಕ್ಕೆ ಶರಾವಿಕೆಯೆಂತಲೂ, ಆಮೆಯ ಬೆನ್ನಿನಂತಿರುವುದಕ್ಕೆ ಕಚ್ಛಪಿಕವೆಂತಲೂ, ಸಣ್ಣಬೊಬ್ಬೆ (ಗುಳ್ಳೆ-ಮರಿ) ಗಳಿಂದೊಡಗೂಡಿರುವುದಕ್ಕೆ ಪುತ್ರಿಣಿಯೆಂತಲೂ, ಬೆನ್ನಿನಲ್ಲಾದರೂ ಉದರದಲ್ಲಾದರೂ ಬಹಳ ಥಳುಕುಗಳುಂಟಾಗಿ ಆರ್ದ್ರವಾಗಿಯೂ, ನೀಲವರ್ಣವಾಗಿರುವುದಕ್ಕೆ ವಿನತವೆಂತಲೂ, ರಕ್ತವರ್ಣವೂ ಶ್ವೇತವರ್ಣವೂ ಉಂಟಾಗಿ ಬೊಬ್ಬೆಗಳಿಂದ ಕೂಡಿ ಬಹುಕ್ರೂರವಾದುದಕ್ಕೆ ಆಲಜಿಯೆಂತಲೂ, ಕಿರುಗಡಲೆಯಾಕಾರದಲ್ಲಿರುವುದಕ್ಕೆ ಮಸೂರಿಕೆಯೆಂತಲೂ, ಕೆಂಪಗೆ ಸಾಸುವೆಯಾಕಾರವಿರುವುದಕ್ಕೆ ಸರ್ಷಪಿಕವೆಂತಲೂ, ಅಧಿಕವಾದ ಉರಿಯುಂಟಾಗಿ ದುರ್ಮಾಂಸದಿಂದಾವೃತವಾಗಿರುವುದಕ್ಕೆ ಜಾಲಿನಿಯೆಂತಲೂ, ನೆಲಕುಂಬಳಗಡ್ಡೆಯಂತಿರುವುದಕ್ಕೆ ವಿದಾರಿಕೆಯೆಂತಲೂ, ವಿದ್ರಧಿಯ ಲಕ್ಷಣಗಳಿರುವುದಕ್ಕೆ ವಿದ್ರಧಿ (ಬಾವು) ಯೆಂತಲೂ ಹೇಳಲ್ಪಡುವುದು.

## ಪ್ರಮೇಹ ಪಿಟಿಕಾರೋಗದಲ್ಲಿ ಅಸಾಧ್ಯ ಲಕ್ಷಣ.

ಗುದಸ್ಥಾನದಲ್ಲಿ, ಹೃದಯದಲ್ಲಿ, ಮರ್ಮಸ್ಥಾನದಲ್ಲಿ, ಶಿರಸ್ಸಿನಲ್ಲಿ, ಪೃಷ್ಠದಲ್ಲಿ ಸಹ ಉತ್ಪತ್ತಿಯಾಗುವ ಪ್ರಮೇಹಪಿಟಕೆ, ಅಗ್ನಿಬಲ ಕಡಿಮೆಯಾಗಿ ಹುಟ್ಟಿದ್ದೇ ಆದರೆ ಅಸಾಧ್ಯವು.

## ಮೇಹರೋಗಕ್ಕೆ ಚಿಕಿತ್ಸೆಗಳು.

೧. * ಇಂದ್ರಜುಲಾಬು:—ಕಲ್ಲುಕಾವಿ ‖ ತೊಲೆ, ಪಟಿಕ ‖ ತೊಲೆ, ಪೆಟ್ಲುಪ್ಪು ೪ ತೊಲೆ, ಚಿಳ್ಳೇಬೀಜ ೧ ತೊಲೆ, ಶ್ರೀಗಂಧದಚಕ್ಕೆ ೧ ತೊಲೆ, ಆನೇನೆಗ್ಗಿಲು ೧ ತೊಲೆ ಇವುಗಳು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇಟ್ಟುಕೊಳ್ಳುವುದು. ಅರ್ಧತೊಲೆ ಚೂರ್ಣ, ಹಸುವಿನಹಾಲು ಅರಪಾವು, ತಣ್ಣೀರು ಅರಪಾವು ಇವು ಮೂರು ಕಲಸಿ ಪ್ರಾತಃಕಾಲ ಕುಡಿಯಬೇಕು.

೨. ಸೌತೇಬೀಜದಪಪ್ಪು ‖ ತೊಲೆ, ಖರಬೂಜಬೀಜದಪಪ್ಪು ‖ ತೊಲೆ, ಆನೇನೆಗ್ಗಿಲುಮುಳ್ಳು ಚೂರ್ಣ ‖ ತೊಲೆ ಇವುಮೂರು ತಣ್ಣೀರಿನಿಂದ ಅರೆದು ಬಟ್ಟೆಯಲ್ಲಿ ಶೋಧಿಸಿ ಕುಡಿಯಬೇಕು. ಪಥ್ಯ ಹಸುವಿನಹಾಲು ಅನ್ನ. ಇದರಿಂದ ಗುಣ:—ರಕ್ತಮೇಹ, ಮೂತ್ರ ಕಟ್ಟಿಯಿರುವುದು ಮತ್ತು ಉರಿಯುವುದು ನಿವಾರಣೆ ಆಗುತ್ತೆ.

೩. ದಾಲ್‌ಚಿನ್ನಿ । ತೊಲೆ, ಬಾಲವೆ ಣಸು । ತೊಲೆ, ಬಿಳೇಜೀರಿಗೆ । ತೊಲೆ, ಯಾಲಕ್ಕಿ । ತೊಲೆ, ಪೆಟ್ಲುಪ್ಪು ೧ ತೊಲೆ, ರೇವಲಚಿನ್ನಿ ೨ ತೊಲೆ, ಸೌತೇ

* ಮೇಹರೋಗದಲ್ಲಿ ಸಾಮಾನ್ಯವಾಗಿ ಮೂತ್ರಕೋಶವು ಶುದ್ಧಿಮಾಡಿಕೊಳ್ಳಲು ಪ್ರಥಮತಃ ಒಂದು ಹೊತ್ತು ಇಂದ್ರಜುಲಾಬು (ಮೂತ್ರಜುಲಾಬು) ಮಾಡಿಸತಕ್ಕದ್ದು ಅತ್ಯಾವಶ್ಯಕ.

ಬೀಜದಪಪ್ಪು ೧ ತೊಲೆ, ಆನೇನೆಗ್ಗಿಲು ೧ ತೊಲೆ, ಕೊತ್ತುಂಬರಿಬೀಜ ‖ ತೊಲೆ ಇವುಗಳು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ೧ ಪಾವು ಹಸುವಿನ ಹಾಲು, ೧ ಪಾವು ತಣ್ಣೀರು ಇವೆರಡು ಕಲಸಿ ಮೇಲ್ಕಂಡ ಚೂರ್ಣ ಕಾಲು ಅಥವಾ ಅರ್ಧತೊಲೆ ಬೆರಸಿ ಕುಡಿಯಬೇಕು. ಈವೇರೆಗೆ ೨-೩ ದಿನ ಕೊಡ ಬೇಕು ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಮೂತ್ರಕಟ್ಟು, ಮೂತ್ರಉರಿ, ಮೂತ್ರಕೋಶ ಶುದ್ಧಿಯಾಗುವುದು.

೪. ರೇವಲಚಿನ್ನಿ ೧ ತೊಲೆ, ಹತ್ತಿಬೀಜ ೨ ತೊಲೆ, ಪೆಟ್ಲುಪ್ಪು ೩ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಹಸುವಿನಮಜ್ಜಿಗೆಯಲ್ಲಿ ಕಲಸಿ ಕೊಡು ವುದು. ಇದಕ್ಕೆ ಪಥ್ಯ ಹಸುವಿನಮಜ್ಜಿಗೆ ಅನ್ನ. ಮೂತ್ರ ಜಾಸ್ತಿಆದರೆ ನಿಂಬೇ ಹಣ್ಣು ಸಕ್ಕರೆ ಪಾನಕಮಾಡಿ ಕೊಡುವುದು. ರಾತ್ರಿಗೆ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಭೇದಿ ಜಲಬಾಧೆ ವಿಶೇಷವಾಗಿ ಆಗಿ ಮೂತ್ರಕೋಶ ಶುದ್ಧಿ ಆಗುವುದು.

೫. ಹಸುವಿನಹಾಲು ೩ ಶೇರು, ನೀರು ೩ ಶೇರು ಇವೆರಡು ಒಂದು ಹೊಸ ಮಡಿಕೆಯಲ್ಲಿ ಹಾಕಿ ಇಟ್ಟುಕೊಳ್ಳುವುದು. ಇದಕ್ಕೆ ಅನುಪಾನ:—ಸೋಪುಬೀಜ ೧ ತೊಲೆ, ರೇವಲಚಿನ್ನಿ ‖ ತೊಲೆ, ಪೆಟ್ಲುಪ್ಪು ‖ ತೊಲೆ ಇವು ಮೂರು ಚನ್ನಾಗಿ ಕುಟ್ಟಿ ಶೋಧಿಸಿ ೫ ಪೊಟ್ಟಣಗಳನ್ನು ಕಟ್ಟಿ ೧ ಪೊಟ್ಟಣ ಪೂರ್ವದಿಕ್ಕಿನಲ್ಲಿ ಬಿಸಾಡು ವುದು. ಬಾಕಿ ನಾಲ್ಕು ಪೊಟ್ಟಣಗಳಲ್ಲಿ ೧ ಪೊಟ್ಟಣ ಬಾಯಿಯಲ್ಲಿ ಹಾಕಿಕೊಂಡು ಮೇಲ್ಕಂಡ ಹಾಲು ನೀರು ೧ ಪಾವು ಕುಡಿಯುವುದು. ಮೂತ್ರ ಸರಾಗವಾಗಿ ಹೋಗುವುದು. ಇನ್ನೂ ಮೂತ್ರ ಆಗಬೇಕಾದರೆ ಪುನಃ ಕುಡಿಯುವುದು. ಈ ರೀತಿ ಹಾಲು ಕುಡಿದಷ್ಟು ಮೂತ್ರ ಹೋಗುವುದು. ಸಾಕಾದರೆ ಔಷಧವನ್ನೂ ಹಾಲು ಕುಡಿಯುವುದನ್ನೂ ನಿಲ್ಲಿಸುವುದು. ಮೂತ್ರನಿಲ್ಲದಿದ್ದರೆ ಅನ್ನದಲ್ಲಿ ತುಪ್ಪ ಬೆರಸಿ ತಿನ್ನುವುದು. ಮೂತ್ರವಾಗುವಾಗ ಒಂದು ಬೋಕಿಯಲ್ಲಿಟ್ಟು ಮೂತ್ರ ಮಾಡಿದರೆ ಕೀವು, ರಕ್ತ, ಕಷ್ಮಲ ಎಲ್ಲ ಈಚೆಗೆ ಬರುವುದು.

೬. ನೆಲತಂಗಡಿ ಸಮೂಲ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿದ್ದು ೨ ತೊಲೆ, ಹಸುವಿನಹಾಲು ಅರ್ಧಶೇರು ಇವು ಎರಡು ಕಲಸಿ ರಾತ್ರಿ ಇಟ್ಟಿದ್ದು ಬೆಳಿಗ್ಗೆ ತಿಳಿನೀರು ಕುಡಿಯುವುದು. ಈರೀತಿ ೪-೫ ದಿನ ಕೊಡಬೇಕು. ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಮೂತ್ರಕೋಶದ ರೋಗಗಳು ಗುಣವಾಗುವುವು.

## ಹಾವುಮೆಕ್ಕೇಕಾಯಿ ಎಣ್ಣೆ.

೧. ಚಿಟ್ಟೆರಳೆಣ್ಣೆ ೧೦ ಶೇರು, ಹಾವುಮೆಕ್ಕೇಕಾಯಿನ ರಸ ತೂಕದ ೧ ಶೇರು, ಗರುಗದಸೊಪ್ಪಿನ ರಸ ತೂಕದ ೧ ಪಾವು, ಕಿರುನೆಲ್ಲಿಸೊಪ್ಪಿನ ರಸ ತೂಕದ

೧ ಪಾವು, ತಾವರೇಹುವ್ವಿನ ರಸ ತೂಕದ ‖ ಶೇರು, ಬಿಳೇಹಾಲವಾಣದ ಸೊಪ್ಪಿನ ರಸ ತೂಕದ ೧ ಪಾವು, ಅಡುಸೋಗೆ ಸೊಪ್ಪಿನ ರಸ ತೂಕದ ‖ ಶೇರು, ಜುಟ್ಟುವೇಸೊಪ್ಪಿನರಸ ತೂಕದ ‖ ಶೇರು, ಹಸೀ ಅರಿಸಿನದರಸ ತೂಕದ ‖ ಶೇರು, ಬಿಳೀ ಈರುಳ್ಳಿ ರಸ ತೂಕದ ೧ ಶೇರು, ಬೇವಿನಚಕ್ಕೆಯ ರಸ ತೂಕದ ‖ ಶೇರು, ಕಾಚೀಸೊಪ್ಪಿನ ರಸ ತೂಕದ ‖ ಶೇರು, ಹೊನಗೊನೆಸೊಪ್ಪಿನರಸ ತೂಕದ ‖ ಶೇರು, ನಿಂಬೇಹಣ್ಣಿನ ರಸ ತೂಕದ ೧ ಶೇರು, ಶುದ್ಧಿಮಾಡಿದ ಪರಂಗಿಚಕ್ಕೆ ತೂಕದ ‖ ಶೇರು, ಬಾಲಮೆಣಸು ೪ ತೊಲೆ, ರೇವಲಚಿನ್ನಿ ೧ ತೊಲೆ, ದಾಲ್ಚಿನ್ನಿ ೧ ತೊಲೆ, ಅತಿಮಧುರ ೧ ತೊಲೆ, ಮಜ್ಜಿಗೆಗಡ್ಡೆ ೧ ತೊಲೆ, ಕರೇವುತ್ತರಾಣೆಬೇರು ೧ ತೊಲೆ, ಭೂಸಕ್ಕರೆಗಡ್ಡೆ ೧ ತೊಲೆ, ತಾವರೆಗಡ್ಡೆ ೧ ತೊಲೆ, ಬಿಳೀಜೀರಿಗೆ ೨ ತೊಲೆ, ಆನೇನೆಗ್ಗಿಲು ೪ ತೊಲೆ, ಲಾವಂಚ ೧ ತೊಲೆ, ವಾಯುವಿಳಂಗ ೧ ತೊಲೆ, ಶುದ್ಧಿಮಾಡಿದ ಮುತ್ತುಗದಬೀಜ ‖ ತೊಲೆ, ನೆಲತಂಗಡಿ ತೂಕದ ‖ ಶೇರು ಇವುಗಳನ್ನು ಪಕ್ವವಾಗಿ ಕಾಯಿಸಿ ಎಣ್ಣೆ ಶೋಧಿಸಿ ಇಟ್ಟುಕೊಳ್ಳುವುದು. ಬೆಳಿಗ್ಗೆಹೊತ್ತು ಬಿಸಿನೀರಿನಲ್ಲಿ ೨ ಆಣೆ ತೂಕ ತೆಗೆದುಕೊಳ್ಳಬೇಕು. ಈರೀತಿ ೭ ದಿವಸ ತೆಗೆದುಕೊಳ್ಳಬೇಕು. ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಮೇಹದ ಪೊಡೆಗಳು, (ಚಟ್ಟೆಗಳು), ಹೊಟ್ಟೆಯಲ್ಲಿ ಗಡ್ಡೆ, ಜಂತು ಹುಳುಗಳು ಬೀಳುವುದು, ಮತ್ತು ಮೇಹಸಂಬಂಧವಾದ ಎಲ್ಲಾ ರೋಗಗಳಿಗೂ ಉಪಯೋಗಿಸಬಹುದು.

## ಪ್ರಮೇಹ ನಿವಾರಿಣೀ ಎಣ್ಣೆ.

೨. ಚಿಟ್ಟೆರಳೆಣ್ಣೆ ೨‖ ಶೇರು, ಹಸುವಿನಹಾಲು ೧ ಶೇರು, ಹೂವರಸಿಚಕ್ಕೆರಸ ೧ ಪಾವು, ಹೂವರಸಿಕಾಯಿನ ರಸ ೧ ಪಾವು, ಬಾಲಮೆಣಸು ೨ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೬ ತೊಲೆ, ಆನೇನೆಗ್ಗಿಲು ೨ ತೊಲೆ, ಮರದರಿಸಿನ ೨ ತೊಲೆ, ತಂಗಡಿಬೀಜ ೨ ತೊಲೆ, ತುಂಗೇಗಡ್ಡೆ ೨ ತೊಲೆ ಇವುಗಳನ್ನು ಪಕ್ವವಾಗಿ ಕಾಯಿಸಿ ಶೋಧಿಸಿ ಇಟ್ಟುಕೊಳ್ಳುವುದು. ಬೆಳಿಗ್ಗೆಹೊತ್ತು ಬಿಸಿನೀರಿನಲ್ಲಿ ‖ ತೊಲೆ ತೆಗದುಕೊಳ್ಳಬೇಕು. ಈರೀತಿ ೭ ದಿವಸ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಎಲ್ಲತರಹೆಯ ಪ್ರಮೇಹರೋಗಗಳನ್ನು ಪರಿಹರಿಸುವುದು. ಶರೀರದ ಮೇಲೆ ಹರಡುವ ಪೊಡೆ, (ಚಟ್ಟೆ), ವ್ರಣ, ಹುಣ್ಣುಗಳನ್ನು ಒಣಗಿಸುವುದು.

## ಅಮೃತಸಂಜೀವನೀ ಎಣ್ಣೆ.

೩. ಎಳನೀರಿನಿಂದ ಬೇಯಿಸಿದ ಚಿಟ್ಟೆರಳು ಎಣ್ಣೆ ಅಳೆಯುವ ೩| ಶೇರು, ಸುನಾಮುಖಿ ಕಷಾಯ ಅಳತೆ ೧ ಪಾವು, ಚಿತ್ರಮೂಲದ ರಸ ಅಳತೆ ೧ ಪಾವು, ಕಿರುನೆಲ್ಲಿಸೊಪ್ಪಿನ ರಸ ಅಳತೆ ೧ ಪಾವು, ಹೊನಗೊನೆಸೊಪ್ಪಿನ ರಸ ಅಳತೆ ೧ ಪಾವು, ಗರುಗದಸೊಪ್ಪಿನ ರಸ ಅಳತೆ ೧ ಪಾವು, ದತ್ತೂರಿಸೊಪ್ಪಿನ ರಸ

ಅಳತೆ ೧ ಪಾವು, ಕಾಚೀಸೊಪ್ಪಿನ ರಸ ಅಳತೆ ೧ ಪಾವು, ಇದಕ್ಕೆ ಸೇರಿಸುವ ದಿನಸುಗಳು:—ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೩ ತೊಲೆ, ವಾಯುವಿಳಂಗ ೧ ತೊಲೆ, ಅತಿಮಧುರ ೧ ತೊಲೆ, ಚಂಗಲಕೋಷ್ಠ ೧ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಲವಂಗ ೧ ತೊಲೆ, ತುಂಗೇಗಡ್ಡೆ ೧ ತೊಲೆ, ಆನೇನೆಗ್ಗಿಲು ೨ ತೊಲೆ, ಲಾವಂಚ ೧ ತೊಲೆ, ನಾಗಕೇಸರಿ ೧ ತೊಲೆ, ಇವುಗಳನ್ನು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿಕೊಂಡು ಎಣ್ಣೆ ಮತ್ತು ರಸಗಳನ್ನು ಹಾಕಿ ಪಕ್ವವಾಗಿ ಎಣ್ಣೆ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನವೂ ಪ್ರಾತಃಕಾಲ ಅರ್ಧ ತೊಲೆಯಷ್ಟು ಎಣ್ಣೆಯನ್ನು ಬಿಸಿನೀರಿನಲ್ಲಿ ಹಾಕಿ ತೆಗೆದುಕೊಳ್ಳಬೇಕು. ಈರೀತಿ ೭ ದಿವಸ ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಹಳೆಯ ಮೇಹರೋಗಗಳು ಗುಣವಾಗುತ್ತವೆ

## ಮೇಹರಕ್ತಾಮೃತ ಎಣ್ಣೆ.

೪. ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಲವಂಗ ೧ ತೊಲೆ, ಯಾಲಕ್ಕಿ ೧ ತೊಲೆ, ಶುದ್ಧಿಮಾಡಿದ ಪರಂಗಿಚಕ್ಕೆ ೨ ತೊಲೆ, ದಾಲ್‌ಚಿನ್ನಿ ೧ ತೊಲೆ, ಕುರಾಸಾನಿ ಓಮ ೧ ತೊಲೆ, ಓಮ ೧ ತೊಲೆ, ಮೋಡಿ ೧ ತೊಲೆ, ಸಣ್ಣಹಿಪ್ಪಲಿ ೧ ತೊಲೆ, ಚಂಗಲಕೋಷ್ಠ ೧ ತೊಲೆ, ಮೆಣಸು ೧ ತೊಲೆ, ದೊಡ್ಡಮರದಚಕ್ಕೆ ೧ ತೊಲೆ, ವಾಯುವಿಳಂಗ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಕರೇಜೀರಿಗೆ ೧ ತೊಲೆ, ನಾಗಕೇಸರಿ ೧ ತೊಲೆ, ಶುದ್ಧಿಮಾಡಿದ ಲಾಲ್‌ತಿಗಡು ೬ ತೊಲೆ, ಇಂಗಳದಹಣ್ಣು ೧ ಇವುಗಳನ್ನು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿಕೊಂಡು ಚಿಟ್ಟರಳೆಣ್ಣೆ ೪ ಸೇರು ಹಾಕಿ ಪಕ್ವವಾಗಿ ಕಾಯಿಸಿ ಶೋಧಿಸಿ ಇಳಿಸಿಕೊಳ್ಳುವಾಗ ಕುಂಕುಮಕೇಸರಿ ಕಾಲುತೊಲೆ, ಗೋರೋಜನ ಅರ್ಧತೊಲೆ, ಕಸ್ತೂರಿ ಅಡ್ಡತೂಕ ಇವುಗಳನ್ನು ಖಲ್ವದಲ್ಲಿ ಹಾಕಿ ಅರೆದು ಎಣ್ಣೆಯಲ್ಲಿ ಕಲಸಿ ಇಟ್ಟುಕೊಳ್ಳುವುದು. ಈ ಎಣ್ಣೆಯನ್ನು ಪ್ರತಿದಿನವೂ ಪ್ರಾತಃಕಾಲದಲ್ಲಿ ೧ ತೊಲೆಯಷ್ಟು ಬಿಸಿನೀರಿನಲ್ಲಿ ತೆಗೆದುಕೊಳ್ಳುವುದು. ಈರೀತಿ ೭ ದಿನ ತೆಗೆದು ಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಸಕಲ ಪ್ರಮೇಹ, ಮೂತ್ರಕೃಚ್ಛ್ರ, ಉರಿಮೂತ್ರ ಇವು ನಿವಾರಣೆ ಯಾಗುವುದು.

## ಪ್ರಮೇಹ ಚಿಂತಾಮಣಿ ಎಣ್ಣೆ.

೫. ಉತ್ತರೇಣಿಸೊಪ್ಪಿನ ರಸ ೧ ಸೊಲಿಗೆ, ಸಿಹಿತೊಂಡೇಸೊಪ್ಪಿನ ರಸ ೧ ಸೊಲಿಗೆ, ವಿಷಮದಾರಿಸೊಪ್ಪಿನ ರಸ ೧ ಸೊಲಿಗೆ, ದೇವದಾರಿಸೊಪ್ಪಿನ ರಸ ೧ ಸೊಲಿಗೆ, ಜಾಜಿಸೊಪ್ಪಿನ ರಸ ೧ ಸೊಲಿಗೆ, ಬೂರುಗಚಕ್ಕೆ ರಸ ೧ ಸೊಲಿಗೆ,

ಗಂಡುಹೂವರಸಿಚಕ್ಕೆ ರಸ ೧ ಸೊಲಿಗೆ, ಹಿರೇಮದ್ದಿನಸೊಪ್ಪಿನ ರಸ ೧ ಸೊಲಿಗೆ, ಚೇಕೊಡತಿಸೊಪ್ಪಿನ ರಸ ೧ ಸೊಲಿಗೆ, ತೀಟಗರಶಿಬೇರಿನ ರಸ ೧ ಸೊಲಿಗೆ, ಹುಳಿ ಮಾವಿನಚಕ್ಕೆ ರಸ ೧ ಸೊಲಿಗೆ, ಹಾಲೇಸೊಪ್ಪಿನ ರಸ ೧ ಸೊಲಿಗೆ, ಚೇಳು ಕೊಂಡಿಸೊಪ್ಪಿನ ರಸ ೧ ಸೊಲಿಗೆ, ಚಿಟ್ಟೆರಳೆಣ್ಣೆ ೩॥ ಶೇರು ಇದಕ್ಕೆ ಸೇರುವ ದಿನಸು:—ಕಟುಕರೋಹಿಣಿ ೧ ತೊಲೆ, ಶುದ್ಧಿಮಾಡಿದ ಪರಂಗಿಚಕ್ಕೆ ೧ ತೊಲೆ, ಕರೇಜೀರಿಗೆ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ವಾಯುವಿಳಂಗ ೧ ತೊಲೆ, ಲವಂಗ ೧ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಗಂಟುಭಾರಂಗಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿಕೊಂಡು ಎಲ್ಲನ್ನೂ ಶೇರಿಸಿ ಪಕ್ವವಾಗಿ ಎಣ್ಣೆ ಕಾಯಿಸಿ ಶೋಧಿಸಿ ಕೊಳ್ಳುವುದು. ಪ್ರತಿದಿನವೂ ಪ್ರಾತಃಕಾಲ ೧ ತೊಲೆಯಷ್ಟು ಎಣ್ಣೆಯನ್ನು ಬಿಸಿನೀರಿನಲ್ಲಿ ತೆಗೆದುಕೊಳ್ಳಬೇಕು. ಈರೀತಿ ೭ ದಿವಸ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ ಇದರಿಂದ ನೂತನ ಪುರಾತನ ಪ್ರಮೇಹ, ಮೂತ್ರಕೃಚ್ಛ್ರ, ಉರಿಮೂತ್ರ, ಸಿಕ್ಕುಮೂತ್ರ, ಬಿಳಿಕುಸುಮ. ರಕ್ತಕುಸುಮ ಗುಣವಾಗುವುವು.

## ಹಾವುಮೆಕ್ಕೇಕಾಯಿ ಎಣ್ಣೆ.

೬. ಚಿಟ್ಟೆರಳೆಣ್ಣೆ ೨ ಶೇರು, ಚಿಟ್ಟೆರಳುಬೇರಿನ ರಸ ಕಾಲುಶೇರು, ಬಿಳೇ ಈರುಳ್ಳಿ ರಸ ಕಾಲುಶೇರು, ಶುದ್ಧಿಮಾಡಿದ ಲೋಳಿಸರದ ಹಳಕು ೯ ತೊಲೆ, ಸುಣ್ಣತೆಗದ ಹಶೀ ಶುಂಠಿ ರಸ ೯ ತೊಲೆ, ಬಿಳೇ ಹಾಲುವಾಣದಸೊಪ್ಪಿನ ರಸ ಕಾಲುಶೇರು, ಎಳನೀರು ಅರ್ಧಶೇರು, ಹಸುವಿನ ಹಾಲು ಅರ್ಧಶೇರು, ಇದಕ್ಕೆ ಸೇರುವ ದಿನಸುಗಳು:—ಸಣ್ಣಹಿಪ್ಪಲಿ ೪ ತೊಲೆ, ಮೆಣಸು ೪ ತೊಲೆ, ಯಾಲಕ್ಕಿ ೪ ತೊಲೆ, ಮಾಲಕಂಗನಿ ಬೀಜ ೪ ತೊಲೆ, ಕಕ್ಕೆಬಂಕೆ ೯ ತೊಲೆ, ಸೋಪು ಬೀಜ ೯ ತೊಲೆ, ಮೆಂತ್ಯ ೪ ತೊಲೆ ಇವುಗಳನ್ನು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿಕೊಳ್ಳುವುದು. ಹಾವುಮೆಕ್ಕೇಕಾಯಿ ೨ ಹಣ್ಣಿನ ರಸ ಹಾಕ ವುದು. ಎಲ್ಲವನ್ನೂ ಶೇರಿಸಿ ಎಣ್ಣೆಯನ್ನು ಪಕ್ವವಾಗಿ ಕಾಯಿಸಿ ಶೋಧಿಸಿ ಇಟ್ಟುಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ಅರ್ಧತೊಲೆ ಎಣ್ಣೆಯನ್ನು ಬಿಸಿ ನೀರಿನಲ್ಲಿ ತೆಗೆದುಕೊಳ್ಳುವುದು. ಈರೀತಿ ೭ ದಿನ ಕೊಡಬೇಕು. ಪಥ್ಯ ತೊಗರೀ ಬೇಳೆ ಸಿಹಿಸಾರು ಅನ್ನ. ಇದರಿಂದ ಶರೀರದಮೇಲೆ ಹರಡುವ ಪೊಡೆ, (ಮಚ್ಚೆ), ಮುಸುಕು, ಪೀನಸ, ಅಂಗಳನೂತಿ ಇವು ಗುಣವಾಗುವುವು.

## ಹಾವುಮೆಕ್ಕೇಕಾಯಿ ಎಣ್ಣೆ.

೭. ಚಿಟ್ಟೆರಳೆಣ್ಣೆ ಅಳತೆ ೩ ಶೇರು, ಬಿಳೇ ಈರುಳ್ಳಿ ರಸ ೧ ಪಾವು, ಎಳ ನೀರು ೧ ಶೇರು, ಹಾವುಮೆಕ್ಕೇಕಾಯಿ ೮ ರಸ ತೆಗೆದುಕೊಳ್ಳುವುದು. ನೆಲತಂಗಡಿ ಸೊಪ್ಪು ೧ ಹಿಡಿ, ದೊಡ್ಡ ತಂಗಡಿಸೊಪ್ಪು ೧ ಹಿಡಿ, ಸುನಾಮುಖಿ ೪ ಹಿಡಿ,

ಮೆಂತ್ಯ ೨ ತೊಲೆ, ಮರದರಿಸಿನ ೨ ತೊಲೆ, ವಾಯುವಿಳಂಗ ೧ ತೊಲೆ ಇವು ಆರು ದಿನಸುಗಳನ್ನು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಇವು ಎಲ್ಲವನ್ನು ಸೇರಿಸಿ ಪಕ್ವವಾಗಿ ಕಾಯಿಸಿ ಎಣ್ಣೆಯನ್ನು ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆಯಷ್ಟು ಎಣ್ಣೆಯನ್ನು ಬಿಸಿನೀರಿನಲ್ಲಿ ತೆಗೆದುಕೊಳ್ಳುವುದು. ಈರೀತಿ ೭ ದಿವಸ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಕಲ ಪ್ರಮೇಹಗಳೂ ನಿವಾರಣೆಯಾಗುವುದು.

೮. ಚಿಟ್ಟೆರಳೆಣ್ಣೆ ೨ ಶೇರು, ಹಸೀಶುಂಠಿ ರಸ ೨೪ ತೊಲೆ, ನಿಂಬೇಹಣ್ಣಿನ ರಸ ೨೪ ತೊಲೆ, ಬಿಳೇ ಈರುಳ್ಳಿ ರಸ ೨೪ ತೊಲೆ, ಹಾವುಮೆಕ್ಕೇಕಾಯಿ ರಸ ೨೪ ತೊಲೆ, (ಮೆಂತ್ಯ ೩ ಕಾಸುತೂಕ, ಷಾಜೀರಿಗೆ ೩ ಕಾಸುತೂಕ, ಕಲ್ಮಿದಾಲ್ ಚಿನ್ನಿ ೩ ಕಾಸುತೂಕ ಇವು ಮೂರು ದಿನಸುಗಳನ್ನು ಒಂದು ಬಟ್ಟೆಯಲ್ಲಿ ಗಂಟು ಕಟ್ಟಿ ಎಣ್ಣೆ ಕಾಯುತ್ತಿರುವಾಗ ಮಧ್ಯ ಬಿಟ್ಟುಬಿಡುವುದು). ಎಣ್ಣೆ ಪಕ್ವವಾಗಿ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆಯಷ್ಟು ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡಬೇಕು. ಈರೀತಿ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ಕಿಚಡಿ (ಹುಗ್ಗಿ) ಅನ್ನ. ಇದರಿಂದ ಮೇಹಗಳು ಗುಣವಾಗುವುವು.

## ಕುಮಾರಿ ಎಣ್ಣೆ.

೯. ಚಿಟ್ಟೆರಳೆಣ್ಣೆ ೧| ಶೇರು, ಬಿಳೇ ಈರುಳ್ಳಿ ರಸ ೧| ಶೇರು, ಎಳನೀರು ೧| ಶೇರು, ಶುದ್ಧಿಮಾಡಿದ ಪರಂಗಿಚಕ್ಕೆ ೩ ತೊಲೆ, ಮೆಂತ್ಯ ೧ ತೊಲೆ, ಕಸ್ತೂರಿ ಅರಿಸಿನ || ತೊಲೆ, ಅತಿಮಧುರ ೧ ತೊಲೆ, ಲೋಳೆಸರದ ತಿರುಳು ೧೦ ತೊಲೆ ಇವುಗಳೆಲ್ಲವನ್ನು ಶೇರಿಸಿ ಪಕ್ವವಾಗಿ ಎಣ್ಣೆಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆಯಷ್ಟು ಎಣ್ಣೆಯನ್ನು ಬಿಸಿನೀರಿನಲ್ಲಿ ತೆಗೆದುಕೊಳ್ಳುವುದು. ಈರೀತಿ ೭ ದಿವಸ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪ್ರಮೇಹ, ಮೂತ್ರಕೃಚ್ಛ್ರ, ಉರಿಮೂತ್ರ, ಹೊಟ್ಟೆನೋವು ಇವು ಗುಣವಾಗುವುವು.

## ಬ್ರಹ್ಮದಂಡೀ ಎಣ್ಣೆ.

೧೦. ಚಿಟ್ಟೆರಳೆಣ್ಣೆ ೨ ಶೇರು, ದತ್ತೂರಿ ಸಮೂಲದ ರಸ ೧ ಶೇರು, ಬಿಳೀ ಈರುಳ್ಳಿ ರಸ ೧ ಶೇರು, ಮೆಂತ್ಯ ೩ ತೊಲೆ, ಬಿಳೇಜೀರಿಗೆ ೩ ತೊಲೆ, ಅತಿಮಧುರ ೩ ತೊಲೆ, ಕಸ್ತೂರಿ ಅರಿಸಿನ ೧ ತೊಲೆ, ಮರದರಿಸಿನ ೧ ತೊಲೆ, ಅರಿಸಿನ ೧ ತೊಲೆ ಇವುಗಳೆಲ್ಲವನ್ನೂ ಶೇರಿಸಿ ಪಕ್ವವಾಗಿ ಎಣ್ಣೆಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ಅರ್ಧತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡಬೇಕು. ಈರೀತಿ ೭ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿ

ಸಾರು ಅನ್ನ. ಇದರಿಂದ ಪ್ರಮೇಹ, ಮೂತ್ರಕೃಚ್ಛ್ರ, ಉರಿಮೂತ್ರ ಇವು ಗುಣವಾಗುವುವು.

೧೧. ಚಿಟ್ಟರಳೆಣ್ಣೆ ೪ ಶೇರು, ನಿಂಬೇಹಣ್ಣಿನ ರಸ ೧॥ ಶೇರು, ಶೀತೊಂಡೇ ಸೊಪ್ಪಿನ ರಸ ೧॥ ಶೇರು, ಕರೇಕಾಚಿಸೊಪ್ಪಿನ ರಸ ೧॥ ಶೇರು, ಬಿಳೀ ಈರುಳ್ಳಿ ರಸ ೨ ಶೇರು, ಹಸುವಿನಹಾಲು ೨ ಶೇರು, ಲೋಳಿಸರದ ತಿರಳು ರಸ ೨ ಶೇರು, ಹಾವುಮೆಕ್ಕೇಕಾಯಿ ರಸ ೧ ಶೇರು, ಇದಕ್ಕೆ ಕಲ್ಕದ್ರವ್ಯ:—ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಬಿಳೇಜೀರಿಗೆ ೧ ತೊಲೆ, ಲವಂಗ ೧ ತೊಲೆ, ಕಸ್ತೂರಿ ಅರಿಸಿನ ೧ ತೊಲೆ, ನೆಲತಾಟಿಗಡ್ಡೆ ೧ ತೊಲೆ, ವಾಯುವಿಳಂಗ ೧ ತೊಲೆ, ಖುರಾಸಾನಿ ವೋಮ ೧ ತೊಲೆ, ಮೆಂತ್ಯ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿಕೊಂಡು ಎಲ್ಲವನ್ನು ಶೇರಿಸಿ ಪಕ್ವವಾಗಿ ಎಣ್ಣೆ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆಯಷ್ಟು ಎಣ್ಣೆಯನ್ನು ಬಿಸಿನೀರಿನಲ್ಲಿ ತೆಗೆದುಕೊಳ್ಳುವುದು. ಈರೀತಿ ೭ ದಿವಸ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:— ಸಕಲಪ್ರಮೇಹ, ಮೂತ್ರಕೃಚ್ಛ್ರ, ಉರಿಮೂತ್ರ, ಸಿಕ್ಕುಮೂತ್ರ, ಶರೀರದಮೇಲೆ ಹರಡುವ ಪೊಡೆ, (ಮಚ್ಚೆ) ಇವು ನಿವಾರಣೆಯಾಗುವುವು.

## ಹಾವುಮೆಕ್ಕೇಕಾಯಿ ಎಣ್ಣೆ.

೧೨. ಚಿಟ್ಟರಳೆಣ್ಣೆ ೨ ಶೇರು, ಹಾವುಮೆಕ್ಕೇಕಾಯಿನ ರಸ ಅರ್ಧಶೇರು, ನಿಂಬೇಹಣ್ಣಿನ ರಸ ಅರ್ಧಶೇರು, ಇದಕ್ಕೆ ಕಲ್ಕದ್ರವ್ಯ:—ಜಾಕಾಯಿ ॥ ತೊಲೆ, ಶುದ್ಧಿಮಾಡಿದ ಪರಂಗಿಚಕ್ಕೆ ॥ ತೊಲೆ, ಜಾಪತ್ರೆ ॥ ತೊಲೆ, ಲವಂಗ ಕಾಲುತೊಲೆ, ಬಿಳೇಜೀರಿಗೆ ॥ ತೊಲೆ, ಶುಂಠಿ ॥ ತೊಲೆ, ಕಟುಕರೋಹಿಣಿ ೩ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿಕೊಂಡು ಎಲ್ಲವನ್ನೂ ಶೇರಿಸಿ ಪಕ್ವವಾಗಿ ಎಣ್ಣೆ ಕಾಯಿಸಿ ಶೋಧಿಸಿ ಇದಕ್ಕೆ ಶುದ್ಧಿಮಾಡಿದ ರಸಕರ್ಪೂರ ॥ ತೊಲೆ ಖಲ್ವದಲ್ಲಿ ಹಾಕಿ ಅರೆದು ಶೇರಿಸಬೇಕು. ಈ ಎಣ್ಣೆ ಪ್ರತಿದಿನ ಪ್ರಾತಃಕಾಲ ೧ ತೊಲೆ ಬಿಸಿನೀರಿನಲ್ಲಿ ತೆಗೆದುಕೊಳ್ಳುವುದು. ಈರೀತಿ ೭ ದಿನ ತೆಗೆದುಕೊಳ್ಳುವುದು. ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪ್ರಮೇಹ, ಉರಿಮೂತ್ರ, ಸಿಕ್ಕುಮೂತ್ರ, ಮೇಹಪೊಡೆ, ಮೇಹವಾಯು, ಮೇಹವ್ರಣ ಇವು ನಿವಾರಣೆಯಾಗುವುವು.

## ಮೇಹಕುಲಾಂತಕ ಎಣ್ಣೆ.

೧೩. ಚಿಟ್ಟರಳೆಣ್ಣೆ ೪ ಸೊಲಿಗೆ, ವಿಷಮುದಾರಿಸೊಪ್ಪಿನ ರಸ ೧ ಸೊಲಿಗೆ, ಗಬ್ಬುಗಾಂಧಾರಿಸೊಪ್ಪಿನ ರಸ ೧ ಸೊಲಿಗೆ, ಮಾಚಿಪತ್ರೆಸೊಪ್ಪಿನ ರಸ ೧ ಸೊಲಿಗೆ,

ಬಿಳೇ ಈರುಳ್ಳಿ ರಸ ೧ ಸೊಲಿಗೆ, ಲೋಳೆಸರದ ತೊಳೆಯನ್ನು ಶುಭ್ರವಾಗಿ ತೊಳೆದದ್ದು ಇದರ ರಸ ೧ ಸೊಲಿಗೆ, ಗಜ್ಜಿಕಾಯಿಸೊಪ್ಪಿನ ರಸ ॥ ಸೊಲಿಗೆ, ಬಿಲ್ಪತ್ರೆ ಸೊಪ್ಪಿನ ರಸ ॥ ಸೊಲಿಗೆ, ನೀರುಬೊಮ್ಮೆಸೊಪ್ಪಿನ ರಸ ಕಾಲುಸೊಲಿಗೆ, ವಂದೆಲಗದ ರಸ ಕಾಲುಸೊಲಿಗೆ, ಹೊಮ್ಮುಗಳಿಸೊಪ್ಪಿನ ರಸ ಕಾಲುಸೊಲಿಗೆ, ಸೊಗದೇಬೇರಿನ ರಸ ೧ ಸೊಲಿಗೆ, ಕರೇಕಾಚಿಸೊಪ್ಪಿನ ರಸ ೧ ಸೊಲಿಗೆ, ಹಂಸಪಾದಿ ಸೊಪ್ಪಿನ ರಸ ೧ ಸೊಲಿಗೆ, ಇದಕ್ಕೆ ಕಲ್ಕದ್ರವ್ಯ:—ಜಾಕಾಯಿ ೧ ವರಹಾತೂಕ, ಜಾಪತ್ರೆ ೧ ವರಹಾತೂಕ, ಕಟುಕರೋಹಿಣಿ ೧ ವರಹಾತೂಕ, ತ್ರಿಫಲೆ ೩ ವರಹಾತೂಕ ಇವುಗಳನ್ನು ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿಕೊಳ್ಳುವುದು. ಎಲ್ಲವನ್ನು ಶೇರಿಸಿ ಕಲಾಯಿಪಾತ್ರೆಯಲ್ಲಿ ಹಾಕಿ ಆದಕ್ಕೆ ಕುಂಕುಮಕೇಸರಿ ೨ ಹಣ ತೂಕ, ಶುದ್ಧಿಮಾಡಿದ ಜಾಪಾಳ ೩ ವರಹಾತೂಕ ಹಾಕಿ ಪಕ್ವವಾಗಿ ಎಣ್ಣೆಕಾಯಿಸಿ ಶೋಧಿಸಿಕೊಂಡನಂತರ ಶುದ್ಧಿಮಾಡಿದ ರಸಕರ್ಪೂರ ೧ ವರಹಾತೂಕ ಖಲ್ವದಲ್ಲಿ ಅರೆದು ಶೇರಿಸಿಕೊಳ್ಳುವುದು. ಇದು ಪ್ರತಿದಿನ ಪ್ರಾತಃಕಾಲ ೧ ತೊಲೆಯಷ್ಟು ಎಣ್ಣೆಯನ್ನು ಬಿಸಿನೀರಿನಲ್ಲಿ ತೆಗೆದುಕೊಳ್ಳುವುದು. ಈರೀತಿ ೭ ದಿವಸ ತೆಗೆದುಕೊಳ್ಳಬೇಕು. ೮ ನೆಯ ದಿವಸ ೨ ತೊಲೆ ಓಮ ತಣ್ಣೀರಿನಲ್ಲಿ ಅರೆದು ತಲೆಗೆ ಹಾಕಿಕೊಂಡು ಬಿಸಿನೀರು ಸ್ನಾನಮಾಡುವುದು. ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಕಲಮೇಹಗಳು, ಸಕಲವಿಧ ಮೇಹವಾಯುಗಳು, ಕುಷ್ಠ, ಭಗಂಧರ, ಶರೀರದಮೇಲೆ ಹರಡುವ ಪೊಡೆ (ಮಚ್ಚೆ), ಹುಣ್ಣು ನಿವಾರಣೆಯಾಗುವುದು.

೧೪. ಚಿಟ್ಟರಳೆಣ್ಣೆ ೧ ಶೇರು, ಬೇವಿನ ಎಣ್ಣೆ ೧ ಶೇರು, ಹೊಂಗೆ ಎಣ್ಣೆ ೧ ಶೇರು, ವಿಷಮುದಾರಿಸೊಪ್ಪಿನ ರಸ ೩ ಶೇರು, ಇದಕ್ಕೆ ಕಲ್ಕದ್ರವ್ಯ:—ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಲವಂಗ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೩ ತೊಲೆ, ಬಿಳೇಜೀರಿಗೆ ೨ ತೊಲೆ ಇವುಗಳನ್ನು ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಕುಂಕುಮಕೇಸರಿ ಅರ್ಧತೊಲೆ ಖಲ್ವದಲ್ಲಿ ಹಾಕಿ ನೀರು ಹಾಕಿ ಅರೆಯುವುದು. ಎಲ್ಲವನ್ನೂ ಶೇರಿಸಿ ಪಕ್ವವಾಗಿ ಎಣ್ಣೆಕಾಯಿಸಿ ಶೋಧಿಸಿ ಇಟ್ಟುಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆಯಷ್ಟು ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡಬೇಕು. ಈರೀತಿ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಸಕಲಪ್ರಮೇಹ, ಶರೀರದ ಮೇಲೆ ಹರಡುವ ಪೊಡೆ, ಮರ್ಮಸ್ಥಾನಗಳ ವ್ರಣ, ಹುಣ್ಣು, ಯೋನಿಹುಣ್ಣು, ಗಂಡಮಾಲೆ, ತೊಡೆಬಾಳೆ, ೬ ತರಹ ಪೀನಸ ಇವು ನಿವಾರಣೆಯಾಗುವುದು.

## ಸಿದ್ಧಿಕ್ರಿಯೆಯಾದ ಎಣ್ಣೆ.

೧೫. ಚಿಟ್ಟೆರಳೆಣ್ಣೆ ೧ ಶೇರು, ಒಳ್ಳೆ ಬಲತಿರುವ ಹೊಂಗೆಯಬೇರಿನ ತಿಗಡು ಸ್ವಲ್ಪ ನೀರುಹಾಕಿ ಚನ್ನಾಗಿ ಕುಟ್ಟಿ ರಸ ಶೋಧಿಸಿಕೊಂಡದ್ದು ೧ ಶೇರು ಇವೆರಡನ್ನೂ ಪಕ್ವವಾಗಿ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಶುದ್ಧಿ ಮಾಡಿದ ರಸಕರ್ಪೂರ ೧ ತೊಲೆ ಖಲ್ವದಲ್ಲಿ ಅರೆದು ಎಣ್ಣೆಗೆ ಶೇರಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆ ಬಿಸಿನೀರಿನಲ್ಲಿ ತೆಗೆದುಕೊಳ್ಳುವುದು. ಈರೀತಿ ೭ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ ಹಸುವಿನ ಹಾಲು ಅನ್ನ ಕಿಚಡಿ ಅನ್ನ (ಹುಗ್ಗಿ) ಸೇವಿಸಬೇಕು. ನೂತಿಗು, ಅಂಗಳನೂತಿಗು, ಮುಸುಕು ಹುಣ್ಣಿಗು ಮೇಲ್ಕಂಡ ಎಣ್ಣೆಯನ್ನು ಲೇಪನಮಾಡುವುದು. ಮರ್ಮಸ್ಥಾನದ ಹುಣ್ಣಿಗು, ಯೋನಿಹುಣ್ಣಿಗು ಸಹ ಲೇಪನಮಾಡುವುದು. ಇದರಿಂದ ಗುಣ:— ಸಕಲಪ್ರಮೇಹ, ಕೀಲುವಾಯು, ಶರೀರದಮೇಲೆ ಹರಡುವ ಪೊಡೆ, (ಮಚ್ಚೆ), ತುರಿ, ಕಜ್ಜಿ ಇವು ನಿವಾರಣೆಯಾಗುವುದು

೧೬. ಚಿಟ್ಟೆರಳೆಣ್ಣೆ ೧೦ ಸೊಲಿಗೆ, ಗರುಗದಸೊಪ್ಪಿನ ರಸ ೨ ಸೊಲಿಗೆ, ಹೊನಗೊನೆಸೊಪ್ಪಿನ ರಸ ೨ ಸೊಲಿಗೆ, ಶೀತೊಂಡೆಸೊಪ್ಪಿನ ರಸ ೨ ಸೊಲಿಗೆ, ಬಿಳೇಈರುಳ್ಳಿ ರಸ ೨ ಸೊಲಿಗೆ, ಹಸುವಿನಹಾಲು ೨ ಸೊಲಿಗೆ, ಜಾಪತ್ರೆ ೧ ವರಹಾತೂಕ, ವೆಂತ್ಯ ೧ ವರಹಾತೂಕ, ಲವಂಗ ೧ ವರಹಾತೂಕ, ಜಾಕಾಯಿ ೧ ವರಹಾತೂಕ, ಕುಂಕುಮಕೇಸರಿ ೧ ವರಹಾತೂಕ ಇವು ಎಲ್ಲವನ್ನೂ ಶೇರಿಸಿ ಪಕ್ವವಾಗಿ ಎಣ್ಣೆ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡಬೇಕು. ಈರೀತಿ ೭ ದಿವಸ ತೆಗೆದು ಕೊಳ್ಳಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪ್ರಮೇಹ, ಉರಿಮೂತ್ರ, ಸಿಕ್ಕುಮೂತ್ರ ಗುಣವಾಗುವುದು.

೧೭. ಚಿಟ್ಟೆರಳೆಣ್ಣೆ ೩ ಶೇರು, ಹೊಂಗೇಬೇರಿನಚಕ್ಕೆ ರಸ ೧ ಪಾವು, ಬೇವಿನಚಕ್ಕೆ ರಸ ೧ ಪಾವು, ಅತ್ತಿಬೇರಿನಚಕ್ಕೆ ರಸ ೧ ಪಾವು, ಆಲದಬಿಳಲಿನ ರಸ ೧ ಪಾವು, ಹೊವರಸಿಚಕ್ಕೆ ರಸ ೧ ಪಾವು, ಮಾವಿನಬೇರಿನಚಕ್ಕೆ ರಸ ೧ ಪಾವು, ಇದಕ್ಕೆ ಕಲ್ಕದ್ರವ್ಯ:—ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿ ಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೩ ತೊಲೆ, ಶುಂಠಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಜಾಕಾಯಿ ॥ ತೊಲೆ, ಜಾಪತ್ರೆ ॥ ತೊಲೆ, ಲವಂಗ ॥ ತೊಲೆ, ಮರದರಿಸಿನ ೨ ತೊಲೆ, ಕಸ್ತೂರಿಅರಿಸಿನ ೨ ತೊಲೆ, ವಾಯುವಿಳಂಗ ೨ ತೊಲೆ, ಮಂಜಿಷ್ಠೆ ೨ ತೊಲೆ, ಚೆಂಗಲಕೋಷ್ಟ ೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಎಲ್ಲವನ್ನೂ ಶೇರಿಸಿ ಪಕ್ವ ವಾಗಿ ಎಣ್ಣೆ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಯಷ್ಟು ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡಬೇಕು. ಈರೀತಿ ೭ ದಿನ ತೆಗೆದು

ಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಸಕಲ ಪ್ರಮೇಹ, ಮೂತ್ರಕೃಚ್ಛ್ರ, ಉರಿಮೂತ್ರ, ಶರೀರದಮೇಲೆ ಹೆರಡುವ ಪೊಡೆ (ಮಚ್ಚೆ), ಮರ್ಮಸ್ಥಾನದ ವ್ರಣ, ಯೋನಿ ವ್ರಣ ಇವು ನಿವಾರಣೆಯಾಗುವುದು.

೧೮. ಚಿಟ್ಟೆರಳೆಣ್ಣೆ ೪ ಶೇರು, ಕಾಚೀಸೊಪ್ಪಿನ ರಸ ೧ ಪಾವು, ಚಿಟ್ಟೆರಳು ಬೇರಿನ ರಸ ೧ ಪಾವು, ಜುಟ್ಟುವೆಸೊಪ್ಪಿನ ರಸ ೧ ಪಾವು, ಹೊಂಗೇಬೇರಿನ ರಸ ೧ ಪಾವು, ಬಿಳೇಈರುಳ್ಳಿ ರಸ ೧ ಶೇರು, ಅಮೃತಬಳ್ಳಿ ರಸ ೧ ಪಾವು, ಕೆರೆ ಹಿಪ್ಪಲಿಸೊಪ್ಪಿನ ರಸ ೧ ಪಾವು, ಇವುಗಳಿಗೆ ಕಲ್ಕದ್ರವ್ಯ:—ಮೆಂತ್ಯ ೨ ತೊಲೆ, ಶುಂಠಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಶುದ್ಧಿಮಾಡಿದ ಪರಂಗಿಚಕ್ಕೆ ೬ ತೊಲೆ, ವಾಯುವಿಳಂಗ ೨ ತೊಲೆ, ಗಂಟುಭಾರಂಗಿ ೨ ತೊಲೆ, ಚಂಗಲಕೋಷ್ಟ ೧ ತೊಲೆ, ಶುದ್ಧಿಮಾಡಿದ ಅಶ್ವಗಂಧಿ ೨ ತೊಲೆ, ನೆಲತಾಟಿ ಗಡ್ಡೆ ೨ ತೊಲೆ, ಓಮ ೧ ತೊಲೆ, ಖುರಾಸಾನಿಪ್ರೋಮ ೧ ತೊಲೆ, ಬಿಳೇ ಜೀರಿಗೆ ೧ ತೊಲೆ, ಕರೇಜೀರಿಗೆ ೧ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಲವಂಗ ೧ ತೊಲೆ, ಬಾಲಮೆಣಸು ೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಕುಂಕುಮಕೇಸರಿ ॥ ತೊಲೆ ಖಲ್ವದಲ್ಲಿ ಹಾಕಿ ನೀರಿನಲ್ಲಿ ಅರೆದುಹಾಕುವುದು. ಎಲ್ಲವನ್ನು ಶೇರಿಸಿ ಪಕ್ವವಾಗಿ ಎಣ್ಣೆ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆಯೆಷ್ಟು ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡಬೇಕು. ಈರೀತಿ ೭ ದಿನ ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಪ್ರಮೇಹ, ಉರಿಮೂತ್ರ, ಕೀಲು ವಾಯು ನಿವಾರಣೆಯಾಗುವುದು.

೧೯. ಚಿಟ್ಟೆರಳೆಣ್ಣೆ ೨ ಶೇರು, ಕರೇಹತ್ತಿಸೊಪ್ಪಿನ ರಸ ೧ ಪಾವು, ಕೆರೇ ಹಿಪ್ಪಲಿಸೊಪ್ಪಿನ ರಸ ೧ ಪಾವು, ವಂದೆಲಗದಸೊಪ್ಪಿನ ರಸ ೧ ಪಾವು, ಕಾಚೀ ಸೊಪ್ಪಿನ ರಸ ೧ ಪಾವು, ಹೊವರಸಿಚಕ್ಕೆ ರಸ ೧ ಪಾವು, ಗರುಗದಸೊಪ್ಪಿನ ರಸ ೧ ಪಾವು, ಇದಕ್ಕೆ ಕಲ್ಕದ್ರವ್ಯ:—ತುಂಗೇಗಡ್ಡೆ ೧ ತೊಲೆ, ಆನೇನೆಗ್ಗಿಲು ೨ ತೊಲೆ, ಲಾವಂಚ ೧ ತೊಲೆ, ಬಾಲಮೆಣಸು ೨ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೩ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿಕೊಳ್ಳುವುದು. ಎಲ್ಲವನ್ನೂ ಶೇರಿಸಿ ಪಕ್ವವಾಗಿ ಎಣ್ಣೆ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆಯಷ್ಟು ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡಬೇಕು. ಈರೀತಿ ೭ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ ತೊಗರೀಬೇಳೆ

ಸಿಹಿಸಾರು ಅನ್ನ. ಇದರಿಂದ ಗುಣ:—ಪ್ರಮೇಹ, ಮೂತ್ರಕೃಚ್ಛ್ರ, ಉರಿಮೂತ್ರ, ಸಿಕ್ಕುಮೂತ್ರ ನಿವಾರಣೆಯಾಗುವುದು.

೨೦. ಚಿಟ್ಟೆರಳೆಣ್ಣೆ ೪॥ ಶೇರು, ನೆಲತಂಗಡಿಸೊಪ್ಪಿನ ರಸ ೧ ಪಾವು, ಅಮೃತಬಳ್ಳಿ ರಸ ೧ ಪಾವು, ಬಿಲ್ಪತ್ರೆಸೊಪ್ಪಿನ ರಸ ೧ ಪಾವು, ಅತ್ತಿಮರದ ಬೇರಿನ ರಸ ೧ ಪಾವು, ಚೇಳುಕೊಂಡಿಸೊಪ್ಪಿನ ರಸ ೧ ಪಾವು, ಕಿರುನೆಲ್ಲಿ ಸೊಪ್ಪಿನ ರಸ ೧ ಪಾವು, ತಾವರೆಗಡ್ಡೆ ರಸ ೧ ಪಾವು, ಆನೇನೆಗ್ಗಿಲು ಸಮೂಲದ ರಸ ೧ ಪಾವು, ಲೋಳಿಸರದ ಪಟ್ಟೆಯಲ್ಲಿರುವ ತೊಳೆಯನ್ನು ಶುಭ್ರವಾಗಿ ತೊಳೆದ ರಸ ೧ ಪಾವು, ನಿಂಬೇಹಣ್ಣಿನ ರಸ ೧ ಶೇರು, ಬಿಳೇಈರುಳ್ಳಿ ರಸ ॥ ಶೇರು, ಇದಕ್ಕೆ ಕಲ್ಕದ್ರವ್ಯ:—ಅತಿಮಧುರ ೧ ತೊಲೆ, ಚಂಗಲಕೋಷ್ಟ ೧ ತೊಲೆ, ಕರ್ಕಾಟಕಶೃಂಗಿ ೧ ತೊಲೆ, ತುಂಗೇಗಡ್ಡೆ ೧ ತೊಲೆ, ಬಿಳೀಜೀರಿಗೆ ೨ ತೊಲೆ, ಮರದರಿಸಿನ ೧ ತೊಲೆ, ಕಸ್ತೂರಿ ಅರಿಸಿನ ೧ ತೊಲೆ, ಅಳಲೇಕಾಯಿ ಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೩ ತೊಲೆ ಇವುಗಳನ್ನು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಎಲ್ಲವನ್ನೂ ಶೇರಿಸಿ ಪಕ್ವವಾಗಿ ಎಣ್ಣೆ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆಯಷ್ಟು ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡಬೇಕು. ಈರೀತಿ ೭ ದಿನ ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಸಕಲ ಪ್ರಮೇಹ, ಮೂತ್ರಕೃಚ್ಛ್ರ, ಉರಿಮೂತ್ರ, ಸಿಕ್ಕುಮೂತ್ರ, ಕೈಕಾಲ್ಗಳಸೆಳೆತ ನಿವಾರಣೆಯಾಗುವುದು.

## ಮೇಹರತ್ನಾಕರ ಎಣ್ಣೆ.

೨೧. ಚಿಟ್ಟೆರಳೆಣ್ಣೆ ೬ ಶೇರು, ಬಾಳೇಗಡ್ಡೆ ರಸ ೧ ಪಾವು, ಅತ್ತೀಮರದ ಬೇರಿನ ರಸ ೧ ಶೇರು, ಎಳನೀರು ೧ ಶೇರು, ಮಂದೆಲಗದ ರಸ ॥ ಶೇರು, ಹೊಮ್ಮುಗಳಿರಸ ೧ ಪಾವು, ಗಾಂಧಾರಿಸೊಪ್ಪಿನ ರಸ ೧ ಪಾವು, ಕೆರೇಹಿಪ್ಪಲಿ ಸೊಪ್ಪಿನ ರಸ ॥ ಶೇರು, ಚಿಟ್ಟಾಮುಟ್ಟೆ ರಸ ೧ ಪಾವು, ಚಂದ್ರಕಾಂತಿ ರಸ ೧ ಪಾವು, ಸೂರ್ಯಕಾಂತಿ ರಸ ೧ ಪಾವು, ಕಿರುನೆಲ್ಲಿಸೊಪ್ಪಿನ ರಸ ॥ ಶೇರು, ಶೀತೊಂಡೇಸೊಪ್ಪಿನ ರಸ ೧ ಪಾವು, ಕಾಚೀಸೊಪ್ಪಿನ ರಸ ॥ ಶೇರು, ಇದಕ್ಕೆ ಕಲ್ಕದ್ರವ್ಯ:—ತಾವರೇಹುವ್ವಿನ ಕುಸುಮ ೨ ತೊಲೆ, ಹಿಪ್ಪಲಿ ೧ ತೊಲೆ, ಮೋಡಿ ೧ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಲವಂಗ ೧ ತೊಲೆ, ವಾಯುವಿಳಂಗ ೨ ತೊಲೆ, ಬಿಳೀಜೀರಿಗೆ ೧ ತೊಲೆ, ಕರೇಜೀರಿಗೆ ೧ ತೊಲೆ ಇವುಗಳನ್ನು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಕುಂಕುಮಕೇಸರಿ ॥ ತೊಲೆ ಖಲ್ವದಲ್ಲಿ ಹಾಕಿ ನೀರುಹಾಕಿ ಅರೆದು ಎಲ್ಲವನ್ನೂ ಶೇರಿಸಿ ಪಕ್ವವಾಗಿ ಎಣ್ಣೆ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿ

ದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಹೀಗೆ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಸಕಲ ಪ್ರಮೇಹ, ಕೀಲುವಾಯು, ಗರ್ಭದಯಟ್ಟೆ, ಮೇಹ ಶೂಲೆ, ಶರೀರದಮೇಲೆ ಹರಡುವ ಪೊಡೆ (ಮಚ್ಚೆ), ಕರ್ಣಶೂಲೆ, ತಲೆಶೂಲೆ, ಕೈಕಾಲು ಛಳುಕು, ಮರ್ಮಸ್ಥಾನದ ಹುಣ್ಣು, ಯೋನಿಹುಣ್ಣು ನಿವಾರಣೆ ಆಗುವುದು.

೨೨. ಚಿಟ್ಟೆರಳೆಣ್ಣೆ ೫ ಶೇರು, ಅಂಕೋಲಲದಚಕ್ಕೆ ೩ ತೊಲೆ, ಚೇಗೊಡತಿ ಬೇರಿನಚಕ್ಕೆ ೩ ತೊಲೆ, ಕಾಡುಕುಂಬಳಗಡ್ಡೆ ೩ ತೊಲೆ, ನೆಲತಂಗಡಿಸಮೂಲ ೩ ತೊಲೆ, ನೆಲಗೊರಮಿಡಿ ೩ ತೊಲೆ, ಶುದ್ಧಿಮಾಡಿದ ಪರಂಗಿಚಕ್ಕೆ ೩ ತೊಲೆ, ಚಿಕ್ಕದಾಗಿ ಬೆಳಿಯುವ ಬೇಲದಗಿಡದಚಕ್ಕೆ ೩ ತೊಲೆ, ಕರೇಜೀರಿಗೆ ೩ ತೊಲೆ, ಇವುಗಳನ್ನು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲ ಶೋಧಿಸಿ ಕೊಳ್ಳುವುದು. ಯಲುವಸಂಧಿಸೊಪ್ಪಿನ ರಸ ೨ ಶೇರು, ಹಂಸಪಾದಿಸೊಪ್ಪಿನ ರಸ ೨ ಶೇರು, ವಂದೆಲಗದಸೊಪ್ಪಿನ ರಸ ೨ ಶೇರು, ಬಿಳೀಈರುಳ್ಳಿ ರಸ ೨ ಶೇರು, ಆಕಾಶಗರುಡನಗಡ್ಡೆ ರಸ ೨ ಶೇರು, ಲೋಳಿಸರದ ಪಟ್ಟೆಯಲ್ಲಿರುವ ತೊಳೆಯನ್ನು ಶುಭ್ರವಾಗಿ ತೊಳೆದ ರಸ ೨ ಶೇರು, ಎಲ್ಲವನ್ನೂ ಶೇರಿಸಿ ಪಕ್ವ ವಾಗಿ ಎಣ್ಣೆ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಹೀಗೆ ೭ ದಿವಸ ಕೊಡ ಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಮಸ್ತ ಮೇಹಗಳೂ ನಿವಾರಣೆಯಾಗುವುವು.

## ತಂಪಿನ ಎಣ್ಣೆ.

೨೩. ಚಿಟ್ಟೆರಳೆಣ್ಣೆ ೩ ಶೇರು, ಬಿಳೀಈರುಳ್ಳಿ ರಸ ೧ ಶೇರು, ಹೊನಗೊನೆ ಸೊಪ್ಪಿನ ರಸ ೧ ಪಾವು, ಕೆರೇಹಿಪ್ಪಲಿಸೊಪ್ಪಿನ ರಸ ೧ ಪಾವು, ಲೋಳಿಸರದ ಪಟ್ಟೆಯಲ್ಲಿರುವ ತೊಳೆಯನ್ನು ಶುಭ್ರವಾಗಿ ತೊಳೆದ ರಸ ೧ ಪಾವು, ನೆಲತಂಗಡಿ ಸೊಪ್ಪಿನ ರಸ ೧ ಪಾವು, ಇದಕ್ಕೆ ಕಲ್ಕದ್ರವ್ಯ:—ಜಟಾಮಾಂಸಿ ೧ ತೊಲೆ, ಅತಿಮಧುರ ೧ ತೊಲೆ, ಭೂಸಕ್ಕರೆಗಡ್ಡೆ ೨ ತೊಲೆ, ಮಜ್ಜಿಗೆಗಡ್ಡೆ ೨ ತೊಲೆ, ತುಂಗೇಗಡ್ಡೆ ೧ ತೊಲೆ, ಕಸ್ತೂರಿಅರಿಸಿನ ೨ ತೊಲೆ, ಬಿಳೇಜೀರಿಗೆ ೨ ತೊಲೆ, ಬಾಲಮೆಣಸು ೨ ತೊಲೆ, ಯಾಲಕ್ಕಿ ೧ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀ ಕಾಯಿ ೩ ತೊಲೆ, ಇವುಗಳನ್ನು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಎಲ್ಲವನ್ನೂ ಶೇರಿಸಿ ಪಕ್ವವಾಗಿ ಎಣ್ಣೆ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆ

ಯನ್ನು ಬಿಸಿನೀರಿನಲ್ಲಿ ಕೊಡುವುದು. ಹೀಗೆ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಪ್ರಮೇಹ, ಮೂತ್ರಕೃಚ್ಛ್ರ, ಉರಿಮೂತ್ರ, ಸಿಕ್ಕುಮೂತ್ರ ನಿವಾರಣೆ ಆಗುವುದು.

೨೪. ಚಿಟ್ಟೆರಳೆಣ್ಣೆ ೮ ಶೇರು, ನೀರುಮುಳ್ಳಿಸೊಪ್ಪಿನ ರಸ ೧ ಪಾವು, ಮುಲ್ಲಂಗಿಸೊಪ್ಪಿನ ರಸ ೧ ಪಾವು, ಅಮೃತಬಳ್ಳಿ ರಸ ॥ ಶೇರು, ಬುಡ್ಡಹಾಗಲ ಸೊಪ್ಪಿನ ರಸ ೧ ಶೇರು, ಎಳನೀರು ೨ ಶೇರು, ನೆಲತಂಗಡಿಸೊಪ್ಪಿನ ರಸ ೧ ಶೇರು, ತಾಳೇಮೊಲೆ ರಸ ॥ ಶೇರು, ಹಸುವಿನಹಾಲು ೧ ಶೇರು, ಲೋಳೆಸರದ ರಸ ॥ ಶೇರು, ಶೀತೊಂಡೇಸೊಪ್ಪಿನ ರಸ ॥ ಶೇರು, ಬಿಳೇಈರುಳ್ಳಿ ರಸ ೧ ಪಾವು, ಇದಕ್ಕೆ ಕಲ್ಕದ್ರವ್ಯ:—ಶುದ್ಧಿಮಾಡಿದ ಪರಂಗಿಚಕ್ಕೆ ೬ ತೊಲೆ, ಯಾಲಕ್ಕಿ ೧ ತೊಲೆ, ಬಾಲಮೆಣಸು ೧ ತೊಲೆ, ಮೆಣಸು ॥ ತೊಲೆ, ಶುಂಠಿ ॥ ತೊಲೆ, ಬಿಳೇಜೀರಿಗೆ ೧ ತೊಲೆ, ಇವುಗಳನ್ನು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಎಲ್ಲವನ್ನೂ ಶೇರಿಸಿ ಪಕ್ವವಾಗಿ ಎಣ್ಣೆ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆ ಯನ್ನು ಬಿಸಿನೀರಿನಲ್ಲಿ ಕೊಡುವುದು. ಹೀಗೆ ೭ ದಿವಸ ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಸಕಲ ಪ್ರಮೇಹ, ಮೂತ್ರಕೃಚ್ಛ್ರ, ಉರಿಮೂತ್ರ, ಸಿಕ್ಕುಮೂತ್ರ ನಿವಾರಣೆ ಆಗುವುದು.

೨೫. ಚಿಟ್ಟೆರಳೆಣ್ಣೆ ೨ ಶೇರು, ಹೊಂಗೇಚಕ್ಕೆ ರಸ ೧ ಪಾವು, ಬೇವಿನ ಚಕ್ಕೆ ರಸ ೧ ಪಾವು, ಹೂವರಸಿಚಕ್ಕೆ ರಸ ೧ ಪಾವು, ಅರಳೀಚಕ್ಕೆ ರಸ ೧ ಪಾವು, ತೀಟಿಗಡ್ಡೆ (ಇದು ಬೆಳ್ಳುಳ್ಳಿಯಂತೆ ಇರುತ್ತದೆ ಮುಂಗಾರು ಮಳೆಯಲ್ಲಿ ಹೊಲಗಳಲ್ಲಿ ಬೆಳೆಯುತ್ತದೆ) ಇದರ ರಸ ೧ ಪಾವು, ಚುರಚುರಕಿಸೊಪ್ಪಿನ ರಸ ೧ ಪಾವು, ಹೇರಳೆಹಣ್ಣಿನ ರಸ ೧ ಪಾವು, ಮಾದವಾಳದಹಣ್ಣಿನ ರಸ ೧ ಪಾವು, ಯಾಲಕ್ಕಿ ೩ ತೊಲೆ, ಶುಂಠಿ ೬ ತೊಲೆ ಎಲ್ಲವನ್ನೂ ಶೇರಿಸಿ ಪಕ್ವವಾಗಿ ಎಣ್ಣೆ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಹೀಗೆ ೭ ದಿವಸ ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಸಮಸ್ತ ಮೇಹಗಳೂ ನಿವಾರಣೆ ಆಗುವುವು.

೨೬. ಚಿಟ್ಟೆರಳೆಣ್ಣೆ ೭ ಶೇರು, ಎಳನೀರು ೪, ಬುಡ್ಡಹಾಗಲಸೊಪ್ಪಿನ ರಸ ೨ ಶೇರು, ತೊಟ್ಲಸೊಪ್ಪಿನ ರಸ ೧ ಶೇರು, ತಾಟಕಲ್ಲುಸಕ್ಕರೆ ೩ ಶೇರು, ಇದಕ್ಕೆ ಕಲ್ಕದ್ರವ್ಯ:—ಶುಂಠಿ ೧ ತೊಲೆ, ಮೆಣಸು ॥ ತೊಲೆ, ಬಿಳೇಜೀರಿಗೆ ೧ ತೊಲೆ, ಕರೇಜೀರಿಗೆ ೧ ತೊಲೆ, ಕಲ್ಲುಸಾರು ೨ ತೊಲೆ, ಲವಂಗ ೧ ತೊಲೆ, ಯಾಲಕ್ಕಿ ೩ ತೊಲೆ, ಜಾಕಾಯಿ ೨ ತೊಲೆ, ಜಾಪತ್ರೆ ೨ ತೊಲೆ, ತಾಳೀಸಪತ್ರೆ ೪ ತೊಲೆ,

ಸೊಗದೇಬೇರು ೪ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳಬೇಕು. ಕುಂಕುಮಕೇಸರಿ ೧ ಆಣೆ ತೂಕ ಖಲ್ವದಲ್ಲಿ ಹಾಕಿ ನೀರುಹಾಕಿ ಅರೆದು ಪಚ್ಚಕರ್ಪೂರ ‖ ತೊಲೆ ಹಾಕಿ ಎಲ್ಲವನ್ನೂ ಶೇರಿಸಿ ಪಕ್ವವಾಗಿ ಎಣ್ಣೆ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಹೀಗೆ ೭ ದಿವಸ ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಪ್ರಮೇಹ, ಮೂತ್ರಕೃಚ್ಛ್ರ, ಉರಿಮೂತ್ರ ನಿವಾರಣೆ ಆಗುವುದು.

೨೭. ಚಿಟ್ಟೆರಳೆಣ್ಣೆ ೭ ಶೇರು, ಕರೇಹತ್ತಿಸೊಪ್ಪಿನ ರಸ ೧ ಶೇರು, ಗರುಗದ ಸೊಪ್ಪಿನ ರಸ ‖ ಶೇರು, ತಾಟಕಲ್ಲುಸಕ್ಕರೆ ೬ ತೊಲೆ, ಇದಕ್ಕೆ ಕಲ್ಕದ್ರವ್ಯ:—ಹಸೀ ತಂಗಡಿಗಿಡದ ಬೊಬ್ಬಡೆ ೪ ಶೇರು, ಕಲ್ಲುನಾರು ೨ ತೊಲೆ, ಯಾಲಕ್ಕಿ ೨ ತೊಲೆ, ಜಾಪತ್ರೆ ೨ ತೊಲೆ, ಜಾಕಾಯಿ ೨ ತೊಲೆ, ಲವಂಗ ೨ ತೊಲೆ, ಬಾಲ ಮೆಣಸು ೪ ತೊಲೆ, ಪೊಪ್ಪಳಿಚಕ್ಕೆ ೨ ತೊಲೆ, ಕರೇಜೀರಿಗೆ ೧ ತೊಲೆ, ಬಿಳೀಜೀರಿಗೆ ೨ ತೊಲೆ ಇವುಗಳನ್ನು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡು ಎಲ್ಲವನ್ನೂ ಶೇರಿಸಿ ಎಣ್ಣೆಯನ್ನು ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಹೀಗೆ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಪ್ರಮೇಹ, ಕೀಲುವಾಯು, ಮೇಹವಾಯು, ಹೊಟ್ಟೆನೋವು ನಿವಾರಣೆ ಆಗುವುದು.

೨೮. ಚಿಟ್ಟೆರಳೆಣ್ಣೆ ೨‖ ಶೇರು, ಹೂವರಸಿಕಾಯಿನ ರಸ ೧ ಶೇರು, ಬಿಳೇ ಈರುಳ್ಳಿ ರಸ ೧ ಶೇರು, ಇದಕ್ಕೆ ಕಲ್ಕದ್ರವ್ಯ:—ಬಾವಂಚಿಬೀಜ ‖ ಶೇರು, ಬಿಳೀಜೀರಿಗೆ ೧ ತೊಲೆ, ಕರೇಜೀರಿಗೆ ‖ ತೊಲೆ, ಕಸ್ತೂರಿಅರಿಸಿನ ೨ ತೊಲೆ, ಮರದರಿಸಿನ ೨ ತೊಲೆ, ಲಾವಂಚ ೨ ತೊಲೆ, ಅತಿಮಧುರ ೧ ತೊಲೆ, ಚಂಗಲ ಕೋಷ್ಟ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡು ಎಲ್ಲವನ್ನೂ ಶೇರಿಸಿ ಎಣ್ಣೆಯನ್ನು ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಹೀಗೆ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಸಕಲ ಪ್ರಮೇಹ, ಮೂತ್ರಕೃಚ್ಛ್ರ, ಉರಿಮೂತ್ರ ನಿವಾರಣೆ ಆಗುವುದು.

## ಬ್ರಹ್ಮದಂಡಿ ಎಣ್ಣೆ.

೨೯. ಚಿಟ್ಟೆರಳೆಣ್ಣೆ ೩ ಶೇರು, ಬ್ರಹ್ಮದಂಡಿಸಮೂಲದ ರಸ ೧ ಶೇರು, ಬಿಳೀಈರುಳ್ಳಿ ರಸ ೧ ಶೇರು, ಇದಕ್ಕೆ ಕಲ್ಕದ್ರವ್ಯ:—ಬಿಳೀಜೀರಿಗೆ ೨ ತೊಲೆ,

ಅತಿಮಧುರ ೨ ತೊಲೆ, ಮೆಂತ್ಯ ೧ ಪಾವು, ಗಂಟುಭಾರಂಗಿ ೩ ತೊಲೆ, ಶುಂಠಿ ೨ ತೊಲೆ, ಹಿಪ್ಪಲಿ ೨ ತೊಲೆ, ಮೆಣಸು ೨ ತೊಲೆ, ಸಣ್ಣರಾಸ್ಮೆ ೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡು ಎಲ್ಲವನ್ನೂ ಶೇರಿಸಿ ಎಣ್ಣೆಯನ್ನು ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಹೀಗೆ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಸಕಲ ಪ್ರಮೇಹ, ಮೂತ್ರಕೃಚ್ಛ್ರ, ಉರಿಮೂತ್ರ, ಕೀಲುವಾಯು, ಮೈಮೇಲೆ ಹರಡುವ ಪೊಡೆ (ಮಚ್ಚೆ) ನಿವಾರಣೆ ಆಗುವುದು.

## ಹಾವುಮೆಕ್ಕೇಕಾಯಿ ಎಣ್ಣೆ.

೩೦. ಚಿಟ್ಟರಳೆಣ್ಣೆ ೩ ಶೇರು, ಹೊನಗೊನೆಸೊಪ್ಪಿನ ರಸ ಕಾಲುಶೇರು, ಗರುಗದಸೊಪ್ಪಿನ ರಸ ಕಾಲುಶೇರು, ಬಿಳೇಈರುಳ್ಳಿ ರಸ ಕಾಲುಶೇರು, ಹಾವುಮೆಕ್ಕೇಕಾಯಿನ ರಸ ಕಾಲುಶೇರು, ಎಳನೀರು ೨, ವಂದೆಲಗದಸೊಪ್ಪಿನ ರಸ ಕಾಲುಶೇರು, ಕೆರೆಹಿಪ್ಪಲಿಸೊಪ್ಪಿನ ರಸ ಕಾಲುಶೇರು, ಇದಕ್ಕೆ ಕಲ್ಕದ್ರವ್ಯ:—ಶುದ್ಧಿಮಾಡಿದ ಪರಂಗಿಚಕ್ಕೆ ೪ ತೊಲೆ, ಜಟಾಮಾಂಸಿ ೧ ತೊಲೆ, ವಾಯುವಿಳಂಗ ೧ ತೊಲೆ, ಚಂಗಲಕೋಷ್ಟ ೧ ತೊಲೆ, ಬಿಳೇಜೀರಿಗೆ ೧ ತೊಲೆ, ಕರೇಜೀರಿಗೆ ೧ ತೊಲೆ, ಖುರಾಸಾನಿವೋಮ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡು ಎಲ್ಲವನ್ನೂ ಶೇರಿಸಿ ಎಣ್ಣೆಯನ್ನು ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಹೀಗೆ ೩-೫-೭ ದಿನಗಳು ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಮೇಹಪೊಡೆಗಳು, ಮೇಹಛಳುಕು, ಕೀಲುವಾಯುನೋವು, ತಲೆಶೂಲೆ, ತಲೆಹುಣ್ಣು, ಮರ್ಮಸ್ಥಾನದ ಹುಣ್ಣು ನಿವಾರಣೆ ಆಗುವುದು.

## ಕೇಸರಿ ಹಾವುಮೆಕ್ಕೇಕಾಯಿ ಎಣ್ಣೆ.

೩೧. ಚಿಟ್ಟರಳೆಣ್ಣೆ ೪ ಶೇರು, ಹಾವುಮೆಕ್ಕೇಕಾಯಿನ ರಸ ೧ ಶೇರು, ಬಿಳೇಈರುಳ್ಳಿ ರಸ ೧ ಶೇರು, ನಿಂಬೇಹಣ್ಣಿನ ರಸ ೧ ಶೇರು, ಎಳನೀರು ೧ ಶೇರು, ಮೆಂತ್ಯ ಕಾಲುತೊಲೆ, ಲವಂಗ ಕಾಲುತೊಲೆ, ಕುಂಕುಮಕೇಸರಿ ಕಾಲುತೊಲೆ ಎಲ್ಲವನ್ನೂ ಶೇರಿಸಿ ಎಣ್ಣೆಯನ್ನು ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ಅರ್ಧತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಹೀಗೆ ೩-೫-೭ ದಿನಗಳು ತೆಗೆದುಕೊಳ್ಳುವುದು. ಇದರಿಂದ ಗುಣ:—ಹಳೇಕೀಲುವಾಯು, ಮೇಹಛಳುಕು, ಪೊಡೆಗಳು, ಕುರುಗಳು, ಮೇಹಗಂಟು, ಕಜ್ಜಿ, ಮೇಹ

ಸಂಬಂಧವಾದ ಎಲ್ಲಾ ತರಹದ ರೋಗಗಳು ನಿವಾರಣೆಯಾಗಿ ರಕ್ತಶುದ್ಧಿ ಆಗುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ.

## ಮೂಲಿಕಾ ಎಣ್ಣೆ.

೩೨. ಚಿಟ್ಟೆರಳೆಣ್ಣೆ ೪ ಶೇರು, ಬಿಳೇಕೊಮ್ಮೇಸೊಪ್ಪಿನ ರಸ ೧ ಪಾವು, ಹಳದಿಬಣ್ಣದ ಮುಳ್ಳುದತ್ತೂರಿಸೊಪ್ಪಿನ ರಸ ೧ ಪಾವು, ಬಿಳೇಹಾಲುವಾಣದ ಸೊಪ್ಪಿನ ರಸ ೧ ಪಾವು, ಬಿಳೇವುಗನಿಹಂಬುಸೊಪ್ಪಿನ ರಸ ೧ ಪಾವು, ಬಿಳೇ ಗುಳ್ಳದಸೊಪ್ಪಿನ ರಸ ೧ ಪಾವು, ಕರೇಲಕ್ಕಲಿಸೊಪ್ಪಿನ ರಸ ೧ ಪಾವು, ಕಾಡು ಮೆಣಸಿಗೆಸೊಪ್ಪಿನ ರಸ ೧ ಪಾವು, ಯಳಚಿಸೊಪ್ಪಿನ ರಸ ೧ ಪಾವು, ಗಜ್ಜುಗದ ಸೊಪ್ಪಿನ ರಸ ೧ ಪಾವು, ತೊಟ್ಟಲಿಸೊಪ್ಪಿನ ರಸ ೧ ಪಾವು, ಇದಕ್ಕೆ ಕಲ್ಕ ದ್ರವ್ಯ:—ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀ ಕಾಯಿ ೩ ತೊಲೆ, ಶುಂಠಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಲವಂಗ ೧ ತೊಲೆ, ಲವಂಗಪತ್ರೆ ೧ ತೊಲೆ, ಯಾಲಕ್ಕಿ ೧ ತೊಲೆ, ಗಂಟುಭಾರಂಗಿ ೧ ತೊಲೆ, ಬಿಳೇಜೀರಿಗೆ ೧ ತೊಲೆ, ತುಂಗೇಗಡ್ಡೆ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವ ಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡು ಎಲ್ಲವನ್ನೂ ಶೇರಿಸಿ ಎಣ್ಣೆಯನ್ನು ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃ ಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಹೀಗೆ ೫-೭ ದಿನ ಗಳು ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಮೂತ್ರಕಟ್ಟೆಯಿರುವುದು, ಮಲಕಟ್ಟೆಯಿರುವುದು, ಮೈ ಮೇಲಿನ ಚಟ್ಟೆಗಳು, ಕುರುಗಳು ರಕ್ತ ಕೆಟ್ಟುಹೋಗಿರುವುದು, ಮೈತುರಿ, ಉರಿ ಮೂತ್ರ, ಮೂತ್ರಕೃಚ್ಛ್ರ, ಮೈಮೇಲೆಯೇಳುವ ಬೊಬ್ಬೆಗಳು, ಕೀಲುವಾಯು, ಛಳುಕು ನಿವಾರಣೆ ಆಗುವುದು.

## ಅರಿಸಿನದ ಹಾವುಮೆಕ್ಕೇಕಾಯಿ ಎಣ್ಣೆ.

೩೩. ಚಿಟ್ಟೆರಳೆಣ್ಣೆ ೫ ಶೇರು, ಬಿಳೇಈರುಳ್ಳಿ ರಸ ೧ ಶೇರು, ಹಸೀಅರಿಸಿನದ ರಸ ೧ ಶೇರು, ಹಾವುಮೆಕ್ಕೇಕಾಯಿ ರಸ ೨ ಶೇರು, ಇವುಗಳಿಗೆ ಕಲ್ಕದ್ರವ್ಯ:— ಚಿಟ್ಟಾಮುಟ್ಟಿ ೨ ತೊಲೆ, ಪೇರಾಮುಟ್ಟಿ ೨ ತೊಲೆ, ಗಂಟುಭಾರಂಗಿ ೨ ತೊಲೆ, ವಾಯುವಿಳಂಗ ೨ ತೊಲೆ, ಮರದರಿಸಿನ ೨ ತೊಲೆ, ಕಸ್ತೂರಿ ಅರಿಸಿನ ೨ ತೊಲೆ, ತುಂಗೇಗಡ್ಡೆ ೨ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಲವಂಗ ೧ ತೊಲೆ, ಬಿಳೇಜೀರಿಗೆ ೧ ತೊಲೆ, ಕರೇಜೀರಿಗೆ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡು ಎಲ್ಲವನ್ನೂ ಶೇರಿಸಿ ಎಣ್ಣೆಯನ್ನು ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು.

ಹೀಗೆ ೩-೫-೭ ದಿನಗಳು ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಕೀಲುವಾಯು, ಕೀಲುನೋವು, ಮೂತ್ರಕೋಶದರೋಗ, ಹೊಟ್ಟೇನೋವು, ಚರ್ಮಗತವಾದ ಎಲ್ಲಾ ರೋಗಗಳು ನಿವಾರಣೆ ಆಗುವುವು.

೩೪. ಚಿಟ್ಟೆರಳೆಣ್ಣೆ ೨೦ ಶೇರು, ಗರುಗದಸೊಪ್ಪಿನ ರಸ ೧ ಪಾವು, ಬಿಳೇ ಹಾಲುವಾಣದಸೊಪ್ಪಿನ ರಸ ೧ ಪಾವು, ಶೀತೊಂಡೇಸೊಪ್ಪಿನ ರಸ ೧ ಪಾವು, ಗಜ್ಜುಗದಸೊಪ್ಪಿನ ರಸ ೧ ಪಾವು, ತೊಟ್ಲೆಸೊಪ್ಪಿನ ರಸ ೧ ಪಾವು, ಚುರಚುರಿಕಿನಸೊಪ್ಪಿನ ರಸ ೧ ಪಾವು, ಕಾಡುಮೆಣಸಿಗೇಸೊಪ್ಪಿನ ರಸ ೧ ಪಾವು, ಹೊನಗೊನೆಸೊಪ್ಪಿನ ರಸ ೧ ಪಾವು, ಬಿಳೇವುಗನಿಹಂಬು ರಸ ೧ ಪಾವು, ಮುಳ್ಳುದತ್ತೂರಿಸೊಪ್ಪಿನ ರಸ ೧ ಪಾವು, ಬಿಳೇಕೊಮ್ಮೆಸೊಪ್ಪಿನ ರಸ ೧ ಪಾವು, ನೆಲ್ಲೀಕಾಯಿಸೊಪ್ಪಿನ ರಸ ೧ ಪಾವು, ಕುಪ್ಪೇಸೊಪ್ಪಿನ ರಸ ೧ ಪಾವು, ಶೀಗೇಸೊಪ್ಪಿನ ರಸ ೧ ಪಾವು, ಯುಳಚೀಸೊಪ್ಪಿನ ರಸ ೧ ಪಾವು, ಉಪ್ಪೇಸೊಪ್ಪಿನ ರಸ ೧ ಪಾವು, ಕಿರುನೆಲ್ಲಿಸೊಪ್ಪಿನ ರಸ ೧ ಪಾವು, ಹಾವುಮೆಕ್ಕೇಕಾಯಿ ರಸ ॥ ಶೇರು, ಹಸುವಿನಹಾಲು ೧॥ ಶೇರು, ಬಿಳೇಈರುಳ್ಳಿ ರಸ ೧ ಶೇರು, ಲೋಳೆಸರದ ತಿರಳು ನೀರು ೧ ಶೇರು, ಹೂವರಸಿಮರದ ಚಕ್ಕೆ ೩ ತೊಲೆ, ಚಿತ್ರಮೂಲದಬೇರುಚಕ್ಕೆ ೭ ತೊಲೆ ಎಲ್ಲವನ್ನೂ ಶೇರಿಸಿ ಎಣ್ಣೆಯನ್ನು ಪಕ್ವವಾಗಿ ಕಾಯಿಸಿಕೊಳ್ಳುವುದು, ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಹೀಗೆ ೭ ದಿನಗಳು ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಅಸಾಧ್ಯವಾದ ಹುಣ್ಣು, ಕೀಲುವಾಯು, ಮೇಹವಾಯು, ಕುಷ್ಠ, ಕುರು, ಕಜ್ಜಿ ನಿವಾರಣೆ ಆಗುವುದು.

## ಮೇಘನಾದ ಎಣ್ಣೆ.

೩೫. ಹೊಗೆಸೊಪ್ಪಿನ ಸಣ್ಣಕಡ್ಡಿ ೧॥ ತೊಲೆ ಇದು ಕುಟ್ಟಿ ನೀರು ಹಾಕಿ ಕಿವಚಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಶುದ್ಧಿಮಾಡಿದ ಜಾಪಾಳ ೧॥ ತೊಲೆ, ಶುದ್ಧಿಮಾಡಿದ ಇಂಗಳೀಕ ।।। ತೊಲೆ, ಶುದ್ಧಿಮಾಡಿದ ರಸಕರ್ಪೂರ ।।। ತೊಲೆ, ಶುದ್ಧಿಮಾಡಿದ ಮಣಿಸಿಲೆ ।।। ತೊಲೆ, (ಶುದ್ಧಿಮಾಡಿದ ಹವಳಸರಿಗಂಧಕ ।।। ತೊಲೆ, ಶುದ್ಧಿಮಾಡಿದ ಪಾದರಸ ।।। ತೊಲೆ, ಮೊದಲು ಹವಳಸರಿಗಂಧಕವನ್ನು ಖಲ್ವದಲ್ಲಿ ಅರೆದು ಅನಂತರ ಪಾದರಸವನ್ನು ಶೇರಿಸಿ ಅರೆದುಕೊಳ್ಳುವುದು), ಶುದ್ಧಿಮಾಡಿದ ಸವ್ವೀರ ।।। ತೊಲೆ, ಪೆಟ್ಲುಪ್ಪು ।।। ತೊಲೆ, ತಿನ್ನುವ ಉಪ್ಪು ।।। ತೊಲೆ, ಪಟಿಕೆ ।।। ತೊಲೆ, ಸೈಂಧವಲವಣ ।।। ತೊಲೆ, ಬಿಡಾಲವಣ ।।। ತೊಲೆ, ಶುದ್ಧಿಮಾಡಿದ ಎಣ್ಣೆಬಿಳಗಾರ ಅರಳುಮಾಡಿದ್ದು ।।। ತೊಲೆ, ಮೇಲ್ಕಂಡ ಜಿನಸು ಪ್ರತಿಯೊಂದೂ ಖಲ್ವದಲ್ಲಿ ಹಾಕಿ ಬೇರೆಬೇರೆ ಅರೆದುಕೊಳ್ಳುವುದು. ಶುಂಠಿ ೧॥ ತೊಲೆ ಮೆಣಸು ೧॥ ತೊಲೆ, ಆಳಲೇಕಾಯಿಸಿಪ್ಪೆ

೧|| ತೊಲೆ, ಚಿತ್ರಮೂಲದ ತೊಗಟೆಸಹಿತ ೬ ತೊಲೆ, ಜುಟ್ಟುವೇಸೊಪ್ಪಿನ ರಸ ೨ ಶೇರು, ದಿನಸುಗಳೆಲ್ಲವನ್ನೂ ಜುಟ್ಟುವೇಸೊಪ್ಪಿನ ರಸದಿಂದ ಅರಿಯುವುದು. ಚಿಟ್ಟರಳೆಣ್ಣೆ ೩ ಶೇರು, ಎಲ್ಲವನ್ನೂ ಶೇರಿಸಿ ಎಣ್ಣೆಯನ್ನು ಪಕ್ವವಾಗಿ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಎಣ್ಣೆಯನ್ನು ೧ ಶೀಸೆಯಲ್ಲಿ ಹಾಕಿ ಬಿರಟೆಹಾಕಿ ಧಾನ್ಯಪುಟದಲ್ಲಿ ೧೦ ದಿನ ಇಟ್ಟು ತೆಗೆದು ಉಪಯೋಗಿಸುವುದು. ಪ್ರತಿದಿನ ಪ್ರಾತಃಕಾಲ ಕಾಲುತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ೩ ದಿನ ಕೊಡುವುದು. ಸಪ್ಪೆಅನ್ನ ಪಥ್ಯ ನಂತರ ೩ ದಿನ ಹಸುವಿನತುಪ್ಪ ಅನ್ನ ಪಥ್ಯ ೭ನೇ ದಿನ ಮೈಗೆ ಬಿಸಿನೀರು ಸ್ನಾನಮಾಡಿ ಪಥ್ಯ ಬಿಡಬೇಕು. ಇದರಿಂದ ಗುಣ:—ಸಿಕತಾಮೇಹ, ಟಾಕಿ, ಮೈಪೊಡೆಗಳು, ಕೈ ಕಪ್ಪಗೆ ಇರುವುದು, ಕಾಲು ಕಪ್ಪಗೆ ಇರುವುದು, ಹುಣ್ಣು, ಕುರು, ಕುಷ್ಠ ಮೊದಲಾದ ಕೆಟ್ಟರೋಗಗಳು ನಿವಾರಣೆ ಆಗುವುವು. ಕುಷ್ಠ ಮತ್ತು ಪೊಡೆಗಳು ಇವುಗಳಿಗೆ ಈ ಎಣ್ಣೆಯನ್ನು ಮೇಲೆ ಹಚ್ಚಬಹುದು.

೩೬. ಚಿಟ್ಟರಳೆಣ್ಣೆ ೪ ಶೇರು, ಕರೀಹತ್ತಿಸೊಪ್ಪಿನ ರಸ ೧ ಪಾವು, ಬಿಳೀ ಹಾಲುವಾಣದಸೊಪ್ಪಿನ ರಸ ೧ ಪಾವು, ಗರುಗದ ಸೊಪ್ಪಿನ ರಸ ೧ ಪಾವು, ಅಮೃತಬಳ್ಳಿ ರಸ ೧ ಪಾವು, ಲೋಳೀಸರದ ರಸ ೧ ಪಾವು, ಜುಟ್ಟುವೇಸೊಪ್ಪಿನ ರಸ ೧ ಪಾವು, ಶುದ್ಧಿಮಾಡಿದ ಇಂಗಳೀಕ || ತೊಲೆ, ಶುದ್ಧಿಮಾಡಿದ ರಸ ಸಿಂಧೂರ || ತೊಲೆ, ಶುದ್ಧಿಮಾಡಿದ ರಸಕರ್ಪೂರ || ತೊಲೆ, (ಶುದ್ಧಿಮಾಡಿದ ಹವಳಸರಿಗಂಧಕ ೨ ತೊಲೆ, ಶುದ್ಧಿಮಾಡಿದ ಪಾದರಸ || ತೊಲೆ, ಮೊದಲು ಹವಳಸರಿಗಂಧಕವನ್ನು ಖಲ್ವದಲ್ಲಿ ಹಾಕಿ ಅನಂತರ ಪಾದರಸವನ್ನು ಶೇರಿಸಿ ಅರೆದುಕೊಳ್ಳುವುದು.) ಮೇಲ್ಕಂಡ ಪ್ರತಿಯೊಂದು ದಿನಸು ಬೇರೆಬೇರೆ ಅರೆದು ಇಟ್ಟುಕೊಳ್ಳುವುದು. ಶುದ್ಧಿಮಾಡಿದ ಜಾಪಾಳ ೧|| ತೊಲೆ ಖಲ್ವದಲ್ಲಿ ಅರೆದು ಎಲ್ಲವನ್ನೂ ಶೇರಿಸಿ ಎಣ್ಣೆಯನ್ನು ಪಕ್ವವಾಗಿ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೨ ಆಣೆ ತೂಕ ಎಣ್ಣೆಯನ್ನು ಬಿಸಿ ನೀರಿನಲ್ಲಿ ಕೊಡುವುದು. ಹೀಗೆ ೩ ದಿನ ಕೊಡುವುದು. ಅನಂತರ ಮೈಗೆ ತುಪ್ಪ ಹಚ್ಚಿಕೊಂಡು ಬಿಸಿನೀರು ಸ್ನಾನಮಾಡುವುದು. ಇದೇರೀತಿ ಎಣ್ಣೆ ಯನ್ನು ೩ ದಿನ ಕೊಡುವುದು, ೩ ಧಿನ ಬಿಡುವುದು, ಈರೀತಿ ೨ ಸಲ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಮೇಹ, ಟಾಕಿ, ತೊಡೆಬಾಳೆ, ಫರಂಗಿಚಟ್ಟೆಗಳು, ಭಗಂದ್ರ, ಕುಷ್ಠ ಮೊದಲಾದ ಕೆಟ್ಟ ರೋಗಗಳು, ಹೆಂಗಸರ ಕುಸುಮರೋಗ ಕೆಂಪದೇ ಆಗಲಿ ಬಿಳೀದೇ ಆಗಲಿ ನಿವಾರಣೆ ಆಗುವುದು.

೩೭. ಚಿಟ್ಟರಳೆಣ್ಣೆ ೩ ಶೇರು, ಜಗಳಗಂಟೆಚಕ್ಕೆ ರಸ ೧ ಪಾವು, ಬಿಳೀಉಪ್ಪಿ ಬೇರಿನ ರಸ ೧ ಪಾವು, ಚಿಟ್ಟೆಯಿಂಗಳದ ಬೇರಿನ ರಸ ೧ ಪಾವು, ಚೇಗೊಡತಿ

ಸೊಪ್ಪಿನ ರಸ ೧ ಪಾವು, ವಿಷಮುದಾರಿಸೊಪ್ಪಿನ ರಸ ೧ ಪಾವು, ಹಂಸಪಾದಿ ಸೊಪ್ಪಿನ ರಸ ೧ ಪಾವು, ಬಿಳೇಈರುಳ್ಳಿ ರಸ ೧ ಪಾವು, ಗಜ್ಜಿಕಾಯಿಬೇರಿನ ರಸ ೧ ಪಾವು, ತಾಟಬೆಲ್ಲ ೧ ಪಾವು, ನೆಲತಂಗಡಿ ೧ ಪಾವು, ಜಾಕಾಯಿ ೨ ತೊಲೆ, ಜಾಪತ್ರೆ ೨ ತೊಲೆ, ಲವಂಗ ೨ ತೊಲೆ, ಯಾಲಕ್ಕಿ ೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಎಣ್ಣೆಯಲ್ಲಿ ಹಾಕಿ ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿ ದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಈರೀತಿ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ :—ಮೈಮೇಲೆ ಹರಡುವ ಪೊಡೆ (ಮಚ್ಚೆ), ಪ್ರಮೇಹ, ಮೂಲರೋಗ, ಗುಲ್ಮರೋಗ, ಮಲಬಂಧ, ವಾಯುನೋವು ನಿವಾರಣೆ ಆಗುವುದು.

### ಲೋಳೆಸರದ ತಂಪಿನ ಎಣ್ಣೆ.

೩೮. ಚಿಟ್ಟರಳೆಣ್ಣೆ ೩ ಶೇರು, ಬಿಳೇಈರುಳ್ಳಿ ರಸ ‖ ಶೇರು, ಲೋಳೆಸರದ ತಿರಳು ೨ ಶೇರು, ತಾಟ ಕಲ್ಲುಸಕ್ಕರೆ ೬ ತೊಲೆ, ಬಿಳೇಜೀರಿಗೆ ೩ ತೊಲೆ, ಕಲ್ಲುಸಾರು ೨ ತೊಲೆ, ಮೆಂತ್ಯ ೬ ತೊಲೆ, ಯಾಲಕ್ಕಿ ೧ ತೊಲೆ ಇವು ಎಲ್ಲವನ್ನೂ ಶೇರಿಸಿ ಎಣ್ಣೆಯನ್ನು ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಈರೀತಿ ೩-೫-೭ ದಿನ ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ :—ಉರಿಮೂತ್ರ, ಮೇಹಸಂಬಂಧವಾದ ಚಟ್ಟೆಗಳು, ಸಿಕತಾಮೇಹ, ಮೇಹಸಂಬಂಧ ಉಷ್ಣಗಳು ನಿವಾರಣೆ ಆಗುವುದು.

### ಮೇಹಪಂಚಾಮೃತ ಎಣ್ಣೆ.

೩೯. ಚಿಟ್ಟರಳೆಣ್ಣೆ ೨ ಶೇರು, ಗಂಡುಹೂವರಸಿಬೇರಿನಚಕ್ಕೆ ರಸ ೧ ಪಾವು, ಗಂಡುಹೂವರಸಿಕಾಯಿ ರಸ ೧ ಪಾವು, ಬೇವಿನಬೇರಿನಚಕ್ಕೆ ರಸ ೧ ಪಾವು, ಹೊಂಗೇಬೇರಿನಚಕ್ಕೆ ರಸ ೧ ಪಾವು, ನೆಲತಂಗಡಿ ಸಮೂಲದ ರಸ ೧ ಪಾವು, ಗಂಡುತಗಚೇಸೊಪ್ಪಿನ ರಸ ೧ ಪಾವು, ಇದಕ್ಕೆ ಕಲ್ಕ ದ್ರವ್ಯ :—ಶುದ್ಧಿಮಾಡಿದ ಪರಂಗಿಚಕ್ಕೆ ೧ ಶೇರು, ಶುಂಠಿ ೧ ಪಾವು, ಚಂಗಲಕೋಷ್ಠ ೨ ತೊಲೆ, ಬಾಲಮೆಣಸು ೨ ತೊಲೆ, ಕಹಿಪಡವಲ ೨ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೩ ತೊಲೆ, ತುಪ್ಪದ ದೇವದಾರು ೨ ತೊಲೆ, ಶ್ರೀಗಂಧದಚಕ್ಕೆ ೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಇವು ಎಲ್ಲವನ್ನೂ ಶೇರಿಸಿ ಎಣ್ಣೆಯನ್ನು ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಈರೀತಿ ೭ ದಿನಗಳು ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ :—ಪ್ರಮೇಹ, ಕೀಲುವಾಯು ನಿವಾರಣೆ ಆಗುವುದು.

೪೦. ಚಿಟ್ಟೆರಳೆಣ್ಣೆ ೨ ಶೇರು, ನೀರುಬೊಮ್ಮೆಸೊಪ್ಪಿನ ರಸ ೧ ಪಾವು, ಲೋಳಿಸರದ ರಸ ೧ ಪಾವು, ಬಿಳೇಈರುಳ್ಳಿ ರಸ ‖ ಶೇರು, ಬುಡ್ಡೆಹಾಗಲಸೊಪ್ಪಿನ ರಸ ‖ ಶೇರು, ಆಡುಸೋಗೆಸೊಪ್ಪಿನ ರಸ ೧ ಪಾವು, ಗರುಗದಸೊಪ್ಪಿನ ರಸ ೧ ಪಾವು, ವಂದೆಲಗಸೊಪ್ಪಿನ ರಸ ೧ ಪಾವು, ಇದಕ್ಕೆ ಕಲ್ಕದ್ರವ್ಯ:—ರೇವಲ ಚಿನ್ನಿ ೨ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೩ ತೊಲೆ, ತುಂಗೇಗಡ್ಡೆ ೨ ತೊಲೆ, ಮರದರಿಸಿನ ೨ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಇವು ಎಲ್ಲವನ್ನೂ ಶೇರಿಸಿ ಎಣ್ಣೆಯನ್ನು ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಈರೀತಿ ೭ ದಿನಗಳು ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಪ್ರಮೇಹ, ಮೂತ್ರಕೃಚ್ಛ್ರ, ಉರಿಮೂತ್ರ ನಿವಾರಣೆ ಆಗುವುದು.

೪೧. ಚಿಟ್ಟೆರಳೆಣ್ಣೆ ೨ ಶೇರು, ಈಚಲಮರದಬೇರಿನ ರಸ ೧ ಪಾವು, ರಾಮಗುಳ್ಳಸಮೂಲ ರಸ ೧ ಪಾವು, ಜುಟ್ಟುವೇಸೊಪ್ಪಿನ ರಸ ೧ ಪಾವು, ಇದಕ್ಕೆ ಕಲ್ಕದ್ರವ್ಯ:—ಶುದ್ಧಿಮಾಡಿದ ಪರಂಗಿಚಕ್ಕೆ ||| ಶೇರು, ಗಂಟುಭಾರಂಗಿ ೨ ತೊಲೆ, ಚಂಗಲಕೋಷ್ಠ ೨ ತೊಲೆ, ಅತಿಮಧುರ ೨ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೩ ತೊಲೆ, ಬಿಳೇಜೀರಿಗೆ ೧ ತೊಲೆ, ಯಾಲಕ್ಕಿ ‖ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಇವು ಎಲ್ಲವನ್ನೂ ಶೇರಿಸಿ ಎಣ್ಣೆಯನ್ನು ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಈರೀತಿ ೭ ದಿನಗಳು ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಸಕಲ ಪ್ರಮೇಹ, ಉರಿಮೂತ್ರ ಇವು ನಿವಾರಣೆ ಆಗುವುದು.

೪೨. ಚಿಟ್ಟೆರಳೆಣ್ಣೆ ೨‖ ಶೇರು, ಇದಕ್ಕೆ ಕಲ್ಕದ್ರವ್ಯ:—ರೇವಲಚಿನ್ನಿ ೬ ತೊಲೆ, ಶುದ್ಧಿಮಾಡಿದ ಪರಂಗಿಚಕ್ಕೆ ೬ ತೊಲೆ, ಬಾವಂಚಿಬೀಜ ೬ ತೊಲೆ, ಗಜ್ಜೀಕಾಯಿ ಪೊಪ್ಪು ೩ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೩ ತೊಲೆ, ಶುದ್ಧಿಮಾಡಿದ ಅಶ್ವಗಂಧಿ ೬ ತೊಲೆ, ಶುಂಠಿ ೬ ತೊಲೆ, ಬಿಳೇಜೀರಿಗೆ ೩ ತೊಲೆ, ಗಂಟುಭಾರಂಗಿ ೩ ತೊಲೆ, ದುಂಪರಾಷ್ಟ್ರೆ ೩ ತೊಲೆ, ಶುದ್ಧಿಮಾಡಿದ ಲಾಲ್‌ತಿಗಡು ೧೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಇವು ಎಲ್ಲವನ್ನೂ ಶೇರಿಸಿ ಎಣ್ಣೆಯನ್ನು ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ

ಕೊಡುವುದು. ಈರೀತಿ ೭ ದಿನಗಳು ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಪ್ರಮೇಹ, ಉರಿಮೂತ್ರ, ಸಿಕ್ಕುಮೂತ್ರ ನಿವಾರಣೆ ಆಗುವುದು.

೪೩. ಚಿಟ್ಟರಳೆಣ್ಣೆ ೪ ಶೇರು, ಗಂಡುಹೂವರಸಿಬೇರಿನಚಕ್ಕೆ ರಸ ೨ ಶೇರು, ಬಿಳೇಈರುಳ್ಳಿ ರಸ ೨ ಶೇರು, ಎಳನೀರು ೪, ಇದಕ್ಕೆ ಕಲ್ಕದ್ರವ್ಯ:—ಶುಂಠಿ ೧ ತೊಲೆ, ಮೆಣಸು ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ವಾಯುವಿಳಂಗ ೧ ತೊಲೆ, ನೆಲ್ಲೀಕಾಯಿ ೬ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ಅರಸಿನ ‖ ತೊಲೆ, ಹಿಪ್ಪಲಿ ೧ ತೊಲೆ, ಬಿಳೇಜೀರಿಗೆ ೧ ತೊಲೆ, ದಾಲಚಿನ್ನಿ ೨ ತೊಲೆ, ಯಾಲಕ್ಕಿ ೧ ತೊಲೆ, ಲವಂಗಪತ್ರೆ ೧ ತೊಲೆ, ಕಚೋರ ೧ ತೊಲೆ, ತುಂಗೇಗಡ್ಡೆ ೧ ತೊಲೆ, ಅಮೃತಬಳ್ಳಿ ೨ ತೊಲೆ, ತುಪ್ಪದ ದೇವದಾರು ೨ ತೊಲೆ, ಮರದರಿಸಿನ ೨ ತೊಲೆ, ಗಜಹಿಪ್ಪಲಿ ೧ ತೊಲೆ, ಯವಕ್ಷಾರ ೧ ತೊಲೆ, ಸಜ್ಜಕ್ಷಾರ ೧ ತೊಲೆ, ಸೈಂಧವಲವಣ ೧ ತೊಲೆ, ಸೌವರ್ಚಲವಣ ೧ ತೊಲೆ, ಬಿಡಾಲವಣ ೧ ತೊಲೆ, ಶುದ್ಧಿಮಾಡಿದ ಬಿಳೇಧೂಪ ೬ ತೊಲೆ, ಕರ್ಪೂರಶಿಲಾಜಿತು ಭಸ್ಮ ೩ ತೊಲೆ, ಕಲ್ಲುನಾರು ೩ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಇವು ಎಲ್ಲವನ್ನೂ ಶೇರಿಸಿ ಎಣ್ಣೆಯನ್ನು ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಈರೀತಿ ೭ ದಿನಗಳು ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ ಇದರಿಂದ ಗುಣ:—ಸಕಲ ಪ್ರಮೇಹ, ಉರಿಮೂತ್ರ, ಮೂತ್ರಕೃಚ್ಛ್ರ ನಿವಾರಣೆ ಆಗುವುದು.

## ಬಿಳೀ ಎಣ್ಣೆ.

೪೪. ಚಿಟ್ಟರಳೆಣ್ಣೆ ೨ ಶೇರು, ಶುದ್ಧಿಮಾಡಿದ ರಸಕರ್ಪೂರ ೧ ತೊಲೆ ಖಲ್ವದಲ್ಲಿ ಹಾಕಿ ಹರಳೆಣ್ಣೆಯಿಂದ ಅರೆಯುವುದು. ರೂಮಿಮಸ್ತಕಿ ೨ ತೊಲೆ, ದೊಡ್ಡಬೈರೆನೆಲ್ಲು ಅಕ್ಕಿ ‖ ತೊಲೆ, ಇವು ಖಲ್ವದಲ್ಲಿ ಹಾಕಿ ಅರೆದು ಎಲ್ಲವನ್ನೂ ಶೇರಿಸಿ ಇಟ್ಟುಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಈರೀತಿ ೭ ದಿನಗಳು. ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಸಕಲ ಪ್ರಮೇಹ ನಿವಾರಣೆ ಆಗುವುದು. ಅಲ್ಲದೆ ಸಕಲವಿಧವಾದ ಮೇಹಕಾರಕ, ಪೊಡೆ, ವ್ರಣ ಇವುಗಳೂ ನಿವಾರಣೆಯಾಗುವುವು.

೪೫. ಚಿಟ್ಟರಳೆಣ್ಣೆ ೧ ಶೇರು, ಬಿಳೇಈರುಳ್ಳಿ ರಸ ‖ ಶೇರು, ಎಳನೀರು ೨, ದೊಡ್ಡನಿಂಬೇಹಣ್ಣಿನ ರಸ ೨, ಶುದ್ಧಿಮಾಡಿದ ಬಿಳೇಧೂಪ ೨ ತೊಲೆ, ಶುದ್ಧಿಮಾಡಿದ ಜಾಪಾಳ ೨ ತೊಲೆ, ಇವು ಎಲ್ಲವನ್ನೂ ಶೇರಿಸಿ ಎಣ್ಣೆಯನ್ನು ಪಕ್ವ

ವಾಗಿ ಕಾಯಿಸಿ ಶೋಧಿಸಿಕೊಳ್ಳುವುದು. ಶುದ್ಧಿಮಾಡಿದ ರಸಕರ್ಪೂರ ‖ ತೊಲಿ ಖಲ್ವದಲ್ಲಿ ಅರೆದು ಎಣ್ಣೆಯಲ್ಲಿ ಶೇರಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ‖ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಈರೀತಿ ೭ ದಿನಗಳು ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಪ್ರಮೇಹ, ಉರಿಮೂತ್ರ ನಿವಾರಣೆ ಆಗುವುದು.

೪೬. ದೊಡ್ಡ ಹಳೇತೆಂಗಿನಕಾಯಿ ೧೨ ತಂದು ತುರುಬಿ ಬಿಸಿನೀರುಹಾಕಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಶುಂಠಿ ೧ ತೊಲೆ, ಸೀಸೋರೆಬೀಜದ ಪೊಪ್ಪು ೧ ತೊಲೆ, ಶುದ್ಧಿಮಾಡಿದ ಹಿಂಗು ‖ ತೊಲೆ, ಶುದ್ಧಿಮಾಡಿದ ಜಾಪಾಳ ೪ ತೊಲೆ, ಇವು ಎಲ್ಲವನ್ನೂ ಶೇರಿಸಿ ಎಣ್ಣೆಯನ್ನು ಪಕ್ವವಾಗಿ ಕಾಯಿಸಿ ಶೋಧಿಸಿ ಇಳಿಸಿಕೊಳ್ಳುವಾಗ ಶುದ್ಧಿಮಾಡಿದ ರಸಕರ್ಪೂರ ೧ ತೊಲೆ, ಶುದ್ಧಿಮಾಡಿದ ಇಂಗಳೀಕ ೧ ತೊಲೆ ಇವುಗಳನ್ನು ಖಲ್ವದಲ್ಲಿ ಅರೆದು ಎಣ್ಣೆಯಲ್ಲಿ ಶೇರಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ನಿಂಬೇಹೋಳಿನಲ್ಲಿ ೩-೫ ತೊಟ್ಟು ಹಾಕಿ ತೆಗೆದುಕೊಳ್ಳುವುದು. ಈರೀತಿ ೫-೭ ದಿನಗಳು ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಸಕಲ ಪ್ರಮೇಹ, ವಾಯುವು ನಿವಾರಣೆ ಆಗುವುದು.

## ಚಿಂತಾದ್ರಿ ಎಣ್ಣೆ.

೪೭. ಚಿಟ್ಟೆರಳೆಣ್ಣೆ ೩‖ ಶೇರು, ಮುಂಡಕಳ್ಳಿಹಾಲು ೧ ಶೇರು, ಯಮ್ಮೆ ಸಗಣಿ ರಸ ಬಟ್ಟೆಯಲ್ಲಿ ಶೋಧಿಸಿಕೊಂಡದ್ದು ‖ ಶೇರು ಇವು ಮೂರು ಕಾಯಿಸಿ, ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ನಿಂಬೇಹಣ್ಣಿನ ರಸ ‖ ಶೇರು, ಬಿಳೇ ಈರುಳ್ಳಿ ರಸ ೧ ಶೇರು, ಜುಟ್ಟುವೇಸೊಪ್ಪಿನ ರಸ ೧ ಶೇರು, ದತ್ತೂರಿಸೊಪ್ಪಿನ ರಸ ‖ ಶೇರು, ಬಲಿತ ತೆಂಗಿನಕಾಯಿ ಹಾಲು ೪ ಶೇರು, ಇದಕ್ಕೆ ಕಲ್ಕದ್ರವ್ಯ:—ಸೂರ್ತಿಬೆಳಗಾರ ಅರಳುಮಾಡಿದ್ದು ೪ ತೊಲೆ, ಅಳಲೇಕಾಯಿಸಿಪ್ಪೆ ೨ ತೊಲೆ ಕರೇಜೀರಿಗೆ ೧ ತೊಲೆ, ಸಣ್ಣಹಿಪ್ಪಲಿ ೧ ತೊಲೆ, ಬಾಲಮೆಣಸು ೨ ತೊಲೆ, ಶುಂಠಿ ೧ ತೊಲೆ, ಯಾಲಕ್ಕಿ ೧ ತೊಲೆ, ಸೈಂಧವಲವಣ ೨ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿಕೊಳ್ಳುವುದು. ಶುದ್ಧಿಮಾಡಿದ ಹಿಂಗು ‖ ತೊಲೆ, ಶುದ್ಧಿಮಾಡಿದ ಜಾಪಾಳ ೧೨ ತೊಲೆ ಇವು ಎಲ್ಲವನ್ನೂ ಶೇರಿಸಿ ಪಕ್ವವಾಗಿ ಎಣ್ಣೆ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಹೀಗೆ ೭ ದಿವಸ ಕೊಡುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಸಕಲ ಪ್ರಮೇಹ, ವಾಯುವು ಪೊಡೆ, ವ್ರಣ, ಹುಣ್ಣು ಸಹ ನಿವಾರಣೆ ಆಗುವುದು.

೪೮. ಚಿಟ್ಟೆರಳೆಣ್ಣೆ ೨ ಶೇರು, ದುಸ್ಸಾರೆಸೊಪ್ಪಿನ ರಸ ಅರಪಾವು, ಬಿಳೇ ಈರುಳ್ಳಿ ರಸ ಅರಪಾವು, ದತ್ತೂರಿಸೊಪ್ಪಿನ ರಸ ಅರಪಾವು, ಎಳನೀರು ೨, ಇದಕ್ಕೆ ಕಲ್ಕದ್ರವ್ಯ:—ಶ್ರೀಗಂಧ ೩ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೬ ತೊಲೆ, ಕಟುಕರೋಹಿಣಿ ೧ ತೊಲೆ, ಅರಿಸಿನ ೧ ತೊಲೆ, ಮರದರಿಸಿನ ೧ ತೊಲೆ, ಕಲ್ಲುನಾರು ಭಸ್ಮ ೧ ತೊಲೆ, ಮೆಂತ್ಯ ೧ ತೊಲೆ, ಅತಿಮಧುರ ೧ ತೊಲೆ, ಬಿಳೇಜೀರಿಗೆ ೧ ತೊಲೆ, ಕರೇಜೀರಿಗೆ ೧ ತೊಲೆ, ಗಂಟುಭಾರಂಗಿ ೧ ತೊಲೆ, ದಾಲ್‌ಚಿನ್ನಿ ೧ ತೊಲೆ, ಯಾಲಕ್ಕಿ ೧ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಕಸ್ತೂರಿ ಅರಿಸಿನ ೧ ತೊಲೆ, ಬಾಲಮೆಣಸು ೨ ತೊಲೆ, ತುಪ್ಪದದೇವದಾರು ೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಕೊಂಡು ಎಲ್ಲವನ್ನೂ ಶೇರಿಸಿ ಪಕ್ವವಾಗಿ ಎಣ್ಣೆ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಹೀಗೆ ೬ ದಿವಸ ಕೊಡುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಸಕಲ ಪ್ರಮೇಹ, ಮೂತ್ರಕೃಚ್ಛ್ರ, ಉರಿಮೂತ್ರ, ಸಿಕ್ಕು ಮೂತ್ರ ನಿವಾರಣೆ ಆಗುವುದು.

೪೯. ಚಿಟ್ಟೆರಳೆಣ್ಣೆ ೩ ಶೇರು, ಬುಡ್ಡಹಾಗಲಸೊಪ್ಪಿನ ರಸ ೨ ಶೇರು, ಬಿಳೇ ಈರುಳ್ಳಿ ರಸ ॥ ಶೇರು, ಇದಕ್ಕೆ ಕಲ್ಕದ್ರವ್ಯ:—ಕಸ್ತೂರಿ ಅರಿಸಿನ ೧ ತೊಲೆ, ವಾಯುವಿಳಂಗ ೧ ತೊಲೆ, ಬಿಳೇಜೀರಿಗೆ ೧ ತೊಲೆ, ಚಂಗಲಕೋಷ್ಟ ೧ ತೊಲೆ, ಜಟಾಮಾಂಸಿ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇ ಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೬ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡು ಇವು ಎಲ್ಲವನ್ನೂ ಶೇರಿಸಿ ಪಕ್ವವಾಗಿ ಎಣ್ಣೆ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿ ದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಹೀಗೆ ೬ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದ ರಿಂದ ಗುಣ:—ಸಕಲ ಪ್ರಮೇಹ, ವಾಯುವು ನಿವಾರಣೆ ಆಗುವುದು.

೫೦. ಬೇವಿನ ಎಣ್ಣೆ ೨॥ ಶೇರು, ಕಕ್ಕೇಚಕ್ಕೆ ರಸ ೧ ಪಾವು, ಬಿಳೇ ಉಪ್ಪೇಸೊಪ್ಪಿನ ರಸ ೧ ಪಾವು, ಗರುಗದಸೊಪ್ಪಿನ ರಸ ॥ ಶೇರು, ಬಾಗೇಗಿಡದ ಚಕ್ಕೆ ರಸ ೧ ಪಾವು, ಕಗ್ಗಲಿಚಕ್ಕೆ ರಸ (ಜಾಲೀಚಕ್ಕೆ ರಸ) ೧ ಪಾವು, ಇದಕ್ಕೆ ಕಲ್ಕದ್ರವ್ಯ:—ಗುಂಡುತಗಸಿಬೀಜ ೧ ತೊಲೆ, ಚಿತ್ರಮೂಲ ೧ ತೊಲೆ, ವಾಯು ವಿಳಂಗ ೨ ತೊಲೆ, ನೆಲ್ಲಿಕಾಯಿ ೬ ತೊಲೆ, ಅರಿಸಿನ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಶುಂಠಿ ೧ ತೊಲೆ, ಬಾವಂಚಿಬೀಜ ೬ ತೊಲೆ, ಆನೇನೆಗ್ಗಿಲು ೬ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ

ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಶುದ್ಧಿಮಾಡಿದ ಗೇರುಬೀಜ ೪ ತೊಲೆ ಕುಟ್ಟಿ ಇವು ಎಲ್ಲವನ್ನೂ ಶೇರಿಸಿ ಪಕ್ವವಾಗಿ ಎಣ್ಣೆ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಹೀಗೆ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿ ಸಾರು ಅನ್ನ. ಇದರಿಂದ ಗುಣ:—ಸಕಲ ಪ್ರಮೇಹ ನಿವಾರಣೆ ಆಗುವುದು.

## ಮಹಾಶಿಂಧೂರದ ಮಾತ್ರೆ.

೫೧. ಶುದ್ಧಿಮಾಡಿದ ರಸಕರ್ಪೂರ ೩ ತೊಲೆ, ಶುದ್ಧಿಮಾಡಿದ ರಸಸಿಂಧೂರ ೩ ತೊಲೆ, ಶುದ್ಧಿಮಾಡಿದ ಇಂಗಳೀಕ ೩ ತೊಲೆ, ಶುದ್ಧಿಮಾಡಿದ ಜಾಪಾಳ ೩ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಇಸಮುದಾರಿಸೊಪ್ಪಿನ ರಸ ೧೨ ತೊಲೆ ಹಾಕಿ ಚನ್ನಾಗಿ ಅರೆದು ಉದ್ದುಪ್ರಮಾಣ ಮಾತ್ರೆ ಮಾಡುವುದು. ಪ್ರಯೋಗ:—೧ ಮಾತ್ರೆಯಿಂದ ೩-೪ ಮಾತ್ರೆಗಳವರಿವಿಗೂ ಕೊಡಬೇಕು. ಈರೀತಿ ಬೆಳಿಗ್ಯೆಹೊತ್ತು ೭ ದಿನ ಕೊಡುವುದು. ಮೇಹಸಂಬಂಧವಾದ ಎಲ್ಲಾ ರೋಗಗಳಿಗೆ ಹಸುವಿನ ತುಪ್ಪದಲ್ಲಿ ಕೊಡಬೇಕು. ತುಪ್ಪ ಜಾಸ್ತಿ ಉಪಯೋಗಿಸಬೇಕು. ಸಪ್ಪೆ ಅನ್ನ ಅಥವಾ ಹಸುವಿನಹಾಲು ಅನ್ನ ಕೊಡಬೇಕು. ಇದರಿಂದ ಅಂಗಳನೂತಿ, ಆಸನನೂತಿ, ಮೇಹಪೊಡೆಗಳು ಗುಣವಾಗುವುವು.

## ಮೇಹಾಂತಕ ಮಾತ್ರೆ.

೫೨. ಶುದ್ಧಿಮಾಡಿದ ಹವಳಸರಿ ಗಂಧಕ ೧ ತೊಲೆ, ಶುದ್ಧಿಮಾಡಿದ ಪಾದರಸ ೧ ತೊಲೆ, ಸೂರತಿಬೆಳಗಾರ ಅರಳುಮಾಡಿದ್ದು ೧ ತೊಲೆ, ಶುದ್ಧಿಮಾಡಿದ ಜಾಪಾಳ ೧ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಅರೆದು ೧೦೦ ವೀಳೆದೆಲೆಗಳ ರಸದಿಂದ ಅರೆದು ಗುರುಗಂಜಿಪ್ರಮಾಣ ಮಾತ್ರೆ ಮಾಡುವುದು. ಪ್ರತಿಪ್ರಾತಃಕಾಲ ೧ ಮಾತ್ರೆ ಬಾಯಿಯಲ್ಲಿ ಹಾಕಿಕೊಂಡು ಬಿಸಿನೀರು ೧ ಗುಟುಕು ಕುಡಿಯುವುದು. ಈರೀತಿ ೫ ದಿವಸ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಗುಣ:—ಮೇಹಘಳುಕು, ಕೀಲುವಾಯು, ಟಾಕಿ, ಮುಸುಕುಹುಣ್ಣು, ಕೆಟ್ಟನೂತಿಗಳು, ಕೆಟ್ಟಹುಣ್ಣುಗಳು ನಿವಾರಣೆ ಆಗುವುವು.

## ರಸಕರ್ಪೂರ ಮಾತ್ರೆ.

೫೩. ಶುದ್ಧಿಮಾಡಿದ ರಸಕರ್ಪೂರ ಕಾಲುತೊಲೆ, ಪಟಿಕೆ ೧। ತೊಲೆ ಇವು ಬೇರೆಬೇರೆ ಖಲ್ವದಲ್ಲಿ ಅರೆದು ಇಟ್ಟುಕೊಳ್ಳುವುದು. ಒಂದು ಕಬ್ಬಿಣದ ಸೌಟಿನಲ್ಲಿ ಪಟಿಕೆ ಚೂರ್ಣ ಅರ್ಧಹಾಕಿ ಅದರಮೇಲೆ ರಸಕರ್ಪೂರ ಕಾಲುತೊಲೆ ಅರೆದದ್ದು ಹಾಕಿ ಅವರಮೇಲೆ ಪಟಿಕೆ ಚೂರ್ಣಹಾಕಿ ಬೆಂಕಿಯಮೇಲಿಟ್ಟು ನೀರು ಇಂಗುವವರಿವಿಗೂ ಕತ್ತಿಯಲ್ಲಿ ಕೆಳಗೆಮೇಲೆ ತಿರುವುತ್ತಾ ಭಸ್ಮ ಆದನಂತರ ಇಳಿಸಿಕೊಂಡು ಖಲ್ವದಲ್ಲಿ ಹಾಕಿ ಇದಕ್ಕೆ ಓಮದಚೂರ್ಣ ಮಾಡಿದ್ದು ೧। ತೊಲೆ ಹಾಕಿ ಎರಡನ್ನೂ ಚೆನ್ನಾಗಿ ಅರೆದು ಕೃಷ್ಣತುಳಸೀಸೊಪ್ಪು ೧ ಹಿಡಿ ಹಾಕಿ ನಿಂಬೇ

ಹಣ್ಣಿನ ರಸದಲ್ಲಿ ಅರೆದು ಕಡಲೇಕಾಳುಗಾತ್ರ ಮಾತ್ರೆಮಾಡಿ ತಾಟಿಬಿಲ್ಲದಲ್ಲಿ ಹುದುಗಿ ೧ ಮಾತ್ರೆ ಕೊಡುವುದು. ಹೀಗೆ ಬೆಳಿಗ್ಗೆಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಚಲದಿಹುಣ್ಣು, ಮುಸುಕು ಹುಣ್ಣು ಗುಣವಾಗುವುದು.

೫೪. ಶುದ್ಧಿಮಾಡಿದ ರಸಕರ್ಪೂರ ೧ ತೊಲೆ, ಹೊಟ್ಟುಸುಲಿದ ಬೆಳ್ಳುಳ್ಳಿ ೪ ತೊಲೆ, ಮೆಣಸು ಚೂರ್ಣಮಾಡಿದ್ದು ೬ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ೧೦೦ ವೀಳೆದೆಲೆರಸದಿಂದ ಚನ್ನಾಗಿ ಅರೆದು ಕಡಲೇಕಾಳಷ್ಟು ಮಾತ್ರೆಮಾಡುವುದು. ಪ್ರತಿಪ್ರಾತಃಕಾಲ ೧ ಮಾತ್ರೆ ಬಾಯಿಯಲ್ಲಿ ಹಾಕಿಕೊಂಡು ಹಸುವಿನ ಹಾಲು ಸ್ವಲ್ಪ ಕುಡಿಯುವುದು. ಹೀಗೆ ೭ ದಿವಸ ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ಹಸುವಿನ ಹಾಲು ಅನ್ನ. ಇದರಿಂದ ಗುಣ:—ಮುಸುಕುಹುಣ್ಣು, ಮೈಮೇಲೆ ಏಳುವ ಪೊಡೆಗಳು, ಮೇಹದಿಂದ ಹುಟ್ಟಿದ ವ್ರಣ, ಘಾಯ, ಊತ ನಿವಾರಣೆ ಆಗುವುದು.

### ಭಲ್ಲಾತಕಿ ಲೇಹ್ಯ.

೫೫. ೧॥ ಶೇರು ಗೇರುಬೀಜ ತಂದು ಒಂದು ಮಡಿಕೆಯಲ್ಲಿ ಯಮ್ಮೆಸಗಣಿ ಹಾಕಿ ನೀರಿನಲ್ಲಿ ಕಲಸಿ ಅದರಲ್ಲಿ ಗೇರುಬೀಜ ಹಾಕಿ ೧ ಕುದಿ ಬರುವಂತೆ ಬೇಯಿಸುವುದು. ಅದನ್ನು ತಣ್ಣೀರಿನಲ್ಲಿ ತೊಳೆದು ಬಿಸಲಿನಲ್ಲಿ ಒಣಗಿಸುವುದು. ತೂಪರ ಚಕ್ಕೆ ತಂದು ಚನ್ನಾಗಿ ಕುಟ್ಟಿ ಮಡಿಕೆಯಲ್ಲಿ ಹಾಕಿ ಹಸುವಿನಮೂತ್ರ ಹಾಕಿ ಅದರಲ್ಲಿ ಗೇರುಬೀಜ ಹಾಕಿ ೧ ಕುದಿ ಬರುವಂತೆ ಬೇಯಿಸುವುದು. ಇದನ್ನು ತಣ್ಣೀರಿನಲ್ಲಿ ತೊಳೆದು ಬಿಸಲಿನಲ್ಲಿ ಒಣಗಿಸುವುದು. ಈ ಗೇರುಬೀಜ ಒಂದೊಂದು ೨ ಭಾಗ ಮಾಡಿ ಮಡಿಕೆಯಲ್ಲಿ ಹಾಕಿ ಹಸುವಿನಹಾಲು ೧ ಶೇರು, ಹಸುವಿನತುಪ್ಪ ೧ ಶೇರು ಹಾಕಿ ಸಣ್ಣದಾಗಿ ಉರಿಹಾಕಿ ಬೇಯಿಸಿದರೆ ತೈಲ ಮೇಲಕ್ಕೆ ಬರುತ್ತೆ. ಅದನ್ನು ಬಿಳೇಬಟ್ಟೆಯಲ್ಲಿ ಶೋಧಿಸಿಕೊಂಡು ಗೇರುಬೀಜದ ಹಿಪ್ಪೆಯನ್ನು ಬಿಸಾಡಬೇಕು. ಇದಕ್ಕೆ ಕಲ್ಕದ್ರವ್ಯ:—ಜಾಕಾಯಿ, ಜಾಪತ್ರೆ, ಲವಂಗ, ಲವಂಗಪತ್ರೆ, ದಾಲಚಿನ್ನಿ, ನಾಗಕೇಸರಿ, ಗಂಟುಭಾರಂಗಿ, ವಾಯುವಿಳಂಗ, ಶುಂಠಿ, ಓಮ, ಅತಿಮಧುರ, ಜಟಾಮಾಂಸಿ, ಕಸ್ತೂರಿ ಅರಿಸಿನ, ಮರದರಿಸಿನ, ನೆಲಬೇವು, ಮೆಣಸು, ಸಣ್ಣರಾಸ್ಮೆ, ಬಿಳೇಜೀರಿಗೆ, ಅಕ್ಕಲಕರೆ, ಕರ್ಕಾಟಕಶ್ರಂಗಿ, ಬಾಲಮೆಣಸು ಇವು ದಿನಸಿಗೆ ೧ ತೊಲೆಯಂತೆ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಕುಂಕುಮಕೇಸರಿ ೧ ತೊಲೆ ಖಲ್ವದಲ್ಲಿ ಹಾಕಿ ಅರೆದುಕೊಳ್ಳುವುದು. ಒಳ್ಳೇ ಎಳ್ಳು ೧ ಪಾವು ಚನ್ನಾಗಿ ಕುಟ್ಟಿ ಇಟ್ಟುಕೊಳ್ಳುವುದು. ಕೊತ್ತುಂಬರಿಬೀಜ ೧ ಪಾವು ಕುಟ್ಟಿ ಚೂರ್ಣಮಾಡಿ ವಸ್ತ್ರಗಾಳಿತ ಮಾಡಿಕೊಳ್ಳುವುದು. ಒಂದು ಕಲಾಯಿಪಾತ್ರೆಯಲ್ಲಿ ೧॥ ಶೇರು ಹಸುವಿನಹಾಲು, ರಾಯಿಪುಡಿಸಕ್ಕರೆ ೫ ಶೇರು ಒಲೆಯಮೇಲಿಟ್ಟು ತಂತುಪಾಕ ಬಂದನಂತರ ಮೇಲ್ಕಂಡ ಗೇರುಬೀಜದ ತೈಲ ಚೂರ್ಣ ಮೊದಲಾದ ಎಲ್ಲಾ ದಿನಸುಗಳನ್ನು ಹಾಕಿ ಪಕ್ವವಾಗಿ ಲೇಹ್ಯಮಾಡಿ

ಜೇನುತುಪ್ಪ ೧|| ಶೇರು ಹಾಕಿ ಕಲಸಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲು ತೊಲೆಯಂತೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ತುಪ್ಪ ಹಾಲು ಹೆಚ್ಚಾಗಿ ಹಾಕಿಕೊಳ್ಳಬೇಕು. ಇದರಿಂದ ಗುಣ:—೨೦ ವಿಧವಾದ ಮೇಹ, ೮೦ ವಿಧವಾದ ವಾಯು, ೪೦ ವಿಧವಾದ ಪೈತ್ಯ, ೨೦ ವಿಧವಾದ ಶ್ಲೇಷ್ಮ ನಿವಾರಣೆ ಆಗುವುದು.

### ಮೇಹಹರಣಕ್ಕೆ ಭಲ್ಲಾತಕಿ.

೫೬. ಕಾಡುಕುಂಬಳದ ಗಡ್ಡೆ ೧ ತೊಲೆ, ಅಜಾಮೋದ ೧ ತೊಲೆ, ಕರ್ಪೂರ ಶಿಲಾಜಿತು ಭಸ್ಮ ೧ ತೊಲೆ, ಶುದ್ಧಿಮಾಡಿದ ಗೇರುಬೀಜ ೯, ಲವಂಗ ೧ ತೊಲೆ, ಒಣಕೊಬರಿ ೧ ತೊಲೆ, ಕಲ್ಲುನಾರು ಭಸ್ಮ ೧ ತೊಲೆ, ಓಮ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೬ ತೊಲೆ, ಮರದರಿಸಿನ ೧ ತೊಲೆ, ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಅರೆಯುವ ದಿನಸುಗಳನ್ನು ಅರೆದುಕೊಳ್ಳಬೇಕು. ಹಳೇಬೆಲ್ಲ ಮುಕ್ಕಾಲು ಶೇರು ಒರಳಲ್ಲಿ ಹಾಕಿ ಕುಟ್ಟಿ ಮೇಲ್ಕಂಡ ದಿನಸುಗಳನ್ನು ಶೇರಿಸಿ ಕುಟ್ಟಿ ಲೇಹ್ಯದಂತೆ ತಯಾರ್ಮಾಡಿಕೊಳ್ಳುವುದು. ಹೊತ್ತಿಗೆ ಕಡಲೇಕಾಳು ಪ್ರಮಾಣ ಹಸುವಿನತುಪ್ಪದಲ್ಲಿ ಕಲಸಿ ಕೊಡುವುದು. ಹೀಗೆ ಬೆಳಿಗ್ಗೆ ಹೊತ್ತು ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಮೇಹಸಂಬಂಧವಾದ ಹುಣ್ಣುಗಳು, ಮೈಮೇಲೆ ಹರಡುವ ಪೊಡೆ (ಮಚ್ಚೆ), ಕೀಲುವಾಯುವು ನಿವಾರಣೆ ಆಗುವುದು.

೫೭. ಕರ್ಪೂರ ಶಿಲಾಜಿತುಭಸ್ಮ ೧ ತೊಲೆ, ವಂಗಭಸ್ಮ ೧ ತೊಲೆ, ಶೃಂಗಿಭಸ್ಮ ೧ ತೊಲೆ, ಶುದ್ಧಿಮಾಡಿದ ರಸಸಿಂಧೂರ ೧ ತೊಲೆ, ಚಿತ್ರಮೂಲ ೧ ತೊಲೆ, ವಿಷ್ಣುಕ್ರಾಂತಿ ೧ ತೊಲೆ, ತಂಗಡಿಕುಸುಮ ೧ ತೊಲೆ, ಕಲ್ಲುಪ್ಪು ೧ ತೊಲೆ, ನಾಗಕೇಸರಿ ೧ ತೊಲೆ, ಅಮೃತಬಳ್ಳಿಸತ್ತು ೯ ತೊಲೆ, ಬಿಳೇಜೀರಿಗೆ ೧ ತೊಲೆ ಇವುಗಳಲ್ಲಿ ಕುಟ್ಟುವ ದಿನಸಗಳನ್ನು ಕುಟ್ಟಿ ಶೋಧಿಸಿಕೊಂಡು ಅರೆಯುವ ದಿನಸುಗಳನ್ನು ಅರೆದು ಎಲ್ಲವನ್ನೂ ಚಿಲಕೀರೇಸೊಪ್ಪಿನ ರಸದಲ್ಲಿ ಅರೆದು ಯಳಚೀಬೀಜದಷ್ಟು ಮಾತ್ರೆಮಾಡುವದು. ಇದು ಕೊಡುವ ಅನುಪಾನ:—ನೇರಳೆ ಚಕ್ಕೆ, ಮಾವಿನಚಕ್ಕೆ, ನೆಲ್ಲೀಚಕ್ಕೆ, ನೆಲತಾಟಿಗಡ್ಡೆ, ದುಸ್ಸಾರೆಸೊಪ್ಪು, ತಾವರೆ ಹೂವು ಇವು ದಿನಸು ೧ಕ್ಕೆ ೩ ತೊಲೆ ತಂದು ಒಣಗಿಸಿ ಕುಟ್ಟಿ ಚೂರ್ಣಮಾಡಿಕೊಳ್ಳುವುದು. ಪ್ರತಿದಿನ ಒಂದು ಹಿಡಿಯಷ್ಟು ಚೂರ್ಣ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಇದರ ಅರ್ಧಭಾಗ ಕಷಾಯದಲ್ಲಿ ೧ ಮಾತ್ರೆ ಕಲಸಿ ತೆಗೆದುಕೊಳ್ಳುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭ ದಿವಸ ಕೊಡುವುದು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ ಅಥವಾ ಮಜ್ಜಿಗೆ ಅನ್ನ. ಇದರಿಂದ ಸಮಸ್ತ ಮೇಹಗಳೂ ಗುಣವಾಗುವುವು.

## ಪರಂಗ್ಯಾದಿ ಚೂರ್ಣ.

೫೮. ಶುದ್ಧಿಮಾಡಿದ ಪರಂಗಿಚಕ್ಕೆ ೧ ತೊಲೆ, ಕೋಲುಮುಕ್ಕುನಚಕ್ಕೆ ೧ ತೊಲೆ, ಚಿತ್ರಮೂಲ ೧ ತೊಲೆ, ವಾಯುವಿಳಂಗ ೧ ತೊಲೆ, ಶುಂಠಿ ೧ ತೊಲೆ, ಮೋಡಿ ೧ ತೊಲೆ, ಮೆಣಸು ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಗಂಟುಭಾರಂಗಿ ೧ ತೊಲೆ, ಯಾಲಕ್ಕಿ ೧ ತೊಲೆ ಇವು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಇದಕ್ಕೆ ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ ಹಾಕಿ ಎಲ್ಲವನ್ನೂ ಕಲೆಸಿ ಇಟ್ಟು ಕೊಂಡು ೩ ಬೆರಳಿನಲ್ಲಿ ಬಂದಷ್ಟು ಚೂರ್ಣವನ್ನು ಹಸುವಿನ ತುಪ್ಪದಲ್ಲಿ ಕಲಸಿ ಕೊಡಬೇಕು. ಈರೀತಿ ೭ ದಿನ ಕೊಡುವುದು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಗುಣ:—ವಿಂಶತಿಮೇಹಗಳು, ೮೦ ವಾಯುಗಳು ನಿವಾರಣೆ ಆಗುವುವು.

೫೯. ಚಂಗಲಕೋಷ್ಟ, ದಾಲಚಿನ್ನಿ, ಲವಂಗಪತ್ರೆ, ನಾಗಕೇಸರಿ, ತುಂಗೇಗಡ್ಡೆ, ನಸುಗುನ್ನಿಬೀಜ, ಮಜ್ಜಿಗೆಗಡ್ಡೆ, ಯಷ್ಟಿಮಧುಕ, ಅಶ್ವಗಂಧಿ, ಸೊಗದೇಬೇರು, ಬಿಳೀಕೊಮ್ಮೆ, ಜಾಕಾಯಿ, ಗೊರವಿಡಿಬೀಜ, ದ್ರಾಕ್ಷಿ, ಹಿಪ್ಪಲಿ, ಕರ್ಪೂರಶಿಲಾಜಿತು ಭಸ್ಮ, ನೆಲ್ಲೀಕಾಯಿ, ಸಣ್ಣನೆಗ್ಗಿಲು, ಭೂಸಕ್ಕರೆ ಗಡ್ಡೆ, ಬೂರುಗದಬಂಕೆ, ಅಮೃತಬಳ್ಳಿಸತ್ತು, ತಕ್ಕೋಲ, ಮೋಡಿ, ಲವಂಗ, ಕೊತ್ತುಂಬರಿಬೀಜ, ಕರೇಜೀರಿಗೆ, ವಿಷ್ಣುಕ್ರಾಂತಿ, ನೆಲತಾಟಿಗಡ್ಡೆ, ಕಕ್ಕೇಬೇರು, ಜಟಾಮಾಂಸಿ, ಕಿರಿನೆಲ್ಲಿಬೇರು, ಲಾವಂಚ, ಪದ್ಮಕೇಸರಿ, ಜಾಪತ್ರೆ, ಓಮ, ತಾರೇಕಾಯಿಸಿಪ್ಪೆ, ಅಳಲೇಕಾಯಿಸಿಪ್ಪೆ ಇವು ದಿನಸು ೧ ಕ್ಕೆ ೩ ತೊಲೆ ತಂದು ಕುಟ್ಟಿ ಚೂರ್ಣಮಾಡಿ ಬಟ್ಟೆಯಲ್ಲಿ ಶೋಧಿಸಿಕೊಂಡು ಇದಕ್ಕೆ ೨ ಭಾಗ ರಾಯಪುಡಿ ಸಕ್ಕರೆ ಕಲಸಿ ಮೂರುಬೆರಳಿನಲ್ಲಿ ಬಂದಷ್ಟು ಚೂರ್ಣವನ್ನು ಹಸುವಿನ ಹಾಲಿನಲ್ಲಿ ಕಲಸಿ ಕೊಡುವುದು. ಹೀಗೆ ಬೆಳಗ್ಗೆ ಸಾಯಂಕಾಲ ೨೦ ದಿವಸ ಕೊಡಬೇಕು. ಇದಕ್ಕೆ ಪಥ್ಯ ಚಲದಿಪದಾರ್ಥ ವರ್ಜ್ಯ. ಇದರಿಂದ ಗುಣ:—ಮೂತ್ರಕೃಚ್ಛ್ರ, ಉರಿಮೂತ್ರ, ಸಕಲಪ್ರಮೇಹ, ಶ್ವಾಸಖಾಸ, ಸ್ತ್ರೀಯರ ಯೋನಿಸಂಬಂಧವಾದ ರೋಗಗಳು ನಿವಾರಣೆ ಆಗುವುದು.

## * ಪ್ರಮೇಹ ಹರಣ ಧೂಪ.

೬೦. ಇಂಗಳೀಕ ||| ತೊಲೆ, ಸೋಪುಬೀಜ ||| ತೊಲೆ, ಅಜಾಮೋದ ||| ತೊಲೆ, ಸಜ್ಜುಕ್ಷಾರ ||| ತೊಲೆ, ಉತ್ತರೇಣಿಬೇರು ||| ತೊಲೆ ಇವುಗಳನ್ನು

* ಕೆಟ್ಟ ವ್ರಣಗಳಿಗೆ ಧೂಪಹಾಕುವ ಸಂದರ್ಭದಲ್ಲಿ ಔಷಧದ ಹೊಗೆಯು ವ್ರಣಗಳಿರುವ ಸ್ಥಳಕ್ಕೆ ಮಾತ್ರ ತಗಲುವಂತೆ ಬೆಂಕಿಯಮೇಲೆ ಔಷಧವನ್ನಾಗಲೀ, ಬತ್ತಿಯನ್ನಾಗಲೀ ಹಾಕಿ ಹೊಗೆಗೆ ಸರಿಯಾಗಿ ವ್ರಣಗಳಿರುವ ಭಾಗಗಳ ವಿನಹಾ ಉಳಿದ ದೇಹಕ್ಕೆ ಕಂಬಳಿಯನ್ನು ಹೊದ್ದುಕೊಳ್ಳುವುದು. ಔಷಧದ ಹೊಗೆಯು ಮುಖಕ್ಕೆ ತಗಲಬಾರದು,

ಚೂರ್ಣಮಾಡಿ ೧ಳ ಪೊಟ್ಟಣಗಳನ್ನು ಕಟ್ಟಿ ಹುಣಸೇಬೊಬ್ಬಡಿಯ ಬೆಂಕಿಮಾಡಿ ಅದರಲ್ಲಿ ೧ ಪೊಟ್ಟಣವನ್ನುಹಾಕಿ ಹೊಗೆ ಹಾಕಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೭ ದಿವಸ ಹಾಕುವುದು. ಇದಕ್ಕೆ ಹಸುವಿನಹಾಲು ಅನ್ನ ಪಥ್ಯ. ಇದರಿಂದ ಕೆಟ್ಟ ವ್ರಣಗಳು ಗುಣವಾಗುವುದು.

## ವ್ರಣಧೂಪ.

೬೧. ಸೀಸ ೨ ಆಣೆ ತೂಕ ಕಬ್ಬಿಣದ ಸೌಟಿನಲ್ಲಿ ಹಾಕಿ ಬೆಂಕಿಯ ಮೇಲಿಟ್ಟು ಕರಗಿಸಿ ಕೆಳಗೆ ಇಳಿಸಿಕೊಂಡು ೨ ನಿಮಿಷಗಳ ತರುವಾಯ ಪಾದರಸ ಕಾಲುತೊಲೆ ಸೌಟಿನಲ್ಲಿಹಾಕಿ ಬಿಲ್ಲೆ ಮಾಡಿಕೊಳ್ಳುವುದು. ಈ ಬಿಲ್ಲೆ ಖಲ್ವದಲ್ಲಿ ಅರೆದು ಇಟ್ಟುಕೊಳ್ಳುವುದು. ಓಮದ ಹೊಟ್ಟು ‖ ತೊಲೆ, ಕವಡೆ ಸಾಂಬ್ರಾಣಿ ‖ ತೊಲೆ, ಅರಿಸಿನ ‖ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಎಲ್ಲವನ್ನೂ ನೇರಿಸಿ ನವುರಾದ ಬಟ್ಟೆಯಮೇಲೆ ಈ ಚೂರ್ಣ ಹಾಕಿ ಬತ್ತಿ ಸುತ್ತಬೇಕು. ಈರೀತಿ ೬ ಬತ್ತಿಗಳು ಮಾಡುವುದು. ಬೆಳಿಗ್ಗೆ ಸಾಯಂಕಾಲ ಒಂದೊಂದು ಬತ್ತಿ ಬೆಂಕಿಯಮೇಲೆ ಹಾಕಿ ಹೊಗೆ ಕೊಡುವುದು. ಈರೀತಿ ೩ ದಿವಸ ಮಾಡುವುದು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಗುಣ:—ಗಂಡಮಾಲೆ, ಆಸನ ನೂತಿ, ಆಸನಪವಿತ್ರ ವ್ರಣದ ಹುಣ್ಣುಗಳು ನಿವಾರಣೆ ಆಗುವುದು.

## ಭಗಂದರಾದಿಗಳಿಗೆ ಧೂಪ.

೬೨. ಇಂಗಳೀಕ ಕಾಲುತೊಲೆ ಚನ್ನಾಗಿ ಅರೆದು ನೀಲಿಬಟ್ಟೆ ೩ ಬೆರಳು ಉದ್ದ ೫ ಬಟ್ಟೆ ಹರಿದು ಅದರಮೇಲೆ ೧ ತೊಲೆ ಜೇನುಮೇಣ ಲೇಪಿಸಿ ಅದರ ಮೇಲೆ ಇಂಗಲೀಕದ ಚೂರ್ಣಹಾಕಿ ೫ ಬತ್ತಿಗಳನ್ನು ತಯಾರ್ಮಾಡುವುದು. ಪ್ರತಿದಿನ ಬೆಳಿಗ್ಗೆ ೧ ಬತ್ತಿ ಬೆಂಕಿಯಮೇಲೆ ಹಾಕಿ ಹೊಗೆ ಕೊಡುವುದು. ಹೀಗೆ ೫ ದಿನ ಮಾಡಬೇಕು. ಇದಕ್ಕೆ ಹಸುವಿನಹಾಲು ಅನ್ನ ಅಥವಾ ತೊಗರೀಬೇಳೆ ಸಿಹಿಸಾರು ಅನ್ನ ಪಥ್ಯ. ಇದರಿಂದ ಗುಣ:—ಮೇಹದಗಡ್ಡೆ, ವ್ರಣದಹುಣ್ಣು, ಮುಸುಕು ಹುಣ್ಣು, ಮೇಹಪೊಡೆ, ಭಗಂದರ ನಿವಾರಣೆ ಆಗುವುದು.

## ಪ್ರಮೇಹ ವ್ರಣಾಂತಕ ಧೂಪ.

೬೩. ಸೀಸ ೧ ತೊಲೆ ಕಬ್ಬಿಣದ ಸೌಟಿನಲ್ಲಿ ಹಾಕಿ ಬೆಂಕಿಯಮೇಲಿಟ್ಟುಕರಗಿಸಿ ಕೆಳಗೆ ಇಳಿಸಿಕೊಂಡು ೨ ನಿಮಿಷಗಳ ತರುವಾಯ ಪಾದರಸ ೧ ತೊಲೆ ಸೌಟಿನಲ್ಲಿ ಹಾಕಿ ಬಿಲ್ಲೆ ಮಾಡಿಕೊಳ್ಳುವುದು. ಈ ಬಿಲ್ಲೆ ಖಲ್ವದಲ್ಲಿ ಅರೆದು ಇಟ್ಟುಕೊಳ್ಳುವುದು. ಪಾಲುತುತ್ತ ೧ ತೊಲೆ, ಸತ್ತು ರಾಪುಡಿ ೧ ತೊಲೆ, ಕಬ್ಬಿಣದ ರಾಪುಡಿ ೧ ತೊಲೆ, ರಸಕರ್ಪೂರ ೧ ತೊಲೆ, ಇಂಗಳೀಕ ೧ ತೊಲೆ, ಜಂಗಾಲುಪಚ್ಚೆ ೧ ತೊಲೆ, ಆರತಿಕರ್ಪೂರ ‖ ತೊಲೆ, ಇವುಗಳಲ್ಲ ಅರಿಯುವ ದಿನಸುಗಳನ್ನು ಖಲ್ವದಲ್ಲಿ ಅರೆದು ಎಲ್ಲವನ್ನೂ ಸೇರಿಸಿಕೊಳ್ಳುವುದು. ಹಳೇಹುಣಸೇಹಣ್ಣು

೧ ಶೇರು ತಂದು ಬೀಜ ನಾರು ತೆಗೆದುಹಾಕಿ ಒರಳಲ್ಲಿ ಹಾಕಿ ಮೇಲ್ಕಂಡ ಎಲ್ಲ ದಿನಸುಗಳನ್ನು ಹಾಕಿ ಚನ್ನಾಗಿ ಕುಟ್ಟಿ ಯಳಚೀಬೀಜದಷ್ಟು ಮಾತ್ರೆಗಳು ಮಾಡುವುದು. ಹುಣಸೇಬೊಬ್ಬಡೆ ಬೆಂಕಿಯಲ್ಲಿ ಮಾತ್ರೆಯನ್ನು ಹಾಕಿ ವ್ರಣಗಳಿಗೆ ಹೊಗೆ ಹಾಕುವುದು. ಹೀಗೆ ಹುಣ್ಣುಮಾಯುವವರಿಗೂ ಪ್ರತಿದಿನ ಒಂದೇಸಲ ಹೊಗೆ ಹಾಕಬೇಕು. ಇದಕ್ಕೆ ಪಥ್ಯ ಹಸುವಿನ ಹಾಲು ಅನ್ನ. ಇದರಿಂದ ಗುಣ:—ಪರಂಗಿ ಹುಣ್ಣು, ನೂತಿಹುಣ್ಣು, ಆಸನ ನೂತಿ, ರಾಜಹುಣ್ಣು ನಿವಾರಣೆ ಆಗುವುದು.

## ಧೂಪದ ಚೂರ್ಣ.

೬೪. ಹಸೀಕಡಲೇಬೇಳೆ ೧ ಪಾವು ತಂದು ಚೂರ್ಣಮಾಡಿ ವಸ್ತ್ರಗಾಳಿತ ಮಾಡಿ ಇದನ್ನು ಕಂಚಿನ ತಟ್ಟೆಯಲ್ಲಿ ಹಾಕಿ ಪಾದರಸ ೧ ತೊಲೆ ಹಾಕಿ ತಾಂಬ್ರದ ಪಂಚಪಾತ್ರೆಯಲ್ಲಿ ಕರ್ರಗೆ ಆಗುವವರಿಗೂ ಮರ್ಧಿಸಿ ಇದನ್ನು ೯ ಪೊಟ್ಣಗಳು ಕಟ್ಟಿ ಒಂದು ಮುಚ್ಚಳದಲ್ಲಿ ಹುಣಸೇಬೊಬ್ಬಡೆ ಬೆಂಕಿ ಹಾಕಿ ಅದರಮೇಲೆ ಒಂದು ಪೊಟ್ಣ ಪುಡಿಹಾಕಿ ವ್ರಣಗಳಿಗೆ ಹೊಗೆ ಹಾಕಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೩ ದಿನ ಹಾಕುವುದು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಗುಣ:—ಮೇಹಪೊಡೆ, ಗಜಚರ್ಮ, ಚರ್ಮಕುಷ್ಠ, ಖಜ್ಜಿ, ಹುಣ್ಣು ನಿವಾರಣೆ ಆಗುವುದು.

೬೫. ಹವಳಸರಿ ಗಂಧಕ ೧ ತೊಲೆ, ಪಾದರಸ ೧ ತೊಲೆ ಇವೆರಡೂ ಖಲ್ವದಲ್ಲಿ ಅರೆದುಕೊಳ್ಳುವುದು. ಇಂಗಳೀಕ ೨ ತೊಲೆ, ಲವಂಗ ೨ ತೊಲೆ, ಕವಡೆ ಸಾಂಬ್ರಾಣಿ ೨ ತೊಲೆ, ಹಿಂಗು ೧ ತೊಲೆ, ಓಮ ೨ ತೊಲೆ, ಬೆಳ್ಳುಳ್ಳಿಹೊಟ್ಟು ೧ ತೊಲೆ, ಬಿಳೇಧೂಪ ೪ ತೊಲೆ ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಅರೆಯುವ ದಿನಸುಗಳನ್ನು ಅರೆದು ಎಲ್ಲವನ್ನೂ ಶೇರಿಸಿ ಗರುಗದ ಸೊಪ್ಪಿನ ರಸದಲ್ಲಿ ಅರೆದು ನೆರಳಿನಲ್ಲಿ ಒಣಗಿಸಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಚೂರ್ಣ ಹುಣಿಸೇಬೊಬ್ಬಡೆ ಬೆಂಕಿ ಹಾಕಿ ಅದರಮೇಲೆ ಹೊಗೆ ಹಾಕಬೇಕು. ಹೊಗೆ ಹಾಕುವುದಕ್ಕೆ ಮೊದಲು ಬಾಯಿಯಲ್ಲಿ ಅಕ್ಕಿತವುಡು ಇಟ್ಟುಕೊಳ್ಳುವುದು. ಹೀಗೆ ಬೆಳಿಗ್ಗೆ ಹೊತ್ತು ೭ ದಿನ ಹಾಕುವುದು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಸಮಸ್ತವಾದ ಕೆಟ್ಟಹುಣ್ಣುಗಳೂ ನಿವಾರಣೆ ಆಗುವುದು. ಬಾಯಿ ಬರುವುದಿಲ್ಲ.

## ಮೇಹರೋಗಕ್ಕೆ ಧೂಪ.

೬೬. ಇಂಗಲೀಕ ಕಾಲುತೊಲೆ ಹುಳಿದಾಳಿಂಬರೇ ರಸದಿಂದ ಅರೆದು ೧ ಅಡಿ ಉದ್ದ ಚೌಕ ಬಟ್ಟೆ ನೆನೆಯಿಸಿ ನೆರಳಿನಲ್ಲಿ ಒಣಗಿಸಿ ಇಟ್ಟುಕೊಳ್ಳುವುದು. ಪ್ರಯೋಗ:—೪ ಅಂಗುಲದ ಬಟ್ಟೆಯನ್ನು ಬತ್ತಿ ಹೊಸೆದುಕೊಂಡು ಟಾಕಿ ಮತ್ತು ಪುರುಷ ದಪ್ಪನಾಗಿ ಇರುವ ಸ್ಥಳಕ್ಕೆ ಬತ್ತಿಗೆ ಬೆಂಕಿಹಚ್ಚಿಸಿ ಹೊಗೆಯನ್ನು ಕೊಡಬೇಕು. ಈರೀತಿ ೩-೫ ದಿನ ಕೊಟ್ಟರೆ ಗುಣವಾಗುತ್ತೆ.

## ಭಗಂದರ ಲಕ್ಷಣ.

ಗುದಸ್ಥಾನಕ್ಕೆ ಎರಡಂಗುಲಗಳ ದೂರದಲ್ಲಿ ಅಧಿಕವಾದ ಬಾಧೆಯಿಂದ ಕೂಡಿದ ಪಿಟಕೆ (ಬೊಬ್ಬೆ) ಯು ಜನಿಸಿ ಅದು ಒಡೆದರೆ ಆಗ ಭಗಂದರವೆನ್ನಲ್ಪಡುವುದು.

ಭಗಂದರ ರೋಗವು ಶತಪೋನಕ, ಉಷ್ಟ್ರಗ್ರೀವ, ಪರಿಸ್ರಾವಿ, ಋಜು, ಪರಿಕ್ಷೇಪಿ, ಆರ್ಶ್ಯೋಜ, ಉನ್ಮಾರ್ಗಿ, ಶಂಖಾವರ್ತ ಎಂಬ ಭೇದಗಳಿಂದ ಎಂಟು ವಿಧಗಳಾಗಿರುವುದು.

ಶತಪೋನಕ ಭಗಂದರದಲ್ಲಿ ಕಷಾಯ ರೂಕ್ಷಾದಿ ಪದಾರ್ಥಗಳನ್ನು ಸೇವಿಸುವುದರಿಂದ ವಾತವು ಅಧಿಕ ಪ್ರಕೋಪವನ್ನು ಹೊಂದಿ ಬೊಬ್ಬೆಗಳನ್ನುಂಟು ಮಾಡುವುದು. ಅದಕ್ಕೆ ಆ ಸಮಯದಲ್ಲೇ ಚಿಕಿತ್ಸೆಮಾಡದಿರುವುದರಿಂದ ಪಕ್ವವಾಗಿ ಒಡೆದು ಕ್ರೂರವಾದ ಬಾಧೆಯಿಂದೊಡಗೂಡಿ ಅರುಣ ವರ್ಣವುಳ್ಳ ನೊರೆಯನ್ನು ಸ್ರವಿಸುವುದು. ಮತ್ತು ಅಲ್ಲಿ ಜಲ್ಲಡಿಯಂತೆ ಅನೇಕ ರಂಧ್ರಗಳುಂಟಾಗಿ ಆ ರಂಧ್ರಗಳಿಂದ ಮಲಮೂತ್ರ ಶುಕ್ರಗಳು ಸ್ರವಿಸುತ್ತಿರುವುದು.

ಉಷ್ಟ್ರಗ್ರೀವ ಭಗಂದರದಲ್ಲಿ ಪಿತ್ಥವು ಪ್ರಕುಪಿತವಾಗಿ ಗುದಸ್ಥಾನದಲ್ಲಿ ಕೆಂಪಾದ ಬೊಬ್ಬೆಯನ್ನುಂಟುಮಾಡುವುದು. ಅದು ಹುಟ್ಟಿದ ಕೂಡಲೇ ಶೀಘ್ರವಾಗಿ ಪಾಕವಾಗಿ ಉಷ್ಣವಾದ ಕೀವನ್ನು ಸ್ರವಿಸುವುದು. ಇದು ಒಂಟೆಯ ಮುಖದಂತೆ ವಕ್ರವಾಗಿರುವುದರಿಂದ ಉಷ್ಟ್ರಮುಖವೆನ್ನಲ್ಪಡುವುದು.

ಪರಿಸ್ರಾವಿ ಭಗಂದರದಲ್ಲಿ ಕಫವು ಪ್ರಕುಪಿತವಾಗಿ ಬೊಬ್ಬೆಯನ್ನುಂಟು ಮಾಡುವುದು. ಅದರಲ್ಲಿ ತುರಿ, ಗಟ್ಟಿಯಾದ ಕೀವು ಸೋರುವಿಕೆ, ಕಠಿನವಾಗಿರುವಿಕೆ, ಸ್ವಲ್ಪಬಾಧೆ, ಬಿಳುಪಾಗಿರುವಿಕೆ ಮೊದಲಾದ ಚಿಹ್ನೆಗಳು ಕಾಣುವುವು.

ಶಂಖಾವರ್ತ ಭಗಂದರದಲ್ಲಿ ತ್ರಿದೋಷಗಳು ಪ್ರಕೋಪವನ್ನು ಹೊಂದಿ ಬೊಬ್ಬೆಯನ್ನುಂಟುಮಾಡುವುದು. ಅದರಲ್ಲಿ ಅನೇಕ ವಿಧಗಳಾದ ನೋವುಂಟಾಗಿ ಬೊಬ್ಬೆಯು ಮೇಕೆಯ ಕಣ್ಣಿನಂತಿರುವಿಕೆ, ಶಂಖದಲ್ಲಿರುವ ಸುಳಿಯಂತೆ ಆವರ್ತವುಳ್ಳದ್ದಾಗಿರುವಿಕೆ, ಮತ್ತು ತ್ರಿದೋಷ ಲಕ್ಷಣಗಳು ಕಂಡುಬರುವುವು.

ಋಜು ಭಗಂದರದಲ್ಲಿ ವಾತಶ್ಲೇಷ್ಮಗಳ ಲಕ್ಷಣಗಳು ಕಾಣುವುವು.

ಪರಿಕ್ಷೇಪಿ ಭಗಂದರಲ್ಲಿ ವಾತಪಿತ್ಥ ಲಕ್ಷಣಗಳು ಕಾಣುವುವು.

ಆರ್ಶ್ಯೋಜ ಭಗಂದರದಲ್ಲಿ ಪಿತ್ಥಶ್ಲೇಷ್ಮ ಲಕ್ಷಣಗಳು ಕಾಣುವುವು.

ಉನ್ಮಾರ್ಗಿ ಭಗಂದರದಲ್ಲಿ ಕಂಟಕಾದಿಗಳಿಂದ ಗುದಸ್ಥಾನದಲ್ಲುಂಟಾದ ಗಾಯವು ಚಿಕಿತ್ಸೆಮಾಡದೆ ಉಪೇಕ್ಷಿಸುವುದರಿಂದ ದಿನದಿನಕ್ಕೆ ವೃದ್ಧಿಯಾಗಿ ಹುಳುಗಳು ಹುಟ್ಟುವುವು. ಆ ಹುಳಗಳು ಅನೇಕ ದ್ವಾರಗಳನ್ನುಂಟುಮಾಡುವುದು.

ಭಗಂದರಗಳೆಲ್ಲವೂ ದುಸ್ಸಾಧ್ಯಗಳು. ಅದರಲ್ಲಿ ಶಂಖಾವರ್ತ ಭಗಂದರವು, ಉನ್ಮಾರ್ಗ ಭಗಂದರವು ಅತಿ ಅಸಾಧ್ಯಗಳೆಂಬದಾಗಿ ತಿಳಿಯುವುದು.

## ಭಗಂದರ ರೋಗದಲ್ಲಿ ಅಸಾಧ್ಯ ಲಕ್ಷಣ.

೧. ಬಹಳ ಗಾಯವಾಗಿ ತ್ರಿದೋಷದಿಂದ ಹುಟ್ಟಿದ ಭಗಂದರವು ಧ್ವಜಾಕಾರವಾಗಿ ಕ್ರಿಮಿಯಿಂದ ಸಹಿತವಾಗಿ ಮಲಮೂತ್ರ ವಾಯುಸಹಿತ ವಹಿಸಿರುವುದು ಅಸಾಧ್ಯವು.

೨. ತ್ರಿದೋಷದಿಂದ ಉಂಟಾದ ವಾಯು, ಮೂತ್ರ, ಕ್ರಿಮಿ, ಮಲ, ಶುಕ್ಲ ಉಳ್ಳ ಭಗಂದರವು ಅಸಾಧ್ಯವು.

## ಭಗಂದರ ಚಿಕಿತ್ಸೆಗಳು.

೧. ಶುದ್ಧಿಮಾಡಿದ ಗುಗ್ಗುಳ ೫ ಪಲ, ಹಿಪ್ಪಲಿ ೧ ಪಲ, ತ್ರಿಫಲೆ ಪ್ರತ್ಯೇಕ ೧ ಪಲ, ಲವಂಗತೊಕ್ಕು ಯಾಲಕ್ಕಿ ಎರಡೂ ಪ್ರತ್ಯೇಕ ೪ ವರಹತೂಕ ಇವುಗಳನ್ನು ಚೂರ್ಣಿಸಿ ಜೇನುತುಪ್ಪ ಬೆರಸಿ ದೇಹದವೊಳಕ್ಕೆ ಪ್ರತಿದಿನ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ಹೊತ್ತಿಗೆ ಕಾಲುತೊಲೆಯಂತೆ ೭-೧೪ ದಿವಸ ಕೊಡಿಸಲು ಕುಷ್ಠ, ಭಗಂದರ, ಗುಲ್ಮ, ಈ ಮೂರೂ ಶಮನವಹುದು. ಪಥ್ಯ ತೊಗರೀ ಬೇಳೆ ಸಿಹಿಸಾರು ಅನ್ನ.

೨. ಅಮೃತಬಳ್ಳಿ, ಯಾಲಕ್ಕಿ, ವಾಯುವಿಳಂಗ, ಕೊಡಸಿಗೇಬೀಜ, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಚೆಟ್ಟು, ಶುದ್ಧಿಮಾಡಿದ ಗುಗ್ಗುಳ ಇವುಗಳಂ ಕ್ರಮವಾಗಿ ಏಕೋತ್ತರವೃದ್ಧಿಯಿಂದ ಕೂಡಿಸಿ ಚೂರ್ಣಿಸಿ, ವಸ್ತ್ರಗಾಳಿತವನ್ನುಮಾಡಿ ಜೇನುತುಪ್ಪದಿಂದ ಕಲಸಿ ಪ್ರತಿದಿನ ಬೆಳಿಗ್ಗೆ ಸಾಯಂಕಾಲ ೨ ಹೊತ್ತು, ಹೊತ್ತಿಗೆ ಕಾಲುತೊಲೆಯಂತೆ ೭-೧೪ ದಿವಸ ಒಳಕ್ಕೆ ಕೊಡಲು ಪಿಟಕಾ, ಸ್ಥೂಲತ್ವ, ಭಗಂದರ ಇವು ಪರಿಹರ. ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ.

೩. ಲಕ್ಕಲಿಬೇರು, ಮಟವಾಲಂಗಿಬೇರು ಇವೆರಡನ್ನೂ ಪ್ರತ್ಯೇಕ ೪ ವರಹತೂಕಗಳನ್ನು ೧ ಬಳ್ಳ ನೀರಿನಲ್ಲಿ ಕಷಾಯವೆತ್ತಿ ಅರಮಾನ ಉಳಿಯುವಂತೆ ಕಾಯಿಸಿ ೧ ವರಹಾತೂಕ ಸೈಂಧವಲವಣವನ್ನೂ ಸ್ವಲ್ಪ ತಿಲತೈಲವನ್ನೂ ಕೂಡಿಸಿ ಕುಡಿಯಕೊಡಲು ಭಗಂದರ ಶಮನವಹುದು.

೪. ಕಗ್ಗಲೀಚಕ್ಕೆ, ತ್ರಿಫಲ ಇವುಗಳ ಕಷಾಯಮಾಡಿ ಅದಕ್ಕೆ ಎಮ್ಮೆಯ ತುಪ್ಪ, ವಾಯುವಿಳಂಗದ ಚೂರ್ಣ ಇವುಗಳನ್ನು ಸೇರಿಸಿ ಕುಡಿಸಿದರೆ ಭಗಂದರ ವ್ರಣವು ನಾಶವಾಗುತ್ತದೆ.

೫. ತ್ರಿಫಲಾಗುಗ್ಗುಲ:—ತ್ರಿಫಲ ಚೂರ್ಣ ಮೂರುಪಲ, ಹಿಪ್ಪಲಿಯ ಚೂರ್ಣ ಒಂದುಪಲ, ಶುದ್ಧಿಮಾಡಿದ ಗುಗ್ಗುಳ ಐದುಪಲ ಇವಿಷ್ಟನ್ನೂ ಸೇರಿಸಿ ಚನ್ನಾಗಿ ಕುಟ್ಟಿ ತುಪ್ಪವನ್ನು ಸ್ವಲ್ಪ ಸೇರಿಸಿ ಕಲಸಿ ಗುಳಿಗೆಗಳನ್ನು ಮಾಡಿಕೊಂಡು ಜೀರ್ಣಶಕ್ತಿಯನ್ನು ನೋಡಿಕೊಂಡು ಸೇವಿಸುತ್ತ ಬರುವುದು. ಇದರಿಂದ ಭಗಂದರ, ಗುಲ್ಮ, ಶೋಭೆ, ಮೂಲವ್ಯಾಧಿ ಇವುಗಳು ಗುಣವಾಗುತ್ತವೆ.

# ಮುವ್ವತ್ತೈದನೆಯ ಅಧ್ಯಾಯ.

## ಶೋಭೆರೋಗ—ಔಷಧಗಳು.

### ಶೋಭೆ ಲಕ್ಷಣ.

ವಾತವು ಪ್ರಕೋಪವಾಗಿ ಸ್ವಕಾರಣಗಳಿಂದ ದುಷ್ಟಗಳಾದ ಪಿತ್ಥಶ್ಲೇಷ್ಮಗಳನ್ನು ಬಾಹ್ಯನಾಡಿಗಳಲ್ಲಿ ವ್ಯಾಪಿಸುವಂತೆ ಮಾಡಿ ಅವುಗಳಿಂದ ತಡೆಯಲ್ಪಟ್ಟ ಮಾರ್ಗವುಳ್ಳದ್ದಾಗಿ ಚರ್ಮವನ್ನಾಶ್ರಯಿಸಿ ಶೋಭೆಯನ್ನುಂಟುಮಾಡುವುದು.

ಶೋಭೆಯಲ್ಲಿ ಊತವು ಅತಿ ಉನ್ನತವಾಗಿ ಮರದಂತಿರುವಿಕೆ, ಉಷ್ಣವು, ಸಿರೆಗಳು ವ್ಯಾಪಿಸಿರುವಿಕೆ, ಶರೀರವು ವರಟಾಗಿ ವಿವರ್ಣವಾಗುವಿಕೆ ಇವು ಸಾಮಾನ್ಯ ಲಕ್ಷಣಗಳಾಗಿರುವುವು.

ಶೋಭೆರೋಗವು ವಾತ, ಪಿತ್ಥ, ಶ್ಲೇಷ್ಮ, ವಾತಶ್ಲೇಷ್ಮ, ಪಿತ್ಥಶ್ಲೇಷ್ಮ, ವಾತಪಿತ್ಥ, ಸನ್ನಿಪಾತ, ಅಭಿಘಾತ, ವಿಷಮಗಳೆಂದು ಒಂಭತ್ತು ವಿಧವಾಗಿರುವುದು.

ವಾತಶೋಭೆಯಲ್ಲಿ ಊತವು ಚಂಚಲವಾಗಿರುವಿಕೆ, ಚರ್ಮವು ತೆಳುವಾಗಿ ಅತಿ ಕಠಿನವಾಗಿ ಕೆಂಪು ಬಣ್ಣವುಳ್ಳದ್ದಾಗಿರುವಿಕೆ, ಸ್ಪರ್ಶವು ತಿಳಿಯದೆ ತುರಿಯುಂಟಾಗಿರುವಿಕೆ, ರೋಗವು ಹಗಲಿನಲ್ಲಿ ಅಧಿಕವಾಗಿರುವಿಕೆ ಈ ಲಕ್ಷಣಗಳಿರುವುವು.

ಪಿತ್ಥಶೋಭೆಯಲ್ಲಿ ಊತವು ಮೃದುವಾಗಿಯೂ, ವಾಸನೆಯುಳ್ಳದ್ದಾಗಿಯೂ ಇರುವಿಕೆ ; ಕಪ್ಪು, ಹಳದಿ, ಕೆಂಪು ಈ ಬಣ್ಣಗಳುಳ್ಳದ್ದಾಗಿರುವಿಕೆ; ಭ್ರಮೆ, ಜ್ವರ, ನೀರಡಿಕೆ, ಬೆವರು, ಉರಿ, ನೋವು ಉಂಟಾಗುವಿಕೆ, ಕಣ್ಣುಗಳು ಕೆಂಪಾಗಿರುವಿಕೆ ಈ ಚಿಹ್ನೆಗಳಿರುವುವು.

ಶ್ಲೇಷ್ಮಶೋಭೆಯಲ್ಲಿ ಊತವು ಭಾರವಾಗಿ ಕಠಿನವಾಗಿರುವಿಕೆ, ಪಾಂಡುವರ್ಣವು, ಅರೋಚಕವು, ಜೊಲ್ಲು ಸುರಿಯುವಿಕೆ, ಅತಿನಿದ್ರೆ, ವಾಂತಿ, ಅಗ್ನಿಮಾಂದ್ಯವು, ಕೈಯಿಂದೊತ್ತಿದರೆ ಹಳ್ಳ ಬೀಳುವಿಕೆ, ರಾತ್ರಿಯಲ್ಲಿ ಊತವು ಅಧಿಕವಾಗಿರುವಿಕೆ ಮೊದಲಾದ ಚಿಹ್ನೆಗಳು ಕಾಣುವುವು.

ದ್ವಿದೋಷ ಶೋಭೆಯಲ್ಲಿ ದ್ವಿದೋಷ ಲಕ್ಷಣಗಳೂ, ತ್ರಿದೋಷ ಶೋಭೆಯಲ್ಲಿ ತ್ರಿದೋಷ ಲಕ್ಷಣಗಳೂ ಉಂಟಾಗಿರುವುವು.

ದಂಡಪ್ರಹಾರ, ಶಸ್ತ್ರಾದಿಗಳಿಂದ ಛೇದ, ಹಿಮಗಾಳಿ, ಸಮುದ್ರಗಾಳಿ, ಗೇರುಬೀಜಗಳ ರಸ, ನಸುಗುನ್ನಿ ರಸ, ಮುಳ್ಳು ಇವುಗಳಿಂದ ಶರೀರದಲ್ಲಿ ಊತವು ಹುಟ್ಟುವುದು. ಅಂತಹ ಊತವು ಅಧಿಕ ಉಷ್ಣವಾಗಿ ಕೆಂಪುಬಣ್ಣವುಂಟಾಗಿ ಸ್ವಲ್ಪ ಪಿತ್ಥಶೋಭೆ ಲಕ್ಷಣಗಳುಂಟಾಗಿರುವುದು. ಇದು ಅಭಿಘಾತಜಶೋಭೆಯೆನ್ನಲ್ಪಡುವುದು.

ವಿಷಾದಿ ಸಂಬಂಧಗಳಿಂದ ವಿಷಶೋಭೆಯು ಹುಟ್ಟುವುದು ; ಅದರಲ್ಲಿ ಮೃದುತ್ವವು, ಚಲಿಸುವಿಕೆಯು, ಶೀಘ್ರವಾಗಿ ವ್ಯಾಪಿಸುವಿಕೆ, ಉರಿಯೂ ನೋವೂ ವಿಶೇಷವಾಗಿರುವಿಕೆ ಮೊದಲಾದ ಚಿಹ್ನೆಗಳು ಕಾಣುವುವು.

### ಶೋಭೆಯಲ್ಲಿ ಅಸಾಧ್ಯ ಲಕ್ಷಣ.

೧. ಕೆಳಗಿನಿಂದ ಮೇಲಕ್ಕೆ ಕಂಠದವರಿಗೂ ಏರುವ ಶೋಭೆಯೂ ಅಸಾಧ್ಯವು.

೨. ಶ್ವಾಸ, ಬಾಯಾರಿಕೆ, ವಾಂತಿ, ದುರ್ಬಲತ್ವ, ಜ್ವರ, ಅರುಚಿ ಇವುಗಳಿರುವ ಶೋಭೆಯೂ ಅಸಾಧ್ಯವು.

೩. ಇತರ ಉಪದ್ರವಗಳಿಂದ ಹುಟ್ಟಿದ ಶೋಭೆ ಪುರುಷನಿಗೆ ಕಾಲಿನಲ್ಲಿ ಹೆಂಗಸರಿಗೆ ಮುಖ ಗುಹ್ಯಗಳಲ್ಲಿ ಉತ್ಪತ್ತಿಯಾದ ಬಹುದಿನದಿಂದ ಸಂಚಿತವಾದ ಶೋಭೆಯೂ ಅಸಾಧ್ಯವು.

೪. ಕಾಲು ಮಾತ್ರ ಊದಿ ಹೊಟ್ಟೆ ತೆಳ್ಳಗೆ ಇರೋಣ ಮತ್ತು ಶಕ್ತಿಹೀನವಾಗಿರುವ ಶೋಭೆಯೂ ಅಸಾಧ್ಯವು.

### ಶೋಭೆಗೆ ಚಿಕಿತ್ಸೆಗಳು.

೧. ತಪಸಿಚಕ್ಕೆ, ಕಸ್ತೂರಿ ಅರಸಿನ, ಮೆಣಸು ಇವು ಮೂರೂ ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಹೊತ್ತಿಗೆ || ತೊಲೆ ಚೂರ್ಣ ಬಿಸಿನೀರಿನಲ್ಲಿ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೭-೧೪ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶೋಭೆ, ಪಾಂಡು, ಕಾಮಾಲೆ ಗುಣವಾಗುವುದು.

೨. ಬಿಳೇಕೊಮ್ಮೇಬೇರು, ನೀರುಬೊಮ್ಮೇಸೊಪ್ಪು, ಲಕ್ಕಲಿಸೊಪ್ಪು, ಗರುಗದಸೊಪ್ಪು, ಶುಂಠಿ, ನೀರುಮುಳ್ಳಿ, ಚಿತ್ರಮೂಲ ಇವುಗಳನ್ನು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯುವುದು. ಹೀಗೆ ಬೆಳಿಗ್ಗೆ ಹೊತ್ತು ೭ ದಿವಸ ಕೊಡುವುದು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಶೋಭೆ ಗುಣವಾಗುವುದು.

೩. ಮುಂಡಕಳ್ಳಿಬೇರು, ಮಂಗರವಳ್ಳಿ, ಬಿಳೇಕೊಮ್ಮೇಬೇರು, ಪರ್ಪಾಷ್ಟಕ, ಶುಂಠಿ, ಅಳಲೇಕಾಯಿಸಿಪ್ಪೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯುವುದು. ಹೀಗೆ ಬೆಳಿಗ್ಗೆ ೭ ದಿವಸ ಕೊಡುವುದು. ಇದಕ್ಕೆ ಪಥ್ಯ ಹಸುವಿನ ಹಾಲು ಅನ್ನ. ಇದರಿಂದ ಶೋಭೆ ಗುಣವಾಗುವುದು.

೪. ಬಿಳೇಕೊಮ್ಮೇಬೇರು, ಬಿಳೇಉಪ್ಪೆಸೊಪ್ಪು, ಚಿತ್ರಮೂಲ, ಶುಂಠಿ, ಅಳಲೇಕಾಯಿಸಿಪ್ಪೆ, ಮುಂಡಕಳ್ಳಿಬೇರು, ಇವು ಸಮಭಾಗ ತಂದು ಕುಟ್ಟಿ ಹಸುವಿನಮೂತ್ರ ಹಾಕಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯು

ವುದು. ಹೀಗೆ ಬೆಳಿಗ್ಗೆ ೭ ದಿವಸ ಕೊಡುವುದು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಶೋಭೆ, ಪಾಂಡು ಗುಣವಾಗುವುದು.

೫. ಚವ್ಯ, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಬಿಳೀ ಕೊಮ್ಮೇಬೇರು, ಶುಂಠಿ ಇವು ಸಮಭಾಗ ತಂದು ಕುಟ್ಟಿ ಹಸುವಿನಮೂತ್ರ ಹಾಕಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಕುಡಿಯುವುದು. ಹೀಗೆ ಬೆಳಿಗ್ಗೆ ೭ ದಿವಸ ಕೊಡುವುದು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಶೋಭೆ, ಪಾಂಡು ಗುಣವಾಗುವುದು.

೬. ಗೊರಮಿಡಿ, ಮುಳ್ಳುಹರಿವೇಸೊಪ್ಪಿನ ಬೇರು, ಕೆಂಪು ಉತ್ತರೇಣಿ, ಹುಣಿಸೇಬೊಬ್ಬಡೆ, ಇವು ಸಮಭಾಗ ತಂದು ಸುಟ್ಟು ಕರುಕುಮಾಡಿ ಸೈಂಧವ ಲವಣ ೧ ತೊಲೆ, ಕರುಕು ೧ ತೊಲೆ ಇವು ಎರಡೂ ಖಲ್ವದಲ್ಲಿ ಹಾಕಿ ಮೇಕೇ ಮೂತ್ರದಲ್ಲಿ ಅರೆದು ೨ ಆಣೆ ತೂಕ ಮಾತ್ರೆಮಾಡಿ ಹಸುವಿನಮಜ್ಜಿಗೆಯಲ್ಲಿ ಕಲಸಿ ಕೊಡುವುದು. ಹೀಗೆ ಬೆಳಿಗ್ಗೆ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ಹಸುವಿನ ಹಾಲು ಅನ್ನ. ಇದರಿಂದ ಶೋಭೆ ಗುಣವಾಗುವುದು.

೭ ರಾಮಗುಳ್ಳ ಸಮೂಲ ತೂಕದ ೧೨ ಶೇರು ತಂದು ಚನ್ನಾಗಿ ಕುಟ್ಟಿ ಒಂದು ಮಡಿಕೆಯಲ್ಲಿಹಾಕಿ ನೀರುಹಾಕಿ ಅಳಲೇಕಾಯಿ ೧೦೦ ತಂದು ಮೇಲಿನ ಸಿಪ್ಪೆ ತೆಗೆದುಕೊಂಡು ಕುಟ್ಟಿ ಮಡಿಕೆಯಲ್ಲಿಹಾಕಿ ಒಲೆಯಮೇಲಿಟ್ಟು ಉರಿಹಾಕಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಇದನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ಹಳೇಬೆಲ್ಲ ೧೨ ಶೇರು ಹಾಕಿ ಒಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಈ ಕೆಳಗಿನ ಚೂರ್ಣವನ್ನು ಹಾಕುವುದು. ಲವಂಗಪತ್ರೆ, ದಾಲ್‌ಚಿನ್ನಿ, ನಾಗಕೇಸರಿ, ಯಾಲಕ್ಕಿ ಇವು ದಿನಸಿಗೆ ೩ ತೊಲೆ, ಶುಂಠಿ ೩ ತೊಲೆ, ಹಿಪ್ಪಲಿ ೩ ತೊಲೆ, ಮೆಣಸು ೩ ತೊಲೆ, ಅಳಲೇಕಾಯಿಸಿಪ್ಪೆ ೩ ತೊಲೆ, ತಾರೇಕಾಯಿಸಿಪ್ಪೆ ೩ ತೊಲೆ, ನೆಲ್ಲೀಕಾಯಿ ೩ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಜೇನುತುಪ್ಪ ೧ ಶೇರು ಹಾಕಿ ಪಕ್ವವಾಗಿ ಲೇಹ್ಯಮಾಡಿ ಇಟ್ಟುಕೊಳ್ಳುವುದು. ಹೊತ್ತಿಗೆ ಯಳಚೀ ಬೀಜದಪ್ರಮಾಣ ತೆಗೆದುಕೊಳ್ಳುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧ಳ ದಿನ ಕೊಡುವುದು. ಇದಕ್ಕೆ ಪಥ್ಯ ಹಸುವಿನ ಹಾಲು ಅನ್ನ. ಇದರಿಂದ ಶೋಭೆ, ಉಬ್ಬಸ ಗುಣವಾಗುವುದು.

೮. ಗಜ್ಜುಗದಸೊಪ್ಪಿನಕುಡಿ ೧ ಹಿಡಿ, ಲವಂಗ ೧ ತೊಲೆ, ಮೇಕೆಹಿಕ್ಕೆ ೧೦ ಇವು ಖಲ್ವದಲ್ಲಿ ಹಾಕಿ ಮೇಕೇಮೂತ್ರದಲ್ಲಿ ಅರೆದು ಯಳಚೀಬೀಜದ ಪ್ರಮಾಣ ಮಾತ್ರೆಮಾಡಿ ಬೆಳಿಗ್ಗೆ ೭ ದಿವಸ ಈ ಕೆಳಗೆ ಬರೆದಿರುವ ಕಷಾಯದಲ್ಲಿ ಒಂದು ಮಾತ್ರೆಯನ್ನು ಕೊಡುವುದು. ಕಿರುನೆಲ್ಲಬೇರು, ರೇವಲಚಿನ್ನಿ, ಬಿಳೀ ಜೀರಿಗೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ

ಮೇಲ್ಕಂಡ ಮಾತ್ರೆಯನ್ನು ಕಲಸಿ ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ ಅಥವಾ ಹಸುವಿನಹಾಲು ಅನ್ನ. ಇದರಿಂದ ಪಸರಿಕೆ, ಕಾಮಾಲೆ, ಪಾಂಡು, ಶೋಭೆ ಗುಣವಾಗುವುದು.

೯. ಕಿರುನೆಲ್ಲಿಬೇರು ೧ ಹಿಡಿ, ಚಿಳ್ಳೇಬೀಜ ೧ ತೊಲೆ, ಬಿಳೇಜೀರಿಗೆ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಇದಕ್ಕೆ ಕಲ್ಲುಸಕ್ಕರೆ ಕಾಲುತೊಲೆ, ಗಂಟುಶೀಗೇಕಾಯಿ ಚೂರ್ಣ ಕಾಲುತೊಲೆ ಹಾಕಿ ಕಲಸಿ ಕುಡಿಯುವುದು. ಹೀಗೆ ಬೆಳಿಗ್ಗೆ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ ಅಥವಾ ಹಸುವಿನಮಜ್ಜಿಗೆ ಅನ್ನ. ಇದರಿಂದ ಶೋಭೆ, ಕಾಮಾಲೆ, ಪಸರಿಕೆ, ಕಣ್ಣುಗಳು ಅರಿಸಿನಬಣ್ಣ, ಮೂತ್ರ ಅರಿಸಿನಬಣ್ಣ ಆಗುವುದು ಇವುಗಳು ಗುಣವಾಗುವುವು

೧೦. ಶುದ್ಧಿಮಾಡಿದ ಪಾದರಸ ||| ತೊಲೆ, ಶುದ್ಧಿಮಾಡಿದ ಹವಳಸರಿ ಗಂಧಕ ||| ತೊಲೆ, ಇವೆರಡೂ ಖಲ್ವದಲ್ಲಿ ಹಾಕಿ ಅರೆಯುವುದು. ಮಂಡೂರ ||| ತೊಲೆ, ಕೊತ್ತುಂಬರಿಬೀಜ ಕಾಲುತೊಲೆ, ಕಿರುನೆಲ್ಲಿ ಕಾಲುತೊಲೆ, ಹಿಪ್ಪಲಿ ಕಾಲುತೊಲೆ ಇವು ಮೂರೂ ಕುಟ್ಟಿ ಚೂರ್ಣಮಾಡಿ ಶೋಧಿಸಿ ಇವೆಲ್ಲವನ್ನೂ ಖಲ್ವದಲ್ಲಿ ಹಾಕಿ ಹಸೀ ಶುಂಠೀರಸದಲ್ಲಿ ಚನ್ನಾಗಿ ಅರೆದು ಮೆಣಸಿನಕಾಳು ಪ್ರಮಾಣ ಮಾತ್ರೆ ಕಟ್ಟಿ ಇಟ್ಟುಕೊಳ್ಳುವುದು. ಹೊತ್ತಿಗೆ ೧ ಮಾತ್ರೆಯಂತೆ ಬೆಳಿಗ್ಗೆ ಸಾಯಂಕಾಲ ೭ ದಿನ ಈ ಕೆಳಗೆ ಬರೆದಿರುವ ಕಷಾಯದಲ್ಲಿ ಕೊಡುವುದು. ಚಿಲಕೀರೇಬೇರು, ಅಮೃತಬಳ್ಳಿ, ಕೊತ್ತುಂಬರಿಬೀಜ, ಬಿಳೀಜೀರಿಗೆ, ಬಿಳೀ ಕೊಮ್ಮೇಬೇರು, ಮೆಣಸು, ಕೊಳವಳಿಕೆಬೇರು, ಶೀಸೋರೆಬಳ್ಳಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಇಟ್ಟುಕೊಳ್ಳುವುದು. ಮಾತ್ರೆ ಬಾಯಿಯಲ್ಲಿ ಹಾಕಿಕೊಂಡು ಅದರಮೇಲೆ ೧ ತೊಲೆಯಷ್ಟು ಕಷಾಯ ಕುಡಿಯುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶೋಭೆ ಗುಣವಾಗುವುದು.

೧೧. ಶುಂಠಿ ೧ ಪಾವು, ಮೆಣಸು ೧ ಪಾವು, ಮೋಡಿ ೧ ಪಾವು, ಓಮ ೧ ಪಾವು, ಬಿಳೇಜೀರಿಗೆ ೧ ಪಾವು, ಚಿತ್ರಮೂಲ ೧ ಪಾವು, ಅತಿಬಜೆ ೧ ಪಾವು, ಅಳಲೇಕಾಯಿಶಿಪ್ಪೆ ೮ ಪಾವು ಇವುಗಳು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಇದಕ್ಕೆ ಶುದ್ಧಿಮಾಡಿದ ಹಿಂಗು ೧|| ತೊಲೆ ಹಾಕಿ ಖಲ್ವದಲ್ಲಿ ಅರೆದು ಮೇಲ್ಕಂಡ ಚೂರ್ಣದಲ್ಲಿ ಕಲಸಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಚೂರ್ಣ ಜೇನುತುಪ್ಪದಲ್ಲಿ ಕಲಸಿ ತೆಗೆದುಕೊಳ್ಳುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೭ ದಿವಸ ಕೊಡುವುದು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಶೋಭೆ, ಮೈನೋವು ಗುಣವಾಗಿ ಜಲಮಲ ಸರಿಯಾಗಿ ಆಗಿ ದೀಪನವನ್ನುಂಟುಮಾಡುವುದು.

೧೨. ಸೌವರ್ಚಲವಣ ೧ ತೊಲೆ, ಶುಂಠಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಲವಂಗಪತ್ರೆ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇದಕ್ಕೆ ೫ ತೊಲೆ ಸಕ್ಕರೆ ಹಾಕಿ ಕಲಸಿ ಇಟ್ಟುಕೊಳ್ಳುವುದು ಹೊತ್ತಿಗೆ ॥ ತೊಲೆ ಬಿಸಿನೀರಿನಲ್ಲಿ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶೋಭೆ ಗುಣವಾಗುವುದು.

೧೩. ನೆಲತಾಟಿಗಡ್ಡೆ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ॥ ತೊಲೆ ಚೂರ್ಣ ಹಸುವಿನ ಮಜ್ಜಿಗೆಯಲ್ಲಿ ಕಲಸಿ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಶೋಭೆ ಗುಣವಾಗುವುದು.

೧೪. ಬಿಳೀಕೊಮ್ಮೇಬೇರು, ಕಕ್ಕೇಸೊಪ್ಪು, ನೀರುಬೊಮ್ಮೇಸೊಪ್ಪು, ಗರುಗದಸೊಪ್ಪು, ಮುಳ್ಳುಗೋರಮಿಡಿ, ಚಿತ್ರಮೂಲ, ಮೋಡಿ, ಶುಂಠಿ, ಅಳಲೇಕಾಯಿಸಿಪ್ಪೆ ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸ್ವಲ್ಪ ಜೇನುತುಪ್ಪ ಹಾಕಿ ಕುಡಿಯುವುದು. ಹೀಗೆ ೭ ದಿವಸ ತೆಗೆದು ಕೊಳ್ಳಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ಶೋಭೆ ಗುಣವಾಗುವುದು.

೧೫ ಅಳಲಾದಿ ಚೂರ್ಣ:—ಮುಳ್ಳುಸೊಂಡೆ ೧ ತೊಲೆ, ಚಿತ್ರಮೂಲ ೨ ತೊಲೆ, ಮಂಗರವಳ್ಳಿ ೩ ತೊಲೆ, ಸೂರ್ತಿಬೆಳಗಾರ ಅರಳುಮಾಡಿದ್ದು ೪ ತೊಲೆ, ಕರ್ಕಾಟಕಶೃಂಗಿ ೫ ತೊಲೆ, ಗರುಗದಸೊಪ್ಪು ಒಣಗಿದ್ದು ೬ ತೊಲೆ, ಶುದ್ಧಿ ಮಾಡಿದ ಹಿಂಗು ೧ ತೊಲೆ, ಶುಂಠಿ ೮ ತೊಲೆ, ಮೆಣಸು ೯ ತೊಲೆ, ಹಿಪ್ಪಲಿ ೧೦ ತೊಲೆ, ರಾಮಗುಳ್ಳದ ಬೀಜ ೧೧ ತೊಲೆ, ಅಳಲೇಕಾಯಿಸಿಪ್ಪೆ ೧೨ ತೊಲೆ, ತಾರೇಕಾಯಿಸಿಪ್ಪೆ ೧೨ ತೊಲೆ, ನೆಲ್ಲೀಕಾಯಿ ೧೨ ತೊಲೆ, ಲವಂಗ ೧ ತೊಲೆ, ಬಿಳೀಜೀರಿಗೆ ೧ ತೊಲೆ, ಅರಿಸಿನ ೧ ತೊಲೆ, ತಾಳೀಸಪತ್ರೆ ೧ ತೊಲೆ, ಗ್ರಂಧಿಕ ತಗರ ೧ ತೊಲೆ, ಚಾತುರ್ಜಾತ ೪ ತೊಲೆ, ಸಣ್ಣರಾಸ್ಮೆ ೧ ತೊಲೆ, ಓಮ ೧ ತೊಲೆ, ವಾಯುವಿಳಂಗ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ಕಾಲು ತೊಲೆಯಿಂದ ಅರ್ಧತೊಲೆವರಿಗೂ ಚೂರ್ಣವನ್ನು ಜೇನುತುಪ್ಪದಲ್ಲಿ ಕಲಸಿ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೭-೧೪ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಶೋಭೆ, ವಿಂಶತಿಮೇಹ, ಕ್ಷಯ, ವಾಯು, ಪಾಂಡು, ಗುಲ್ಮ, ಶೂಲೆ, ಅಗ್ನಿಮಾಂದ್ಯ, ಶ್ವಾಸಕಾಸ, ಪಿತ್ಥ, ಧನುರ್ವಾಯು, ಎದೇನೋವು ಇವು ಗುಣವಾಗುವುದು.

೧೬. ಪುನರ್ನವಾದಿ ಕಷಾಯ:—ಬಿಳೀಕೊಮ್ಮೆ, ಅಮೃತಬಳ್ಳಿ, ತುಪ್ಪದ ದೇವದಾರು, ಅಳಲೇಕಾಯಿ ಸಿಪ್ಪೆ, ಶುಂಠಿ ಇವು ಸಮಭಾಗ ತಂದು ಕುಟ್ಟಿ ಅಷ್ಟಾ

ವಶೇಷ ಕಷಾಯ ಕಾಯಿಸಿ ಶೋಧಿಸಿ ಇದರಲ್ಲಿ ಶುದ್ಧಿಮಾಡಿದ ಗುಗ್ಗುಲ ಚೂರ್ಣ, ಗೋಮೂತ್ರವನ್ನೂ ಕಲಸಿ ತೆಗೆದುಕೊಂಡರೆ ಉದರಶೋಭೆ ಗುಣವಾಗುವುದು.

೧೭. ಪುನರ್ನವಾದಿ ಕಷಾಯ :—ಬಿಳೀಕೊಮ್ಮೆ, ಮರದರಿಸಿನ, ಅರಸಿನ, ಶುಂಠಿ, ಅಳಲೇಕಾಯಿಸಿಪ್ಪೆ, ಅಮೃತಬಳ್ಳಿ, ಚಿತ್ರಮೂಲ, ಗಂಟುಭಾರಂಗಿ, ತುಪ್ಪದ ದೇವದಾರು ಇವು ಸಮಭಾಗ ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ತೆಗೆದುಕೊಂಡರೆ ಕೈಕಾಲು, ಉದರ, ಮುಖ ಇವುಗಳಲ್ಲಿ ಹುಟ್ಟಿದ ಊತ ಗುಣವಾಗುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ.

೧೮ ಕಕ್ಕೆ ತೊಕ್ಕನ್ನೂ ಅಳಲೇಕಾಯನ್ನೂ ಕಷಾಯುವ ಕಾಯಿಸಿ ಪ್ರಾತಃ ಕಾಲದಲ್ಲಿ ಸೇವಿಸಲು ಶೋಭೆ ನಿವೃತ್ತಿಯಾಗುವುದು.

೧೯ ಅಳಲೇಕಾಯಿಸಿಪ್ಪೆ, ಶುದ್ಧಿಮಾಡಿದ ತಿಗಡೆ, ಹುರಳಿ ಈ ಮೂರನ್ನೂ ಕಷಾಯ ಕಾಯಿಸಿ ಸ್ವಲ್ಪ ಗೋಮೂತ್ರ, ಎಳ್ಳೆಣ್ಣೆ ಎರಡನ್ನೂ ಬೆರೆಸಿ ಕುಡಿಯ ಕೊಡೆ ಶೋಭೆ, ಆನಾಹ, ಮಹೋದರ ಇವಿಷ್ಟೂ ಪರಿಹಾರವಹವು.

೨೦. ಪಂಚಕೋಲ, ಅಳಲೇಕಾಯಿಸಿಪ್ಪೆ, ದೇವದಾರು, ದಶಮೂಲ, ಕೊಮ್ಮೆಬೇರು ಇವಿಷ್ಟನ್ನೂ ಕಷಾಯುವ ಮಾಡಿಕೊಡಿಸಲು ಶ್ಲೇಷ್ಮದಿಂದಲೂ, ವಾತದಿಂದಲೂ, ಸನ್ನಿಪಾತದಿಂದಲೂ ಉಂಟಾಗುವ ಶೋಭೆ ಶಮನವಾಗುವುದು.

೨೧. ಜೀರಿಗೆ, ಅಗಿಲುಶುಂಠಿ, ಹೊನ್ನೇಬೇರು, ಪಂಚಕೋಲ, ಹೆಗ್ಗುಳ್ಳ, ನೆಲಗುಳ್ಳ, ಅರಿಸಿನ ಇವಿಷ್ಟನ್ನೂ ಕಲ್ಕವಮಾಡಿ ಕೊಡಿಸಲು ತ್ರಿದೋಷದಿಂದುಂ ಟಾದ ಶೋಭೆ ಪರಿಹರಿಸುವುದು. ಅದಿಲ್ಲದಿದ್ದರೆ ನೆಲಬೇವು, ಶುಂಠಿ ಈ ೨ ಕಷಾ ಯುವ ಮಾಡಿಕೊಡಿಸಲು ತ್ರಿದೋಷದಿಂದುಂಟಾಗಿ ಬಹುಕಾಲದಿಂದ ಬೆಳೆದ ಶೋಭೆ ಪರಿಹಾರವಹುದು.

೨೨. ಕೊಮ್ಮೆಬೇರು, ಉಡಕೆಪುಟ್ಟಿನಬೇರು, ದೇವದಾರು, ಶುಂಠಿ, ಹಿಪ್ಪಲಿ, ನುಗ್ಗೆಬೇರಿನ ತೊಕ್ಕು, ಕಿರುನೆಲ್ಲೀಬೇರು, ಕೊರಟಿಗೆಬೇರು, ಕೊಳವಳಿಕೆಬೇರು, ಕೊನ್ನಾರೀಗಡ್ಡೆ, ಹೆಗ್ಗುಳ್ಳ, ನೆಲಗುಳ್ಳದಬೇರು, ಬಳ್ಳಿಸುಂಡೆಬೇರು, ಮುರು ಮುರಿಯುಸೊಪ್ಪು, ಹೀರೇಬೇರು, ಕಕ್ಕೆಬೇರು, ಕೊತ್ತುಂಬರಿಬೀಜ, ಹಾವುಮೆಕ್ಕೆ ಬೇರು, ಚಿತ್ರಮೂಲ, ಶುದ್ಧಿಮಾಡಿದ ತಿಗಡೆ, ಒಂದೆಲಗ, ಕರಿಬೇವು, ಮೋಡಿ ಇವಿಷ್ಟೂ ಹಾಕಿ ಅಷ್ಟಾವಶೇಷವಾಗಿ ಕಷಾಯುವ ಕಾಯಿಸಿ ಕೊಡಿಸಲು ಶೋಭೆ ನಾಶಿಯಾಗುವುದು.

೨೩. ನೆಗ್ಗಿಲಬೇರು, ಶುಂಠಿ, ಕೊತ್ತುಂಬರಿಬೀಜ, ಹಿಪ್ಪಲಿ, ದೇವದಾರು ಇವಿಷ್ಟೂ ಹಾಕಿ ಕಷಾಯುವಮಾಡಿ, ಗೋಘೃತ ಮಿಶ್ರಿತವಾಗಿ ಕುಡಿಯುಕೊಡೆ ಪಿತ್ಥದಿಂದುಂಟಾದ ಶೋಭೆ ಪರಿಹರಿಸುವುದು.

೩೪. ಕಹಿಪಡವಲದಬೇರು, ಕಟ್ಟುವತ್ತಿಗೆಬೇರು, ಯಷ್ಟಿಮಧುಕ, ಕಟುಕ ರೋಹಿಣಿ, ಅಳಲೇಕಾಯಿಸಿಪ್ಪೆ, ದೇವದಾರು, ಮರದರಿಸಿನ, ಶ್ರೀಗಂಧ, ಎಕ್ಕೆ ಬೇರು, ಹಾವುಮೆಕ್ಕೇಬೇರು, ಹಬ್ಬೇಬೇರು, ಹಿಪ್ಪಲಿ ಇವಿಷ್ಟನ್ನೂ ಹಾಕಿ ಅಷ್ಟಾವಶೇಷವಾಗಿ ಕಷಾಯವ ಕಾಯಿಸಿ ತುಪ್ಪಬೆರಸಿ ಕೊಡಿಸಲು ತಾಪ, ಬಾಯಾರಿಕೆ, ಭ್ರಮೆ, ದೋಷತ್ರಯದಿಂದುಂಟಾದ ವಿಸರ್ಪ, ಶೋಭೆ, ಅರ್ಶವ್ಯಾಧಿ ಇವಿಷ್ಟೂ ಪರಿಹಾರವಾಗುವುವು.

೩೫ ಶೋಭೆಗೆ ಲೇಪ :—ಬಳ್ಳಿಸುಂಡೆ ಸಮೂಲ, ಕೊಳವಳಿಕೆ ಸಮೂಲ, ಹತ್ತಿಕಟ್ಟಿಗೆಯ ಭಸ್ಮ ಇವಿಷ್ಟೂ ನೀರಿನಿಂದ ಕಲೆಸಿ ಸರ್ವಾಂಗದಲ್ಲೂ ಲೇಪವ ಮಾಡಿಸಲು ಸರ್ವಾಂಗಗಳಲ್ಲಿಯೂ ವ್ಯಾಪಿಸಿದ್ದ ಶೋಭೆ ತಿರುಗುವುದು.

೩೬. ರಾಸ್ನೆ, ಅತಿಬಜೆ, ಎಕ್ಕೇಬೇರು, ಅಳಲೇಕಾಯಿ, ನೆಲ್ಲೀಚಟ್ಟು, ತಾರೇಕಾಯಿ, ವಾಯುವಿಳಂಗ, ನುಗ್ಗೇಬೇರಿನ ತೊಕ್ಕು, ಆಡುಸೋಗೇಬೇರು, ಲೋಳಿಸರದಬೇರು, ತೊಂಡೇಬೇರು, ತಗ್ಗೀಬೇರು, ವ್ಯಾಘ್ರನಖ, ಕುರಟಿಗೆ ಬೇರು, ಸೌವರ್ಚಲವಣ, ನೆಗ್ಗಿಲಬೇರು, ಕಟುಕರೋಹಿಣಿ, ಬೆಲ್ಲಗಣಿಕೆಬೇರು, ಗುಳ್ಳದಬೇರು, ಚಂಗಲಕೋಷ್ಠ, ಕೊಮ್ಮೇಬೇರು, ಶುಂಠಿ, ಚಿತ್ರಮೂಲ ಇವಿಷ್ಟನ್ನೂ ಗೋಮೂತ್ರದಲ್ಲಿ ನುಣ್ಣಗೆ ಅರೆದು ಬಿಸಿಮಾಡಿ ಸರ್ವಾಂಗ ಲೇಪವಂಮಾಡಲು ಶೋಭೆ ಪರಿಹಾರವಹುದು. ಈ ಔಷಧಗಳನ್ನೇ ನೀರಿನಲ್ಲಿ ಹಾಕಿ ಕಾಯಿಸಿ ಆ ನೀರಿನಿಂದ ಶೇಕವ ಮಾಡಿಸಲು ಶೋಭೆ ಪರಿಹಾರ.

೩೭. ನುಗ್ಗೇಬೇರಿನ ತೊಕ್ಕನ್ನೂ ಹಳೇದಾದ ಎಳ್ಳು ಹಿಂಡಿಯನ್ನೂ ಕೂಡಾ ಇಡಿದು ಉಮ್ಮತ್ತದ ರಸದಲ್ಲಿಯೂ, ನಿಂಬೇಹಣ್ಣಿನ ರಸದಲ್ಲಿಯೂ, ಆಡಿನ ಮೂತ್ರದಲ್ಲಿಯೂ ಮರ್ದಿಸಿ ಬಿಸಿಮಾಡಿ ಮೈಗೆ ಲೇಪಿಸಲು ಶೋಭೆ ಪರಿಹರಿಸುವುದು.

೩೮ ಪುಟವ ಹಾಕಿದ ಶಂಖಭಸ್ಮ ೮ ಭಾಗ, ಮುತ್ತುಗದ ಕಟ್ಟಿಗೆ ಭಸ್ಮ ೧೨ ಭಾಗ, ಇಲ್ಲಣ ೧೧ ಭಾಗವನ್ನು ಸೇರಿಸಿ ಚೂರ್ಣಿಸಿ ಗೋಮೂತ್ರದಲ್ಲಿ ಕದಡಿ ೪ ತೂಕ ಚೂರ್ಣವ ಸೇವಿಸಲು ಶೋಭೆ ಪರಿಹಾರ.

# ಮುವ್ವತ್ತಾರನೆಯ ಅಧ್ಯಾಯ.

## ಅಂಡವೃದ್ಧಿರೋಗ— ಔಷಧಗಳು.

### ಅಂಡವೃದ್ಧಿ ಲಕ್ಷಣ.

ಅನ್ನಪಾನಾದಿ ವೈಷಮ್ಯಗಳಿಂದ ಅಧೋಮುಖವಾಗಿ ಸಂಚರಿಸುವ ವಾಯುವು ದುಷ್ಟವಾಗಿ ಕೆಳಹೊಟ್ಟೆಯಲ್ಲಿ ವ್ಯಾಪಿಸಿ ಅಲ್ಲಿ ಶೂಲೆಯನ್ನೂ ಊತ

ವನ್ನೂ ಉಂಟುಮಾಡಿ ನಂತರ ತೊಡೆಯ ಮಡುಪಿನ ಕೆಳಭಾಗದ ಮೂಲಕ ವೃಷಣಕೋಶಗಳಲ್ಲಿ ವ್ಯಾಪಿಸಿ ಅಲ್ಲಿ ನರಗಳಿಗೆ ನೋವನ್ನುಂಟುಮಾಡಿ ವೃಷಣಗಳಲ್ಲಿರುವ ಬೀಜಗಳಲ್ಲಿ ಒಂದನ್ನಾದರೂ ಎರಡನ್ನಾದರೂ ವೃದ್ಧಿಮಾಡುತ್ತಿರುವುದು. ಇದೇ ಅಂಡವೃದ್ಧಿಯೆನ್ನಲ್ಪಡುವುದು.

## ಅಂಡರೋಗದಲ್ಲಿ ಅಸಾಧ್ಯ ಲಕ್ಷಣ.

ಅಂಡದಲ್ಲಿ ಚುಚ್ಚುವಿಕೆ, ದಪ್ಪವಾಗಿ ಮೇಲಕ್ಕೆ ಏರುವುದು ಅಸಾಧ್ಯವು.

## ಅಂಡವಾಯುವಿಗೆ ಚಿಕಿತ್ಸೆಗಳು.

೧. ಚಿಟ್ಟೆರಳೆಣ್ಣೆ ೩ ಶೇರು, ಕಾಚೀಸೊಪ್ಪಿನ ರಸ ೧ ಪಾವು, ಹೊಂಗೇಮರದ ಚಕ್ಕೆ ರಸ ೧ ಪಾವು, ಗಜ್ಜುಗದಬೇರಿನ ಬೊಬ್ಬಡೆ ರಸ ೧ ಪಾವು, ಹಸೀಶುಂಠಿ ರಸ ೧ ಪಾವು, ಬುಡ್ಡೆಹಾಗಲಸೊಪ್ಪಿನ ರಸ ೧ ಪಾವು, ನೆಲಗೊರವಿಡಿ ರಸ ೧ ಪಾವು, ಚಿಟ್ಟೆರಳುಬೇರಿನ ರಸ ೧ ಪಾವು, ಇದಕ್ಕೆ ಕಲ್ಕದ್ರವ್ಯ:—ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೬ ತೊಲೆ, ಮೆಂತ್ಯ ೧ ತೊಲೆ, ವಾಯುವಿಳಂಗ ೩ ತೊಲೆ, ಸಣ್ಣರಾಸ್ಮೆ ೬ ತೊಲೆ, ಅಮೃತಬಳ್ಳಿ ೩ ತೊಲೆ, ಚಿಟ್ಟಾಮುಟ್ಟಿ ೩ ತೊಲೆ, ಅತಿಮಧುರ ೧ ತೊಲೆ, ಸಣ್ಣನೆಗ್ಗಿಲು ೩ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಇವು ಎಲ್ಲವನ್ನೂ ಶೇರಿಸಿ ಪಕ್ವವಾಗಿ ಎಣ್ಣೆ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ೭ ದಿವಸ ಕೊಡುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಮೇಹ ಸಂಬಂಧದಿಂದ ಹುಟ್ಟಿದ ಅಂಡವಾಯು ನಿವಾರಣೆ ಆಗುವುದು.

## ಸಂಜೀವನ ಎಣ್ಣೆ.

೨. ಚಿಟ್ಟೆರಳೆಣ್ಣೆ ೩ ಶೇರು, ಹಸೀಶುಂಠಿ ರಸ ೧ ಶೇರು, ಚಿಟ್ಟೆರಳುಬೇರಿನ ರಸ ೧ ಪಾವು, ಆಡುಸೋಗೇಸೊಪ್ಪಿನ ರಸ ೧ ಪಾವು, ಇದಕ್ಕೆ ಕಲ್ಕದ್ರವ್ಯ:—ಸಣ್ಣರಾಸ್ಮೆ ೬ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ಶುಂಠಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಗಜ್ಜುಗದ ಪೊಪ್ಪು ೬ ತೊಲೆ, ಶುದ್ಧಿಮಾಡಿದ ಪರಂಗಿಚಕ್ಕೆ ೬ ತೊಲೆ, ಸೌವರ್ಚಲವಣ ೧ ತೊಲೆ, ಶುದ್ಧಿಮಾಡಿದ ಲಾಲ್‌ತಿಗಡು ೬ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಶುದ್ಧಿಮಾಡಿದ ಬಿಳೇಧೂಪ ೬ ತೊಲೆ, ಶುದ್ಧಿಮಾಡಿದ ಹಿಂಗು ೧ ತೊಲೆ ಇವು ಎಲ್ಲವನ್ನೂ ಶೇರಿಸಿ ಪಕ್ವವಾಗಿ ಎಣ್ಣೆ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು. ಹೀಗೆ ೭ ದಿವಸ ಕೊಡುವುದು. ಇದಕ್ಕೆ ಪಥ್ಯ

ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಮೋಹಸಂಬಂಧದಿಂದ ಹುಟ್ಟಿದ ಅಂಡವಾಯು ನಿವಾರಣೆ ಆಗುವುದು.

೩. ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ದೊಡ್ಡ ನೀಲೀಬೇರು ೧ ತೊಲೆ, ಲಾಲ್‌ತಿಗಡೆ ೨ ತೊಲೆ, ಹಾವುಮೆಕ್ಕೇಬೇರು ೨ ತೊಲೆ, ಆಡುಸೋಗೆಸೊಪ್ಪು ೨ ತೊಲೆ, ಗಿರಿಕರ್ನಿಕೆಬೇರು ೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ೧ ಶೇರು ಚಿಟ್ಟರಳೆಣ್ಣೆ ಇವುಗಳೆಲ್ಲವನ್ನೂ ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಉರಿಹಾಕಿ ಪಕ್ವವಾಗಿ ಎಣ್ಣೆ ಕಾಯಿಸಿ ಶೋಧಿಸಿಕೊಳ್ಳುವುದು. ಬೆಳಗ್ಗೆ ಬಿಸಿನೀರಿನಲ್ಲಿ ೧ ತೊಲೆ ಎಣ್ಣೆಯನ್ನು ತೆಗೆದುಕೊಳ್ಳಬೇಕು. ಈರೀತಿ ೭ ದಿವಸ ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಅಂಡವಾಯು ಗುಣವಾಗುವುದು.

೪. ಶುದ್ಧಿಮಾಡಿದ ಎಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ, ಶುಂಠಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಮೋಡಿ ೧ ತೊಲೆ, ಸೈಂಧವಲವಣ ೧ ತೊಲೆ, ಕಟುಕರೋಹಿಣಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಇವುಗಳೆಲ್ಲವನ್ನೂ ಖಲ್ವದಲ್ಲಿ ಹಾಕಿ ಮೊಲೆಹಾಲಿನಲ್ಲಿ ೪ ಜಾವ ಅರೆದು ಉದ್ದಿನಕಾಳು ಪ್ರಮಾಣ ಮಾತ್ರೆಮಾಡಿ ಬೆಳಗ್ಗೆ ೧ ಮಾತ್ರೆ ಒಳ್ಳೆ ತುಳಸೀಸೊಪ್ಪಿನ ರಸದಲ್ಲಿ ಕಲಸಿ ಕೊಡಬೇಕು. ಹೀಗೆ ೭-೧೪ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಅಂಡವಾಯು ಗುಣವಾಗುವುದು.

೫. ಶುಂಠಿ ೧ ತೊಲೆ, ಸೂರ್ತಿಬೆಳಗಾರ ಅರಳುಮಾಡಿದ್ದು ||| ತೊಲೆ, ಶುದ್ಧಿಮಾಡಿದ ಹಿಂಗು ||| ತೊಲೆ, ಹೊಟ್ಟುಸುಲಿದ ಬೆಳ್ಳುಳ್ಳಿ ||| ತೊಲೆ, ಹಸೀಕೊಬರಿ ೪|| ತೊಲೆ ಇವುಗಳನ್ನು ಚನ್ನಾಗಿ ಅರೆದು ೧೪ ಮಾತ್ರೆ ಮಾಡುವುದು. ಬೆಳಗ್ಗೆ ೧ ಮಾತ್ರೆ ಬಾಯಲ್ಲಿ ಹಾಕಿಕೊಂಡು ಬಿಸಿನೀರು ಕುಡಿಯಬೇಕು. ಹೀಗೆ ಬೆಳಗ್ಗೆ ಸಾಯಂಕಾಲ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಅಂಡವಾಯು ಗುಣವಾಗುವುದು.

೬. ಮುಸಾಂಬರ ೧ ತೊಲೆ ಹಸುವಿನ ಮೂತ್ರದಲ್ಲಿ ೧ ದಿನ ಶುದ್ಧಿಮಾಡುವುದು. ಶುಂಠಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡುವುದು. ಶುದ್ಧಿಮಾಡಿದ ಜಾಪಾಳ ೧ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಗೋಧಿರವೆ ತಂದು ಗಂಜಿ ಕಾಯಿಸಿ ಈ ಗಂಜಿಯಲ್ಲಿ ೩ ದಿನ ಅರೆದು ಗುರುಗಂಜಿ ಪ್ರಮಾಣ ಮಾತ್ರೆ ಮಾಡುವುದು. ಹೊತ್ತಿಗೆ ೧ ಮಾತ್ರೆ ಬಾಯಿಯಲ್ಲಿ ಹಾಕಿಕೊಂಡು ತಣ್ಣೀರು ಕುಡಿಯುವುದು. ಈರೀತಿ ಬೆಳಗ್ಗೆ

೫-೭ ದಿನ ತೆಗೆದುಕೊಳ್ಳುವುದು. ಭೇದಿ ಜಾಸ್ತಿ ಆದರೆ ಹಸುವಿನ ಮಜ್ಜಿಗೆ ಅನ್ನ ತಿನ್ನುವುದು ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ.

೭. ಲಕ್ಕಲಿಸೊಪ್ಪು ತಂದು ಚನ್ನಾಗಿ ಕುಟ್ಟಿ ಮೇಕೆಹಾಲಿನಿಂದ ಅರೆದು ಯಳಚೇಬೀಜದಷ್ಟು ಮಾತ್ರೆಗಳು ಮಾಡಿ ಬೆಳಗ್ಗೆ ೧ ಮಾತ್ರೆ, ಸಾಯಂಕಾಲ ೧ ಮಾತ್ರೆ ಬಾಯಲ್ಲಿ ಹಾಕಿಕೊಂಡು ಮೇಕೆಹಾಲು ಕುಡಿಯುವುದು. ಈರೀತಿ ೩ ದಿವಸ ಕೊಡುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಅಂಡವಾಯು ಗುಣವಾಗುವುದು

೮. ಬಿಳೀಈರುಳ್ಳಿ ರಸ ೧ ಪಾವು, ತಾಟಬೆಲ್ಲ ೧ ಪಾವು, ಹಸುವಿನ ತುಪ್ಪ ೧ ಪಾವು ಇವು ಮೂರೂ ಕಲಸಿ ಬೆಳಿಗ್ಗೆ ೧ ಪಾವು ತೆಗೆದುಕೊಳ್ಳಬೇಕು. ಈರೀತಿ ೩ ದಿವಸ ತೆಗೆದುಕೊಳ್ಳುವುದು ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಅಂಡವಾಯುವಿಗೆ ಗಜ್ಜುಗದಸೊಪ್ಪು, ಜುಟ್ಟುವೇಸೊಪ್ಪು, ಹುಚ್ಚುಸೋರೇಕಾಯಿಸೊಪ್ಪು ಇವು ಮೂರೂ ಕುಟ್ಟಿ ಚಿಟ್ಟರಳೆಣ್ಣೆ ಬೆಂಕಿಯ ಮೇಲಿಟ್ಟು ಬಿಸಿ ಮಾಡಿ ಇವುಗಳನ್ನೆಲ್ಲಾ ಕಲಸಿ ಅಂಡಕ್ಕೆ ಕಟ್ಟಿದರೆ ಗುಣವಾಗುವುದು.

೯. ಮೊಲದರಕ್ತ, ಕುಂಕುಮಕೇಸರಿ, ಗೋರೋಜನ, ಕಸ್ತೂರಿ ಇವು ಸಮಭಾಗ ಕತ್ತೆಹಾಲಿನಲ್ಲಿ ಅರೆದು ಗುರುಗಂಜಿಗಾತ್ರ ಮಾತ್ರೆಮಾಡಿ ಪ್ರತಿದಿನ ಪ್ರಾತಃಕಾಲ ೧ ಮಾತ್ರೆ ಕತ್ತೆಹಾಲಿನಲ್ಲಿ ಕಲಸಿ ಕೊಡುವುದು. ಈರೀತಿ ೫ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಅಂಡವಾಯು ಗುಣವಾಗುವುದು.

೧೦. ಸಾಸುವೆ, ಬೆಳ್ಳುಳ್ಳಿ, ಬಜೆ, ಹಿಂಗು, ಶುಂಠಿ ಇವು ನಾಲ್ಕೂ ಸಮಭಾಗ ಚೂರ್ಣಮಾಡಿ ಬಟ್ಟೆಯಲ್ಲಿ ಗಂಟುಕಟ್ಟಿ ಒಂದು ಸೌಟಿನಲ್ಲಿ ಚಿಟ್ಟರಳೆಣ್ಣೆ ಹಾಕಿ ಬೆಂಕಿಯಮೇಲಿಟ್ಟು ಕಾಯಿಸಿ ಮೇಲ್ಕಂಡ ಗಂಟು ಎಣ್ಣೆಯಲ್ಲಿ ಅದ್ದಿ ಅಂಡಕ್ಕೆ ಶಾಖ ಕೊಡುತ್ತಾಬಂದರೆ ಗುಣವಾಗುವುದು.

೧೧ ಚಿಟ್ಟರಳುಪೊಪ್ಪು ಮೇಕೆಹಾಲಿನಲ್ಲಿ ಚನ್ನಾಗಿ ಅರೆದು ಅಂಡವಾಯುವಿಗೆ ಕಟ್ಟಲು ಉರಿ, ಥಳುಕು ಗುಣವಾಗುವುದು. ಇದಲ್ಲದೆ ಚಿಟ್ಟರಳುಪೊಪ್ಪು ತಣ್ಣೀರಿನಲ್ಲಿ ಅರೆದು ಕಟ್ಟಿದರೆ ಗುಣವಾಗುವುದು.

೧೨ ಎತ್ತಿನ ನಾಲಿಗೆ ಎಲೆ ತಂದು ಚಿಟ್ಟರಳು ಎಲೆಯಲ್ಲಿ ಇಟ್ಟು ಅದರಲ್ಲಿ ಚಿಕ್ಕ ನಿಂಬೇಹಣ್ಣಿನಗಾತ್ರ ಹಸುವಿನ ಬೆಣ್ಣೆಯಿಟ್ಟು ಅದರಮೇಲೆ ಎತ್ತಿನ ನಾಲಿಗೆ ಎಲೆ ಇಟ್ಟು ಅದರ ಮೇಲೆ ಚಿಟ್ಟರಳುಯಲೆ ಹಾಕಿ ಪೊಟ್ಟಣಕಟ್ಟಿ ಬೆಂಬೂದಿಯಲ್ಲಿ ಬೇಯಿಸಿ ಖಲ್ವದಲ್ಲಿ ಅರೆದು ಬೀಜಕ್ಕೆ ಕಟ್ಟಿದರೆ ಉರಿ ಥಳುಕು ಗುಣವಾಗುವುದು. ಅಥೋಮುಖಿಸೊಪ್ಪು ತಂದು ಮೇಲ್ಕಂಡ ಎತ್ತಿನ ನಾಲಿಗೆಯಂತೆಯೇ ತಯಾರ್ಮಾಡಿ ಕಟ್ಟಿದರೆ ಗುಣವಾಗುವುದು.

೧೩. ಓಮ ೧ ತೊಲೆ, ಗಜ್ಜುಗದ ಪೊಪ್ಪು ೧ ತೊಲೆ, ಸೈಂಧವಲವಣ ‖ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಉಮ್ಮತ್ತಿಸೊಪ್ಪಿನ ರಸ, ಚೇಗೊಡತಿಸೊಪ್ಪಿನ ರಸ ಇವುಗಳನ್ನು ಕಲಸಿ ಬೆಂಕಿಯಮೇಲಿಟ್ಟು ಸ್ವಲ್ಪ ಬೆಚ್ಚಗೆ ಆದಮೇಲೆ ಅಂಡಕ್ಕೆ ಲೇಪಮಾಡಲು ಗುಣವಾಗುತ್ತೆ.

೧೪. ಸುರಹೊನ್ನೆಕಾಯಿ ಬೀಜದ ಪೊಪ್ಪು, ಗಜ್ಜುಗದ ಪೊಪ್ಪು, ಚಿಟ್ಟೆರಳು ಪೊಪ್ಪು ಇವು ಮೂರೂ ಸಮಭಾಗ ಚೂರ್ಣಮಾಡಿ ಬಟ್ಟೆಯಲ್ಲಿ ಗಂಟುಕಟ್ಟಿ ಒಂದು ಸೌಟಿನಲ್ಲಿ ಚಿಟ್ಟೆರಳೆಣ್ಣೆ ಹಾಕಿ ಬೆಂಕಿಯಮೇಲಿಟ್ಟು ಕಾಯಿಸಿ ಮೇಲ್ಕಂಡ ಗಂಟು ಎಣ್ಣೆಯಲ್ಲಿ ಅದ್ದಿ ಅಂಡಕ್ಕೆ ಶಾಖ ಕೊಡುತ್ತಾ ಬಂದರೆ ಗುಣವಾಗುವುದು.

೧೫. ಬೇವಿನಬೀಜದಪೊಪ್ಪು, ಮುತ್ತುಗದಬೀಜದ ಪೊಪ್ಪು, ಅಗಸೇಬೀಜ ಇವು ಮೂರೂ ಸಮಭಾಗ ಚೂರ್ಣಮಾಡಿ ಬಟ್ಟೆಯಲ್ಲಿ ಗಂಟುಕಟ್ಟಿ ಒಂದು ಸೌಟಿನಲ್ಲಿ ಚಿಟ್ಟೆರಳೆಣ್ಣೆ ಹಾಕಿ ಬೆಂಕಿಯಮೇಲಿಟ್ಟು ಕಾಯಿಸಿ ಮೇಲ್ಕಂಡ ಗಂಟು ಎಣ್ಣೆಯಲ್ಲಿ ಅದ್ದಿ ಅಂಡಕ್ಕೆ ಶಾಖ ಕೊಡುತ್ತಾ ಬಂದರೆ ಗುಣವಾಗುವುದು.

೧೬. ಬಿಳೇಜೀರಿಗೆ, ಗಜ್ಜುಗದ ಪೊಪ್ಪು, ಪಾದರಿಲವಣ, ಉಮ್ಮತ್ತಿಸೊಪ್ಪಿನ ರಸ, ಚೇಗೊಡತಿಸೊಪ್ಪಿನ ರಸ ಇವು ಸಮಭಾಗ ತಂದು ಚನ್ನಾಗಿ ಅರೆದು ಅಂಡಕ್ಕೆ ಲೇಪಮಾಡುತ್ತಾ ಬಂದರೆ ಗುಣವಾಗುವುದು.

## ಮುವತ್ತೇಳನೆಯ ಅಧ್ಯಾಯ.

## ಕುರಂಡರೋಗ—ಔಷಧಗಳು.

### ಕುರಂಡ (ತೊಡೆಬಾಳೆ) ಲಕ್ಷಣ.

ಅಧಿಕ ಜಿಗಟಾದ ಪದಾರ್ಥಗಳು ರೋಗಾಸ್ಪದವಾದ ಶಾಕಪಾಕಗಳು ಹುಳಿ ಇವುಗಳನ್ನು ಅಧಿಕವಾಗಿ ಸೇವಿಸುವುದರಿಂದ ವಾತವು ದುಷ್ಟವಾಗಿ ತೊಡೆಯ ಮಡುಪಿನ ಕೆಳಗೆ ಗ್ರಂಧಿಗಳಂತಹ ಊತವನ್ನು ಹುಟ್ಟಿಸುವುದು.

ವಾತಪ್ರಕೋಪಕಾರಕ ಪದಾರ್ಥಗಳನ್ನು ಸೇವಿಸುವಿಕೆ, ಶೀತಲೋದಕದಲ್ಲಿ ಸ್ನಾನಮಾಡುವಿಕೆ, ಭಾರವನ್ನು ಹೊರುವಿಕೆ, ಗದೆ ಮೊದಲಾದ ಆಯುಧಗಳನ್ನು ತಿರುಗಿಸುವಿಕೆ, ಗಟ್ಟಿಯಾಗಿ ಮಾತನಾಡುವಿಕೆ, ಬಹುದೂರ ನಡೆಯುವಿಕೆ, ರತಿಕಾಲದಲ್ಲಿ ವಿಕಾರಗಳಾದ ಬಂಧನಗಳನ್ನು ಮಾಡುವಿಕೆ ಮೊದಲಾದ ಕ್ಷೋಭಕರವಾದ ಕಾರ್ಯಗಳನ್ನು ಮಾಡುವುದರಿಂದಲೂ ವಾತವು ದುಷ್ಟವಾಗಿ ಕರುಳು, ನರಗಳು ಇವುಗಳಲ್ಲಿ ವ್ಯಾಪಿಸಿ ನಾಡಿಗಳಿಗೆ ವೈಕಲ್ಯವನ್ನುಂಟುಮಾಡಿ ಅವುಗಳ ಸ್ಥಾನಗಳನ್ನು ಬಿಡುವಂತೆ ಮಾಡುವುದಲ್ಲದೆ ಆ ನರಗಳನ್ನು ಅಧೋ

ಮುಖವಾಗಿ ಮಾಡಿ ತೊಡೆಯ ಮಡುಪಿನ ಕೆಳಗೆ ಗ್ರಂಥಿಗಳಂತಹ ಶೋಭೆಯನ್ನು ಹುಟ್ಟಿಸುವುದು. ಹೀಗೆ ಶೋಭೆ ಹುಟ್ಟಿದಮೇಲೆ ಜ್ವರವು, ಶೂಲೆ, ಕೃಶತ್ವವು ಇವುಗಳನ್ನು ಸಹಾ ಉಂಟುಮಾಡುವುದು. ಇದೇ ವರ್ಧ್ಮರೋಗವು.

## ಕುರಂಡ ಚಿಕಿತ್ಸೆಗಳು.

೧. ಗಂಡುಹೀರೇಬೀಜದ ಪೊಪ್ಪು ಮುಂಡಕಳ್ಳಿಹಾಲಿನಲ್ಲಿ ಅರೆದು ಮೆಣಸು ಪ್ರಮಾಣ ಮಾತ್ರೆಮಾಡಿ ಪ್ರತಿದಿನ ಪ್ರಾತಃಕಾಲ ೧ ಮಾತ್ರೆ ಸೇವಿಸಿ ಸ್ವಲ್ಪ ಬಿಸಿನೀರು ಕುಡಿಯಬೇಕು. ಈರೀತಿ ೭ ದಿನ ಸೇವಿಸಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ತೊಡೆಬಾಳೆ ಗುಣವಾಗುವುದು

೨. ಹಿರೇಮದ್ದಿನಗಡ್ಡೆ, ಇಂಗಳದಹಣ್ಣಿನ ಮೇಣ ಇವು ಎರಡನ್ನು ಸಾರಾಯಿಯಲ್ಲಿ ಗಂಧ ತೆಗೆದು ಗಡ್ಡೆಗೆ ದಪ್ಪವಾಗಿ ಹಚ್ಚಿ ಅದರಮೇಲೆ ತುರುಕಳ್ಳಿ ಎಲೆ ಇಟ್ಟು ಕಟ್ಟಿದರೆ ಗಡ್ಡೆ ಒಡೆದುಹೋಗುತ್ತೆ.

೩. ಮಹಿಸಾಕ್ಷಿಗುಗ್ಗುಳ ೧ ತೊಲೆ, ಗಂಧಫೇರೋಜಾ ೧ ತೊಲೆ, ಜೇನುಮೇಣ ೨ ತೊಲೆ, ಮೇಲ್ಕಂಡ ಮಹಿಸಾಕ್ಷಿ ಗುಗ್ಗುಳವನ್ನು ಪುಡಿಮಾಡಿ ಮೇಣವನ್ನು ಕರಗಿಸಿ ಗಂಧಫೇರೋಜಾ ೧ ತೊಲೆ ಇವು ಎಲ್ಲವನ್ನೂ ಕಲಸಿ ತೊಡೆಬಾಳೆ ಗಡ್ಡೆ ಒಡೆದಮೇಲೆ ಮೂತಿಬಿಟ್ಟು ಮಿಕ್ಕ ಸ್ಥಳಕ್ಕೆ ಬಟ್ಟೆಯಲ್ಲಿ ಹಚ್ಚಿ ಪಟ್ಟು ಹಾಕಿದರೆ ಒಳಗಿನ ಕೀವು, ಕೆಟ್ಟ ರಕ್ತ, ಮೊಳೆ ಈಚಿಗೆ ತೆಗೆದುಹಾಕುತ್ತದೆ.

೪. ಪೆಟ್ಲುಪ್ಪು ೫ ತೊಲೆ, ಸುಣ್ಣ ೨॥ ತೊಲೆ ಇವೆರಡು ಖಲ್ವದಲ್ಲಿ ಹಾಕಿ ಚಿಟ್ಟರಳೆಣ್ಣೆ ಹಾಕಿ ಕಲಸಿ ತೊಡೆಬಾಳೆ ಗಡ್ಡೆಗಳಿಗೆ ಹಚ್ಚಲು ಗಡ್ಡೆ ಒಡೆದು ಹೋಗುತ್ತೆ.

೫. ಮುಳ್ಳುಹರಿವೇಸೊಪ್ಪು, ಕರೇಉಮ್ಮತ್ತಿಸೊಪ್ಪು, ಚಿತ್ರಮೂಲದ ಸೊಪ್ಪು ಇವು ಮೂರು ೩ ತೊಲೆ, ಬೆಲ್ಲ ೩ ತೊಲೆ, ಸುಣ್ಣ ೧ ತೊಲೆ ಇವುಗಳನ್ನು ಖಲ್ವದಲ್ಲಿ ಚನ್ನಾಗಿ ಅರೆದು ಬಿಲ್ಲೆಮಾಡಿ ತೊಡೆಬಾಳೆಗೆ ಕಟ್ಟಿದರೆ ಒಡದು ಹೋಗುತ್ತದೆ.

೬. ತೊಡೆಬಾಳೆಗಡ್ಡೆಗೆ ಮೊದಲು ಹಸುವಿನಬೆಣ್ಣೆ ಚೆಣಚಿಕಲ್ಲು ಇವು ಸಮಭಾಗ ಖಲ್ವದಲ್ಲಿ ಚನ್ನಾಗಿ ಅರೆದು ಗಡ್ಡೆಗೆ ೨ ಪಟ್ಟುಹಾಕಿದರೆ ಮೆತುವು ಆಗುತ್ತೆ ಅನಂತರ ಅದಕ್ಕೆ ಹಾಕತಕ್ಕ ಔಷಧ:—ಎಲೆಕಳ್ಳಿ ಮೇಲಿನ ತಿಗಡೆ ತೆಗೆದು ಒಳಗಿನ ಖಂಡವನ್ನು ಒರಳಲ್ಲಿ ಹಾಕಿ ರುಬ್ಬಿ ಬಟ್ಟೆಯಲ್ಲಿಟ್ಟು ರಸವನ್ನು ಹಿಂಡಿ ಬಿಟ್ಟು ಆ ಹಿಪ್ಪೆಯನ್ನು ಒಂದು ಗುಂಡುಬದನೆಕಾಯಿ ತಂದು ಮಧ್ಯೆ ಕುಯಿದು ಒಳಗಿನ ಬೀಜಗಳನ್ನು ತೆಗೆದುಹಾಕಿ ಮೇಲ್ಕಂಡ ಕಳ್ಳಿಯ ಹಿಪ್ಪೆಯನ್ನು ತುಂಬಿ ಗಡ್ಡೆಯ ಮೇಲೆ ಇಟ್ಟು ಕಟ್ಟುವುದು. ಒಂದು ಕಟ್ಟಿಗೆ ಕರಗದೆಹೋದರೆ ಮತ್ತೊಂದು ಕಟ್ಟು ಕಟ್ಟಿದರೆ ತೊಡೆಬಾಳೆಗಡ್ಡೆ ಕರಗಿಹೋಗುತ್ತೆ.

೭. ಕರೇಉಮ್ಮತ್ತಿಕಾಯನ್ನು ಬೆಂಬೂದಿಯಲ್ಲಿಟ್ಟು ಸುಟ್ಟು ತೆಗೆದು ಅರೆದು ಬಿಲ್ಲೆಮಾಡಿ ಅದೇ ಉಮ್ಮತ್ತಿಯಲೆಯಲ್ಲಿ ಇಟ್ಟು ಗಡ್ಡೆಯಮೇಲೆ ಹಾಕಿ ಕಟ್ಟುವುದು. ಈರೀತಿ ೩ ಸಲ ಕಟ್ಟಲು ಗಡ್ಡೆ ಒಡೆದುಹೋಗುತ್ತೆ.

೮. ಲಕ್ಕಲಿಸೊಪ್ಪುತಂದು ಚಿಟ್ಟರಳೆ ಎಲೆಯಲ್ಲಿಟ್ಟು ಉಂಡೆಯಂತೆ ಮಾಡಿ ದಾರ ಕಟ್ಟಿ ಬೆಂಬೂದಿಯಲ್ಲಿ ಇಟ್ಟು ಬೆಚ್ಚಗೆಮಾಡಿ ತೆಗೆದು ಗಡ್ಡೆಯಮೇಲೆ ಹಾಕಿ ಕಟ್ಟುವುದು. ಈರೀತಿ ೩ ಸಲ ಕಟ್ಟಲು ಗಡ್ಡೆ ಒಡೆದುಹೋಗುತ್ತೆ.

೯. ಕೋಳಿಮೊಟ್ಟೆಯಲ್ಲಿರುವ ಬಿಳೀಜನಿ, ಬೆಣಚಿಕಲ್ಲು, ರಕ್ತಬೋಳ, ಸುಣ್ಣ, ಅರಸಿನ ಇವುಗಳನ್ನು ಖಲ್ವದಲ್ಲಿ ಹಾಕಿ ಅರೆದು ಗಡ್ಡೆಗೆ ಪಟ್ಟುಹಾಕುವುದು. ಈ ರೀತಿ ಗಡ್ಡೆ ಒಡೆಯುವವರಿಗೂ ಕಟ್ಟುವುದು.

೧೦. ಮುಳ್ಳುಹರಿವೇಸೊಪ್ಪು ೧ ಹಿಡಿ, ಸುಣ್ಣ ೧ ತೊಲೆ, ಬೆಲ್ಲ ೧ ತೊಲೆ ಇವುಗಳನ್ನು ಚನ್ನಾಗಿ ಅರೆದು ಬಿಲ್ಲೆಮಾಡಿ ಕರೇಉಮ್ಮತ್ತಿ ಎಲೆಯಲ್ಲಿಟ್ಟು ಗಡ್ಡೆಗೆ ಕಟ್ಟಿದರೆ ಗಡ್ಡೆ ಒಡೆದುಹೋಗುತ್ತೆ.

೧೧. ತುಂಬೇಸೊಪ್ಪು ೧ ಹಿಡಿ, ಮುಸಾಂಬರ ॥ ತೊಲೆ, ಹೊಟ್ಟುಸುಲಿದ ಬೆಳ್ಳುಳ್ಳಿ ೧ ತೊಲೆ ಈ ಮೂರು ದಿನಸುಗಳನ್ನು ಚೆನ್ನಾಗಿ ಅರೆದು ಬಿಲ್ಲೆಮಾಡಿ ಮುತ್ತುಗದ ಎಲೆಯಲ್ಲಿಟ್ಟು ಗಡ್ಡೆಗೆ ಕಟ್ಟಿದರೆ ಗಡ್ಡೆ ಒಡೆದುಹೋಗುತ್ತೆ.

೧೨. ಗುಳ್ಳೆಶಂಖ ಮತ್ತು ಬಿಲ್ಲೆಚೌಳು ಇವೆರಡನ್ನು ನಿಂಬೇಹಣ್ಣಿನ ರಸ ದಲ್ಲಿ ಅರೆದು ಬಿಲ್ಲೆಮಾಡಿ ಎಕ್ಕದ ಹಣ್ಣೆಲೆಯಲ್ಲಿಟ್ಟು ಗಡ್ಡೆಗೆ ಕಟ್ಟಿದರೆ ಗಡ್ಡೆ ಒಡೆದುಹೋಗುತ್ತೆ.

೧೩. ಎಕ್ಕದಹೂವು ತಂದು ತುಪ್ಪದಲ್ಲಿ ಹುರಿದು ಸ್ವಲ್ಪ ಉಪ್ಪು ಹಾಕಿ ಬೇಯಿಸಿ ತೆಗೆದುಕೊಂಡು ಬಿಲ್ಲೆಮಾಡಿ ತೊಡೆಬಾಳೆಗಡ್ಡೆಗೆ ಕಟ್ಟುವುದು. ಈರೀತಿ ೩ ದಿನ ಕಟ್ಟಿದರೆ ಕರಗಿಹೋಗುವುದು.

೧೪. ತಗರ ೨ ತೊಲೆ ಕಬ್ಬಿಣದ ಸೌಟಿನಲ್ಲಿ ಹಾಕಿ ಬೆಂಕಿಯಮೇಲಿಟ್ಟು ಕರಗಿಸಿ ಕೆಳಗೆ ಇಳಿಸಿಕೊಂಡು ೨ ನಿಮಿಷಗಳ ತರುವಾಯ ಪಾದರಸ ೧॥ ತೊಲೆ ಹಾಕಿ ಬಿಲ್ಲೆಮಾಡಿಕೊಳ್ಳುವುದು. ಈ ಬಿಲ್ಲೆ ಖಲ್ವದಲ್ಲಿ ಅರೆದು ಇಟ್ಟುಕೊಳ್ಳು ವುದು ಮೈದಾಲಕಡಿ ಚೂರ್ಣ ೧ ತೊಲೆ ಚೂರ್ಣಮಾಡಿ ಖಲ್ವದಲ್ಲಿ ಹಾಕಿ ಕೋಳಿಮೊಟ್ಟೆ ಬಿಳೀಜನಿಯಲ್ಲಿ ಅರೆದು ಗಡ್ಡೆಗೆ ಪಟ್ಟುಹಾಕುವುದು ಈರೀತಿ ೩ ದಿವಸ ಹಾಕುವುದು. ತೊಡೆಬಾಳೆಗಡ್ಡೆ ಕರಗಿಹೋಗುವುದು.

೧೫. ಶೀಸ ೧ ತೊಲೆ ಕಬ್ಬಿಣದ ಸೌಟಿನಲ್ಲಿ ಹಾಕಿ ಬೆಂಕಿಯ ಮೇಲಿಟ್ಟು ಕರಗಿಸಿ ಕೆಳಗೆ ಇಳಿಸಿಕೊಂಡು ೨ ನಿಮಿಷಗಳ ತರುವಾಯ ಪಾದರಸ ೧ ತೊಲೆ ಹಾಕಿ ಬಿಲ್ಲೆಮಾಡಿಕೊಳ್ಳುವುದು. ಈ ಬಿಲ್ಲೆ ಖಲ್ವದಲ್ಲ ಅರೆದು ಇಟ್ಟುಕೊಳ್ಳು ವುದು. ಕೆಂಪು ಗುರುಗಂಜಿ ೧ ತೊಲೆ, ವಿಷಮುಷ್ಟಿ ಬೀಜ ೧ ತೊಲೆ, ಗಂಟು ಭಾರಂಗಿ ೧ ತೊಲೆ, ಹಿಂಗು ೧ ತೊಲೆ, ಮುಸಾಂಬರ ೧ ತೊಲೆ, ರಕ್ತಬೋಳ

೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಖಲ್ವದಲ್ಲಿ ಹಾಕಿ ಕೋಳಿಮೊಟ್ಟೆ ಬಿಳೀಜನಿಯಲ್ಲಿ ಅರೆದು ಗಡ್ಡೆಗೆ ಪಟ್ಟುಹಾಕುವುದು. ಈರೀತಿ ೩ ದಿವಸ ಹಾಕಿದರೆ ತೊಡೆಬಾಳೆಗಡ್ಡೆ ಕರಗಿಹೋಗುವುದು.

೧೬. ಗುಂಡೆಗಿರುವ ಕರೇ ಹಣ್ಣುಬದನೇಕಾಯಿ ತಂದು ಎರಡು ಭಾಗವಾಗಿ ಶೀಳಿ ೨ ಆಣೆ ತೂಕ ಬಿಳೀ ಹಿಂಗು ಪುಡಿಮಾಡಿ ಬದನೇಕಾಯಿ ಶೀಳಿದ ಮಧ್ಯ ದಲ್ಲಿಟ್ಟು ಎರಡೂ ಶೇರಿಸಿ ದಾರಸುತ್ತಿ ಬೆಂಬೂದಿಯಲ್ಲಿ ಇಟ್ಟು ಬೆಂದನಂತರ ತೆಗೆದುಕೊಂಡು ಬೆಚ್ಚಗೆ ಇರುವಾಗ ತೊಡೆಬಾಳೆಗಡ್ಡೆಗೆ ಒಂದು ಹೋಳು ಕಟ್ಟು ವುದು. ಈರೀತಿ ೩ ದಿನ ಕಟ್ಟಿದರೆ ತೊಡೆಬಾಳೆಗಡ್ಡೆ ಕರಗುತ್ತೆ ಅಥವಾ ಒಡಿ ಯುತ್ತೆ. ಅನಂತರ ಮುಲಾಮು ಹಾಕುವುದು.

೧೭. ಚಿತ್ರಮೂಲ ೨ ತೊಲೆ, ಮುಸಾಂಬರ ೧ ತೊಲೆ, ಹೊಟ್ಟುಸುಲಿದ ಬೆಳ್ಳುಳ್ಳಿ ೩ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ಅರೆದು ಗಡ್ಡೆಗೆ ಪಟ್ಟುಹಾಕುವುದು. ಈರೀತಿ ೩ ದಿವಸ ಹಾಕುವುದು. ತೊಡೆ ಬಾಳೆಗಡ್ಡೆ ಕರಗಿಹೋಗುವುದು.

೧೮. ಓಮ ೧ ತೊಲೆ, ಹಿಂಗು ೧ ತೊಲೆ, ಬೆಳ್ಳುಳ್ಳಿ ೧ ತೊಲೆ, ಬಿಳೀ ಸಾಸುವೆ ೧ ತೊಲೆ, ಮುಸಾಂಬರ ೧ ತೊಲೆ, ನವಾಸಾಗರ ೧ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ನಿಂಬೇಹಣ್ಣಿನ ರಸದಿಂದ ಅರೆದು ಪಟ್ಟುಹಾಕುವುದು. ಈರೀತಿ ೩ ದಿವಸ ಹಾಕುವುದು. ತೊಡೆಬಾಳೆಗಡ್ಡೆ ಕರಗಿಹೋಗುವುದು.

೧೯. ಹಸೀ ಎಕ್ಕದ ಹೂವು ೪ ತೊಲೆ, ನವಾಸಾಗರ ೧ ತೊಲೆ ಇವು ಗಳನ್ನು ಖಲ್ವದಲ್ಲಿ ಚನ್ನಾಗಿ ಅರೆದು ಬಿಲ್ಲೆಮಾಡಿ ಗಡ್ಡೆಗೆ ಕಟ್ಟುವುದು. ಈರೀತಿ ೩ ದಿವಸ ಕಟ್ಟುವುದು. ತೊಡೆಬಾಳೆಗಡ್ಡೆ ಕರಗಿಹೋಗುವುದು.

೨೦. ಕರೇಬೋಳ ೧ ಪಾವು, ಬಿಲ್ಲೆ ಚೌಳು ಅರಪಾವು, ಚಬುಕಾರ ಅರ ಪಾವು, ಹಿಂಗು ೧ ತೊಲೆ, ಅಫೀಂ ॥ ತೊಲೆ ಇವು ಎಲ್ಲವನ್ನೂ ಒರಳಲ್ಲಿ ಚನ್ನಾಗಿ ಕುಟ್ಟಿ ಒಂದು ಬಾಂಡ್ಲಿಯಲ್ಲಿ ಚಿಟ್ಟೆರಳೆಣ್ಣೆ ೧ ಪಾವು ಹಾಕಿ ಒಲೆಯಮೇಲಿಟ್ಟು ಕಾಯಿಸಿ ಕಪ್ಪಗೆ ಆದಕೂಡಲೇ ಇಳಿಸಿ ಖಲ್ವದಲ್ಲಿ ಹಾಕಿ ಸಜ್ಜಕ್ಷಾರ ೧ ತೊಲೆ ಹಾಕಿ ಚನ್ನಾಗಿ ಅರೆದು ಗಡ್ಡೆಗೆ ಪಟ್ಟುಹಾಕುವುದು. ಈರೀತಿ ೩ ದಿವಸ ಹಾಕು ವುದು. ತೊಡೆಬಾಳೆಗಡ್ಡೆ ಕರಗಿಹೋಗುವುದು.

೨೧. ಕೋಳಿಮೊಟ್ಟೆಯಲ್ಲಿರುವ ಬಿಳೀಜನೆ, ಜೇನುತುಪ್ಪ, ಸುಣ್ಣ, ಬೆಳ್ಳುಳ್ಳಿ, ಹಿಂಗು, ಹೊಸ ಇಟ್ಟಿಗೆಪುಡಿ ಇವು ಸಮಭಾಗ ಖಲ್ವದಲ್ಲಿ ಹಾಕಿ ಎಕ್ಕದ ಹಾಲಿನಲ್ಲಿ ಅರೆದು ಗಡ್ಡೆಗೆ ಪಟ್ಟುಹಾಕುವುದು. ಈರೀತಿ ೩ ದಿವಸ ಹಾಕುವುದು. ತೊಡೆಬಾಳೆಗಡ್ಡೆ ಕರಗಿಹೋಗುವುದು.

೨೨. ಹೇರಳೇಕಾಯಂ ಸುಲಿದು ಮೇಲಣ ಶಿಪ್ಪೆಯ ಮೇಲಣ ಪ್ರದೇಶ ವಳಕ್ಕಾಗಿ ಗ್ರಂಥಿಗೆ ಹಾಕಿ ಬಿಗಿದು ಕಟ್ಟಿಸಲು ತೊಡೆವಾಳೆ ಗ್ರಂಥಿ ಕರಗುವುದು.

೨೩. ಮುಳ್ಳುಮುತ್ತುಗದ ರಸದಲ್ಲಿ ಸೀಸವಂತೇದು ಮೇದಸ್ಸಿನಿಂದ ಉಂಟಾದ ಗ್ರಂಥಿಗೆ ಲೇಪಿಸಿ ಸೀಸದ ಬಟ್ಟಲಂ ಹಾಕಿ ಬಿಗಿದು ಕಟ್ಟಲು ತೊಡೆ ವಾಳೆ ಬತ್ತುವುದು.

# ಮುವತ್ತೆಂಟನೆಯ ಅಧ್ಯಾಯ.

## ಗಂಡಮಾಲಾರೋಗ—ಔಷಧಗಳು.

### ಗಂಡಮಾಲಾ, ಅಪಚೀ, ಗ್ರಂಥಿ ಲಕ್ಷಣ.

ಮೇದಃಕಫಗಳಿಂದ ಕಂಕುಳು, ಹೆಗಲು, ಶಿರಸ್ಸು, ಹಿಂತಲೆಯ ನರಗಳು, ಕತ್ತು ಇವುಗಳಲ್ಲಿ ಎಳಜಿಹಣ್ಣು, ಮೆಣಸು, ನೆಲ್ಲೀಕಾಯಿಗಳ ಪ್ರಮಾಣವಿರುವ ಚಿರಕಾಲಕ್ಕೆ ಮಂದವಾಗಿ ಪಾಕವಾಗುವ ಗ್ರಂಥಿಗಳು ಹುಟ್ಟುವುವು. ಇದೇ ಗಂಡ ಮಾಲೆಯೆಂದು ತಿಳಿಯುವುದು.

ಮೇಲೆ ಹೇಳಲ್ಪಟ್ಟ ಗಂಡಮಾಲಾರೂಪವಾದ ಗ್ರಂಥಿಗಳು ದೀರ್ಘಕಾಲದ ವರೆಗೂ ಅನುಸರಿಸಿ ಅದರಲ್ಲಿ ಕೆಲವು ಒಡೆದು ಸ್ರವಿಸಿ ಕೆಲವು ನಶಿಸಿ ಮತ್ತೆ ಉತ್ಪತ್ತಿಯಾಗುತ್ತಿದ್ದರೆ ಅಪಚಿಯನ್ನಲ್ಪಡುವುದು.

ವಾತ ಪಿತ್ಥ ಶ್ಲೇಷ್ಮಗಳು ದುಷ್ಟಗಳಾಗಿ ರಕ್ತ, ಮೇದಸ್ಸು, ಸಿರೆ ಇವುಗಳನ್ನು ದುಷ್ಟಗಳಾಗಿಮಾಡಿ ವರ್ತುಲವೂ, ಉನ್ನತವೂ, ಕಠಿಣವೂ ಆದ ಊತವನ್ನುಂಟು ಮಾಡುವುದು. ಇದು ಗ್ರಂಥಿಯೆನ್ನಲ್ಪಡುವುದು.

ಇದರಲ್ಲಿ ವಾತ, ಪಿತ್ಥ, ಕಫ, ರಕ್ತ, ಮೇದಸ್ಸು, ಸಿರಾ, ವ್ರಣ, ಅಸ್ಥಿ ಮಾಂಸಗಳೆಂಬದಾಗಿ ಒಂಭತ್ತು ತೆರನಾಗಿರುವುದು.

ವಾತಗ್ರಂಥಿಯಲ್ಲಿ ಎಳೆದಂತಿರುವಿಕೆ, ಸೂಜಿಗಳಿಂದ ಚುಚ್ಚಿದಂತಿರುವಿಕೆ, ಪೆಟ್ಟುತಾಕಿದಂತಿರುವಿಕೆ, ಶೀಳಿದಂತಿರುವಿಕೆ, ಕಪ್ಪುರಂಗುಳ್ಳದ್ದಾಗಿರುವಿಕೆ, ಒಡೆ ದಾಗ ನಿರ್ಮಲವಾದ ರಕ್ತವನ್ನು ಸ್ರವಿಸುವಿಕೆ ಮೊದಲಾದ ಚಿಹ್ನೆಗಳು ಕಂಡು ಬರುವುವು.

ಪಿತ್ಥ ಗ್ರಂಥಿಯಲ್ಲಿ ಬೆಂಕಿಯಿಂದ ಸುಡಲ್ಪಟ್ಟಂತೆ ಒಳಗಿನಿಂದ ಹೊಗೆ ಬರು ತ್ತಿರುವಂತಿರುವಿಕೆ, ಕ್ಷಾರಾದಿಗಳನ್ನಿಟ್ಟಂತಿರುವಿಕೆ, ಜ್ವಲಿಸಿದಂತಿರುವಿಕೆ, ಕೆಂಪಗೂ ಹಳದಿಯಾಗಿಯೂ ಇರುವಿಕೆ, ಒಡೆದಾಗ ಉಷ್ಣವಾದ ರಕ್ತವನ್ನು ಸ್ರವಿಸುವಿಕೆ ಮೊದಲಾದ ಚಿಹ್ನೆಗಳು ಕಾಣುವುವು

ಕಫಗ್ರಂಥಿಯಲ್ಲಿ ತಣ್ಣಗಿರುವಿಕೆ, ಸ್ವಾಭಾವಿಕವಾದ ವರ್ಣವುಂಟಾಗಿರು ವಿಕೆ, ನೋವು ಸ್ವಲ್ಪವಾಗಿರುವಿಕೆ, ತುರಿಯುಂಟಾಗಿರುವಿಕೆ, ಕಠಿನವಾಗಿರುವಿಕೆ,

ದೀರ್ಘಕಾಲದವರೆಗೂ ವೃದ್ಧಿಯಾಗಿ ಒಡೆದಾಗ ಬಿಳುಪಾದ ರಕ್ತವು ಸ್ರವಿಸು ವಿಕೆ ಮೊದಲಾದ ಚಿಹ್ನೆಗಳು ಕಾಣುವುವು.

ಮೇದೋಗ್ರಂಥಿಯಲ್ಲಿ ಶರೀರವು ವೃದ್ಧಿಹೊಂದಿದಾಗ ವೃದ್ಧಿಹೊಂದುತ್ತಾ, ಶರೀರವು ಕ್ಷೀಣಿಸಿದಾಗ ಕ್ಷೀಣಿಸುತ್ತಾ, ನುಣುಪಾಗಿದ್ದು ಬಾಧೆಯಿಲ್ಲದೆ ದೊಡ್ಡದಾಗಿರುವುದು. ಒಡೆದಾಗ ಮಂದವಾಗಿರುವ ತುಪ್ಪದಂತಹ ಕೀವು ಸ್ರವಿಸುವುದು.

ರಕ್ತಗ್ರಂಥಿಯಲ್ಲಿ ಪಿತ್ಥಗ್ರಂಥಿಯ ಲಕ್ಷಣಗಳು ಕಂಡುಬರುವುವು.

ಸಿರಾಗ್ರಂಥಿಯಲ್ಲಿ ಪೀಡೆ, ಚಲನವು, ಔನ್ನತ್ಯವು ಉಂಟಾಗಿ ಮರ್ಮಸ್ಥಾನಗಳಲ್ಲಿ ಹುಟ್ಟುವುದು. ಅದು ಅಸಾಧ್ಯವು.

ವ್ರಣಗ್ರಂಥಿಯು ವಸ್ತ್ರಘಾತಾದಿಗಳಿಂದ ವ್ರಣವಾಗಿ ಅದರಲ್ಲಿ ಗ್ರಂಥಿಯು ಹುಟ್ಟುವುದು. ಅದರಲ್ಲಿ ಪಿತ್ಥಲಕ್ಷಣಗಳೂ ವಾತಲಕ್ಷಣಗಳೂ ತಲೆದೋರಿರುವುದು.

ಅಸ್ಥಿಗ್ರಂಥಿಯಲ್ಲಿ ವಾತಾದಿಗಳು ಪ್ರಕೋಪವನ್ನು ಹೊಂದಿ ಅಸ್ಥಿಗಳನ್ನು ಕೆಡಿಸಿ ಅಸ್ಥಿಗಳಲ್ಲಿ ಗ್ರಂಥಿಯನ್ನುಂಟುಮಾಡುವುದು

ಮಾಂಸವು ಕೆಡುವುದರಿಂದ ಹುಟ್ಟುವ ಗ್ರಂಥಿಯು ಮಾಂಸಗ್ರಂಥಿಯೆನ್ನಲ್ಪಡುವುದು.

## ಗಂಡಮಾಲಾ ರೋಗದಲ್ಲಿ ಅಸಾಧ್ಯ ಲಕ್ಷಣ.

ಕಾಸ, ಜ್ವರ, ಪೀನಸ, ಛರ್ದಿ, ಪಾರ್ಶ್ವ ಶೂಲೆಗಳಿದ್ದರೆ ಅಸಾಧ್ಯವು.

## ಗಂಡಮಾಲಾ ಸರಮಾಲಾ ಚಿಕಿತ್ಸೆಗಳು.

೧. ಮೊದಲು ಕರೇ ಉಮ್ಮತ್ತಿಸೊಪ್ಪು ಚನ್ನಾಗಿ ಅರೆದು ಕಟ್ಟುವದು. ಹೀಗೆ ಒಳಗಿರುವ ಬೀಜ, ಕೀವು ಹೋಗುವವರಿಗೂ ಕಟ್ಟುತ್ತಾ ಬರುವುದು. ಅನಂತರ ಬೆಪ್ಪಾಲೆಹಾಲು ೧ ತೊಲೆ, ಚಿಟ್ಟರಳೆಣ್ಣೆ ೧ ತೊಲೆ ಬಟ್ಟಲಿಗೆ ಹಾಕಿ ಬೆಂಕಿಯಮೇಲಿಟ್ಟು ಹದವಾಗಿ ಕಾಯಿಸಿ ಬಟ್ಟೆಗೆ ಹಚ್ಚಿ ಮೇಲೆ ಹಾಕುತ್ತಾ ಬಂದರೆ ಗಂಡಮಾಲೆ, ಸರಮಾಲೆ ಗುಣವಾಗುವುದು.

೨. ಸಾಸುವೆ, ಬೇವಿನಸೊಪ್ಪು, ಗಿರಿಕರ್ಣಿಕೆಬೇರು, ಗೇರುಬೀಜ ಇವುಗಳು ಸಮಭಾಗ ಚೂರ್ಣವನ್ನುಮಾಡಿ ಮೇಕೆಮೂತ್ರದಲ್ಲಿ ಅರೆದು ಗಂಡಮಾಲೆಗೆ ಲೇಪನಮಾಡಲು ಗುಣವಾಗುವುದು.

೩. ಹವಳಸರಿಗಂಥಕ, ಪಾದರಸ, ಸೈಂಧವಲವಣ ಇವು ಸಮಭಾಗ ಚೂರ್ಣವನ್ನುಮಾಡಿ ಬೆಪ್ಪಾಲೆಹಾಲು, ಉಮ್ಮತ್ತಿಬೇರಿನ ರಸ ಇವು ಎರಡು ಹಾಕಿ ಅರೆದು ಗಂಡಮಾಲೆಗೆ ಲೇಪನಮಾಡಲು ಗುಣವಾಗುವುದು.

೪. ಬ್ರಹ್ಮದಂಡೆ ಬೇರನ್ನು ಅಕ್ಕಿ ತೊಳದ ನೀರಿನಲ್ಲಿ ಅರೆದು ಕುಡಿಯುವುದು ಮತ್ತು ಇದನ್ನೇ ಗಂಡಮಾಲೆಗೆ ಹಚ್ಚಲು ಶೀಘ್ರವಾಗಿ ಗುಣವಾಗುವುದು.

೫. ಮೈಲತುತ್ತ ಸುಟ್ಟಿದ್ದು, ತಾಳಕ, ಸಜ್ಜಕ್ಷಾರ, ಇಂಗಳೀಕ, ಸಿಂಧೂರ (ಗಂಗಚಂದ್ರ) ಇವುಗಳು ಸಮಭಾಗ ನಿಂಬೇಹಣ್ಣಿನ ರಸದಿಂದ ೩ ದಿವಸ ಅರೆದು ಗಂಡಮಾಲೆಗೆ ಲೇಪನಮಾಡಿದರೆ ಗಡ್ಡೆ ಒಡೆಯುವುದು.

೬. ಅರಸಿನಕೊಂಬು ಸುಟ್ಟು ಕರುಕುಮಾಡಿ ಎಕ್ಕದಹಾಲಿನಲ್ಲಿ ಅರೆದು ಒಟ್ಟಿಗೆ ಸವರಿ ಗಡ್ಡೆಯಮೇಲೆ ಹಾಕುವುದು ಹುಣ್ಣಾದಮೇಲೆ ಹಾವುಮೆಕ್ಕೇ ಕಾಯಿಯ ಎಲೆ ಕುಟ್ಟಿದ ರಸಕ್ಕೆ ಸ್ವಲ್ಪ ಜೇನುಮೇಣ ಹಾಕಿ ಕಾಯಿಸಿ ಇದರಲ್ಲಿ ಒಂದು ಬಟ್ಟೆ ಅದ್ದಿ ಬತ್ತಿಮಾಡಿ ಇಟ್ಟುಕೊಂಡು ಈ ಬತ್ತಿಯನ್ನು ಒಂದು ಕೊನೆಯಲ್ಲಿ ಬೆಂಕಿ ಹತ್ತಿಸಿ ಆ ಹುಣ್ಣಿಗೆ ಹೊಗೆ ತೋರಿಸಿದರೆ ಹುಳುಗಳು ಸತ್ತು ಬೀಳುವುದು. ಆಮೇಲೆ ಹಾವುಮೆಕ್ಕೇಕಾಯಿ ಎಲೆ ಕುಟ್ಟಿ ರಸ ತೆಗೆದದ್ದು ೨ ತೊಲೆ, ಮೈಲತುತ್ತಿ ಬೆಂಕಿಯಲ್ಲಿ ಹಾಕಿ ಸುಮಾರಾಗಿ ಸುಟ್ಟುಕೊಂಡದ್ದು || ತೊಲೆ, ಜೇನುಮೇಣ || ತೊಲೆ, ಬೇವಿನ ಎಣ್ಣೆ ೨ ತೊಲೆ ಇವು ನಾಲ್ಕನ್ನು ಕಾಯಿಸಿ ಇದರಲ್ಲಿ ಒಂದು ಬಟ್ಟೆಯನ್ನು ಅದ್ದಿ ಬತ್ತಿಮಾಡಿ ಹುಣ್ಣುಗಳಿಗೆ ಹಾಕುವುದು. ಇದರಿಂದ ಗಂಡಮಾಲೆ, ಸರಮಾಲೆ ಗುಣವಾಗುವುದು.

೭. ಉಮ್ಮತ್ತದಬೇರು, ಚಿತ್ರಮೂಲದ ಬೇರು ಇವೆರಡನ್ನೂ ನೀರಿನಿಂದ ಅರೆದು ಏಳುದಿನ ಲೇಪವ ಮಾಡಿಸಲು ಗಂಡಮಾಲೆ ಶಮನ.

೮. ಗಂಡಮಾಲೆ ಒಡೆಯಬೇಕಾದರೆ ಅವಶ್ಯ ಬೋಳದರಗನಬೇರಂ ನೀರಲ್ಲಿ ಅರೆದು ಲೇಪಿಸುವುದು, ಅದೇ ರಸದಲ್ಲ ಒಂದು ಹಲ ದೇಹದ ಒಳಕ್ಕೆ ಕೊಡಿಸುವುದು.

೯. ಬ್ರಹ್ಮದಂಡಿಯ ಬೇರನ್ನು ಅಕ್ಕೀಗಚ್ಚಿನಲ್ಲಿ ಅರೆದು ಗಂಡಮಾಲೆಗೆ ಲೇಪಿಸಲು ಆ ಕ್ಷಣದಲ್ಲಿಯೇ ಒಡೆದು ಶೀಘ್ರವಾಗಿ ಗುಣವಹುದು.

೧೦. ಕುಮಾರೀ ರಸದಲ್ಲ ಸೈಂಧವಲವಣವನ್ನು ನುಣ್ಣಗೆ ಅರೆದು ಲೇಪವ ಮಾಡಿಸಲು ಗಂಡಮಾಲೆ ಶಮನವಹುದು.

೧೧. ಔಡಲದಬೇರು, ಸೊಪ್ಪು, ಕಾಯಿ, ಲವಣ, ಬಿಳೀಸಾಸುವೆ ಇವುಗಳನ್ನು ಸಮಾಂಶವಾಗಿ ಕಲ್ಕವಮಾಡಿ, ಕಲ್ಕದ ಚತುರ್ಗುಣ ಎಣ್ಣೆಯಂ ಹನಿಸಿ ಎಣ್ಣೆಯ ಚತುರ್ಗುಣ ಮುಂಡಗಳ್ಳಿಹಾಲಂ ಹನಿಸಿ ಎಣ್ಣೆವುಳಿಯ ಕಾಯಿಸಿ ಲೇಪವಂ ಮಾಡಿಸಲು ಗಂಡಮಾಲೆ ಒಡೆದು ಗುಣವಹುದು.

೧೨. ಮುಂಡಗಳ್ಳೀಹಾಲು, ಎಕ್ಕದಹಾಲು, ಅರಿಸಿನ, ಬೆಲ್ಲ ಇವಿಷ್ಟನ್ನೂ ಸಮಾಂಶವಾಗಿ ಕೂಡಿಸಿ ನುಣ್ಣಗೆ ಅರೆದು ಲೇಪವ ಮಾಡಿಸಲು ಗಂಡಮಾಲೆ ಶಮನವಹುದು, ಮತ್ತು ಗಂಡಕೀಲ ಅರ್ಬುದವು ಸಹ ಶಮನವಹವು.

೧೩. ಬಿಳೀಸಟ್ಟುಗದ ಬೇರನ್ನು ಗೋಮೂತ್ರದಲ್ಲಿ ಅರೆದು ಪಾನವ ಮಾಡಿಸಲು ಗಂಡಮಾಲೆ ಪರಿಹರವಹುದು.

೧೪. ಆದಿತ್ಯವಾರ ಮೌನದಲ್ಲಿ ಸಹದೇವೀ ಬೇರಂ ತಂದು ಧೂಪದೀಪ ನೈವೇದ್ಯಗಳಂಮಾಡಿ ಕಿವಿಯಲ್ಲಿ ಕಟ್ಟಲು ಗಂಡಮಾಲೆ ನಿಶ್ಶೇಷವಾಗಿ ಕರಗಿ ಹೋಗುವುದು.

೧೫. ತ್ರಿಕಟುಕ ೬ ಹಲ, ತ್ರಿಫಲೆ ೬ ಹಲ, ಕಂಚಿವಾಳದ ಬೀಜ ೧೨ ಹಲ, ಶುದ್ಧಿಮಾಡಿದ ಗುಗ್ಗುಳ ೨೪ ಹಲ ಇವುಗಳನ್ನು ಕೂಡಾ ಕುಟ್ಟಿ ಚೂರ್ಣಿಸಿ, ೬೦ ಹಲ ಜೇನುತುಪ್ಪವಂ ಹನಿಸಿ ಕಲೆಸಿ, ೪ ವರಹ ತೂಕ ಗುಳಿಗೆಯಮಾಡಿ ನಿತ್ಯವೂ ಸೇವಿಸಲು ಅರ್ಧ ಮಂಡಲಕ್ಕೆ ಗಂಡಮಾಲೆ, ಗಳಗ್ರಂಧಿ ಇವೆಲ್ಲವೂ ಶಮನವಹವು.

ಗಂಡಮಾಲೆಗೆ ಪಧ್ಯ:—ಹುರಳೀಕಟ್ಟನ್ನೂ ಅನ್ನವನ್ನೂ ತುಪ್ಪದಿಂದ ಭೋಜನವಂಮಾಡಲು ಗಂಡಮಾಲೆ ಶಮನವಹುದು.

---

# ಮುವತ್ತೊಂಭತ್ತನೆಯ ಅಧ್ಯಾಯ.

## ವ್ರಣರೋಗ—ಔಷಧಗಳು.

### ವ್ರಣ ಲಕ್ಷಣ.

ವ್ರಣರೋಗವು ಆಗಂತುಕ ವ್ರಣವು, ಶಾರೀರ ವ್ರಣವು, ಶುದ್ಧ ವ್ರಣವು, ದುಷ್ಟ ವ್ರಣವು ಎಂಬದಾಗಿ ನಾಲ್ಕು ವಿಧವಾಗಿ ವಿಭಾಗಿಸಲ್ಪಡುವುದು.

ವಾತಾದಿಪ್ರಕೋಪದಿಂದುಂಟಾದುದಾದರೆ ಶಾರೀರ ವ್ರಣವೆಂತಲೂ, ಶಸ್ತ್ರಾದಿ ಪ್ರಹಾರಗಳಿಂದುತ್ಪನ್ನವಾದುದಾದರೆ ಆಗಂತುಕ ವ್ರಣವೆಂತಲೂ, ದುರ್ಗಂಧಯುಕ್ತ ಕೀವನ್ನೂ, ದುಷ್ಟರಕ್ತವನ್ನೂ ಸ್ರವಿಸುವಿಕೆ, ಅಧಿಕ ಉನ್ನತವಾಗಿರುವಿಕೆ, ಬಹಳ ಕಾಲದಿಂದ ಅನುವರ್ತಿಸಿರುವಿಕೆ, ಗಂಧವು, ವರ್ಣವು ಇವು ಅಧಿಕವಾಗಿರುವಿಕೆ ಮೊದಲಾದ ಚಿಹ್ನೆಗಳು ಕಾಣಿಸಿದರೆ ಅದು ದುಷ್ಟ ವ್ರಣವೆಂತಲೂ, ನಾಲಿಗೆಯಂತೆ ಅತಿ ಮೃದುವಾಗಿ, ನುಣುಪೂ, ಸ್ನಿಗ್ಧವೂ ಆಗಿ ಸ್ವಲ್ಪವಾದ ನೋವುಂಟಾಗಿ ಅತಿ ಉನ್ನತವೂ, ಅತಿ ನಿಮ್ನವೂ ಆಗದೆ ಸಮವಾಗಿದ್ದು ಕೀವು ಮೊದಲಾದುವನ್ನು ಸ್ರವಿಸದಿದ್ದರೆ ಶುದ್ಧ ವ್ರಣವೆಂತಲೂ ಹೇಳಲ್ಪಡುವುದು.

ಇಂತಹ ವ್ರಣವು ವಾತ, ಪಿತ್ತ, ಕಫ, ರಕ್ತ, ವಾತಪಿತ್ತ, ವಾತಶ್ಲೇಷ್ಮ, ಪಿತ್ತಶ್ಲೇಷ್ಮ, ಸನ್ನಿಪಾತ, ವಾತರಕ್ತ, ರಕ್ತಪಿತ್ತ, ಶ್ಲೇಷ್ಮರಕ್ತ, ವಾತಪಿತ್ತರಕ್ತ, ವಾತಶ್ಲೇಷ್ಮರಕ್ತ, ಪಿತ್ತಶ್ಲೇಷ್ಮರಕ್ತ, ಸನ್ನಿಪಾತರಕ್ತಗಳಿಂದುತ್ಪನ್ನವಾಗಿ ಪ್ರತ್ಯೇಕವಾಗಿ ಹದಿನೈದು ವಿಧಗಳಾಗಿರುವುವು.

ವಾತವ್ರಣದಲ್ಲಿ ಸ್ತಂಭಿಸಿರುವಿಕೆ, ಸ್ಪೃಶಿಸಿದಾಗ ಕಠಿನವಾಗಿರುವಿಕೆ, ಕೀವು ನಿದಾನವಾಗಿ ಸ್ರವಿಸುವಿಕೆ, ಅಧಿಕವಾದ ಬಾಧೆಯುಂಟಾಗುವಿಕೆ, ಥಳುಕುಗಳುಂಟಾಗಿ ನಡುಗುತ್ತಿರುವಿಕೆ, ಶ್ಯಾಮವರ್ಣವುಂಟಾಗುವಿಕೆ ಮೊದಲಾದ ಲಕ್ಷಣಗಳಿರುವುವು.

ಪಿತ್ಥವ್ರಣದಲ್ಲಿ ನೀರಡಿಕೆ, ಮೂರ್ಛೆ, ಜ್ವರವು, ಕ್ಲೇದವು, ತಾಪವು, ಒಳಗಡೆ ದುಷ್ಟವಾಗಿ ಒಡೆಯುವಂತಿರುವಿಕೆ, ದುರ್ಗಂಧದಿಂದೊಡಗೂಡಿದ ಕೀವು ಸ್ರವಿಸುವಿಕೆ ಮೊದಲಾದ ಚಿಹ್ನೆಗಳಿರುವುವು.

ಶ್ಲೇಷ್ಮವ್ರಣದಲ್ಲಿ ಬಹಳ ಜಿಗಟಾಗಿರುವಿಕೆ, ಭಾರವಾಗಿರುವಿಕೆ, ನುಣುಪುಂಟಾಗಿರುವಿಕೆ, ನಿಶ್ಚಲವಾಗಿರುವಿಕೆ, ಸ್ವಲ್ಪವಾದ ನೋವುಂಟಾಗಿರುವಿಕೆ, ಪಾಂಡುವರ್ಣವುಂಟಾಗಿರುವಿಕೆ, ಕೀವು ಕೊಂಚವಾಗಿ ಸ್ರವಿಸುವಿಕೆ, ದೀರ್ಘಕಾಲಕ್ಕೆ ಪಾಕವಾಗುವಿಕೆ ಮೊದಲಾದ ಚಿಹ್ನೆಗಳಿರುವುವು.

ರಕ್ತವ್ರಣದಲ್ಲಿ ರಕ್ತವರ್ಣವಾಗಿ ರಕ್ತವು ಸ್ರವಿಸುತ್ತಿರುವುದು.

ಈರೀತಿಯಾಗಿ ದ್ವಿದೋಷ ಲಕ್ಷಣಂಗಳು, ತ್ರಿದೋಷ ಲಕ್ಷಣಂಗಳು ಕಂಡುಬಂದಲ್ಲಿ ಉಳಿದವುಗಳ ಭೇದಗಳನ್ನು ಸಹ ಅರಿಯುವುದು.

## ವ್ರಣರೋಗದಲ್ಲಿ ಅಸಾಧ್ಯ ಲಕ್ಷಣ.

೧. ಮರ್ಮಸ್ಥಾನದಲ್ಲಿ ಅಲ್ಲದೆ ಬೇರೆ ಕಡೆಯಲ್ಲಿ ಹುಟ್ಟಿದ್ದು, ಚರ್ಮಮಾಂಸಗಳಲ್ಲಿ ಹುಟ್ಟಿದ್ದು, ಇತರ ಉಪದ್ರವವಿಲ್ಲದೆ ಇರುವುದು, ಬಾಲಕನಿಗಾಗಲಿ ಜ್ಞಾನವಂತನಿಗಾಗಲಿ ಆಗಿರುವ, ಹೇಮಂತ ಶಿಶಿರ ಕಾಲಗಳಲ್ಲಿ ಉತ್ಪನ್ನವಾಗಿರುವುದು. ಈ ಗುಣಗಳು ಇದ್ದರೆ ಆ ವ್ರಣವು ಸುಖಸಾಧ್ಯವಾದುದು.

೨. ತ್ರಿದೋಷದಿಂದ ಹುಟ್ಟಿ ವಸೆ, ಮೇದಸ್ಸು, ಮಜ್ಜಾ ಇವುಗಳಲ್ಲಿ ಉತ್ಪತ್ತಿಯಾಗಿದ್ದರೆ ಅಸಾಧ್ಯವು.

೩. ಮದ್ಯ, ಅಗರು, ತುಪ್ಪ, ಕಮಲ, ಚಂದನ, ಸಂಪಿಗೆ, ಪಾರಿಜಾತಗಳ ವಾಸನೆಯುಳ್ಳದ್ದು ಅಸಾಧ್ಯವು.

೪. ಮರ್ಮಸ್ಥಾನದಲ್ಲಿ ಉತ್ಪತ್ತಿ, ಅತಿವೇದನೆ, ಒಳಗೆ ತಾಪ, ಹೊರಗೆ ಸೀತ ಮತ್ತು ಹೊರಗೆ ತಾಪ, ಒಳಗೆ ಸೀತ, ಬಲಮಾಂಸಗಳ ಕ್ಷಯ, ಶ್ವಾಸ, ಕಾಸ, ಅರೋಚಕಗಳು ಉಂಟಾಗಿ ರಕ್ತಸ್ರಾವದಿಂದ ಕೂಡಿದ್ದರೆ ಅಸಾಧ್ಯವು.

೫ ಒಳಗೆ ರಕ್ತವಿರುವುದು, ಹೊರಗೆ ಬಿಳುಪಾಗಿ ಕಾಣುವುದು, ಕೈಕಾಲು ಮುಖಗಳಲ್ಲಿ ಶೈತ್ಯ, ಮತ್ತು ಶ್ವಾಸ ಕಣ್ಣಿನಲ್ಲ ಕೆಂಪುಗಳುಳ್ಳ ಆಗಂತುಕ ವ್ರಣವು ಅಸಾಧ್ಯವು.

೬. ಕಪಾಲ ಒಡಿಯುವುದು, ಕಟಿಭಾಗದ ಕೀಲು, ಜಘನ, ಪೃಷ್ಠಗಳಲ್ಲಿ ಶೂಲೆಯುಂಟಾಗಿದ್ದರೆ ಭಗ್ನ ವ್ರಣವು ಅಸಾಧ್ಯವು.

## ವ್ರಣಗಳಿಗೆ ಚಿಕಿತ್ಸೆಗಳು.

೧. ರಸಕರ್ಪೂರ ೧ ಹಣತೂಕ, ರೂಮಿಮಸ್ತಕಿ ೧ ಹಣತೂಕ ಖಲ್ವದಲ್ಲಿ ಅರೆದು ಹಸುವಿನ ಬೆಣ್ಣೆ ೪ ತೊಲೆ ಹಾಕಿ ಚನ್ನಾಗಿ ಅರೆದು ೭ ಸಲ ತಣ್ಣೀರಿನಲ್ಲಿ ತೊಳೆದು ಇಟ್ಟುಕೊಳ್ಳುವುದು. ಇದರಿಂದ ಮೇಹಸಂಬಂಧವಾದ ಹುಣ್ಣುಗಳು ಗುಣವಾಗುವುದು.

೨. ಸುಟ್ಟ ಮೈಲತುತ್ತ ಕಾಲುತೊಲೆ, ಪಾಲತುತ್ತ ಕಾಲುತೊಲೆ, ರಸ ಕರ್ಪೂರ ಕಾಲುತೊಲೆ, ಪಚ್ಚಕರ್ಪೂರ ಕಾಲುತೊಲೆ, ಬಿಳೇಕಾಚು ಕಾಲು ತೊಲೆ, ಗೋಟಡಿಕೆ ಕರುಕು ಕಾಲುತೊಲೆ ಇವುಗಳೆಲ್ಲಾ ಒಳ್ಳೆ ಬೇವಿನಸೊಪ್ಪಿನ ರಸದಿಂದ ಅರೆದು ಬಿಲ್ಲೆಮಾಡಿಕೊಳ್ಳಬೇಕು. ಬಿಲ್ಲೆಯ ಕೆಳಗೂ ಮೇಲೂ ಗೇರುಬೀಜದ ಎಣ್ಣೆ ಲೇಪಿಸಿ ಹಣತೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಸೀಲುಮಾಡಿ ಆರು ಬೆರಣಿಯಲ್ಲಿ ಪುಟಹಾಕಿದರೆ ಭಸ್ಮವಾಗುವುದು. ಪ್ರಯೋಗ :—೧ ಗುರು ಗಂಜಿ ಪ್ರಮಾಣ ನೂತಿಗೂ ವ್ರಣಕ್ಕೂ ಸಹಾ ಮೇಲ್ಗಡೆ ಭಸ್ಮವನ್ನು ಒತ್ತು ವುದು ಮತ್ತು ಹಾಕುವುದು. ಇದರಿಂದ ವ್ರಣ, ನೂತಿ, ಬೆನ್ನುಫಣಿ, ಬಹಳ ದಿನದ ಘಾಯ ನಿವಾರಣೆ ಆಗುವುದು.

೩. ಬಿಳೇಧೂಪ ೨ ತೊಲೆ, ಆರತಿಕರ್ಪೂರ ೨ ತೊಲೆ, ಸುಟ್ಟಮೈಲತುತ್ತ ೧ ತೊಲೆ, ತಗರ ೧ ತೊಲೆ ಕಬ್ಬಿಣದ ಸೌಟಿನಲ್ಲಿ ಹಾಕಿ ಬೆಂಕಿಯಮೇಲಿಟ್ಟು ಕರಗಿಸಿ ಕೆಳಗೆ ಇಳಿಸಿಕೊಂಡು ೨ ನಿಮಿಷಗಳ ತರುವಾಯ ಪಾದರಸ ೧ ತೊಲೆ ಹಾಕಿ ಬಿಲ್ಲೆಮಾಡಿಕೊಳ್ಳುವುದು. ಈ ಬಿಲ್ಲೆ ಖಲ್ವದಲ್ಲಿ ಅರೆದು ಇಟ್ಟುಕೊಳ್ಳು ವುದು. ಹಸುವಿನ ಬೆಣ್ಣೆ ೧೨ ತೊಲೆ ಇವು ಎಲ್ಲವನ್ನೂ ಶೇರಿಸಿ ಹಿತ್ತಾಳೆ ತಟ್ಟೆ ಯಲ್ಲಿ ಹಾಕಿ ತಾಂಬ್ರದ ಪಂಚಪಾತ್ರೆಯಿಂದ ಅರೆದು ಇಟ್ಟುಕೊಳ್ಳುವುದು. ಇದರಿಂದ ಘಾಯಗಳು, ಕುರುಗಳು, ಟಾಕಿಹುಣ್ಣು, ಮಕ್ಕಳ ತಲೆಹುಣ್ಣು ಇವು ಗುಣವಾಗುವವು.

೪. ಸುಟ್ಟ ಮೈಲತುತ್ತ ೧ ವರಹತೂಕ, ಪಾಲುತುತ್ತ ೧ ವರಹತೂಕ, ರಸಕರ್ಪೂರ ೧ ವರಹತೂಕ, ಪಾದರಸ ೧ ವರಹತೂಕ, ಮುರದಾರಶಿಂಗಿ ೧ ವರಹ ತೂಕ, ಹಸುವಿನಬೆಣ್ಣೆ ೧೫ ವರಹತೂಕ ಇವುಗಳನ್ನು ಖಲ್ವದಲ್ಲಿ ಚನ್ನಾಗಿ ಅರೆದು ಇಟ್ಟುಕೊಂಡು ಮುಸುಕು ಹುಣ್ಣಿಗೆ ಹಚ್ಚುತ್ತಾ ಬಂದರೆ ಗುಣವಾಗುವುದು.

೫. ಹಳೇತುಪ್ಪ ೩ ತೊಲೆ, ಬಿಳೇಧೂಪ ೧॥ ತೊಲೆ, ರಸಕರ್ಪೂರ ॥। ತೊಲೆ, ರಸಸಿಂಧೂರ ॥। ತೊಲೆ, ಆಲದಹಣ್ಣಿನೆಲೆ ಸುಟ್ಟಕರಕು ೧ ತೊಲೆ ಇವುಗಳನ್ನು ಚೆನ್ನಾಗಿ ಅರೆದು ಟಾಕಿ ವ್ರಣಗಳಮೇಲೆ ಹಾಕಲು ಗುಣವಾಗುವುದು.

೬. ಹಳದಿಬಣ್ಣದ ಹೂವುಬಿಡುವ ಗಣಗಲು ಎಲೆ ಹೆಂಚಿನಮೇಲೆ ಸುಟ್ಟು ಕರುಕುಮಾಡಿದ್ದು ೧ ತೊಲೆ, ಗೋಟು ಅಡಿಕೆ ಸುಟ್ಟಕರುಕು ೧ ತೊಲೆ, ಮುರ ದಾರಶಿಂಗು ೧ ತೊಲೆ, ರಸಕರ್ಪೂರ ೧ ತೊಲೆ, ಕೆಂಪುಕಾಚು ೧ ತೊಲೆ ಇದನ್ನು

ಹುರಳಿಕಾಳಷ್ಟು ತುಂಡುಗಳುಮಾಡಿ ಬೋಕಿಯ-ಲ್ಲಿ ಹುರಿದುಕೊಂಡರೆ ಅವಲುನಂತೆ ಆಗುತ್ತೆ. ಎಲ್ಲವನ್ನೂ ಖಲ್ವದಲ್ಲಿ ಹಾಕಿ ಅರೆದುಕೊಂಡು ಈ ಚೂರ್ಣವನ್ನು ೩-೫ ದಿನಗಳು ಹುಣ್ಣುಗಳಿಗೆ ಹಾಕಿ ಒತ್ತಿದರೆ ಟಾಕಿ ಹುಣ್ಣು ಗುಣವಾಗುತ್ತೆ.

೭. ನೀರುಮುಳ್ಳಿಸೊಪ್ಪಿನ ರಸ ೧೦ ತೊಲೆ, ಸಂಗೆಸಿಲಾಜಿತು ಚೂರ್ಣ ೩ ತೊಲೆ, ಹಳೇತುಪ್ಪ ೧೫ ತೊಲೆ, ತಗರದಸುಫೇದಾ ೧ ತೊಲೆ ಇವೆಲ್ಲವನ್ನು ಅರೆದು ಮುಲಾಮನ್ನು ಮಾಡಿ ಇಟ್ಟುಕೊಳ್ಳುವುದು. ದುರ್ಮಾಂಸ ಬೆಳೆದು ಇದ್ದರೆ ಸ್ವಲ್ಪ ಮೈಲತುತ್ತಿ ಚೂರ್ಣ, ಸ್ವಲ್ಪ ಮುಲಾಮು ಕಲಸಿ ೨ ಹೊತ್ತು ೨ ದಿನ ಹಾಕಿ ನಂತರ ಬರೇ ಮುಲಾಮು ಹಚ್ಚಿಸುತ್ತಾ ಬರಬೇಕು. ೮ ದಿನ ದಲ್ಲೇ ಗುಣವಾದೀತು. ಇದರಿಂದ ಗುಣ:—ಮೊಲೆನೂತಿ, ಭಗಂದರ, ನೂತಿ ಗಳು, ತೊಡೆಬಾಳೆ, ಕುರು, ಹುಣ್ಣುಗಳು ನಿವಾರಣೆ ಆಗುವುದು.

೮. ರಸಕರ್ಪೂರ ಕಾಲುತೊಲೆ, ಜಂಗಾಲುಪಚ್ಚೆ ಕಾಲುತೊಲೆ, ಮಣಿಸಿಲೆ ಕಾಲುತೊಲೆ, ಪಾಲುತುತ್ತ ಕಾಲುತೊಲೆ, ಮುರದಾರಶಿಂಗು ಕಾಲುತೊಲೆ, ಬಿಳೇ ಕಾಚು ಕಾಲುತೊಲೆ, ಮುತ್ತುಗದಬೀಜ ಕಾಲುತೊಲೆ, ಬೇವಿನಬೀಜ ॥ ತೊಲೆ, ಕಾಕಮಾರಿಬೀಜ ಕಾಲುತೊಲೆ, ಸುಟ್ಟಮೈಲತುತ್ತ ಕಾಲುತೊಲೆ ಇವುಗಳೆಲ್ಲಾ ಚನ್ನಾಗಿ ಅರೆದು ಇಟ್ಟುಕೊಳ್ಳುವುದು. ಪ್ರಯೋಗ:—ಹಸುವಿನ ಬೆಣ್ಣೆಯಲ್ಲಿ ಕಲಸಿ ಉಪಯೋಗಿಸುವುದು. ಬೆಣ್ಣೆ ಕಡಿಮೆಯಾಗಿ ಹಾಕಿ ಸ್ವಲ್ಪಸ್ವಲ್ಪವೆ ಕಲಸಿ ಉಪಯೋಗಿಸುವುದು. (೧) ಬೆಣ್ಣೆ ಕಡಿಮೆಯಾಗಿಹಾಕಿ ಕಲಸಿಹಾಕಿದರೆ ಹುಣ್ಣು ಹಣ್ಣಾಗುವುದು ಮತ್ತು ಒಡಿಯುವುದು. (೨) ಇನ್ನು ಸ್ವಲ್ಪ ಜಾಸ್ತಿಯಾಗಿ ಬೆಣ್ಣೆ ಕಲಸಿದರೆ ಕಶ್ಮಲ ತೆಗೆಯುವುದು. (೩) ಇನ್ನು ಸ್ವಲ್ಪ ಜಾಸ್ತಿಯಾಗಿ ಬೆಣ್ಣೆಹಾಕಿ ಕಲಸಿಹಾಕಿದರೆ ಮಾಯಿಸುವದು. ಇದರಿಂದ ಗುಣ:—ಬೆನ್ನುಫಣಿ, ನೂತಿ, ಹೆಡತಲೆಮೃತ್ಯು, ತಲೆಕೋವೆ, ಕುರುಗಳು, ಗಂಡಮಾಲೆ ಮೊದಲಾದ ಹುಣ್ಣು, ಭಗಂದರ, ಟಾಕಿ ಮೊದಲಾದ ಹುಣ್ಣು ನಿವಾರಣೆ ಆಗುವುದು.

೯. ರಸಕರ್ಪೂರ ೧ ತೊಲೆ, ನೆಲ್ಲೀಕಾಯಿ ಗಂಧಕ ೧ ತೊಲೆ, ಇಂಗಳೀಕ ಕಾಲುತೊಲೆ, ಹಸುವಿನಬೆಣ್ಣೆ ೪॥ ತೊಲೆ ಇವುಗಳನ್ನು ಖಲ್ವದಲ್ಲಿ ಚನ್ನಾಗಿ ಅರೆಯುವುದು. ಮುಸುಕುಹುಣ್ಣಿಗೆ ಹಚ್ಚಲು ಗುಣವಾಗುವುದು.

೧೦. ಪಾದರಸ ೧ ಆಣೆ ತೂಕ, ಹವಳಸರಿಗಂಧಕ ೧ ಆಣೆ ತೂಕ, ಮೈಲ ತುತ್ತ ೧ ಆಣೆ ತೂಕ, ರಸಕರ್ಪೂರ ೪ ಆಣೆ ತೂಕ ಇವು ನಾಲ್ಕು ದಿನಸು ಖಲ್ವ ದಲ್ಲಿ ಚನ್ನಾಗಿ ಅರೆದು ಕರೇ ಉಮ್ಮತ್ತಿಕಾಯಿ ವಳಗೆ ತುಂಬಿ ಕೆಮ್ಮಣ್ಣುಬಟ್ಟೆ ಶೀಲು ೭ ಸಲ ಮಾಡಿ ಒಣಗಿಸಿ ಒಲೆಯಲ್ಲಿ ಹೂತು ಪಕ್ವವಾಗಿ ಬೆಂದನಂತರ ತೆಗೆದು ಖಲ್ವದಲ್ಲಿ ಹಸುವಿನತುಪ್ಪದಿಂದ ಮರ್ದನೆಮಾಡಿ ಇಟ್ಟುಕೊಳ್ಳುವುದು. ಟಾಕಿ, ಮುಸುಕುಹುಣ್ಣು, ಗಂಡಮಾಲೆಗೆ ಬಟ್ಟೆಯಮೇಲೆ ಲೇಪಿಸಿ ಹಾಕುವುದು.

ಭಗಂದರ ನೂತಿ ಹುಣ್ಣುಗಳಿಗೆ ಬಟ್ಟೆಗೆ ಸವರಿ ಬತ್ತಿಮಾಡಿ ಹುಣ್ಣಿನ ದ್ವಾರಕ್ಕೆ ಇಟ್ಟರೆ ಗುಣವಾಗುವುದು.

೧೧ ಬಿಳೇಧೂಪ ೨ ತೊಲೆ ಖಲ್ವದಲ್ಲಿ ಅರೆದು ಒಳ್ಳೆಣ್ಣೆಯಲ್ಲಿ ಕಲಸಿ ತಾಂಬ್ರದ ತಟ್ಟೆಯಲ್ಲಿ ಹಾಕಿ ಹಿತ್ತಾಳೆ ಪಂಚಪಾತ್ರೆಯಿಂದ ಅರೆದು ತಣ್ಣೀರಿನಲ್ಲಿ ೯ ಸಲ ತೊಳೆದು ಇದಕ್ಕೆ ಮುರುದಾರಶಿಂಗಿ ೧|| ವರಹತೂಕ, ರಸಕರ್ಪೂರ ೧|| ವರಹತೂಕ, ವ್ಯೈಲತುತ್ತ ಸುಟ್ಟದ್ದು ೩ ಗುರುಗಂಜಿ ತೂಕ ಹಾಕಿ ಚನ್ನಾಗಿ ಅರೆದು ಇಟ್ಟುಕೊಳ್ಳುವುದು. ಇದರಿಂದ ಮುಸುಕು ಹುಣ್ಣು ಗುಣವಾಗುವುದು.

೧೨. ಆರ್ತಿಕರ್ಪೂರ ೩ ತೊಲೆ ತಂದು ಕಾಚೀಸೊಪ್ಪಿನ ರಸದಲ್ಲಿ ೩ ದಿನ ನೆನೆಹಾಕಿ ಇಟ್ಟರೆ ಕಟ್ಟುತ್ತೆ. ೩ ತೊಲೆ ಪಟಿಕ ಚೂರ್ಣಮಾಡಿ ೧|| ತೊಲೆ ಪಟಿಕ ಚೂರ್ಣ ೧ ಹಣತೆಯಲ್ಲಿ ಹಾಕಿ ಅದರಮೇಲೆ ಆರ್ತಿಕರ್ಪೂರ ಹಾಕಿ ಅದರಮೇಲೆ ೧|| ತೊಲೆ ಪಟಿಕದ ಚೂರ್ಣಹಾಕಿ ಮೇಲೊಂದು ಹಣತೆಯನ್ನು ಮುಚ್ಚಿ ಕೆಮ್ಮಣ್ಣುಬಟ್ಟೆ ಸೀಲುಮಾಡಿ ೫ ಬೆರಣಿಯಲ್ಲಿ ಪುಟ ಹಾಕಲು ಭಸ್ಮ ವಾಗುತ್ತೆ. ಈ ಭಸ್ಮ ಟಾಕಿಗಳಮೇಲೆ ಹಾಕಲು ಗುಣವಾಗುತ್ತೆ.

೧೩. ರಸಕರ್ಪೂರ || ತೊಲೆ, ಮುರದಾರಸಿಂಗಿ || ತೊಲೆ, ಪಚ್ಚಕರ್ಪೂರ ೧ ಆಣೆ ತೂಕ, ಜಂಗಲಿಬಾದಾಮಿಪೊಪ್ಪು || ತೊಲೆ, ವ್ಯೈಲತುತ್ತಿ ಸುಟ್ಟದ್ದು || ತೊಲೆ, ಎಣ್ಣೆಬೆಳಗಾರ ಅರಳುಮಾಡಿದ್ದು || ತೊಲೆ, ಹಸುವಿನಬೆಣ್ಣೆ ೬|| ತೊಲೆ ಹಾಕಿ ಇವುಗಳೆಲ್ಲವನ್ನು ಖಲ್ವದಲ್ಲಿ ಚನ್ನಾಗಿ ಅರೆದು ಇಟ್ಟುಕೊಳ್ಳುವುದು. ಹುಣ್ಣು ತೊಳೆಯಬೇಕಾದರೆ ಚೌಡಂಗಿಸೊಪ್ಪು, ಪಪ್ಪಳೀಚಕ್ಕೆ ಇವುಗಳನ್ನು ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡು ಹುಣ್ಣುಗಳನ್ನು ತೊಳೆಯು ವುದು. ಇದರಿಂದ ಟಾಕಿ, ಮುಸುಕು, ಭಗಂದರ ಗುಣವಾಗುವುದು.

೧೪. ಸತ್ತುಭಸ್ಮ ೧ ತೊಲೆ, ಹಸುವಿನಬೆಣ್ಣೆ ೩ ತೊಲೆ ಇವುಗಳನ್ನು ಕಂಚಿನತಟ್ಟೆಯಲ್ಲಿ ಹಾಕಿ ತಾಂಬ್ರದ ಪಂಚಪಾತ್ರೆಯಿಂದ ೪ ಜಾಮ ಚನ್ನಾಗಿ ಅರೆದು ಇಟ್ಟುಕೊಳ್ಳುವುದು. ಇದನ್ನು ನೂತಿ, ಸರಮಾಲೆಗಂಟು, ರಾಜಹುಣ್ಣು, ಹರಡುವಹುಣ್ಣು, ಕೆಟ್ಟಹುಣ್ಣು, ವಾಸಿಯಾಗದೆ ಇರುವ ಹುಣ್ಣುಗಳಿಗೆ ಈ ಮುಲಾಮನ್ನು ಲೇಪಿಸಿಸುವುದರಿಂದ ಗುಣವಾಗುವುದು.

೧೫. ಬೇಲದಮರದಚಕ್ಕೆ, ಗಜ್ಜುಗದಪೊಪ್ಪು, ದೇವದಾರಿಚಕ್ಕೆ, ತೆಂಗಿನ ಚಿಪ್ಪು ಇವುಗಳನ್ನು ಒಂದು ಗಡಿಗೆಯಲ್ಲಿ ಹಾಕಿ ಮೇಲೆ ಮುಚ್ಚಳಮುಚ್ಚಿ ಕೆಮ್ಮಣ್ಣುಬಟ್ಟೆ ಸೀಲುಮಾಡಿ ಗಡಿಗೆಗೆ ೫ ರಂಧ್ರಗಳನ್ನು ಹಾಕಿ ಭೂಪುಟ (ಪಾತಾಳತೈಲ) ದಲ್ಲಿ ತೈಲ ಇಳಿಸಿಕೊಳ್ಳುವುದು. ಇದಕ್ಕೆ ಬಜೆ ಚೂರ್ಣಮಾಡಿ ದ್ದು, ಆರತಿಕರ್ಪೂರ ಹಾಕಿ ಕಲಸಿ ಇಟ್ಟುಕೊಳ್ಳುವುದು. ಹುಳಬಿದ್ದಿರುವ ಹುಣ್ಣುಗಳಿಗೆ ೨ ತೊಟ್ಟು ತೈಲವನ್ನು ಒಳಗೆ ಹಾಕಿ ಮೇಲೆ ಇದೇ ತೈಲದ ಬತ್ತಿ ಮಾಡಿ ಹಾಕಲು ಎಂಥಾ ಹುಳಗಳು ಇದ್ದರೂ ಸತ್ತುಬೀಳುವುವು.

೧೬. ಮುಂಡಕಳ್ಳಿ ಸುಟ್ಟಕರುಕು ೧ ತೊಲೆ, ಮೈಲತುತ್ತಿ ೧ ಆಣಿ ತೂಕ, ಹಸುವಿನಬೆಣ್ಣೆ ೧ ತೊಲೆ ಇವುಗಳನ್ನು ಖಲ್ವದಲ್ಲಿ ಚನ್ನಾಗಿ ಅರೆದು ಈ ಮುಲಾಮಿನಲ್ಲಿ ಕಲಸಿ ಬತ್ತಿಮಾಡಿ ಹುಣ್ಣಿಗೆ ಹಾಕುವುದು. ಹೊಟ್ಟುಸುಲಿದ ಬೆಳ್ಳುಳ್ಳಿ, ಸಾಸುವೆ ಇವು ಎರಡೂ ಅರೆದು ಗಡ್ಡೆಯಮೇಲೆ ಹಾಕಿ ಕಟ್ಟಿದರೆ ಗಡ್ಡೆ ಒಡೆಯುವುದು. ಅನಂತರ ಮೇಲ್ಕಂಡ ಬತ್ತಿ ಹಾಕುವುದು. ಇದರಿಂದ ನೂತಿ ಹುಣ್ಣು ಗುಣವಾಗುವುದು.

೧೭. ಹುಚ್ಚುಹೀರೇಬೀಜ ಒಂದು ಹಿಡಿ ತಂದು ಒಂದು ಬಾಂಡ್ಲಿಯಲ್ಲಿ ಹಾಕಿ ಹಸುವಿನ ತುಪ್ಪ ವಲೆಯಮೇಲೆ ಇಟ್ಟು ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಹುಳ ಇರುವ ಹುಣ್ಣಿಗೆ ಲೇಪಿಸುತ್ತಾಬಂದರೆ ಗುಣವಾಗುವುದು.

೧೮. ಕೆಂಪು ಉತ್ತರೇಣಿಬೇರಿನ ತಿಗಡು ೧ ತೊಲೆ, ಬಿಳೀಜೀರಿಗೆ ॥ ತೊಲೆ, ಯಾಲಕ್ಕಿ ಕಾಲುತೊಲೆ ಇವು ಮೂರು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಅಕ್ಕಿತೊಳದ ನೀರಿನಲ್ಲಿ ಅರೆದು ಗಜ್ಜುಗದಗಾತ್ರ ಮಾತ್ರೆಮಾಡುವುದು. ಹೊತ್ತಿಗೆ ೧ ಮಾತ್ರೆ ಅಕ್ಕಿತೊಳದ ನೀರಿನಲ್ಲಿ ಕಲಸಿಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೩ ದಿನ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಹಾಲು ಅನ್ನ. ಇದರಿಂದ ನೂತಿಹುಣ್ಣು ಗುಣವಾಗುವುದು.

೧೯. ಕರೇ ಗುಗ್ಗುಳ ೧ ತೊಲೆ, ಮೈಲತುತ್ತ ಕಾಲುತೊಲೆ, ಸೊಗದೇಬೇರು ೧ ತೊಲೆ, ಮಂಜಿಷ್ಠ ೧ ತೊಲೆ, ಮಯೂರಶಿಖಿ ೧ ತೊಲೆ, ಕಹಿಪಡವಲ ೧ ತೊಲೆ, ಯಷ್ಟಿಮಧುಕ ೧ ತೊಲೆ, ಕಸ್ತೂರಿ ಅರಿಸಿನ ೨ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ಹೊಂಗೇಬೀಜದಪೊಪ್ಪು ೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿಕೊಳ್ಳುವುದು. ಜಾಜೀಸೊಪ್ಪು ೧ ಹಿಡಿ ತಂದು ಖಲ್ವದಲ್ಲಿ ಅರೆದು ಬಿಲ್ಲೆಮಾಡುವುದು. ಒಳ್ಳೇಬೇವಿನಸೊಪ್ಪು ೧ ಹಿಡಿ ತಂದು ಖಲ್ವದಲ್ಲಿ ಅರೆದು ಬಿಲ್ಲೆಮಾಡುವುದು. ಒಂದು ಬಾಂಡ್ಲಿಯಲ್ಲಿ ೨ ಸೊಲಿಗೆ ಹಸುವಿನ ತುಪ್ಪ ಹಾಕಿ ಒಲೆಯಮೇಲಿಟ್ಟು ಉರಿಹಾಕಿ ಕಾಯಿಸುವಾಗ್ಯೆ ಮೇಲ್ಕಂಡ ೨ ಬಿಲ್ಲೆಗಳನ್ನು ಹಾಕಿ ಬಿಲ್ಲೆಗಳು ಸುಟ್ಟು ಕರುಕು ಆದಮೇಲೆ ಕರುಕನ್ನು ತೆಗೆದುಹಾಕುವುದು. ಅನಂತರ ಮೇಲ್ಕಂಡ ದಿನಸುಗಳ ಚೂರ್ಣವನ್ನು ಹಾಕಿ ಪಕ್ವವಾಗಿ ಕಾಯಿಸಿ ಶೋಧಿಸಿ ಇಟ್ಟುಕೊಳ್ಳುವುದು. ವ್ರಣಗಳಿಗೆ ಈ ತೈಲವನ್ನು ಹಚ್ಚುವುದು ಮತ್ತು ಇದೇ ತೈಲವನ್ನು ಬಟ್ಟೆಗೆ ಲೇಪಿಸಿ ಬತ್ತಿಹಾಕುವುದು. ಇದರಿಂದ ಜಲ್ಲಡಿಹುಣ್ಣು, ದಂತನೂತಿ, ಚರ್ಮನೂತಿ, ಎಮುಕೆನೂತಿ, ಸರಮಾಲೆಗಡ್ಡೆ ಗುಣವಾಗುವುದು.

೨೦. ರಾಜಹುಣ್ಣು, ದಂತಿಹುಣ್ಣುಗಳಿಗೆ ಚಿಕಿತ್ಸೆ:—ಈ ಹುಣ್ಣುಗಳು ಬೆನ್ನಿನಲ್ಲಿ ಎರಡು ಪಕ್ಕಗಳಲ್ಲಿಯೂ ಬರುವುದುಂಟು. ಬಲಭಾಗದಲ್ಲೇಳುವ ಹುಣ್ಣಿಗೆ ರಾಜಹುಣ್ಣೆಂತಲೂ, ಎಡಭಾಗದಲ್ಲೇಳುವ ಹುಣ್ಣಿಗೆ ದಂತಿಹುಣ್ಣೆಂ

ತಲೂ ಹೆಸರು. ಇದಕ್ಕೆ ಚಿಕಿತ್ಸೆ:—ಗೋಧುವೆಹಿಟ್ಟನ್ನು ಹಸುವಿನಹಾಲು ಹಾಕಿ ಹಿಸಿಕಿ ಎರಡು ರೊಟ್ಟಿಗಳನ್ನು ತಯಾರ್ಮಾಡುವುದು. ನಂತರ ಮತ್ತೊಂದು ರೊಟ್ಟಿಗೆ ವತ್ಸನಾಭಿ ಕಾಲುತೊಲೆಯನ್ನು ಅರೆದು ಗೋದೀಹಿಟ್ಟಿನಲ್ಲಿ ಕಲಸಿ ತಯಾರ್ಮಾಡಿಕೊಳ್ಳುವುದು. ಹುಣ್ಣಿಗೆ ಬೆಳಿಗ್ಯೆ ಜೇನುತುಪ್ಪದ ಬತ್ತಿಯನ್ನು ಹಾಕಿ ಸಾಯಂಕಾಲ ಬತ್ತಿಯನ್ನು ತೆಗೆದುಹಾಕಿ ಹಾಲುಬೆರಸಿ ಸುಟ್ಟ ರೊಟ್ಟಿಯೊಂದನ್ನು ಹುಣ್ಣಿನಮೇಲೆ ಹಾಕಿ ಅದರಮೇಲೆ ವತ್ಸನಾಭಿ ಬೆರಸಿದ ಸುಟ್ಟ ರೊಟ್ಟಿಯನ್ನು ಹಾಕಿ ಅದರಮೇಲೆ ಹಾಲುಬೆರಸಿ ಸುಟ್ಟ ರೊಟ್ಟಿಯನ್ನು ಹಾಕಿ ಪಾಪಟಿಸೊಪ್ಪನ್ನು ಕುಟ್ಟಿ ರೊಟ್ಟಿಯಮೇಲಿಟ್ಟು ಕಟ್ಟುವುದು. ಬೆಳಿಗ್ಯೆಹೊತ್ತು ಆ ರೊಟ್ಟಿಗಳನ್ನು ತೆಗೆದು ಒಂದು ಮಡಕೆಯಲ್ಲಿ ನೀರನ್ನು ಸುರಿದು ಅದರಲ್ಲಿ ಹಾಕಲು ಹುಣ್ಣಿನಲ್ಲಿರುವ ಹುಳಗಳು ತೇಲಾಡುವುವು. ಇದೇರೀತಿ ೫ ದಿನಗಳವರೆಗೆ ಪ್ರತಿದಿನವೂ ಕಟ್ಟುತ್ತಾಬರುವುದು. ಅನಂತರ ಕೆಳಗೆ ಬರೆದಿರುವ ಮುಲಾಮನ್ನು ಹಾಕುವುದು. ಒಂದು ಬಾಂಡ್ಲಿಯಲ್ಲಿ ೧ ಪಾವು ಒಳ್ಳೆಣ್ಣೆ ಹಾಕಿ ಹಸನು ಬಿಳೀಧೂಪ ೩ ತೊಲೆ ಹಾಕಿ ಒಲೆಯಮೇಲಿಟ್ಟು ಕಾಯಿಸಿ ಪಕ್ವವಾಗುತ್ತಲೇ ಒಂದು ಪಾತ್ರೆಗೆ ತಣ್ಣೀರು ಹಾಕಿ ಅದರಮೇಲೆ ಬಾಂಡ್ಲಿಯಲ್ಲಿ ಕಾಯಿಸಿರುವ ಎಣ್ಣೆಯನ್ನು ಸುರಿದುಬಿಡುವುದು. ತಣ್ಣಗಾದಮೇಲೆ ತೇಲುತ್ತಿರುವ ಎಣ್ಣೆಯನ್ನು ಜೀರೆ ಬಟ್ಟಲಿಗೆ ಹಾಕಿ ಬಿದಿರುಕಡ್ಡಿಯಿಂದ ಕಲಸಿ ಸ್ವಲ್ಪತಣ್ಣೀರು ಹಾಕುತ್ತಾ ಗೋಟಾಯಿಸುತ್ತಿದ್ದರೆ ಬೆಣ್ಣೆಯಂತೆ ಮುಲಾಮು ಆಗುವುದು. ಈ ಮುಲಾಮು ಒಂದು ಬಿಳೀ ಬಟ್ಟೆಗೆ ಲೇಪಿಸಿ ಹುಣ್ಣಿಗೆ ಹಾಕುವುದು.

೨೧. ಹಾಲುವಾಣದಸೊಪ್ಪಿನ ರಸ ೩ ತೊಲೆ, ಕರೀ ಉಮ್ಮತ್ತಿಸೊಪ್ಪಿನ ರಸ ೩ ತೊಲೆ, ದತ್ತೂರಿಸೊಪ್ಪಿನ ರಸ ೩ ತೊಲೆ, ಬೇವಿನಸೊಪ್ಪಿನ ರಸ ೩ ತೊಲೆ, ಹಿರೇಮದ್ದಿನಗಡ್ಡೆಸೊಪ್ಪಿನ ರಸ ೩ ತೊಲೆ, ಇಂಗಳೀಕ ೧ ವರಹತೂಕ, ಮೈಲತುತ್ತ ೧ ವರಹತೂಕ, ಪಾಲತುತ್ತ ೧ ವರಹತೂಕ, ಮುರುದಾರಶಿಂಗಿ ೧ ವರಹತೂಕ, ಜಂಗಾಲುಪಚ್ಚೆ ೧ ವರಹತೂಕ, ಮಣಿಸಿಲೆ ೧ ವರಹತೂಕ, ಅರತಿ ಕರ್ಪೂರ ೧ ವರಹತೂಕ, ಬಾವಂಚಿಬೀಜ ೧ ವರಹತೂಕ, ರಸಸಿಂಧೂರ ೧ ವರಹತೂಕ, ರಸಕರ್ಪೂರ ೧ ವರಹತೂಕ, ರೂಮಿಮಸ್ತಕಿ ೧ ವರಹತೂಕ, ಮುಸಾಂಬರ ೧ ವರಹತೂಕ ಇವುಗಳನ್ನು ಖಲ್ವದಲ್ಲಿ ಹಾಕಿ ಚೆನ್ನಾಗಿ ಅರೆದು ಇಟ್ಟುಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ಬೇವಿನ ಎಣ್ಣೆ ೮ ತೊಲೆ, ಹೊಂಗೇ ಎಣ್ಣೆ ೮ ತೊಲೆ ಮೇಲ್ಕಂಡ ಸೊಪ್ಪಿನ ರಸಗಳೆಲ್ಲವನ್ನು ಹಾಕಿ ಒಲೆಯಮೇಲಿಟ್ಟು ಕಾಯಿಸಿ ರಸ ಇಂಗಿದಕೂಡಲೇ ಬಟ್ಟೆಯಲ್ಲಿ ಶೋಧಿಸಿಕೊಂಡು ಬಾಂಡ್ಲಿಯಲ್ಲಿ ಹಾಕಿ ಮೇಲ್ಕಂಡ ಖಲ್ವದಲ್ಲಿ ಅರೆದ ದಿನಸುಗಳನ್ನು ಹಾಕಿ ಒಲೆಯಮೇಲಿಟ್ಟು ಕಾಯಿಸಿ ಇಟ್ಟುಕೊಳ್ಳುವುದು. ಇದರಿಂದ ವಿಷಪುರಿ, ಕರ್ಪಾಣಿ, ಹಳೇವ್ರಣಗಳು, ಗಂಡಮಾಲೆ, ಸರಮಾಲೆ, ತಲೇಹುಣ್ಣು ಇವುಗಳಿಗೆ ಲೇಪಿಸುತ್ತಾ ಬಂದರೆ

ಗುಣವಾಗುವುದು. ರಾಜಹುಣ್ಣು, ಭಗಂದರ, ನೂತಿಗಳಿಗೆ ಬತ್ತಿಮಾಡಿ ತೈಲದಲ್ಲಿ ನೆನೆಯಿಸಿ ಹಾಕುವುದು.

೨೨. ತಗರ ೨ ತೊಲೆ ತಂದು ಒಂದು ಬೋಕಿಹೆಂಚಿನಲ್ಲಿ ಹಾಕಿ ಕರಗಿಸುವುದು. ಅದು ಚೆನ್ನಾಗಿ ಕರಗಿ ನೀರಾದಮೇಲೆ ಇಳಿಸಿ ೨ ನಿಮಿಷಗಳ ತರುವಾಯ ಅದರಲ್ಲಿ ೧ ತೊಲೆ ಪಾದರಸ ಹಾಕಿದರೆ ಎರಡೂ ನೇರಿಹೋಗುತ್ತೆ. ಅದನ್ನು ಒರಳಲ್ಲಿ ಹಾಕಿ ಕುಟ್ಟಿ ಚೂರ್ಣಮಾಡಿ ಖಲ್ವದಲ್ಲಿ ಹಾಕಿ ನುಣ್ಣಗೆ ಅರೆದು ಅದಕ್ಕೆ ೧ ತೊಲೆ ನೆಲ್ಲೀಕಾಯಿ ಗಂಧಕ ಹಾಕಿ ಅರೆದು ಅನಂತರ ಬೇವಿನಯಣ್ಣೆ ಹಾಕಿ ಅರೆದು ತಾಂಬ್ರದ ಭರಣಿಯಲ್ಲಿ ಇಟ್ಟುಕೊಳ್ಳುವುದು. ಈ ಮುಲಾಮು ನೂತಿ, ಬೆನ್ನುಫಣಿ, ವ್ರಣ ಅಥವಾ ಹುಳುಸಂಬಂಧವಾದ ಹುಣ್ಣುಗಳಿಗೆ ಹಾಕಲು ಗುಣವಾಗುತ್ತೆ. ನೂತಿಗಳಿಗೆ ಈ ಔಷಧವನ್ನು ಬಟ್ಟೆಯಲ್ಲಿ ನೆನೆಯಿಸಿ ಬತ್ತಿಹಾಕುವುದು.

೨೩. ಮುಂಡೆಕಳ್ಳಿಹಾಲು ತೆಳುವಾದ ಬಟ್ಟೆಗೆ ಎರಡುಕಡೆ ಲೇಪಿಸಿ ಒಣಗಿಸುವುದು. ಈರೀತಿ ೯ ಸಲ ಮಾಡಿದಮೇಲೆ ಆ ಹಾಲಿನ ಬಟ್ಟೆಯನ್ನು ಹೊಸ ಬೋಕಿಯಲ್ಲಿಹಾಕಿ ಕೊನೆ ಬಟ್ಟೆಯನ್ನು ದೀಪದಲ್ಲಿವುರಿಸಿ ಇಡುವುದು. ಇದೆಲ್ಲಾ ಸುಟ್ಟು ಬೂದಿ ಆದಮೇಲೆ ಆ ಬೂದಿ ತೆಗೆದುಕೊಂಡು ಕಂಚಿನತಟ್ಟೆಯಲ್ಲಿ ಹಾಕಿ ಅದಕ್ಕೆ ತಕ್ಕಹಾಗೆ ಬೇವಿನ ಎಣ್ಣೆ ಹಾಕಿ ತಾಂಬ್ರದ ಪಂಚಪಾತ್ರೆಯಿಂದ ಚನ್ನಾಗಿ ಅರೆದು ಇಟ್ಟುಕೊಳ್ಳುವುದು. ರಾಜಹುಣ್ಣಿಗೆ ಈ ಮುಲಾಮು ಬಟ್ಟೆಯಲ್ಲಿ ನೆನೆಯಿಸಿ ಬತ್ತಿಮಾಡಿ ಹಾಕುವುದು. ಎರಡುದಿನ ಅಥವಾ ಮೂರು ದಿನಕ್ಕೆ ಒಂದಾವರ್ತಿ ತಂಗಡಿಸೊಪ್ಪಿನ ಕಷಾಯದಲ್ಲಿ ಹುಣ್ಣುಗಳನ್ನು ತೊಳೆಯುವುದು. ಈ ಮುಲಾಮನ್ನು ಹಾಕುತ್ತಾ ಬಂದರೆ ಸಮಸ್ತವಾದ ವ್ರಣಗಳೂ ಗುಣವಾಗುವುವು. ಹುಣ್ಣು ಆರುವ ಸಮಯದಲ್ಲಿ ರಾಗಿತಂದು ಬಾಂಡ್ಲಿಯಲ್ಲಿ ಹಾಕಿ ಒಲೆಯ ಮೇಲಿಟ್ಟು ಕಾಯಿಸಿ ಕರ್ರಗೆ ಆದಮೇಲೆ ಆ ಕರಕನ್ನು ಖಲ್ವದಲ್ಲಿ ಹಾಕಿ ಚನ್ನಾಗಿ ಅರೆದು ಹುಣ್ಣಿನಮೇಲೆ ಹಾಕುವುದು.

೨೪. ರಸಕರ್ಪೂರ ॥ ತೊಲೆ, ಮೈಲತುತ್ತ ಸುಟ್ಟದ್ದು ॥ ತೊಲೆ, ಮುರದಾರಶಿಂಗು ॥ ತೊಲೆ, ಶಿಂಧೂರ (ಚಂದ್ರ) ॥ ತೊಲೆ, ಬಿಳೀಧೂಪ ॥ ತೊಲೆ, ಬಿಳೀಕಾಚು ॥ ತೊಲೆ, ಜಂಗಾಲ್‌ಪಚ್ಚೆ । ತೊಲೆ, ಪಾಲತುತ್ತ ॥ ತೊಲೆ, ಕ್ಯಾಲಮಲ್ (ಇದು ಇಂಗ್ಲೀಷು ಔಷಧಾಲಯಗಳಲ್ಲಿ ದೊರೆಯುವುದು) ॥ ತೊಲೆ, ತಗರದಸುಣ್ಣ ಅಥವಾ ಸುಫೇದಾ ॥ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಚನ್ನಾಗಿ ಅರೆದುಕೊಳ್ಳುವುದು. ಹಸುವಿನಬೆಣ್ಣೆ ೧೨ ತೊಲೆ, ಮೊದಲು ಹಸುವಿನಬೆಣ್ಣೆ ನಲವತ್ತುಸಲ ತಣ್ಣೀರಿನಲ್ಲಿ ತೊಳೆದು ತಾಂಬ್ರದ ತಟ್ಟೆಯಲ್ಲಿ ಹಾಕಿ ಖಲ್ವದಲ್ಲಿ ಅರದ ದಿನಸುಗಳನ್ನು ಹಾಕಿ ತಾಂಬ್ರದ ಪಂಚಪಾತ್ರೆಯಿಂದ ೨ ಜಾವ ಗೋಟಾಯಿಸಿ ತಾಂಬ್ರದ ಭರಣಿಯಲ್ಲಿ ಇಟ್ಟುಕೊಳ್ಳುವದು. ಇದರಿಂದ ಮುಸುಕು

ಹುಣ್ಣು, ವಿಷಪುರಿಹುಣ್ಣು, ತಲೆಹುಣ್ಣು ಮೊದಲಾದ ಎಲ್ಲಾ ವಿಧವಾದ ಹುಣ್ಣುಗಳೂ ಗುಣವಾಗುವುವು.

೨೫. ತಗರ ೧ ತೊಲೆ ಬೆಂಕಿಯಮೇಲಿಟ್ಟು ಕರಗಿಸಿ ಈಚಿಗೆ ಇಳಿಸಿ ೨ ನಿಮಿಷಗಳ ತರುವಾಯ ಪಾದರಸ ೧ ತೊಲೆ ಶೇರಿಸಿ ಆರಿದನಂತರ ಒರಳಲ್ಲಿ ಹಾಕಿ ಕುಟ್ಟಿ ಖಲ್ವದಲ್ಲಿ ಹಾಕಿ ಅರೆಯುವುದು. ಮುರದಾರಶಿಂಗು ೨ ತೊಲೆ, ಆರತಿ ಕರ್ಪೂರ ೨ ತೊಲೆ, ಸುಟ್ಟ ಮೈಲತುತ್ತ ೧ ತೊಲೆ, ಹಸುವಿನಬೆಣ್ಣೆ ೧೨' ತೊಲೆ ಹಾಕಿ ಚನ್ನಾಗಿ ಅರೆದು ತಾಂಬ್ರದ ತಟ್ಟೆಯಲ್ಲಿ ಹಾಕಿ ತಾಂಬ್ರದ ಪಂಚಪಾತ್ರೆಯಿಂದ ಚನ್ನಾಗಿ ಅರೆದು ಇಟ್ಟುಕೊಳ್ಳುವುದು. ಇದರಿಂದ ಟಾಕಿಹುಣ್ಣು, ಮಕ್ಕಳ ತಲೆಹುಣ್ಣು, ಘಾಯಗಳು ಮೊದಲಾದ ಎಲ್ಲಾ ವಿಧವಾದ ಹುಣ್ಣುಗಳೂ ಗುಣವಾಗುವುವು.

೨೬. ಹಳೇತುಪ್ಪ ೬ ತೊಲೆ, ಇಂಗಲೀಕ ೧ ತೊಲೆ ಇವು ಎರಡೂ ಖಲ್ವದಲ್ಲಿ ಚನ್ನಾಗಿ ಅರೆದು ಇಟ್ಟುಕೊಳ್ಳುವುದು. ಇದರಿಂದ ಎಲ್ಲಾ ವಿಧವಾದ ಹುಣ್ಣು ಗುಣವಾಗುತ್ತೆ.

೨೭. ಒಳ್ಳೆಣ್ಣೆ ॥ ಶೇರು, ಬಿಳೇಧೂಪ ೬ ತೊಲೆ ಇವು ಎರಡು ಖಲ್ವದಲ್ಲಿ ಚನ್ನಾಗಿ ಅರೆದು ಅನಂತರ ರಸಕರ್ಪೂರ ೧ ತೊಲೆ, ಆರತಿಕರ್ಪೂರ ೧ ತೊಲೆ, ಸಾಂಬ್ರಾಣಿ ೧ ತೊಲೆ ಇದೆಲ್ಲವನ್ನು ಶೇರಿಸಿ ಅರೆದು ಇಟ್ಟುಕೊಳ್ಳುವುದು. ಎಂಥಾದ್ದೇ ಆಗಲಿ ಹುಣ್ಣು, ರಾಜಹುಣ್ಣುಗಳಿಗೆ ಹಚ್ಚಿದರೆ ಗುಣವಾಗುವುದು.

೨೮ ಪಾದರಸ ಕಾಲುತೊಲೆ, ರಸಕರ್ಪೂರ ಕಾಲುತೊಲೆ, ಜಂಗಾಲ್‌ಪಚ್ಚೆ ಕಾಲುತೊಲೆ, ಪಾಲತುತ್ತ ॥ ತೊಲೆ, ಮುರದಾರಶಿಂಗು ॥ ತೊಲೆ, ಮೈಲತುತ್ತ ॥ ತೊಲೆ, ಹೊಂಗೆ ಎಣ್ಣೆ ೧ ತೊಲೆ, ಮೇಣ ೨ ತೊಲೆ, ಮೈಲತುತ್ತಿಯನ್ನು ಹುಣಿಸೇಹಣ್ಣಿನಲ್ಲಿಟ್ಟು ಪುಟ ಹಾಕಿಕೊಳ್ಳಬೇಕು. ಮೇಣ, ಎಣ್ಣೆ ಕರಗಿಸಿಕೊಳ್ಳಬೇಕು. ಬಾಕಿ ದಿನಸುಗಳು ಎಲ್ಲವನ್ನೂ ಶೇರಿಸಿ ಖಲ್ವದಲ್ಲಿ ಅರೆದು ಇಟ್ಟುಕೊಳ್ಳುವುದು. ಎಂಥಾದ್ದೇ ಹುಣ್ಣಿಗೆ ಹಾಕಿದರೂ ಗುಣವಾಗುವುದು.

೨೯. ರೂಮಿಮಸ್ತಕಿ ೧ ವರಹತೂಕ, ಕವಡೇಸಾಂಬ್ರಾಣಿ ೧ ವರಹತೂಕ, ಸುಟ್ಟಮೈಲತುತ್ತ ೧ ವರಹತೂಕ, ಕರೇಶೀಸ ಬೆಣ್ಣೆಯಲ್ಲಿ ಸಾಣೆಕಲ್ಲುಮೇಲೆ ಅರೆದದ್ದು ೧ ವರಹ ತೂಕ, ಹಸುವಿನಬೆಣ್ಣೆ ೫ ತೊಲೆ ಇವುಗಳನ್ನು ತಾಂಬ್ರದ ತಟ್ಟೆಯಲ್ಲಿ ಹಾಕಿ ತಾಂಬ್ರದ ಪಂಚಪಾತ್ರೆಯಿಂದ ಅರೆದು ಇಟ್ಟುಕೊಂಡು ಟಾಕಿ ವ್ರಣಗಳಮೇಲೆ ಹಾಕಲು ಗುಣವಾಗುವುದು.

೩೦. ರಸಕರ್ಪೂರ ॥ ತೊಲೆ, ಮೈಲತುತ್ತ ಸುಟ್ಟದ್ದು ॥ ತೊಲೆ, ಬಿಳೇಧೂಪ ॥ ತೊಲೆ, ಬಿಳೇಕಾಚು ॥ ತೊಲೆ, ಜಂಗಾಲ್‌ಪಚ್ಚೆ ಕಾಲುತೊಲೆ, ಇವುಗಳನ್ನು ಖಲ್ವದಲ್ಲಿ ಚನ್ನಾಗಿ ಅರೆದು ತಾಂಬ್ರದ ತಟ್ಟೆಯಲ್ಲಿ ಹಾಕಿ ಹಸುವಿನಬೆಣ್ಣೆ ೧೨ ತೊಲೆ ಹಾಕಿ ತಾಂಬ್ರದ ಪಂಚಪಾತ್ರೆಯಿಂದ ಚನ್ನಾಗಿ ಅರೆದು ಇಟ್ಟು

ಕೊಂಡು ಉಪಯೋಗಿಸುವುದು. ಇದರಿಂದ ಗುಣ:—ಮುಸುಕುಹುಣ್ಣು, ವಿಷ ಪುರಿಹುಣ್ಣು, ಮಕ್ಕಳ ತಲೆಹುಣ್ಣು ನಿವಾರಣೆ ಆಗುವುದು.

೩೧. ಪಾದರಸ ೧ ತೊಲೆಯನ್ನು ವೀಳೇದೆಲೆಯ ರಸದಿಂದ ಅರೆದು ಮುರ ದಾರುಶಿಂಗು ೧ ತೊಲೆ, ರಸಕರ್ಪೂರ ೧ ತೊಲೆ, ಗೋಟಡಿಕೆ ಸುಟ್ಟಿದ್ದು ೧ ತೊಲೆ, ಕೆಂಪುಕಾಚು ೧ ತೊಲೆ ಇದನ್ನು ಹುರಳಿಕಾಳಷ್ಟು ತುಂಡುಗಳುಮಾಡಿ ಬೋಕಿಯಲ್ಲಿ ಹಾಕಿ ಹುರಿದುಕೊಂಡರೆ ಅವಲುನಂತೆ ಆಗುತ್ತೆ, ಇವುಗಳನ್ನು ಖಲ್ವದಲ್ಲಿ ಚನ್ನಾಗಿ ಅರೆದು ತಾಂಬ್ರದ ತಟ್ಟೆಯಲ್ಲಿ ಹಾಕಿ ಹಸುವಿನಬೆಣ್ಣೆ ೧೨ ತೊಲೆ ಹಾಕಿ ತಾಂಬ್ರದ ಪಂಚಪಾತ್ರೆಯಿಂದ ೨ ಜಾವಾ ಚನ್ನಾಗಿ ಅರೆದು ಇಟ್ಟುಕೊಳ್ಳುವುದು. ಇದರಿಂದ ಟಾಕಿ, ಮೇಹಸಂಬಂಧವಾದ ಹುಣ್ಣು, ಮಕ್ಕಳ ತಲೆಹುಣ್ಣು ಗುಣವಾಗುವುದು.

೩೨. ರಸಕರ್ಪೂರ ಕಾಲುತೊಲೆ, ಮುರದಾರಶಿಂಗಿ ಕಾಲುತೊಲೆ, ಚಂದ್ರ ಕಾಲುತೊಲೆ, ಹಸುವಿನಬೆಣ್ಣೆ ೧॥ ತೊಲೆ ಇವುಗಳನ್ನು ಖಲ್ವದಲ್ಲಿ ಚನ್ನಾಗಿ ಅರೆದು ಟಾಕಿಹುಣ್ಣುಗಳಿಗೆ ಹಚ್ಚಲು ಗುಣವಾಗುತ್ತೆ.

೩೩. ಕೊಬ್ಬರಿ ಎಣ್ಣೆ ೬ ತೊಲೆ ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಉರಿಹಾಕಿ ಅದಕ್ಕೆ ಮೇಣ ೧ ತೊಲೆ, ಬಿಳೇಧೂಪ ೧ ತೊಲೆ, ರೋಜ಼ ೧ ತೊಲೆ, ಗಂಗಚಂದ್ರ ೨ ತೊಲೆ ಇವುಗಳನ್ನು ಹಾಕಿ ಪಕ್ವವಾಗಿ ಕಾಯಿಸಿ ಸಕಲವಾದ ಹುಣ್ಣಿಗೆ ಹಚ್ಚಲು ಗುಣವಾಗುತ್ತೆ.

೩೪. ರಸಕರ್ಪೂರ ಕಾಲುತೊಲೆ, ರಸಸಿಂಧೂರ ಕಾಲುತೊಲೆ, ಇಂಗಲೀಕ ಕಾಲುತೊಲೆ, ಸವ್ವೀರ ಕಾಲುತೊಲೆ ಇವುಗಳನ್ನು ಖಲ್ವದಲ್ಲಿ ಚನ್ನಾಗಿ ಅರೆದು ೫ ತೊಲೆ ಹಸುವಿನಬೆಣ್ಣೆಯನ್ನು ಹಾಕಿ ಅರೆಯುವುದು. ರಾತ್ರಿಯಲ್ಲಿ ಖಲ್ವದಲ್ಲಿ ತಣ್ಣೀರು ಹಾಕಿ ಬೆಳಿಗ್ಗೆ ಸುರಿದುಬಿಡುವುದು. ಈರೀತಿ ಪುನಃ ಹೊಸನೀರು ರಾತ್ರಿಯಲ್ಲಿ ಹಾಕಿ ಬೆಳಿಗ್ಗೆ ಸುರಿದುಬಿಡುವುದು. ಹೀಗೆ ಮೂರಾವರ್ತಿ ಮಾಡಿ ಭರಣಿಯಲ್ಲಿ ಇಟ್ಟುಕೊಂಡು ಮುಸುಕು, ಭಗಂದರಕ್ಕೆ ಹಾಕಲು ಗುಣವಾಗುವುದು.

---

# ನಲವತ್ತನೆಯ ಅಧ್ಯಾಯ.

## ಕುಷ್ಠರೋಗ—ಔಷಧಗಳು.

### ಕುಷ್ಠರೋಗ ಲಕ್ಷಣ.

ವಿರುದ್ಧಾಹಾರಗಳನ್ನು ಸೇವಿಸುವುದರಿಂದಲೂ, ಮಲಮೂತ್ರಗಳನ್ನು ನಿರೋಧಿಸುವುದರಿಂದಲೂ, ದೇವ, ಗುರು, ಬ್ರಾಹ್ಮಣ, ವೃದ್ಧ, ಮಾತಾಪಿತೃ

ಇವರುಗಳನ್ನು ನಿಂದಿಸುವುದರಿಂದಲೂ, ವಾತಾದಿದೋಷಗಳು ಪ್ರಕೋಪಹೊಂದಿ ತ್ವಬ್ಮಾಂಸ ರಕ್ತಲಸೀಕೆಗಳನ್ನು ದುಷ್ಟವನ್ನಾಗಿಮಾಡಿ ಕುಷ್ಠವನ್ನು ಹುಟ್ಟಿಸುವುದು.

ಕುಷ್ಠರೋಗವು:—ಕಪಾಲಿಕ, ಉದುಂಬರ, ಮಂಡಲ, ಚರ್ಚಿಕ, ಋಷ್ಯಜಿಹ್ವ, ವಿಪಾದಿಕ, ಸಿಧ್ಮ, ಕಿಟಿಭ, ಅಲಸ, ದದ್ರು, ಪಾಮಾ, ವಿಸ್ಫೋಟಕ, ಮಹಾಕುಷ್ಠ, ಚರ್ಮದಳ, ಪುಂಡರೀಕ, ಶತಾರುಕ, ಕಾಕಣ, ಚಿತ್ರ ಎಂಬದಾಗಿ ಹದಿನೆಂಟು ವಿಧಗಳಾಗಿರುವುದು.

ವಾತ ಪ್ರಕೋಪದಿಂದ ಚರ್ಮವು ಕೆಂಪು, ಕಪ್ಪುಬಣ್ಣಗಳಿಂದ ಕೂಡಿದ್ದಾಗಿ ಮಡಕೆಯತುಂಡಿನಂತೆ ಇದ್ದು ಮುಟ್ಟಿದರೆ ಉದುರುತ್ತಿರುವ ಪೊರೆಗಳು ಪೊರೆಗಳಾಗಿ ಚರ್ಮವು ಅತಿಮೃದುವಾಗಿದ್ದರೆ ಕಪಾಲಿಕ ಕುಷ್ಠವೆನ್ನಲ್ಪಡುವುದು.

ಪಿತ್ಥ ಪ್ರಕೋಪದಿಂದ ಚರ್ಮವು ರಕ್ತವರ್ಣವಾಗಿ ತಾಪವು, ನೋವೂ, ತುರಿಯೂ ಉಂಟಾಗಿದ್ದು ಅದರಲ್ಲಿರುವ ರೋಮಗಳು ಹಳದೀಬಣ್ಣವುಳ್ಳದ್ದಾಗಿದ್ದರೆ ಉದುಂಬರಕುಷ್ಠವೆನ್ನಲ್ಪಡುವುದು.

ಶ್ಲೇಷ್ಮ ಪ್ರಕೋಪದಿಂದ ಚರ್ಮವು ಬಿಳುಪು ಬಣ್ಣವುಂಟಾಗಿ ಜಿಂಕೆಯಂತೆಯೂ, ಮಂಡಲಾಕಾರವಾಗಿಯೂ ಇದ್ದರೆ ಅದು ಮಂಡಲಕುಷ್ಠವೆನ್ನಲ್ಪಡುವುದು.

ಶ್ಲೇಷ್ಮ ಪ್ರಕೋಪದಿಂದ ಪಾದಾದಿಗಳಲ್ಲಿ ತುರಿಯಿಂದೊಡಗೂಡ ಕಪ್ಪಾದ ಕುರುಗಳು ಹುಟ್ಟಿ ನೀರನ್ನು ಸ್ರವಿಸುತ್ತಾ ಪಾದಗಳು ಒಡೆದಿದ್ದರೆ ಅದು ವಿಚರ್ಚಿಕ ಕುಷ್ಠವೆನ್ನಲ್ಪಡುವುದು. ಇದನ್ನು ಇಸುಬು ಎನ್ನುವರು.

ವಾತಪಿತ್ಥ ಪ್ರಕೋಪದಿಂದ ಚರ್ಮವು ಕಠಿಣವಾಗಿಯೂ, ಒರಟಾಗಿಯೂ, ತರಕಲಾಗಿಯೂ, ಮಂಡಲಾಗ್ರದಲ್ಲಿ ಕೆಂಪಗೂ, ಮಂಡಲ ಮಧ್ಯದಲ್ಲಿ ಕಪ್ಪಗೂ ಇದ್ದರೆ ಅದು ಋಷ್ಯಜಿಹ್ವವೆನ್ನಲ್ಪಡುವುದು.

ವಾತಪಿತ್ಥ ಶ್ಲೇಷ್ಮಪ್ರಕೋಪದಿಂದ ಅಂಗಾಲು, ಅಂಗೈಗಳು ಒಡೆದು ಅಧಿಕ ನೋವುಂಟಾಗಿದ್ದರೆ ಅದು ವಿಪಾದಿಕ ಕುಷ್ಠವೆನ್ನಲ್ಪಡುವುದು.

ವಾತಶ್ಲೇಷ್ಮ ಪ್ರಕೋಪದಿಂದ ಚರ್ಮವು ಬಿಳುಪು ವರ್ಣವುಂಟಾಗಿ ತೆಳುವಾಗಿದ್ದು ಸೋರೇಕಾಯಿಯ ಹೂವಿನಂತಿದ್ದು ಉಜ್ಜಿದರೆ ಹೊಟ್ಟು ಉದುರುವುದಾದರೆ ಸಿಧ್ಮಕುಷ್ಠವೆನ್ನಲ್ಪಡುವುದು. ಮತ್ತು ಇದು ಬಹಳವಾಗಿ ಎದೆಯಲ್ಲಿಯೇ ಹುಟ್ಟುತ್ತಿರುವುದು. ಇದಕ್ಕೆ ಚಿಬ್ಬು ಎಂತ ಕರೆಯುತ್ತಾರೆ.

ವಾತಶ್ಲೇಷ್ಮ ಪ್ರಕೋಪದಿಂದ ಚರ್ಮವು ಕಪ್ಪಾಗಿಯೂ, ಅಲ್ಲಿಯ ವ್ರಣವು ಕಠಿಣವಾಗಿಯೂ, ತರಕಲಾಗಿಯೂ ಇದ್ದರೆ ಅದು ಕಿಟಿಭಕುಷ್ಠವೆನ್ನಲ್ಪಡುವುದು.

ಶ್ಲೇಷ್ಮವಾತ ಪ್ರಕೋಪದಿಂದ ಚರ್ಮದಲ್ಲಿ ಕುರುಗಳು ಹುಟ್ಟಿ ರಕ್ತವರ್ಣವಾಗಿಯೂ, ತುರಿಯಾಗಿಯೂ ಇದ್ದರೆ ಅದು ಅಲಸಕುಷ್ಠವೆನ್ನಲ್ಪಡುವುದು.

ಪಿತ್ಥಶ್ಲೇಷ್ಮ ಪ್ರಕೋಪದಿಂದ ಚರ್ಮದಲ್ಲಿ ಕುರುಗಳು ಹುಟ್ಟಿ ರಕ್ತವರ್ಣವಾಗಿಯೂ, ತುರಿಯಾಗಿಯೂ ಇದ್ದು ಮಂಡಲದಲ್ಲಿ ತಾಪವುಂಟಾದರೆ ಅದು ದದ್ರುಕುಷ್ಠವೆನ್ನಲ್ಪಡುವುದು. ಇದಕ್ಕೆ ಗಜಕರ್ಣ, ಹುಳಕಡ್ಡಿಯೆನ್ನುವರು.

ಪಿತ್ಥಶ್ಲೇಷ್ಮ ಪ್ರಕೋಪದಿಂದ ಚರ್ಮದಲ್ಲಿ ಚಿಕ್ಕಕುರುಗಳು ಹುಟ್ಟಿ ತುರಿಯುಂಟಾಗಿ ಒಡೆದು ಅದರಿಂದ ನೀರು ಸೋರುತ್ತಾ ನಡು, ಕೈಗಳು ಇವುಗಳಲ್ಲಿ ಅಧಿಕವಾಗಿದ್ದರೆ ಅದು ಪಾಮಾಕುಷ್ಠವೆನ್ನಲ್ಪಡುವುದು. ಇದಕ್ಕೆ ಖಜ್ಜಿ, ಕರಪಾಣಿ ಎನ್ನುವರು.

ಪಿತ್ಥಶ್ಲೇಷ್ಮ ಪ್ರಕೋಪದಿಂದ ಚರ್ಮದಲ್ಲಿ ಶ್ಯಾಮಾರುಣವರ್ಣಗಳುಂಟಾಗಿ ಕುರುಗಳು ಹುಟ್ಟಿ ಚರ್ಮವು ತೆಳುವಾಗಿದ್ದರೆ ಸ್ಫೋಟಕಕುಷ್ಠವೆನ್ನಲ್ಪಡುವುದು. ಪೊಡೆಗಳೆಂತ ಕರೆಯುವರು.

ಪಿತ್ಥಶ್ಲೇಷ್ಮ ಪ್ರಕೋಪದಿಂದ ಬೆವರನ್ನು ಸ್ರವಿಸದೆ ಚರ್ಮದಲ್ಲಿ ಮಚ್ಚೆಗಳು ಹುಟ್ಟಿದರೆ ಅದು ಮಹಾಕುಷ್ಠವೆನ್ನಲ್ಪಡುವುದು. ಇದು ಚರ್ಮಕುಷ್ಠವೆಂತಲೂ, ಗಜಚರ್ಮಕುಷ್ಠವೆಂತಲೂ ಹೇಳಲ್ಪಡುವುದು.

ಪಿತ್ಥಶ್ಲೇಷ್ಮ ಪ್ರಕೋಪದಿಂದ ಚರ್ಮವು ರಕ್ತವರ್ಣವಾಗಿಯೂ, ತುರಿಯಾಗಿಯೂ, ಛಳುಕು ಇರುವುದಲ್ಲದೆ ಅಲ್ಲಿಯ ಕುರುಗಳು ಮುಟ್ಟಿದರೆ ನೋವಾಗುತ್ತಿರುವುದಕ್ಕೆ ಚರ್ಮದಳಕುಷ್ಠವೆನ್ನಲ್ಪಡುವುದು.

ಪಿತ್ಥಶ್ಲೇಷ್ಮ ಪ್ರಕೋಪದಿಂದ ಚರ್ಮ ಮಧ್ಯಪ್ರದೇಶವು ಬೆಳ್ಳಗೂ, ತಾವರೆ ಎಲೆಯಂತೆ ಸುತ್ತಲೂ ಕೆಂಪಗೂ ಉನ್ನತವಾಗಿಯೂ ಇದ್ದರೆ ಪುಂಡರೀಕಕುಷ್ಠವೆನ್ನಲ್ಪಡುವುದು.

ಚರ್ಮದಲ್ಲಿ ಅನೇಕ ವ್ರಣಗಳು ಹುಟ್ಟಿ ನೋವೂ, ತಾಪವೂ ಉಂಟಾಗಿರಲು ಶತಾರುಕುಷ್ಠವೆನ್ನಲ್ಪಡುವುದು.

ಚರ್ಮವು ಕಪ್ಪಾಗಿ ಗುಲಗಂಜಿಗಳಂತೆ ಕುರುಗಳು ಹುಟ್ಟಿ ಪಾಕವಾಗುವಾಗ ಅತಿನೋವುಂಟಾಗಿದ್ದರೆ ಕಾಕಣಕುಷ್ಠವೆನ್ನಲ್ಪಡುವುದು.

ವಾತಾದಿದೋಷ ಪ್ರಕೋಪದಿಂದ ಚರ್ಮವು ಕೆಂಪಗಾಗಲಿ, ಬೆಳ್ಳಗಾಗಲಿ ಇದ್ದರೆ ಅದು ಚಿತ್ರಕುಷ್ಠವೆನ್ನಲ್ಪಡುವುದು.

## ಕುಷ್ಠರೋಗದಲ್ಲಿ ಅಸಾಧ್ಯ ಲಕ್ಷಣ.

೧. ಮೇದಸ್ಸು ಧಾತುಗಳಲ್ಲಿ ಉತ್ಪತ್ತಿಯಾಗಿ ಅಸ್ಥಿ ಶುಕ್ರಗಳಲ್ಲಿ ಪ್ರವೇಶವಾದರೆ ಅಸಾಧ್ಯವು.

೨. ಕುಷ್ಠ ಒಡೆದು ಕೆಂಪು ಕಣ್ಣಾಗಿ ಸ್ವರಹೀನವಾಗುವುದು, ವಮನ, ವಿರೇಚನವೇ ಮೊದಲಾದ ಪಂಚಕರ್ಮಗಳಿಂದಲೂ ಪರಿಹಾರವಾಗದೆ ಇರುವ ಕುಷ್ಠವು ಅಸಾಧ್ಯವು.

೩. ಬಿಳೀಕೂದಲು ಹುಟ್ಟಿ ಚರ್ಮವು ನೂತನವಾಗದೆಯಿರುವ ಅಗ್ನಿದಗ್ಧವಾದ ಕುಷ್ಠವು ಅಸಾಧ್ಯವು.

೪ ಗುಹ್ಯ, ಹಸ್ತ, ತುಟಿಗಳಲ್ಲಿ ಉತ್ಪತ್ತಿಯಾಗಿರುವುದೂ, ಬಹುಕಾಲದಿಂದ ಅನುಸರಿಸಿದ್ದೂ ಆದರೆ ಅಸಾಧ್ಯವು.

೫. ಕಣ್ಣುಗಳಲ್ಲಿ ಕೆಂಪು, ಸ್ವರನಾಶ, ಮಂದಾಗ್ನಿ, ಕ್ರಿಮಿ, ಕೃಷ್ಣಾತಿಸಾರಗಳುಳ್ಳದ್ದು ಅಸಾಧ್ಯವು.

## ಕುಷ್ಠಕ್ಕೆ ಚಿಕಿತ್ಸೆಗಳು.

೧. ಬೇವಿನಸಮೂಲ ೧೨ ತೊಲೆ, ಚಿತ್ರಮೂಲ ೧ ತೊಲೆ, ತುಂಗಮುಸ್ತೆ ೧ ತೊಲೆ, ಆನೆನೆಗ್ಗಿಲುಬೇರು ೧ ತೊಲೆ, ಶುಂಠಿ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೪ ತೊಲೆ, ವಾಯುವಿಳಂಗ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಶುದ್ಧಿಮಾಡಿದ ಗೇರುಬೀಜ ೩ ತೊಲೆ ಇವುಗಳನ್ನು ನುಣ್ಣಗೆ ಕುಟ್ಟಿ ಮೇಲ್ಕಂಡ ಚೂರ್ಣಕ್ಕೆ ಕಲಸಿ ಇಟ್ಟುಕೊಳ್ಳುವುದು ಹೊತ್ತಿಗೆ ಅರ್ಧತೊಲೆಯಷ್ಟು ಚೂರ್ಣ ಕಕ್ಕೆಚಕ್ಕೆ ಕಷಾಯದಲ್ಲಿ ತೆಗೆದುಕೊಳ್ಳಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೪೦ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕುಷ್ಠ ಗುಣವಾಗುವುದು.

೨. ಅರಸಿನ ೧ ತೊಲೆ, ಮರದರಿಸಿನ ೨ ತೊಲೆ, ಕಸ್ತೂರಿ ಅರಿಸಿನ ೧ ತೊಲೆ, ನೆಲಬೇವು ೪ ತೊಲೆ, ಕಹಿಪಡವಲ ೨ ತೊಲೆ, ಕಟುಕರೋಹಿಣಿ ೨ ತೊಲೆ, ಬಜೆ ೧ ತೊಲೆ, ಮುತ್ತುಗದಹಣ್ಣು ೧ ತೊಲೆ, ಅತಿಮಧುರ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೪ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಹೊತ್ತಿಗೆ ॥ ತೊಲೆ ಚೂರ್ಣ ಬಿಸಿನೀರಿನಲ್ಲಿ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೪೦ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕುಷ್ಠ ಗುಣವಾಗುವುದು.

೩. ರಾತ್ರಿ ಅನ್ನವನ್ನುಮಾಡಿ ಆ ಅನ್ನದಲ್ಲಿ ನೀರುಹಾಕಿಡುವುದು. ೩ ದಿನ ಆದಮೇಲೆ ಈ ಅನ್ನದ ನೀರು ತೆಗೆದುಕೊಂಡು ೧ ಪಾತ್ರೆಯಲ್ಲಿ ಹಾಕಿ ಅದರಲ್ಲಿ ವಿಷಮುಷ್ಟಿಬೀಜ ೧ ಪಾವು ಹಾಕಿ ೩ ದಿನ ನೆನೆಹಾಕುವುದು. ಅನಂತರ ವಿಷಮುಷ್ಟಿಬೀಜದ ಮೇಲಿನಸಿಪ್ಪೆಯನ್ನು ಕತ್ತಿಯಲ್ಲಿ ಕೆರೆದು ಚಿಕ್ಕಚಿಕ್ಕ ತುಂಡುಗಳಾಗಿ ಕತ್ತರಿಸಿ ಇದನ್ನು ಹಸುವಿನ ಮೂತ್ರದಲ್ಲಿ ೩ ದಿನ ನೆನೆಯಿಸಿ ತಣ್ಣೀರಿನಲ್ಲಿ ತೊಳೆದು ಬಿಸಲಿನಲ್ಲಿ ಒಣಗಿಸಿ ಹಸುವಿನತುಪ್ಪದಲ್ಲಿ ಸುಮಾರಾಗಿ ಹುರಿದುಕೊಳ್ಳುವುದು. ಬಾವಂಚಿಬೀಜ ೧ ಪಾವು, ಕೊಡಸಿಗೆಬೀಜ ॥ ಪಾವು, ಚಿತ್ರಮೂಲದ ಬೇರಿನತಿಗುಡು ೧ ಪಾವು, ಗರುಗದಸೊಪ್ಪಿನ ಚೂರ್ಣ ೧ ಪಾವು,

ಆಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೪ ತೊಲೆ ಇವುಗಳು ಎಲ್ಲವನ್ನೂ ಕುಟ್ಟಿ ಚೂರ್ಣಮಾಡಿ ಹೊತ್ತಿಗೆ ಕಾಲುತೊಲೆ ಚೂರ್ಣ ಬಿಸಿನೀರಿನಲ್ಲಿ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೪೦ ದಿನ ಕೊಡಬೇಕು. ಇದಕ್ಕೆ ಪಥ್ಯ ಕಿಚಡಿ (ಹುಗ್ಗಿ) ಅನ್ನ ಇದರಿಂದ ಸಮಸ್ತ ಕುಷ್ಠಗಳೂ ಗುಣವಾಗುವುದು.

೪. ಗಂಧಕ ರಸಾಯನ:—ಹವಳಸರಿಗಂಧಕ ೧ ಶೇರು ಖಲ್ವದಲ್ಲಿ ಅರೆದು ಒಂದು ದೊಡ್ಡಕಬ್ಬಿಣದ ಸೌಟಿನಲ್ಲಿ ಹಾಕಿ ಬೆಂಕಿ ಕೆಂಡದಮೇಲಿಟ್ಟು ಗಂಧಕ ಕರುಗುತ್ತಲೇ ಹಸುವಿನಹಾಲಿನಲ್ಲಿ ಹಾಕಿಬಿಡುವುದು. ಈರೀತಿ ಮೂರಾವರ್ತಿ ಹಸುವಿನಹಾಲಿನಲ್ಲಿ ಕರಗಿಸಿಹಾಕುವುದು. ಹಸುವಿನಹಾಲು ಆಗಾಗ್ಯೆ ಹಳೇಹಾಲು ತೆಗೆದುಬಿಟ್ಟು ಹೊಸ ಹಾಲು ಹಾಕುತ್ತಾ ಬರುವುದು. ಈರೀತಿಯಾಗಿಯೇ ಚಿಟ್ಟೆರಳೆಣ್ಣೆಯಲ್ಲಿ ೧ ಸಲ ಶುದ್ಧಿ, ಅನಂತರ ಕಬ್ಬಿನ ರಸ, ಅಮೃತಬಳ್ಳಿ ರಸ, ಯಷ್ಟಿಮಧುಕದ ಕಷಾಯ, ಚಂಗಲಕೋಷ್ಠ ಕಷಾಯ, ಗರುಗದಸೊಪ್ಪಿನ ರಸ, ಆಳಲೇಕಾಯಿ ಕಷಾಯ, ನೆಗ್ಗಿಲುಮುಳ್ಳಿನ ಕಷಾಯ, ಜೇನುತುಪ್ಪ, ಲೋಳೀಸರದ ರಸ, ನಿಂಬೇಹಣ್ಣಿನ ರಸ ಇವು ಪ್ರತಿಯೊಂದು ರಸ ಮತ್ತು ಕಷಾಯ ಒಂದೊಂದರಲ್ಲೂ ಏಳಾವರ್ತಿ ಶುದ್ಧಿಮಾಡಿಕೊಂಡು ಅನಂತರ ಬಿಸಲಿನಲ್ಲಿ ಒಣಗಿಸಿ ಖಲ್ವದಲ್ಲಿ ಅರೆದು ಇಟ್ಟುಕೊಳ್ಳುವುದು. ಹಿಪ್ಪಲಿ ೨ ತೊಲೆ, ಮೋಡಿ ೨ ತೊಲೆ, ಲವಂಗಪತ್ರೆ ೨ ತೊಲೆ, ನಾಗಕೇಸರಿ ೨ ತೊಲೆ, ಆಳಲೇಕಾಯಿಸಿಪ್ಪೆ ೨ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೨ ತೊಲೆ, ತಾವರೆಗಡ್ಡೆ ೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಮೇಲ್ಕಂಡ ಶುದ್ಧಿಯಾದ ಗಂಧಕದಲ್ಲಿ ಕಲಸಿ ಇಟ್ಟುಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ತಾಟೀಬೆಲ್ಲ ೩ ಶೇರುಹಾಕಿ ನೀರುಹಾಕಿ ಒಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದ ಕೂಡಲೇ ಇಳಿಸಿ ಮೇಲ್ಕಂಡ ಚೂರ್ಣವನ್ನು ಹಾಕಿ ಜೇನುತುಪ್ಪ ॥ ಶೇರು, ಹಸುವಿನತುಪ್ಪ ೧ ಶೇರು ಹಾಕಿ ರಸಾಯನ ಮಾಡಿಕೊಳ್ಳುವುದು. ಹೊತ್ತಿಗೆ ೧ ಆಣೆ ತೂಕ ತೆಗೆದುಕೊಳ್ಳುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೨೦-೩೦-೪೦ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ ಹಸುವಿನಹಾಲು, ಹಸುವಿನತುಪ್ಪ, ಸಕ್ಕರೆ, ಗೋಧುವೆ ಪದಾರ್ಥಗಳು ಉಪಯೋಗಿಸಬೇಕು. ತೊಗರೀಬೇಳೆ ಸಿಹಿಸಾರು ಅನ್ನ. ತುಪ್ಪ ಜಾಸ್ತಿಯಾಗಿ ತಿನ್ನಬೇಕು. ಇದರಿಂದ ೨೦ ವಿಧ ಪ್ರಮೇಹ, ೧೬ ವಿಧ ಮೂತ್ರಕೃಚ್ಛ್ರ, ೮೦ ವಿಧ ವಾಯು, ೧೮ ವಿಧ ಕುಷ್ಠ, ಗಂಡಮಾಲೆ, ಸರಮಾಲೆ, ಭಗಂದರ, ಲಿಂಗವ್ರಣ, ಯೋನಿವ್ರಣ, ಯೋನಿಯಲ್ಲಿ ರಕ್ತ ಸುರಿಯುವುದು ಗುಣವಾಗುವುವು.

೫. ಕೊಂಕಣಾನವರ ಗಂಧಕತೈಲ:—ಶುದ್ಧಿಮಾಡಿದ ಹವಳಸರಿಗಂಧಕ ೧೫ ತೊಲೆ, ಶುದ್ಧಿಮಾಡಿದ ನವಾಸಾಗರ ಕಾಲುತೊಲೆ, ಶುದ್ಧಿಮಾಡಿದ ಸಪ್ಪೀರ

ಕಾಲುತೊಲೆ, ಪಟ್ಲುಪ್ಪು ೧|| ತೊಲೆ, ಶುದ್ಧಿಮಾಡಿದ ತಾಳಕ ೬ ಆಣೆ ತೂಕ, ಶುದ್ಧಿಮಾಡಿದ ಇಂಗಲೀಕ ೬ ಆಣೆ ತೂಕ ಇವುಗಳನ್ನು ಖಲ್ವದಲ್ಲಿ ಅರೆದು ಹಸುವಿನತುಪ್ಪ ೫ ಶೇರು ಹಾಕಿ ಅರೆದು ಹೊಸಮಡಿಕೆಯಲ್ಲಿ ಹಾಕಿ ಬೆಂಕಿಯಮೇಲಿಟ್ಟು ಹದವಾಗಿ ಕಾಯಿಸಿ ಶೀಸೆಯಲ್ಲಿ ಇಟ್ಟುಕೊಳ್ಳುವುದು. ಹೊತ್ತಿಗೆ ೫ ತೊಟ್ಟು ತೈಲವನ್ನು ರಾಯಿಪುಡಿ ಸಕ್ಕರೆಯಲ್ಲಿ ಅಥವಾ ಬೂರಾಸಕ್ಕರೆಯಲ್ಲಿ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೨೦ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ೧೮ ತರಹ ಕುಷ್ಠ, ಮೇಹಚಟ್ಟಿ, ಗಂಡಮಾಲೆ, ಪವಿತ್ರ, ತಂತಿಮೇಹ, ಕೀಲುವಾಯು, ಭಗಂದರ, ಲಿಂಗವ್ರಣ, ಯೋನಿವ್ರಣ, ೨೦ ವಿಧ ಪ್ರಮೇಹ, ೧೬ ವಿಧ ಮೂತ್ರಕೃಚ್ಛ್ರ ಗುಣವಾಗುವುದು.

೬. ಚಿಟ್ಟೆರಳೆಣ್ಣೆ ೧೩ ಶೇರು, ಬೇವಿನ ಬೇರಿನ ರಸ ೧ ಪಾವು, ಅಮೃತಬಳ್ಳಿ ರಸ ೧ ಪಾವು, ವಂದೆಲಗದಸೊಪ್ಪಿನ ರಸ ೧ ಪಾವು, ಹೊಂಗೇಬೇರಿನ ರಸ ೧ ಪಾವು, ಕೊವರಸಿಬೇರಿನ ರಸ ೧ ಪಾವು, ಹಾವುಮೆಕ್ಕೇಬೇರಿನ ರಸ ೧ ಪಾವು, ಕಗ್ಗಲಿಚಕ್ಕೆ ರಸ ೧ ಪಾವು, ಕಕ್ಕೇಚಕ್ಕೆ ರಸ ೧ ಪಾವು, ಗರುಗದ ಸೊಪ್ಪಿನ ರಸ ೧ ಪಾವು, ಸೊಗದೇಬೇರಿನ ರಸ ೧ ಪಾವು, ಅಂಕೋಲೆಬೇರಿನ ರಸ ೧ ಪಾವು, ಚಿತ್ರಮೂಲದಬೇರಿನ ರಸ ೧ ಪಾವು, ತಗಚೇಸಮೂಲದ ರಸ ೧ ಪಾವು, ಲೋಳೇಸರದಬೇರಿನ ರಸ ೧ ಪಾವು, ಗಿರಿಕರ್ನಿಕೆಬೇರಿನ ರಸ ೧ ಪಾವು, ಕಹಿಸೋರೆಸೊಪ್ಪಿನ ರಸ ೧ ಪಾವು, ಕಹಿತೊಂಡೇಬೇರಿನ ರಸ ೧ ಪಾವು, ತೊಂಡೇಬೇರಿನ ರಸ ೧ ಪಾವು, ಇದಕ್ಕೆ ಕಲ್ಕದ್ರವ್ಯ:—ತುರುಕಬೇವಿನ ಬೀಜ ೬ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೩ ತೊಲೆ, ಶುಂಠಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಅತಿಬಜೆ ೧ ತೊಲೆ, ಮರದರಿಸಿನ ೬ ತೊಲೆ, ಅರಸಿನ ೧ ತೊಲೆ, ಕಸ್ತೂರಿ ಅರಿಸಿನ ೩ ತೊಲೆ, ಕಟುಕರೋಹಿಣಿ ೩ ತೊಲೆ, ಕೋಷ್ಠ ೩ ತೊಲೆ, ಲಾವಂಚ ೩ ತೊಲೆ, ಬಜೆ ೧ ತೊಲೆ, ಶ್ರೀಗಂಧದಚಕ್ಕೆ ೩ ತೊಲೆ, ಬಾವಂಚಿಬೀಜ ೬ ತೊಲೆ, ಪರ್ಪಾಟಕ ೨ ತೊಲೆ, ವಾಯುವಿಳಂಗ ೩ ತೊಲೆ, ತುಂಗೇಗಡ್ಡೆ ೨ ತೊಲೆ, ತುಪ್ಪದದೇವದಾರು ೨ ತೊಲೆ, ಅಗರುಚಕ್ಕೆ ೨ ತೊಲೆ, ಮಂಜಿಷ್ಠ ೨ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಬಿಳೀಧೂಪ ೧೨ ತೊಲೆ ಖಲ್ವದಲ್ಲಿ ಅರೆದು ಇಟ್ಟುಕೊಳ್ಳುವುದು. ಇವೆಲ್ಲವನ್ನೂ ಸೇರಿಸಿ ಎಣ್ಣೆಯನ್ನು ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ಕೊಡುವುದು ಈರೀತಿ ೭ ದಿನಗಳು ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಕುಷ್ಠ, ಪ್ರಮೇಹ, ಪರಂಗಿಚಟ್ಟಿಗಳು, ಚರ್ಮಗತವಾದ ಎಲ್ಲಾ ರೋಗಗಳು ನಿವಾರಣೆ ಆಗುವುವು.

೭. ಚಿಟ್ಟರಳೆಣ್ಣೆ ೪ ಶೇರು, ಇಪ್ಪೇಮರದಚಕ್ಕೆ ರಸ ೧ ಶೇರು, ಕಕ್ಕೇ ಮರದಚಕ್ಕೆ ರಸ ॥ ಶೇರು, ಗರುಗದಸೊಪ್ಪಿನ ರಸ ೧ ಶೇರು, ಇದಕ್ಕೆ ಕಲ್ಕ ದ್ರವ್ಯ:—ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀ ಕಾಯಿ ೬ ತೊಲೆ, ಚಿತ್ರಮೂಲ ೨ ತೊಲೆ, ವಾಯುವಿಳಂಗ ೨ ತೊಲೆ, ಅರಿಸಿನ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಶುಂಠಿ ೧ ತೊಲೆ, ಬಾವಂಚಿ ಬೀಜ ೬ ತೊಲೆ, ಆನೆನೆಗ್ಗಿಲು ೨ ತೊಲೆ, ಶುದ್ಧಿಮಾಡಿದ ಲಾಲ್‌ತಿಗುಡು ೫ ತೊಲೆ, ಯಾಲಕ್ಕಿ ೧ ತೊಲೆ, ದಾಲ್‌ಚಿನ್ನಿ ೧ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳು ವುದು. ಶುದ್ಧಿಮಾಡಿದ ಬಿಳೇಧೂಪ ೬ ತೊಲೆ, ಕರ್ಪೂರ ಶಿಲಾಜಿತುಭಸ್ಮ ೧ ತೊಲೆ, ಕುಂಕುಮಕೇಸರಿ ಕಾಲುತೊಲೆ, ಇವೆಲ್ಲವನ್ನೂ ಸೇರಿಸಿ ಪಕ್ವವಾಗಿ ಎಣ್ಣೆ ಕಾಯಿಸಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ೧ ತೊಲೆ ಎಣ್ಣೆಯನ್ನು ಬಿಸಿನೀರಿನಲ್ಲಿ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀ ಬೇಳೆ ಸಿಹಿಸಾರು ಅನ್ನ. ಇದರಿಂದ ಗುಣ:—ಕುಷ್ಠ, ಚರ್ಮಗತವಾದ ರೋಗ ಗಳು ನಿವಾರಣೆ ಆಗುವುದು.

೮. ಕಹಿಪಡವಲ, ತ್ರಿಫಲೆ, ಬೇವಿನಸೊಪ್ಪು, ಅಮೃತಬಳ್ಳಿ, ಎರಡೆಲೆ ಹೊನ್ನೆ, ಅತಿಬಜೆ, ಹೊಂಗೇಬೇರು ಇವುಗಳನ್ನೆಲ್ಲ ಕಷಾಯವ ಮಾಡಕೊಡಿ ಸಲು ಕುಷ್ಠಹರವಹದು. ಇದು ವಜ್ರಯೋಗವೆನ್ನಿಸಿಕೊಂಬುದು.

೯. ಕಹಿಪಡಲವದಬೇರು, ತ್ರಿಫಲೆ, ಹಾವುಮೆಕ್ಕೇಬೇರು ಇವು ಪ್ರತ್ಯೇಕ ೨ ವರಹಾತೂಕ. ಕಹಿದರಸಿನ, ಕಟುಕರೋಹಿಣಿ ಇವು ೨ ಪ್ರತ್ಯೇಕ ೧ ವರಹಾ ತೂಕ, ಶುಂಠಿ ೧ ಹೊನ್ನುತೂಕ ಈ ೮ ಔಷಧಗಳಂ ಕೂಡಿಸಿ ೧೨ ವರಹತೂಕ ಇವಿಷ್ಟನ್ನೂ ೧ ಬಳ್ಳ ನೀರಿನಲ್ಲಿ ಕಷಾಯವೆತ್ತಿ ಅಷ್ಟಾವಶೇಷವಾಗಿ ಕಾಯಿಸಿ ರಾತ್ರಿ ಕಾಲದಲ್ಲಿ ಈ ಕಷಾಯವಂ ಕೊಡಿಸಲು ಕುಷ್ಠ, ಶೋಭೆ, ಗ್ರಹಣಿ, ಮೂಲವ್ಯಾಧಿ, ಮೂತ್ರಕೃಚ್ಛ್ರ, ಹಲೀಮಕ, ಉದರಶೂಲೆ, ವಿಷಮಜ್ವರ ಇವುಗಳು ಶಮನವಹವು. ಆರು ರಾತ್ರಿ ಪ್ರಯೋಗಿಸುವುದು. ಈ ಔಷಧಿ ಜೀರ್ಣಿಸಿದಮೇಲೆ ಜಾಂಗಲಮೃಗ, ಜಾಂಗಲಪಕ್ಷಿ, ಹಳೇ ಅಕ್ಕಿ ಓಗರ ಪಥ್ಯ, ತುರಚನಬೇರು ಕಷಾಯವಂ ಕೊಡಿಸುವುದು.

೧೦. ಅರಿಸಿನ, ತ್ರಿಫಲೆ, ಬೇವು, ಕಹಿಪಡವಲ, ದಶಮೂಲ, ಕಟುಕ ರೋಹಿಣಿ, ಬಜೆ, ಉಪ್ಪಿಸಗನಬೇರು, ಯಷ್ಟಿಮಧುಕ ಈ ೧೦ನ್ನು ಪ್ರತ್ಯೇಕ ೨ ವರಹಾ ತೂಕವಂ ೧ ಬಳ್ಳ ನೀರಿನಲ್ಲಿ ಕಷಾಯವೆತ್ತಿ ಅಷ್ಟಾವಶೇಷವಾಗಿ ಕಾಯಿಸಿ ಪ್ರಾತಃಕಾಲದಲ್ಲಿ ಕೊಡಿಸಲು ಶ್ಲೇಷ್ಮಪಿತ್ಥದಿಂದುಂಟಾದ ಕುಷ್ಠವನ್ನು ಪರಿಹರಿಸುವುದು.

೧೧. ಮರದರಿಸಿನ, ಕಗ್ಗಲೀಚಕ್ಕೆ, ಬೇವಿನ ಒಳನಾರು ಈ ಮೂರನ್ನೂ, ಪ್ರತ್ಯೇಕ ೧೦ ವರಹಾತೂಕವನ್ನು ೧ ಬಳ್ಳ ನೀರಿನಲ್ಲಿ ಕಷಾಯವೆತ್ತಿ ಪ್ರಾತಃ ಕಾಲದಲ್ಲಿ ಕೊಡಿಸಲು ಕುಷ್ಠ ಶಮನವಹುದು.

೧೨ ಮರದರಿಸಿನ, ಕಗ್ಗಲಿಚಕ್ಕೆ, ಬೇವಿನ ಒಳನಾರು, ತ್ರಿಫಲೆ, ಕಕ್ಕೆ ತೊಕ್ಕು, ಪರ್ಪಾಟಕ ಈ ೬ ಔಷಧಗಳನ್ನು ೧ ಬಳ್ಳ ನೀರಿನಲ್ಲಿ ಕಷಾಯವ ಹಾಕಿ ಅಷ್ಟಾವಶೇಷವಾಗಿ ಕಾಯಿಸಿ ಪ್ರಾತಃಕಾಲದಲ್ಲಿ ಕುಡಿಯಕೊಡಲು ಕುಷ್ಠ ಶಮನವಹುದು.

೧೩. ತಿಕ್ತಕ ಘೃತ:—ಕಹಿಪಡವಲ, ಬೇವಿನವೊಳನಾರು, ಕಟುಕರೋಹಿಣಿ, ಮರದರಿಸಿನ ಅಗಿಲುಶುಂಠಿ, ಹೆದ್ದರಿಚಿನಬೇರು, ಕಹಿದರಿಶಿನ ಈ ೮ ಪ್ರತ್ಯೇಕ ಒಂದೂವರೆ ವರಹಾತೂಕದ ಮೇರೆ ೧೨ ಪಲವನ್ನೂ ೪ ಕೊಳಗ ನೀರಿನಲ್ಲಿ ಕಷಾಯವೆತ್ತಿ ಅಷ್ಟಾವಶೇಷವಾಗಿ ಕಾಯಿಸಿ ಶೋಧಿಸಿಕೊಂಡು ಅದರಲ್ಲಿ ೧೨ ಪಲ ತುಪ್ಪವ ಹನಿಸಿ ಕಾಯಿಸುವಾಗ ಅದಕ್ಕೆ ಹಾಕುವ ಕಲ್ಕದ್ರವ್ಯ—ಮರದರಿಸಿನ, ಭದ್ರಮುಸ್ತೆ, ನೆಲಬೇವು, ಕೌಡಿಬೇರು, ಹಿಪ್ಪಲಿ, ಶ್ರೀಗಂಧ ಇವುಗಳನ್ನು ಪ್ರತ್ಯೇಕ ೪ ವರಹಾ ತೂಕವಂ ಚೂರ್ಣಿಸಿ ಮೃದ್ವಗ್ನಿಯಿಂದ ಪಾಕ ಮಾಡಿ ಹದದಲ್ಲಿ ಇಳುಹಿಕೊಂಡು ದಿನಂಪ್ರತಿ ಉದಯಕಾಲದಲ್ಲಿ ಸೇವಿಸಲು ಪಿತ್ಥಕುಷ್ಠ, ವಿಸರ್ಪ, ಪೀಳಕ, ತಾಪ, ಬಾಯಾರಿಕೆ, ಭ್ರಮೆ, ಪಾಂಡು, ಶೀಟಿ, ಗಂಡಮಾಲೆ, ದುಷ್ಠವಾದ ನಾಡೀವ್ರಣ, ಉಪಜೇತ್, ಸ್ಫೋಟಕ, ವಿದ್ರಧಿ, ಗುಲ್ಮ, ಶೋಭೆ, ಉನ್ಮಾದ, ಹೃದ್ರೋಗ, ವೈತಿಮಿರ, ಅಂಗಕ್ಷಯ, ಗ್ರಹಣಿ, ಬಿಳೇಕುಷ್ಠ, ಕಾಮಾಲೆ, ಭಗಂದರ, ಅಪಸ್ಮಾರ, ಉದರವ್ಯಾಧಿ, ಪ್ರದರ, ವಿಷ, ಮೂಲವ್ಯಾಧಿ, ರಕ್ತಪಿತ್ಥ ಇವು ಮೊದಲಾದ ಕೆಲವು ವ್ಯಾಧಿಗಳೂ, ಮೂತ್ರಕೃಚ್ಛ್ರ, ಪಿತ್ಥವಿಕಾರ ಇವೆಲ್ಲವೂ ಪರಿಹಾರವಹವು.

೧೪. ಭೂನಿಂಬಾದಿ ಚೂರ್ಣ:—ನೆಲಬೇವು, ಬೇವಿನ ಒಳನಾರು, ತ್ರಿಫಲೆ, ಪದ್ಮಕ, ಅತಿಬಜೆ, ಹಿಪ್ಪಲಿ, ಕುರಟಿಗೆಬೇರು, ಕಹಿಪಡವಲ, ಅರಿಸಿನ, ಮರದರಿಸಿನ, ಅಗಿಲುಶುಂಠಿ, ಹಾವುಮೆಕ್ಕೇಬೇರು, ವಾಯುವಿಳಂಗ, ಬಜೆ, ಇವಿಷ್ಟನ್ನೂ ಕುಟ್ಟಿ ಚೂರ್ಣಿಸಿ ವಸ್ತ್ರಗಳಿತವಮಾಡಿ ಈ ಚೂರ್ಣದ ಸರಿಯಾಗಿ ಒಂದೆಲಗ, ಶುದ್ಧಿಮಾಡಿದ ತಿಗಡೆ ಈ ೨ ಚೂರ್ಣವನ್ನೂ ಸರಿಯಾಗಿ ಬೆರಸಿ ಜೇನುತುಪ್ಪದಿಂದಲಾದರೂ, ಹಸುವಿನತುಪ್ಪದಿಂದಲಾದರೂ ಉದಯಕಾಲದಲ್ಲಿ ಕೊಡಿಸಲು ಕುಷ್ಠ, ಮೇಹ, ಸುಪ್ತವಾತ ಇವಿಷ್ಟೂ ಶಮನವಹವು.

೧೫. ಅಂಕೋಲಾದಿ ಚೂರ್ಣ:—ಅಂಕೋಲೆಬೇರು, ವಾಯುವಿಳಂಗ, ಅಭ್ರಕಭಸ್ಮ, ಕಾಂತಭಸ್ಮ, ಹೇಮಮಾಕ್ಷಿಕಭಸ್ಮ, ಕರ್ಪೂರಶಿಲಾಜಿತುಭಸ್ಮ, ತ್ರಿಕಟುಕ, ತ್ರಿಫಲೆ ಇಷ್ಟನ್ನೂ ಚನ್ನಾಗಿ ಚೂರ್ಣಿಸಿ ಅದಕ್ಕೆ ಸಮನಾಗಿ ನೆಲ

ದಾಳು ಚೂರ್ಣವಂ ಬೆರಸಿ ಜೇನುತುಪ್ಪದಿಂದ ದಿನಂಪ್ರತಿ ಉದಯಕಾಲದಲ್ಲಿ ಸೇವಿಸಲು ಕುಷ್ಠವ್ಯಾಧಿ ಪರಿಹಾರವಹುದು.

೧೬. ನಿರ್ಗುಂಡೀ ಚೂರ್ಣ:—ಲಕ್ಕೀ ಬೇರಂತಂದು ಒಣಗಿಸಿ ಚೂರ್ಣವಂ ಮಾಡಿಸಿ ಎಳ್ಳೆಣ್ಣೆಯಲ್ಲಿ ೧ ತಿಂಗಳಕಾಲ ಸೇವಿಸಲು ಕುಷ್ಠ ಶಮನವಹುದು.

೧೭. ನಿಂಬೇಹಣ್ಣಿನ ರಸದಿಂದ ನೆಲಬಾಗೇಬೇರು, ಚಿತ್ರಮೂಲ, ಕೋಳಿ ಕುಟುಮನಗಡ್ಡೆ ಇಷ್ಟನ್ನೂ ಮರ್ದಿಸಿ ಲೇಪನವಂಗೈಯಲು ತ್ವಗ್ಗತವಾದ ಕುಷ್ಠ ಶಮನವಹುದು.

೧೮. ಮಣಿಸಿಲೆ, ತಾಳಕ, ಅರಿಸಿನ, ಚಂಗಲಕೋಷ್ಠ, ಕೋಳಿಕುಟುಮನ ಗಡ್ಡೆ, ಚಿತ್ರಮೂಲ, ಬಾವಂಚೀಬೀಜ ಇವುಗಳನ್ನೆಲ್ಲ ಗೋಮೂತ್ರದಿಂದ ಅರೆದು ಲೇಪಿಸಲು ಕುಷ್ಠ, ವಿಸ್ಫೋಟಕಗಳು ಶಮನವಹವು.

೧೯. ತಗಚೇಬೀಜ, ವಾಯುವಿಳಂಗ, ಅರಸಿನ, ನೆಲ್ಲೀಚಟ್ಟು, ಚಿತ್ರಮೂಲ, ಅಳಲೇಕಾಯಿಸಿಪ್ಪೆ, ಕಕ್ಕೇತ್ವಕ್ಕು, ಹೊಂಗೇತ್ವಕ್ಕು, ಕೋಳಿಕುಟುಮನಗಡ್ಡೆ, ಚಂಗಲಕೋಷ್ಠ, ಬಜೆ, ಬಾವಂಚೀಬೀಜ ಇವುಗಳನ್ನು ಗೋಮೂತ್ರದಿಂದ ಅರೆದು ಮೂರುದಿನ ಲೇಪಿಸಲು ಕುಷ್ಠ, ಗಜಚರ್ಮ, ಶೀಟಿ, ದದ್ದು, ವಿಸರ್ಪ ಇವೆಲ್ಲವೂ ಪರಿಹಾರವಹವು.

೨೦. ಮುತ್ತುಗದಬೀಜ, ಕಂಗೊಂದಿಬೀಜ, ಹೊಂಗೇಬೀಜ, ವಿಷಮುಷ್ಠಿ ಬೀಜ, ಬಾವಂಚಿಬೀಜ, ಕಹಿಹೀರೇಬೀಜ, ಜಂಗ್ಲಿಬಾದಾಮಿಬೀಜ, ಕಾಕಮಾರಿ ಬೀಜ, ಇಲೀಕಿವಿ ಬೀಜ, ಗಜ್ಜುಗದ ಪೊಪ್ಪು, ಹಾವುಮೆಕ್ಕೇಕಾಯಿ ಬೀಜ, ಉಮ್ಮತ್ತಿಬೀಜ, ಬೇವಿನಬೀಜ, ಬೇವಿನಚಕ್ಕೆ, ಬೇಲದಚಕ್ಕೆ, ಚಿತ್ರಮೂಲದ ಚಕ್ಕೆ, ಎಕ್ಕದಚಕ್ಕೆ, ಗಣಗಲುಚಕ್ಕೆ, ತಗಸೇಬೀಜ ಇವುಗಳು ಸಮಭಾಗ ತಂದು ಒಂದು ಗಡಿಗೆಯಲ್ಲಿ ಹಾಕಿ ಮೇಲೆ ಮುಚ್ಚಳಮುಚ್ಚಿ ಕೆಮ್ಮಣ್ಣುಬಟ್ಟೆ ಸೀಲು ಮಾಡಿ ಗಡಿಗೆ ಕೆಳಗೆ ೫ ರಂಧ್ರಗಳನ್ನು ಹಾಕಿ ಪಾತಾಳಯಂತ್ರದಲ್ಲಿ ತೈಲ ಇಳಿಸಿ ಕೊಳ್ಳುವುದು. ಇದನ್ನು ಮೇಲೆ ಲೇಪಿಸುತ್ತಾ ಬಂದರೆ ದದ್ದುಗಳು, ತಿಮಿರ ವಾಯು, ಗಂಡಮಾಲೆ, ಸರಗಂಡಮಾಲೆ, ಕಜ್ಜಿ, ಪೀನಸ, ಕುಷ್ಠ, ಹಳೇವ್ರಣ ಗಳು, ವಾಯು, ತಲೆಹುಣ್ಣು, ವಿಷಪುರಿ, ಕರ್ಪಾಣಿ ಇವುಗಳು ಗುಣವಾಗುವುದು. ಪಥ್ಯ ಚಲವಿಪದಾರ್ಥ ವರ್ಜ್ಯ.

೨೧. ಕುಷ್ಠ ಗಜಾಂಕುಶ ತೈಲ:—ಅರಿಸಿನ ೧ ತೊಲೆ, ಕಸ್ತೂರಿ ಅರಸಿನ ೧ ತೊಲೆ, ಲಾವಂಚ ೧ ತೊಲೆ, ಚಿತ್ರಮೂಲ ೧ ತೊಲೆ, ಬಾವಂಚಿಬೀಜ ೪ ತೊಲೆ, ತಗಚೇಬೀಜ ೧ ತೊಲೆ, ಮಂಜಿಷ್ಠ ೨ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ಬಜೆ ೨ ತೊಲೆ, ಕಕ್ಕೇಚಕ್ಕೆ ೪ ತೊಲೆ, ಹೊಂಗೇ ಚಕ್ಕೆ ೪ ತೊಲೆ, ಬೇವಿನಚಕ್ಕೆ ೪ ತೊಲೆ, ವಿಷಮುಷ್ಠಿಬೀಜ ೪ ತೊಲೆ, ಕಹಿ ಪಡವಲ ೪ ತೊಲೆ, ಕಹಿಹೀರೇಬೀಜ ೪ ತೊಲೆ, ಚಂಗಲಕೋಷ್ಠ ೨ ತೊಲೆ,

ವಾಯುವಿಳಂಗ ೨ ತೊಲೆ, ಹುಚ್ಚುಬೇವಿನಬೀಜ ೨ ತೊಲೆ, ತುಪ್ಪದದೇವದಾರು ೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡು ಒಂದು ಬಾಂಡ್ಲಿಯಲ್ಲಿ ಹಾಕಿ ಬೇವಿನ ಎಣ್ಣೆ ೨ ಶೇರು ಹಾಕಿ ಪಕ್ವವಾಗಿ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಇದಕ್ಕೆ ತಾಳಕ ॥ ತೊಲೆ, ಮಣಿಸಿಲೆ ೧ ತೊಲೆ, ಹವಳಸರಿಗಂಧಕ ೨ ತೊಲೆ ಇವು ಮೂರೂ ಖಲ್ವದಲ್ಲಿ ಅರೆದು ಎಣ್ಣೆಯಲ್ಲಿ ಕಲಸಿ ಸ್ವಲ್ಪ ಬಿಸಿಮಾಡಿ ಇಟ್ಟುಕೊಳ್ಳುವುದು. ಈ ತೈಲವನ್ನು ಶರೀರದ ಮೇಲೆ ಲೇಪಿಸಿ ೨ ಘಂಟೆ ತರುವಾಯ ಬಿಸಿ ನೀರು ಸ್ನಾನಮಾಡುವುದು. ಇದರಿಂದ ಕುಷ್ಠ, ಗಜಚರ್ಮ, ಶೀಟೆ, ದದ್ರು, ವಿಸರ್ಪ ಇವು ಗುಣವಾಗುವುವು.

## ಶ್ವಿತ್ರಕುಷ್ಠ (ಬಿಳೀ ತೊನ್ನು) ಲಕ್ಷಣಗಳು.

ಕುಷ್ಠ ಬಲಿತು ಬಹಳ ದಿನ ಮೀರಿದರೆ ಅದರಿಂದ ಶ್ವಿತ್ರಕಿಲಾಸವೆಂತಲೂ, ಅರುಣವೆಂತಲೂ ಎರಡು ತೆರನಾಗುವುದು, ಇದು ಎಲ್ಲಾ ಕಡೆಯಲ್ಲಿಯೂ ರಸಿಕೆ ಸುರಿಯುತ್ತಿಹುದು, ರಕ್ತ, ಮಾಂಸ, ಮೇಧಸ್ಸುಗಳೆಂಬ ಮೂರು ಧಾತುಗಳಿಂದ ಹುಟ್ಟಿ ಅವುಗಳನ್ನೇ ಆಶ್ರೈಸಿಹುದು.

ವಾತದಿಂದುಂಟಾದ ಶ್ವಿತ್ರ, ರೂಕ್ಷದೊಡನೆ ಕೂಡಿ ಕೆಂಪಾಗಿಹುದು, ಪಿತ್ಥದಿಂದುಂಟಾದ ಶ್ವಿತ್ರ ಕೆಂದಾವರೆಯು ತಳದ ಯಸಳಿನ ಹಾಗೆ ಕೆಂಪಾಗಿ ತಾಪವುಂಟಾಗಿಹುದು. ಈ ಕುಷ್ಠ ಉಂಟಾದ ಸ್ಥಳದಲ್ಲಿ ರೋಮಂಗಳುದುರಿಹೋಗುವುವು. ಶ್ಲೇಷ್ಮದಿಂದುಂಟಾದ ಶ್ವಿತ್ರದಲ್ಲಿ ಶ್ವೇತವರ್ನವುಂಟಾಗಿ ವೈಭಾರವಾಗಿ ತಿಮಿರ ವುಂಟಾಗಿಹುದು. ಈ ಮೂರು ತೆರದ ಶ್ವಿತ್ರಗಳೂ ಕ್ರಮದಿಂದ ರಕ್ತಧಾತುವನ್ನೂ ಮಾಂಸಧಾತುವನ್ನೂ ಆಶ್ರೈಸಿಹವು. ವಾತಪಿತ್ಥ ದ್ವಂದ್ವದಿಂದ ಉಂಟಾದ ಶ್ವಿತ್ರಕ್ಕೆ ಎರಡು ಲಕ್ಷಣವೂ ಕೂಡಿಹುದು. ಒಂದಕ್ಕೊಂದು ಉತ್ತರೋತ್ತರ ಕಷ್ಟಸಾಧ್ಯವು.

ಅಸಾಧ್ಯ ಕುಷ್ಠ ಲಕ್ಷಣ:—ಕುಷ್ಠದಮೇಲಿದ್ದ ರೋಮಂಗಳು ಕಪ್ಪಾಗಿ ಬಿಳುಪಿಲ್ಲದೆ ಬಹಳವಾಗಿಯಿದ್ದರೂ, ರೋಮಂಗಳು ಒಂದಕ್ಕೊಂದು ಕೂಡದಿದ್ದರೂ, ಶ್ವಿತ್ರ ಹೊಸದಾಗಿದ್ದರೂ, ಅಗ್ನಿಯಿಂದ ಬೇಯದೆಯಿದ್ದರೂ ಇವು ಸಾಧ್ಯವಹವು. ಹಿಂದೆ ಹೇಳಿದ್ದಕ್ಕೆ ವಿಪರೀತಗಳಾಗಿರುವ ಶ್ವಿತ್ರಂಗಳು ಅಸಾಧ್ಯವು. ಗುಹ್ಯದಲ್ಲಿಯೂ, ಅಂಗೈಯಲ್ಲಿಯೂ, ತುಟಿಯಲ್ಲಿಯೂ ಹೊಸದಾಗಿ ಇದ್ದರೆ ಸಾಧ್ಯವಹುದು.

ಕುಷ್ಠಕ್ಕೆ ಕಾರಣ:—ಬ್ರಾಹ್ಮಣದ್ರೋಹದಿಂದಲೂ, ಪರದ್ರವ್ಯಾಪಹಾರದಿಂದಲೂ, ಪರಸ್ತ್ರೀಸಂಗಮದಿಂದಲೂ ಉಂಟಾದ ಪಾಪವೇ ಕುಷ್ಠರೂಪವಾಗಿ ಪರಿಣಮಿಸುವುದು.

ಕುಷ್ಠ ವಿಮೋಚನ:—ಯಮ, ನಿಯಮ, ದಮೆಗಳು ಆಚರಿಸುವದರಿಂದಲೂ, ದಾನಧರ್ಮಂಗಳು ಮಾಡುವುದರಿಂದಲೂ, ದ್ವಿಜರುಗಳು, ದೇವತೆಗಳು, ಗುರುಗಳು ಇವರುಗಳಂ ಪೂಜಿಸುವುದರಿಂದಲೂ, ಸಕಲ ಪ್ರಾಣಿಗಳಲ್ಲಿಯೂ ದಯಾಳುವಾಗಿರುವುದರಿಂದಲೂ, ಪ್ರತಿದಿನದಲ್ಲಿಯೂ ಯಜ್ಞೇಶ್ವರನಂ ಪೂಜಿಸುವುದರಿಂದಲೂ, ಸೂರ್ಯಪ್ರಾರ್ಥನಾ, ಪೂಜಾ, ನಮಸ್ಕಾರಾದಿಗಳಂ ಮಾಡುವುದರಿಂದಲೂ ಕುಷ್ಠವ್ಯಾಧಿ ಶಮನವಹುದು.

ಮೊದಲು ಹೇಳಿದ ಕುಷ್ಠ ಚಿಕಿತ್ಸೆಯಂ ಈ ಶ್ವಿತ್ರವ್ಯಾಧಿಯಲ್ಲಿ ಪ್ರಯೋಗಿಸುವುದು.

ಹಸುವಿನ ಮೂತ್ರದಲ್ಲಿ ಶುಂಠಿ, ಮೆಣಸು, ಹಿಪ್ಪಲಿಗಳಂ ಚೂರ್ಣಿಸಿ ಹಾಕಿ ಹಸುವಿನ ತುಪ್ಪವನ್ನೂ ಸ್ವಲ್ಪ ಜೇನುತುಪ್ಪವನ್ನೂ ಬೆರಸಿ ಪಾಕವಮಾಡಿ ಸೇವಿಸಲು ಕುಷ್ಠದ ಬಿಳುಪು ಪರಿಹರಿಸಿ ಕೃಷ್ಣವಾಗಿರುವುದು.

ಗರಗದಸೊಪ್ಪು ತಂದು ಶೋಧಿಸಿ ಕಬ್ಬಿಣದ ಪಾತ್ರೆಯಲ್ಲಿ ಎಣ್ಣೆಯಂ ಬಿಟ್ಟು ಹುರಿದು ಪ್ರತಿದಿನ ಸೇವಿಸಲು ಕುಷ್ಠ, ಶ್ವಿತ್ರ ಇವು ಶಮನವಹವು.

ಗಂಧಕ, ಇಲ್ಲಣ, ಅರಿಸಿನ, ಸೈಂಧವಲಣ, ಕಹಿಹೀರೇಬೀಜ ಇಷ್ಟನ್ನೂ ಸಮಾಂಶವಾಗಿ ಚೂರ್ಣಿಸಿ ಬೆಣ್ಣೆಯಲ್ಲಿ ಕಲೆಸಿ ಬಿಳೀ ಕುಷ್ಠಕ್ಕೆ ಲೇಪಿಸಲು ಬಿಳುಪು ಶಮನವಹುದು.

ಗೇರುಹರಳು, ನೆಲಗುಳ್ಳದ ಬೇರು, ಮುಂಡಗಳ್ಳಿಯ ಬೇರು, ಯಕ್ಕದ ಬೇರು, ಗುರುಗಂಜಿಯ ಬೀಜ, ಶುಂಠಿ, ಮೆಣಸು, ಹಿಪ್ಪಲಿ, ಶಂಖಭಸ್ಮ, ಮೈಲುತುತ್ಥ, ಪಂಚಲವಣ, ಸುಣ್ಣ, ಸದ್ಯಕ್ಷಾರ, ಯವಕ್ಷಾರ, ಕೋಳಿಕುಟು ಮನಗಡ್ಡೆ ಇವಿಷ್ಟನ್ನೂ ಎಕ್ಕದಹಾಲು, ಮುಂಡಗಳ್ಳಿಯಹಾಲುಗಳಿಂದ ಮರ್ದನೆ ಮಾಡಿ ಆ ಹಾಲಿನಲ್ಲಿಯೇ ಕದಡಿ ಕಬ್ಬಿಣದ ಪಾತ್ರೆಯಲ್ಲಿ ಕಾಯಿಸಿ ಲೇಪಮಾಡಿಸಲು ಕುಷ್ಠ, ಕಿಲಾಸ, ಬಹುಕಾಲದ ಕುಷ್ಠ, ಗಜಚರ್ಮ ಇವು ಮುಂತಾದ ಸಕಲ ವ್ರಣಗಳೂ ಶಮನವಹವು.

# ನಲವತ್ತೊಂದನೆಯ ಅಧ್ಯಾಯ.

## ಪಿತ್ಥರೋಗ—ಔಷಧಗಳು.

### ಪಿತ್ಥರೋಗ ಲಕ್ಷಣ.

ಪ್ರಕೋಪವನ್ನು ಹೊಂದಿದ ಪಿತ್ಥದಿಂದ ಧೂಮೋದ್ಗಾರವೇ ಮೊದಲಾದ ನಲವತ್ತು ರೋಗಗಳು ಹುಟ್ಟುವುವು.

ಹೊಗೆಯಿಂದೊಡಗೊಂಡ ತೇಗುಗಳು ಬಂದರೆ ಧೂಮೋದ್ಗಾರವೆಂತಲೂ, ಶರೀರಕ್ಕೆ ತಾಪವುಂಟಾದರೆ ವಿದಾಹವೆಂತಲೂ, ಶರೀರವೆಲ್ಲಾ ಬಿಸಿಯಾಗಿದ್ದರೆ ಉಷ್ಣಾಂಗಪಿತ್ಥವೆಂತಲೂ, ಬುದ್ಧಿ ಭ್ರಮೆ ಯುಂಟಾದರೆ ಮತಿಭ್ರಮಪಿತ್ಥವೆಂತಲೂ, ಶರೀರದಲ್ಲಿ ಕಾಂತಿ ಕಡಿಮೆಯಾದರೆ ಕಾಂತಿಹೀನಪಿತ್ಥವೆಂತಲೂ, ಕಂಠವು ಒಣಗಿಹೋಗುತ್ತಿದ್ದರೆ ಅದು ಕಂಠಶೋಷವೆಂತಲೂ, ಮುಖವು ಶೋಷಿಸಿದರೆ ಮುಖಶೋಷವೆಂತಲೂ, ಶುಕ್ರಧಾತುವು ಅಲ್ಪವಾದರೆ ಅಲ್ಪಶುಕ್ರಪಿತ್ಥವೆಂತಲೂ, ಬಾಯಿ ಕಹಿಯಾಗಿದ್ದರೆ ತಿಕ್ತಾಸ್ಯವೆಂತಲೂ, ಬಾಯಿ ಹುಳಿಯಾಗಿದ್ದರೆ ಆಮ್ಲವಕ್ತ್ರವೆಂತಲೂ, ಬೆವರು ಹೆಚ್ಚಾಗಿ ಸ್ರವಿಸುತ್ತಿದ್ದರೆ ಸ್ವೇದಸ್ರಾವವೆಂತಲೂ, ಶರೀರವು ಒಡೆದರೆ ಅಂಗದರಣವೆಂತಲೂ, ಪಾಚಕಪಿತ್ಥದಿಂದ ಶರೀರವು ಪಾಕವಾದರೆ ಅಂಗಪಾಕವೆಂತಲೂ, ಶರೀರವು ಒಣಗಿಹೋದರೆ ಕ್ಷಮಪಿತ್ಥವೆಂತಲೂ, ಶರೀರವು ಹಳದಿಯಾಗಿದ್ದರೆ ಹರಿತಪಿತ್ಥವೆಂತಲೂ, ಭೋಜನದಲ್ಲಿ ಪ್ರೀತಿಯಿಲ್ಲದಿದ್ದರೆ ಅತೃಪ್ತಿಪಿತ್ಥವೆಂತಲೂ, ಶರೀರವು ಪೀತವರ್ಣವುಂಟಾಗಿದ್ದರೆ ಪೀತಕಾಯಪಿತ್ಥವೆಂತಲೂ, ಶರೀರದಲ್ಲಿರುವ ರಕ್ತವು ಊರ್ಧ್ವಾಧೋಮುಖಗಳದ್ವಾರ ಅಧಿಕವಾಗಿ ಸ್ರವಿಸುತ್ತಿದ್ದರೆ ರಕ್ತಸ್ರಾವಪಿತ್ಥವೆಂತಲೂ, ಮುಖವು ಕಬ್ಬಿಣದವಾಸನೆಯಿಂದ ಕೂಡಿದ್ದರೆ ಲೋಹಗಂಧಾಸ್ಯಪಿತ್ಥವೆಂತಲೂ, ಶರೀರದಲ್ಲಿ ದುರ್ವಾಸನೆಯುಂಟಾದರೆ ದೌರ್ಗಂಧ್ಯಪಿತ್ಥವೆಂತಲೂ, ಮೂತ್ರವು ಹಳದಿಯಾಗಿ ಹೊರಡುತ್ತಿದ್ದರೆ ಪೀತಮೂತ್ರ ಪಿತ್ಥವೆಂತಲೂ, ಪದಾರ್ಥಗಳಲ್ಲಿಚ್ಛೆಯಿಲ್ಲದಿದ್ದರೆ ಅರತಿಪಿತ್ಥವೆಂತಲೂ, ನೇತ್ರಗಳು ಹಳದಿಯಾಗಿದ್ದರೆ ಪೀತನೇತ್ರಪಿತ್ಥವೆಂತಲೂ, ಮಲವು ಹಳದಿಯಾಗಿದ್ದರೆ ಪೀತವಿಟ್ಕಪಿತ್ಥವೆಂತಲೂ, ನೋಡುತ್ತಿರುವ ಪದಾರ್ಥಗಳು ಹಳದಿಯಾಗಿ ಕಾಣಿಸಿದರೆ ಅದು ಪೀತಾವಲೋಕಪಿತ್ಥವೆಂತಲೂ, ದಂತಗಳು ಹಳದಿಯಾಗಿದ್ದರೆ ಪೀತದಂತವೆಂತಲೂ, ತಣ್ಣಗಿರುವ ಪದಾರ್ಥಗಳಲ್ಲಿಚ್ಛೆಯುಂಟಾದರೆ ಶೀತೇಚ್ಛೆಯೆಂಬದಾಗಿಯೂ, ಉಗುರುಗಳು ಹಳದಿಯಾಗಿದ್ದರೆ ಪೀತನಖಪಿತ್ಥವೆಂತಲೂ, ಉಷ್ಣಪದಾರ್ಥಗಳಲ್ಲಿಚ್ಛೆಯಿಲ್ಲದಿದ್ದರೆ ತೇಜೋದ್ವೇಷವೆಂತಲೂ, ನಿದ್ರೆಯು ಕಡಿಮೆಯಾಗಿದ್ದರೆ ಅಲ್ಪನಿದ್ರೆಯೆಂತಲೂ, ಕೋಪವು ಅಧಿಕವಾದರೆ ಕೋಪಪಿತ್ಥವೆಂತಲೂ, ಅವಯವಗಳು ಕೃಶಿಸಿದರೆ ಗಾತ್ರಸಾದವೆಂತಲೂ, ಮಲವು ವಿಶೇಷವಾಗಿ ಹೋಗುತ್ತಿದ್ದರೆ ಭಿನ್ನವಿಟ್ಕತವೆಂತಲೂ, ದೃಷ್ಟಿನಶಿಸಿದರೆ ಅಂಧತವೆಂತಲೂ, ನಿಟ್ಟುಸುರು ಬೆಚ್ಚಗಿದ್ದರೆ ಉಷ್ಣೋಚ್ಛ್ವಾಸವೆಂತಲೂ, ಮೂತ್ರವು ಉಷ್ಣವಾಗಿದ್ದರೆ ಉಷ್ಣಮೂತ್ರಪಿತ್ಥವೆಂತಲೂ, ಮಲವು ಉಷ್ಣವಾಗಿದ್ದರೆ ಉಷ್ಣಮಲವೆಂತಲೂ, ಕಣ್ಣುಗಳಿಗೆ ಕತ್ತಲೆ ಕವಿದರೆ ತಮೋದರ್ಶನವೆಂತಲೂ, ಶರೀರದಲ್ಲಿ ಹಳದಿಯ ಮಚ್ಚೆಗಳುಂಟಾಗಿದ್ದರೆ ಪೀತಮಂಡಲಪಿತ್ಥವೆಂತಲೂ, ಪಿತ್ಥವು ಊರ್ಧ್ವಮುಖವಾಗಿಯಾಗಲಿ ಅಧೋಮುಖವಾಗಿಯಾಗಲಿ ಪ್ರಕೋಪಹೊಂದಿದರೆ ನಿಸ್ಸರ

ತ್ಪಿತ್ಥವೆಂತಲೂ ಹೇಳಲ್ಪಡುವುದು. ಇವುಗಳೆಲ್ಲಾ ಪಿತ್ಥದಿಂದ ಹುಟ್ಟಿದ ರೋಗಗಳು.

## ಪಿತ್ಥಕ್ಕೆ ಚಿಕಿತ್ಸೆಗಳು.

೧. ಧಾತ್ರ್ಯಾದಿ ರಸಾಯನ:—ನೆಲ್ಲೀಕಾಯಿ ರಸ ೧|| ಶೇರು, ರಾಯಪುಡಿ ಸಕ್ಕರೆ ೬ ಶೇರು ಇವೆರಡು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಈ ಕೆಳಗಿರುವ ದಿನಸುಗಳ ಚೂರ್ಣವನ್ನು ಹಾಕುವುದು. ಯಾಲಕ್ಕಿ ೧ ತೊಲೆ, ಬಿಳೀಜೀರಿಗೆ ೧ ತೊಲೆ, ಗುಲಾಬಿ ಹೂವು ೨ ತೊಲೆ, ದ್ರಾಕ್ಷಿ ೪ ತೊಲೆ, ಗಂಟುಭಾರಂಗಿ ೨ ತೊಲೆ, ಶುಂಠಿ ೨ ತೊಲೆ, ಜಟಾಮಾಂಸಿ ೧ ತೊಲೆ, ಖರ್ಜೂರ ೨ ತೊಲೆ, ನೆಲತಂಗಡಿ ೨ ತೊಲೆ, ಕಕ್ಕೆಚಕ್ಕೆ ೨ ತೊಲೆ, ಲವಂಗ ೧ ತೊಲೆ, ತಾಳೀಸಪತ್ರೆ ೪ ತೊಲೆ, ಅತಿಮಧುರ ೧ ತೊಲೆ, ನಾಗಕೇಸರಿ ೧ ತೊಲೆ, ಕರೇಜೀರಿಗೆ ೧ ತೊಲೆ, ಹಿಪ್ಪಲಿ ೨ ತೊಲೆ, ನೆಲತಾಟಿ ಗಡ್ಡೆ ೧ ತೊಲೆ, ತುಂಗೇಗಡ್ಡೆ ೨ ತೊಲೆ, ಅಳಲೇಕಾಯಿಸಿಪ್ಪೆ ೪ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಜೇನುತುಪ್ಪ ||| ಶೇರು ಹಾಕಿ ಪಕ್ವವಾಗಿ ರಸಾಯನವನ್ನುಮಾಡಿ ಇಟ್ಟು ಕೊಳ್ಳುವುದು ಹೊತ್ತಿಗೆ ಕಾಲುತೊಲೆ, || ತೊಲೆ ತೆಗೆದುಕೊಳ್ಳುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೬-೧೪ ದಿನ ಕೊಡಬೇಕು. ಇಚ್ಛಾಪಥ್ಯ. ಚಲದಿಪದಾರ್ಥ ವರ್ಜ್ಯ. ಇದರಿಂದ ಸಕಲವಾದ ಪಿತ್ಥಗಳು ಗುಣವಾಗುತ್ತೆ.

೨. ಬೇಲದಹಣ್ಣು ಒಳಗಿರುವ ಗುಜ್ಜು ೨ ಶೇರು ನೀರುಹಾಕಿ ರುಬ್ಬಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡದ್ದು ೧|| ಶೇರು, ರಾಯಿಪುಡಿಸಕ್ಕರೆ ೩|| ಶೇರು, ಕುಂಕುಮಕೇಸರಿ || ತೊಲೆ ಖಲ್ವದಲ್ಲಿ ಹಾಕಿ ನೀರುಹಾಕಿ ಅರೆದುಕೊಳ್ಳುವುದು. ಇವು ಮೂರು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಈ ಚೂರ್ಣವನ್ನು ಹಾಕುವುದು:—ಶುಂಠಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೪ ತೊಲೆ, ಬಿಳೀಜೀರಿಗೆ ೩ ತೊಲೆ, ಕರೇಜೀರಿಗೆ ೩ ತೊಲೆ, ಅತಿಮಧುರ ೩ ತೊಲೆ, ಓಮ ೩ ತೊಲೆ, ಅಜಾಮೋದ ೧ ತೊಲೆ, ಬಿಲ್ಪತ್ರೆಬೇರು ೪ ತೊಲೆ, ಲಾವಂಚ ೨ ತೊಲೆ, ಜಟಾಮಾಂಸಿ ೧ ತೊಲೆ, ನಾಗಕೇಸರಿ ೧ ತೊಲೆ, ಕೊತ್ತುಂಬರಿ ಬೀಜ ೧ ತೊಲೆ, ಮೋಡಿ ೧ ತೊಲೆ, ಯಾಲಕ್ಕಿ ೧ ತೊಲೆ, ಲವಂಗಪತ್ರೆ ೧ ತೊಲೆ, ಚಿತ್ರಮೂಲ ೧ ತೊಲೆ, ತುಂಗೇಗಡ್ಡೆ ೩ ತೊಲೆ, ಶ್ರೀಗಂಧದಚಕ್ಕೆ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಜೇನುತುಪ್ಪ || ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯ ಮಾಡಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ, || ತೊಲೆ ತೆಗೆದುಕೊಳ್ಳು

ವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೭-೧೪ ದಿನ ಕೊಡಬೇಕು. ಇಚ್ಛಾಪಥ್ಯ. ಚಲದಿಪದಾರ್ಥ ವರ್ಜ್ಯ. ಇದರಿಂದ ಪೈತ್ಯ, ವಾಂತಿ, ದಾಹ, ಅರುಚಿ, ಪಿತ್ಥ, ಕ್ಷಯ ಇವು ಗುಣವಾಗುವುದು.

೩. ಸೋಪುಬೀಜ ೪ ತೊಲೆ (ಹುರಿಯುವುದು,) ಮೆಣಸು ೧ ತೊಲೆ (ಹುರಿಯುವುದು), ಜೀರಿಗೆ ೧ ತೊಲೆ (ಹುರಿಯುವುದು), ಕೊತ್ತುಂಬರಿಬೀಜ ೮ ತೊಲೆ, ಬಾಲಮೆಣಸು ॥ ತೊಲೆ, ಲವಂಗ ॥ ತೊಲೆ, ಗುಲಾಬಿಹೂವು ೨ ತೊಲೆ, ಸುನಾಮುಖಿ ೧ ತೊಲೆ, ಶುಂಠಿ ೨ ತೊಲೆ (ಹುರಿಯವುದು), ಅತಿಮಧುರ ೧ ತೊಲೆ, ತಾಳೀಸಪತ್ರೆ ೨ ತೊಲೆ, ನೆಲ್ಲೀಕಾಯಿ ೨ ತೊಲೆ, ಸೈಂಧವಲವಣ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು ಒಂದು ಬಾಂಡ್ಲಿಯಲ್ಲಿ ತಾಟಿಬೆಲ್ಲ ೨ ಶೇರು, ಎಳನೀರು ೧ ಶೇರು ಹಾಕಿ ಒಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣವನ್ನು ಹಾಕಿ ಜೇನುತುಪ್ಪ ॥ ಶೇರು, ಹಸುವಿನತುಪ್ಪ ॥ ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯವನ್ನು ಮಾಡಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ, ಅರ್ಧತೊಲೆ, ಕೊಡುವುದು ಹೀಗೆ ಬೆಳಿಗ್ಗೆ ಸಾಯಂಕಾಲ ೭-೧೪ ದಿನ ಕೊಡಬೇಕು. ಇಚ್ಛಾಪಥ್ಯ. ಚಲದಿಪದಾರ್ಥ ವರ್ಜ್ಯ. ಇದರಿಂದ ಪಿತ್ಥ, ವಾಂತಿ, ದಾಹ, ಅರುಚಿ ಗುಣವಾಗುವುದು.

೪. ಹುಳಿದಾಳಿಂಬರೆಹಣ್ಣಿನ ರಸ ೧ ಪಾವು, ಹೇರಳೆಹಣ್ಣಿನ ರಸ ೧ ಪಾವು, ನಿಂಬೇಹಣ್ಣಿನ ರಸ ೧ ಪಾವು, ಮಾದವಾಳದಹಣ್ಣಿನ ರಸ ೧ ಪಾವು, ಕಬ್ಬಿನ ಹಾಲು ೧ ಪಾವು, ಕೆಂಪು ಕಲ್ಲುಸಕ್ಕರೆ ೪ ಶೇರು, ದ್ರಾಕ್ಷಿ ೨೦ ತೊಲೆ, ಖರ್ಜೂರ ೪ ತೊಲೆ ಇವೆರಡು ಒರಳಲ್ಲಿ ಹಾಕಿ ನೀರುಹಾಕಿ ರುಬ್ಬಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು ಇವೆಲ್ಲವನ್ನೂ ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಈ ಕೆಳಗಿನ ಚೂರ್ಣವನ್ನು ಹಾಕುವುದು :—ಯಾಲಕ್ಕಿ ೧ ತೊಲೆ, ಅತಿಮಧುರ ೧ ತೊಲೆ, ಕರೇಜೀರಿಗೆ ೧ ತೊಲೆ, ಬಿಳೀಜೀರಿಗೆ ೨ ತೊಲೆ, ಬಾಲಮೆಣಸು ೧ ತೊಲೆ, ಶುದ್ಧಿಮಾಡಿದ ಪರಂಗಿಚಕ್ಕೆ ೪ ತೊಲೆ, ಅಕ್ಕಲಕರೆ ೧ ತೊಲೆ, ಗುಲಾಬಿಮೊಗ್ಗು ೪ ತೊಲೆ, ತುಂಗೇಗಡ್ಡೆ ೧ ತೊಲೆ, ಮರದರಿಸಿನ ೧ ತೊಲೆ, ತುಪ್ಪದದೇವದಾರು ೧ ತೊಲೆ, ಲಾವಂಚ ೧ ತೊಲೆ, ಅಮೃತಬಳ್ಳಿ ೧ ತೊಲೆ, ಲವಂಗ ೧ ತೊಲೆ, ಲವಂಗಪತ್ರೆ ೧ ತೊಲೆ, ಶುಂಠಿ ೪ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಜೇನುತುಪ್ಪ ೧ ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯಮಾಡಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ, ಅರ್ಧತೊಲೆ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೭-೧೪ ದಿನ ಕೊಡಬೇಕು. ಇಚ್ಛಾ

ಪಥ್ಯ. ಚಲದಿಪದಾರ್ಥ ವರ್ಜ್ಯ. ಇದರಿಂದ ಪಿತ್ಥ, ವಾಂತಿ, ದಾಹ, ಅರುಚಿ ಗುಣವಾಗುವುದು.

೫. ಜೀರಿಗೆ ರಸಾಯನ :— ಬಿಳೇಜೀರಿಗೆ ೨|| ಶೇರು, ನಿಂಬೇಹಣ್ಣಿನ ರಸದಲ್ಲಿ ೧ ದಿನ ನೆನೆಯಿಟ್ಟು ಬಿಸಲಿನಲ್ಲಿ ಒಣಗಿಸಿಕೊಳ್ಳುವುದು. ನೆಲತಾಟಿಗಡ್ಡೆ ೧| ಶೇರು ಹಸುವಿನ ಹಾಲಿನಲ್ಲಿ ಬೇಯಿಸಿ ಒಣಗಿಸಿಕೊಳ್ಳುವುದು. ಸೊಗದೇ ಬೇರು ೧ ಪಾವು, ಅತಿಮಧುರ ೨ ತೊಲೆ, ಯಾಲಕ್ಕಿ ೨ ತೊಲೆ, ಲವಂಗಪತ್ರೆ ೨ ತೊಲೆ, ಶುಂಠಿ ೪ ತೊಲೆ, ನಾಗಕೇಸರಿ ೧ ತೊಲೆ, ತುಂಗೇಗಡ್ಡೆ ೨ ತೊಲೆ, ಕಚೋರ ೧ ತೊಲೆ, ಮೆಣಸು ೧ ತೊಲೆ, ಕೊತ್ತುಂಬರಿಬೀಜ ೧ ತೊಲೆ, ಲಾವಂಚ ೧ ತೊಲೆ, ಮಜ್ಜಿಗೆಗಡ್ಡೆ ೪ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿಕೊಳ್ಳುವುದು ದ್ರಾಕ್ಷಿ ೪ ತೊಲೆ, ಖರ್ಜೂರ ೪ ತೊಲೆ ಇವೆರಡು ಒರಳಲ್ಲಿ ಹಾಕಿ ನೀರು ಹಾಕಿ ರುಬ್ಬಿ ಬಟ್ಟೆಯಲ್ಲಿ ಶೋಧಿಸಿಕೊಂಡು ಬಾಂಡ್ಲಿಯಲ್ಲಿ ಹಾಕಿ ೧೦ ಶೇರು ಸಕ್ಕರೆ ಹಾಕಿ ನೀರುಹಾಕಿ ಒಲೆಯಮೇಲೆ ಇಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣಹಾಕಿ ಜೇನುತುಪ್ಪ ೧| ಶೇರು ಹಾಕಿ ಕಲಸಿ ಪಕ್ವವಾಗಿ ರಸಾಯನಮಾಡಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ, || ತೊಲೆ ತೆಗೆದುಕೊಳ್ಳುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೭-೧೪ ದಿನ ಕೊಡಬೇಕು. ಇಚ್ಛಾಪಥ್ಯ ಚಲದಿಪದಾರ್ಥ ವರ್ಜ್ಯ. ಇದರಿಂದ ಸಕಲ ಪಿತ್ಥ, ಜ್ವರ, ಬಾಯಿ ಅರೋಚಕ, ತೇಗು ಗುಣವಾಗುವುದು.

೬. ಬಿಳೇಜೀರಿಗೆ ೧ ಶೇರು ನಿಂಬೇಹಣ್ಣಿನ ರಸದಲ್ಲಿ ೧ ದಿನ ನೆನೆಯಿಟ್ಟು ಬಿಸಲಿನಲ್ಲಿ ಒಣಗಿಸಿಕೊಳ್ಳುವುದು. ಹಸೀಶುಂಠಿ ರಸದಲ್ಲಿ ೧ ದಿನ ಇಟ್ಟು ಬಿಸಲಿನಲ್ಲಿ ಒಣಗಿಸಿಕೊಳ್ಳುವುದು. ಅಳಲೇಕಾಯಿಸಿಪ್ಪೆ ೧ ತೊಲೆ, ತುಂಗೇಗಡ್ಡೆ ೨ ತೊಲೆ, ಶ್ರೀಗಂಧದಚಕ್ಕೆ ೧ ತೊಲೆ, ಲಾವಂಚ ೧ ತೊಲೆ, ಶುಂಠಿ ೪ ತೊಲೆ, ನೆಲಕುಂಬಳದಗಡ್ಡೆ ೧ ತೊಲೆ, ಸೈಂಧವಲವಣ ೧ ತೊಲೆ, ತಾಳೀಸಪತ್ರೆ ೪ ತೊಲೆ, ನಾಗಕೇಸರಿ ೧ ತೊಲೆ, ಅಮೃತಬಳ್ಳಿ ೪ ತೊಲೆ, ಯಾಲಕ್ಕಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ದ್ರಾಕ್ಷಿ ೧ ಪಾವು, ಖರ್ಜೂರ ೨ ತೊಲೆ, ಇವೆರಡು ಒರಳಲ್ಲಿ ಹಾಕಿ ನೀರುಹಾಕಿ ರುಬ್ಬಿ ಬಟ್ಟೆಯಲ್ಲಿ ಶೋಧಿಸಿ ಒಂದು ಬಾಂಡ್ಲಿಯಲ್ಲಿ ಹಾಕಿ ಕೆಂಪು ಕಲ್ಲುಸಕ್ಕರೆ ೪ ಶೇರು, ಹಸುವಿನ ಹಾಲು ೧ ಶೇರು ಹಾಕಿ ಒಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದ ಕೂಡಲೇ ಮೇಲ್ಕಂಡ ಚೂರ್ಣಹಾಕಿ ಜೇನುತುಪ್ಪ ೧ ಶೇರು, ಹಸುವಿನತುಪ್ಪ || ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯಮಾಡಿ ಇಟ್ಟುಕೊಳ್ಳುವುದು ಹೊತ್ತಿಗೆ ಕಾಲುತೊಲೆ, || ತೊಲೆ ತೆಗೆದುಕೊಳ್ಳುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೭-೧೪ ದಿನ ಕೊಡಬೇಕು ಇಚ್ಛಾಪಥ್ಯ ಚಲದಿಪದಾರ್ಥ ವರ್ಜ್ಯ. ಇದರಿಂದ ಸಕಲ ಪಿತ್ಥ, ಅರೋಚಕ, ತೇಗು ಗುಣವಾಗುವುದು.

೭. ಕಮೂನೆ ಅಕಬರ್:—ಬಿಳೀಜೀರಿಗೆ ೧೨॥ ತೊಲೆ, ವಿನಿಗರದಲ್ಲಿ (ಇದಕ್ಕೆ ಸಿರ್ಕಾ-ಕಾಡಿ ಎಂತಲೂ ಹೆಸರು) ೪ ಸಲ ಭಾವನೆಮಾಡಿ ಬಿಸಲಿನಲ್ಲಿ ಒಣಗಿಸಿಕೊಳ್ಳುವುದು. ಮೆಣಸು ೧|॥ ತೊಲೆ, ಬಿಳೀಮೆಣಸು ೧|॥ ತೊಲೆ, ಹಾವುನಂಜಿನಸೊಪ್ಪು ೩|॥ ತೊಲೆ, ದಾಲ್‌ಚಿನ್ನಿ ೧| ತೊಲೆ, ಹಪ್ಪಳದಕಾರ ೧| ತೊಲೆ, ಶುಂಠಿ ೧೦ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಶುಂಠಿಮುರಬ್ಬ ೧೦ ತೊಲೆ, ಅಳಲೇಕಾಯಿಮುರಬ್ಬ ಬೀಜ ತೆಗೆದದ್ದು ೧೫ ತೊಲೆ, ಗುಲ್‌ಖಂದ ೧ ಶೇರು, ಇವು ಮೂರು ದಿನಸುಗಳನ್ನು ಖಲ್ವದಲ್ಲಿ ಚನ್ನಾಗಿ ಅರೆದು ಮೇಲ್ಕಂಡ ದಿನಸುಗಳ ಚೂರ್ಣಹಾಕಿ ಜೇನುತುಪ್ಪದೊಡನೆ ಕಲಸಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ, ॥ ತೊಲೆ ಕೊಡಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೭-೧೪ ದಿನ ಕೊಡುವುದು. ಇಚ್ಛಾಪಥ್ಯ. ಚಲದಿಪದಾರ್ಥ ವರ್ಜ್ಯ. ಇದರಿಂದ ಪಿತ್ಥ, ಅಜೀರ್ಣ, ಹೊಟ್ಟೆನೋವು, ಹೊಟ್ಟೆ ಉಬ್ಬರ, ಅನ್ನಕೋಶದ ಎಲ್ಲಾ ರೋಗಗಳು, ಕರಳಿನ ಎಲ್ಲಾ ರೋಗಗಳು ಗುಣವಾಗುವುವು.

೮. ಜವಾರಿಷೆ ತುರುಷ್:—ನಿಂಬೇಹಣ್ಣು ೨೫ ತಂದು ರಸ ತೆಗೆದುಕೊಂಡು ೩ ತೊಲೆ ಸೋಡಾ (ತಿನ್ನುವ ಸೋಡಾ) ಕಲಸಿ ಇಟ್ಟರೆ ಉಕ್ಕುಗಳು ಬರುತ್ತೆ ಉಕ್ಕು ನಿಂತಮೇಲೆ ತೆಗೆದುಕೊಂಡು ಒಂದು ಬಾಂಡ್ಲಿಯಲ್ಲಿ ಹಾಕಿ ಸಕ್ಕರೆ ೨ ಭಾಗ ಹಾಕಿ ಒಲೆಯಮೇಲಿಟ್ಟು ಉರಿಹಾಕಿ ಷರಬತ್ತು ಪಾಕನೋಡಿ ಇಳಿಸಿ ಈ ಚೂರ್ಣವನ್ನು ಹಾಕುವುದು:—ಮೆಣಸು ೩ ತೊಲೆ, ಬಿಳೀಜೀರಿಗೆ ೩ ತೊಲೆ, ಕೊತ್ತುಂಬರಿಬೀಜ ೩ ತೊಲೆ, ಬಿಡಾಲವಣ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಚೆನ್ನಾಗಿ ಗೋಟಾಯಿಸಿ ಇಟ್ಟುಕೊಳ್ಳುವುದು. ಹೊತ್ತಿಗೆ ಅರ್ಧತೊಲೆ ತೆಗೆದುಕೊಳ್ಳಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೭-೧೪ ದಿನ ಕೊಡಬೇಕು. ಇಚ್ಛಾಪಥ್ಯ ಚಲದಿಪದಾರ್ಥ ವರ್ಜ್ಯ. ಇದರಿಂದ ಪಿತ್ಥಸಂಬಂಧವಾದ ಎಲ್ಲಾ ರೋಗಗಳು, ಅನ್ನಕೋಶದ ಎಲ್ಲಾ ರೋಗಗಳು ಗುಣವಾಗುವುವು.

೯. ಮಾಜೂನೆ ಇಕಮಾನಿ:—ಬಿಳೀಜೀರಿಗೆ ೧೨ ತೊಲೆ ತಂದು ನಿಂಬೇಹಣ್ಣಿನ ರಸದಲ್ಲಿ ೧ ದಿನ ಭಾವನೆ, ಹಸೀ ಶುಂಠಿ ರಸದಲ್ಲಿ ೧ ದಿನ ಭಾವನೆ, ಚುಕ್ಕೀಸೊಪ್ಪಿನ ರಸದಲ್ಲಿ ೧ ದಿನ ಭಾವನೆ, ಪುದೀನಸೊಪ್ಪಿನ ರಸದಲ್ಲಿ ೧ ದಿನ ಭಾವನೆ, ಕೊತ್ತುಂಬರಿಸೊಪ್ಪಿನ ರಸದಲ್ಲಿ ೧ ದಿನ ಭಾವನೆ, ವಿನಿಗರ್‌ನಲ್ಲಿ ೧ ದಿನ ಭಾವನೆ ಈರೀತಿ ಒಂದೊಂದು ದಿನ ಒಂದು ಭಾವನೆಮಾಡಿ ಜೀರಿಗೆಯನ್ನು ಬಿಸಲಿನಲ್ಲಿ ಒಣಗಿಸಿಟ್ಟುಕೊಳ್ಳುವುದು. ಹಾವುನಂಜಿನಸೊಪ್ಪು ಒಣಗಿದ್ದು ೧|| ತೊಲೆ, ಮೆಣಸು ೧|| ತೊಲೆ, ದಾಲ್‌ಚಿನ್ನಿ ೧|| ತೊಲೆ, ಶುಂಠಿ ೧|| ತೊಲೆ, ಯಾಲಕ್ಕಿ ||| ತೊಲೆ ಇವುಗಳನ್ನೂ ಮೇಲ್ಕಂಡ ಜೀರಿಗೆಯನ್ನೂ ಕುಟ್ಟಿ ಚೂರ್ಣಮಾಡಿ

ಶೋಧಿಸಿಕೊಳ್ಳುವುದು. ಗುಲ್‌ಖಂ ೧೨ ತೊಲೆ, ಆಳಲೇಕಾಯಿಮುರಬ್ಬ ಬೀಜ ತೆಗೆದದ್ದು ೧೨ ತೊಲೆ, ಹಸೀ ಶುಂಠಿಮುರಬ್ಬ ೧೨ ತೊಲೆ ಇವುಗಳನ್ನು ಖಲ್ವ ದಲ್ಲಿ ಚೆನ್ನಾಗಿ ಅರೆದು ಇಟ್ಟುಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ಬೂರಾ ಸಕ್ಕರೆ ೩ ಶೇರು ಹಾಕಿ ನೀರುಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಮತ್ತು ಖಲ್ವದಲ್ಲಿರುವದನ್ನೂ ಹಾಕಿ ಚೆನ್ನಾಗಿ ಕಲಸಿ ಪಕ್ವವಾಗಿ ಲೇಹ್ಯಮಾಡಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ, ॥ ತೊಲೆ ಕೊಡುವುದು ಹೀಗೆ ಬೆಳಿಗ್ಗೆ ಸಾಯಂಕಾಲ ೭-೧ಳ ದಿನ ಕೊಡಬೇಕು. ಇಚ್ಛಾಪಥ್ಯ. ಚಲದಿಪದಾರ್ಥ ವರ್ಜ್ಯ. ಇದರಿಂದ ಪಿತ್ಥ, ಅಜೀರ್ಣ ಗುಣವಾಗುವುದು.

೧೦ ಆಮಲಕ ರಸಾಯನ:—ನೆಲ್ಲೀಕಾಯಿ ರಸ ೧ ಶೇರು, ರಾಯಿಪುಡಿ ಸಕ್ಕರೆ ೨ ಶೇರು ಇವೆರಡು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಈ ಚೂರ್ಣವನ್ನು ಹಾಕುವುದು:—ಬಿಳೇ ಜೀರಿಗೆ ೧ ತೊಲೆ, ತಾಳೀಶಪತ್ರೆ ೧ ತೊಲೆ, ಹಿಪ್ಪಲಿ ೧ ತೊಲೆ, ಸೈಂಧವಲವಣ ೧ ತೊಲೆ, ಚಿತ್ರಮೂಲದ ತೊಗಟೆ ೧ ತೊಲೆ, ದಾಲ್‌ಚಿನ್ನಿ ೧ ತೊಲೆ, ಲವಂಗ ಪತ್ರೆ ೧ ತೊಲೆ, ನಾಗಕೇಸರಿ ೧ ತೊಲೆ, ಯಾಲಕ್ಕಿ ೧ ತೊಲೆ, ಮೋಡಿ ೧ ತೊಲೆ, ಕೊತ್ತುಂಬರಿಬೀಜ ೧ ತೊಲೆ, ಶುದ್ಧಿಮಾಡಿದ ಲಾಲ್‌ತಿಗಡು ೩ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಜೇನುತುಪ್ಪ ॥ ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯ ಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ, ॥ ತೊಲೆ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೭-೧ಳ ದಿನ ಕೊಡಬೇಕು. ಇಚ್ಛಾಪಥ್ಯ. ಚಲದಿ ಪದಾರ್ಥ ವರ್ಜ್ಯ. ಇದರಿಂದ ವಾತಪಿತ್ಥ, ಅರೋಚಕ ಗುಣವಾಗುವುದು.

೧೧. ಜವಾರಿಷೆ ಜಂಜಬಿಲ್:—ಹಸೀಶುಂಠಿ ೧ ಶೇರು ತಂದು ಕುಟ್ಟಿ ಒರ ಳಲ್ಲಿ ಹಾಕಿ ೪ ಶೇರು ನೀರುಹಾಕಿ ರುಬ್ಬಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಬಿಳೇ ಕಲ್ಲುಸಕ್ಕರೆ ೧ ಶೇರು ಇವೆರಡನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಈ ಚೂರ್ಣವನ್ನು ಹಾಕುವುದು:—ಯಾಲಕ್ಕಿ ೧ ತೊಲೆ, ಲವಂಗ ೧ ತೊಲೆ, ಬಿಳೇಜೀರಿಗೆ ೧ ತೊಲೆ, ತವಕ್ಷೀರ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಪಕ್ವವಾಗಿ ರಸಾಯನಮಾಡಿ ಇಟ್ಟುಕೊಳ್ಳು ವುದು. ಹೊತ್ತಿಗೆ ಕಾಲುತೊಲೆ, ॥ ತೊಲೆ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೭-೧ಳ ದಿನ ಕೊಡಬೇಕು. ಇಚ್ಛಾಪಥ್ಯ. ಚಲದಿಪದಾರ್ಥ ವರ್ಜ್ಯ. ಇದರಿಂದ ಪಿತ್ಥ, ಅಜೀರ್ಣ, ಅನ್ನಕೋಶದ ರೋಗಗಳು ಗುಣ ವಾಗುವುದು.

೧೨. ಜವಾರಿಷೆ ಷಾಹ್ರಿಯಾರ:—ಶುದ್ಧಿಮಾಡಿದ ಲಾಲ್‌ಶಿಗಡು ೫ ತೊಲೆ, ಸಖಮುನಿಯಾ ೩||| ತೊಲೆ, ಚಿತ್ರಮೂಲ ೧| ತೊಲೆ, ಷಿತರಜ್ ೧| ತೊಲೆ, ಹಿಪ್ಪಲಿ ||| ತೊಲೆ, ಶುಂಠಿ ||| ತೊಲೆ, ದಾಲ್‌ಚಿನ್ನಿ ||| ತೊಲೆ, ಮೆಣಸು || ತೊಲೆ, ಯಾಲಕ್ಕಿ || ತೊಲೆ, ದೊಡ್ಡಯಾಲಕ್ಕಿ || ತೊಲೆ, ಕಾಬುಲ್ ಅಳಲೇಕಾಯಿ ಕಾಲುತೊಲೆ, ಅಳಲೇಕಾಯಿಸಿಪ್ಪೆ ಕಾಲುತೊಲೆ, ನೆಲ್ಲೀಕಾಯಿ ಕಾಲುತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಕುಂಕುಮಕೇಸರಿ ಕಾಲುತೊಲೆ ಖಲ್ವದಲ್ಲಿ ಹಾಕಿ ನೀರಿನಿಂದ ಅರೆದು ಒಂದು ಬಾಂಡ್ಲಿಯಲ್ಲಿ ಹಾಕಿ ಸಕ್ಕರೆ ೧೮ ತೊಲೆ, ಜೇನುತುಪ್ಪ ೧ ಶೇರು ಹಾಕಿ ಒಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣಹಾಕಿ ಪಕ್ವವಾಗಿ ಲೇಹ್ಯಮಾಡಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ, || ತೊಲೆ ಕೊಡುವುದು. ಹೀಗೆ ಬೆಳಿಗಿನಹೊತ್ತು ೭ ದಿನ ಕೊಡಬೇಕು. ಇಚ್ಛಾಪಥ್ಯ ಚಲದಿಪದಾರ್ಥ ವರ್ಜ್ಯ. ಇದರಿಂದ ಮಲಬದ್ಧ, ವಾಯು, ಪಿತ್ಥ, ಅಜೀರ್ಣ ಗುಣವಾಗುವುದು.

೧೩. ನೆಲ್ಲೀಕಾಯಿ ರಸ ೧ ಪಾವು, ಹೇರಳೇಹಣ್ಣಿನ ರಸ ೧ ಪಾವು, ಹಸೀಶುಂಠಿ ರಸ ೧ ಪಾವು, ಪುದೀನಸೊಪ್ಪಿನ ರಸ ೧ ಪಾವು, ಚುಕ್ಕೆಸೊಪ್ಪಿನ ರಸ ೧ ಪಾವು, ದ್ರಾಕ್ಷಿ ೬ ತೊಲೆ ಒರಳಲ್ಲಿ ಹಾಕಿ ನೀರುಹಾಕಿ ರುಬ್ಬಿ ಶೋಧಿಸಿಕೊಳ್ಳುವುದು. ಹಳೇಬೆಲ್ಲ ೪ ಶೇರು ಇವುಗಳೆಲ್ಲವನ್ನೂ ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಈ ಚೂರ್ಣವನ್ನು ಹಾಕುವುದು:—ಬಿಳೇಜೀರಿಗೆ ೨ ತೊಲೆ, ದೇಶಾವರದ ಶುಂಠಿ ೨ ತೊಲೆ, ಸೊಗದೇಬೇರು ೨ ತೊಲೆ, ಯಾಲಕ್ಕಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಜೇನುತುಪ್ಪ ೧ ಶೇರು ಹಾಕಿ ಪಕ್ವವಾಗಿ ರಸಾಯನವನ್ನು ಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ, || ತೊಲೆ ತೆಗೆದುಕೊಳ್ಳಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೭ ದಿನ ಕೊಡುವುದು. ಇಚ್ಛಾಪಥ್ಯ ಚಲದಿಪದಾರ್ಥ ವರ್ಜ್ಯ. ಇದರಿಂದ ಸಕಲ ಪಿತ್ಥಗಳು, ಅಜೀರ್ಣ, ಅರೋಚಕ ಗುಣವಾಗುವುದು.

೧೪. ಜವಾರಿಷೆ ಊದೇತುರುಷ್:—ಹುಳಿದಾಳಿಂಬರೆಹಣ್ಣಿನ ರಸ ಅರ್ಧಶೇರು, ನಿಂಬೇಹಣ್ಣಿನರಸ ಅರ್ಧಶೇರು, ಮಾದವಾಳದಹಣ್ಣಿನ ರಸ ಅರ್ಧಶೇರು, ಆಬೆಜರೆಷುಕ್, ಆಬೆಸಮಾಖ್ ಇದು ದಿನಸು ೧ಕ್ಕೆ ಕಾಲುಶೇರು, ರೂಮಿ ಮಸ್ತಕಿ ೩ ತೊಲೆ, ಕರ್ರಫಲ್ ೧ ತೊಲೆ, ಕುಂಕುಮಕೇಸರಿ ೧ ತೊಲೆ, ಸುಂಬುಲೇತಿಬ್ ೧ ತೊಲೆ, ಬಾದರಂಜ್‌ಬೋಯ್ ೨ ತೊಲೆ, ಊದೆಹಿಂದಿ ೨ ತೊಲೆ, ತವಕ್ಷೀರ ೩ ತೊಲೆ, ಶ್ರೀಗಂಧದಪುಡಿ ೪ ತೊಲೆ, ಮುರಬ್ಬಸೇಬ್ ೪ ತೊಲೆ, ಮುರಬ್ಬಬಿಹಿ ೪ ತೊಲೆ, ಆಬೆಹಮ್ಮಾಜ್ ಅರ್ಧಶೇರು, ಗುಲಾಬ್ ಅರ್ಧಶೇರು,

ಬಿಳೇಸಕ್ಕರೆ ೩ ಪಲಾಲ್ ಇವುಗಳನ್ನು ಜವಾರಿಷ್‌ನಂತೆ ತಯಾರ್ಮಾಡುವುದು. ಹೊತ್ತಿಗೆ ಕಾಲುತೊಲೆ, ಅರ್ಧತೊಲೆ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇಚ್ಛಾಪಥ್ಯ ಚಲದಿಪದಾರ್ಥ ವರ್ಜ್ಯ. ಇದರಿಂದ ಪಿತ್ಥ, ಪಿತ್ಥಜ್ವರ, ಅಜೀರ್ಣ ಇವುಗಳು ಗುಣವಾಗುವುದು.

೧೫. ದೇಶಾವರದ ಶುಂಠಿ ೧ ಶೇರು, ಶುದ್ಧಿಮಾಡಿದ ಪರಂಗಿಚಕ್ಕೆ ಅರ್ಧ ಶೇರು, ಶುದ್ಧಿಮಾಡಿದ ಲಾಲ್‌ತಿಗಡು ೬ ತೊಲೆ, ಬಿಳೇಜೀರಿಗೆ ೩ ತೊಲೆ, ಮೆಣಸು ೩ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ನಿಂಬೇಹಣ್ಣಿನ ರಸದಲ್ಲಿ ೭ ದಿನ ನೆನೆಯಿಸಿ ಅನಂತರ ಬಿಸಲಿನಲ್ಲಿ ಒಣಗಿಸಿ ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಹೊತ್ತಿಗೆ ಕಾಲುತೊಲೆ, ‖ ತೊಲೆ ಬಿಸಿನೀರಿನಲ್ಲಿ ಕೊಡುವುದು. ಹೀಗೆ ಬೆಳಿಗ್ಗೆ ೭-೧೪ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಿತ್ಥವಾಯು, ಶೂಲೆ, ಅಗ್ನಿಮಾಂದ್ಯ ಗುಣವಾಗುವುದು.

೧೬. ಲವಂಗ ೧ ತೊಲೆ, ಬಿಳೇಜೀರಿಗೆ ೨ ತೊಲೆ, ಮೆಣಸು ೨ ತೊಲೆ, ಶುಂಠಿ ೬ ತೊಲೆ, ಹಿಪ್ಪಲಿ ೬ ತೊಲೆ, ರುದ್ರಾಕ್ಷಿಕಾಯಿ ೨ ತೊಲೆ, ಇವುಗಳೆಲ್ಲವನ್ನೂ ಹುರಿಯುವುದು. ಯಾಲಕ್ಕಿ ೨ ತೊಲೆ, ಜಾಕಾಯಿ ‖ ತೊಲೆ, ದಾಲ್‌ಚಿನ್ನಿ ‖ ತೊಲೆ, ತಾಳೇಸಪತ್ರೆ ೨ ತೊಲೆ, ಚಂಗಲಕೋಷ್ಟ ‖ ತೊಲೆ, ಮೋಡಿ ೧ ತೊಲೆ, ಯಷ್ಟಿಮಧುಕ ೧ ತೊಲೆ ಇವುಗಳನ್ನೆಲ್ಲಾ ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ೧ ಶೇರು ಜೇನುತುಪ್ಪ ಹಾಕಿ ಅರೆದು ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ತೆಗೆದುಕೊಳ್ಳಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೭-೧೪ ದಿನ ಕೊಡಬೇಕು. ಇದರಿಂದ ಆಮ್ಲಪಿತ್ಥ, ವಿಂಶತಿಪಿತ್ಥ, ವಾಂತಿ ಗುಣವಾಗುವುದು.

೧೭. ಶುಂಠಿ ೩ ತೊಲೆ, ಹಿಪ್ಪಲಿ ೩ ತೊಲೆ, ಮೆಣಸು ೩ ತೊಲೆ, ಬಿಳೇಜೀರಿಗೆ ೬ ತೊಲೆ, ಯಾಲಕ್ಕಿ ೧‖ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಹಸೀಶುಂಠಿ ರಸದಿಂದ ೧ ದಿನ ಭಾವನೆ, ನಿಂಬೇಹಣ್ಣಿನ ರಸದಿಂದ ೧. ದಿನ ಭಾವನೆ, ಗರುಗದನೊಪ್ಪಿನ ರಸದಿಂದ ೧ ದಿನ ಭಾವನೆಮಾಡಿ ಬಿಸಲಿನಲ್ಲಿ ಒಣಗಿಸಿ ಕುಟ್ಟಿ ಚೂರ್ಣಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಬಿಸಿನೀರಿನಲ್ಲಿ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೭ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಿತ್ಥ, ಶ್ಲೇಷ್ಮ ಗುಣವಾಗುವುದು.

೧೮. ಬಿಳೇಜೀರಿಗೆ ೧ ಪಾವು, ನೆಲ್ಲೀಕಾಯಿ ೧ ಪಾವು, ಅಮೃತಬಳ್ಳಿ ೧ ತೊಲೆ, ಯಾಲಕ್ಕಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಕಲ್ಲುಸಕ್ಕರೆ ೩ ಪಾವು ತಂದು ಖಲ್ವದಲ್ಲಿ ಹಾಕಿ ಅರೆದು ಎಲ್ಲವನ್ನೂ ಶೇರಿಸಿ

ಕಲಸಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ, ಅರ್ಧತೊಲೆ, ಚೂರ್ಣ ಜೇನುತುಪ್ಪದಲ್ಲಾಗಲಿ, ಬಿಸಿನೀರಿನಲ್ಲಾಗಲಿ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೭-೧೪ ದಿನ ಕೊಡಬೇಕು. ಇಚ್ಛಾಪಥ್ಯ. ಚಲದಿ ಪದಾರ್ಥ ವರ್ಜ್ಯ. ಇದರಿಂದ ಸಮಸ್ತ ಪಿತ್ತಗಳು ಗುಣವಾಗುವುದು.

## ಉಷ್ಣಪಿತ್ಥಗಳಿಗೆ ಚಂದ್ರಿಕಾದಿ ಚೂರ್ಣ.

೧೯. ಅತಿಮಧುರ ೨ ತೊಲೆ, ದಾಲ್‌ಚಿನ್ನಿ ೨ ತೊಲೆ, ಯಾಲಕ್ಕಿ ೨ ತೊಲೆ, ತಾವರೆಕುಸುಮ ೨ ತೊಲೆ, ತಂಗಡಿಕುಸುಮ ೨ ತೊಲೆ, ಸೊಗದೇಬೇರು ೨ ತೊಲೆ, ಆನೆನೆಗ್ಗಿಲು ೧ ತೊಲೆ, ಸಣ್ಣನೆಗ್ಗಿಲು ೧ ತೊಲೆ, ಬಿದರುಪ್ಪು ೧ ತೊಲೆ, ಬಿಳೀಜೀರಿಗೆ ೩ ತೊಲೆ, ನೆಲ್ಲೀಕಾಯಿ ೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಇದರ ಸಮಭಾಗ ಸಕ್ಕರೆ ಹಾಕಿ ಕಲಸಿ ಇಟ್ಟು ಕೊಳ್ಳುವುದು. ಹೊತ್ತಿಗೆ ಕಾಲುತೊಲೆ, ಅರ್ಧತೊಲೆ, ಚೂರ್ಣ ಜೇನುತುಪ್ಪ ದಲ್ಲಾಗಲಿ, ಬಿಸಿನೀರಿನಲ್ಲಾಗಲೀ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೭-೧೪ ದಿನ್ನ ಕೊಡಬೇಕು. ಇಚ್ಛಾಪಥ್ಯ. ಚಲದಿ ಪದಾರ್ಥ ವರ್ಜ್ಯ. ಇದರಿಂದ ಉಷ್ಣ, ಪಿತ್ತ ಗುಣವಾಗುವುದು.

೨೦. ಬೆಟ್ಟದ ಮಾವಿನಚಕ್ಕೆ ಮೊಸರಿನಲ್ಲಿ ಅರೆದು ಹೊಟ್ಟೆಗೆ ಕೊಡಲು ಪೈತ್ಯ ಗುಣವಾಗುವುದು. ಎಂದಿಗೂ ಬಾರದು. ಈ ರೀತಿ ಬೆಳಿಗ್ಗೆ ಸಾಯಂಕಾಲ ೫ ದಿನ ಕೊಡಬೇಕು. ಇಚ್ಛಾಪಥ್ಯ. ಚಲದಿಪದಾರ್ಥ ವರ್ಜ್ಯ. ಬೆಟ್ಟದ ಮಾವಿನಸೊಪ್ಪು ಹಸುವಿನಮಜ್ಜಿಗೆಯಲ್ಲಿ ಕಲಸಿ ಮೈಗೆ ಲೇಪಿಸಿ ಬಿಸಿನೀರು ಸ್ನಾನಮಾಡಲು ಪೈತ್ಯ ಗುಣವಾಗುವುದು.

೨೧. ಲಾವಂಚ, ಬಿಳೀಜೀರಿಗೆ, ಲವಂಗಪತ್ರೆ, ಮೋಡಿ, ನೆಲ್ಲೀಕಾಯಿ, ನೆಲತಾಟಿಗಡ್ಡೆ, ಯಾಲಕ್ಕಿ, ರೇಣುಕೆ, ದ್ರಾಕ್ಷಿ, ಕುಂಕುಮಕೇಸರಿ, ತಾವರೆ ಗಡ್ಡೆ, ನಾಗಕೇಸರಿ, ಪಚ್ಚೆಕರ್ಪೂರ, ಶ್ರೀಗಂಧದಚಕ್ಕೆ, ರಕ್ತಚಂದನ, ಯಷ್ಠಿ ಮಧುಕ, ಭತ್ತದ ಅರಳು, ಶುದ್ಧಿಮಾಡಿದ ಅಶ್ವಗಂಧಿ, ಮಜ್ಜಿಗೆಗಡ್ಡೆ, ಆನೇ ನೆಗ್ಗಿಲು, ಸೌತೇಬೀಜದ ಪೊಪ್ಪು, ಅಮೃತಬಳ್ಳಿಸಕ್ಕರೆ, ಶುದ್ಧಿಮಾಡಿದ ಮಾಡಿದ ಪರಂಗಿಚಕ್ಕೆ ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇದರ ಎರಡರಷ್ಟು ಸಕ್ಕರೆ ಒಂದು ಬಾಂಡ್ಲಿಯಲ್ಲಿ ಹಾಕಿ ಸ್ವಲ್ಪ ನೀರುಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಹಾಕಿ ಜೇನುತುಪ್ಪ ೧ ಶೇರು, ಹಸುವಿನತುಪ್ಪ ‖ ಶೇರು ಹಾಕಿ ಕಲಸಿ ಪಕ್ವವಾಗಿ ಲೇಹಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಯಳಚೀಕಾಯಿ ಪ್ರಮಾಣ ಕೊಡ ಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೭-೧೪ ದಿನ ಕೊಡಬೇಕು. ಇಚ್ಛಾಪಥ್ಯ. ಚಲದಿಪದಾರ್ಥ ವರ್ಜ್ಯ. ಇದರಿಂದ ಪೈತ್ಯ, ಕೈಕಾಲು ಉರಿ, ಬಹುಮೂತ್ರ, ಮೂತ್ರಕಟ್ಟು, ಮೇಹಛಳುಕು, ಮೇಹವಾಯು ಗುಣವಾಗುವುದು.

೨೨. ಯಾಲಕ್ಕಿ, ಜಟಾಮಾಂಸಿ, ಲವಂಗ, ಮೆಣಸು, ಹಿಪ್ಪಲಿ, ತುಂಗೇ ಗಡ್ಡೆ, ಪಚ್ಚಕರ್ಪೂರ, ಕೊತ್ತುಂಬರೀಬೀಜ, ಖರ್ಜೂರ, ಒಣಗಿದ ತುಲಸೀ ಸೊಪ್ಪು, ಅತಿಮಧುರ, ಬಿಳೇಜೀರಿಗೆ, ಕರೇಜೀರಿಗೆ, ಆನೇನೆಗ್ಗಿಲು, ದ್ರಾಕ್ಷಿ, ಶ್ರೀಗಂಧದಚಕ್ಕೆ, ಚಂಗಲಕೋಷ್ಠ, ಶುಂಠಿ, ಜಾಕಾಯಿ, ನೆಲಗೊರಮಿಡಿ, ಬಿಳೇಕೊಮ್ಮೇಬೇರು, ನೆಲತಾಟಿಗಡ್ಡೆ, ಭತ್ತದ ಅರಳು, ಶುದ್ಧಿಮಾಡಿದ ಅಶ್ವ ಗಂಧಿ ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇದಕ್ಕೆ ಸಮ ರಾಯವುಡಿಸಕ್ಕರೆ ಹಾಕಿ ಕಲಸಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ, ॥ ತೊಲೆ ಬಿಸಿನೀರಿನಲ್ಲಿ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೭-೧೪ ದಿನ ಕೊಡಬೇಕು. ಇಚ್ಛಾಪಥ್ಯ. ಚಲದಿಪದಾರ್ಥ ವರ್ಜ್ಯ. ಇದರಿಂದ ೨೪ ಪೈತ್ಯ, ಬಿಕ್ಕಳಿಕೆ ಗುಣವಾಗುವುದು.

೨೩. ಹಸೀಶುಂಠಿ ರಸದಲ್ಲಿ ಕಾವೀಕಲ್ಲು ಗಂಧ ತೆಗೆದುಕೊಡುವುದು. ರಾಗಿ ಹಿಟ್ಟು ಮಾಡಿದ ಮಡಕೆಯಲ್ಲಿ ಬಿಸಿನೀರು ಕಾಯಿಸಿ ಮೈಗೆ ಹಾಕಿಕೊಳ್ಳುವುದು. ಅನಂತರ ಸಾಂಬ್ರಾಣಿ ಹೊಗೆಕೊಟ್ಟರೆ ಗಜಪಿತ್ಥ ಗುಣವಾಗುವುದು.

೨೪. ಹಿಂಗು ೧ ತೊಲೆ ತಂದು ಬೆಂಕಿಕೆಂಡದಮೇಲೆ ಇಟ್ಟು ಬಿಸಿಮಾಡಿ ೧ ಗುರುಗಂಜಿಗಾತ್ರ ಬಾಳೇಹಣ್ಣಿನಲ್ಲಿಟ್ಟು ನುಂಗಿಸುವುದು. ಈರೀತಿ ಬೆಳಿಗ್ಗೆ ಹೊತ್ತು ೨ ದಿನ ಕೊಟ್ಟರೆ ಗಜಪಿತ್ಥ ಗುಣವಾಗುವುದು.

## ಆಮ್ಲಪಿತ್ಥ ಲಕ್ಷಣ.

ಪರಸ್ಪರ ವಿರುದ್ಧಪದಾರ್ಥಗಳು, ಹಳಸಿದ ಅನ್ನವು, ಹುಳಿಪದಾರ್ಥಗಳು, ತಾಪಕರಪದಾರ್ಥಗಳು ಇವುಗಳಿಂದ ಪಿತ್ಥವು ಪ್ರಕೋಪಿಸಿದರೆ ಅದು ಆಮ್ಲಪಿತ್ಥ ವೆನ್ನಲ್ಪಡುವುದು. ಅದರಲ್ಲಿ ಅಧೋಗತವೆಂತಲೂ, ಊರ್ಧ್ವಗತವೆಂತಲೂ ಎರಡು ಬಗೆಯಾಗಿದೆ.

ಅಧೋಗತಾಮ್ಲ ಪಿತ್ಥದಲ್ಲಿ ದಾಹ, ತಾಪ, ಮೂರ್ಛೆ, ಭ್ರಮೆ, ಮನೋ ವಿಕಾರ, ಬಾಯಿಯಲ್ಲಿ ನೀರೂರುವಿಕೆ, ಶರೀರದಲ್ಲಿ ಬೊಬ್ಬೆಗಳುಂಟಾಗುವಿಕೆ, ಅಗ್ನಿಮಾಂದ್ಯವು, ಮೈಬೆವರುವಿಕೆ, ಶರೀರವು ಹಳದಿಯಾಗಿರುವಿಕೆ, ಮಲವು ನಾನಾ ವಿಧವಾಗಿ ಹೋಗುವಿಕೆ ಈ ಚಿಹ್ನೆಗಳು ಕಾಣುವುವು.

ಊರ್ಧ್ವಗತಾಮ್ಲಪಿತ್ಥದಲ್ಲಿ ಹಸುರಾಗಿಯೂ, ಹಳದಿಯಾಗಿಯೂ, ನೀಲ ವಾಗಿಯೂ, ಕಪ್ಪಾಗಿಯೂ, ರಕ್ತವು ಕಲೆತಂತೆಯೂ, ಮಾಂಸದ ನೀರಿನಂತೆಯೂ, ಆಮ್ಲರಸದಂತೆಯೂ ವಾಂತಿಯಾಗುವುದು. ಕಹಿಯಾಗಿಯೂ, ಹುಳಿಯಾಗಿ ಯೂ ತೇಗುಗಳು ಬರುವುವು. ಕಂಠವು ಹೃದಯವು, ಕುಕ್ಷಿ ಇವುಗಳಲ್ಲಿ ತಾಪವು, ಉರಿಯು, ಜ್ವರವು, ಅರೋಚಕವು, ಬೊಬ್ಬೆಗಳು, ಪಡೆಗಳು ಈ ಲಕ್ಷಣಗಳು ಕಾಣುವುವು.

ಈ ಎರಡುವಿಧ ಆಮ್ಲಪಿತ್ಥಗಳಲ್ಲಿಯೂ, ವಾತ, ಶ್ಲೇಷ್ಮ, ವಾತಶ್ಲೇಷ್ಮಗಳಿಂದುತ್ಪನ್ನವಾಗಿ ಮೂರು ಬಗೆಯಾಗಿರುತ್ತವೆ.

ವಾತಜಾಮ್ಲಪಿತ್ಥದಲ್ಲಿ ಥಳಿ, ಪ್ರಲಾಪ, ಮೂರ್ಛೆ, ಶರೀರವು ಕೃಶಿಸುವುದು, ನೋವುಂಟಾಗುವಿಕೆ, ಕತ್ತಲೆಯಲ್ಲಿರುವಂತಿರುವಿಕೆ, ತಲೆತಿರುಗು, ಮೈಯೆಲ್ಲಾ ತಿನಿಸು, ಓಕರಿಕೆ ಈ ಲಕ್ಷಣಗಳು ಕಾಣುವುವು.

ಕಫಜಾಮ್ಲಪಿತ್ಥದಲ್ಲಿ ಕಫವು, ಬಾಯಿಯಲ್ಲಿ ನೀರುಸುರಿಯುವುದು, ಶರೀರವು ಭಾರವಾಗಿ ಮರದಂತಿರುವಿಕೆ, ಅರೋಚಕವು, ಶರೀರವು ತಣ್ಣಗಿರುವಿಕೆ, ಕೃಶತ್ವವು, ವಾಂತಿ, ಕಂಠವನ್ನು ಕಫವು ನಿರೋಧಿಸುವಿಕೆ, ಅಗ್ನಿಮಾಂದ್ಯವು, ತುರಿ, ನಿದ್ರೆ ಈ ಚಿಹ್ನೆಗಳು ಕಾಣುವುವು.

ಶ್ಲೇಷ್ಮಜಾಮ್ಲಪಿತ್ಥದಲ್ಲಿ—ಶ್ಲೇಷ್ಮ, ವಾತಲಕ್ಷಣಗಳೆರಡೂ ಕಾಣುವುವು.

## ಆಮ್ಲಪಿತ್ಥರೋಗದಲ್ಲಿ ಅಸಾಧ್ಯ ಲಕ್ಷಣ.

ಬಹಳ ದಿವಸದಿಂದ ಸಂಚಿತವಾಗಿದ್ದರೆ ಅಸಾಧ್ಯವು.

## ಆಮ್ಲಪಿತ್ಥಕ್ಕೆ ಚಿಕಿತ್ಸೆಗಳು.

೧. ಸೈಂಧವಲವಣ ಕಾಲುತೊಲೆ, ಗಾಜುಲವಣ ಕಾಲುತೊಲೆ, ಬಿಡಾಲವಣ ಕಾಲುತೊಲೆ, ತಿನ್ನುವ ಉಪ್ಪು ಕಾಲುತೊಲೆ, ಸಜ್ಜುಕ್ಷಾರ ಕಾಲುತೊಲೆ, ಪೆಟ್ಲುಪ್ಪು ॥ ತೊಲೆ, ನೆಲ್ಲೀಕಾಯಿ ೧॥ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಚೂರ್ಣ ಬಿಸಿನೀರಿನಲ್ಲಾಗಲಿ, ಜೇನುತುಪ್ಪದಲ್ಲಾಗಲಿ ಕೊಡುವುದು. ಹೀಗೆ ಬೆಳಗ್ಗೆ ಸಾಯಂಕಾಲ ೭-೧ಳ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಆಮ್ಲಪಿತ್ಥ ಗುಣವಾಗುವುದು.

೨. ಸಬ್ಬಕ್ಷಿ ಬೀಜ ೧ ತೊಲೆ, ಓಮ ೧ ತೊಲೆ, ಅರಿಶಿನ ೧ ತೊಲೆ, ಶುಂಠಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಬಿಳೇಜೀರಿಗೆ ೧ ತೊಲೆ, ವಾಯುವಿಳಂಗ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಹೊತ್ತಿಗೆ ಕಾಲುತೊಲೆ, ಅರ್ಧತೊಲೆ ಚೂರ್ಣ ಬಿಸಿನೀರಿನಲ್ಲಿ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೭-೧ಳ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಆಮ್ಲಪಿತ್ಥ, ಕರುಳು ಕೂಗುವ ವಾಯು ಗುಣವಾಗುವುದು.

೩. ಓಮ ||| ತೊಲೆ, ಮೆಣಸು ||| ತೊಲೆ, ಶುಂಠಿ ||| ತೊಲೆ, ಬಿಳೇಜೀರಿಗೆ ೧ ತೊಲೆ, ಚಿತ್ರಮೂಲ ೩। ತೊಲೆ, ಸೈಂಧವಲವಣ ೬॥ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಇದನ್ನು ಊಟಮಾಡಿದ ತರುವಾಯ ಕಾಲುತೊಲೆ, ಅರ್ಧತೊಲೆ ಚೂರ್ಣ ಹಸುವಿನ ಮಜ್ಜಿಗೆಯಲ್ಲಿ ಕಲಸಿ ಕೊಡುವುದು. ಹೀಗೆ ಬೆಳಿಗ್ಗೆ ಹೊತ್ತು ೭-೧ಳ ದಿನ ಕೊಡಬೇಕು. ಇದಕ್ಕೆ

ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಆಮ್ಲಪಿತ್ಥ, ಎದೆಯಲ್ಲಿ ಹುಳಿಯಾಗಿ ತೇಗು ಬರುವುದು, ಗುಲ್ಮ, ವಾತ ಗುಣವಾಗುವುದು.

೪. ಅವಿಪತ್ತಿ ಚೂರ್ಣ:—ಶುಂಠಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀ ಕಾಯಿ ೧ ತೊಲೆ, ತುಂಗೇಗಡ್ಡೆ ೧ ತೊಲೆ, ಬಿಡಾಲವಣ ೧ ತೊಲೆ, ವಾಯು ವಿಳಂಗ ೧ ತೊಲೆ, ಯಾಲಕ್ಕಿ ೧ ತೊಲೆ, ಲವಂಗಪತ್ರೆ ೧ ತೊಲೆ, ಲವಂಗ ೧೧ ತೊಲೆ, ಶುದ್ಧಿಮಾಡಿದ ಲಾಲ್‌ತಿಗಡು ೪೪ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ಸಕ್ಕರೆ ೬೬ ತೊಲೆ ಹಾಕಿ ಕಲಸಿ ಇಟ್ಟು ಕೊಳ್ಳುವುದು. ಈ ಚೂರ್ಣವನ್ನು ಹೊತ್ತಿಗೆ ಅರ್ಧತೊಲೆ, ೧ ತೊಲೆ ಬಿಸಿ ನೀರಿನಲ್ಲಿ ಕೊಡುವುದು. ಹೀಗೆ ವಾರಕ್ಕೆ ೩ ಸಲ ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಆಮ್ಲಪಿತ್ಥ, ಮಲಬಂಧ, ಮೂತ್ರಬಂಧನ, ಅಗ್ನಿಮಾಂದ್ಯದಿಂದುಂಟಾದ ರೋಗಗಳು, ಪ್ರಮೇಹ, ಮೂಲ ವ್ಯಾಧಿ ಗುಣವಾಗುವುದು.

೫. ಜವಾರಿಷೆ ಜರನಬ:—ಮೆಣಸು ೪ ತೊಲೆ, ತಾಳೀಸಪತ್ರೆ ೪ ತೊಲೆ, ಶುದ್ಧಿಮಾಡಿಜ ಪರಂಗಿಚಕ್ಕೆ ೪ ತೊಲೆ, ಹಿಪ್ಪಲಿ ೮ ತೊಲೆ, ಮೋಡಿ ೮ ತೊಲೆ, ಶುಂಠಿ ೧೨ ತೊಲೆ, ಅಳಲೇಕಾಯಿಸಿಪ್ಪೆ ೧೨ ತೊಲೆ, ಬಾಲಮೆಣಸು ೧ ತೊಲೆ, ಪುಡಿಮಾವಿನಚಕ್ಕೆ ೧ ತೊಲೆ, ದಾಲಚಿನ್ನಿ ೧ ತೊಲೆ, ಲಾವಂಚ ೧ ತೊಲೆ, ಯಾಲಕ್ಕಿ ೧ ತೊಲೆ, ಲವಂಗಪತ್ರೆ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ೭॥ ಶೇರು ಸಕ್ಕರೆ ಹಾಕಿ ನೀರುಹಾಕಿ ಒಲೆಯಮೇಲಿಟ್ಟು ಉರಿಹಾಕಿ ತಂತುವಾಕ ಬಂದಕೂಡಲೇ ಮೇ ಲ್ಕಂಡ ಚೂರ್ಣಹಾಕಿ ಪಕ್ವವಾಗಿ ಲೇಹ್ಯಮಾಡಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಅರ್ಧತೊಲೆ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೭ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಆಮ್ಲಪಿತ್ಥ, ಅಜೀರ್ಣದ ಹೊಟ್ಟೇನೋವು, ಭೇದಿಗಳು ಆಗುವುದು, ಮೂಳೆ ಒಳಗಳ ಜ್ವರ (ಅಸ್ಥಿಜ್ವರ), ಹಸಿವು ಆಗದೆ ಇರುವಿಕೆ, ಹೊಟ್ಟೇಕೋಸಿನ ಎಲ್ಲಾ ತರಹದ ರೋಗಗಳು, ವಾಯುಸಂಬಂಧವಾದ ಎಲ್ಲಾ ರೋಗಗಳು ಗುಣವಾಗುತ್ತೆ. ಅಜೀರ್ಣದಿಂದುಂಟಾದ ಹೊಟ್ಟೆನೋವಿಗೆ ನಿಂಬೇಹಣ್ಣಿನ ಪಾನಕದೊಂದಿಗೆ ಕೊಡಬೇಕು.

## ವಾಂತಿಗಳಿಗೆ ಚಿಕಿತ್ಸೆಗಳು.

೧. ಶ್ರೀಗಂಧದ ಚಕ್ಕೆ ಕಾಲುತೊಲೆ, ಶುದ್ಧಿಮಾಡಿದ ಬಿಳೇಧೂಪ ಕಾಲು ತೊಲೆ, ಅತಿಮಧುರ ॥ ತೊಲೆ, ಬಿಳೇಜೀರಿಗೆ ॥ ತೊಲೆ, ದ್ರಾಕ್ಷಿ ೧ ತೊಲೆ, ನವಿಲುಗರಿ ಸುಟ್ಟಕರುಕು ॥ ತೊಲೆ, ಅರಿಸಿನ ೨ ಆಣೆತೂಕ, ಕುರಿಯಕೂದಲು

ಸುಟ್ಟ ಕರುಕು ಕಾಲುತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಜೇನುತುಪ್ಪ ಹಾಕಿ ಕಲಸಿ ಬಟ್ಟೆಗೆ ಲೇಪಿಸಿ ತುಪ್ಪದದೀಪ ಉರಿಸಿ ಈ ಬಟ್ಟೆ* ಬತ್ತಿಮಾಡಿ ದೀಪದಲ್ಲಿ ಸುಟ್ಟು ಕರುಕುಮಾಡಿ ಖಲ್ವದಲ್ಲಿ ಹಾಕಿ ಜೇನುತುಪ್ಪ ಹಾಕಿ ಅರೆದು ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಕೊಡುವುದು. ಇದರಿಂದ ವಾಂತಿ, ಬಿಕ್ಕಳಿಕೆ ಗುಣವಾಗುವುದು.

೨. ಬಿಳೇಜೀರಿಗೆ, ಯಾಲಕ್ಕಿ, ನಿಂಬೇಹಣ್ಣಿನ ಬೀಜದ ಪೊಪ್ಪು, ಸಕ್ಕರೆ ಇವು ಸಮಭಾಗ ತಂದು ಚನ್ನಾಗಿ ಅರೆದು ಜೇನುತುಪ್ಪದಲ್ಲಿ ಕಾಲುತೊಲೆ ಕಲಸಿ ಕೊಡಲು ವಾಂತಿ ನಿಲ್ಲುವುದು.

೩. ಯಾಲಕ್ಕಿ, ನಾಗಕೇಸರಿ, ಲವಂಗ, ಕಮಲದಗಡ್ಡೆ, ಸಕ್ಕರೆ ಇವು ಸಮಭಾಗ ತಂದು ಚನ್ನಾಗಿ ಅರೆದು ಇಟ್ಟುಕೊಳ್ಳುವುದು. ಕಾಲು ತೊಲೆಯಷ್ಟು ಜೇನುತುಪ್ಪದಲ್ಲಿ ಕಲಸಿ ಕೊಟ್ಟರೆ ವಾಂತಿ ನಿಲ್ಲುವುದು.

೪. ಅಮೃತಬಳ್ಳಿ, ಕೊನ್ನಾರಿಗಡ್ಡೆ, ಬಿಳೇಗರಿಕೆ, ಮೆಣಸು, ಶುಂಠಿ, ಯಾಲಕ್ಕಿ ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿ ಸ್ವಲ್ಪ ಜೇನುತುಪ್ಪ ಹಾಕಿ ಕಲಸಿಕೊಟ್ಟರೆ ವಾತದಿಂದ ಹುಟ್ಟಿದ ವಾಂತಿ ಗುಣವಾಗುವುದು.

೫. ಕಬ್ಬುತಂದು ಕೆಮ್ಮಣ್ಣು ಬಟ್ಟೆ ಸುತ್ತಿ ಬೆಂಬೂದಿಯಲ್ಲಿಟ್ಟು ರಸಹಿಂಡಿಕೊಂಡು ಇಟ್ಟುಕೊಳ್ಳುವುದು. ಯಾಲಕ್ಕಿ, ಹಸುವಿನಬೆಣ್ಣೆ, ಲಾವಂಚ, ಶುಂಠಿ, ಬಿಳೇಜೀರಿಗೆ ಇವು ದಿನಸಿಗೆ ಕಾಲುತೊಲೆ ತಂದು ಕರೇಬಟ್ಟೆಯಲ್ಲಿ ಕಟ್ಟಿ ಹಸುವಿನ ತುಪ್ಪದಲ್ಲಿ ಅದ್ದಿ ದೀಪ ಉರಿಸಿ ಅದರಲ್ಲಿ ಸುಟ್ಟು ಕರುಕುಮಾಡಿ ಇದರ ಸಮರಾಯಪುಡಿ ಸಕ್ಕರೆ ಹಾಕಿ ಕಲಸಿ ಕಾಲುತೊಲೆಯಷ್ಟು ಮೇಲ್ಕಂಡ ಕಬ್ಬಿನ ರಸದಲ್ಲಿ ಕಲಸಿ ಕೊಡಲು ವಾಂತಿ ನಿಲ್ಲುವುದು.

೬. ಕರೇಬಟ್ಟೆ ಸುಟ್ಟ ಕರುಕು ಕಾಲುತೊಲೆ ಹಸುವಿನ ಮೊಸರಿನಲ್ಲಿ ಹಾಕಿ ಯಾಲಕ್ಕಿ ಚೂರ್ಣಮಾಡಿದ್ದು ೨ ಗುರುಗಂಜಿ ತೂಕ, ನಿಂಬೇಹಣ್ಣಿನ ರಸ ಸ್ವಲ್ಪ ಹಾಕಿ ಕಲಸಿ ಕೊಟ್ಟರೆ ವಾಂತಿ ನಿಲ್ಲುವುದು.

೭. ಮಾದವಾಳದಕಾಯಿ ಒಳಗಿನ ಕುಸುಮ ಕಾಲುತೊಲೆ, ಯಾಲಕ್ಕಿ ಚೂರ್ಣಮಾಡಿದ್ದು ೨ ಗುರುಗಂಜಿ ತೂಕ, ಪಚ್ಚಕರ್ಪೂರ ೧ ಗುರುಗಂಜಿ ತೂಕ ಇವುಗಳನ್ನು ಜೇನುತುಪ್ಪದಲ್ಲಿ ಕಲಸಿಕೊಡಲು ವಾಂತಿ ನಿಲ್ಲುವುದು.

೮. ಆನಂದಭೈರವಿ ಮಾತ್ರೆ ೧, ಶ್ರೀಗಂಧ ಚೂರ್ಣಮಾಡಿದ್ದು ೧ ವರಹ ತೂಕ ಇವು ಎರಡು ಜೇನುತುಪ್ಪದಲ್ಲಿ ಕಲಸಿಕೊಡಲು ವಾಂತಿ ನಿಲ್ಲುವುದು.

೯. ಶುಂಠಿ ಸುಟ್ಟು ಕರುಕುಮಾಡಿ ಹಸುವಿನ ಮಜ್ಜಿಗೆಯಲ್ಲಿ ಕಲಸಿಕೊಡಲು ವಾಂತಿ ನಿಲ್ಲುವುದು.

೧೦. ಲವಂಗ ೧ ತೊಲೆ, ಜಾಕಾಯಿ ೧ ತೊಲೆ, ಹಿಪ್ಪಲಿ ೧ ತೊಲೆ, ದಾಲ್‌ಚಿನ್ನಿ ೧ ತೊಲೆ, ತಾಳೀಸಪತ್ರಿ ೧ ತೊಲೆ, ಚಂಗಲಕೋಷ್ಟ ೧ ತೊಲೆ, ಮೋಡಿ ೧ ತೊಲೆ, ಬಿಳೀಜೀರಿಗೆ ೧ ತೊಲೆ, ಮೆಣಸು ೩ ತೊಲೆ, ಯಷ್ಟಿಮಧುಕ ೧ ತೊಲೆ, ಶುಂಠಿ ೩ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಕೊಂಡು ಇದರ ಎರಡರಷ್ಟು ರಾಯಪುಡಿಸಕ್ಕರೆ ಒಂದು ಬಾಂಡ್ಲಿಯಲ್ಲಿ ಹಾಕಿ ನೀರುಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣಹಾಕಿ ಪಕ್ವವಾಗಿ ಲೇಹ್ಯವನ್ನುಮಾಡಿ ಧಾನ್ಯ ಪುಟದಲ್ಲಿ ೧೫ ದಿನ ಇಟ್ಟು ತೆಗೆದುಕೊಳ್ಳುವುದು. ಹೊತ್ತಿಗೆ ಯಳಚೀಬೀಜದ ಪ್ರಮಾಣ ಕೊಡು ವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೭-೧೪ ದಿನ ಕೊಡಬೇಕು. ಇಚ್ಛಾಪಥ್ಯ. ಚಲದಿಪದಾರ್ಥ ವರ್ಜ್ಯ. ಇದರಿಂದ ವಾಂತಿ ಗುಣವಾಗುವುದು. ರಾತ್ರಿ ಊಟಮಾಡಿದ್ದು ಬೆಳಿಗ್ಗೆ ವಾಂತಿಯಾಗುವುದು, ಬೆಳಿಗ್ಗೆ ಊಟಮಾಡಿದ್ದು ರಾತ್ರಿ ವಾಂತಿಯಾಗುವುದು, ಆಮ್ಲಪಿತ್ಥ ಮೊದಲಾದ ವಿಂಶತಿಪಿತ್ಥಗಳು ಗುಣ ವಾಗುವುದು.

೧೧. ವಾಂತಿಗೆ ಗಂಡೌಷಧ:—ಅಳಲೇಕಾಯಿಸಿಪ್ಪೆ, ಶುಂಠಿ, ಬಿಳೀ ಜೀರಿಗೆ, ಶುದ್ಧಿಮಾಡಿದ ಎಣ್ಣೆಬೆಳಗಾರ ಅರಳು ಮಾಡಿದ್ದು, ಪಟಿಕೆ ಅರಳು ಮಾಡಿದ್ದು, ಸಕ್ಕರೆ, ಜೇನುತುಪ್ಪ ಇವು ಸಮಭಾಗ ಚನ್ನಾಗಿ ಅರೆದು ನಿಂಬೇ ಹಣ್ಣಿನ ರಸದಲ್ಲಿ ಕಲಸಿ (ಗಂಡೌಷಧ) ನಾಲಿಗೆಗೆ ಲೇಪನಮಾಡಲು ವಾಂತಿ ಗುಣವಾಗುವುದು.

# ನಲವತ್ತೆರಡನೆಯ ಅಧ್ಯಾಯ.

## ಪ್ಲೀಹರೋಗ—ಔಷಧಗಳು.

### * ಪ್ಲೀಹರೋಗದ ಲಕ್ಷಣ.

ಮುಖ್ಯವಾಗಿ ಜ್ವರಾದಿ ರೋಗಗಳಲ್ಲಿ ಸರಿಯಾದ ಚಿಕಿತ್ಸೆಯಿಲ್ಲದೆ ಹಳೇ ನಚ್ಚಿಗೆತಿರುಗಿ ಆಹಾರವ್ಯವಹಾರದಲ್ಲಿ ಅಪಥ್ಯ ನಡೆಸುವುದರಿಂದಲೂ, ಮಲೇ ರಿಯಾ ಜ್ವರದಿಂದಲೂ, ಮತ್ತು ಬಲಹೀನತೆಯಿಂದಲೂ ಇದರ ಉಪಸರ್ಗ ವಾಗಿರುತ್ತೆ.

* ಜ್ವರದಗಡ್ಡೆಗೆ ಚಿಕಿತ್ಸೆಯನ್ನು ಮಾಡುವವರು ಗರ್ಭಿಣಿಸ್ತ್ರೀಯರಿಗೆ ಈ ಚಿಕಿತ್ಸೆಯನ್ನು ಮಾಡಬಾರದು.

ಅತ್ಯಂತ ವೆಗ್ಗಳವಾಗಿ ಆಹಾರವನ್ನು ತೆಗೆದುಕೊಂಡು ಆಯಾಸಪಡುವುದರಿಂದಲೂ, ಅತಿಯಾಗಿ ದಾರಿನಡೆಯುವುದರಿಂದಲೂ, ಬಲಾತ್ಕಾರದಿಂದ ಬಾಯಿಯಲ್ಲಿ ಬೆರಳನಿಕ್ಕಿ ವಾಂತಿಮಾಡುವುದರಿಂದಲೂ, ಅಶ್ವ ಮೊದಲಾದ ವಾಹನವನ್ನು ಬಹುವಾಗಿ ಏರುವುದರಿಂದಲೂ, ಆ ವಾಹನಗಳು ಮಾರ್ಗದಲ್ಲಿ ಸರಿಯಾಗಿ ನಡೆಯದೆ ವಿಷಮವಾಗಿ ನಡೆಯುವುದರಿಂದಲೂ, ಅತ್ಯಂತವಾಗಿ ಸ್ತ್ರೀಸಂಗವನ್ನು ಮಾಡುವುದರಿಂದಲೂ, ಅತ್ಯಂತ ಭಾರವನ್ನು ಹೊರುವುದರಿಂದಲೂ, ಮನುಷ್ಯನ ಎಡದ ಪಾರ್ಶ್ವದ ಅಳ್ಳೆಯಲ್ಲಿ ಪ್ಲೀಹವೆಂದು ಒಂದು ಮಾಂಸಖಂಡವಿಹುದು, ಆ ಅಳ್ಳೆಯಿಂದ ಕೆಳಕ್ಕೆ ಸ್ಥಾನತಪ್ಪಿ ಬೆಳೆವುದು, ತಾನು ಬೆಳೆಯದಿದ್ದರೂ ರಕ್ತವನ್ನು ಗ್ರಂಥಿರೂಪವಾಗಿ ರಸಾದಿ ಧಾತುಗಳಿಂದ ವೆಗ್ಗಳವಾಗಿ ಬೆಳೆಯಿಸುವುದು, ಆ ಪ್ಲೀಹದೊಡನೆ ಅಷ್ಠಿಲವ್ಯಾಧಿಯೂ ಕೂಡಿದರೆ ಅತಿ ಕಠಿಣವಾಗಿ ಆಮೆಯ ಬೆನ್ನಿನ ಹಾಗೆ ಅತ್ಯಂತ ಉನ್ನತವಾಗಿ ಬೆಳೆಯುವುದು. ಆ ಪ್ಲೀಹವ್ಯಾಧಿಯು ಮುಷ್ಟಿಪ್ರಮಾಣಕ್ಕೆ ಹೆಚ್ಚದಿದ್ದಾಗಲೇ ಶೀಘ್ರದಲ್ಲೇ ಚಿಕಿತ್ಸೆಯನ್ನು ಮಾಡಿಸುವುದು. ಮುಷ್ಟಿಪ್ರಮಾಣಕ್ಕೆ ಹೆಚ್ಚಿದರೆ ಅಸಾಧ್ಯವಹುದು, ಚಿಕಿತ್ಸೆಗೆ ಒಳಗಾಗಲಾರದು.

## ಜಲಕೂರ್ಮ ಲಕ್ಷಣ.

ದೇಹದಲ್ಲಿ ಶ್ಲೇಷ್ಮವು ಪ್ರಕೋಪಿಸಿ ವಾಯುವಿನಿಂದ ಪ್ರೇರಿಸಲ್ಪಟ್ಟದ್ದಾಗಿ ಎಡದ ಅಳ್ಳೆಯಲ್ಲಾಗಲಿ, ಬಲದ ಅಳ್ಳೆಯಲ್ಲಾಗಲಿ ಬೆಳೆಯುತ್ತಲಿರುವುದು. ನೀಳವಾಗಿಯೂ, ಕಠಿಣವಾಗಿಯೂ, ವೇದನೆಯಿಲ್ಲದೆ ಕಾಲುಗೆಟ್ಟು ತೊಡೆಗಳಿಗೆ ತ್ರಾಣವಿಲ್ಲದೆ ದೇಹದಲ್ಲಿ ಬಲಹಾನಿಯನ್ನೂ ಪಾಂಡುವರ್ಣವನ್ನೂ ಮಾಡುತ್ತಲಿರುತ್ತದೆ. ಅದನ್ನು ಜಲಕೂರ್ಮವೆಂದು ವೈದ್ಯರು ಹೇಳುವರು. ಶ್ಲೇಷ್ಮವಾತದಿಂದ ಹುಟ್ಟುವುದು, ಆ ವ್ಯಾಧಿಯಲ್ಲಿ ಶೀಘ್ರವಾಗಿ ಪ್ಲೀಹಚಿಕಿತ್ಸೆಯನ್ನೂ ಸಾಕಲ್ಯವಾಗಿ ಗುಲ್ಮಚಿಕಿತ್ಸೆಯನ್ನೂ ಮಾಡುವುದು. ಇದನ್ನೇ ಯಕೃದ್ದಾಲ್ಯುದರವೆನ್ನುವರು.

## ಜ್ವರದಗಡ್ಡೆಗೆ ಚಿಕಿತ್ಸೆಗಳು.

೧. ಸೂರಣಗಡ್ಡೆ ತುರುವಿ ಬಿಸಲಿನಲ್ಲಿ ಒಣಗಿಸಿಕೊಂಡದ್ದು ೪ ತೊಲೆ, ಸಾಂಬರಿ ಉಪ್ಪು ಕಾಲುತೊಲೆ, ಲಾಹೋರಿ ಉಪ್ಪು ಕಾಲುತೊಲೆ, ಕರೇ ಉಪ್ಪು ಕಾಲುತೊಲೆ, ಜವುಖಾರ ಕಾಲುತೊಲೆ, ಗಾಜು ಉಪ್ಪು ಕಾಲುತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಹೊತ್ತಿಗೆ ೨ ಅಣೆ ತೂಕ ಚೂರ್ಣವನ್ನು ಜೇನುತುಪ್ಪದಲ್ಲಿ ಕಲಸಿ ಕೊಡುವುದು. ಹೀಗೆ ಬೆಳಗ್ಗೆ ಸಾಯಂಕಾಲ ಜ್ವರದಗಡ್ಡೆ ಗುಣವಾಗುವವರಿವಿಗೂ ಕೊಡಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ.

೨. ಹಾವುಮೆಕ್ಕೇಕಾಯಿ ಒಣಗಿದ್ದು ೪ ಸುಲಿದು ಬೀಜ ತೆಗೆದುಹಾಕುವುದು. ಯವಕ್ಷಾರ ೧ ತೊಲೆ, ಸಜ್ಜಕ್ಷಾರ ೧ ತೊಲೆ, ಗಾಜುಲವಣ ೧ ತೊಲೆ,

[58]

ಬಿಡಾಲವಣ ೧ ತೊಲೆ, ಸೈಂಧವಲವಣ ೧ ತೊಲೆ, ಚೌಳುಪ್ಪು ೧ ತೊಲೆ, ಸಮುದ್ರಲವಣ ೧ ತೊಲೆ, ಸೌವರ್ಚಲವಣ ೧ ತೊಲೆ, ಇಂದ್ರಜವ ೧ ತೊಲೆ, ಶುಂಠಿ ೧ ತೊಲೆ, ಶುದ್ಧಿಮಾಡಿದ ಹಾಲುಹಿಂಗು ೧ ತೊಲೆ, ಹಿಪ್ಪಲಿ ೧ ತೊಲೆ, ಲವಂಗ ೧ ತೊಲೆ, ಕಟುಕರೋಹಿಣಿ ೧ ತೊಲೆ, ಸುನಾಮುಖಿ ೧ ತೊಲೆ, ಬಿದರುಉಪ್ಪು ೧॥ ತೊಲೆ, ನೆಲತಾಟಿಗಡ್ಡೆ ೧ ತೊಲೆ, ಕರ್ಕಾಟಕಶೃಂಗಿ ೧ ತೊಲೆ, ದಾಲಚಿನ್ನಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ಹಳೇಬೆಲ್ಲ ೧॥ ಶೇರು, ಹಸುವಿನಹಾಲು ಅರ್ಧ ಶೇರು ಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಹಾಕಿ ಜೇನುತುಪ್ಪ ||| ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯಮಾಡಿ ೧೨ ದಿನ ರಾಗಿಯಲ್ಲಿ ಪುಟವನ್ನು ಇಟ್ಟು ತೆಗೆದುಕೊಳ್ಳುವುದು. ಹೊತ್ತಿಗೆ ಯಳಚೀಬೀಜದ ಪ್ರಮಾಣ ಕೊಡಬೇಕು. ಹೀಗೆ ಬೆಳಿಗ್ಗೆ ೫-೭ ದಿನ ಕೊಡಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಹೊಟ್ಟೆ ಒಳಗಿನ ಗಡ್ಡೆ, ಮಹೋದರ, ಜಲೋದರ, ಗುಲ್ಮ, ಶೋಭೆ ಗುಣವಾಗುವುದು.

೩. ಓಮ ೧೨ ತೊಲೆ, ಕಾಬೂಲಿ ಅಳಲೇಕಾಯಿಸಿಪ್ಪೆ ೧೨ ತೊಲೆ, ಹಳೇಕಿಟ್ಟ ೯ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ತುಪ್ಪದ ಹಳೇಗಡಿಗೆಯಲ್ಲಿ ತೂಕದ ೧೨ ಶೇರು ನೀರುಹಾಕಿ ಮೇಲ್ಕಂಡ ದಿನಸುಗಳು ಹಾಕಿ ಬಾಯಿಗೆ ಮುಚ್ಚಳಮುಚ್ಚಿ ಕೆಮ್ಮಣ್ಣುಬಟ್ಟೆ ಸೀಲುಮಾಡಿ ದನಗಳ ಗೊಬ್ಬರದ ತಿಪ್ಪೆಯಲ್ಲಿ ೨೧ ದಿನ ಹೂತಿಟ್ಟು ನಂತರ ಈಚೆಗೆ ತೆಗೆದುಕೊಂಡು ದಿನಸುಗಳನ್ನು ಚನ್ನಾಗಿ ಕಿವಿಚಿ ಬಟ್ಟೆಯಲ್ಲಿ ಶೋಧಿಸಿದ ಧೃತಿಯನ್ನು ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೧೦-೧೫-೨೦ ದಿನ ಕೊಡಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಹಳೇಜ್ವರ, ಜ್ವರದಗಡ್ಡೆ ಗುಣವಾಗುವುದು.

೪. ಸೈಂಧವಲವಣ ೩ ತೊಲೆ, ಬಿಡಾಲವಣ ೩ ತೊಲೆ, ಸಮುದ್ರಲವಣ ೩ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಕೊಳವಳಿಕೆಸೊಪ್ಪಿನ ರಸ ೬ ತೊಲೆ, ಗರುಗದಸೊಪ್ಪಿನ ರಸ ೬ ತೊಲೆ ಹಾಕಿ ಚನ್ನಾಗಿ ಅರೆದು ಒಂದು ಮಡಿಕೆಯಲ್ಲಿ ಹಾಕಿ ಒಲೆಯಮೇಲಿಟ್ಟು ಕಾಯಿಸಿ ಸುಮಾರಾಗಿ ಸ್ವಲ್ಪ ಘಟ್ಟಿ ಆಗುತ್ತಲೆ ಬಿಲ್ಲೆಮಾಡಿ ಒಣಗಿಸಿಕೊಳ್ಳುವುದು. ಈ ಬಿಲ್ಲೆಯನ್ನು ೨ ಹಣತೆಗಳಲ್ಲಿಟ್ಟು ಕೆಮ್ಮಣ್ಣುಬಟ್ಟೆ ಸೀಲುಮಾಡಿ ೧ ಮೊಳಪುಟವನ್ನು ಇಟ್ಟರೆ ಶಿಂಧೂರವಾಗುತ್ತೆ. ಹೊತ್ತಿಗೆ ೨ ಆಣೆ ತೂಕ ಸಿಂಧೂರವನ್ನು ಜೇನುತುಪ್ಪದಲ್ಲಿ ಕಲಸಿ ಕೊಡುವುದು. ಹೀಗೆ ಬೆಳಿಗ್ಯೆ ಸಾಯಂಕಾಲ ಜ್ವರದಗಡ್ಡೆ ಗುಣವಾಗುವವರಿವಿಗೂ ಕೊಡುವುದು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಹೊಟ್ಟೆನೋವು,

ಅಜೀರ್ಣ, ಮೈ ಕೈ ಬಿಚ್ಚಗಿರುವುದು, ಹಸಿವಿಲ್ಲದಿರುವುದು, ಜ್ವರದಗಡ್ಡೆ, ಹೊಟ್ಟೆ ಕೋಶದ ರೋಗಗಳು ಗುಣವಾಗುವುವು.

೫. ಹಾವುಮೆಕ್ಕೇಕಾಯಿ ಬೀಜತೆಗೆದು ಒಣಗಿಸಿದ್ದು ೩ ತೊಲೆ, ಚೌಳುಪ್ಪು ೩ ತೊಲೆ ಇವೆರಡು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಹೊತ್ತಿಗೆ ಅವರೇಕಾಳಷ್ಟು ಚೂರ್ಣ ಬಾಯಿಯಲ್ಲಿ ಹಾಕಿಕೊಂಡು ಬಿಸಿನೀರು ಕುಡಿಯು ವದು. ಜ್ವರದಗಡ್ಡೆ ಗುಣವಾಗುವವರಿವಿಗೂ ಬೆಳಿಗ್ಗೆಹೊತ್ತು ಕೊಡಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಜ್ವರದಗಡ್ಡೆ, ಮಹೋದರ, ಗಡ್ಡೆ ಗುಣವಾಗುವುದು.

೬. ದುಂಪರಾಶ್ಮೆ ೧ ತೊಲೆ, ಲವಂಗ ೧ ತೊಲೆ, ಕೊತ್ತುಂಬರಿಬೀಜ ೧ ತೊಲೆ, ಶುಂಠಿ ೧ ತೊಲೆ, ಆಳಲೇಕಾಯಿಸಿಪ್ಪೆ ॥ ತೊಲೆ, ಭದ್ರಾಕ್ಷಿಗಡ್ಡೆ ೧ ತೊಲೆ ತಂದು ಹಸುವಿನಹಾಲಿನಲ್ಲಿ ಬೇಯಿಸಿ ಬಿಸಲಿನಲ್ಲಿ ಒಣಗಿಸಿಕೊಳ್ಳುವುದು. ಇವುಗಳೆಲ್ಲವನ್ನೂ ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಚೂರ್ಣ ಬಿಸಿನೀರಿನಲ್ಲಿ ಕೊಡುವುದು. ಜ್ವರದಗಡ್ಡೆ ಗುಣವಾಗುವ ವರಿವಿಗೂ ಬೆಳಿಗ್ಗೆಹೊತ್ತು ಕೊಡಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿ ಸಾರು ಅನ್ನ. ಇದರಿಂದ ಜ್ವರದಗಡ್ಡೆ ಗುಣವಾಗುವುದು.

೭. ಹಾವುಮೆಕ್ಕೇಕಾಯಿ ತಂದು ಒಳಗಿರುವ ಬೀಜ ತೆಗೆದು ಕುಟ್ಟಿ ಬಟ್ಟೆ ಯಲ್ಲಿ ಶೋಧಿಸಿಕೊಂಡ ರಸ ೧। ಶೇರು ಒಂದು ಮಡಿಕೆಯಲ್ಲಿ ಹಾಕಿ ಕಲ್ಲುಪ್ಪು ೧। ಶೇರು, ಸೈಂಧವಲವಣ ॥ ಶೇರು ಒಲೆಯಮೇಲಿಟ್ಟು ಕಾಯಿಸಿ ರಸ ಇಂಗುವ ವರಿಗೂ ಕಾಯಿಸಿ ಖಲ್ವದಲ್ಲಿ ಅರೆದು ಇಟ್ಟುಕೊಳ್ಳುವುದು. ದೊಡ್ಡವರಿಗೆ ಕಾಲು ತೊಲೆ, ಬಿಸಿನೀರಿನಲ್ಲಿ ಕೊಡುವುದು. ಜ್ವರದಗಡ್ಡೆ ಗುಣವಾಗುವವರಿಗೂ ಬೆಳಿಗ್ಗೆ ಹೊತ್ತು ಕೊಡಬೇಕು. ಭೇದಿ ಜಾಸ್ತಿ ಆದರೆ ಹಸುವಿನಮಜ್ಜಿಗೆ ಅನ್ನ ಕೊಡು ವುದು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಜ್ವರದ ಗಡ್ಡೆ ಗುಣವಾಗುವುದು.

೮. ಕಲ್ಲುಪ್ಪು ೧ ಶೇರು ಒಂದು ಮಡಿಕೆಯಲ್ಲಿ ಹಾಕಿ ಎಕ್ಕದ ಹೂವು ॥ ಶೇರು, ನೀರು ೩ ಶೇರು ಹಾಕಿ ಒಲೆಯಮೇಲಿಟ್ಟು ಕಾಯಿಸಿ ನೀರು ಇಂಗುವ ವರಿವಿಗೂ ಕಾಯಿಸಿ ಖಲ್ವದಲ್ಲಿ ಅರೆದು ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲು ತೊಲೆ ಬಿಸಿನೀರಿನಲ್ಲಿ ಕೊಡುವುದು. ಜ್ವರದಗಡ್ಡೆ ಗುಣವಾಗುವವರಿವಿಗೂ ಬೆಳಿಗ್ಗೆ ಹೊತ್ತು ಕೊಡಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದ ರಿಂದ ಜ್ವರದಗಡ್ಡೆ ಗುಣವಾಗುವುದು.

೯. ಅಜಗಂಡೆನಾಗೂರಿ ೧ ಶೇರು, ಗುಲಾಬಾಷ್‌ಗಡ್ಡೆ (ಸಂಜೆಮಲ್ಲಿಗೆಗಡ್ಡೆ) ೧ ಶೇರು, ಶುದ್ಧಿಮಾಡಿದ ಚೋಪುಚಿನ್ನಿ ೧ ಶೇರು ಇವು ಮೂರು ಹಸುವಿನಹಾಲು ೧॥ ಶೇರು ಹಾಕಿ ಇದರಲ್ಲಿ ೨ ದಿನ ನೆನೆಯಿಸಿ ಒರಳಲ್ಲಿ ಹಾಕಿ ಚನ್ನಾಗಿ ರುಬ್ಬಿ

ಬಟ್ಟೆಯಲ್ಲಿ ಶೋಧಿಸಿಕೊಂಡು ಒಂದು ಬಾಂಡ್ಲಿಯಲ್ಲಿ ಹಾಕಿ ಪಂಚಲವಣ ೫ ತೊಲೆ, ಲವಂಗ ೩ ತೊಲೆ, ಮೋಡಿ ೩ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿ ಮೇಲ್ಕಂಡ ಹಾಲಿನಲ್ಲಿ ಹಾಕಿ ಒಲೆಯಮೇಲಿಟ್ಟು ಕಾಯಿಸಿ ಜೇನುತುಪ್ಪ ೧ ಶೇರು ಹಾಕಿ ಚನ್ನಾಗಿ ಕಲಸಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಕೊಡುವುದು. ಜ್ವರದಗಡ್ಡೆ ಗುಣವಾಗುವವರಿವಿಗೂ ಬೆಳಿಗ್ಗೆ ಹೊತ್ತು ಕೊಡಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಜ್ವರದಗಡ್ಡೆ ಗುಣವಾಗುವುದು.

೧೦. ಬೀಜ ತೆಗೆದ ಹಾವುಮೆಕ್ಕೇಕಾಯಿ ರಸ ೧ ಶೇರು, ಹಸೀಶುಂಠಿ ರಸ ೧ ಶೇರು, ತಿನ್ನುವ ಉಪ್ಪು ೧ ಶೇರು ಇವುಗಳನ್ನು ಒಂದು ಮಡಿಕೆಯಲ್ಲಿ ಹಾಕಿ ಒಲೆಯಮೇಲಿಟ್ಟು ರಸ ಇಂಗುವವರಿವಿಗೂ ಕಾಯಿಸಿ ಖಲ್ವದಲ್ಲಿ ಅರೆದು ಇಟ್ಟು ಕೊಳ್ಳುವುದು. ಹೊತ್ತಿಗೆ ೨ ಆಣೆ ತೂಕ ಬಿಸಿನೀರಿನಲ್ಲಿ ಕೊಡುವುದು. ಜ್ವರದ ಗಡ್ಡೆ ಗುಣವಾಗುವವರಿವಿಗೂ ಬೆಳಿಗ್ಗೆ ಹೊತ್ತು ಕೊಡಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಜ್ವರದಗಡ್ಡೆ ಗುಣವಾಗುವುದು.

೧೧. ಬಲಿತ ತೆಂಗಿನಕಾಯಿ ಒಂದು ತಂದು ಜುಟ್ಟು ಕಿತ್ತುಹಾಕಿ ಕಣ್ಣಿನ ರಂಧ್ರ ತೆಗೆದು ಒಳಗಿರುವ ನೀರನ್ನು ತೆಗೆದುಹಾಕಿ ಅದರಲ್ಲಿ ಸೈಂಧವಲವಣ ೩ ತೊಲೆ, ದೊಡ್ಡಕಲ್ಲುಪ್ಪು ೩ ತೊಲೆ, ನಮ್ಮಖೆ ಖುರಾಸಾನಿ ೩ ತೊಲೆ, ಲಾಹೂರಿನಮ್ಮಕ್ ೩ ತೊಲೆ, ಮುಂಡಕಳ್ಳಿಹಾಲು ೩ ತೊಲೆ ಹಾಕಿ ರಂಧ್ರಕ್ಕೆ ಮರದ ಬಿರಟೆಹಾಕಿ ಕಾಯಿ ಸುಡದಂತೆ ೧೫ ಬೆರಣಿಯಲ್ಲಿ ಪುಟಹಾಕಿ ಮೇಲಿನ ಸಿಪ್ಪೆ ತೆಗೆದುಹಾಕಿ ಒಳಗಿರುವ ತೆಂಗಿನಕಾಯಿಯನ್ನು ಒರಳಲ್ಲಿ ಹಾಕಿ ಚನ್ನಾಗಿ ರುಬ್ಬಿ ಯುಳಚೀಬೀಜದ ಪ್ರಮಾಣ ಮಾತ್ರೆಮಾಡಿ ಭತ್ತದ ಸಣ್ಣತೌಡಿನಲ್ಲಿ ಉರುಳಿಸಿ ನುಂಗಿಸುವುದು. ಬೆಳಿಗ್ಗೆ ೭ ದಿವಸ ಕೊಡಬೇಕು. ಭೇದಿ ಜಾಸ್ತಿ ಆದರೆ ಹಸುವಿನಮಜ್ಜಿಗೆ ಅನ್ನ ಕೊಡುವುದು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಜ್ವರದಗಡ್ಡೆ ಗುಣವಾಗುವುದು.

೧೨. ಸಫೂಫೆವಾಸ್ತೆ ತಾಪತಿಲ್ಲಿ (ಜ್ವರದಗಡ್ಡೆಗೆ):—ಸೋಂಟ್ ೧ ತೊಲೆ, ಅಜವಾನಿ ಕಿರ್ಮಾನಿ ೧ ತೊಲೆ, ಸಜ್ಜಿಕಾರ್ ೧ ತೊಲೆ, ಕಾಲೀಮಿರ್ಚಿ ೧ ತೊಲೆ, ಬಚ್ ೧ ತೊಲೆ, ಜೀರಾ ೧ ತೊಲೆ, ಅಜವಾ಼ ೧ ತೊಲೆ, ಖುರಾಸಾನಿ ಅಜವಾ಼ ೧ ತೊಲೆ, ಚೋರಿಅಜವಾ಼ ೧ ತೊಲೆ, ಹಲೀಲೆಸಿಸಾಯಿ ೧ ತೊಲೆ, ಹಲೀಲೆ ಕಾಬೂಲಿ ೧ ತೊಲೆ, ದುಮ್ಮಿಕಾಲೀಮಿರ್ಚಿ ೧ ತೊಲೆ, ಕುಟ್ಕಿ ೧ ತೊಲೆ, ದಂತ್ಯಾ ಖಾರ್ ೧ ತೊಲೆ, ಪೊಪ್ಪಡ್‌ಕಾರ್ ೧ ತೊಲೆ, ನಮ್ಮಖೆಸಂಗ್ ೧ ತೊಲೆ, ಬಂಗ ಡೀಕಾನಮ್ಮಕ್ ೧ ತೊಲೆ, ಕಾಲಾನಮ್ಮಕ್ ೧ ತೊಲೆ, ಸೈಂದಾನಮ್ಮಕ್ ೧ ತೊಲೆ, ಖಾತಾನಮ್ಮಕ್ ೧ ತೊಲೆ, ಹಲ್ದಿ ೧ ತೊಲೆ, ಮೊಗಜೆಗಜ್‌ಗಾ ೧ ತೊಲೆ, ಬಾಯಿ ಬಡೆಂಗ್ ೧ ತೊಲೆ, ಪಿಪ್ಪಲಾಮೋಡ್ ೧ ತೊಲೆ, ಧನಿಯಾ ೧ ತೊಲೆ, ಪೋಸ್ತೆ

ತುರಂಜ್ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಗರುಗದ ಸೊಪ್ಪಿನ ರಸದಲ್ಲಿ ಅರೆದು ಬಿಸಲಿನಲ್ಲಿ ಒಣಗಿಸುವುದು, ಅನಂತರ ನಿಂಬೇಹಣ್ಣಿನ ರಸದಲ್ಲಿ ಅರೆದು ಬಿಸಲಿನಲ್ಲಿ ಒಣಗಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಹೊತ್ತಿಗೆ ಕಾಲುತೊಲೆ, ಅಥವಾ ಅರ್ಧತೊಲೆ ಬಿಸಿನೀರಿನಲ್ಲಿ ಕೊಡುವುದು. ಜ್ವರದಗಡ್ಡೆ ಗುಣವಾಗುವವರಿವಿಗೂ ಬೆಳಿಗ್ಗೆ ಹೊತ್ತು ಕೊಡಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಜ್ವರದಗಡ್ಡೆ ಗುಣ ವಾಗುವುದು.

೧೩. ತಾಟಿಬೆಲ್ಲ ೨ ಶೇರು, ಉಪ್ಪು ೨ ಶೇರು, ರಕ್ತಬೋಳ ೩ ತೊಲೆ ಇವುಗಳನ್ನು ಒರಳಲ್ಲಿ ಹಾಕಿ ಚನ್ನಾಗಿ ಅರೆದಿಟ್ಟುಕೊಳ್ಳುವುದು. ಹೊತ್ತಿಗೆ ಯಳಚೀಬೀಜದ ಪ್ರಮಾಣ ಕೊಡುವುದು. ಬೆಳಿಗ್ಗೆ ಸಾಯಂಕಾಲ ಜ್ವರದಗಡ್ಡೆ ಕರಗುವವರಿವಿಗೂ ಕೊಡಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಜ್ವರದಗಡ್ಡೆ ಗುಣವಾಗುವುದು.

೧೪. ನೆಲತಂಗಡಿ ೧ ಪಾವು, ತಾರೇಕಾಯಿಸಿಪ್ಪೆ ೧ ತೊಲೆ ಇವೆರಡು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಹೊತ್ತಿಗೆ ‖ ತೊಲೆ, ಬಿಸಿನೀರಿನಲ್ಲಿ ಕೊಡಬೇಕು. ಹೀಗೆ ಬೆಳಿಗ್ಗೆ ಹೊತ್ತು ೧೧ ದಿನ ಕೊಡುವುದು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಜ್ವರದಗಡ್ಡೆ ಗುಣ ವಾಗುವುದು.

೧೫. ಅಪ್ಪಟ ಒಳ್ಳೆ ಎಳ್ಳು ಎಣ್ಣೆಯಲ್ಲಿ ಕೂಗಟಿಕೆಗಿಡದ ಬೊಬ್ಬಡೆ ಚನ್ನಾಗಿ ಕುಟ್ಟಿ ಕಾಯಿಸಿ ಶೋಧಿಸಿಕೊಂಡು ಶರೀರಪ್ರಕೃತಿ ಅನುಸರಿಸಿ ಬೆಳ್ಳಿ ಎರಡಾಣೆತೂಕ ಕೊಡುವುದು. ಹೀಗೆ ಬೆಳಿಗ್ಗೆ ಹೊತ್ತು ೩ ದಿವಸ ಕೊಟ್ಟರೆ ಜ್ವರದಗಡ್ಡೆ ಕರಗಿಹೋಗುವುದು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ.

೧೬. ೭ ಕವಡೆ (ದೊಡ್ಡದು) ಒಂದು ಚಿಕ್ಕ ಶೀಸೆಯಲ್ಲಿ ಹಾಕಿ ಅದು ಮುಣುಗುವಷ್ಟು ಶೀಮೆಕಾಡಿ (ವಿನಿಗರ್) ಹಾಕಿ ಸೂರ್ಯಪುಟದಲ್ಲಿಟ್ಟರೆ ಭಸ್ಮ ವಾಗುವುದು. ಇದನ್ನು ಖಲ್ವದಲ್ಲಿ ಹಾಕಿ ಅರೆದು ಇಟ್ಟುಕೊಂಡು ಹೊತ್ತಿಗೆ ೪ ಗುರುಗಂಜಿಯಷ್ಟು ಭಸ್ಮವನ್ನು ಜೇನುತುಪ್ಪದಲ್ಲಿ ಕಲಸಿ ಕೊಡುವುದು. ಜ್ವರದಗಡ್ಡೆ ಗುಣವಾಗುವವರಿವಿಗೂ ಬೆಳಿಗ್ಗೆ ಸಾಯಂಕಾಲ ಕೊಡಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಜ್ವರದಗಡ್ಡೆ ಗುಣವಾಗುವುದು.

೧೭. ಬೀಜತೆಗೆದ ಹಾವುಮೆಕ್ಕೇಕಾಯಿ ರಸ ‖ ಶೇರು, ತಿನ್ನುವ ಉಪ್ಪು ೧ ಪಾವು, ಹಸುವಿನಹಾಲು ೧ ಪಾವು ಇವು ಒಂದು ಮಡಿಕೆಯಲ್ಲಿ ಹಾಕಿ ರಸವೆಲ್ಲ ಇಂಗುವವರಿವಿಗೂ ಕಾಯಿಸಿದ ಕೂಡಲೇ ಕರೇಹತ್ತಿಸೊಪ್ಪಿನ ರಸ ಅಳತೆ ಅರ

ಪಾವು ಹಾಕಿ ಕಾಯಿಸಿ ತೆಗೆದು ಖಲ್ವದಲ್ಲಿ ಅರೆದು ಇಟ್ಟುಕೊಳ್ಳುವುದು. ಒಬ್ಬ ಮನುಷ್ಯನಿಗೆ ೧ ಗುರುಗಂಜಿಗಾತ್ರ ಬಿಸಿನೀರಿನಲ್ಲಿ ಕೊಡುವುದು. ಜ್ವರದಗಡ್ಡೆ ಕರಗುವವರಿವಿಗೂ ಬೆಳಿಗ್ಗೆ ಹೊತ್ತು ಕೊಡಬೇಕು. ಇದಕ್ಕೆ ಪಥ್ಯ ತೊಗರೀ ಬೇಳೆ ಸಿಹಿಸಾರು ಅನ್ನ. ಇದರಿಂದ ಜ್ವರದಗಡ್ಡೆ ಗುಣವಾಗುವುದು.

೧೮. ತಿನ್ನುವ ಉಪ್ಪು ೬ ತೊಲೆ, ಸೇಂದಾನಮ್ಮಕ್ ೪ ತೊಲೆ, ಬಂಗಡಿ ನಮ್ಮಕ್ ೪ ತೊಲೆ, ಪಾದರಾನಮ್ಮಕ್ ೪ ತೊಲೆ, ಕಾಚುನಮ್ಮಕ್ ೪ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡುವುದು. ಇದರ ಎರಡರಡರಷ್ಟು ಬೀಜ ತೆಗೆದ ಹಾವುಮೆಕ್ಕೇಕಾಯಿ ರಸ, ಹಸುವಿನ ಹಾಲು ೧ ತೂಕ, ಇವುಗಳೆಲ್ಲವನ್ನೂ ಒಂದು ಮಡಿಕೆಯಲ್ಲಿ ಹಾಕಿ ರಸವೆಲ್ಲ ಇಂಗುವವರಿವಿಗೂ ಕಾಯಿಸಿದ ಕೂಡಲೇ ಕರೇಹತ್ತಿಸೊಪ್ಪಿನ ರಸ ೧ ಆಳತೆ ಅರಪಾವು ಹಾಕಿ ಕಾಯಿಸಿ ತೆಗೆದು ಖಲ್ವದಲ್ಲಿ ಅರೆದು ಇಟ್ಟುಕೊಳ್ಳುವುದು. ಒಬ್ಬ ಮನುಷ್ಯನಿಗೆ ೨ ಅಣೆ ತೂಕ ಬಿಸಿನೀರಿನಲ್ಲಿ ಕೊಡುವುದು. ಹೀಗೆ ಬೆಳಿಗ್ಗೆ ಹೊತ್ತು ೫-೬ ದಿವಸ ಕೊಡಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಜ್ವರದಗಡ್ಡೆ ಗುಣವಾಗುವುದು.

೧೯. ಬಲಿತ ತೆಂಗಿನಕಾಯಿ ಒಂದು ತಂದು ಜುಟ್ಟು ಕಿತ್ತುಹಾಕಿ ಕಣ್ಣಿನ ರಂಧ್ರ।ತೆಗೆದು ಒಳಗಿರುವ ನೀರನ್ನು ತೆಗೆದುಹಾಕಿ ಪಂಚಲವಣ ೫ ತೊಲೆ, ಗುಬುಚಿ ಮುಳ್ಳಿನ ಗಿಡದಹುವ್ವು ೯ ತೊಲೆ, ಮುಂಡಕಳ್ಳಿ ಹಾಲು ೨ ತೊಲೆ ಇವುಗಳನ್ನು ತೆಂಗಿನಕಾಯಿನಲ್ಲಿ ಹಾಕಿ ರಂಧ್ರಕ್ಕೆ ಮರದ ಬಿರಟೆಹಾಕಿ ದನವಿನಗೊಬ್ಬರದಲ್ಲಿ ೧೨ ದಿನ ಇಟ್ಟು ತೆಗೆದುಕೊಂಡು ಒಲೆಯಲ್ಲಿ ೫ ದಿನ ಹೂಳಿಟ್ಟು ತೆಗೆದು ಮೇಲಿನ ಸಿಪ್ಪೆ ತೆಗೆದುಹಾಕಿ ಒಳಗಿರುವ ತೆಂಗಿನಕಾಯಿಯನ್ನು ಒರಳಲ್ಲಿ ಹಾಕಿ ಚನ್ನಾಗಿ ಅರೆದು ಯಳಚೀಬೀಜದ ಪ್ರಮಾಣ ಮಾತ್ರೆ ಮಾಡುವುದು. ಬೆಳಿಗ್ಗೆ ಹೊತ್ತು ಬಿಸಿನೀರಿನಲ್ಲಿ ೧ ಮಾತ್ರೆ ಕೊಡಬೇಕು. ಹೀಗೆ ೬ ದಿವಸ ಕೊಡುವುದು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಜ್ವರದಗಡ್ಡೆ ಗುಣವಾಗುವುದು.

೨೦. ಚಿಟ್ಟರಳೆಣ್ಣೆ ||| ಶೇರು, ಮುಂಡಕಳ್ಳಿಹಾಲು ಅರಪಾವು, ಹೇರಳೆ ಕಾಯಿನ ರಸ ಅರಪಾವು, ತಿನ್ನುವ ಉಪ್ಪು ಅರಪಾವು, ಸೈಂಧವಲವಣ ಅರ ಪಾವು, ಅಳಲೇಕಾಯಿಸಿಪ್ಪೆ ಅರಪಾವು ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಎಲ್ಲವನ್ನೂ ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಲೇಹ್ಯ ಪಕ್ವವಾಗಿ ಕಾಯಿಸಿ ಇಳಿಸಿಕೊಂಡು ಖಲ್ವದಲ್ಲಿ ಚನ್ನಾಗಿ ಅರೆದು ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಬೆಲ್ಲದಲ್ಲಾಗಲಿ, ತುಪ್ಪದಲ್ಲಾಗಲಿ, ಮೊಸರಿನಲ್ಲಾಗಲಿ ಕೊಡುವುದು. ಹೀಗೆ ಬೆಳಿಗ್ಗೆ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಭೇದಿ ಜಾಸ್ತಿ ಆದರೆ

ಮಜ್ಜಿಗೆ ಅನ್ನ ಕೊಡುವುದು. ಇದರಿಂದ ಜ್ವರದಗಡ್ಡೆ, ಉದರಗಡ್ಡೆ, ಹೊಟ್ಟೆ ಕುಟ್ಟು ಗುಣವಾಗುವುದು.

೨೧. ಚಿಟ್ಟರಳೆಣ್ಣೆ ‖ ಶೇರು, ಬಿಳೇ ಈರುಳ್ಳಿ ರಸ ಅರಪಾವು, ಬೀಜ ತೆಗೆದ ಹಾವುಮೆಕ್ಕೇಕಾಯಿ ರಸ ಅರಪಾವು, ಶುದ್ಧಿಮಾಡಿದ ಹಿಂಗು ‖ ತೊಲೆ, ಸೈಂಧವಲವಣ ೧ ತೊಲೆ ಚೂರ್ಣ ಮಾಡುವುದು. ಇವುಗಳೆಲ್ಲವನ್ನೂ ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವುದು. ಹೊತ್ತಿಗೆ ‖ ತೊಲೆ ಬಿಸಿನೀರಿನಲ್ಲಿ ಕೊಡುವುದು. ಹೀಗೆ ಬೆಳಿಗ್ಗೆ ಹೊತ್ತು ೭ ದಿನ ಕೊಡಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಜ್ವರದಗಡ್ಡೆ ಗುಣವಾಗುವುದು.

೨೨. ಕಾಡುಮೆಣಸಿನಸೊಪ್ಪು ೪ ತೊಲೆ, ಮಂಗರವಳ್ಳಿ ೪ ತೊಲೆ ಬೆಂಕಿಯಲ್ಲಿ ಕಾಯಿಸಿ ಹಸುವಿನತುಪ್ಪದಲ್ಲಿ ಹುರಿದುಕೊಳ್ಳುವುದು, ಹೊಟ್ಟು ತೆಗೆದ ಈರುಳ್ಳಿ ೪, ಹೊಟ್ಟು ತೆಗೆದ ಬೆಳ್ಳುಳ್ಳಿ ೪, ತಿನ್ನುವ ಉಪ್ಪು ‖ ತೊಲೆ, ಹುಣಿಸೇಹಣ್ಣು ‖ ತೊಲೆ ಇವು ನಾಲ್ಕು ದಿನಸು ಹಸುವಿನ ತುಪ್ಪದಲ್ಲಿ ಹುರಿದುಕೊಳ್ಳುವುದು. ಎಲ್ಲವನ್ನೂ ಖಲ್ವದಲ್ಲಿ ಚೆನ್ನಾಗಿ ಅರೆದು ಯಳಚೀಬೀಜದ ಪ್ರಮಾಣ ಮಾತ್ರೆ ಮಾಡುವುದು. ಬೆಳಿಗ್ಗೆ ೧ ಮಾತ್ರೆ ಬಾಯಿಯಲ್ಲಿ ಹಾಕಿಕೊಂಡು ಬಿಸಿನೀರು ಕುಡಿಯುವುದು. ಜ್ವರದಗಡ್ಡೆ ಗುಣವಾಗುವವರಿವಿಗೂ ಕೊಡುವುದು ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಜ್ವರದಗಡ್ಡೆ ಗುಣವಾಗುವುದು.

೨೩. ತಿನ್ನುವ ಉಪ್ಪು ೧ ಶೇರು, ಕೆಸವೇದಂಟಿನ ರಸ ೧ ಶೇರು ಇವೆರಡೂ ಒಂದು ಮಡಿಕೆಯಲ್ಲಿ ಹಾಕಿ ಒಲೆಯಮೇಲಿಟ್ಟು ರಸ ಇಂಗುವವರಿವಿಗೂ ಕಾಯಿಸಿ ಖಲ್ವದಲ್ಲಿ ಅರೆದಿಟ್ಟುಕೊಳ್ಳುವುದು. ಹೊತ್ತಿಗೆ ೨ ಆಣೆ ತೂಕ ಬಿಸಿನೀರಿನಲ್ಲಿ ಕೊಡುವುದು. ಜ್ವರದಗಡ್ಡೆ ಗುಣವಾಗುವವರಿವಿಗೂ ಬೆಳಿಗ್ಗೆ ಹೊತ್ತು ಕೊಡಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಜ್ವರದ ಗಡ್ಡೆ ಗುಣವಾಗುವುದು.

೨೪. ಸಂಜೆಮಲ್ಲಿಗೆ ಗಡ್ಡೆ ತಂದು ಸಣ್ಣ ಸಣ್ಣಗೆ ಕತ್ತರಿಸಿ ತೊಗರೀಬೇಳೆಯಲ್ಲಿ ಹಾಕಿ ಉಪ್ಪು ಕಾರ ಮುಂತಾದ್ದು ಹಾಕಿ ಸಾರುಮಾಡಿಸಿ ದಿನ ತಪ್ಪಿ ದಿನ ೫ ದಿನ ಊಟಮಾಡಿದರೆ ಜ್ವರದಗಡ್ಡೆ ಕರಗಿ ಹೋಗುವುದು.



# ನಲವತ್ತಮೂರನೆಯ ಅಧ್ಯಾಯ.

## ಹೃದಯರೋಗ—ಔಷಧಗಳು.

### ೧. ಹೃದ್ರೋಗ ಲಕ್ಷಣ.

ಉಷ್ಣಪದಾರ್ಥಗಳು, ಗುರುದ್ರವ್ಯಗಳು, ಹುಳಿ, ಕಾರ, ವಗರು, ಕಹಿ ಈ ಪದಾರ್ಥಗಳನ್ನು ಬಹಳವಾಗಿ ಊಟಮಾಡುವಿಕೆ, ಬಹಳ ಶ್ರಮೆಯು, ಅಭಿಘಾತವು ಇವುಗಳನ್ನು ಹೊಂದುವಿಕೆ, ಅಧಿಕವಾಗಿ ಊಟಮಾಡುವಿಕೆ, ಅತಿ ಮೈಥುನವನ್ನಾಚರಿಸುವಿಕೆ, ಹೆಚ್ಚಾಗಿ ಚಿಂತಿಸುವಿಕೆ, ವೇಗವಾಗಿ ಸಂಚರಿಸುವಿಕೆ ಇವುಗಳಿಂದಲೂ ದೇಹದಲ್ಲಿರುವ ವಾತಾದಿ ದೋಷಗಳು ಕೆಟ್ಟು ಹೃದಯದಲ್ಲಿ ಪ್ರವೇಶಿಸಿ ಬಾಧೆಯನ್ನುಂಟುಮಾಡುವುವು. ಇದು ಹೃದ್ರೋಗವೆನ್ನಲ್ಪಡುವುದು.

ಹೃದ್ರೋಗವು ವಾತ, ಪಿತ್ಥ, ಕಫ, ಸನ್ನಿಪಾತ, ಕ್ರಿಮಿ ಇವುಗಳಿಂದ ಉತ್ಪನ್ನವಾಗಿ ಐದು ವಿಧವಾಗಿರುವುದು.

ವಾತ ಹೃದ್ರೋಗದಲ್ಲಿ :—ಹೃದಯವನ್ನೆಳೆದಂತೆಯೂ, ಸೂಜಿಗಳಿಂದ ಚುಚ್ಚಿದಂತೆಯೂ, ಕಟ್ಟಿಗೆಯಿಂದ ಹೊಡೆದಂತೆಯೂ, ಕೊಡಲಿಯಿಂದ ಭೇದಿಸಿದಂತೆಯೂ ಇರುವುದು.

ಪಿತ್ಥ ಹೃದ್ರೋಗದಲ್ಲಿ :—ದಾಹ, ಕಂಠಶೋಷವು, ಶರೀರದಲ್ಲಿ ಉರಿ, ತಾಪವು, ಆಯಾಸವು, ಮೂರ್ಛೆ, ಹುಳಿತೇಗು, ಬೆವರು, ಮುಖಶೋಷವು ಮೊದಲಾದ ಚಿಹ್ನೆಗಳು ಕಂಡುಬರುವುವು.

ಕಫ ಹೃದ್ರೋಗದಲ್ಲಿ :—ಶರೀರಭಾರವು, ಕೆಮ್ಮು, ಅರುಚಿ, ಅಗ್ನಿಮಾಂದ್ಯವು, ಮೈಮುರಿಯುವಿಕೆ, ಬಾಯಿ ಸಿಹಿಯಾಗಿರುವಿಕೆ ಮೊದಲಾದ ಚಿಹ್ನೆಗಳು ಕಂಡು ಬರುವುವು.

ಸನ್ನಿಪಾತ ಹೃದ್ರೋಗದಲ್ಲಿ :—ವಾತ, ಪಿತ್ಥ, ಕಫ ಲಕ್ಷಣಗಳೆಲ್ಲವೂ ಕಾಣಬರುವುವು.

ಕ್ರಿಮಿಜ ಹೃದ್ರೋಗದಲ್ಲಿ :—ಓಕರಿಕೆ, ಅರೋಚಕವು, ಶೂಲೆ, ಬಾಯಲ್ಲಿ ಜೊಲ್ಲು, ಶೋಷವು ಮೊದಲಾದ ಲಕ್ಷಣಗಳು ಕಂಡುಬರುವುವು.

### ಹೃದಯರೋಗದಲ್ಲಿ ಅಸಾಧ್ಯ ಲಕ್ಷಣ.

೧. ರೋಮಾಂಚವು, ಕಣ್ಣುಗಳಲ್ಲಿ ಕೆಂಪು, ಹೃದಯಶೂಲೆ, ನಿಟ್ಟುಸುರು ಇವುಗಳು ಇರುವ ಹೃದಯರೋಗ ಅಸಾಧ್ಯವು.

೨. ವಾಯುವು ನಾಭಿ, ಗುದಗಳ ಒಳಹೊಕ್ಕು ವಂಕ್ಷಣಪ್ರದೇಶವನ್ನು ಆಶ್ರಯಿಸಿ ಗುದ, ಹೃದಯಗಳನ್ನು ಹಿಡಿದುಕೊಂಡು ಮಲ, ವಸ್ತಿ, ಸಿರಸ್ಸು,

ನಾಭಿ ಇವುಗಳನ್ನು ಗಟ್ಟಿಯಾಗಿ ಹಿಡಿದು ಆಯಾ ಸ್ಥಳಗಳಲ್ಲಿ ರೋಗಗಳನ್ನುಂಟು ಮಾಡಿ ವಂಕ್ಷಣ ಪ್ರದೇಶಗಳಲ್ಲಿ ಶೂಲೆಗಳನ್ನುಂಟುಮಾಡಿ ನೀರಡಿಕೆ, ಮಲ, ಭೇದ, ಶ್ವಾಸ ಇವುಗಳನ್ನು ಹುಟ್ಟಿಸುತ್ತದೆ. ವಕ್ಷಸ್ಥಳದಲ್ಲಿ ಹಿಡಿದುಕೊಂಡು ಕಣ್ಣು ದೊಡ್ಡದಾಗಿ ಗುಡ್ಡೆಗಳು ಅಲ್ಲಾಡದಂತೆ ಮಾಡುತ್ತದೆ. ಕ್ಷೀಣದೇಹಿಗೇ ಆಗಲಿ, ಬಲಿಷ್ಠನಿಗೇ ಆಗಲಿ ಈ ಲಕ್ಷಣಗಳು ಇದ್ದ ಹೃದಯರೋಗವು ಅಸಾಧ್ಯವು.

## ಹೃದ್ರೋಗ ಚಿಕಿತ್ಸೆಗಳು.

೧. ದಶಮೂಲ, ಕಳ್ಳಂಗಡಲೆ, ಶುಂಠಿ ಇವುಗಳ ಕಷಾಯದಲ್ಲಿ ಕಲ್ನಾರು, ಶಿಲಾಜಿತು, ಅರಗುಗಳ ಎರಡೆರಡು ಆಣೆ ತೂಕವಂ ಚೂರ್ಣಮಾಡಿ ಹಾಕಿ ಕುಡಿಯಕೊಡಲು ವಾಯುವಿನಿಂದುಂಟಾದ ಹೃದ್ರೋಗ, ಎದೆಶೂಲೆ, ಅಳ್ಳೆಶೂಲೆ, ಗುಲ್ಮರೋಗ, ಗುಲ್ಮಶೂಲೆ, ಎಡಬಿಡದಿರುವ ನೋವು ಇವು ಪರಿಹಾರವಹವು.

೨. ಶುದ್ಧಿಮಾಡಿದ ಹಿಂಗು, ಸೈಂಧವಲವಣ, ಶುಂಠಿಗಳ ಚೂರ್ಣವನ್ನು, ಶುಂಠಿ ಕಷಾಯದಲ್ಲಿ ಹಾಕಿ ಕುಡಿಯಕೊಡಲು ಹೃದಯಶೂಲೆ, ಪಾರ್ಶ್ವಶೂಲೆ, ವಾಯು, ಹೊಟ್ಟೆಯುಬ್ಬರ, ಗುಲ್ಮ, ಉದರ ರೋಗ ಇವುಗಳೆಲ್ಲವೂ ಪರಿಹಾರವಹವು.

೩. ಸೈಂಧವಲವಣವನ್ನೂ ಯವಕ್ಷಾರವನ್ನೂ ಚೂರ್ಣಮಾಡಿ ಬಿಸಿಯ ತುಪ್ಪದಿಂ ನಾಲ್ಕು ವರಹ ತೂಕದಂತೆ ತೆಗೆದುಕ್ಕೊಳ್ಳಲು ಎದೆನೋವು, ಎದೆ ಒಡೆತ, ನೋವು, ಶ್ವಾಸ, ಗುಲ್ಮ, ಕಾಸಗಳು ಪರಿಹಾರವಹವು.

೪. ಸೈಂಧವಲವಣ ಹುರಿದು ಎಣ್ಣೆಯಲ್ಲಿ ಕಲಸಿ ಎದೆಗೆ ಲೇಪಿಸಲು ಎದೆ ನೋವು ಪರಿಹಾರವಾಗುವುದು.

೫. ಶುದ್ಧಿಮಾಡಿದ ತಿಗಡೆ, ಚಂಗಲಕೋಷ್ಠ, ಬಜೆ, ನೆಲಸಿಂದ, ಬೋಳದರಗ, ಸೈಂಧವಲವಣ, ವಾಯುವಿಳಂಗ ಇವುಗಳಂ ಗೋಮೂತ್ರದಲ್ಲಿ ಅರೆದು ಅದರಲ್ಲಿಯೇ ಕದಡಿ ತೆಗೆದುಕ್ಕೊಳ್ಳಲು ಕ್ರಿಮಿಹರ, ವಿರೇಚನವಹುದು.

೬. ದಶಮೂಲವೆಂದರೆ—ಬಿಲ್ವ, ನರುವಲ, ಹೆಮ್ಮರ, ಶಿವನೆ, ಪಾದರಿ ಇವುಗಳು ಐದು, ಒಂದೆಲೆಹೊನ್ನೆ, ಮೂರೆಲೆಹೊನ್ನೆ, ಹೆಗ್ಗುಳ್ಳ, ನೆಲಗುಳ್ಳ, ನೆಗ್ಗಲು ಇವು ಐದು, ಹತ್ತು ನೇರಿದರೆ ದಶಮೂಲವೆನ್ನಿಸುತ್ತದೆ. ಇವುಗಳ ಕಷಾಯಕ್ಕೆ ಯವಕ್ಷಾರ, ಸೈಂಧವಲವಣ ಸೇರಿಸಿ ಕುಡಿಸುವುದರಿಂದ ಹೃದಯರೋಗ, ಗುಲ್ಮ, ಶೂಲೆ, ಕೆಮ್ಮು, ಉಬ್ಬಸ ಇವುಗಳು ಕಡಿಮೆಯಾಗುತ್ತವೆ.

## ೨. ಉದರರೋಗ ಲಕ್ಷಣ.

ಹೊಟ್ಟೆಯುಬ್ಬರ, ನಡೆಯುವುದಕ್ಕೆ ಶಕ್ತಿಯಿಲ್ಲದಿರುವಿಕೆ, ಬಲಹೀನತೆ, ಅಗ್ನಿಮಾಂದ್ಯವು, ಊತವು, ಅವಯವಗಳು ಕೃಶಿಸಿರುವಿಕೆ, ವಾತಪುರೀಷಗಳು

ಬಂಧಿಸಿರುವಿಕೆ, ತಾಪವು, ಮಂಕಾಗಿರುವಿಕೆ ಇವು ಉದರರೋಗದ ಸಾಮಾನ್ಯ ಲಕ್ಷಣಗಳು.

ಉದರರೋಗಗಳು-ವಾತೋದರ, ಪಿತ್ಥೋದರ, ಕಫೋದರ, ಸನ್ನಿಪಾತೋದರ, ಜಲೋದರ, ಪ್ಲೀಹೋದರ, ಕ್ಷತೋದರ, ಬದ್ಧಗುದಗಳೆಂದು ಎಂಟು ವಿಧವಾಗಿರುತ್ತದೆ.

ವಾತೋದರದಲ್ಲಿ:—ಹಸ್ತಪಾದಗಳಲ್ಲಿಯು, ನಾಭಿಕುಕ್ಷಿಗಳಲ್ಲಿಯು ಊತವುಂಟಾಗುವಿಕೆ, ಕುಕ್ಷಿ, ಪಾರ್ಶ್ವಗಳು, ಉದರವು, ಬೆನ್ನುಮೂಳೆ, ಬೆನ್ನು ಇವುಗಳಲ್ಲಿ ನೋವು, ಕಾಲುನೋವು, ಪುಡಿಕೆಮ್ಮಲು, ಅಧೋಭಾಗವು ಭಾರವಾಗಿರುವಿಕೆ, ಮಲಬದ್ಧವು, ಚರ್ಮವು, ಮೂಗು ಇವುಗಳಲ್ಲಿ ಶ್ಯಾಮಾರುಣ ವರ್ಣವುಂಟಾಗುವಿಕೆ, ಉದರವು ಕಾರಣವಿಲ್ಲದೆಯೇ ವೃದ್ಧಿಹೊಂದುವಿಕೆ, ಪುನಃ ಪುನಃ ಕೆಮ್ಮುವಿಕೆ, ಉದರದಲ್ಲಿ ಆಯುಧಗಳಿಂದ ಇರಿದಂತೆ ಬಾಧೆಯು, ಉದರವು ಸೂಕ್ಷ್ಮವಾದ ಕಪ್ಪು ಸಿರೆಯಿಂದಾವರಿಸಿರುವಿಕೆ, ಉದರವನ್ನು ಬಾರಿಸಿದರೆ ಗಾಳಿಯಿಂದ ತುಂಬಿದ ಚೀಲದಂತಿರುವಿಕೆ ಮೊದಲಾದ ಚಿಹ್ನೆಗಳು ಕಾಣುವುವು.

ಪಿತ್ಥೋದರದಲ್ಲಿ:—ಜ್ವರವು, ಮೂರ್ಛೆ, ತಾಪವು, ನೀರಡಿಕೆ, ಬಾಯಿಕಹಿ, ಭ್ರಮೆ, ಅತಿಸಾರ, ಚರ್ಮವು, ಮೂಗು, ಮುಖವು ಇವು ಕಪ್ಪಾಗಿರುವಿಕೆ, ಹಳದಿ ಬಣ್ಣಗಳುಳ್ಳ ಸಿರೆಗಳು ಉದರದಮೇಲೆ ವ್ಯಾಪಿಸಿರುವಿಕೆ, ಉದರವು ಹಸ್ತದಿಂದ ಮುಟ್ಟಿದರೆ ಮೃದುವಾಗಿರುವಿಕೆ, ಶೀಘ್ರವಾಗಿ ಪಕ್ವವಾಗುವಿಕೆ ಈ ಚಿಹ್ನೆಗಳಿರುವುವು.

ಕಫೋದರದಲ್ಲಿ:—ಶರೀರವು ಕೃಶಿಸಿರುವಿಕೆ, ಸ್ಪರ್ಶಜ್ಞಾನವಿಲ್ಲದಿರುವಿಕೆ, ಊತವು, ಭಾರವು, ಅತಿನಿದ್ರೆ, ವಾಂತಿ, ಅರುಚಿ, ಶ್ವಾಸವು, ಕಾಸವು, ಉದರವು ನಿಶ್ಚಲವಾಗಿ ಹೊಳೆಹೊಳೆದು ಬಿಳಿಯ ರೇಖೆಗಳುಂಟಾಗಿ ದೊಡ್ಡದಾಗಿರುವಿಕೆ ಮೊದಲಾದ ಚಿಹ್ನೆಗಳು ಕಂಡುಬರುವುವು.

ಸನ್ನಿಪಾತೋದರದಲ್ಲಿ:—ವಾತ, ಪಿತ್ಥ, ಕಫಲಕ್ಷಣಗಳೆಲ್ಲವೂ ಕಾಣುವುವಲ್ಲದೆ ಮೂರ್ಛೆ, ಪಾಂಡುರೋಗ, ಕಾರ್ಶ್ಯವು, ನೀರಡಿಕೆ, ಬಾಯೊಣಗುವಿಕೆ; ಚಳಿಕಾಲದಲ್ಲಿಯೂ, ವರ್ಷಾಕಾಲದಲ್ಲಿಯೂ ಅಧಿಕ ವೃದ್ಧಿಯನ್ನು ಹೊಂದಿ ತಾಪವನ್ನುಂಟುಮಾಡುವಿಕೆ ಈ ಲಕ್ಷಣಗಳಿರುವುವು.

ಪ್ಲೀಹೋದರದಲ್ಲಿ:—ಅಧಿಕ ಸಂತಾಪಕರವಾದ ಪದಾರ್ಥಗಳನ್ನು ತಿನ್ನುವ ಮನುಷ್ಯರಿಗೆ ರಕ್ತವೂ, ಕಫವೂ ಬಹಳವಾಗಿ ಪ್ರಕೋಪಿಸಿ ಪ್ಲೀಹವನ್ನು ವೃದ್ಧಿಹೊಂದಿಸುವುದು. ಈ ವ್ಯಾಧಿಯಲ್ಲಿ ಎಡಪಕ್ಕದಲ್ಲಿರುವ ಪ್ಲೀಹವು ಅಧಿಕ ವೃದ್ಧಿಹೊಂದಿ ಶರೀರ ಶಿಥಿಲವಾಗುವಿಕೆ, ಅಗ್ನಿಮಾಂದ್ಯ, ಬಲಕ್ಷಯ, ಪಾಂಡುವು ಮೊದಲಾದ ಚಿಹ್ನೆಗಳು ಕಾಣುವುವು. ಇದೇ ರೀತಿಯಾಗಿ ಬಲಭಾಗದಲ್ಲಿರುವ ಯಕೃತ್ತು ವೃದ್ಧಿಹೊಂದಿ ಯಕೃದುದರವೆನ್ನಲ್ಪಡುವುದು.

ಜಲೋದರದಲ್ಲಿ :—ಸ್ನೇಹಪಾನವು, ಅನುವಾಸನವಸ್ತಿ, ವಮನ, ವಿರೇಚನವು ಈ ಚಿಕಿತ್ಸೆಗಳಲ್ಲಿ ಯಾವುದನ್ನಾದರೂ ಮಾಡಿಕೊಂಡು ತಣ್ಣೀರನ್ನು ವಿಶೇಷವಾಗಿ ಪಾನಮಾಡಿದ್ದಾದರೆ ಜಲವಹಂಗಳಾದ ಸ್ರೋತಸ್ಸುಗಳೆಲ್ಲವು ದುಷ್ಟಗಳಾಗಿ ಉಪಸ್ನೇಹನ್ಯಾಯವನ್ನನುಸರಿಸಿ ಸ್ರವಿಸುವ ಅನ್ನರಸದಿಂದ ಕೂಡಿ ಉದರವು ದಿನದಿನಕ್ಕೆ ವೃದ್ಧಿಹೊಂದುತ್ತಿರುವುದು. ಅಂತಹ ಜಲೋದರದಲ್ಲಿ ಎಣ್ಣೆಯನ್ನು ಬಳಿದಂತೆ ಹೊಳೆಹೊಳೆದು ಹೊಕ್ಕಳಸುತ್ತಲೂ ವಿಶಾಲವಾಗಿ ಆವರಿಸಿ ನೀರಿನಿಂದ ತುಂಬಿದಂತಿರುವುದು. ಉದಕಪೂರಿತವಾದ ಚೀಲದಂತೆ ಗುಳಗುಳ ಎಂಬ ಶಬ್ದದಿಂದ ಕದಲುತ್ತಿರುವುದು.

ಕ್ಷತೋದರದಲ್ಲಿ :—ಮುಳ್ಳುಗಳು, ಕಲ್ಲುಗಳು ಮೊದಲಾದ ಶಲ್ಯಗಳಿಂದ ಕೂಡಿದ ಅನ್ನವನ್ನು ಭುಜಿಸಿದ್ದಾದರೆ ಆ ಶಲ್ಯವು ಪಕ್ವಾಶಯದಿಂದ ವಿಲೋಮವಾಗಿ ಬರುತ್ತಿದ್ದು ಆಂತ್ರವನ್ನು ಭೇದಿಸುವುದು. ನಂತರ ಒಡೆದ ಆಂತ್ರದಿಂದ ಜಲಕ್ಕೆ ಸಮವಾದ ಕೀವು ಸ್ರವಿಸಿ ಗುದದ್ವಾರದಿಂದ ಹೊರಹೊರಡುವುದು. ಅದರಿಂದ ನಾಭಿ ಕೆಳಗಡೆ ಉದರವು ವೃದ್ಧಿಹೊಂದುವುದು. ಆ ಉದರವು ಸೂಜಿಗಳು ಚುಚ್ಚಿದಂತೆಯು, ಶೀಳಿದಂತೆಯು ಬಾಧೆಯುಂಟಾಗುವುದು. ಇದು ಕ್ಷತೋದರವೆಂತಲೂ, ಪರಿಸ್ರಾವ್ಯುದರವೆಂತಲೂ ವ್ಯವಹರಿಸಲ್ಪಡುವುದು.

ಜಿಗಟಾ (ಅಂಟಾ) ಗಿರುವ ಅನ್ನವನ್ನು ಭುಜಿಸುವುದರಿಂದಲೂ, ಕೂದಲುಗಳಿಂದಲಾಗಲಿ, ಚಿಕ್ಕಕಲ್ಲುಗಳಿಂದಲಾಗಲಿ ಕಲೆತ ಅನ್ನವನ್ನು ಭುಜಿಸಿದ ಪಕ್ಷದಲ್ಲಿ ಕರಳುಗಳಲ್ಲಡ್ಡವಾದದ್ದಾದರೂ ಮತ್ತು ಕರುಳು ಮಡಿಸಿಕ್ಕೊಂಡದ್ದರಿಂದಲೂ ದಿನದಿನಕ್ಕೆ ವೃದ್ಧಿಹೊಂದಿ ಮಲವನ್ನು ವಹಿಸುವ ನಾಡಿಗಳನ್ನು ಸೇರಿ ಗುದದ್ವಾರದಲ್ಲಿ ಪುರೀಷವನ್ನಡ್ಡಗಿಸುವುದು ಅಥವಾ ಕೊಂಚಕೊಂಚವಾಗಿಯಾದರು ಹೊರಡಿಸುವುದು. ಇದು ಬದ್ಧಗುದೋದರವೆನ್ನಲ್ಪಡುವುದು.

## ಉದರರೋಗದಲ್ಲಿ ಅಸಾಧ್ಯ ಲಕ್ಷಣ.

೧. ಕಣ್ಣಿನ ತೇಜಸ್ಸು ಕಮ್ಮಿಯಾಗಿ ಶಿಶ್ನವು ವಕ್ರವಾಗಿ ಚರ್ಮವು ತೆಳುವಾಗಿ ಬಲ, ರಕ್ತ, ಮಾಂಸ, ಅಗ್ನಿ ಇವುಗಳು ಕ್ಷೀಣವಾದರೆ ಆ ಉದರರೋಗವು ಅಸಾಧ್ಯವು.

೨. ಚರ್ಮ ತೆಳುವಾಗಿ ನೇತ್ರವು ಶೀತಳವಾಗಿ ಹುಬ್ಬು, ಕಿವಿ ಸಹ ವಕ್ರವಾಗಿ ಬಲ, ರಕ್ತ, ಮಾಂಸ, ಅಗ್ನಿ ಇವುಗಳು ಕ್ಷೀಣವಾಗಿ ಶೋಫೆ, ಅತಿಸಾರ, ಪಾರ್ಶ್ವಶೂಲೆ, ಅನ್ನದ್ವೇಷ, ಪ್ರವರ್ತಿ, ಹೊಟ್ಟೆಯುಬ್ಬರ ಇವುಗಳಿರುವ ಉದರರೋಗವು ಅಸಾಧ್ಯವು.

೩. ಕೆಮ್ಮು, ಪೀನಸ, ಹೃಲ್ಲಾಸ, ಊರ್ಧ್ವಶ್ವಾಸ, ಅತಿಸಾರ, ಶೋಫೆ ಇವುಗಳಿದ್ದ ಉದರರೋಗವು ಅಸಾಧ್ಯವು.

೪. ಮಲಮೂತ್ರಗಳು ಕಟ್ಟಿ ಶ್ವಾಸ, ಶೋಭೆ, ಬಿಕ್ಕಳಿಕೆ, ಭ್ರಮೆ, ಜ್ವರ, ಮೂರ್ಛೆ, ವಾಂತಿ, ಅತಿಸಾರ ಇವುಗಳಿದ್ದ ಉದರರೋಗವು ಅಸಾಧ್ಯವು.

## ಉದರರೋಗ ಚಿಕಿತ್ಸೆಗಳು.

೧. ಮುಂಡೆಗಳ್ಳಿಯ ಹಾಲಿನಲ್ಲಿ ಹಿಪ್ಪಲಿಯನ್ನು ಏಳುಬಾರಿ ಭಾವನೆಯಂ ಮಾಡಿ ಒಂದೊಂದು ಹಿಪ್ಪಲಿಯನ್ನು ಚೂರ್ಣಿಸಿ ಜೇನಿನಲ್ಲಿ ಪ್ರಾತಃಕಾಲದಲ್ಲಿ ಕೊಡಲು ಮಹೋದರ ಪರಿಹಾರವಾಗಿ ಸುಖವುಂಟಾಗುವುದು.

೨. ಕೈ ಎಣ್ಣೆಯಲ್ಲಿ ಗೋಮೂತ್ರ ಬೆರಸಿಯಾದರೂ, ಹಾಲಂ ಬೆರೆಯಿಸಿ ಯಾದರೂ ಕೊಡಿಸಲು ಮಹೋದರ ಪರಿಹಾರವಹುದು.

೩. ದಶಮೂಲ, ಪಂಚಕೋಲ, ತ್ರಿಫಲೆ, ದಂತಿ, ಶುದ್ಧಿಮಾಡಿದ ತಿಗಡೆ ಇವಿಷ್ಟು ಕಷಾಯ ಕಾಯಿಸಿ ಕೊಡಲು ಸಮಸ್ತವಾದ ಮಹೋದರ, ಜಲಕೂರ್ಮ ಇವು ಪರಿಹಾರವಹವು.

೪. ಶುಂಠಿ, ಹಿಪ್ಪಲಿ, ದಂತಿ ಈ ಮೂರು ಸಮಭಾಗ ಅಳಲೇಕಾಯಿಸಿಪ್ಪೆ ಇಮ್ಮಡಿ, ಅದರ ಅರ್ಧಭಾಗ ಸೈಂಧವಲವಣ ಈ ರೀತಿಯಲ್ಲಿ ಇವಿಷ್ಟನ್ನೂ ಚೂರ್ಣಿಸಿ ಬಿಸಿನೀರಿನಿಂದ ಕೊಡಿಸಲು ಮಹೋದರವನ್ನು ಪರಿಹರಿಸುವುದು.

೫. ಗೋಮೂತ್ರ, ಹಸುವಿನಮಜ್ಜಿಗೆ, ಹಸುವಿನತುಪ್ಪ, ಹಸುವಿನಹಾಲು, ಹಸುವಿನಸಗಣೀ ರಸ ಈ ೫ ಪ್ರತ್ಯೇಕ ೧ ಬಳ್ಳ, ಇವಿಷ್ಟನ್ನೂ ಕೂಡಿಸಿ ಕಾಸುವಾಗ ಅದಕ್ಕೆ ಹಾಕುವ ಕಲ್ಕದ್ರವ್ಯ:—ಶುದ್ಧಿಮಾಡಿದ ತಿಗಡೆ, ದಂತಿ, ಹಾವು ಮೆಕ್ಕೇಬೇರು ಇವಿಷ್ಟನ್ನೂ ಹಾಲಿಂದರದು ಕದಡಿ ಅದರಲ್ಲಿ ಮುಂಡೆಗಳ್ಳಿ ಹಾಲು ೧ ಸೊಲಿಗೆ, ಅತ್ತೀಹಾಲು ೧ ಸೊಲಿಗೆ ಈ ಎರಡನ್ನೂ ಕೂಡಿಸಿ ಕಾಸಿ ಹದದಲ್ಲಿ ಇಳುಹಿ ಪ್ರಾತಃಕಾಲದಲ್ಲಿ ಕೊಡಿಸಲು ಶೋಭೆ, ಮಹೋದರ ಮೊದಲಾದ ರೋಗಂಗಳು ಪರಿಹಾರವಹವು

೬. ಬರೀಹಿಪ್ಪಲಿ ಕಲ್ಕವಮಾಡಿ ಕೊಡಿಸಲು ಮಹೋದರ ಪರಿಹಾರ, ಹಾಲು ಅನ್ನ ಪಥ್ಯ ಇರುವುದು.

೭. ಮಹೋದರವುಳ್ಳಾತಗೆ ಅಗ್ನಿಮಾಂದ್ಯ ಉಂಟಾಗಿದ್ದರೆ ತ್ರಿಲವಣಾದಿ ಚೂರ್ಣವನ್ನಾದರೂ ಕ್ಷಾರಗಳನ್ನಾದರೂ ದೀಪನಾರ್ಥವಾಗಿ ಕೊಡಿಸುವುದು. ಗುಡಾರಿಷ್ಟ ಮೊದಲಾದ ಅರಿಷ್ಟಗಳನ್ನಾದರೂ ದೀಪನಾರ್ಥವಾಗಿ ಕೊಡಿಸುವುದು.

೮. ನುಗ್ಗೇಬೇರಿನ ಕಷಾಯವನ್ನು ಹಸುವಿನತುಪ್ಪ ಸೈಂಧವಲವಣಸಹಿತ ಕುಡಿಯಕೊಡೆ ಕ್ಷತೋದರ ಶಮನವಹುದು.

೯. ಮಹೋದರಕ್ಕೆ ವಿರೇಚನ:—ಶುಂಠಿ, ಹಿಪ್ಪಲಿ, ಮೆಣಸು, ಅಳಲೇಕಾಯಿಸಿಪ್ಪೆ, ನೆಲ್ಲೀಚಟ್ಟು, ತಾರೇಕಾಯಿ, ಶುದ್ಧಿಮಾಡಿದ ಪಾದರಸ, ಶುದ್ಧಿಮಾಡಿದ ಹವಳಸರಿಗಂಧಕ ಇವಿಷ್ಟನ್ನೂ ಸಮಭಾಗ, ಇಷ್ಟರ ಸಮಭಾಗ ಶುದ್ಧಿ

ಮಾಡಿದ ಜಾಪಾಳ ಇವಿಷ್ಟನ್ನೂ ಬಿಸಿನೀರಿನಿಂದ ಅರೆದು ಗುಂಜಾ ಪ್ರಮಾಣ ದಷ್ಟು ಗುಳಿಗೆಯುಂಮಾಡಿ ಅನುಪಾನವರಿತು ಕೊಡಲು ವಿರೇಚನವಹುದು.

೧೦. ರಸಭೂಪತಿ:—ಶುದ್ಧಿಮಾಡಿದ ಪಾದರಸ ೧ ವರಹತೂಕ, ಶುದ್ಧಿ ಮಾಡಿದ ಹವಳಸರಿಗಂಧಕ ೧ ವರಹತೂಕ, ಶುದ್ಧಿಮಾಡಿದ ತಾಳಕ ೧ ವರಹ ತೂಕ, ಶುದ್ಧಿಮಾಡಿದ ನಾಭಿ ೧ ವರಹತೂಕ, ಶುದ್ಧಿಮಾಡಿದ ಎಣ್ಣಿಬೆಳಗಾರ ಅರಳುಮಾಡಿದ್ದು ೧ ವರಹತೂಕ, ಶುಂಠಿ ೧ ವರಹತೂಕ, ಹಿಪ್ಪಲಿ ೧ ವರಹ ತೂಕ, ಮೆಣಸು ೧ ವರಹತೂಕ, ಅಳಲೇಕಾಯಿಸಿಪ್ಪೆ ೧ ವರಹತೂಕ, ತಾರೇಕಾಯಿ ಸಿಪ್ಪೆ ೧ ವರಹತೂಕ, ನೆಲ್ಲೀಕಾಯಿ ೧ ವರಹತೂಕ, ಶುದ್ಧಿಮಾಡಿದ ಜಾಪಾಳ ೫॥ ವರಹತೂಕ, ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಶೋಧಿಸಿ ಅರಿಯುವ ದಿನಸುಗಳನ್ನು ಖಲ್ವದಲ್ಲಿ ಅರೆದು ಎಲ್ಲವನ್ನೂ ಖಲ್ವದಲ್ಲಿ ಮುತ್ತುಗದಚಕ್ಕೆ ರಸದಿಂದ ೧ ಜಾವ ಅರೆದು ಗುರುಗಂಜಿ ಪ್ರಮಾಣ ಮಾತ್ರೆ ಮಾಡುವುದು. ಹಸೀ ಶುಂಠಿ ರಸದಲ್ಲಿ ಅಥವಾ ಶುಂಠಿಕಷಾಯದಲ್ಲಿ ಮತ್ತು ಇತರ ಅನುಪಾನಗಳಿಂದ ಮಾತ್ರೆಕೊಟ್ಟರೆ ವುದಾವರ್ತ ಅಂದರೆ ಹೊಟ್ಟೆಯಲ್ಲಿ ಹುಟ್ಟುವ ರೋಗಗಳು ಗುಣ ವಾಗುವುದು. ಹಸುವಿನ ಹಾಲು ಕಾಯಿಸಿ ಅರಳೆಣ್ಣೆ ಸ್ವಲ್ಪಹಾಕಿ ಮಾತ್ರೆ ಕೊಟ್ಟರೆ ಮೂತ್ರಕೃಚ್ಛ್ರ ಮಲಬದ್ಧ, ಶ್ವಾಸಕಾಸ ಗುಣವಾಗುವುದು. ಬೆಳಿಗ್ಗೆ ೧ ಮಾತ್ರೆ ಕೊಡುವುದು. ಹೀಗೆ ೫-೭ ದಿವಸ ಕೊಡಬೇಕು. ಇದಕ್ಕೆ ಪಥ್ಯ. ತೊಗರೀ ಬೇಳೆ ಸಿಹಿಸಾರು ಅನ್ನ.

೧೧. ಹುಚ್ಚುಹೀರೆಬೀಜ ತಂದು ಕುಟ್ಟಿ ಚೂರ್ಣಮಾಡಿ ಖಲ್ವದಲ್ಲಿ ಹಾಕಿ ಮುಂಡಕಳ್ಳಿ ಹಾಲಿನಲ್ಲಿ ಅರೆದು ಮೆಣಸು ಪ್ರಮಾಣ ಮಾತ್ರೆಮಾಡಿ ಇಟ್ಟು ಕೊಳ್ಳುವುದು. ಹೊತ್ತಿಗೆ ೧ ಮಾತ್ರೆ ಬಾಯಿಯಲ್ಲಿ ಹಾಕಿಕೊಂಡು ಬಿಸಿನೀರು ಕುಡಿಯುವುದು. ಹೀಗೆ ಬೆಳಿಗ್ಗೆ ಹೊತ್ತು ೭-೧೪ ದಿನ ಕೊಡುವುದು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಅಡ್ಡಗಡ್ಡೆ, ಜಲೋದರ ಗುಣವಾಗುವುದು.

---

## ನಲವತ್ತನಾಲ್ಕನೆಯ ಅಧ್ಯಾಯ.

---

## ವಿಸರ್ಪಿರೋಗ—ಔಷಧಗಳು.

---

### ವಿಸರ್ಪಿರೋಗದ ಲಕ್ಷಣ.

ಉಪ್ಪು, ಹುಳಿ, ಕಾರ, ಉಷ್ಣಪದಾರ್ಥಗಳು ಇವುಗಳನ್ನು ಅಧಿಕ ವಾಗಿ ಸೇವಿಸುವುದರಿಂದ ವಾತಾದಿ ದೋಷಗಳು ಪ್ರಕೋಪವನ್ನು ಹೊಂದಿ

ವಿಸರ್ಪರೋಗವನ್ನುಂಟುಮಾಡುವುದು. ಶರೀರದ ಅನೇಕ ಪ್ರದೇಶಗಳಲ್ಲಿ ಸಂಚರಿಸುವುದರಿಂದ ಪರಿಸರ್ಪವೆಂತಲೂ ಹೇಳಲ್ಪಡುವುದು. ಅಂದರೆ ವಾತಾದಿ ದೋಷಗಳು ಪ್ರಕೋಪವನ್ನು ಹೊಂದಿ ತ್ವಕ್, ಮಾಂಸ, ರಕ್ತಂಗಳನ್ನಾಶ್ರಯಿಸಿ, ದೇಹದಲ್ಲೊಂದು ಕಡೆಯೂ ನಿಲ್ಲದೆ ಸಕಲಾವಯವಗಳಲ್ಲಿಯೂ ಸಂಚರಿಸುವುದಾಗಿಯೂ, ವಾತಾದಿ ಲಕ್ಷಣಂಗಳಿಂದ ಕೂಡಿರುವುದಾಗಿಯೂ, ವಿಸ್ತೀರ್ಣವೂ, ಉನ್ನತವೂ ಆದ ಊತವನ್ನು ಉಂಟುಮಾಡುವುದು.

ವಿಸರ್ಪರೋಗವು—ವಾತ, ಪಿತ್ಥ, ಶ್ಲೇಷ್ಮ, ವಾತಪಿತ್ಥ, ವಾತಶ್ಲೇಷ್ಮ, ಪಿತ್ಥಶ್ಲೇಷ್ಮ, ಸನ್ನಿಪಾತ, ವಹ್ನಿದಾಹ, ಅಭಿಘಾತಗಳಿಂದ ಉತ್ಪನ್ನವಾಗಿ ಒಂಭತ್ತು ಬಗೆಯಾಗಿರುವುದು.

ವಾತವಿಸರ್ಪದಲ್ಲಿ:—ವಾತಜ್ವರಕ್ಕೆ ಸಮಾನವಾದ ಚಿಹ್ನೆಗಳುಂಟಾಗುವಿಕೆ, ಊತವು, ಅದರುವಿಕೆಯು, ಸೂಜಿಗಳಿಂದ ಚುಚ್ಚಿದಂತಿರುವಿಕೆ, ಸೀಳಿದಂತಿರುವಿಕೆ, ನೋವು, ಆಯಾಸವು, ರೋಮಾಂಚವು ಈ ಚಿಹ್ನೆಗಳು ಕಾಣುವುವು.

ಪಿತ್ಥವಿಸರ್ಪದಲ್ಲಿ:—ಊತವು ಶೀಘ್ರವಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವ್ಯಾಪಿಸುವಿಕೆ, ಪಿತ್ತಜ್ವರ ಲಕ್ಷಣಗಳುಂಟಾಗಿರುವಿಕೆ, ಊತವು ರಕ್ತವರ್ಣವಾಗಿರುವಿಕೆ ಈ ಲಕ್ಷಣಗಳು ಕಾಣುವುವು.

ಶ್ಲೇಷ್ಮವಿಸರ್ಪದಲ್ಲಿ:—ತುರಿ, ನುಣುಪು, ಕಫಜ್ವರ ಲಕ್ಷಣಗಳು ಕಾಣುವುವು.

ವಾತಪಿತ್ಥವಿಸರ್ಪದಲ್ಲಿ:—ಜ್ವರವು, ವಾಂತಿ, ಮೂರ್ಛೆ, ಅತಿಸಾರವು, ನೀರಡಿಕೆ, ಭ್ರಮೆ, ಅಗ್ನಿಮಾಂದ್ಯ, ಅರೋಚಕವು ಈ ಚಿಹ್ನೆಗಳುಂಟಾಗಿ, ಶರೀರವೆಲ್ಲಾ ಬೆಂಕಿಯಿಂದ ಸುಟ್ಟಂತೆ ಬಾಧೆಯುಂಟಾಗಿರುವುದು. ಈ ಊತವು ಎಲ್ಲಿ ಸಂಚರಿಸುವುದೋ ಆ ಸ್ಥಳದಲ್ಲೆಲ್ಲಾ ಕರ್‍ರಗಾಗಿ ಇದ್ದಲಿನಂತಿರುವುದು. ಅದು ಶೀಘ್ರಗಾಮಿಯಾದುದರಿಂದ ತಕ್ಷಣವೇ ಹೃದಯಾದಿ ಮರ್ಮಸ್ಥಾನಗಳನ್ನು ಸೇರುವುದು. ಅಂತಹ ಸಮಯದಲ್ಲಿ ವಾತವು ಬಲಿಷ್ಠವಾಗಿ ಜ್ಞಾನವನ್ನು ಕೆಡಿಸುವುದಲ್ಲದೆ ನಿದ್ರೆಯನ್ನು ನಾಶಗೊಳಿಸುವುದು. ಆಗ ಶ್ವಾಸವು, ಬಿಕ್ಕಳಿಕೆಗಳು ಪ್ರಾರಂಭವಾಗುವುದು. ರೋಗಿಯು ಯಾವುದರಲ್ಲಿಯೂ ಇಚ್ಛೆಯಿಲ್ಲದೆ ಇತ್ತ ಅತ್ತ ಹೊರಳಾಡುತ್ತಿರುವನು. ಇಂತಹ ಉಪದ್ರವವುಂಟಾಗಿ ಶೀಘ್ರಕಾಲದಲ್ಲಿ ಮರಣಹೊಂದುವನು. ಇದೇ ಅಗ್ನಿವಿಸರ್ಪವೆನ್ನಲ್ಪಡುವುದು.

ಕಫವಾತವಿಸರ್ಪದಲ್ಲಿ:—ಪ್ರಕೋಪವಾದ ಕಫದಿಂದ ವಾತಮಾರ್ಗವು ನಿರೋಧಿಸಲ್ಪಟ್ಟು ಆ ವಾತವು ಪ್ರಕೋಪ ಹೊಂದುವುದು. ಅಂತಹ ಕಫವು ರಕ್ತವೃದ್ಧಿಯಿರುವ ಮನುಷ್ಯನ ಚರ್ಮ, ಸಿರಾ, ಸ್ನಾಯುಗಳನ್ನಾಶ್ರಯಿಸಿರುವ ರಕ್ತವನ್ನು ದುಷ್ಟವಾಗಿ ಮಾಡಿ ದೀರ್ಘಗಳಾಗಿ ಸೂಕ್ಷ್ಮಾಕಾರಗಳಾಗಿಯೂ,

ವರ್ತುಲಗಳಾಗಿಯೂ ಕಠಿಣವಾಗಿರುವ ಗ್ರಂಥಿಗಳನ್ನುಂಟುಮಾಡುವುದು. ಆ ಗ್ರಂಥಿಮಾಲೆಯು ರಕ್ತವರ್ಣವಾಗಿ ತೀವ್ರವೇದನಾಯುತವಾದ ಜ್ವರವನ್ನುಂಟು ಮಾಡುವುದು. ಆಗ ಶ್ವಾಸವು, ಕಾಸವು, ಅತಿಸಾರವು, ಬಾಯಾರಿಕೆ, ಬಿಕ್ಕಳಿಕೆ, ವಾಂತಿ, ಭ್ರಮೆ, ಇಂದ್ರಿಯಸಮ್ಮೋಹ, ಶರೀರವರ್ಣವು ಬದಲಾಯಿಸುವಿಕೆ, ಮೂರ್ಛೆ, ಅಗ್ನಿಮಾಂದ್ಯ ಈ ಚಿಹ್ನೆಗಳು ಕಾಣಬರುವುವು. ಇದು ಗ್ರಂಥಿ ವಿಸರ್ಪವೆನ್ನಲ್ಪಡುವುದು.

ಕಫಪಿತ್ಥವಿಸರ್ಪದಲ್ಲಿ:—ಕಫ ಪಿತ್ಥಗಳು ಸ್ವಸ್ಥಾನವಾದ ಆಮಾಶಯದ ಮಾರ್ಗವಾಗಿ ಶರೀರದಲ್ಲಿ ವ್ಯಾಪಿಸಿ, ಹಳದಿಬಣ್ಣವುಂಟಾಗಿ, ಪಾಂಡುವರ್ಣವಾಗಿ, ಸ್ನಿಗ್ಧಗಳಾಗಿ, ಸ್ವಲ್ಪ ವೇದನಾಸಹಿತವಾದ ಬೊಬ್ಬೆಗಳನ್ನುಂಟುಮಾಡುವುದು. ಆ ಬೊಬ್ಬೆಗಳು ಒಳಗೆ ಪಕ್ವವಾಗಿ ಕೈಗಳಿಂದ ಮುಟ್ಟಿದರೆ ಗ್ರಂಥಿಯಂತೆ ಚಲಿಸುತ್ತಿರುವ ಮಾಂಸವುಳ್ಳದ್ದಾಗಿ, ಮಾಂಸದೋಷದಿಂದ ಸ್ಪಷ್ಟವಾಗಿ ಗೋಚರವಾಗುವ ಸಿರಾಸ್ನಾಯು ಸಂಘಾತವುಂಟಾಗಿ, ಹೆಣದಂತೆ ದುರ್ಗಂಧವುಂಟಾಗಿರುವುದು. ಅದರಲ್ಲಿ ಜ್ವರವು, ನಿದ್ರೆ, ತಲೆನೋವು, ಶರೀರ ಕೃಶತ್ವವು, ಶರೀರವು ಅಂಟಾಗಿರುವಿಕೆ, ಅರುಚಿ, ಭ್ರಮೆ, ಅಗ್ನಿಮಾಂದ್ಯ, ಅಸ್ಥಿಗಳು ಭಿನ್ನವಾಗುವಿಕೆ, ಭುಜಿಸಿದ ಆಹಾರವು ಪಕ್ವವಾಗದಿರುವಿಕೆ ಈ ಚಿಹ್ನೆಗಳು ಕಾಣುವುವು. ಇದು ಕರ್ದಮವಿಸರ್ಪವೆನ್ನಲ್ಪಡುವುದು.

ತ್ರಿದೋಷ ಲಕ್ಷಣಂಗಳು ಕಂಡುಬಂದರೆ ಅದು ಸನ್ನಿಪಾತವಿಸರ್ಪವೆನ್ನಲ್ಪಡುವುದು. ಇದು ಅಸಾಧ್ಯವು.

ಅಗ್ನಿದಾಹದಿಂದುಂಟಾದ ವಿಸರ್ಪವು ಅಗ್ನಿದಾಹ ವಿಸರ್ಪವೆನ್ನಲ್ಪಡುವುದು. ಇದರಲ್ಲಿ ಪಿತ್ಥವಿಸರ್ಪ ಲಕ್ಷಣಂಗಳು ಕಾಣುವುವು.

ಶಸ್ತ್ರ ಪ್ರಹಾರಾದಿಗಳಿಂದ ವಾತವು ಪ್ರಕುಪಿತವಾಗಿ ರಕ್ತಪಿತ್ಥಗಳನ್ನು ಪ್ರೇರೇಪಿಸಿ ಹುರುಳಿಗೆ ಸಮಾನವಾದ ಬೊಬ್ಬೆಗಳನ್ನುಂಟುಮಾಡುವುದು. ಇದರಲ್ಲಿ ಜ್ವರವು, ನೋವು, ಉರಿ ಈ ಲಕ್ಷಣಂಗಳಿಂದ ಶ್ಯಾಮಾರುಣವರ್ಣಂಗಳು ಕಾಣುವುವು. ಇದು ಅಭಿಘಾತ ವಿಸರ್ಪವೆನ್ನಲ್ಪಡುವುದು.

## ವಿಸರ್ಪಿರೋಗದಲ್ಲಿ ಅಸಾಧ್ಯ ಲಕ್ಷಣ.

೧. ಸನ್ನಿಪಾತ ಮತ್ತು ಕ್ಷತಗಳಿಂದ ಉತ್ಪನ್ನವಾದ ವಿಸರ್ಪವು ಅಸಾಧ್ಯವು.

೨. ಕಾಸ, ಅಂಗಕಾಂತಿನ್ಯೂನತೆ, ಜ್ವರ, ಮೂರ್ಛೆ, ಸಂಧಿಗಳಲ್ಲಿ ನೋವು, ಭ್ರಮೆ, ಮುಖಶೋಷೆ, ಹಂಮ್ಮೈಸುವಿಕೆ, ಶರೀರದಲ್ಲಿ ಉರಿ, ಅತಿಸಾರಗಳುಳ್ಳ ವಿಸರ್ಪವು ಅಸಾಧ್ಯವು.

## ವಿಸರ್ಪಿರೋಗಕ್ಕೆ ಚಿಕಿತ್ಸೆಗಳು.

೧. ತುರಿಚಿನಬೇರು, ಅಮೃತಬಳ್ಳಿ, ಪರ್ಪಾಷ್ಟಕ, ಶುಂಠಿ ಇವಿಷ್ಟೂ ಪ್ರತ್ಯೇಕ ೪ ವರಹಾ ತೂಕವನ್ನು ೧ ಬಳ್ಳ ನೀರಿನಲ್ಲಿ ಹಾಕಿ ಕಷಾಯವೆತ್ತಿ ಅಷ್ಟಾವಶೇಷವಾಗಿ ಕಾಯಿಸಿ ಪ್ರಾತಃಕಾಲದಲ್ಲಿ ಕೊಡಿಸಲು ವಿಸರ್ಪ ಶಮನವಹುದು.

೨. ಮರದರಿಶಿನ, ಕಹಿಪಡವಲ, ಕಟುಕರೋಹಿಣಿ, ಚಾಣಂಗಿ, ತ್ರಿಫಲ, ಬೇವಿನಕಡ್ಡಿ, ಯಷ್ಟಿಮಧುಕ, ಕಹಿದರಸಿನ ಇವಿಷ್ಟನ್ನೂ ಕಷಾಯವ ಕಾಸಿ ತುಪ್ಪ ವೆರಸಿ ಕುಡಿಯಕೊಡೆ ವಿಸರ್ಪ ಶಮನವಹುದು.

೩. ನೆಲ್ಲಿಚಟ್ಟು, ಕಹಿಪಡವಲ, ಹೆಸರು ಇವಿಷ್ಟೂ ಪ್ರತ್ಯೇಕ ೪ ವರಹಾ ತೂಕವನ್ನು ೧ ಬಳ್ಳ ನೀರಿನಲ್ಲಿ ಕಷಾಯವಿಟ್ಟು ಅಷ್ಟಾವಶೇಷವಾಗಿ ಕಾಯಿಸಿ ಸಕ್ಕರೆವೆರಸಿ ಉದಯಕಾಲದಲ್ಲಿ ಕೊಡಿಸಲು ವಿಸರ್ಪ ಪರಿಹಾರವಹುದು.

೪. ನೆಲವಾಗಳಿ, ನೆಲ್ಲೀಚೆಟ್ಟು, ಲಾವಂಚ, ಪರ್ಪಾಷ್ಟಕ, ಅಮೃತಬಳ್ಳಿ, ಶುಂಠಿ, ತುರಚನಬೇರು, ಭದ್ರಮುಸ್ತೆ ಇವಿಷ್ಟೂ ಪ್ರತ್ಯೇಕ ೨ ವರಹಾ ತೂಕವನ್ನು ಒಂದು ಬಳ್ಳನೀರಿನಲ್ಲಿ ಕಷಾಯವೆತ್ತಿ ಅಷ್ಟಾವಶೇಷವಾಗಿ ಕಾಯಿಸಿ ಉದಯಕಾಲದಲ್ಲಿ ಕೊಡಿಸಲು ವಿಸರ್ಪ ಶಮನವಹುದು. ಅತಿಸಾರ ಜ್ವರಗಳೂ ಶಮನವಹವು.

೫. ಭದ್ರಮುಸ್ತೆ, ಬೇವು, ಕಹಿಪಡವಲ, ಮರದರಿಸಿನ, ಅರಿಸಿನ, ದ್ರಾಕ್ಷೆ ಹಣ್ಣು, ಕಳ್ಳಂಗಡಲೆ, ಶುಂಠಿ, ಚೇತರಾಶಿ, ಸ್ವೈದಿಲಗಡ್ಡೆ, ತುರಚನಬೇರು, ಕೊತ್ತುಂಬರಿ, ನೆಲಬೇವು, ಲಾವಂಚ, ಮುಡಿವಾಳ, ತ್ರಿಫಲೆ, ಹೆಮ್ಮರದ ತೊಕ್ಕು, ದೊಡ್ಡಪಡವಲ, ಹಿಪ್ಪಲಿ ಇವಿಷ್ಟನ್ನೂ ಕಷಾಯವ ಕಾಯಿಸಿ ಕೊಡಿಸಲು ವಾತ ಪಿತ್ತ ಶ್ಲೇಷ್ಮಗಳಿಂದುಂಟಾದ ವಿಸರ್ಪವಂ ಕೆಡಿಸುವುದು. ಈ ಕಷಾಯ ಅಮೃತಕ್ಕೆ ಸರಿಯೆಂಬರು.

೬. ಆಡುಸೋಗೆ, ತ್ರಿಫಲೆ, ಕಹಿಪಡವಲ, ಅಮೃತಬಳ್ಳಿ, ಬೇವಿನ ಕಡ್ಡಿ ಇವಿಷ್ಟನ್ನೂ ಕಷಾಯವ ಕಾಯಿಸಿ ಕಾಚಿನ ಚೂರ್ಣವೆರಸಿ ಕುಡಿಯಕೊಡೆ ವಿಸರ್ಪ ಶಮನವಹುದು.

೭. ಬಾಗೇಬೀಜ, ಅರಿಸಿನ, ಮರದರಿಸಿನ, ಚಂಗಲಕೋಷ್ಟ, ಯಷ್ಟಿ ಮಧುಕ, ಜಟಾಮಾಂಸಿ, ಯಾಲಕ್ಕಿ, ಸರಳದೇವದಾರು, ಏಲಾವಾಲುಕ, ರಕ್ತ ಚಂದನ ಇವಿಷ್ಟನ್ನೂ ನೀರಲ್ಲರೆದು ಲೇಪನಮಾಡಲು ವಿಸರ್ಪ ಶಮನವಹುದು.

೮. ನೀಲೀಬೇರನ್ನು ನೀರಿನಲ್ಲರದು ಲೇಪಮಾಡುವಣ, ಪ್ರಾತಃಕಾಲದಲ್ಲಿ ನೀಲೀಬೇರನ್ನ ಕ್ಷೀರದಲ್ಲಿ ಅರೆದು ಕುಡಿಯ ಕೊಡುವಣ ಇವುಗಳಿಂದ ವಿಸರ್ಪ ಶಮನವಹುದು.

೯. ಬಹುಕಾಲದ ತುಪ್ಪವನ್ನೂ ಅತ್ತಿಹಾಲನ್ನೂ ಅರಳೀಮರದ ಚಕ್ಕೆಗಳ ಕಷಾಯದಲ್ಲಿ ಕಲಸಿ ಲೇಪವ ಮಾಡಿಸಲು ವಿಸರ್ಪವಂ ಪರಿಹರಿಸುವುದು. ಉರಿ, ಬಾಯಾರಿಕೆಗಳು ಶಮನವಹವು.

೧೦. ಯಷ್ಟಿಮಧುಕ, ಅರಿಸಿನ, ರಕ್ತಚಂದನ, ಮುಡಿವಾಳ, ಶಾಬರ ಲೋಧ್ರ ಇಷ್ಟನ್ನೂ ನೀರಲ್ಲರೆದು ಲೇಪವಂ ಮಾಡಲು ವಾತಜವಿಸರ್ಪ ಶಮನ ವಹುದು.

೧೧. ಸಬ್ಬುಸೀಗೆ, ಭದ್ರಮುಸ್ತೆ, ನೆಲದಾಳಿಗೆಣಸು, ಬಿದರಿನಬೇರು, ಕರೀಗೋರಟಿಬೇರು, ಕೊತ್ತುಂಬರಿಬೀಜ, ದೇವದಾರು, ಕಾಡನುಗ್ಗೇಬೇರು, ಚಂಗಲಕೋಷ್ಠ ಇವಿಷ್ಟನ್ನೂ ನೀರಿನಿಂದರೆದು ಲೇಪವ ಮಾಡಲು ವಿಸರ್ಪ ಶಮನವಹುದು.

೧೨. ಆಲದಬೀಳಿನ ಯಳೇಮೊಗರು, ಬಾಳೇಗಡ್ಡೆ, ತಾವರೆಗೆಣಸಿನ ದಂಟು ಇವಿಷ್ಟನ್ನೂ ನೀರಲ್ಲರೆದು ಶತಧೌತಘೃತದಲ್ಲಿ ಕಲಸಿ ಲೇಪವ ಮಾಡಲು ಪಿತ್ಥವಿಸರ್ಪ ಶಮನವಹುದು.

೧೩. ಶಂಖವನ್ನಾದರೂ, ಹವಳವನ್ನಾದರೂ, ಮುತ್ತಿನಚಿಪ್ಪುವನ್ನಾದರೂ, ಕಾವೀಕಲ್ಲನ್ನಾದರೂ ಅರೆದು ತುಪ್ಪದಿಂದ ಲೇಪವಂ ಮಾಡಲು ಪಿತ್ಥದಿಂದುಂಟಾದ ವಿಸರ್ಪ ಪರಿಹಾರವಹುದು.

೧೪. ಅಳಲೇಕಾಯಿ ಚೂರ್ಣವನ್ನು ಲೋಳೀಸರದ ರಸದಲ್ಲರೆದು ಸೇಕಲೇಪಂಗಳಂ ಮಾಡಿಸಲು ಪಿತ್ಥವಿಸರ್ಪ ಶಮನವಹುದು.

೧೫. ತ್ರಿಫಲೆ, ಪದ್ಮಕ, ಲಾವಂಚ, ಮುಟ್ಟಿದರೆಮುನಿವ, ಕಣಗಿಲ ಬೇರು ಇವನ್ನಾದರೂ ನೀರಲ್ಲರೆದು ಲೇಪವಮಾಡಲು ಶ್ಲೇಷ್ಮದಿಂದುಂಟಾದ ವಿಸರ್ಪ ಶಮನವಹುದು.

೧೬. ದೂರ್ವಾದಿಘೃತ:—ಗರಿಕೆಯ ಸಮೂಲದ ರಸ ೨ ಬಳ್ಳ, ಆಲದ ಚಕ್ಕೆಯ ಕಷಾಯ ೨ ಬಳ್ಳ, ಹಾಲು ೧ ಬಳ್ಳ ಇವೆಲ್ಲವಂ ಕೂಡಿಸಿದ್ದು ೫ ಬಳ್ಳ, ಆದರಲ್ಲಿ ೧ ಬಳ್ಳ ತುಪ್ಪವ ಹನಿಸಿ ಕಾಯಿಸುವಾಗ ಹಾಕುವ ಕಲ್ಕದ್ರವ್ಯವು:— ನೆಲಮಾಗಳೀಬೇರು, ಯಷ್ಟಿಮಧುಕ, ಚಂಗಲಕೋಷ್ಠ, ಶೀಪಿಯಗಡ್ಡೆ, ಪದ್ಮಕ, ಶ್ರೀಗಂಧ, ದ್ರಾಕ್ಷಿ, ಆಷಾಢಿ, ಕೊನ್ನಾರಿಗಡ್ಡೆ, ಲಾವಂಚ, ಪಚ್ಚಕರ್ಪೂರ, ನೆಲಗುಂಬಳದಗಡ್ಡೆ, ತುಪ್ಪದದೇವದಾರು, ಅರಿಸಿನ, ಲೋಧ್ರ, ನೈದಿಲಗಡ್ಡೆ, ಮುಡಿವಾಳ, ತಾವರೆಗೆಣಸು, ಈ ೧೮ ಔಷಧಗಳನ್ನು ಪ್ರತ್ಯೇಕ ಎರಡೆರಡು ತೊಲೆಹಾಕಿ ಕಾಸಿ ಹದದಲ್ಲಿ ಇಳುಹಿಕೊಂಡು ದಿನಂಪ್ರತಿ ಉದಯಕಾಲದಲ್ಲಿ ಕಾಲುತೊಲೆ ಸೇವಿಸಲು ವಿಸರ್ಪ ಶಮನವಹುದು. ಈ ತುಪ್ಪದಿಂದ ಲೇಪನ ಮಾಡಿಸಲು ಶಮನವಹದು,

೧೭. ಕ್ಷೀರವೃಕ್ಷಾದಿ ಘೃತ:—ಗರಿಕೆಯ ಸಮೂಲದ ರಸ ೧ ಕೊಳಗ, ಇದರಲ್ಲಿ ೧ ಬಳ್ಳ ತುಪ್ಪ, ತುಪ್ಪದ ೪ ಪಾಡಿ ಹಸುವಿನಹಾಲನ್ನು ಹನಿಸಿ ಕಷಾಯ ಕಾಯಿಸುವಾಗ ಅದಕ್ಕೆ ಹಾಕುವ ಕಲ್ಕದ್ರವ್ಯ:—ಆಲದಮುಗುಳು, ಯಷ್ಟಿಮಧುಕ, ಲಾವಂಚ, ಸೊಗದೇಬೇರು, ಶ್ರೀಗಂಧ, ನೈದಿಲಗಡ್ಡೆ, ಚಂಗಲಕೋಷ್ಟ ಇವುಗಳನ್ನೆಲ್ಲ ಪ್ರತ್ಯೇಕ ಎರಡೆರಡು ತೊಲೆ ಚೂರ್ಣಿಸಿಹಾಕಿ ಒಂದು ದಿನ ಕಾಯಿಸಲು ಪಕ್ವವಾಗುವುದು. ಅದನ್ನು ಹದದಲ್ಲಿ ಇಳುಹಿಕ್ಕೊಂಡು ದಿನಂಪ್ರತಿ ಪ್ರಾತಃಕಾಲದಲ್ಲಿ ಕಾಲುತೊಲೆ ಸೇವಿಸಲು ವಿಸರ್ಪ ಶಮನವಹುದು.

೧೮. ಗೋಪಾಂಗನಾದಿ ಘೃತ:—ಗರಿಕೆಯಸಮೂಲ ರಸ ೧ ಕೊಳಗದಲ್ಲಿ ೧ ಬಳ್ಳ ತುಪ್ಪವನ್ನೂ ೧ ಬಳ್ಳ ಹಾಲನ್ನೂ ಹನಿಸಿ ಪಾಕಮಾಡುವಾಗ ಅದಕ್ಕೆ ಹಾಕುವ ಕಲ್ಕದ್ರವ್ಯ:—ಸೊಗದೇಬೇರು, ಯಷ್ಟಿಮಧುಕ, ಲಾವಂಚ, ಶ್ರೀಗಂಧ, ಚಂಗಲಕೋಷ್ಟ, ಆಲದಮುಗುಳು, ತಾವರೆಗೆಣಸು, ನೈದಿಲಗಡ್ಡೆ ಇವಿಷ್ಟೂ ಪ್ರತ್ಯೇಕ ಎರಡೆರಡುತೊಲೆ ಮೇರೆ ಚೂರ್ಣಿಸಿ ಹಾಕಿ, ಕದಡಿ ಕಾಸಿ ಹದದಲ್ಲಿ ಇಳುಹಿಕ್ಕೊಂಡು ದಿನಂಪ್ರತಿ ಉದಯಕಾಲದಲ್ಲಿ ಕಾಲುತೊಲೆ ಸೇವಿಸಲು ವಿಸರ್ಪ ಶಮನವಹುದು.

೧೯. ದೂರ್ವಾದಿ ತೈಲ:—ಗರಿಕೆಯಸಮೂಲ, ಅಮೃತಬಳ್ಳಿ, ಶ್ರೀತುಳಸಿ, ಲೋಳೆಸರ, ನೀಲಿ, ಜೇಳುಬಾಲದಸೊಪ್ಪು, ಅಗಸೆಸೊಪ್ಪು, ಗರುಗದಸೊಪ್ಪು, ಇವುಗಳ ರಸ ಪ್ರತ್ಯೇಕ ೨ ಮಾನ ತೆಗೆದು, ಒಂದೊಂದು ಕೊಳಗ ಸ್ವರಸದಲ್ಲೊಂದೊಂದು ಬಳ್ಳ ಎಣ್ಣೆ ಹನಿಸಿ, ಆ ಎಣ್ಣೆಗೆ ಸಮಾನ ಹಸುವಿನಹಾಲನ್ನೂ, ೧ ಬಳ್ಳ ತುಪ್ಪವನ್ನೂ ಹನಿಸಿ ಕಾಯಿಸುವಾಗ ಅದಕ್ಕೆ ಹಾಕುವ ಕಲ್ಕದ್ರವ್ಯ:—ಸೊಗದೇಬೇರು, ಶ್ರೀಗಂಧ, ತುಪ್ಪದಪೇವದಾರು, ಕಚೋರ, ಗ್ರಂಧಿಕತಗರ, ಹಿರೇಮದ್ದಿನಬೇರು, ತ್ರಿಫಲೆ, ಯಾಲಕ್ಕಿ, ಲವಂಗತ್ವಕ್ಕು, ಲವಂಗಪತ್ರೆ, ಲಾವಂಚ, ಅಗಿಲುಶುಂಠಿ, ಕಸ್ತೂರಿ, ಭದ್ರಮುಸ್ತೆ, ಕರೀಜೀರಿಗೆ, ಕುಂಕುಮಕೇಸರಿ, ಮುಡಿವಾಳ, ನೈದಿಲೆಗಡ್ಡೆ, ತ್ರಿಕಟುಕ, ಚಂಗಲಕೋಷ್ಟ, ತಾವರೆಗೆಣಸು, ಕುರಟಿಗೆಬೇರು ಇವಿಷ್ಟನ್ನೂ ಎರಡೆರಡೆ.ತೊಲೆ, ಚೂರ್ಣಿಸಿ ಕದಡಿ ಕಾಸಿ ಹದದಲ್ಲಿ ಇಳುಹಿ ದಿನಂಪ್ರತಿ ಉದಯಕಾಲದಲ್ಲಿ ಅರ್ಧತೊಲೆಮೇರೆ ಸೇವಿಸಲು ವಿಸರ್ಪ, ಮಸೂರಿಕೆ ಮೊದಲಾದ ಸಮಸ್ತ ವ್ರಣ, ಲೂತಾದಿ ವಿಷದೋಷ, ಖಜ್ಜಿ, ತಿಮಿರ, ಸ್ಫೋಟಕ ಇವಿಷ್ಟೂ ಪರಿಹಾರವಹವು.

# ನಲವತ್ತೈದನೆಯ ಅಧ್ಯಾಯ.

## ಮಸೂರಿಕೆ, ಖಜ್ಜಿ, ವಿಷಪುರಿ—ಔಷಧಗಳು.

### ೧. ಮಸೂರಿಕಾ ಲಕ್ಷಣ.

ಕಹಿ, ಹುಳಿ, ಉಪ್ಪು, ಕಾರ ಈ ರಸಗಳುಳ್ಳ ಪದಾರ್ಥಗಳನ್ನು ಅಧಿಕವಾಗಿ ಸೇವಿಸುವಿಕೆ, ಪರಸ್ಪರವಿರುದ್ಧಗಳಾದ ಕ್ಷೀರಮತ್ಸ್ಯಾದ್ಯಾಹಾರಗಳನ್ನು ಸೇವಿಸುವಿಕೆ, ಜೀರ್ಣವಾಗದಿರುವಾಗ ಮತ್ತೆ ಭುಜಿಸುವಿಕೆ, ವಿಷಸಂಬಂಧವುಳ್ಳ ಪುಷ್ಪಗಳಿಂದ ಬರುವ ಗಾಳಿಯನ್ನು ಸೇವಿಸುವಿಕೆ, ಶನೈಶ್ಚರಾದಿ ಕ್ರೂರಗ್ರಹಗಳಿಂದ ದೇಶಗಳಿಗೆ ವೀಕ್ಷಣೆಯುಂಟಾಗುವುದರಿಂದಲೂ, ವಾತಾದಿ ದೋಷಗಳು ಪ್ರಕುಪಿತಗಳಾಗಿ ದುಷ್ಟವಾದ ರಕ್ತದೊಡಗೂಡಿ ಕಿರುಗಡಲೆ ಆಕಾರವಿರುವ (ಬೊಬ್ಬೆಗಳು) ಶರೀರದಲ್ಲಿ ಜನಿಸುವುವು. ಇದೇ ಮಸೂರಿಕೆಯು.

ಮಸೂರಿಕೆಯಲ್ಲಿ ವಾತ, ಪಿತ್ಥ, ಶ್ಲೇಷ್ಮ, ವಾತಶ್ಲೇಷ್ಮ, ವಾತಪಿತ್ಥ, ಪಿತ್ಥಶ್ಲೇಷ್ಮ, ಸನ್ನಿಪಾತ, ಚರ್ಮ, ರಕ್ತ, ಮಾಂಸ, ಮೇದೋ, ಅಸ್ಥಿ, ಮಜ್ಜಾ, ಶುಕ್ರಗಳಿಂದುತ್ಪನ್ನವಾಗಿ ಹದಿನಾಲ್ಕು ಬಗೆಯಾಗಿರುವುದು.

ವಾತಮಸೂರಿಕೆಯಲ್ಲಿ ಬೊಬ್ಬೆಗಳು ಶ್ಯಾಮಾರುಣವರ್ಣವಾಗಿ, ರೂಕ್ಷಗಳಾಗಿ, ಅತಿನೋವುಂಟಾಗಿ, ಕಠಿಣವಾಗಿ, ಬಹಳಕಾಲದವರೆಗೆ ಪಾಕಹೊಂದದೆ ಇರುವುದು. ಇದರಲ್ಲಿ ಅವಯವ ಸಂಧಿಗಳಲ್ಲಿಯೂ, ಮೂಳೆಗಳ ಸಂಧಿಗಳಲ್ಲಿಯೂ, ನೋವು, ಕೆಮ್ಮು, ಛಳಿ, ಮಾಂದ್ಯ, ಬಳಲಿಕೆ ; ಕಾಲುಗಳು, ತುಟಿಗಳು, ನಾಲಿಗೆ ಇವು ಒಣಗುವಿಕೆ, ನೀರಡಿಕೆ, ಅರುಚಿ ಈ ಲಕ್ಷಣಗಳಿರುವುವು.

ಪಿತ್ಥಮಸೂರಿಕೆಯಲ್ಲಿ ಬೊಬ್ಬೆಗಳು ರಕ್ತವರ್ಣಗಳಾಗಿಯೂ, ಪೀತಗಳಾಗಿಯೂ, ಉರಿಯಿಂದಲೂ, ಅತಿ ನೋವಿನಿಂದಲೂ ಕೂಡಿ ಶೀಘ್ರವಾಗಿ ಪಾಕವನ್ನು ಹೊಂದುವುವು. ಇದರಲ್ಲಿ ಅತಿಸಾರವು, ಮೈನೋವು, ಅರುಚಿ, ತಾಪ, ನೀರಡಿಕೆ, ಬಾಯಿಹುಣ್ಣಾಗುವಿಕೆ, ಕಣ್ಣುಗಳು ಕೆಂಪಗಾಗುವಿಕೆ, ತೀಕ್ಷ್ಣವಾದ ಜ್ವರವು ಈ ಚಿಹ್ನೆಗಳಿರುವುವು.

ಕಫಮಸೂರಿಕೆಯಲ್ಲಿ ಬೊಬ್ಬೆಗಳು ಶ್ವೇತವರ್ಣಗಳಾಗಿ ನುಣುಪುಂಟಾಗಿ, ಸ್ಥೂಲಗಳಾಗಿ, ತುರಿಯುಂಟಾಗಿ, ಸ್ವಲ್ಪ ನೋವಿನಿಂದೊಡಗೂಡಿ ಚಿರಕಾಲಕ್ಕೆ ಪಾಕ ಹೊಂದುವವಾಗಿರುತ್ತವೆ. ಇದರಲ್ಲಿ ಬಾಯೊಳಗೆ ಕಫವು ಸ್ರವಿಸುವಿಕೆ, ತಲೆನೋವು, ಶರೀರವು ಭಾರವಾಗಿರುವಿಕೆ, ಅರುಚಿ, ನಿದ್ರೆ ಈ ಲಕ್ಷಣಗಳು ಕಾಣುವುವು.

ಸನ್ನಿಪಾತ ಮಸೂರಿಕೆಯಲ್ಲಿ ಬೊಬ್ಬೆಗಳು ನೀಲವರ್ಣವಾಗಿ ಅವಲಕ್ಕಿಯಂತೆ ವಿಸ್ತೀರ್ಣವುಳ್ಳದ್ದಾಗಿ ಚಿರಕಾಲಕ್ಕೆ ವಾಕವುಂಟಾಗಿ ದುರ್ಗಂಧದಿಂದ ಕೂಡಿ ಕೀವುಸೋರುತ್ತಿರುವುದು. ಇದರಲ್ಲಿ ಮಾತನಾಡುವುದಕ್ಕೆ ಶಕ್ತಿಯಿಲ್ಲದೆ ಕಂಠವು ಕುಗ್ಗಿಹೋಗುವಿಕೆ, ಅರುಚಿ, ಶರೀರವು ಸ್ತಂಭಿಸುವಿಕೆ, ಅನರ್ಥವಾಗಿ ಮಾತಾಡುವಿಕೆ ಈ ಚಿಹ್ನೆಗಳು ಕಾಣುವುವು. ಇದು ಅಸಾಧ್ಯವು.

ರಕ್ತಜ ಮಸೂರಿಕೆಯಲ್ಲಿ ಪಿತ್ಥ ಮಸೂರಿಕೆಯ ಲಕ್ಷಣಗಳು ಕಾಣುವುವು.

ದ್ವಿದೋಷಗಳ ಮಸೂರಿಕೆಯಲ್ಲಿ ದ್ವಿದೋಷಲಕ್ಷಣಗಳೂ ಕಲೆತಿರುವುವು.

ಮಿಕ್ಕಹಾಗೆಯೇ ಸಪ್ತಧಾತುಗಳನ್ನಾಶ್ರಯಿಸಿ ಆಯಾ ಧಾತುಗಳ ಹೆಸರಿನಿಂದ ಮಸೂರಿಕಾರೋಗವು ಉತ್ಪತ್ತಿಯಾಗುವುದು.

ಕುಷ್ಠ ಮೊದಲಾದ ತ್ವಗ್ರೋಗ, ಕಣ್ಣುಬೇನೆ, ಅಪಸ್ಮಾರ, ಕ್ಷಯರೋಗ, ಮಸೂರಿಕೆ ಈ ಐದು ರೋಗಗಳುಳ್ಳವರನ್ನ ನೋಡಿದರೂ ಮುಟ್ಟಿದರೂ ದಾನ ರೂಪವಾಗಿ ಇವರುಗಳಿಂದ ಏನಾದರೂ ತೆಗೆದುಕೊಂಡರೂ ಮುಟ್ಟಿದವರೂ, ಮುಟ್ಟಿದ ಮನುಷ್ಯನಿಂದ ಮತ್ತೊಬ್ಬ ಮನುಷ್ಯನಿಗೆ ಅಂಟುವುದು.

ದೇಹದಲ್ಲಿ ಉಷ್ಣ, ತ್ವಕ್ಕಿನಲ್ಲಿ ತಾಪ, ಜ್ವರ, ಕ್ಷೀಣಿಸುವಿಕೆ, ಇವುಗಳೊಡನೆ ಕೂಡಿ, ಪಿತ್ಥದ ವೈಷಮ್ಯದಿಂದ ಸರ್ವಾಂಗದಲ್ಲೂ ಗಾತ್ರವಾಗಿ ಸ್ಫೋಟಕಗಳು ಏಳುವುವು, ಕೆಲವು ಚಾಣಂಗಿಯ ಜೇಳೆಯ ಆಕಾರವಾಗಿಹವು, ಕೆಲವು ಹವಳದ ಮಣಿಯ ಆಕಾರವಾಗಿಹವು, ಅದರ ನಡುವೆ ಕುಳಿಬಿದ್ದು ಸೀದಹಾಗೆಯಿದ್ದರೂ ಗಂಟಾಗಿದ್ದರೂ ದೇಹವಂ ನಾಶಮಾಡುವುವು.

ಸ್ಫೋಟಕದಲ್ಲಿಯೂ, ಮಸೂರಿಕೆಯಲ್ಲಿಯೂ ಮುಂಚಿತವಾಗಿ ವಿರೇಚನ ಮಾಡಿಸುವುದು ಉತ್ತಮ.

## ಮಸೂರಿಕೆ ಚಿಕಿತ್ಸೆಗಳು.

೧. ಮಸೂರಿಕೆಯ ಪೂರ್ವಚಿಹ್ನೆ ಕಂಡಕೂಡಲೇ ಲಂಘನವನ್ನೂ ವಮನವನ್ನೂ ಮಾಡಿಸುವುದು. ಯಷ್ಟಿಮಧುಕ, ಬೇವಿನ ಒಳನಾರುಗಳ ಕಷಾಯದಲ್ಲಿ ಸಕ್ಕರೆ ಬೆರಸಿ ಕೊಡಿಸಲು ವಿರೇಚನವಹುದು. ಬಹಳವಾಗಿ ತಾಪವುಂಟಾದರೆ ಶಸ್ತ್ರವಹಾಕಿ ರಕ್ತವ ತೆಗೆಯಿಸುವುದು.

೨. ಹಂಸಪಾದಿ ರಸವನ್ನೂ ಎಳ್ಳೆಣ್ಣೆಯನ್ನೂ ಕೂಡಿಸಿ ಕುಡಿಯಕೊಟ್ಟರೂ ಸರಿ, ಲೋಳಿಸರದ ರಸವನ್ನೂ ಪಚ್ಚಕರ್ಪೂರವನ್ನೂ ಕೂಡಿಸಿ ಕುಡಿಯಕೊಟ್ಟರೂ ಸರಿಯೇ, ನೆಲ್ಲೀಕಾಯಿ ರಸವನ್ನೂ ಪಚ್ಚಕರ್ಪೂರವನ್ನೂ ಹಾಕಿ ಕುಡಿಯಕೊಡೆ ಜನ್ಮಜನ್ಮಾಂತರಕ್ಕೂ ಮಸೂರಿಕೆ ಆಗಲಾರದು.

೩. ಬೇವಿನ ಒಳನಾರು, ತ್ರಿಫಲೆ, ಹಿಪ್ಪಲಿ, ಜಾಜೀಬೇರು ಇವಿಷ್ಟನ್ನೂ ಕಷಾಯವ ಕಾಯಿಸಿಕೊಡಿಸುವುದು, ಅದಲ್ಲದಿದ್ದರೆ ಶಾರಿಬಾದಿ ಗಣದ ಕಷಾಯವನ್ನಾದರೂ ಕೊಡಿಸುವುದು. ಶಾರಿಬಾ ಎಂದರ ನೊಗಣಬೇರು.

೪. ಬೇವಿನ ಒಳನಾರಿನ ಕಷಾಯವನ್ನು ಹಿಪ್ಪಲಿಚೂರ್ಣ, ಜೇನುತುಪ್ಪ ಸಹಿತ ಕುಡಿಯಕೊಡೆ ಸಕಲವಾದ ಮಸೂರಿಕೆಗಳೂ ಶಮನವಹವು. ವಿಸರ್ಪ ವ್ಯಾಧಿಯೂ ಶಮನವಹುದು.

೫. ಶುಂಠಿ, ಕಳ್ಳಂಗಡಲೆಬೇರು, ಬೇವಿನ ಒಳನಾರು, ಕಹಿಪಡವಲ, ಚಂಗಲಕೋಷ್ಠ, ಕೊತ್ತುಂಬರಿಬೀಜ, ನೆಲ್ಲೀಚಟ್ಟು, ಭದ್ರಮುಸ್ತೆ ಇವನ್ನು ಕಷಾಯ ಕಾಯಿಸಿ ಜೇನುತುಪ್ಪ ಬೆರಸಿ ಕುಡಿಯಕೊಡೆ ೮ ತರದ ಮಸೂರಿಕೆ ಶಮನವಹುದು.

೬. ಸೊಗದೇಬೇರು, ಯಷ್ಟಿಮಧುಕ, ಲಾವಂಚ, ತುರಿಚನಬೇರು, ಶ್ರೀಗಂಧ, ತಾವರೆಕೇಸರ ಇವಿಷ್ಟನ್ನೂ ಅಷ್ಟಾವಶೇಷವಾಗಿ ಕಷಾಯವ ಕಾಯಿಸಿ ಕೊಡಿಸಲು ಮಸೂರಿಕೆ ಶಮನವಹುದು. ಹಾಗೆಯೇ ಬಾಳೇಗಡ್ಡೆಯ ಕಷಾಯವನ್ನಾದರೂ ಕೊಡಿಸಲು ಮಸೂರಿಕೆ ಶಮನವಹುದು.

೭. ಆಡುಸೋಗೆ ಸೊಪ್ಪು, ಅಮೃತಬಳ್ಳಿ, ಮರದರಿಸಿನ, ಬೇವಿನ ಒಳನಾರು, ನೆಲಗುಳ್ಳದ ಬೇರು, ತ್ರಿಫಲೆ, ಕಹಿಪಡವಲ, ಶುಂಠಿ ಇವಿಷ್ಟನ್ನೂ ಕಷಾಯವ ಕಾಯಿಸಿ ಅಷ್ಟಾವಶೇಷವಂ ಮಾಡಿ ಗುಗ್ಗುಲದ ಚೂರ್ಣವನ್ನೂ ಜೇನುತುಪ್ಪವನ್ನೂ ಕಲೆಯಿಸಿಕೊಡಲು ಸ್ಫೋಟಕ, ವಿಸರ್ಪ, ಮಸೂರಿಕೆಗಳು ಶಮನವಹವು. ಈ ಕಷಾಯ ವೃದ್ಧರುಗಳಾದ ವೈದ್ಯರುಗಳಿಗೆ ಸಮ್ಮತವಾದದ್ದು.

೮. ಸೀಹಾಲೆ, ತ್ರಿಫಲೆ, ಕಹಿಪಡವಲ, ಅರಿಸಿನ, ಆಡುಸೋಗೆ, ಅಗಿಲು ಶುಂಠಿ, ತುರಿಚನಬೇರು, ಕೊತ್ತುಂಬರಿಬೀಜ, ಹಂಸಪಾದಿ, ನೆಲಬೇವು, ಕೊನ್ನಾರಿಗಡ್ಡೆ, ಲಾವಂಚ, ಮುಡಿವಾಳ, ಶ್ರೀಗಂಧ, ಯಷ್ಟಿಮಧುಕ ಇವಿಷ್ಟನ್ನಾದರೂ ಕೂಡಿಸಿ ಅಷ್ಟಾವಶೇಷವಾಗಿ ಕಷಾಯ ಕಾಯಿಸಿಕೊಡಲು ಸ್ಫೋಟಕ, ಮಸೂರಿಕೆ, ಜ್ವರ, ಬಾಯಾರಿಕೆ, ವಿಸರ್ಪ ಇವಿಷ್ಟೂ ಶಮನವಹುದು.

೯. ಕೊನ್ನಾರಿಗಡ್ಡೆ, ತುರಿಚನಬೇರು, ಲಾವಂಚ, ಮರದರಿಸಿನ, ರಾಸ್ಮೆ, ಶುಂಠಿ, ದಶಮೂಲ ಇವಿಷ್ಟನ್ನೂ ಅಷ್ಟಾವಶೇಷವಾಗಿ ಕಷಾಯವ ಕಾಯಿಸಿ ಕೊಡಿಸಲು ವಾತದಿಂದುಂಟಾದ ಮಸೂರಿಕೆ ಶಮನವಹುದು.

೧೦. ನೆಲಗುಳ್ಳದಬೇರು, ಗುಳ್ಳದಬೇರು, ಕಿರುನೆಗ್ಗಿಲು, ಕೊತ್ತುಂಬರಿ ಬೀಜ, ಶುಂಠಿ, ಹಿಪ್ಪಲಿ ಇವಿಷ್ಟೂ ಪ್ರತ್ಯೇಕ ೩ ತೂಕವನ್ನು ಒಂದುಬಳ್ಳ ನೀರಿನಲ್ಲಿ ಅಷ್ಟಾವಶೇಷವಾಗಿ ಕಷಾಯವ ಕಾಯಿಸಿ ಜೇನುತುಪ್ಪ ಬೆರೆಸಿ ಕುಡಿಯ ಕೊಡಿಸಲು ೮ ತೆರನಾದ ಮಸೂರಿಕೆಯೂ ಶಮನವಹವು.

೧೧. ನೆಲ್ಲೀಚಟ್ಟಿನ ಕಷಾಯವನ್ನಾದರೂ, ಅಮೃತಬಳ್ಳೀ ಕಷಾಯವನ್ನಾದರೂ, ಸೊಗದೇಬೇರಿನ ಕಷಾಯವನ್ನಾದರೂ ಸಕ್ಕರೆ ಬೆರೆಸಿ ಉದಯ ಕಾಲದಲ್ಲಿ ಕೊಡಿಸಲು ಮಸೂರಿಕೆ ಶಮನವಹುದು.

೧೨. ಒಂದೆಲಗದ ರಸವನ್ನು ಸಕ್ಕರೆಸಹಿತ ಪಾನಮಾಡಿಸಲು ಮಸೂರಿಕಾ ವ್ಯಾಧಿ ಹೊರಟುಹೋಗುವುದು. ಹೋಗದಿದ್ದರೆ ಅಲ್ಲಿಗಲ್ಲಿಗೊಂದೊಂದು ತೋರಿ ಹೋಗುವುದು.

೧೩. ಲಾವಂಚವಂ ತಣ್ಣೀರಿನಲ್ಲಿ ಸಣ್ಣನಾಗಿ ಅರೆದು ಮೈಗೆ ಲೇಪವಂ ಮಾಡಿಸಿ ಶ್ರೀಗಂಧವಂ ಅರೆದು ನೀರಿನಲ್ಲಿ ಕದಡಿ ಆ ನೀರಿನಿಂದ ಸ್ನಾನವಂ ಮಾಡಿಸಿ ತಂಗಾಳಿಗೆ ಎದುರಾಗಿ ಶಯನವಂ ಮಾಡಿಸಲು ಮಸೂರಿಕೆ ಶಮನ ವಹುದು.

೧೪. ಒಂದೆಲಗದಸೊಪ್ಪಿನ ರಸ ೧ ಸೊಲಿಗೆ, ಶ್ರೀಗಂಧದ ರಸ ಅರ್ಧ ಸೊಲಿಗೆ ಈ ಎರಡನ್ನೂ ಕೂಡಿಸಿ ಕುಡಿಯಕೊಡೋಣ, ಅಲ್ಲದಿದ್ದರೆ ಸೌತೇಕಾಯಿ ಬೀಜವನ್ನೂ ಯಷ್ಟಿಮಧುಕವನ್ನೂ ಅಕ್ಕೀಗಚ್ಚಿನಲ್ಲಿ ಸಣ್ಣನಾಗಿ ಅರೆದು ಕುಡಿ ಸಲು ಸಮಸ್ತವಾದ ಮಸೂರಿಕೆ ಶಮನವಹುದು.

೧೫. ನೆಲ್ಲೀಚಟ್ಟು, ಶ್ರೀಗಂಧ, ಲಾವಂಚ ಈ ಮೂರನ್ನೂ ತಣ್ಣೀರಿನಲ್ಲಿ ಅರೆದು ಕಲ್ಕವಮಾಡಿ ಕೊಡಿಸುವುದು. ಅಲ್ಲದಿದ್ದರೆ ತ್ರಿಫಲೆ ಕಷಾಯವ ಮಾಡಿ ನಾಳಿಕಾತಿಗಡೆ ಚೂರ್ಣ ಬೆರಸಿ ಕುಡಿಯಕೊಡಿಸಲು ಮಸೂರಿಕೆ ಶಮನವಹುದು.

೧೬. ಕಣ್ಣಿಗೆ ಅಂಜನ:—ತೊಗರಿಯನ್ನಾದರೂ ಹುಣಿಸೇಬೀಜವನ್ನಾ ದರೂ ಮೊಲೆಹಾಲಿನಲ್ಲಿ ನೆನೆಯಿಕ್ಕಿ ಆ ಹಾಲನ್ನು ಕಣ್ಣಿಗೆಯರಚಲೂ ಕಣ್ಣಿಗೆ ಹಚ್ಚಲೂ ಮಸೂರಿಕೆ ಏಳದು, ಅದಲ್ಲದಿದ್ದರೆ ಉಗುಳ ನೀರು ಕಣ್ಣಿಗೆ ಯರ ಚಲೂ ಕಣ್ಣಿನಲ್ಲಿ ಮಸೂರಿಕೆ ಏಳದು, ಬೇವಿನಹಗಿನು ಮೊಲೆಹಾಲಿನಲ್ಲಿ ತೇದು ಕಣ್ಣಿಗೆ ಹಚ್ಚಲು ಮಸೂರಿಕೆ ಏಳದು, ಅಲ್ಲದಿದ್ದರೆ ಯಷ್ಟಿಮಧುಕವನ್ನೂ ಅಟ್ಟಿದ ಮಡಿಕೆಯ ಮಸಿಯನ್ನೂ ಉಗುಳ ನೀರಲ್ಲಿ ಅರೆದು ಕಣ್ಣಿಗೆ ಹಚ್ಚಿದರೂ ಸರಿಯೆ, ಹಾಗಲ್ಲದಿದ್ದರೆ ಅಂಜನದ ಶಿಲೆಯನ್ನು ಮೊಲೆಹಾಲಿನಲ್ಲಿ ತೇದು ಕಣ್ಣಿಗೆ ಹಚ್ಚಲು ಕಣ್ಣಿನಲ್ಲಿ ಮಸೂರಿಕೆ ಏಳದು.

೧೭. ಮಸೂರಿಕೆ ಬಹಳವಾಗಿ ಕೀವು ತುಂಬಿ ಹೊರಹೊಂಮಿ ಒಡೆದು ನೀರು ಸುರಿಯುತ್ತಿದ್ದರೆ ಬೆರಣೀಬೂದಿ ಸಣ್ಣನಾಗಿ ಕೊಚ್ಚಿ ಮಲಗುವಸ್ಥಳಕ್ಕೆ ಸಣ್ಣನಾಗಿ ಹಾಸಿ ಅದರಮೇಲೆ ಮಲಗಿಸಿ ಮೈಗೂ ಧೂಳಿತವ ಮಾಡಿಸೋಣ, ಅದರಿಂದ ತಿಮಿರ ಶಮನವಹುದು. ನೀರು ಸುರಿವುದು. ಸದ್ಯಃ ತಾಪಶಮನ.

೧೮. ಆನೆಯ ದಂತವನ್ನಾದರೂ, ಅಸ್ಥಿಯನ್ನಾದರೂ, ಕಾವೀಕಲ್ಲು ಅರಿ ಸಿನ ಸಹ ಚೂರ್ಣಿಸಿ ಜೇನುತುಪ್ಪದಲ್ಲಿ ಕಲೆಸಿ ಲೇಪಿಸಲು ಕಲೆನಿಲ್ಲದು.

೧೯. ಹೊರದಚಕ್ಕೆ, ಗರಿಕೇಬೇರು, ನೆಲಗುಂಬಳ, ನಾಗಕೇಸರ ಇಷ್ಟನ್ನೂ ಪ್ರತ್ಯೇಕ ೪ ವರಹಾ ತೂಕವನ್ನು ಚೂರ್ಣಿಸಿ ೧ ಬಳ್ಳ ಹಾಲು, ೧ ಬಳ್ಳ ತುಪ್ಪ ಸಹಿತ ಪಾಕವಮಾಡಿ ಹದದಲ್ಲಿ ಇಳುಹಿ ಮೈಗೆ ಲೇಪಿಸಲು ವಿಸ್ಫೋಟಕ, ಮಸೂ ರಿಕೆ ಇವೆಲ್ಲವೂ ಶಮನವಹುವು.

೨೦. ಕ್ಷೀರವೃಕ್ಷಾದಿ ತೈಲ :—ಆಲದಮರದ ಚಕ್ಕೆ, ಅರಳೀಮರದ ಚಕ್ಕೆ, ಅತ್ತೀಚಕ್ಕೆ ಇವನ್ನು ಕಷಾಯಂಮೆತ್ತಿ ಅಷ್ಟಾವಶೇಷವಾಗಿ ಕಾಯಿಸಿ ೧ ಬಳ್ಳ ಲೋಳೀಸರದ ರಸ, ೧ ಬಳ್ಳ ಗರಿಕೆಯ ರಸ, ಕಷಾಯಸಹ, ೩ ಬಳ್ಳ ರಸಕ್ಕೆ ೩ ಬಳ್ಳ ಹಾಲು ಹನಿಸಿ ಅದರಲ್ಲಿ ೧ ಬಳ್ಳ ಎಣ್ಣೆಯ ಹನಿಸಿ ಅದಕ್ಕೆ ಹಾಕುವ ಕಲ್ಕ ದ್ರವ್ಯ:-ಯಷ್ಟಿಮಧುಕ, ಶ್ರೀಗಂಧ, ಚಂಗಲಕೋಷ್ಠ, ಕೊನ್ನಾರಿಗಡ್ಡೆ, ಸೊಗದೇ ಬೇರು, ನೆಲ್ಲೀಚಟ್ಟು, ನೈದಿಲಗಡ್ಡೆ, ಮುಡಿವಾಳ, ಲಾವಂಚ, ಹೊಂಗೇವೃಕ್ಷದ ಬೇರು, ಕಚೋರ, ನೀಲಿ, ಯಾಲಕ್ಕಿ, ಲವಂಗತ್ವಕ್ಕು, ಲವಂಗಪತ್ರೆ, ಇಪ್ಪೆ ಹೂವು, ಈಶ್ವರಿ, ಆಲದಮೊಗಳು, ಅತ್ತೀಚಿಗುರು, ಅರಳೀಮೊಗಳು ಇವುಗಳನ್ನು ಪ್ರತ್ಯೇಕ ೨ ವರಹಾ ತೂಕವಂ ಸೂಕ್ಷ್ಮವಾಗಿ ಚೂರ್ಣಿಸಿಹಾಕಿ ಪಾಕವಮಾಡಿ ಹದದಲ್ಲಿ ಇಳುಹಿ ಈ ತೈಲದಿಂದ ಅಭ್ಯಂಗವಮಾಡಿಸಲು ಸ್ಫೋಟಕ, ಮಸೂರಿಕೆ, ವಿಸರ್ಪ, ಖಜ್ಜಿ, ತ್ವಕ್ಕಿನ ಉರಿ ಮೊದಲಾದ ಉಷ್ಣವ್ಯಾಧಿಗಳು ಶಾಂತವಹವು.

೨೧. ಹಂಸಪಾದಿ ರಸವನ್ನೂ ಚಿಟ್ಟೆರಳೆಣ್ಣೆಯನ್ನೂ ಸಮವಾಗಿ ಕೂಡಿಸಿ ಮೈಗೆ ಲೇಪವ ಮಾಡಿಸಿ, ಶ್ರೀಗಂಧವನ್ನು ಲೇಪಿಸಿ, ತಣ್ಣೀರಿನಿಂದ ಸ್ನಾನ ಮಾಡಿಸಲು ಮಸೂರಿಕೆ ಶಮನವಹುದು. ಆಮೇಲೆ ಈಶ್ವರ ಸನ್ನಿಧಾನಕ್ಕೆ ಹೋಗಿ ಮಹೇಶ್ವರನನ್ನು ರಕ್ಷರಕ್ಷಯೆಂದು ಪ್ರಾರ್ಥನೆಯನ್ನು ಮಾಡುವುದು.

೨೨. ಶ್ರೀಗಂಧ, ಪರ್ಪಾಷ್ಟಕ, ಅಮೃತಬಳ್ಳಿ, ಕೊತ್ತುಂಬರಿಬೀಜ, ಲಾವಂಚ, ಮುಡಿವಾಳ, ಕೊನ್ನಾರಿಗಡ್ಡೆ ಇವಿಷ್ಟನ್ನೂ ಪ್ರತ್ಯೇಕ ೪ ವರಹಾ ತೂಕ ಒಂದು ಬಳ್ಳ ನೀರಿನಲ್ಲಿ ಕಷಾಯಮೆತ್ತಿ ಅಷ್ಟಾವಶೇಷವಾಗಿ ಕಾಯಿಸಿ ಕೊಡಿಸಲು ಉಗ್ರವಾದ ತಾಪ, ಬಾಯಾರಿಕೆ ಸಹಿತವಾದ ವಿಸ್ಫೋಟಕಗಳು ಶಮನವಹವು.

೨೩. ಬೇವಿನ ಒಳನಾರು, ಅಮೃತಬಳ್ಳಿ, ನೆಲ್ಲೀಚಟ್ಟು, ಜಾಜೀಬೇರು ಇವಿಷ್ಟೂ ಪ್ರತ್ಯೇಕ ೪ ವರಹಾ ತೂಕವನ್ನೂ ಕಷಾಯಮೆತ್ತಿ ಅಷ್ಟಾವಶೇಷವಾಗಿ ಕಾಯಿಸಿ ಕೊಡಿಸಲು ಸ್ಫೋಟಕ ಶಮನವಹುದು. ಅಪಲ್ಲದಿದ್ದರೆ ತ್ರಿಫಲೆ, ಬೇವಿನ ಒಳನಾರು ಇವನ್ನ ಪ್ರತ್ಯೇಕ ೪ ವರಹಾ ತೂಕ ಕಷಾಯವಮಾಡಿ ಕೊಡಿಸಲು ಸ್ಫೋಟಕ ಶಮನವಹುದು.

೨೪. ಕಹಿದಗಿಸಿನ, ತ್ರಿಫಲೆ, ದ್ರಾಕ್ಷಿಹಣ್ಣು, ಚಿಳ್ಳೇಬೀಜ ಇಷ್ಟನ್ನೂ ಪ್ರತ್ಯೇಕ ೪ ವರಹಾ ತೂಕವಂ ಅಷ್ಟಾವಶೇಷವಾಗಿ ಕಾಯಿಸಿ ಕೊಡಿಸಲು ಸ್ಫೋಟಕ ಶಮನವಹುವು.

೨೫. ಜೀರಿಗೆ, ದವನದತೊಕ್ಕು, ಚಂಗಲಕೋಷ್ಠ, ಕೊತ್ತುಂಬರಿಬೀಜ, ಗರಿಕೆಯಮೊಳೆ ಇವುಗಳನ್ನು ಪ್ರತ್ಯೇಕ ೨ ವರಹಾ ತೂಕ ನೀರಲ್ಲಿ ಅರೆದು ಸಕ್ಕರೆ ಬೆರೆಸಿ ಕುಡಿಯಕೊಡೆ ಮಸೂರಿಕೆ, ಸ್ಫೋಟಕಗಳು ಶಮನವಹವು.

೨೬. ಮಸೂರಿಕೆ ತೊಡಗುವುದಕ್ಕೆ ಮುಂಚೆಯೇ ನಿಂಬೇಹಣ್ಣಿನ ರಸದಲ್ಲಿ ಬೆಲ್ಲದ ಪಾನಕವಮಾಡಿ ಕೊಡಿಸುವುದು. ಅದಲ್ಲದಿದ್ದರೆ ಹಸುವಿನ ಹಸೀಹಾಲಲ್ಲಿ ರುದ್ರಾಕ್ಷಿಯನ್ನು ತೇದು ಕುಡಿಯಕೊಡಲು ಮಸೂರಿಕೆ ಏಳಲಾರದು, ಆದರೂ ಅಲ್ಲಲ್ಲಿ ಒಂದೊಂದು ತೋರಿಹೋಗುವುದು.

## ೨. ಖಜ್ಜಿಗೆ ಚಿಕಿತ್ಸೆಗಳು.

೧. ಶ್ರೀಗಂಧದ ಬೀಜ ೧ ತೊಲೆ, ಬಾವಂಚಿಬೀಜ ೧ ತೊಲೆ, ಕಚೋರ ೧ ತೊಲೆ, ಜಂಗಲಿಬಾದಾಮಿ ಬೀಜದ ಪೊಪ್ಪು ೧ ತೊಲೆ, ಕಸ್ತೂರಿ ಅರಿಸಿನ ೧ ತೊಲೆ, ಆರತಿ ಕರ್ಪೂರ ೧ ತೊಲೆ, ಹೊಂಗೇಬೀಜದ ಪೊಪ್ಪು ೨ ತೊಲೆ ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಅರೆಯುವ ದಿನಸುಗಳನ್ನು ಅರೆದು ಎಲ್ಲವನ್ನೂ ಶೇರಿಸಿ ಇಟ್ಟುಕೊಳ್ಳುವುದು. ಖಜ್ಜಿಗೆ ಮೊಸರಿನಲ್ಲಿ ಅರೆದು ಮೈಗೆ ಲೇಪಿಸಿ ಬಿಸಿನೀರು ಸ್ನಾನಮಾಡಿದರೆ ಗುಣವಾಗುವುದು.

೨. ಕೊಬರಿಎಣ್ಣೆ ೧ ಪಾವು, ಶಿಲಾರಸ ೧ ತೊಲೆ, ಹಾಲುಹಿಂಗು ೨ ಆಣೆ ತೂಕ ಇವು ಮೂರು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಕಾಯಿಸಿ ಶಿಲಾರಸ ಕರಗಿದಕೂಡಲೇ ಇಳಿಸಿಕೊಳ್ಳುವುದು. ಇದನ್ನು ಖಜ್ಜಿಗೆ ಲೇಪನ ಮಾಡಿ ಬಿಸಿನೀರು ಸ್ನಾನಮಾಡಿದರೆ ಗುಣವಾಗುವುದು.

೩. ಮುರದಾರಸಿಂಗಿ ೩ ತೊಲೆ, ಇಂಗಲೀಕ ೧ ತೊಲೆ, ರಸಕರ್ಪೂರ ೧ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ಚನ್ನಾಗಿ ಅರೆದು ಕೊಬರಿ ಎಣ್ಣೆ ೧೦ ತೊಲೆ ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಕಾಯಿಸಿ ಇಟ್ಟುಕೊಳ್ಳುವುದು. ಖಜ್ಜಿಗೆ ೩-೪-೫ ದಿನ ಲೇಪಿಸಿ ಬಿಸಿನೀರು ಸ್ನಾನಮಾಡಿದರೆ ಗುಣವಾಗುವುದು.

೪. ಅರಿದಳ ॥ ತೊಲೆ, ಮಣಿಶಿಲೆ ॥ ತೊಲೆ, ಮುರುದಾರಶಿಂಗು ॥ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ೧ ಸೊಲಿಗೆ ಹಸುವಿನತುಪ್ಪ ಹಾಕಿ ಚನ್ನಾಗಿ ಅರೆದು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಕಾಯಿಸುವಾಗ ಒಂದು ಗೇರುಬೀಜ ಕತ್ತರಿಸಿಹಾಕಿ ಹದವಾಗಿ ಕೆಂಪಗೆ ಆಗುವಾಗ ಗೇರುಬೀಜ ತೆಗೆದುಬಿಸಾಡಿ ಬಾಯಿ ಅಗಲವಾಗಿ ಇರತಕ್ಕ ಪಾತ್ರೆಯಲ್ಲಿ ತಣ್ಣೀರು ಹಾಕಿ ಅದರಮೇಲೆ ಬಾಂಡ್ಲಿಯಲ್ಲಿ ಕಾಯಿಸಿದ ಔಷಧವನ್ನು ಸುರಿಯುವುದು. ಬಿಸಿ ಆರಿದನಂತರ ಮೇಲೆ ತೇಲುತ್ತಿರುವ ಔಷಧವನ್ನು ಎತ್ತಿಟ್ಟುಕೊಳ್ಳುವುದು. ಪ್ರಯೋಗ:—ಖಜ್ಜಿಯಾಗಿ ಇರುವ ಸ್ಥಳದಲ್ಲಿ ಹಚ್ಚಿ ೨-೩ ಜಾವದವರೆಗೆ ಹಾಗೆಯೇ ಇದ್ದು ಬಿಸಿನೀರು ಸ್ನಾನಮಾಡಬೇಕು. ಇದರಿಂದ ಎಷ್ಟೇದಿನದ ಖಜ್ಜಿಯಾಗಲಿ ೧-೨-೩ ದಿನ ಹಚ್ಚಿದರೆ ಸುಟ್ಟುಹೋಗಿ ಗುಣವಾಗುವುದು.

೫. ಹಸುವಿನಬೆಣ್ಣೆ ೩ ತೊಲೆ, ಹಾಲುವಾಣದಸೊಪ್ಪಿನ ರಸ ೩ ತೊಲೆ, ಮೈಲತುತ್ತ ಬೆಂಕಿಯಲ್ಲಿ ಸುಟ್ಟದ್ದು ೧ ತೊಲೆ, ಪಾಲುತುತ್ತ ೨ ತೊಲೆ, ಆರತಿ

ಕರ್ಪೂರ ೧ ತೊಲೆ ಇವು ಮೂರು ದಿನಸು ಖಲ್ವದಲ್ಲಿ ಹಾಕಿ ಅರೆದು ಎಲ್ಲವನ್ನು ತಾಂಬ್ರದ ತಟ್ಟೆಯಲ್ಲಿ ಹಾಕಿ ತಾಂಬ್ರದ ಪಂಚಪಾತ್ರೆಯಿಂದ ಚನ್ನಾಗಿ ಅರೆದು ಇಟ್ಟುಕೊಳ್ಳುವುದು. ಖಜ್ಜಿಗೆ ೩-೫-೭ ದಿನ ಹಚ್ಚಿ ಬಿಸಿನೀರು ಸ್ನಾನಮಾಡಿದರೆ ಎಲ್ಲವೂ ಸುಟ್ಟುಹೋಗುವುದು.

೬. ಶ್ರೀಗಂಧದಬೀಜ ತಂದು ಪೊಪ್ಪುತೆಗೆದು ಹಸುವಿನಮಜ್ಜಿಗೆಯಲ್ಲಿ ಅರೆದು ಮೈಗೆ ಲೇಪಿಸಿ ಇಪ್ಪೇಹಿಂಡಿಯನ್ನು ನೀರಿನಿಂದ ಅರೆದು ಮೈಗೆ ಉಜ್ಜಿ ಬಿಸಿನೀರು ಸ್ನಾನಮಾಡಿದರೆ ಖಜ್ಜಿ ಗುಣವಾಗುವುದು.

೭. ಒಳ್ಳೆಣ್ಣೆ ‖ ಸೇರು, ನೆಲ್ಲೀಕಾಯಿಗಂಧಕ ‖ ತೊಲೆ, ಅರತಿಕರ್ಪೂರ ‖ ತೊಲೆ, ಬಾವಂಚಿಬೀಜ ೧ ತೊಲೆ, ಕಸ್ತೂರಿ ಅರಿಸಿನ ೧ ತೊಲೆ, ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಅರಿಯುವ ದಿನಸುಗಳನ್ನು ಅರೆದು ಎಲ್ಲ ವನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಕಾಯಿಸಿ ಶೋಧಿಸಿ ಕೊಳ್ಳುವುದು. ಖಜ್ಜಿಗೆ ಹಚ್ಚಿ ಬಿಸಿನೀರಿನಿಂದ ಸ್ನಾನಮಾಡಿದರೆ ಗುಣ ವಾಗುವುದು.

೮. ಕೋಲುಕಳ್ಳಿ ಒಂದು ಹಿಡಿತಂದು ಬೆಂಕಿಯಲ್ಲಿ ಬೆಚ್ಚಗೆಮಾಡಿ ರಸ ತೆಗೆದು ಶೋಧಿಸಿ ಆ ರಸವನ್ನು ಹಸುವಿನಬೆಣ್ಣೆಯಲ್ಲಿ ಕಲಸಿ ಖಜ್ಜಿಗೆ ಹಚ್ಚಿ ಬಿಸಿನೀರು ಸ್ನಾನಮಾಡುವುದು. ಈರೀತಿ ೨-೩ ದಿವಸ ಹಚ್ಚಲು ಖಜ್ಜಿ ಗುಣ ವಾಗುವುದು.

೯. ನೆಲ್ಲೀಕಾಯಿಗಂಧಕ ೬ ತೊಲೆ, ಪಾದರಸ ೬ ತೊಲೆ ಇವೆರಡು ಖಲ್ವ ದಲ್ಲಿ ಹಾಕಿ ಅರೆದು ಅನಂತರ ಮುರದಾರಸಿಂಗಿ ೬ ತೊಲೆ, ಮಣಿಶಿಲೆ ೬ ತೊಲೆ, ಸಿಂಧೂರ (ಗಂಗಚಂದ್ರ) ೬ ತೊಲೆ ಇವುಗಳನ್ನು ಹಾಕಿ ಚನ್ನಾಗಿ ಅರೆದು ಇಟ್ಟುಕೊಳ್ಳುವುದು. ಬಿಳೇಜೀರಿಗೆ ೬ ತೊಲೆ, ಕರೇಜೀರಿಗೆ ೬ ತೊಲೆ, ಕಸ್ತೂರಿ ಅರಿಸಿನ ೬ ತೊಲೆ, ಕಬಾಬ್‌ಚಿನ್ನಿ ೬ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಇವೆಲ್ಲವನ್ನೂ ಸೇರಿಸಿ ಕಲಿಸಿಟ್ಟು ಕೊಳ್ಳುವುದು. ಖಜ್ಜಿಗೆ ಕೊಬರಿ ಎಣ್ಣೆಯಲ್ಲಿ ಕಲಸಿ ಲೇಪಿಸಿ ಬಿಸಿನೀರು ಸ್ನಾನಮಾಡುವುದು.

೧೦. ನೆಲ್ಲೀಕಾಯಿಗಂಧಕ ‖ ತೊಲೆ, ಅರತಿಕರ್ಪೂರ ‖ ತೊಲೆ, ಬಾವಂಚಿ ಬೀಜ ೧ ತೊಲೆ, ಕಸ್ತೂರಿ ಅರಿಸಿನ ೧ ತೊಲೆ ಇವುಗಳಲ್ಲಿ ಕುಟ್ಟುವ ದಿನಸು ಗಳನ್ನು ಕುಟ್ಟಿ ಶೋಧಿಸಿ ಅರಿಯುವ ದಿನಸುಗಳನ್ನು ಖಲ್ವದಲ್ಲಿ ಅರೆದು ಎಲ್ಲ ವನ್ನೂ ಸೇರಿಸಿ ಕಲಸಿ ಇಟ್ಟುಕೊಳ್ಳುವುದು. ಖಜ್ಜಿಗೆ ಹೊಂಗೇಯಣ್ಣೆಯಲ್ಲಿ ಕಲಸಿ ಲೇಪಿಸಿ ಬಿಸಿನೀರು ಸ್ನಾನಮಾಡುವುದು.

೧೧. ನೆಲ್ಲೀಕಾಯಿಗಂಧಕ ೧ ತೊಲೆ, ಅಚ್ಚೆಳ್ಳು ೧ ಪಾವು, ರಾಯಪುಡಿ ಸಕ್ಕರೆ ೧ ಪಾವು ಇವು ಮೂರು ಚನ್ನಾಗಿ ಅರೆದು ಇಟ್ಟುಕೊಳ್ಳುವುದು.

ಖಜ್ಜಿಗೆ ಬಿಸಿನೀರಿನಿಂದ ಮೈಗೆ ಲೇಪಿಸಿ ಬಿಸಿನೀರು ಸ್ನಾನಮಾಡುವುದು. ಈ ರೀತಿ ೪-೫ ಸಲ ಮಾಡಿದರೆ ಖಜ್ಜಿ ಗುಣವಾಗುವುದು.

೧೨. ನೆಲ್ಲೀಕಾಯಿಗಂಧಕ ೧॥ ತೊಲೆ ತಂದು ಖಲ್ವದಲ್ಲಿ ಹೊಂಗೇಯಣ್ಣೆ ೧ ಪಾವು ಹಾಕಿ ಚನ್ನಾಗಿ ಅರೆದು ಖಜ್ಜಿಗೆ ಲೇಪಿಸಿ ಬಿಸಿನೀರು ಸ್ನಾನಮಾಡುವುದು. ಪಥ್ಯ ಹೆಸುವಿನಹಾಲು ಅನ್ನ.

೧೩. ರಸಕರ್ಪೂರ ೧ ತೊಲೆ, ನೆಲ್ಲೀಕಾಯಿಗಂಧಕ ೧ ತೊಲೆ, ಡಿಕ್ಕೆಮಲ್ಲಿ ೧ ತೊಲೆ, ಕಟುಕರೋಹಿಣಿ ೧ ತೊಲೆ, ಮುಸಾಂಬರ ಕಾಲುತೊಲೆ, ಚಂದ್ರ ಕಾಲುತೊಲೆ ಇವುಗಳಲ್ಲಿ ಕುಟ್ಟುವ ದಿನಸುಗಳ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಅರೆಯುವ ದಿನಸುಗಳನ್ನು ಖಲ್ವದಲ್ಲಿ ಹಾಕಿ ಅರೆದು ಒಂದು ಬಾಂಡ್ಲಿಯಲ್ಲಿ ಬೇವಿನ ಎಣ್ಣೆ ಅರಪಾವು, ಹೊಂಗೇ ಎಣ್ಣೆ ಅರಪಾವುಹಾಕಿ ಒಲೆಯಮೇಲಿಟ್ಟು ಕಾಯಿಸಿ ಇಟ್ಟುಕೊಳ್ಳುವುದು. ಖಜ್ಜಿಗೆ ಮೇಲೆ ಲೇಪಿಸಿ ಬಿಸಿನೀರು ಸ್ನಾನಮಾಡುವುದು.

೧೪. ರಸಕರ್ಪೂರ ೧ ತೊಲೆ, ಇಂಗಳೀಕ ೧ ತೊಲೆ, ಮುರದಾರಸಿಂಗಿ ೧ ತೊಲೆ, ಪಾಲತುತ್ತ ೧ ತೊಲೆ, ಕಟುಕರೋಹಿಣಿ ೧ ತೊಲೆ, ರಸಸಿಂಧೂರ ೧ ತೊಲೆ, ಮೈಲತುತ್ತ ಬೆಂಕಿಯಲ್ಲಿ ಸುಟ್ಟದ್ದು ೧ ತೊಲೆ, ಹೊಂಗೇ ಎಣ್ಣೆ ಅರಪಾವು, ಬೇವಿನ ಎಣ್ಣೆ ಅರಪಾವು, ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಶೋಧಿಸಿ ಅರೆಯುವ ದಿನಸುಗಳನ್ನು ಖಲ್ವದಲ್ಲಿ ಅರೆದು ಎಲ್ಲವನ್ನೂ ಶೇರಿಸಿ ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಕಾಯಿಸಿಟ್ಟುಕೊಳ್ಳುವುದು. ಖಜ್ಜಿಗೆ ಮೇಲೆ ಲೇಪಿಸಿ ಬಿಸಿನೀರು ಸ್ನಾನಮಾಡುವುದು. ಇದಕ್ಕೆ ಪಥ್ಯ. ಹೆಸುವಿನ ಮಜ್ಜಿಗೆ ಅನ್ನ.

೧೫. ಮೈಲತುತ್ತ ಬೆಂಕಿಯಲ್ಲಿ ಸುಟ್ಟದ್ದು ಕಾಲುತೊಲೆ, ಪಾಲತುತ್ತ ॥ ತೊಲೆ, ಜಂಗಲಿಬಾದಾಮಿ ಪೊಪ್ಪು ೧ ತೊಲೆ, ಶ್ರೀಗಂಧದಬೀಜ ೧ ತೊಲೆ, ಕಾಕಮಾರಿಬೀಜ ೧ ತೊಲೆ, ರಸಕರ್ಪೂರ ॥ ತೊಲೆ, ನೆಲ್ಲೀಕಾಯಿಗಂಧಕ ೧ ತೊಲೆ, ವೀಳೆದೆಲೆರಸ ಅರಪಾವು, ಹೊಂಗೇ ಎಣ್ಣೆ ॥ ಶೇರು, ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಶೋಧಿಸಿ ಅರೆಯುವ ದಿನಸುಗಳನ್ನು ಖಲ್ವದಲ್ಲಿ ಅರೆದು ಎಲ್ಲವನ್ನೂ ಶೇರಿಸಿ ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಕಾಯಿಸಿಟ್ಟುಕೊಳ್ಳುವುದು. ಖಜ್ಜಿಗೆ ಮೇಲೆ ಲೇಪಿಸಿ ಬಿಸಿನೀರು ಸ್ನಾನಮಾಡುವುದು. ಇದಕ್ಕೆ ಪಥ್ಯ. ಹೆಸುವಿನ ಮಜ್ಜಿಗೆ ಅನ್ನ.

೧೬. ಕಾಕಮಾರಿಬೀಜ ॥ ತೊಲೆ ಸುಮಾರಾಗಿ ಹುರಿದುಕೊಳ್ಳುವುದು, ಕರೇಜೀರಿಗೆ ॥ ತೊಲೆ, ಜಂಗ್ಲಿಬಾದಾಮಿ ಪೊಪ್ಪು ॥ ತೊಲೆ, ಯಾಲಕ್ಕಿ ॥ ತೊಲೆ, ಹೊಂಗೇಬೀಜ ॥ ತೊಲೆ, ಗಜ್ಜೀಕಾಯಿ ಪೊಪ್ಪು ॥ ತೊಲೆ, ಆರತಿ ಕರ್ಪೂರ ಕಾಲುತೊಲೆ, ಹೊಂಗೇ ಎಣ್ಣೆ ೧॥ ಶೇರು, ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಶೋಧಿಸಿ ಅರೆಯುವ ದಿನಸುಗಳನ್ನು ಖಲ್ವದಲ್ಲಿ ಅರೆದು

ಎಲ್ಲವನ್ನೂ ಶೇರಿಸಿ ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಕಾಯಿಸಿಟ್ಟುಕೊಳ್ಳುವುದು. ಖಜ್ಜಿಗೆ ಮೇಲೆ ಲೇಪಿಸಿ ಬಿಸಿನೀರು ಸ್ನಾನಮಾಡುವುದು.

೧೭. ಬಿಳೀ ಈರುಳ್ಳಿಗಡ್ಡೆ ೧ ಶೇರು ತಂದು ಸಣ್ಣಸಣ್ಣದಾಗಿ ಕುಯಿದು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಕಾಯಿಸಿ ಹಸುವಿನತುಪ್ಪ ಹಾಕಿ ಹುರಿದು ಕಿರುನೆಲ್ಲಿಸೊಪ್ಪಿನ ರಸ ೧ ಸೊಲಿಗೆ, ಆಕಳತುಪ್ಪ ಹಾಕಿ ರಸ ಹೀರುವವರಿವಿಗೂ ಬೇಯಿಸಿ ಆದಕ್ಕೆ ಬಿಳೀಜೀರಿಗೆ ೧ ತೊಲೆ, ಯಾಲಕ್ಕಿ ೧ ತೊಲೆ, ಅತಿಮಧುರ ೧ ತೊಲೆ ಇವು ಮೂರು ಕುಟ್ಟಿ ಚೂರ್ಣಮಾಡಿ ಶೋಧಿಸಿ ಬಾಂಡ್ಲಿಯಲ್ಲಿ ಹಾಕಿ ಕಲಸಿ ಅನಂತರ ಖಲ್ವದಲ್ಲಿ ಹಾಕಿ ಚನ್ನಾಗಿ ಅರೆದು ಇಟ್ಟುಕೊಳ್ಳುವುದು. ಬೆಳಿಗ್ಗೆ ನೆಲ್ಲೀಕಾಯಿ ಪ್ರಮಾಣ ಹೊತ್ತಿಗೆ ೭ ದಿವಸ ಕೊಡುವುದು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಮೈಯಲ್ಲಿ ಆಗುವ ಹುಣ್ಣು, ಖಜ್ಜಿ ಗುಣವಾಗುವುದು.

೧೮. ಹವಳಸರಿಗಂಧಕ ೨ ತೊಲೆ, ಪಾದರಸ ॥ ತೊಲೆ ಇವೆರಡನ್ನೂ ಖಲ್ವದಲ್ಲಿ ಅರೆಯುವುದು ಕಸ್ತೂರಿ ಅರಿಸಿನ ೨ ತೊಲೆ, ಕಚೋರ ೧ ತೊಲೆ, ಬಾವಂಚಿಬೀಜ ೧ ತೊಲೆ, ಕಾಕಮಾರಿಬೀಜ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಹುಚ್ಚೆಳ್ಳೆಣ್ಣೆ ತಕ್ಕಷ್ಟು ಹಾಕಿ ಎಲ್ಲವನ್ನೂ ಶೇರಿಸಿ ಅರೆದುಕೊಂಡು ಮೇಲೆ ಲೇಪಿಸುತ್ತಾ ಬರುವುದು. ಇದರಿಂದ ಖಜ್ಜಿ, ವಿಷಪುರಿ ಹುಣ್ಣು, ಮೈಮೇಲೆ ಏಳುವ ಹುಣ್ಣುಗಳು ಗುಣವಾಗುತ್ತೆ.

## ೩. ವಿಷಪುರಿಗೆ ಚಿಕಿತ್ಸೆಗಳು.

೧. ದತ್ತೂರಿಸೊಪ್ಪಿನ ರಸ ೧ ಪಾವು, ಹೊಂಗೇ ಎಣ್ಣೆ ॥ ಶೇರು, ಮೈಲತುತ್ತ ಬೆಂಕಿಯಲ್ಲಿ ಸುಟ್ಟದ್ದು ಕಾಲುತೊಲೆ, ಮುದಾ್ರರುಸಿಂಗಿ ೧ ತೊಲೆ, ಗಜ್ಜೀಕಾಯಿಪೊಪ್ಪು ೧ ತೊಲೆ ಇವುಗಳನ್ನು ಖಲ್ವದಲ್ಲಿ ಅರೆದು ಎಲ್ಲವನ್ನೂ ಶೇರಿಸಿ ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಟ್ಟುಕೊಳ್ಳುವುದು. ವಿಷಪುರಿ, ಕರ್ಪಾಣಿ, ನಸುರು ಹುಣ್ಣುಗಳಿಗೆ ಕೋಳಿರೆಕ್ಕೆಯಿಂದ ಸವರಬೇಕು. ಹುಣ್ಣನ್ನು ಸೀಗೇಕಾಯಿ ನೀರಿನಿಂದ ತೊಳೆಯಬೇಕು.

೨. ಒಳ್ಳೆಣ್ಣೆ ೧೨ ತೊಲೆ, ಯಲವುಸಂದಿಸೊಪ್ಪು ೧ ಹಿಡಿ, ತೊಟ್ಲಸೊಪ್ಪು ೧ ಹಿಡಿ, ಹಾಲವಾಣದಸೊಪ್ಪು ೧ ಹಿಡಿ ಇವು ಮೂರು ಸೊಪ್ಪುಗಳನ್ನು ಕುಟ್ಟಿ ರಸತೆಗೆದು ಬಟ್ಟೆಯಲ್ಲಿ ಶೋಧಿಸಿಕೊಳ್ಳಬೇಕು ಮೈಲತುತ್ತ ಬೆಂಕಿಯಲ್ಲಿ ಸುಟ್ಟದ್ದು ೧ ತೊಲೆ ಇದನ್ನು ಖಲ್ವದಲ್ಲಿ ಅರೆದು ಎಲ್ಲವನ್ನೂ ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವುದು. ಈ ಎಣ್ಣೆಯನ್ನು ಮೇಲೆ ಲೇಪಿಸುವುದು. ಇದರಿಂದ ಎಲ್ಲಾತರಹದ ಹುಣ್ಣು, ವಿಷಪುರಿ, ಖಜ್ಜಿ ಗುಣವಾಗುವುದು.

೩. ಕೋಲುಕಳ್ಳಿ ಕುಡಿತಂದು ಕುಟ್ಟಿ ರಸತೆಗೆದದ್ದು ೬ ತೊಲೆ, ಅರಿಸಿನ ೨ ತೊಲೆ, ಬೇವಿನ ಎಣ್ಣೆ ೧೨ ತೊಲೆ ಇವುಗಳನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ವಿಷ ಪುರಿಗೆ ಮೇಲೆ ಲೇಪಿಸುತ್ತಾ ಬರುವುದು. ಹೀಗೆ ೭-೧೧ ದಿನ ಲೇಪಿಸಿದರೆ ವಿಷ ಪುರಿ ಗುಣವಾಗುವುದು.

೪. ಜಂಗ್ಲಿಬಾದಾಮಿ ಪೊಪ್ಪು ೧ ತೊಲೆ, ಕಾಕಮಾರಿಬೀಜ ೧ ತೊಲೆ, ಪೊಪ್ಪಳಿಚಕ್ಕೆ ೬ ತೊಲೆ, ಮೈಲತುತ್ತ ಬೆಂಕಿಯಲ್ಲಿ ಸುಟ್ಟಿದ್ದು ಕಾಲುತೊಲೆ, ಪಾಲತುತ್ತ ೧ ತೊಲೆ, ಮುರದಾರುಸಿಂಗಿ ೧ ತೊಲೆ, ಜಂಗಾಲುಪಚ್ಚೆ ಕಾಲು ತೊಲೆ, ಹೊಂಗೇ ಎಣ್ಣೆ ೧ ಶೇರು, ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಶೋಧಿಸಿ ಅರೆಯುವ ದಿನಸುಗಳನ್ನು ಖಲ್ವದಲ್ಲಿ ಅರೆದು ಎಲ್ಲವನ್ನೂ ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಕೊಳ್ಳುವುದು. ಇದನ್ನು ವಿಷಪುರಿಗೆ ಮೇಲೆ ಲೇಪಿಸುತ್ತಾಬಂದರೆ ಗುಣವಾಗುವುದು.

೫. ಗಂಟುಶೀಗೇಕಾಯಿ ೧ ತೊಲೆ, ವಾಯುವಿಳಂಗ ೧ ತೊಲೆ, ಮರದರಿ ಸಿನ ೧ ತೊಲೆ, ಬಜೆ ೧ ತೊಲೆ, ಯಾಲಕ್ಕಿ ೧ ತೊಲೆ, ರಸಕರ್ಪೂರ ಕಾಲುತೊಲೆ, ಮುರದಾರಸಿಂಗಿ ಕಾಲುತೊಲೆ, ಮೈಲತುತ್ತ ಬೆಂಕಿಯಲ್ಲಿ ಸುಟ್ಟದ್ದು ಕಾಲುತೊಲೆ, ಹಾಲವಾಣದಸೊಪ್ಪಿನ ರಸ ೩ ತೊಲೆ, ಬೇವಿನ ಎಣ್ಣೆ ೧೮ ತೊಲೆ, ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಅರೆಯುವ ದಿನಸು ಗಳನ್ನು ಖಲ್ವದಲ್ಲಿ ಅರೆದು ಎಲ್ಲವನ್ನೂ ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯ ಮೇಲಿಟ್ಟು ಕಾಯಿಸಿ ಶೋಧಿಸಿಕೊಳ್ಳುವುದು. ವಿಷಪುರಿಗೆ ಮೇಲೆ ಲೇಪಿಸುತ್ತಾ ಬರಲು ಗುಣವಾಗುವುದು.

೬. ಗೌರಿಮುಡಿ ಸುಟ್ಟು ಕರುಕುಮಾಡಿದ್ದು ೧ ತೊಲೆ, ಒಳ್ಳೆಣ್ಣೆ ೩ ತೊಲೆ ಇವು ಎರಡೂ ಕಲಸಿ ವಿಷಪುರಿಗೆ ಲೇಪಿಸುತ್ತಾ ಬರಲು ಗುಣವಾಗುವುದು.

೭. ಮೈಲತುತ್ತ ಬೆಂಕಿಯಲ್ಲಿ ಸುಟ್ಟದ್ದು ॥ ತೊಲೆ, ಚಿಟ್ಟರಳೆಣ್ಣೆ ೨ ತೊಲೆ ಇವು ಎರಡೂ ಕಂಚಿನ ತಟ್ಟೆಯಲ್ಲಿ ಹಾಕಿ ತಾಂಬ್ರದ ಪಂಚಪಾತ್ರೆಯಿಂದ ಅರೆದು ಇಟ್ಟುಕೊಳ್ಳುವುದು. ವಿಷಪುರಿಗೆ ಹುಚ್ಚು ಬೇವಿನಸೊಪ್ಪಿನ ರಸದಲ್ಲಿ ತೊಳೆದು ಮೇಲ್ಕಂಡ ಮುಲಾಮನ್ನು ಮೇಲೆ ಲೇಪಿಸುವುದು. ಇದರಿಂದ ವಿಷಪುರಿ ಗುಣ ವಾಗುವುದು. ಇದಕ್ಕೆ ಪಥ್ಯ. ಹಸುವಿನ ಮೊಸರು ಅನ್ನ.

೮. ಹೊಂಗೇಎಣ್ಣೆ ॥ ಶೇರು, ಕಾಕಮಾರಿಬೀಜ ೧ ತೊಲೆ, ಬಜೆ ೧ ತೊಲೆ, ಡಿಕ್ಕೆಮಲ್ಲಿ ೨ ತೊಲೆ, ಆರತಿ ಕರ್ಪೂರ ಕಾಲುತೊಲೆ, ರಸಕರ್ಪೂರ ಕಾಲುತೊಲೆ, ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಅರೆಯುವ ದಿನಸು ಗಳನ್ನು ಖಲ್ವದಲ್ಲಿ ಅರೆದು ಎಲ್ಲವನ್ನೂ ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯ

ಮೇಲಿಟ್ಟು ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ವಿಷಪುರಿಗೆ ಮೇಲೆ ಲೇಪಿಸುತ್ತಾ ಬಂದರೆ ಗುಣವಾಗುವುದು.

೯. ಹಳೇಹೊಂಗೇಮರದ ಬುಡದ ಚಕ್ಕೆ ೩ ತೊಲೆ ಹಸುವಿನಮಜ್ಜಿಗೆ ಯಲ್ಲಿ ಕುಟ್ಟಿ ಬಟ್ಟೆಯಲ್ಲಿ ಶೋಧಿಸಿಕೊಂಡು ಕುಡಿಯುವುದು. ಈರೀತಿ ಬೆಳಿಗ್ಗೆ ೩ ದಿನ ಕೊಡಬೇಕು. ಇದಕ್ಕೆ ಪಥ್ಯ ಹಸುವಿನಮಜ್ಜಿಗೆ ಅನ್ನ. ಇದರಿಂದ ವಿಷಪುರಿ ಮೊದಲಾದ ಎಂಥಾ ಹುಣ್ಣೇ ಆಗಲಿ ಒಂದು ವಾರದಲ್ಲಿ ಗುಣ ವಾಗುವುದು.

೧೦. ೩ ತೊಲೆ ಮೈಲತುತ್ತಿ ಒಂದೇಗಡ್ಡೆ ತಂದು ಅದಕ್ಕೆ ಹೊಗೇಸೊಪ್ಪು ತಂದು ನೀರಿನಲ್ಲಿ ನೆನೆಯಿಸಿ ಮೈಲತುತ್ತಿಗೆ ಚೆಂಡುಸುತ್ತಿದಂತೆ ಸುತ್ತಿ ಅದರ ಮೇಲೆ ಕರೀದಾರವನ್ನು ಸುತ್ತಿ ಒಂದು ಬಟ್ಟಲಿನಲ್ಲ ಹರಳೆಣ್ಣೆ ಹಾಕಿ ಚೆಂಡು ಮುಳುಗುವಂತೆ ಒಂದು ರಾತ್ರಿ ಇಟ್ಟು ಬೆಳಿಗ್ಗೆ ತೆಗೆದು ಅದನ್ನು ದೀಪದ ಹಣತೆ ಯಲ್ಲಿ ಬೆಂಕಿಹಚ್ಚಿ ಚಿಮಟದಿಂದ ಹಿಡಿದು ಹೊಗೇಸೊಪ್ಪು ಹುರಿದುಹೋಗುವ ವರಿವಿಗೂ ಸುಟ್ಟರೆ ಒಳಗಿನಗಡ್ಡೆ ಬೆಳ್ಳಗಾಗುತ್ತೆ. ಈ ಗಡ್ಡೆಯನ್ನು ಖಲ್ವದಲ್ಲಿ ಅರೆದು ಇಟ್ಟುಕೊಂಡು ಕಾಲುತೊಲೆ ಚೂರ್ಣಕ್ಕೆ ೭ ತೊಲೆ ಬೇವಿನ ಎಣ್ಣೆ ಹಾಕಿ ಕಲಸಿ ಹಚ್ಚಿದರೆ ಗಜಚರ್ಮ, ಸಿಬ್ಬು, ವಿಷಪುರಿ ಗುಣವಾಗುವುದು.

---

## ನಲವತ್ತಾರನೆಯ ಅಧ್ಯಾಯ.

## ವಿದ್ರಧಿ, ಉಪದಂಶ ರೋಗಗಳು—ಔಷಧಗಳು.

### ಉಪದಂಶ ಲಕ್ಷಣ.

ಹಸ್ತಗಳಿಂದ ಮರ್ದನಾದ್ಯಭಿಘಾತಗಳನ್ನು ಮಾಡುವಿಕೆ, ರತಿಮಾಡುವ ಕಾಲದಲ್ಲಿ ಅನುರಾಗಾತಿಶಯದಿಂದ ನಖದಂತ ಕ್ಷತಗಳನ್ನು ಮಾಡುವಿಕೆ, ಸಂಭೋ ಗಾನಂತರ ತೊಳಿಯದಿರುವಿಕೆ, ಅತಿಸಂಭೋಗಮಾಡುವಿಕೆ, ಭಗದಲ್ಲಿರುವ ದೋಷ ಗಳು ಸಂಕ್ರಮಿಸುವಿಕೆ ಈ ಕಾರಣಗಳಿಂದ ಪುರುಷರ ಮೇಢ್ರದಲ್ಲಿ ಉಪದಂಶ ವ್ಯಾಧಿಯು ಹುಟ್ಟುವುದು.

ಉಪದಂಶ (ಟಾಕಿ) ರೋಗವು ವಾತ, ಪಿತ್ಥ, ಶ್ಲೇಷ್ಮ, ಸನ್ನಿಪಾತ, ರಕ್ತ ಗಳಿಂದ ಉತ್ಪನ್ನವಾಗಿ ಐದು ತೆರನಾಗಿರುವುದು.

ವಾತೋಪದಂಶದಲ್ಲಿ ಸೂಜಿಗಳಿಂದ ಚುಚ್ಚಿದಂತೆ ಬಾಧೆಯಾಗುವಿಕೆ, ಒಡೆ ಯುವಿಕೆ, ಅದರುವಿಕೆ ಈ ಚಿಹ್ನೆಗಳು ಉಂಟಾಗಿ ಮೇಢ್ರದಲ್ಲಿ ಕಪ್ಪಾದ ಬೊಬ್ಬೆ ಗಳು ಹುಟ್ಟುವುವು.

ಪಿತ್ತೋಪದಂಶದಲ್ಲಿ ಅಧಿಕ ಉರಿಯುಂಟಾಗಿ ಒದ್ದೆಯಿಂದ ಕೂಡಿ ಹಳದಿಯಾಗಿರುವ ಬೊಬ್ಬೆಗಳು ಕಾಣಿಸುವುದು.

ಕಫೋಪದಂಶದಲ್ಲಿ ತುರಿ, ಊತ ವುಂಟಾಗಿರುವುದು.

ಸನ್ನಿಪಾತೋಪದಂಶದಲ್ಲಿ ನಾನಾ ವಿಧಗಳಾದ ಸ್ರಾವಗಳು, ಥಳುಕು, ನೀರಡಿಕೆ ಇವುಗಳುಂಟಾಗಿ ತ್ರಿದೋಷ ಲಕ್ಷಣಂಗಳು ಕಾಣುವುವು.

ರಕ್ತೋಪದಂಶದಲ್ಲಿ ರಕ್ತದಂತಹ ಬಣ್ಣವುಳ್ಳದ್ದಾಗಿ ಕಪ್ಪಾಗಿರುವ ರಕ್ತವು ಸ್ರವಿಸುತ್ತಾ ಪಿತ್ಥಲಕ್ಷಣಗಳು ಕಾಣುವುವು. ಇದರಲ್ಲಿ ಮೇಢ್ರದಲ್ಲಿರುವ ಮಾಂಸವು ಪಿಂಡಗಳಂತಿದ್ದರೂ, ಮೇಢ್ರವೆಲ್ಲವನ್ನೂ ಹುಳಗಳು ತಿಂದು ವೃಷಣಗಳು ಮಾತ್ರ ಉಳದಿದ್ದರೂ ಉಪದಂಶವು ಅಸಾಧ್ಯವಾಗುವುದು. ಸಾಧ್ಯವಾಗುವ ಉಪದಂಶವಾದರೂ ಚಿಕಿತ್ಸೆಯನ್ನು ಮಾಡದಿದ್ದರೆ ಸ್ವಲ್ಪಕಾಲಕ್ಕೆ ಶೋಭೆ (ಊತವು)ಯೂ, ಹುಳುಗಳೂ, ಉರಿಯೂ ಉಂಟಾಗಿ ಪಕ್ವವಾಗಿ ಮೇಢ್ರವು ತುಂಡುತುಂಡುಗಳಾಗಿ ರೋಗಿಯು ಮರಣ ಹೊಂದುವನು.

## ಉಪದಂಶ ಚಿಕಿತ್ಸೆಗಳು.

೧. ಉಪದಂಶ ಪಕ್ವವಾಗುವುದಕ್ಕೆ ಮೊದಲೇ ಜಿಗಳೆಯ ಬಿಟ್ಟಾದರೂ ರಕ್ತವಂ ತೆಗೆಯಿಸುವುದು.

೨. ಕಕ್ಕೇಚಕ್ಕೆ, ಅರಿಸಿನ ಕಲ್ಕವನ್ನು ಲೇಪವಂಗೈಯ್ಯುವುದು, ಅದರ ಕಷಾಯದಿಂ ತೊಳೆಯಿಸುವುದು.

೩. ನೈದಿಲಗಡ್ಡೆ, ಚಂಗಲಕೋಷ್ಠ, ಕಿರುಶಿವನಿಬೇರು ಈ ಮೂರನ್ನೂ ನೀರಲ್ಲಿ ಅರೆದು ಲೇಪವಂಗೈಯಲು ಉಪದಂಶ ಶಮನವಹುದು.

೪. ಪ್ರಪೌಂಡರೀಕ, ಯಷ್ಟಿಮಧುಕ, ರಾಶ್ಮೆ, ದೇವದಾರು, ಜೇಳಬಾಲದ ಸೊಪ್ಪು, ಚಂಗಲಕೋಷ್ಠ ಇವಿಷ್ಟನ್ನೂ ಸಮಾಂಶವಾಗಿ ನೀರಲ್ಲಿ ಅರೆದು ಲೇಪವಂಗೈಯಲು ವಾತದಿಂದುಂಟಾದ ಉಪದಂಶ ಶಮನವಹುದು.

೫. ರಸಾಂಜನ, ಮಂಜಿಷ್ಠೆ, ಶ್ರೀಗಂಧ, ನೈದಿಲಗಡ್ಡೆ, ಪದ್ಮಕ, ಯಷ್ಟಿಮಧುಕ, ಲಾವಂಚ, ಕಾವೀಕಲ್ಲು ಇವುಗಳನ್ನು ಸಮಾಂಶವಾಗಿ ನೀರಲ್ಲಿ ಅರೆದು ಲೇಪಮಾಡಲು ಪಿತ್ಥದಿಂದುಂಟಾದ ಉಪದಂಶ ಶಮನವಹುದು.

೬. ಕೋಳಿಕುಟುಮನ ಗೆಣಸು, ಇಲೀಕಿವಿಯ ಬೇರು, ಹಾವುಮೆಕ್ಕೇ ಬೇರು ಇವುಗಳನ್ನು ಸಮಾಂಶವಾಗಿ ನೀರಲ್ಲಿ ಅರೆದು ಲೇಪಿಸಲು ಶ್ಲೇಷ್ಮದಿಂದ ಹುಟ್ಟಿದ ಉಪದಂಶ ಶಮನವಹುದು.

೭. ಪಾದರಸ ಭಸ್ಮ ೨ ವರಹಾತೂಕ, ತ್ರಿಕಟುಕ ೯ ವರಹಾತೂಕ, ತ್ರಿಫಲೆ ೯ ವರಹಾತೂಕ, ಬೆಳ್ಳುಳ್ಳಿ ೫ ಹಲ, ಬೆಲ್ಲ ೭ ಹಲ, ಕಾಚು ೨ ಹಲ, ಓದಕ್ಕಿ ಅರ್ಧಹಲ, ಜೀರಿಗೆ ೧ ಹಲ, ಆಲದ ಬೀಳು ಅರ್ಧಹಲ, ಬಜೆ ೨ ಹಲ, ಚಿತ್ರಮೂಲ ೩ ವರಹಾತೂಕ, ಇವಿಷ್ಟನ್ನೂ ವಿಳ್ಯೆದೆಲೆ ರಸದಲ್ಲಿ ಮೂರು ದಿನ ಬಿಡದೆ

ಚೆನ್ನಾಗಿ ಅರೆದು, ಅಕ್ಷಪ್ರಮಾಣ ಗುಳಿಗೆಯಂ ಮಾಡಿ, ಉದಯ ಮಧ್ಯಾಹ್ನ ಸಂಜೆಗಳಲ್ಲಿ ಒಂದೊಂದು ಗುಳಿಗೆಯಂ ಹಸುವಿನತುಪ್ಪ ಬೆರಸಿ ಏಳು ದಿನ ಕೊಡಿಸಲು ಸಮಸ್ತವಾದ ಉಪದಂಶ, ಪರಂಗಿಹುಣ್ಣು, ತುರುಕಹುಣ್ಣು, ಅದರಲ್ಲಿ ಹೆಣ್ಣು ಹುಣ್ಣು, ಗಂಡು ಹುಣ್ಣುಗಳೆಂಬ ಸಮಸ್ತವಾದ ಉಪದಂಶಂಗಳೂ ಶಮನವಹವು.

## ವಿದ್ರಧಿ ಲಕ್ಷಣ.

ವಾತ, ಪಿತ್ಥ, ಶ್ಲೇಷ್ಮಗಳು ಪ್ರಕೋಪವನ್ನು ಹೊಂದಿ ಚರ್ಮ, ರಕ್ತ, ಮಾಂಸ, ಮೇದಸ್ಸು ಇವುಗಳನ್ನು ಕೆಡಿಸಿ ಎಲುಬುಗಳನ್ನಾಶ್ರಯಿಸಿಕೊಂಡು ಪ್ರಬಲವಾದ ಮೂಲವುಳ್ಳದ್ದಾಗಿಯೂ, ನೋವಿನಿಂದ ಕೂಡಿದ್ದಾಗಿಯೂ, ಗುಂಡಾಗಿಯಾದರೂ, ಉದ್ದವಾಗಿಯಾದರೂ, ಕ್ರೂರವಾದ ಶೋಭೆಯನ್ನುಂಟುಮಾಡುವುದು. ಇದು ವಿದ್ರಧಿಯೆಂದು ವ್ಯವಹರಿಸಲ್ಪಡುವುದು

ವಿದ್ರಧಿರೋಗವು ವಾತ, ಪಿತ್ಥ, ಕಫ, ರಕ್ತ, ಕ್ಷತ, ಸನ್ನಿಪಾತಗಳಿಂದುತ್ಪನ್ನವಾಗಿ ಆರು ತೆರನಾಗಿರುವುದು.

ವಾತವಿದ್ರಧಿಯಲ್ಲಿ ಕಪ್ಪು, ಕೆಂಪು ಬಣ್ಣಗಳುಂಟಾಗುವಿಕೆ, ಒಂದೊಂದು ವೇಳೆ ಚಿಕ್ಕದಾಗಿಯೂ, ಒಂದೊಂದುವೇಳೆ ದೊಡ್ಡದಾಗಿಯೂ ಇರುವಿಕೆ, ಅಧಿಕ ನೋವಿನಿಂದೊಡಗೂಡಿರುವಿಕೆ, ಅನೇಕ ವಿಧಗಳಾಗಿ ಹುಟ್ಟುವಿಕೆ, ಪರಿಪಾಕವಾಗುವಿಕೆ ಮೊದಲಾದ ಚಿಹ್ನೆಗಳು ಕಂಡುಬರುವುವು.

ಪಿತ್ಥವಿದ್ರಧಿಯಲ್ಲಿ ಪಕ್ವವಾದ ಮಾವಿನ ಹಣ್ಣಿನ ವರ್ಣವನ್ನಾಗಲಿ, ಶ್ಯಾಮಲವರ್ಣವನ್ನಾಗಲಿ ಉಂಟಾಗಿರುವಿಕೆ, ಹುಟ್ಟಿದಕೂಡಲೆ ಜ್ವರ, ಉರಿ, ಪರಿಪಾಕವುಂಟಾಗುವಿಕೆ ಮೊದಲಾದ ಚಿಹ್ನೆಗಳು ಕಾಣುವುವು.

ಶ್ಲೇಷ್ಮವಿದ್ರಧಿಯಲ್ಲಿ ಮಡಿಕೆಯ ಮುಚ್ಚಳದಂತೆ ವರ್ತುಲವಾಗಿ ಪಾಂಡುವರ್ಣವನ್ನುಂಟಾಗಿರುವಿಕೆ, ತಣ್ಣಗಿರುವಿಕೆ, ಸ್ವಲ್ಪ ಬಾಧೆಯುಂಟಾಗುವಿಕೆ, ದೀರ್ಘಕಾಲಕ್ಕೆ ಪಾಕವಾಗುವಿಕೆ ಮೊದಲಾದ ಲಕ್ಷಣಗಳು ಇರುವುವು.

ಈ ಮೂರುತೆರನಾದ ವಿದ್ರಧಿಗಳಲ್ಲಿಯೂ ಕ್ರಮವಾಗಿ ವಾತ ವಿದ್ರಧಿಯಲ್ಲಿ ತೆಳುವಾಗಿಯೂ, ಪಿತ್ಥ ವಿದ್ರಧಿಯಲ್ಲಿ ಹಳದಿಯಾಗಿಯೂ, ಶ್ಲೇಷ್ಮ ವಿದ್ರಧಿಯಲ್ಲಿ ಬೆಳ್ಳಗೂ ಕೀವು ಸೋರುವುದು.

ರಕ್ತವಿದ್ರಧಿಯಲ್ಲಿ ಕಪ್ಪಾದ ಬೊಬ್ಬೆಗಳುಂಟಾಗಿ ಶ್ಯಾಮಲವರ್ಣವುಳ್ಳದ್ದಾಗಿ ಅತಿ ತೀವ್ರವಾದ ನೋವು, ಬಾಧೆಯುಂಟಾಗುವಿಕೆ ಮತ್ತು ಪಿತ್ಥವಿದ್ರಧಿ ಲಕ್ಷಣಗಳು ಕಾಣುವುವು.

ಕ್ಷತವಿದ್ರಧಿಯಲ್ಲಿ ಶರೀರಕ್ಕಭಿಘಾತವಾದಾಗ ಅಪಥ್ಯಾಹಾರಗಳನ್ನು ಮಾಡಿದ್ದಾದರೆ ಗಾಯದಲ್ಲಿರುವ ಉಷ್ಣವು ವಾತದಿಂದ ಶರೀರದಲ್ಲಿ ವ್ಯಾಪಿಸಿರುವ ರಕ್ತದೊಡಗೂಡಿದ ಪಿತ್ಥವನ್ನು ಪ್ರಕೋಪಗೊಳಿಸಿ ಜ್ವರ, ನೀರಡಿಕೆ, ತಾಪ ಇವು

ಳಿಂದ ಕೂಡಿದ ವಿದ್ರಧಿಯನ್ನುಂಟುಮಾಡುವುದು. ಇದರಲ್ಲಿ ಮೇಲೆ ಹೇಳಲ್ಪಟ್ಟ ಪಿತ್ಥ ವಿದ್ರಧಿಯ ಲಕ್ಷಣಗಳೂ ಕಾಣುವುವು.

ಸನ್ನಿಪಾತ ವಿದ್ರಧಿಯಲ್ಲಿ ಅನೇಕ ವರ್ಣಗಳೂ, ನಾನಾ ವಿಧಂಗಳಾದ ನೋವೂ, ಆಸ್ರಾವವುಂಟಾಗುವಿಕೆ, ಹಿಂತಲೆಯಂತೆ ಉನ್ನತವಾಗಿರುವಿಕೆ, ಒಂದು ಸ್ಥಳದಲ್ಲಿ ಶೀಘ್ರವಾಗಿ ಪಾಕವನ್ನು ಹೊಂದುವಿಕೆ, ಮತ್ತೊಂದು ಸ್ಥಳದಲ್ಲಿ ಪಾಕವಾಗದಿರುವಿಕೆ ಮೊದಲಾದ ಚಿಹ್ನೆಗಳು ಕಾಣುವುವು ಇದು ಅಸಾಧ್ಯವು.

## ವಿದ್ರಧಿ ರೋಗದಲ್ಲಿ ಅಸಾಧ್ಯ ಲಕ್ಷಣ.

ಮೂತ್ರಬಂಧ, ನೆಗಡಿ, ವಾಂತಿ, ಬಳಲಿಕೆ, ಬಾಯಾರಿಕೆ, ಮೈನೋವು, ಶ್ವಾಸ ಇವುಗಳಿಂದ ಕೂಡಿದ್ದು ಸನ್ನಿಪಾತವಿದ್ದರೆ ಅಸಾಧ್ಯವು.

## ವಿದ್ರಧಿ ಚಿಕಿತ್ಸೆಗಳು.

೧. ಅಳಲೇಕಾಯಿ, ತಾರೇಕಾಯಿ, ನೆಲ್ಲಿಕಾಯಿ, ಶುದ್ಧಿಮಾಡಿದ ಗುಗ್ಗುಳ ಇವುಗಳನ್ನು ಸಮಭಾಗ ತೆಗೆದುಕೊಂಡು ಚೂರ್ಣಮಾಡಿ ಸೇವಿಸಿದರೂ, ಇಲ್ಲವೆ ತ್ರಿಫಲಘೃತವನ್ನು ಸೇವಿಸಿದಾಗ್ಯೂ, ಪಕ್ವವಾಗಿ ಕೀವು ಸ್ರವಿಸುತ್ತಿರುವ ವಿದ್ರಧಿಗಳೂ, ನಾಡಿವ್ರಣಗಳು, ವ್ರಣಗಳು, ಭಗಂದರಗಳು, ಗಂಡಮಾಲೆಗಳು ಇವುಗಳೆಲ್ಲವೂ ಗುಣವಾಗುವುವು. ಇದಕ್ಕೆ ಪಥ್ಯ. ಲಘುವಾದ ಆಹಾರವನ್ನು ತೆಗೆದುಕೊಳ್ಳತಕ್ಕದ್ದು.

೨. ತ್ರಿಫಲಾದಿ ಗುಗ್ಗುಲವು:—ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲಿಕಾಯಿ ಇವು ದಿನಸು ಒಂದಕ್ಕೆ ಒಂದು ಪಲ, ಹಿಪ್ಪಲಿ ಎರಡು ಪಲ, ಶುದ್ಧಿಮಾಡಿದ ಗುಗ್ಗುಳ ಐದು ಪಲ ಇವುಗಳೆಲ್ಲವನ್ನೂ ಚೂರ್ಣಮಾಡಿ ಸೇವಿಸಿದರೆ, ಪಕ್ವವಾದ ಮತ್ತು ಅಧಿಕವಾಗಿ ಕೀವು ಸ್ರವಿಸುತ್ತಿರುವ ವಿದ್ರಧಿ, ನಾಡಿವ್ರಣಗಳು, ವ್ರಣಗಳು, ಭಗಂದರಗಳು, ಗಂಡಮಾಲೆಗಳು ಇವು ಎಲ್ಲವೂ ನಿವೃತ್ತಿಯಾಗುವುವು. ಇದಕ್ಕೆ ಪಥ್ಯ. ಮೇಲ್ಕಂಡಂತೆ.

೩. ದಶಮೂಲಾದಿ ಕಷಾಯ:—ದಶಮೂಲಗಳು, ಅಮೃತಬಳ್ಳಿ, ಅಳಲೇಕಾಯಿ, ದೇವದಾರು, ಬಿಳೀಕೊಮ್ಮೆಬೇರಿನ ಪಟ್ಟೆ, ನುಗ್ಗೇಬೇರು, ಶುಂಠಿ ಇವುಗಳನ್ನು ಸಮಭಾಗವಾಗಿ ತೆಗೆದುಕೊಂಡು ಕುಟ್ಟಿ, ಕಷಾಯವನ್ನು ಕಾಯಿಸಿ ಸೇವಿಸಿದರೆ, ಜ್ವರಸಹಿತವಾದ ವಿದ್ರಧಿ, ಶೋಭೆ ಇವು ಗುಣವಾಗುವುವು.

೪. ನುಗ್ಗೆಬಂಕೆ, ಶುದ್ಧಿಮಾಡಿದ ಹಿಂಗು, ಸೈಂಧವಲವಣ ಇವುಗಳೆಲ್ಲವನ್ನೂ, ಸಮಭಾಗ ತೆಗೆದುಕೊಂಡು ಚೂರ್ಣಮಾಡಿ ಪ್ರಾತಃಕಾಲದಲ್ಲಿ ಸೇವಿಸುತ್ತಿದ್ದರೆ, ಅತಿ ಜಾಗ್ರತೆಯಾಗಿ ವಿದ್ರಧಿರೋಗವು ನಿವಾರಣೆಯಾಗುವುದು.

೫. ನುಗ್ಗೇಬೇರಿನ ಪಟ್ಟೆಯ ರಸದಲ್ಲಿ ಅರ್ಧತೊಲೆ ವತ್ಸನಾಭಿಯ ಚೂರ್ಣವನ್ನು ಕಲಸಿ ಹೊಟ್ಟೆಯಮೇಲೆ ಲೇಪಮಾಡಿದರೂ, ಇಲ್ಲವೇ ನುಗ್ಗೆಬೇರಿನ

ಪಟ್ಟೆಯನ್ನು ನೀರಿನೊಂದಿಗೆ ಅರೆದು ರಸವನ್ನು ಹಿಂಡಿಕೊಂಡು ಜೇನುತುಪ್ಪದೊಂದಿಗೆ ಸೇವಿಸಿದರೂ ಅಂತರ್ವಿದ್ರಧಿಗಳು ಗುಣವಾಗುವುವು.

# ನಲವತ್ತೇಳನೆಯ ಅಧ್ಯಾಯ.

## ಶುಕ್ರದೋಷ ರೋಗ— ಔಷಧಗಳು.

### ಶುಕ್ರದೋಷ ಲಕ್ಷಣ.

ಸ್ತ್ರೀಸಂಭೋಗೇಚ್ಛೆಯುಂಟಾಗಿರುವ ಪುರುಷನಿಗೆ ಮನರಂಜಿಸದ ಆಯಾ ಭಾವಗಳಿಂದ ಮನಸ್ಸಿಗೆ ವ್ಯಥೆಯುಂಟಾಗುವುದರಿಂದಲೂ, ದೋಷಯುಕ್ತಳಾದ ವನಿತಾಸಂಭೋಗದಿಂದಲೂ; ಕಾರ, ಹುಳಿ, ಉಪ್ಪು, ಉಷ್ಣವಾಗಿರುವ ಪದಾರ್ಥಗಳು ಇವುಗಳನ್ನು ಅಧಿಕವಾಗಿ ಸೇವಿಸುವುದರಿಂದ ಸೌಮ್ಯವೆಂಬ ಧಾತುವು ಕ್ಷಯಿಸುವುದರಿಂದಲೂ, ಸದಾ ಮೈಥುನಮಾಡುವುದರಿಂದ ಶಿಶ್ನಕ್ಕೆ ಭಂಗ ಉಂಟಾಗುವುದರಿಂದಲೂ, ಸುಖಸಂಕಟವು ಮೊದಲಾದ ಮೇಢ್ರರೋಗಗಳಿಂದಲೂ, ಮರ್ಮಚ್ಛೇದನದಿಂದಲೂ, ಬಲವಂತನಿಗೆ ಮನಸ್ಸಂತಾಪವುಂಟಾಗುವುದರಿಂದಲೂ, ಬ್ರಹ್ಮಚರ್ಯವ್ರತವನ್ನು ಹಿಡಿದು ವೀರ್ಯವನ್ನು ನಿರೋಧಿಸುವುದರಿಂದಲೂ ಶುಕ್ರದೋಷವುಂಟಾಗುವುದು. ಮತ್ತು ಜನ್ಮಪ್ರಭೃತಿ ನಪುಂಸಕನಾಗಿದ್ದರೆ ಅದು ಸಹಜವಾದ ವೀರ್ಯನಷ್ಟವು. ಆದರೂ ಮರ್ಮಚ್ಛೇದದಿಂದುಂಟಾಗುವ ವೀರ್ಯನಷ್ಟವೂ, ಜನ್ಮಪ್ರಭೃತಿ ನಪುಂಸಕತ್ವಕ್ಕೆ ಹೇತುವಾಗಿರುವ ವೀರ್ಯನಷ್ಟವೂ ಚಿಕಿತ್ಸೆಮಾಡುವುದಕ್ಕೆ ಅಸಾಧ್ಯವಾಗಿಯೂ, ಉಳಿದವೆಲ್ಲವೂ ಸಾಧ್ಯಗಳೆಂತಲೂ ತಿಳಿಯುವುದು.

### ಶುಕ್ರದೋಷ ಚಿಕಿತ್ಸೆಗಳು.

೧. ಪುರುಷ ರತ್ನಾಕರ ಲೇಹ್ಯ:—ಶುಂಠಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ನೆಲ್ಲೀಕಾಯಿ ೪ ತೊಲೆ, ಸಣ್ಣರಾಸ್ಮೆ ೧ ತೊಲೆ, ತಾಳೀಸಪತ್ರೆ ೨ ತೊಲೆ, ಓಮ ೧ ತೊಲೆ, ಬಾಲಮೆಣಸು ೧ ತೊಲೆ, ಅತಿಮಧುರ ೧ ತೊಲೆ, ಬಿಳೇಜೀರಿಗೆ ೧ ತೊಲೆ, ಶುದ್ಧಿಮಾಡಿದ ಪರಂಗಿಚಕ್ಕೆ ೨ ತೊಲೆ, ಅಕ್ಕಲಕರೆ ೨ ತೊಲೆ, ಲಾವಂಚ ೧ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಲವಂಗ ೧ ತೊಲೆ, ದಾಲ್‌ಚಿನ್ನಿ ೨ ತೊಲೆ, ಯಾಲಕ್ಕಿ ೧ ತೊಲೆ,

☞ ಲೇಹ್ಯಗಳಿಗೆ ಸಕ್ಕರೆಯು ಸೇರಿಸಲ್ಪಡತಕ್ಕ ಕಡೆ ಚೂರ್ಣದ ನಾಲ್ಕುಭಾಗ ಸೇರಿಸಬೇಕು. ಬೆಲ್ಲವನ್ನು ಚೂರ್ಣದೆರಡರಷ್ಟು ಸೇರಿಸಬೇಕು. ಹಾಲು ನೀರು ರಸ ಇವೇ ಮೊದಲಾದ ದ್ರವಪದಾರ್ಥಗಳನ್ನು ಚೂರ್ಣದ ನಾಲ್ಕರಷ್ಟು ಸೇರಿಸಬೇಕು. ಲೇಹ್ಯಗಳಲ್ಲೆಲ್ಲಾ ಇದೇ ನಿರ್ಣಯವು.

ಮುಳ್ಳುಶಾವಂತಿಹೂವು ೪ ತೊಲೆ, ನಾಗಕೇಶರಿ ೧ ತೊಲೆ, ವೈದಾಲಕಡಿ ೧ ತೊಲೆ, ಅಗಿಲುಶುಂಠಿ ೨ ತೊಲೆ, ಸಾಲಾಮಿಸರಿ ೬ ತೊಲೆ, ರೂಮಿಮಸ್ತಕಿ ೨ ತೊಲೆ, ತವಕ್ಷೀರ ೨ ತೊಲೆ, ತಿಪ್ಪಸತ್ತು ೨ ತೊಲೆ, ನೆಲತಾಟಿಗಡ್ಡೆ ೬ ತೊಲೆ, ಮಜ್ಜಿಗೆಗಡ್ಡೆ ೬ ತೊಲೆ, ಶುದ್ಧಿಮಾಡಿದ ಹಿರೇಮದ್ದಿನಗಡ್ಡೆ ೬ ತೊಲೆ, ಕಾಮ ಸಕ್ಕರೆಗಡ್ಡೆ ೬ ತೊಲೆ, ಕೊಳವಳಿಕೆಬೀಜ ೨ ತೊಲೆ, ಜಾಲೀಕಾಯಿ ೨ ತೊಲೆ, ಚಿಳ್ಳೇಬೀಜ ೨ ತೊಲೆ, ನಸುಗುನ್ನಿಬೀಜ ೨ ತೊಲೆ, ತುತ್ತಿಬೀಜ ೨ ತೊಲೆ, ಬೀಜ ಬಂದು ೨ ತೊಲೆ, ಆನೇನೆಗ್ಗಿಲು ೨ ತೊಲೆ, ತುಳಸೀಬೀಜ ೨ ತೊಲೆ, ನಾಯಿತುಳಸಿ ಬೀಜ ೨ ತೊಲೆ, ಇಸಬ್‌ಗೋಲುಬೀಜ ೨ ತೊಲೆ, ಚಂದ್ರಕಾಂತಿಸೊಪ್ಪು ೪ ತೊಲೆ, ರಕ್ತಪುರುಷ ೮ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಬಾದಾಮಿ ೧೨ ತೊಲೆ ನೀರಿನಲ್ಲಿ ನೆನೆಹಾಕಿ ಸಿಪ್ಪೆ ತೆಗೆದುಹಾಕುವುದು. ಖರ್ಜೂರ ೧೨ ತೊಲೆ, ದ್ರಾಕ್ಷಿ ೧೨ ತೊಲೆ ಇವು ಮೂರೂ ಒರಳಲ್ಲಿ ನೀರುಹಾಕಿ ಚೆನ್ನಾಗಿ ರುಬ್ಬಿ ಶೋಧಿಸಿಕೊಳ್ಳುವುದು. ಇವುಗಳನ್ನು ಒಂದು ಬಾಂಡ್ಲಿಯಲ್ಲಿ ಹಸುವಿನಹಾಲು ೧॥ ಶೇರು, ಕಲ್ಲುಸಕ್ಕರೆ ೧೨ ಶೇರು ಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಜೇನ ತುಪ್ಪ ೧। ಶೇರು, ಹಸುವಿನತುಪ್ಪ ೨ ಶೇರು, ಕಾರೋಬಾ ಪನ್ನೀರಿನಲ್ಲಿ ಅರೆದದ್ದು ೧ ತೊಲೆ, ಅಂಬರ್ ೨ ಆಣೆತೂಕ, ಪಚ್ಚಕರ್ಪೂರ ೨ ಆಣೆ ತೂಕ, ಕಸ್ತೂರಿ ೨ ಆಣೆ ತೂಕ, ಚಿನ್ನದರೇಕು ೧ ಆಣೆ ತೂಕ, ೧ ತೊಲೆ ಭಂಗೀಸೊಪ್ಪು ೩ ತೊಲೆ ಆಕಳತುಪ್ಪದಲ್ಲಿ ಹಾಕಿ ಬೇಯಿಸಿ ಸೊಪ್ಪು ಬಿಸಾಡಿ ತುಪ್ಪವನ್ನು ಮಾತ್ರ ಲೇಹ್ಯಕ್ಕೆ ಸೇರಿಸಿಕೊಳ್ಳುವುದು. ಇವುಗಳನ್ನು ಹಾಕಿ ಪಕ್ವವಾಗಿ ಲೇಹ್ಯಮಾಡಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಅಥವಾ ಅರ್ಧತೊಲೆ ತೆಗೆದುಕೊಳ್ಳುವುದು ಹೀಗೆ ಬೆಳಿಗ್ಗೆ ಸಾಯಂಕಾಲ ಲೇಹ್ಯವನ್ನು ಸೇವಿಸಿ ೧ ಪಾವು ಆಕಳಹಾಲು ಕುಡಿಯುವುದು. ಈರೀತಿ ೨೦ ದಿನ ತೆಗೆದುಕೊಳ್ಳುವುದು. ಇವಕ್ಕೆ ಪಥ್ಯ. ಹುಳಿ ವರ್ಜ್ಯ. ಇದರಿಂದ ಸಂಭೋಗೇಚ್ಛೆಯೇ ಇಲ್ಲದವರಿಗೆ ಸಂಭೋಗೇಚ್ಛೆಯನ್ನು, ಧಾತುಪುಷ್ಟಿಯನ್ನುಂಟುಮಾಡುವುದು; ಸಂಯೋಗಾನಂತರ ಆಗುವ ಆಯಾಸವನ್ನು ಪರಿಹರಿಸಿ ದುರ್ಬಲವಾದ ಇಂದ್ರಿಯಸ್ಥಾನವನ್ನು ದೃಢಪಡಿಸುವುದು.

೨. ಮದನ ಕಾಮೇಶ್ವರಿ ಲೇಹ್ಯ:—ತಂಗಡೀಬೀಜ ೩ ತೊಲೆ, ಕೊಳವಳಿಕೆಬೀಜ ೩ ತೊಲೆ, ನಸುಗುನ್ನಿಬೀಜ ೬ ತೊಲೆ, ತಾವರೆಬೀಜ ೬ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಲವಂಗ ೧ ತೊಲೆ, ದಾಲ್‌ಚಿನ್ನಿ ೧ ತೊಲೆ, ಕುಂಕುಮಕೇಸರಿ ೧ ತೊಲೆ, ಅತಿಮಧುರ ೧ ತೊಲೆ, ಅಕ್ಕಲಕರೆ ೧ ತೊಲೆ, ಶುಂಠಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಮೋಡಿ ೧ ತೊಲೆ, ಶುದ್ಧಿಮಾಡಿದ ಅಶ್ವಗಂಧಿ ೬ ತೊಲೆ, ನೆಲತಾಟಿಗಡ್ಡೆ ೬ ತೊಲೆ, ಮಜ್ಜಿಗೆಗಡ್ಡೆ ೬ ತೊಲೆ, ಮರ್ದಮುಸ್ತಿಹೂವು ೨ ತೊಲೆ ಇದನ್ನು ೧ ಪಾವು

ಆಕಳಹಾಲಿನಲ್ಲಿ ಬೇಯಿಸಿ ಹಾಕಬೇಕು. ಇಪ್ಪೇಹೂವು ೨ ತೊಲೆ, ನಾಗಕೇಸರಿ ೧ ತೊಲೆ, ಬಿಳೀಜೀರಿಗೆ ೧ ತೊಲೆ, ಮುರಾಟಿಮೊಗ್ಗು ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ನೆಲ್ಲೀಕಾಯಿಪೊಪ್ಪು ೬ ತೊಲೆ, ತಾರೇಕಾಯಿಪೊಪ್ಪು ೩ ತೊಲೆ, ಬಾದಾಮಿ ಪೊಪ್ಪು ೬ ತೊಲೆ ಇದು ನೀರಿನಲ್ಲಿ ನೆನೆಯಿಸಿ ಹೊಟ್ಟು ತೆಗೆದುಹಾಕಬೇಕು ಪಿಸ್ತಾಪೊಪ್ಪು ೬ ತೊಲೆ ಅಕ್ರೋಟ್ ಪೊಪ್ಪು ೬ ತೊಲೆ, ಚಾರುಪೊಪ್ಪು ೬ ತೊಲೆ, ಈ ಪೊಪ್ಪುಗಳನ್ನು ಒರಳಲ್ಲಿ ಚೆನ್ನಾಗಿ ಕುಟ್ಟಿ ಹಸುವಿನಹಾಲು ೧|| ಶೇರು ಹಾಕಿ ಚೆನ್ನಾಗಿ ರುಬ್ಬಿ ಬಟ್ಟೆಯಲ್ಲಿ ಶೋಧಿಸಿಕೊಂಡು ಒಂದು ಬಾಂಡ್ಲಿಯಲ್ಲಿ ಸಕ್ಕರೆ ೭ ಶೇರು ಹಾಕಿ ಒಲೆಯ ಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣವನ್ನು ಹಾಕಿ, ೧ ತೊಲೆ ಭಂಗೀಸೊಪ್ಪು ೩ ತೊಲೆ ಆಕಳತುಪ್ಪದಲ್ಲಿ ಹಾಕಿ ಬೇಯಿಸಿ ಸೊಪ್ಪು ಬಿಸಾಡಿ ತುಪ್ಪವನ್ನು ಮಾತ್ರ ಲೇಹ್ಯಕ್ಕೆ ಸೇರಿಸಿಕೊಳ್ಳಬೇಕು. ಜೇನು ತುಪ್ಪ ೧|| ಶೇರು ಇವುಗಳೆಲ್ಲವನ್ನು ಹಾಕಿ ಪಕ್ವವಾಗಿ ಲೇಹ್ಯಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ, ಅರ್ಧತೊಲೆ, ಲೇಹ್ಯ ತೆಗೆದುಕೊಂಡು ೧ ಪಾವು ಆಕಳಹಾಲು ಕುಡಿಯಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨೦ ದಿನಗಳು ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ. ಹುಳಿ ವರ್ಜ್ಯ. ಇದರಿಂದ ಇಂದ್ರಿಯ ಸ್ತಂಭನವಾಗುವುದು; ವೀರ್ಯವೃದ್ಧಿಯೂ, ಧಾತುಪುಷ್ಟಿಯೂ ಉಂಟಾಗುವುದು.

೩. ಸಾಲಾಮಿಸರಿ ಲೇಹ್ಯ:—ಸಾಲಾಮಿಸರಿ, ಸಫೇದಮಿಸ್ರಿ, ರೂಮಿ ಮಸ್ತಕಿ, ಬೂರುಗದಬಂಕೆ, ತುಂಬೇಬಂಕೆ, ಕನ್ಯಾಕುಮಾರಿಗಡ್ಡೆ, ಶುದ್ಧಿ ಮಾಡಿದ ಅಶ್ವಗಂಧಿ, ನೆಲಕುಂಬಳದಗಡ್ಡೆ, ನೆಲತಾಟಿಗಡ್ಡೆ, ಭೂಸಕ್ಕರೆಗಡ್ಡೆ, ಅಕ್ಕಲಕರೆ, ಬಿಳೀಜೀರಿಗೆ, ರಕ್ತಪುರುಷ, ಅತಿಮಧುರ, ಆನೇನೆಗ್ಗಿಲು, ಆಲದ ಬೀಜ, ತಂಗಡಿ ಬೀಜ, ನುಗ್ಗೇಬೀಜ, ಕೊಳವಳಿಕೆಬೀಜ, ಲವಂಗ, ದಾಲ್‌ಚಿನ್ನಿ, ನಾಗಕೇಸರಿ, ಬಾಲಮೆಣಸು, ಚವ್ಯ, ನಮುಗುನ್ನಿಬೀಜ, ಷಕಾಕುಲ್‌ಮಿಸ್ರಿ, ಬೋಜದಾರ್‌ಮಿಸ್ರಿ, ಬಹಮನೇಸುಫೇದ್, ಬಹಮನೇಸುರುಕ್, ತೂದರಿಸುಫೇದ್, ತೂದರಿ ಸುರುಕ್, ನೆಲ್ಲೀಪೊಪ್ಪು, ಜಾಕಾಯಿ, ಜಾಪತ್ರೆ ಇವು ದಿನಸಿಗೆ ೧ ತೊಲೆ, ಯಾಲಕ್ಕಿ ಕಾಲುತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಗಸಗಸೆ ೧ ತೊಲೆ, ಬಾದಾಮಿಪೊಪ್ಪು ೧ ತೊಲೆ, ಗೇರುಪೊಪ್ಪು ೧ ತೊಲೆ, ಆಕ್ರೋಟ್‌ಪೊಪ್ಪು ೧ ತೊಲೆ, ಪಿಸ್ತಾಪೊಪ್ಪು ೧ ತೊಲೆ, ಚಾರು ಪೊಪ್ಪು ೧ ತೊಲೆ, ಸಣ್ಣದ್ರಾಕ್ಷೆ ೧ ತೊಲೆ, ದೊಡ್ಡದ್ರಾಕ್ಷೆ ೧ ತೊಲೆ ಇವುಗಳನ್ನು ಒರಳಲ್ಲಿ ಚೆನ್ನಾಗಿ ಕುಟ್ಟಿ ಹಸುವಿನಹಾಲು ೧|| ಶೇರು ಹಾಕಿ ಚೆನ್ನಾಗಿ ರುಬ್ಬಿ ಬಟ್ಟೆಯಲ್ಲಿ ಶೋಧಿಸಿಕೊಂಡು ಒಂದು ಬಾಂಡ್ಲಿಯಲ್ಲಿ ಸಕ್ಕರೆ ೬ ಶೇರು ಹಾಕಿ ಸ್ವಲ್ಪ ನೀರುಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದ

ಕೂಡಲೇ ಮೇಲ್ಕಂಡ ಚೂರ್ಣಹಾಕಿ ಕುಂಕುಮಕೇಸರಿ ॥ ತೊಲೆ, ಪಚ್ಚ ಕರ್ಪೂರ ೨ ಆಣೆತೂಕ, ಕಸ್ತೂರಿ ೧ ಆಣೆ ತೂಕ, ಕಾಲುತೊಲೆ ಭಂಗೀಸೊಪ್ಪು ೧॥ ತೊಲೆ ಆಕಳತುಪ್ಪದಲ್ಲಿ ಬೇಯಿಸಿ ಸೊಪ್ಪು ಬಿಸಾಡಿ ತುಪ್ಪವನ್ನು ಮಾತ್ರ ಲೇಹ್ಯಕ್ಕೆ ಸೇರಿಸಿಕೊಳ್ಳಬೇಕು. ಹಸುವಿನತುಪ್ಪ ೧ ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ, ಲೇಹ್ಯ ತೆಗೆದುಕೊಂಡು ೧ ಪಾವು ಆಕಳಹಾಲು ಕುಡಿಯಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨೦ ದಿನಗಳು ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ. ಹುಳಿ ವರ್ಜ್ಯ. ಇದರಿಂದ ಸಂಭೋಗಶಕ್ತಿ, ಶರೀರಬಲ, ಕಾಮೋತ್ಪತ್ತಿ ಉಂಟಾಗುವುದು; ಗುಂಡಿಗೆ, ಸೊಂಟಗಳಲ್ಲಿ ಬಲವನ್ನುಂಟುಮಾಡುವುದು. ಮೆದುಳಿಗೆ ಶಕ್ತಿಯೂ ಮನಸ್ಸಿಗೆ ಆನಂದವೂ ಉಂಟಾಗುವುದು. ಶ್ವೇತಪ್ರದರ, ರಕ್ತಪ್ರದರ ಇವುಗಳೂ ಗುಣವಾಗುವುವು.

೪. ಮಹಸುನೆಪುಸೂರಿ (ಇಂದ್ರಿಯಾನಂದ):—ಸಾಲಾಮಿಸರಿ ೬ ತೊಲೆ, ಸುಫೇದಮಿಸ್ರಿ ೬ ತೊಲೆ, ಸಿಯಾಮಿಸ್ರಿ ೬ ತೊಲೆ, ಷಕಾಕುಲ್‌ಮಿಸ್ರಿ ೩ ತೊಲೆ, ಬಹಮನೆಸುಫೇದ್ ೩ ತೊಲೆ, ಬಾದರಂಜಬೋಯಿ್ ೩ ತೊಲೆ, ಸಲ್‌ಗಮ್ ಬೀಜ ೩ ತೊಲೆ, ಉಟ್ಟಂಗುಬೀಜ ೩ ತೊಲೆ, ಶುದ್ಧಿಮಾಡಿದ ಅಶ್ವಗಂಧಿ ೬ ತೊಲೆ, ನಸುಗುನ್ನಿಬೀಜ ೩ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಮೋಡಿ ೧ ತೊಲೆ, ಬಿಳೀಜೀರಿಗೆ ೧ ತೊಲೆ, ಗುಲಾಬಿಮೊಗ್ಗು ೧೨ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಲವಂಗ ೧ ತೊಲೆ, ದಾಲ್‌ಚಿನ್ನಿ ೧ ತೊಲೆ, ಶುಂಠಿ ೧ ತೊಲೆ, ಸಣ್ಣರಾಸ್ಮೆ ೧ ತೊಲೆ, ಕುಂಕುಮಕೇಸರಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ಸಕ್ಕರೆ ೫ ಶೇರು ಹಾಕಿ ನೀರುಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಹಾಕಿ ಜೇನುತುಪ್ಪ ೧ ಶೇರು, ಹಸುವಿನತುಪ್ಪ ॥ ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಲೇಹ್ಯ ತೆಗೆದುಕೊಂಡು ೧ ಪಾವು ಆಕಳಹಾಲು ಕುಡಿಯಬೇಕು. ಬೆಳಿಗ್ಗೆ ಸಾಯಂಕಾಲ ೨೦ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ. ಹುಳಿ ವರ್ಜ್ಯ. ಇದರಿಂದ ಧಾತುವೃದ್ಧಿ, ಧಾತು ಪುಷ್ಟಿಯನ್ನುಂಟುಮಾಡುವುದು.

೫. ಕಾಮೋತ್ತೇಜಕಪಾಕ:—ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಲವಂಗ ೧ ತೊಲೆ, ಲವಂಗಪತ್ರೆ ೧ ತೊಲೆ, ದಾಲಚಿನ್ನಿ ೧ ತೊಲೆ, ಯಾಲಕ್ಕಿ ೧ ತೊಲೆ, ಕುಂಕುಮಕೇಸರಿ ೧ ತೊಲೆ, ಅಕ್ಕಲಕರೆ ೧ ತೊಲೆ, ತುಂಗೇಗಡ್ಡೆ ೨ ತೊಲೆ, ಮೋಡಿ ೧ ತೊಲೆ, ನಾಗಕೇಸರಿ ೧ ತೊಲೆ, ಸೋಪುಬೀಜ ೧ ತೊಲೆ, ಬಿಳೀಜೀರಿಗೆ ೧ ತೊಲೆ, ಸಣ್ಣರಾಸ್ಮೆ ೧ ತೊಲೆ, ಸುನಾಮುಖಿ ೧೨ ತೊಲೆ,

ನುಗ್ಗೇಹೂವು ೨ ತೊಲೆ, ತಾವರೇಹೂವು ೨ ತೊಲೆ, ಇಪ್ಪೇಹೂವು ೨ ತೊಲೆ, ಮದನಕಾಮೇಶ್ವರಿಹೂವು ೨ ತೊಲೆ ೧ ಪಾವು ಆಕಳಹಾಲಿನಲ್ಲಿ ಹಾಕಿ ಬೇಯಿಸಿ ಹಾಕಬೇಕು, ನುಗ್ಗೇಬೀಜ ೨ ತೊಲೆ, ಕೊಳವಳಿಕೆಬೀಜ ೨ ತೊಲೆ, ತಾವರೇ ಬೀಜ ೨ ತೊಲೆ, ನಸುಗುನ್ನಿಬೀಜ ೨ ತೊಲೆ, ನೆಲಕುಂಬಳಗಡ್ಡೆ ೪ ತೊಲೆ, ತಾವರೇಗಡ್ಡೆ ೪ ತೊಲೆ, ಸುರ್ರಜರ್ಾಮಿಸ್ರಿ ೪ ತೊಲೆ, ಬೋಜದರ್ಾಮಿಸ್ರಿ ೪ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ೫ ಶೇರು ಸಕ್ಕರೆ ಹಾಕಿ ನೀರುಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಜೇನುತುಪ್ಪ ೧ ಶೇರು, ಹಸುವಿನತುಪ್ಪ ‖ ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯಮಾಡಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಲೇಹ್ಯ ತೆಗೆದುಕೊಂಡು ೧ ಪಾವು ಆಕಳಹಾಲು ಕುಡಿಯಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨೦ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ. ಹುಳಿ ವರ್ಜ್ಯ. ಇದರಿಂದ ಸಂಭೋಗಕಾಲದಲ್ಲಿ ಸುಖ; ಹೃದಯಕ್ಕೆ ಶಕ್ತಿ; ದುರ್ಬಲವಾದ ಇಂದ್ರಿಯ ಸ್ಥಾನಗಳಿಗೆ ಬಲ; ರಕ್ತವೃದ್ಧಿ, ವೀರ್ಯವೃದ್ಧಿ ಮತ್ತು ಅತ್ಯಂತ ಗುಣಕಾರಿ.

೬. ರತೀವಲ್ಲಭ ಭೋಗಸಾಮ್ರಾಜ್ಯ:—ಜಾಕಾಯಿ ‖ ತೊಲೆ, ಲವಂಗ ‖ ತೊಲೆ, ಕುಂಕುಮಕೇಸರಿ ‖ ತೊಲೆ, ಅಕ್ಕಲಕರೆ ‖ ತೊಲೆ, ತುಂಗೇಗಡ್ಡೆ ೧ ತೊಲೆ, ಬೇದಾನ ೧ ತೊಲೆ, ಹಿಪ್ಪಲಿ ‖ ತೊಲೆ, ಗಜಹಿಪ್ಪಲಿ ‖ ತೊಲೆ, ಆನೆನೆಗ್ಗಿಲು ೨ ತೊಲೆ, ನುಗ್ಗೆಬಂಕೆ ೧ ತೊಲೆ, ರೂಮಿಮಸ್ತಕಿ ೧ ತೊಲೆ, ಗುಲಾಬಿಮೊಗ್ಗು ೪ ತೊಲೆ, ಮಜ್ಜಿಗೆಗಡ್ಡೆ ೪ ತೊಲೆ, ದಾಲಚಿನ್ನಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಒಣಕೊಬರಿ ೧ ಪಾವು ತಂದು ತುರುಬಿ ಚನ್ನಾಗಿ ಕುಟ್ಟಿ ಇಟ್ಟುಕೊಳ್ಳುವದು. ಖರ್ಜೂರ ೧ ಪಾವು ವರಳಲ್ಲಿ ಹಾಕಿ ಚನ್ನಾಗಿ ಕುಟ್ಟಿ ನೀರುಹಾಕಿ ರುಬ್ಬಿ ಬಟ್ಟೆಯಲ್ಲಿ ಶೋಧಿಸಿಕೊಂಡು ಒಂದು ಬಾಂಡ್ಲಿಯಲ್ಲಿ ಸಕ್ಕರೆ ೮ ಶೇರು ಹಾಕಿ ನೀರಹಾಕಿ ಒಲೆಯಮೇಲಿಟ್ಟು ತಂತುಪಾಕ ಬಂದಕೂಡಲೇ ಕೋಳಿಮೊಟ್ಟೆ ಬೇಯಿಸಿದ್ದು ಹಳದಿಬಂಡಾರ ೪೦, ಹುರಿದ ಸಾವೆಹಸಿಟ್ಟು ೧ ಶೇರು ಹಾಕಿ ಚನ್ನಾಗಿ ಗೋಟಾಯಿಸಿ ಮೇಲ್ಕಂಡ ಚೂರ್ಣ ಹಾಕಿ, ಜೇನುತುಪ್ಪ ೧ ಶೇರು ಹಾಕಿ ಕಲಸಿ ಲೇಹ್ಯ ಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಲೇಹ್ಯ ತೆಗೆದುಕೊಂಡು ೧ ಪಾವು ಆಕಳಹಾಲು ಕುಡಿಯಬೇಕು. ಬೆಳಿಗ್ಗೆ ಸಾಯಂಕಾಲ ೨೦ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ. ಹುಳಿ ವರ್ಜ್ಯ. ಇದರಿಂದ ಸಂಭೋಗೇಚ್ಛೆಯೂ ಶಕ್ತಿಯೂ ಹೆಚ್ಚಾಗುವುದು; ಇಂದ್ರಿಯೋತ್ಪತ್ತಿ ಉಂಟಾಗುವುದು; ಸಂಯೋಗಾನಂತರದ ಆಯಾಸವನ್ನು ಪರಿಹರಿಸುವುದು, ರಕ್ತಪುಷ್ಟಿ—ಧಾತುಪುಷ್ಟಿಯುಂಟಾಗುವುದು.

೭. ಅತಿಭೋಗ ರೋಗಾಂತಕ:—ಕುಂಕುಮಕೇಸರಿ ॥ ತೊಲೆ, ಯಾಲಕ್ಕಿ ಕಾಲುತೊಲೆ, ದಾಲಚಿನ್ನಿ ೧ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಲವಂಗ ೧ ತೊಲೆ, ಶ್ರೀಗಂಧದಚಕ್ಕೆ ೧ ತೊಲೆ, ಅನಿಸೂಣ ೧ ತೊಲೆ, ಕಚೋರ ॥ ತೊಲೆ, ಬಿಳೇಜೀರಿಗೆ ॥ ತೊಲೆ, ಶುಂಠಿ ॥ ತೊಲೆ, ಮೆಣಸು ॥ ತೊಲೆ, ಹಿಪ್ಪಲಿ ॥ ತೊಲೆ, ಗಜಹಿಪ್ಪಲಿ ॥ ತೊಲೆ, ಸೋಪು ಬೀಜ ॥ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ೧ ತೊಲೆ ಭಂಗೀ ಸೊಪ್ಪು ೩ ತೊಲೆ ಆಕಳತುಪ್ಪದಲ್ಲಿ ಹಾಕಿ ಬೇಯಿಸಿ ಸೊಪ್ಪು ಬಿಸಾಡಿ ತುಪ್ಪ ವನ್ನು ಮಾತ್ರ ಲೇಹ್ಯಕ್ಕೆ ಸೇರಿಸಿಕೊಳ್ಳಬೇಕು. ಸೌತೇಬೀಜದ ಪೊಪ್ಪು ೪ ತೊಲೆ, ಖರಬೂಜಬೀಜದ ಪೊಪ್ಪು ೪ ತೊಲೆ, ಬಾದಾಮಿಬೀಜ ನೀರಿನಲ್ಲಿ ನೆನೆಹಾಕಿ ಮೇಲಿನ ಹೊಟ್ಟುತೆಗೆದದ್ದು ೮ ತೊಲೆ, ಗಸಗಸೆ ೮ ತೊಲೆ ಇವು ಗಳನ್ನು ಒರಳಲ್ಲಿ ಕುಟ್ಟಿ ನೀರುಹಾಕಿ ರುಬ್ಬಿ ಬಟ್ಟೆಯಲ್ಲಿ ಶೋಧಿಸಿಕೊಂಡು ಒಂದು ಬಾಂಡ್ಲಿಯಲ್ಲಿ ಕಲ್ಲುಸಕ್ಕರೆ ೨॥ ಶೇರು ಹಾಕಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣಹಾಕಿ ಗುಲ್ಕಂದ ೮ ತೊಲೆ, ಜೇನುತುಪ್ಪ ॥ ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಲೇಹ್ಯ ತೆಗೆದುಕೊಂಡು ೧ ಪಾವು ಆಕಳಹಾಲು ಕುಡಿಯಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨೦ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ. ಹುಳಿ ವರ್ಜ್ಯ. ಇದರಿಂದ ವೀರ್ಯವೃದ್ಧಿಯುಂಟಾಗುವುದು; ಧಾತುಪುಷ್ಟಿಯಾಗುವುದು; ಸಂಭೋಗ ಶಕ್ತಿಯನ್ನುಂಟುಮಾಡುವುದು.

೮. ಆಮೋದಾನಂದ:—ಅತಿಮಧುರ ೧ ತೊಲೆ, ಯಾಲಕ್ಕಿ ಕಾಲುತೊಲೆ, ಲವಂಗ ೧ ತೊಲೆ, ದಾಲಚಿನ್ನಿ ೧ ತೊಲೆ, ಶ್ರೀಗಂಧದಚಕ್ಕೆ ೧ ತೊಲೆ, ನೆಲ ತಾಟಿಗಡ್ಡೆ ೪ ತೊಲೆ, ನಸುಗುನ್ನಿಬೀಜ ೨ ತೊಲೆ, ಜಾಕಾಯಿ ೧ ತೊಲೆ ಇವು ಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ದ್ರಾಕ್ಷಿ ॥ ಶೇರು, ಖರ್ಜೂರ ೧ ಪಾವು, ಒರಳಲ್ಲಿ ಹಾಕಿ ಚೆನ್ನಾಗಿ ಕುಟ್ಟಿ ಹಸುವಿನಹಾಲು ೧ ಶೇರು ಹಾಕಿ ರುಬ್ಬಿ ಬಟ್ಟೆಯಲ್ಲಿ ಶೋಧಿಸಿಕೊಂಡು ಒಂದು ಬಾಂಡ್ಲಿಯಲ್ಲಿ ಹಾಕಿ ಅಫೀಂ ಕಾಲುತೊಲೆ ಖಲ್ವದಲ್ಲಿ ಹಾಕಿ ನೀರಿನಿಂದ ಅರೆದು ಸಕ್ಕರೆ ೨॥ ಶೇರು ಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣವನ್ನು ಹಾಕಿ, ಪಚ್ಚಕರ್ಪೂರ ೨ ಆಣೆತೂಕ, ಜೇನುತುಪ್ಪ ॥ ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯಮಾಡಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಲೇಹ್ಯ ತೆಗೆದುಕೊಂಡು ೧ ಪಾವು ಆಕಳಹಾಲು ಕುಡಿಯಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨೦ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ. ಹುಳಿ ವರ್ಜ್ಯ. ಇದರಿಂದ ಸಂಯೋಗಕಾಲದಲ್ಲಿ ಬಹು

ಜಾಗ್ರತೆಯಾಗಿ ಇಂದ್ರಿಯ ಚಲನೆಯಾಗುವಿಕೆಯನ್ನು ತಡೆಯುವುದು ; ಅತ್ಯಧಿಕವಾದ ಪುಷ್ಟಿಯನ್ನು ವೀರ್ಯಸ್ತಂಭನವನ್ನು ಉಂಟುಮಾಡುವುದು.

೯. ನಾರಸಿಂಹ ಲೇಹ್ಯ:—ಮಜ್ಜಿಗೆಗಡ್ಡೆ ೪ ತೊಲೆ, ಆನೆನೆಗ್ಗಿಲು ೪ ತೊಲೆ, ನೆಲತಾಟಿಗಡ್ಡೆ ೪ ತೊಲೆ, ಅಮೃತಬಳ್ಳಿ ೪ ತೊಲೆ, ಚಿತ್ರಮೂಲ ೨ ತೊಲೆ, ಶುಂಠಿ ೨ ತೊಲೆ, ಮೆಣಸು ೨ ತೊಲೆ, ಹಿಪ್ಪಲಿ ೨ ತೊಲೆ, ನೆಲಕುಂಬಳಗಡ್ಡೆ ೪ ತೊಲೆ, ನೊಗದೇಬೇರು ೪ ತೊಲೆ, ಮೋಡಿ ೨ ತೊಲೆ, ನೆಲ್ಲೀಕಾಯಿ ೮ ತೊಲೆ, ಅಕ್ಕಲಕರೆ ೨ ತೊಲೆ, ಜಾಕಾಯಿ ೧ ತೊಲೆ, ಕುಂಕುಮಕೇಸರಿ ೧ ತೊಲೆ, ನುಗ್ಗೇಬೀಜ ೧ ತೊಲೆ, ಸೋಪುಬೀಜ ೨ ತೊಲೆ, ತಾವರೇಗಡ್ಡೆ ೪ ತೊಲೆ, ಸಣ್ಣರಾಸ್ಮೆ ೨ ತೊಲೆ, ತುತ್ತೀಬೀಜ ೪ ತೊಲೆ, ಅತಿಮಧುರ ೨ ತೊಲೆ, ಗಜಹಿಪ್ಪಲಿ ೨ ತೊಲೆ, ಚಿಟ್ಟುಮುಟ್ಟೆ ೪ ತೊಲೆ, ಪೇರಾಮುಟ್ಟೆ ೪ ತೊಲೆ, ಬಿಳೀಜೀರಿಗೆ ೨ ತೊಲೆ, ಚಂಗಲಕೋಷ್ಠ ೧ ತೊಲೆ, ತಾಳೀಸಪತ್ರಿ ೧ ತೊಲೆ, ನಾಗಕೇಸರಿ ೧ ತೊಲೆ, ರೂಮಿಮಸ್ತಕಿ ೪ ತೊಲೆ, ಕೊಳವಳಿಕೆ ಬೀಜ ೪ ತೊಲೆ, ತುಂಗೇಗಡ್ಡೆ ೪ ತೊಲೆ, ಭೂಸಕ್ಕರೆಗಡ್ಡೆ ೪ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ದ್ರಾಕ್ಷಿ ೮ ತೊಲೆ, ಖರ್ಜೂರ ೮ ತೊಲೆ, ಬಾದಾಮಿ ನೀರಿನಲ್ಲಿ ನೆನೆಯಿಸಿ ಹೊಟ್ಟುತೆಗೆದದ್ದು ೮ ತೊಲೆ ಇವು ಮೂರು ಒರಳಲ್ಲಿ ಚೆನ್ನಾಗಿ ಕುಟ್ಟಿ ನೀರುಹಾಕಿ ರುಬ್ಬಿ ಬಟ್ಟೆಯಲ್ಲಿ ಶೋಧಿಸಿಕೊಂಡು ಒಂದು ಬಾಂಡ್ಲಿಯಲ್ಲಿ ಸಕ್ಕರೆ ೧೦ ಶೇರು ಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣವನ್ನು ಹಾಕಿ ಜೇನುತುಪ್ಪ ೨ ಶೇರು, ಹಸುವಿನತುಪ್ಪ ೨॥ ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಲೇಹ್ಯ ತೆಗೆದುಕೊಳ್ಳಬೇಕು. ಹೀಗೆ ಬೆಳಿಗ್ಗೆ ಸಾಯುಂಕಾಲ ೨೦ ದಿನ ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ. ಹುಳಿ ವರ್ಜ್ಯ. ಇದರಿಂದ ಅತಿಭೋಗದಿಂದ ಸಂಭವಿಸುವ ಪ್ರಮೇಹ, ಮೇಹಗಡ್ಡೆ, ಪ್ರಮೇಹದಿಂದುಂಟಾದ ಮೈತುರಿ, ನಿರ್ಬಲ ನಿವಾರಣೆಯಾಗುವುದು. ರಕ್ತವೃದ್ಧಿ, ವೀರ್ಯವೃದ್ಧಿಯುಂಟಾಗುವುದು, ಧಾತುಪುಷ್ಟಿಯಾಗುವುದು, ಸಂಭೋಗಶಕ್ತಿಯನ್ನುಂಟುಮಾಡುವುದು.

೧೦. ಸುಖವಲ್ಲಭ ಲೇಹ್ಯ:—ಅಕ್ಕಲಕರೆ ೧ ತೊಲೆ, ಸೊಗದೇಬೇರು ೧ ತೊಲೆ, ಆನೇನೆಗ್ಗಿಲು ೪ ತೊಲೆ, ಅತಿಮಧುರ ೧ ತೊಲೆ, ಶುದ್ಧಿಮಾಡಿದ ಅಶ್ವಗಂಧಿ ೪ ತೊಲೆ, ನೆಲತಾಟಿಗಡ್ಡೆ ೪ ತೊಲೆ, ಮಜ್ಜಿಗೆಗಡ್ಡೆ ೪ ತೊಲೆ, ನಸುಗುನ್ನಿಬೀಜ ೪ ತೊಲೆ, ಉಟ್ಟಂಗುಬೀಜ ೨ ತೊಲೆ, ಸಲ್‌ಗಮ್‌ಬೀಜ ೨ ತೊಲೆ, ಬೀಜಬಂದ್ ೨ ತೊಲೆ, ಕಾಸನಿಬೀಜ ೨ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಲವಂಗ ೧ ತೊಲೆ, ದಾಲಚಿನ್ನಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು ಒಂದು ಬಾಂಡ್ಲಿಯಲ್ಲಿ ಸಕ್ಕರೆ ೩ ಶೇರು

ಹಾಕಿ ನೀರುಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣಹಾಕಿ ಕುಂಕುಮಕೇಸರಿ ಕಾಲುತೊಲೆ, ಪಚ್ಚಕರ್ಪೂರ ೨ ಆಣೆ ತೂಕ, ಜೇನುತುಪ್ಪ ॥ ಶೇರು, ಹಸುವಿನತುಪ್ಪ ||| ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಲೇಹ್ಯ ತೆಗದುಕೊಂಡು ೧ ಪಾವು ಆಕಳಹಾಲು ಕುಡಿಯಬೇಕು. ಹೀಗೆ ಬೆಳಿಗ್ಗೆ ಸಾಯಂ ಕಾಲ ೨೦ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ. ಹುಳಿ ವರ್ಜ್ಯ. ಇದ ರಿಂದ ಹೃದಯ, ಅನ್ನಕೋಶ, ಜೀರ್ಣಕೋಶಗಳಿಗೆ ಶಕ್ತಿಯನ್ನುಂಟುಮಾಡು ವುದು; ರಕ್ತವೃದ್ಧಿ, ವೀರ್ಯವೃದ್ಧಿಯುಂಟಾಗುವುದು; ಸಂಯೋಗಾನಂತರ ಆಗುವ ಆಯಾಸವನ್ನು ಪರಿಹರಿಸಿ, ದುರ್ಬಲವಾದ ಇಂದ್ರಿಯಸ್ಥಾನಗಳನ್ನೆಲ್ಲ ದೃಢಪಡಿಸುವುದು.

೧೧. ಶುಕ್ಲವೃದ್ಧಿ ಲೇಹ್ಯ:— ಶುಂಠಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಅತಿಮಧುರ ೧ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಲವಂಗ ೧ ತೊಲೆ, ದಾಲಚಿನ್ನಿ ೧ ತೊಲೆ, ಕುಂಕುಮಕೇಸರಿ ಕಾಲು ತೊಲೆ, ಬೇದಾನ ೨ ತೊಲೆ, ಬಾದರಂಜಬೋಯ್ ೨ ತೊಲೆ, ಬಹಮನೇ ಸುರಕ್ ೨ ತೊಲೆ, ಬಹಮನೇಸುಫೇದ್ ೨ ತೊಲೆ, ನೆಲತಾಟಗಡ್ಡೆ ೬ ತೊಲೆ, ತಾವರೇಗಡ್ಡೆ ೬ ತೊಲೆ, ತಾವರೇಬೀಜ ೬ ತೊಲೆ, ನುಗ್ಗೇಬೀಜ ೩ ತೊಲೆ, ಭೂ ಸಕ್ಕರೆಗಡ್ಡೆ ೬ ತೊಲೆ, ಸಾಲಾಮಿಸರಿ ೬ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ಹಸುವಿನಹಾಲು ೧ ಶೇರು ಸಕ್ಕರೆ ೪ ಶೇರು ಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಜೇನುತುಪ್ಪ ॥ ಶೇರು, ಹಸುವಿನತುಪ್ಪ ೧ ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಲೇಹ್ಯ ತೆಗೆದುಕೊಂಡು ೧ ಪಾವು ಆಕಳಹಾಲು ಕುಡಿಯಬೇಕು. ಹೀಗೆ ಬೆಳಿಗ್ಗೆ ಸಾಯಂ ಕಾಲ ೨೦ ದಿನ ತೆಗೆದುಕೊಳ್ಳಬೇಕು. ಇದಕ್ಕೆ ಪಥ್ಯ. ಹುಳಿ ವರ್ಜ್ಯ. ಇದರಿಂದ ರಕ್ತವೃದ್ಧಿ, ವೀರ್ಯವೃದ್ಧಿ, ಭೋಗವೃದ್ಧಿಯುಂಟಾಗುವುದು; ಶರೀರಪುಷ್ಟಿ, ಶರೀರಕಾಂತಿಗಳನ್ನುಂಟುಮಾಡುವುದು; ರಕ್ತದೋಷವನ್ನು ಪರಿಹರಿಸುವುದು.

೧೨. ಭೋಗವೃದ್ಧಿ ಲೇಹ್ಯ:—ಬಿಳೇಜೀರಿಗೆ ೧ ತೊಲೆ, ಓಮ ೧ ತೊಲೆ, ಸೋಪುಬೀಜ ೧ ತೊಲೆ, ಅಮೃತಬಳ್ಳಿ ಸಕ್ಕರೆ ೧ ತೊಲೆ, ತವಕ್ಷೀರ ೧ ತೊಲೆ, ಅಕ್ಕಲಕರೆ ೧ ತೊಲೆ, ಅತಿಮಧುರ ೧ ತೊಲೆ, ತುಂಗೇಗಡ್ಡೆ ೨ ತೊಲೆ, ಶ್ರೀಗಂ ಧದ ಚಕ್ಕೆ ೨ ತೊಲೆ, ಸುರ್ರಂಜಾಂ ಮಿಸ್ರಿ ೨ ತೊಲೆ, ಅಸಾರೂಂ ೨ ತೊಲೆ, ಬೋಜದಾಂ ಮಿಸ್ರಿ ೨ ತೊಲೆ, ತೂದರಿಸುಫೇದ್ ೨ ತೊಲೆ, ಶುದ್ಧಿಮಾಡಿದ ಅಶ್ವ ಗಂಧಿ ೬ ತೊಲೆ, ಸುಫೇದ್‌ಮಿಸ್ರಿ ೬ ತೊಲೆ, ಸಿಯಾಮಿಸ್ರಿ ೬ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಖರ್ಜೂರ ೬ ತೊಲೆ, ದ್ರಾಕ್ಷಿ

೧೨ ತೊಲೆ, ಬಾದಾಮಿ ೧೨ ತೊಲೆ ನೀರಿನಲ್ಲಿ ನೆನೆಹಾಕಿ ಹೊಟ್ಟುತೆಗೆದು ಇವು ಮೂರೂ ಒರಳಲ್ಲಿ ಕುಟ್ಟಿ ಹಸುವಿನಹಾಲು ೧ ಶೇರು ಹಾಕಿ ರುಬ್ಬಿ ಶೋಧಿಸಿಕೊಂಡು ಒಂದು ಬಾಂಡ್ಲಿಯಲ್ಲಿ ಸಕ್ಕರೆ ೫|| ಶೇರು, ಜೇನುತುಪ್ಪ ||| ಶೇರು, ಹಸುವಿನತುಪ್ಪ ೧|| ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯಮಾಡಿ ಇಟ್ಟುಕೊಳ್ಳುವುದು ಹೊತ್ತಿಗೆ ಕಾಲುತೊಲೆ ಲೇಹ್ಯ ತೆಗೆದುಕೊಂಡು ೧ ಪಾವು ಆಕಳಹಾಲು ಕುಡಿಯುವುದು. ಹೀಗೆ ಬೆಳಗ್ಗೆ ಸಾಯಂಕಾಲ ೨೦ ದಿವಸ ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ. ಹುಳಿ ವರ್ಜ್ಯ ಇದರಿಂದ ಗುಣ:—ಸಂಭೋಗಶಕ್ತಿ, ಇಂದ್ರಿಯೋತ್ಪತ್ತಿ ಇಲ್ಲದವರಿಗೆ ಸಂಭೋಗಶಕ್ತಿಯನ್ನೂ, ಇಂದ್ರಿಯೋತ್ಪತ್ತಿಯನ್ನು ಉಂಟುಮಾಡುವುದು; ಸ್ವಪ್ನಸ್ಖಲನ, ತ್ವರಿತಸ್ಖಲನಗಳನ್ನು ತಡೆಯುವುದು; ಒಡೆದು ನೀರಾಗಿರುವ ರೇತಸ್ಸು ಘಟ್ಟಿಯಾಗುವುದು; ಸಂಭೋಗಶಕ್ತಿ ಹೆಚ್ಚಾಗುವುದು; ವೀರ್ಯಸ್ಥಂಭನವಾಗುವುದು.

೧೩. ಭೋಗಭಾಗ್ಯಾನಂದ ಲೇಹ್ಯ:—ಶುಂಠಿ ೧ ತೊಲೆ, ಅಜಾಮೋದ ೧ ತೊಲೆ, ಬಿಳೇಜೀರಿಗೆ ೧ ತೊಲೆ, ಕರೇಜೀರಿಗೆ ೧ ತೊಲೆ, ವಾಯುವಿಳಂಗ ೧ ತೊಲೆ, ಸಣ್ಣರಾಸ್ಮೆ ೧ ತೊಲೆ, ಶುದ್ಧಿಮಾಡಿದ ಪರಂಗಿಚಕ್ಕೆ ೨ ತೊಲೆ, ತಾಳೀಸಪತ್ರೆ ೨ ತೊಲೆ, ಅಗಿಲು ಶುಂಠಿ ೪ ತೊಲೆ, ಬಾಲಮೆಣಸು ೨ ತೊಲೆ, ಅಕ್ಕಲಕರೆ ೨ ತೊಲೆ, ತುಂಗೇಗಡ್ಡೆ ೪ ತೊಲೆ, ಕೊಳವಳಿಕೆ ಬೀಜ ೨ ತೊಲೆ, ತಾವರೇಬೀಜ ೨ ತೊಲೆ, ಈರುಳ್ಳಿಬೀಜ ೨ ತೊಲೆ, ಕೆಂಪುಮುಲ್ಲಂಗಿ ಬೀಜ ೨ ತೊಲೆ, ಮೆಣಸು ೧ ತೊಲೆ, ಎಳೇಜಾಲೀಕಾಯಿ ೪ ತೊಲೆ, ತೂದರಿಸುರುಕ್ ೧ ತೊಲೆ, ತೂದರಿಸುಫೇದ್ ೧ ತೊಲೆ, ಸೀಮೆತುತ್ತಿಬೀಜ ೧ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಲವಂಗ ೧ ತೊಲೆ, ದಾಲಚಿನ್ನಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ಹಸುವಿನ ಹಾಲು ೧ ಶೇರು, ಕಲ್ಲುಸಕ್ಕರೆ ೪ ಶೇರು ಹಾಕಿ ಒಲೆಯ ಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣಹಾಕಿ ಕುಂಕುಮಕೇಸರಿ || ತೊಲೆ, ಪಚ್ಚಕರ್ಪೂರ ೨ ಆಣೆ ತೂಕ, ಕಸ್ತೂರಿ ೧ ಅಡ್ಡ ತೂಕ, ಜೇನುತುಪ್ಪ || ಶೇರು, ಹಸುವಿನತುಪ್ಪ ೧ ಶೇರು ಹಾಕಿ ಕಲಿಸಿ ಪಕ್ವವಾಗಿ ಲೇಹ್ಯಮಾಡಿ ಇಟ್ಟುಕೊಳ್ಳುವುದು ಹೊತ್ತಿಗೆ ಕಾಲುತೊಲೆ ಲೇಹ್ಯ ತೆಗೆದುಕೊಂಡು ೧ ಪಾವು ಆಕಳಹಾಲು ಕುಡಿಯುವದು. ಹೀಗೆ ಬೆಳಗ್ಗೆ ಸಾಯಂಕಾಲ ೨೦ ದಿವಸ ಕೊಡುವುದು. ಇದಕ್ಕೆ ಪಥ್ಯ. ಹುಳಿವರ್ಜ್ಯ. ಇದು ನೀರಾಗಿರುವ ರೇತಸ್ಸನ್ನು ಗಟ್ಟಿಪಡಿಸುವುದು; ಅತ್ಯಧಿಕ ಸಂಭೋಗೇಚ್ಛೆಯನ್ನುಂಟುಮಾಡುವುದು; ಹಲವುತರಹೆಯ ಧಾತುನಷ್ಟಗಳನ್ನು ಪರಿಹರಿಸುವುದು; ಜನನಾವಯವಗಳನ್ನು ದೃಢಪಡಿಸುವುದು; ಲಿಂಗಪುಷ್ಟಿಯನ್ನೂ ವೀರ್ಯವೃದ್ಧಿಯನ್ನೂ ಉಂಟುಮಾಡುವುದು.

೧೪. ಮಕರಧ್ವಜ ರಸಾಯನ:—ಶುಂಠಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೪ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಲವಂಗ ೧ ತೊಲೆ, ಲವಂಗಪತ್ರೆ ೧ ತೊಲೆ, ನಾಲಕ್ಕಿ ೧ ತೊಲೆ, ದಾಲ್‌ಚಿನ್ನಿ ೧ ತೊಲೆ, ನಾಗಕೇಸರಿ ೧ ತೊಲೆ, ಅತಿಮಧುರ ೧ ತೊಲೆ, ಸೊಗದೇಬೇರು ೨ ತೊಲೆ, ಮುಡಿವಾಳ ೧ ತೊಲೆ, ಶ್ರೀಗಂಧದಚಕ್ಕೆ ೧ ತೊಲೆ, ಲಾವಂಚ ೧ ತೊಲೆ, ಚಂಗಲ ಕೋಷ್ಠ ೧ ತೊಲೆ, ತಾವರೆಕುಸುಮ ೨ ತೊಲೆ, ಬಿಳೇಜೀರಿಗೆ ೧ ತೊಲೆ, ಕೊತ್ತುಂಬರಿಬೀಜ ೧ ತೊಲೆ, ಆನೇನೆಗ್ಗಿಲು ೪ ತೊಲೆ, ಖುರಾಸಾನಿ ಓಮ ೧ ತೊಲೆ, ಜಟಾಮಾಂಸಿ ೧ ತೊಲೆ, ತಾಳೀಸಪತ್ರೆ ೨ ತೊಲೆ, ಮೋಡಿ ೧ ತೊಲೆ, ನೆಲ್ಲು ಅರಳು ೬ ತೊಲೆ, ಇಪ್ಪೇಹೂವು ೨ ತೊಲೆ, ಕೊಳವಳಿಕೆಬೀಜ ೪ ತೊಲೆ, ಬೂರುಗದಬಂಕೆ ೨ ತೊಲೆ, ತುಪ್ಪದದೇವದಾರು ೧ ತೊಲೆ, ಗಂಟುಭಾರಂಗಿ ೧ ತೊಲೆ, ಶುದ್ಧಿಮಾಡಿದ ಪರಂಗಿಚಕ್ಕೆ ೮ ತೊಲೆ, ತಾವರೇಗಡ್ಡೆ ೪ ತೊಲೆ, ಮಜ್ಜಿಗೆಗಡ್ಡೆ ೪ ತೊಲೆ, ನೆಲತಾಟಿಗಡ್ಡೆ ೪ ತೊಲೆ, ಗಸಗಸೆ ೨ ತೊಲೆ, ಸಾಲಾ ಮಿಸ್ರಿ ೨ ತೊಲೆ, ರೂಮಿಮಸ್ತಕಿ ೨ ತೊಲೆ, ಶುದ್ಧಿಮಾಡಿದ ಅಶ್ವಗಂಧಿ ೧೬ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಕುಂಕುಮ ಕೇಸರಿಕಾಲು ತೊಲೆ, ಗೋರೋಜನ ಕಾಲುತೊಲೆ, ಪಚ್ಚಕರ್ಪೂರ ೨ ಆಣೆ ತೂಕ ಇವು ಮೂರು ಖಲ್ವದಲ್ಲಿ ಅರೆದು ಇಟ್ಟುಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ಸಕ್ಕರೆ ೧೦ ಶೇರು, ದ್ರಾಕ್ಷಿ ೮ ತೊಲೆ, ಖರ್ಜೂರ ೮ ತೊಲೆ ಇವೆರಡು ಒರಳಲ್ಲಿಹಾಕಿ ನೀರುಹಾಕಿ ಗುಬ್ಬಿ ಬಟ್ಟೆಯಲ್ಲಿ ಶೋಧಿಸಿಕೊಂಡು ಬಾಂಡ್ಲಿಯಲ್ಲಿ ಹಾಕುವುದು, ಮುಳ್ಳಂಗಿಗಡ್ಡೆರಸ ತೂಕದ ೫ ಶೇರು ಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ, ಕುಂಕುಮಕೇಸರಿ, ಗೋರೋಜನ, ಪಚ್ಚಕರ್ಪೂರ, ಜೇನುತುಪ್ಪ ೧। ಶೇರು, ಹಸುವಿನ ತುಪ್ಪ ೨॥ ಶೇರು ಹಾಕಿ ಕಲಸಿ ಪಕ್ವವಾಗಿ ರಸಾಯನಮಾಡಿಟ್ಟುಕೊಳ್ಳುವುದು. ಪ್ರಾತಃಕಾಲ ಅರ್ಧತೊಲೆ, ಸಾಯಂಕಾಲ ಅರ್ಧ ತೊಲೆ ರಸಾಯನ ತೆಗೆದುಕೊಂಡು ೧ ಪಾವು ಆಕಳಹಾಲು ಕುಡಿಯಬೇಕು. ಈ ರೀತಿ ೨೦-೪೦ ದಿವಸ ತೆಗೆದುಕೊಳ್ಳಬೇಕು. ಇದರಿಂದ ಇಂದ್ರಿಯಸ್ತಂಭನ ಉಂಟಾಗುವುದು, ವೀರ್ಯವೃದ್ಧಿಯೂ, ಧಾತುಪುಷ್ಟಿಯೂ ಸಹ ಉಂಟಾಗುವುದು.

೧೫. ಮರ್ದಮುಸ್ಕಿ ಲೇಹ್ಯ:—ಶುಂಠಿ, ಹಿಪ್ಪಲಿ, ಮೆಣಸು, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಅಗಿಲುಶುಂಠಿ, ಅಜಮೋದ, ಮೋಡಿ, ವಾಯುವಿಳಂಗ, ಅತಿಮಧುರ, ಗಜಹಿಪ್ಪಲಿ, ಕರ್ಕಾಟಕಶೃಂಗಿ, ಸಣ್ಣರಾಸ್ಮೆ, ಚವ್ಯ, ಕರೇಜೀರಿಗೆ, ತುಪ್ಪದದೇವದಾರು, ರೇವಲಚಿನ್ನಿ, ಓಮ, ಖುರಾಸಾನಿ ಓಮ, ತಾಳೀಸಪತ್ರೆ, ಚಂಗಲಕೋಷ್ಠ, ನಾಗಕೇಸರಿ,

ಜಾಕಾಯಿ, ಜಾಪತ್ರೆ, ಲವಂಗ, ಯಾಲಕ್ಕಿ, ಕುಂಕುಮಕೇಸರಿ, ಬಿಳೇಜೀರಿಗೆ, ಸೋಪುಬೀಜ, ಮರಾಟಿಮೊಗ್ಗು ಇವು ದಿನಸಿಗೆ ೨ ತೊಲೆ, ಅಕ್ಕಲಕರೆ ೪ ತೊಲೆ, ಚಿಟ್ಟಾಮುಟ್ಟಿ ೪ ತೊಲೆ, ವೇರಾಮುಟ್ಟಿ ೪ ತೊಲೆ, ಆನೆನೆಗ್ಗಿಲು ೮ ತೊಲೆ, ಸಣ್ಣನೆಗ್ಗಿಲು ೪ ತೊಲೆ, ದಾಲ್ಚಿನ್ನಿ ೪ ತೊಲೆ, ನುಗ್ಗೆಹೂವು ೪ ತೊಲೆ, ತಾವರೆಹೂವು ೪ ತೊಲೆ, ಇಪ್ಪೆಹೂವು ೪ ತೊಲೆ, ಮರ್ದಮುಸ್ತಿ ಹೂವು ೪ ತೊಲೆ ಆಕಳಹಾಲಿನಲ್ಲಿ ಹಾಕಿ ಬೇಯಿಸಿದ್ದು. ರೂಮಿಮಸ್ತಕಿ, ಬೂರುಗದಬಂಕೆ, ಬೇಲದಬಂಕೆ, ಜಾಲೀಬಂಕೆ, ಬಾದಾಮಿಬಂಕೆ, ನುಗ್ಗೇ ಬಂಕೆ ಇವು ದಿನಸಿಗೆ ೨ ತೊಲೆ, ನುಗ್ಗೇಬೀಜ, ಕೊಳವಳಿಕೆಬೀಜ, ತಂಗಡಿ ಬೀಜ, ತಾವರೇಬೀಜ, ಸಮುದ್ರಸೋಗೆಬೀಜ ಇವು ದಿನಸಿಗೆ ೪ ತೊಲೆ, ಕೊತ್ತಂಬರಿಬೀಜ ೨ ತೊಲೆ, ನಸುಗುನ್ನಿಬೀಜ ೪ ತೊಲೆ, ಈರುಳ್ಳಿಬೀಜ ೪ ತೊಲೆ, ಕೆಂಪುಮುಲ್ಲಂಗಿಬೀಜ ೪ ತೊಲೆ, ನುಜ್ಜಿಗೆಗಡ್ಡೆ ೮ ತೊಲೆ, ನೆಲ ತಾಟಿಗಡ್ಡೆ ೮ ತೊಲೆ, ಶುದ್ಧಿಮಾಡಿದ ಅಶ್ವಗಂಧಿ ೮ ತೊಲೆ, ತುಂಗೇಗಡ್ಡೆ ೪ ತೊಲೆ, ಭೂಸಕ್ಕರೆಗಡ್ಡೆ ೮ ತೊಲೆ, ನೆಲಬುಂಬಳಗಡ್ಡೆ ೮ ತೊಲೆ, ತಾವರೇ ಗಡ್ಡೆ ೮ ತೊಲೆ, ಸಾಲಾಮಿಸರಿ ೧೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿಕೊಳ್ಳುವುದು. ಬಾದಾಮಿ ೧೨ ತೊಲೆ ನೀರಿನಲ್ಲಿ ನೆನೆಹಾಕಿ ಹೊಟ್ಟು ತೆಗೆದುಕೊಳ್ಳುವುದು, ಚಾರುಪೊಪ್ಪು ೪ ತೊಲೆ, ಅಕ್ರೋಟುಪೊಪ್ಪು ೪ ತೊಲೆ, ಪಿಸ್ತಾಪೊಪ್ಪು ೪ ತೊಲೆ, ಗಸಗಸೆ ೪ ತೊಲೆ, ದ್ರಾಕ್ಷಿ ೧೨ ತೊಲೆ ಇವುಗಳನ್ನೆಲ್ಲಾ ಒರಳಲ್ಲಿ ಕುಟ್ಟಿ ಹಸುವಿನಹಾಲು ೨ ಶೇರು ಹಾಕಿ ರುಬ್ಬಿ ಶೋಧಿಸಿಕೊಂಡು ಬಾಂಡ್ಲಿಯಲ್ಲಿ ಹಾಕಿ ಕಲ್ಲುಸಕ್ಕರೆ ೨೦ ಶೇರು, ಅಫೀಂ ॥ ತೊಲೆ ಖಲ್ವದಲ್ಲಿ ಹಾಕಿ ನೀರಿನಿಂದ ಅರೆದು ಬಾಂಡ್ಲಿಯಲ್ಲಿ ಹಾಕಿ ನೀರುಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಹಾಕಿ, ಭಂಗೀಸೊಪ್ಪು ॥ ತೊಲೆ ಯಳನೀರಿನಲ್ಲಿ ಕಾಯಿಸಿ ಆಕಳತುಪ್ಪದಲ್ಲಿ ಹಾಕಿ ಬೇಯಿಸಿ ಸೊಪ್ಪು ಬಿಸಾಕಿ ಆ ತುಪ್ಪವನ್ನು ಹಾಕಿ ಜೇನುತುಪ್ಪ ೨॥ ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯಮಾಡಿ ಇಟ್ಟುಕೊಳ್ಳುವುದು. ಪ್ರಾತಃಕಾಲ ಅರ್ಧತೊಲೆ, ಸಾಯಂಕಾಲ ಅರ್ಧತೊಲೆಯಂತೆ ಲೇಹ್ಯ ತೆಗೆದುಕೊಂಡು ೧ ಪಾವು ಆಕಳಹಾಲು ಕುಡಿಯುವುದು. ಈರೀತಿ ೨೦ ದಿವಸ ತೆಗೆದುಕೊಳ್ಳ ಬೇಕು. ಇದಕ್ಕೆ ಪಥ್ಯ. ಹುಳಿ ವರ್ಜ್ಯ. ಇದರಿಂದ ಇಂದ್ರಿಯಸ್ತಂಭನ ವಾಗುವುದು; ವೀರ್ಯವೃದ್ಧಿಯೂ, ಧಾತುಪುಷ್ಟಿಯೂ ಉಂಟಾಗುವುದು.

೧೬. ಖರ್ಜೂರ ಮುರಬ್ಬ.—ಶುಂಠಿ, ಮೆಣಸು, ಹಿಪ್ಪಲಿ, ದಾಲ್ಚಿನ್ನಿ, ಜಟಾಮಾಂಸಿ, ಮೋಡಿ, ಬಿಳೇಜೀರಿಗೆ, ಲವಂಗ, ನಾಗಕೇಸರಿ, ಭದ್ರಮುಸ್ತೆ, ರಕ್ತಚಂದನ, ಶ್ರೀಗಂಧದಚಕ್ಕೆ, ಸೊಗದೇಬೇರು, ಸಣ್ಣರಾಸ್ಮೆ, ವಾಯು ವಿಳಂಗ, ಜಾಕಾಯಿ, ಜಾಪತ್ರೆ, ಕರೀಹತ್ತಿಬೀಜದ ಪೊಪ್ಪು, ಬೇಲದಹಣ್ಣಿನ

ಬೀಜ, ದ್ರಾಕ್ಷಿ, ಕುಂಕುಮಕೇಸರಿ ಇವು ದಿನಸಿಗೆ ೧ ತೊಲೆ ಕುಟ್ಟಿ ಚೂರ್ಣ ಮಾಡಿ ಶೋಧಿಸಿಕೊಳ್ಳುವುದು. ೧ ಶೇರು ಖರ್ಜೂರ ತಂದು ಅರ್ಧಭಾಗಕ್ಕೆ ಕೊಯಿದು ಬೀಜಗಳನ್ನು ತೆಗೆಯಬೇಕು. ಮೇಲ್ಕಂಡ ದಿನಸುಗಳ ಚೂರ್ಣವನ್ನು ಖರ್ಜೂರಗಳಲ್ಲಿ ತುಂಬಬೇಕು. ಬಾಯಿಗೆ ಗೋಧಿಹಿಟ್ಟು ನೀರಿನಲ್ಲಿ ಕಲಸಿ ಮೆತ್ತಬೇಕು. ಆಕಳತುಪ್ಪದಲ್ಲಿ ಹದವಾಗಿ ಬೇಯಿಸಿ ತೆಗೆದುಕೊಂಡು ೨ ಶೇರು ರಾಯಪುಡಿಸಕ್ಕರೆ, ಜೇನುತುಪ್ಪ ೧ ಶೇರು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯ ಮೇಲಿಟ್ಟು ಕಾಯಿಸಿ ಪಾಕ ಬಂದಕೂಡಲೇ ಖರ್ಜೂರಗಳನ್ನು ಹಾಕಿ ಕಲಸಿ ಇಟ್ಟುಕೊಳ್ಳುವುದು. ಪ್ರಾತಃಕಾಲ ಒಂದು ಖರ್ಜೂರ, ಸಾಯಂಕಾಲ ಒಂದು ಖರ್ಜೂರ ತಿಂದು ಒಂದು ಪಾವು ಆಕಳಹಾಲನ್ನು ಕುಡಿಯಬೇಕು. ಇದರಂತೆ ಇಪ್ಪತ್ತು ದಿನಗಳು ಪ್ರಾತಸ್ಸಂಧ್ಯಾಕಾಲಗಳಲ್ಲಿ ತೆಗೆದುಕೊಳ್ಳುವುದರಿಂದ ವೀರ್ಯ ವೃದ್ಧಿಯೂ, ಧಾತುಪುಷ್ಟಿಯೂ ಉಂಟಾಗುವುದು. ಇದಕ್ಕೆ ಪಥ್ಯ. ಹುಳಿ ವರ್ಜ್ಯ.

೧೭. ಖರ್ಜೂರದ ಮುರಬ್ಬ :—ಸಾಲಾಮಿಸರಿ ೬ ತೊಲೆ, ಚಾರಪೊಪ್ಪು, ಗೇರುಪೊಪ್ಪು, ಬಾದಾಮಿಪೊಪ್ಪು, ಭೂಸಕ್ಕರೆಗಡ್ಡೆ, ಮದನಸಕ್ಕರೆಗಡ್ಡೆ, ಕಾಮಸಕ್ಕರೆಗಡ್ಡೆ, ಇಸಬ್‌ಗೋಲ್, ಗೊರಮಿಡಿಬೀಜ, ನಾಯಿತುಳಸಿಬೀಜ, ನೆಲತಾಟಿಗಡ್ಡೆ, ತಾವರೆಗಡ್ಡೆ, ಮಜ್ಜಿಗೆಗಡ್ಡೆ ಇವು ದಿನಸಿಗೆ ೧ ತೊಲೆ, ಜಾಕಾಯಿ ೩ ತೊಲೆ ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಶೋಧಿಸಿ ಅರೆಯುವ ದಿನಸುಗಳನ್ನು ಅರೆದು ಸಕ್ಕರೆ ೧ ಶೇರು ಹಾಕಿ ಎಲ್ಲವನ್ನೂ ಕಲಸಿ ಖರ್ಜೂರ ೮೦ ತಂದು ಬೀಜತೆಗೆದು ಮೇಲ್ಕಂಡ ಚೂರ್ಣವನ್ನು ತುಂಬಿ ಬಾಯಿಗೆ ಉದ್ದಿನಹಿಟ್ಟು ನೀರಿನಲ್ಲಿ ಕಲಸಿ ಮುಚ್ಚಿ ಹಸುವಿನತುಪ್ಪದಲ್ಲಿ ಸುಮಾರಾಗಿ ಹುರಿದು ಜೇನುತುಪ್ಪದಲ್ಲಿ ಹಾಕಿ ಇಟ್ಟುಕೊಂಡು ಪ್ರತಿದಿನ ಬೆಳಗ್ಗೆ ಸಾಯಂ ಕಾಲ ಒಂದೊಂದು ಕಾಯಿ ತಿಂದು ಹಸುವಿನಹಾಲು ಕುಡಿಯುವುದು. ಹೀಗೆ ೨೦ ದಿವಸ ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ. ಹುಳಿ ವರ್ಜ್ಯ. ಇದ ರಿಂದ ವೀರ್ಯಸ್ತಂಭನ, ವೀರ್ಯವೃದ್ಧಿ, ದೇಹಪುಷ್ಟಿ, ರಕ್ತಶುದ್ಧಿ, ರಕ್ತವೃದ್ಧಿ ಉಂಟಾಗುವುದು.

೧೮. ಉಡವಿನ ಲೇಹ್ಯ :—ಗಂಡು ಉಡ ಒಂದು ತಂದು ಚರ್ಮಸುಲಿದು ತಲೆ ಮತ್ತು ಒಳಗಿನ ಸಾಮಾನು ಬಿಸಾಡಿ ಕೆಮ್ಮಣ್ಣು ಹಚ್ಚಿಸಿ ಚೆನ್ನಾಗಿ ತೊಳೆದು ತುಪ್ಪದಲ್ಲಿ ಸುಟ್ಟು ಮೂಳೆಸಹಿತ ಒರಳಿನಲ್ಲಿ ಹಾಕಿ ಚೆನ್ನಾಗಿ ಕುಟ್ಟಿ ಪುನಹಾ ತುಪ್ಪದಲ್ಲಿ ಹುರಿದು ಹಾರೆಯಿಂದ ಚೆನ್ನಾಗಿ ಕುಟ್ಟಿ ಪುಡಿಮಾಡಿಕೊಂಡಿದ್ದು ೧ ಶೇರು, ಗುಬಚಕ್ಕಿ ಒಣಗಿದಮಾಂಸ ಕಾಲುಶೇರು, ಸಾಲಾಮಿಸರಿ ೬ ತೊಲೆ, ಲವಂಗ ೬ ತೊಲೆ, ಜಾಕಾಯಿ ೨ ತೊಲೆ, ಜಾಪತ್ರೆ ೧ ತೊಲೆ, ಬಾದಾಮಿಪೊಪ್ಪು ೬ ತೊಲೆ, ಶುಂಠಿ ೧ ತೊಲೆ, ಬಿಳೇಜೀರಿಗೆ ೧ ತೊಲೆ, ಮೋಡಿ ೧ ತೊಲೆ,

ಕುಂಕುಮಕೇಸರಿ ಕಾಲುತೊಲೆ, ನೆಲತಾಟಿಗಡ್ಡೆ ೬ ತೊಲೆ, ಚಾರುಪೊಪ್ಪು ೬ ತೊಲೆ, ಕೊಳವಳಿಕೆಬೀಜ ೬ ತೊಲೆ, ರರ್ತಪುರುಷ ೬ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ೬ ಶೇರು ಸಕ್ಕರೆ ಹಾಕಿ, ನೀರುಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣಗಳನ್ನು ಹಾಕಿ ಜೇನುತುಪ್ಪ ೧ ಶೇರು, ಹಸುವಿನತುಪ್ಪ ೨ ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯಮಾಡಿ ಇಟ್ಟುಕೊಳ್ಳುವುದು. ಹೊತ್ತಿಗೆ ॥ ತೊಲೆ ಕೊಡಬೇಕು. ಈರೀತಿ ಬೆಳಿಗ್ಗೆ ಸಾಯಂಕಾಲ ೨೦ ದಿನ ಕೊಡಬೇಕು ಇದಕ್ಕೆ ಪಥ್ಯ. ಹುಳಿ ವರ್ಜ್ಯ ಇದರಿಂದ ವೀರ್ಯವೃದ್ಧಿ ವೀರ್ಯಸ್ಥಂಬನ, ಅಗ್ನಿಪಟುತ್ವ ಹೆಚ್ಚಾಗುತ್ತೆ.

೧೯. ಕೂಷ್ಮಾಂಡ ಲೇಹ್ಯ:—ಪಂಜಾಬ್ ಸಾಲಾಮಿಸ್ರಿ ೧ ತೊಲೆ, ತಾಲಮಖಾನಸೀಮೇದು ೨ ತೊಲೆ, ಷಕಾಕುಲ್‌ಮಿಸ್ರಿ ೧ ತೊಲೆ, ಬೀಜಬಂದು ೧ ತೊಲೆ, ಸಿಯಾಮೂಸಲಿ ೧ ತೊಲೆ, ಬೇದಾನ (ನೀರಿನಲ್ಲಿ ಹಾಕಿ ಕಿವಿಚಿ ಶೋಧಿಸಿಕೊಳ್ಳುವುದು) ೧ ತೊಲೆ, ಸಫೇದ್‌ಮೂಸಲಿ ೧ ತೊಲೆ, ಅಕರೋಟು ೧ ತೊಲೆ, ಪಿಸ್ತಾ ೧ ತೊಲೆ, ಚಲ್‌ಗೋಜಾ ೧ ತೊಲೆ, ಚಾರಪೊಪ್ಪು ೧ ತೊಲೆ, ಬಾದಾಮಿಪೊಪ್ಪು ೧ ತೊಲೆ, ಖರ್ಬೂಜದ ಬೀಜದಪೊಪ್ಪು ೧ ತೊಲೆ, ಸೌತೇಬೀಜದಪೊಪ್ಪು ೧ತೊಲೆ, ಕಲಂಗರೆ ಬೀಜದಪೊಪ್ಪು ೧ತೊಲೆ, ಸೋರೇಬೀಜದ ಪೊಪ್ಪು ೧ ತೊಲೆ, (ಈ ಪೊಪ್ಪುಗಳನ್ನು ನೀರುಹಾಕಿ ರುಬ್ಬಿ ಹಾಲು ಶೋಧಿಸಿಕೊಳ್ಳುವುದು) ದಾಲ್‌ಚಿನ್ನಿ ೧ ತೊಲೆ, ಲವಂಗ ೧ ತೊಲೆ, ಯಾಲಕ್ಕಿ ೧ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ರರ್ತಪುರುಷ ೩ ತೊಲೆ, ಬಾಲಮೆಣಸು ೧ ತೊಲೆ, ಬಹಮನೆಸುರುಕ್ ೧ ತೊಲೆ, ಬಹಮನೆಸುಫೇದ್ ೧ ತೊಲೆ, ದೊಡ್ಡ ದ್ರಾಕ್ಷಿ ೧ ತೊಲೆ, ಸಂದಲ್ (ಶ್ರೀಗಂಧಪುಡಿ) ೧ ತೊಲೆ, ರೂಮಿಮಸ್ತಕಿ ೧ ತೊಲೆ, ತಬಾಷಿರ್ ೧ ತೊಲೆ, ಸೊಗದೇಬೇರು ೧ ತೊಲೆ, ತಾವರೆಕುಸುಮ ೧ ತೊಲೆ, ಭೂಸಕ್ಕರೆಗಡ್ಡೆ ೧ ತೊಲೆ, ಬಾದಾಮಿಬಂಕೆ ೧ ತೊಲೆ, ಮುತ್ತುಗದ ಬಂಕೆ ೧ ತೊಲೆ, ಅಮೃತಬಳ್ಳಿ ಸತ್ತು ೧ ತೊಲೆ, ನಸುಗುನ್ನಿಬೀಜ ೧ ತೊಲೆ, ನಾಗಕೇಸರಿ ೧ ತೊಲೆ, ತೂದರಿಸುರುಕ್ ೧ ತೊಲೆ, ತೂದರಿಸುಫೇದ್ ೧ ತೊಲೆ, ಸಲ್‌ಗಂ ೧ ತೊಲೆ, ಗಸಗಸೆ ೧ ತೊಲೆ, ಇಸಬ್‌ಗೋಲ್ ೧ ತೊಲೆ, ಸೋಪುಬೀಜ ೧ ತೊಲೆ, ಅತಿಮಧುರ ೧ ತೊಲೆ, ಮದನಕಾಮೇಶ್ವರಿ ಹೂವು ೧ ತೊಲೆ ಅರಪಾವು ಆಕಳಹಾಲಿನಲ್ಲಿ ಬೇಯಿಸಿ ಹಾಕಬೇಕು, ನುಗ್ಗೇಬೀಜ ೧ ತೊಲೆ, ಮುಳ್ಳುಶಾವಂತಿಗೆ ಹೂವು ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಬೂದುಕುಂಬಳದಕಾಯಿ ಒಂದು ತಂದು ಒಳಗಿನ ದುದ್ದೆಯನ್ನು ತೆಗೆದು ಮೇಲಿನ ಸಿಪ್ಪೆಯನ್ನು ಸುಲಿದು ಸಣ್ಣಗೆ ತುರುಬಿ ಬಟ್ಟೆಯಲ್ಲಿ ರಸವೆಲ್ಲವನ್ನೂ ಹಿಂಡಿ ರಸ ತೆಗೆಯಬೇಕು. ಹಿಪ್ಪೆ ಬೇರೆ

ಇಟ್ಟುಕೊಳ್ಳುವುದು. ಹಿಪ್ಪೆಯನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯ ಮೇಲಿಟ್ಟು, ಹಸುವಿನತುಪ್ಪ ಹಾಕಿ ಜೇನುತುಪ್ಪದ ಬಣ್ಣದಹಾಗೆ ಹುರಿದು ಇಟ್ಟು ಕೊಳ್ಳುವುದು. ಕುಂಕುಮಕೇಸರಿ ॥ ತೊಲೆ, ಪಚ್ಚಕರ್ಪೂರ ೨ ಆಣೆ ತೂಕ ಇವೆ ರಡು ಖಲ್ವದಲ್ಲಿ ಹಾಕಿ ಅರೆದು ಇಟ್ಟುಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ಬೂದುಕುಂಬಳಕಾಯಿ ರಸವನ್ನು ಪೊಪ್ಪುಗಳ ಹಾಲನ್ನು ಕಲ್ಲುಸಕ್ಕರೆ ೧೫ ಶೇರು ಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಬೂದುಕುಂಬಳಕಾಯಿ ಹುರಿದ ಹಿಪ್ಪೆಯನ್ನು, ದಿನಸಿ ಚೂರ್ಣವನ್ನು, ಖಲ್ವದಲ್ಲಿ ಅರೆದ ದಿನಸನ್ನು ಹಾಕಿ, ಹಸುವಿನತುಪ್ಪ ೨ ಶೇರು ಹಾಕಿ ಚೆನ್ನಾಗಿ ಗೋಟಾ ಯಿಸಿ, ಚಿನ್ನದರೇಕು ೨೫, ಬೆಳ್ಳಿರೇಕು ೨೫ ಹಾಕಿ ಕಲಸಿ ಇಟ್ಟುಕೊಳ್ಳುವುದು ಹೊತ್ತಿಗೆ ॥ ತೊಲೆ ಕೊಡಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨೦ ದಿನ ತೆಗೆದುಕೊಳ್ಳಬೇಕು ಇದಕ್ಕೆ ಪಥ್ಯ. ಹುಳಿ ವರ್ಜ್ಯ. ಇದರಿಂದ ವೀರ್ಯ ವೃದ್ಧಿ, ಧಾತುಪುಷ್ಟಿ ಉಂಟಾಗುವುದು.

೨೦ ಕಾಮಕಾಮೇಶ್ವರೀ ರಸಾಯನ:—ನುಗ್ಗೇಬೀಜ, ಸಾಲಾಮಿಸರಿ, ಆನೇನೆಗ್ಗಿಲು, ಗೊರಮಿಡಿಬೀಜ, ನಸುಗುನ್ನಿಬೀಜ, ಕಂಗೊಂದಿಬೀಜ, ನಾಯಿ ತುಳಸೀಬೀಜ, ತಂಗಡಿಬೀಜ, ಸಮುದ್ರನೋಗೆಬೀಜ, ನೆಲತಾಟಿಗಡ್ಡೆ, ಕರೇ ಜಾಲೀಬೀಜ, ಅಶ್ವತ್ಥದಬೀಜ, ಗೋಣಿಬೀಜ, ಬಂದರೀಬೀಜ, ಗರುಗದಬೀಜ, ಕೆಂಪುಮುಲ್ಲಂಗಿಬೀಜ, ಬಿಲ್ವಪತ್ರಿಬೀಜ, ಖರ್ಜೂರ, ಭಂಗೀಬೀಜ, ಶುದ್ಧಿ ಮಾಡಿದ ಮದನಕಾಮೇಶ್ವರಿ ಹೂವು, ಚಿಳ್ಳೇಬೀಜ, ತಾರೇಕಾಯಿಬೀಜದ ಪೊಪ್ಪು, ನಾಗಕೇಸರಿ, ವಾಯುವಿಳಂಗ, ಮರದರಿಸಿನ, ಭೂಸಕ್ಕರೆಗಡ್ಡೆ, ಶುದ್ಧಿ ಮಾಡಿದ ಅಶ್ವಗಂಧಿ, ತಾವರೆಬೀಜ, ಬೂರುಗದಬಂಕೆ, ಉದ್ದು, ಗಸಗಸೆ, ಮೆಂತ್ಯ, ಲವಂಗಪತ್ರೆ, ದಾಲ್‌ಚಿನ್ನಿ, ಲವಂಗ, ಜಾಕಾಯಿ, ಜಾಪತ್ರೆ, ಶುಂಠಿ, ಬಿಳೇಜೀರಿಗೆ, ಬಾದಾಮಿ, ಪಿಸ್ತಾ ಇವು ಸಮಭಾಗ ತಂದು ಕುಟ್ಟಿ ಚೂರ್ಣ ಮಾಡಿ ಶೋಧಿಸಿಟ್ಟುಕೊಳ್ಳುವುದು. ಇದಕ್ಕೆ ೨ ಭಾಗ ಸಕ್ಕರೆ ಒಂದು ಬಾಂಡ್ಲಿ ಯಲ್ಲಿ ಹಾಕಿ ಹಸುವಿನಹಾಲು ಹಾಕಿ ಒಲೆಯಮೇಲಿಟ್ಟು ಉರಿಹಾಕಿ ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಹಾಕಿ ಕುಂಕುಮಕೇಸರಿ ॥ ತೊಲೆ, ಕಸ್ತೂರಿ ೨ ಗುರುಗಂಜಿ ತೂಕ, ಗೋರೋಜನ ೨ ಗುರುಗಂಜಿ ತೂಕ, ಇವುಗಳನ್ನು ಖಲ್ವದಲ್ಲಿ ಅರೆದು ಹಾಕಿ ಜೇನುತುಪ್ಪ, ಹಸುವಿನತುಪ್ಪ ಹಾಕಿ ಕಲಸಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ, ಅರ್ಧತೊಲೆ ಕೊಡ ಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨೦ ದಿನ ಕೊಡಬೇಕು. ಇದಕ್ಕೆ ಪಥ್ಯ. ಹುಳಿ ವರ್ಜ್ಯ. ಇದರಿಂದ ಬಲ, ಧಾತುವೃದ್ಧಿಯುಂಟಾಗಿ, ರಕ್ತಶುದ್ಧಿ ಯಾಗುವುದು.

೨೧. ಕೂಷ್ಮಾಂಡ ಲೇಹ್ಯ:—ಬೂದಕುಂಬಳಕಾಯಿ ತಂದು ಮೇಲಿನ ಸಿಪ್ಪೆ ಮತ್ತು ಬೀಜ ತೆಗೆದುಹಾಕಿ ಅದನ್ನು ತುರುಬಿ ಒಂದು ಮಡಿಕೆಯಲ್ಲಿ ನೀರುಹಾಕಿ ಬಾಯಿಗೆ ಬಟ್ಟೆಕಟ್ಟಿ ಅದರಮೇಲೆ ತುರುಬಿದ ಹಿಪ್ಪೆಯನ್ನು ಹಾಕಿ ಮುಚ್ಚಳ ಮುಚ್ಚಿ ಒಲೆಯಮೇಲಿಟ್ಟು ಉರಿಹಾಕಿ ಬೇಯಿಸುವುದು. ಅದನ್ನು ತೆಗೆದುಕೊಂಡು ಬಟ್ಟೆಯಲ್ಲಿ ಹಿಂಡಿ ರಸ ತೆಗೆದು ಬೇರೆ ಇಟ್ಟುಕೊಳ್ಳುವುದು. ಹಿಪ್ಪೆಯನ್ನು ತೆಗೆದು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಕಾಯಿಸಿ ತುಪ್ಪ ೨ ಶೇರು ಹಾಕಿ ಹುರಿಯುವುದು. ಜೇನುತುಪ್ಪದ ಬಣ್ಣದಂತೆ ಆಗುವಹಾಗೆ ಹುರಿದು ತೆಗೆದು ಇಟ್ಟುಕೊಳ್ಳುವುದು. ಬೂದಕುಂಬಳಕಾಯಿ ರಸ ೧೨ ಶೇರು, ಕಲ್ಲುಸಕ್ಕರೆ ೧೨ ಶೇರು ಇವೆರಡೂ ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಈ ಚೂರ್ಣ ಹಾಕುವುದು. ಶುಂಠಿ ೬ ತೊಲೆ, ಮೆಣಸು ೧॥ ತೊಲೆ, ಹಿಪ್ಪಲಿ ೬ ತೊಲೆ, ಬಿಳೀ ಜೀರಿಗೆ ೬ ತೊಲೆ, ಯಾಲಕ್ಕಿ ೧॥ ತೊಲೆ, ದಾಲ್ಚಿನ್ನಿ ೧॥ ತೊಲೆ, ಅತಿಮಧುರ ೨ ತೊಲೆ, ಜಟಾಮಾಂಸಿ ೨ ತೊಲೆ, ಕೊತ್ತುಂಬರಿಬೀಜ ೧॥ ತೊಲೆ, ಲವಂಗ ೧॥ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಬೂದುಕುಂಬಳಕಾಯಿ ಹಿಪ್ಪೆಯನ್ನೂ ಜೇನುತುಪ್ಪ ೧ ಶೇರು ಹಾಕಿ ಚೆನ್ನಾಗಿ ಕಲಸಿ ಪಕ್ವವಾಗಿ ಲೇಹ್ಯವನ್ನು ಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ, ॥ ತೊಲೆ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೨೦-೪೦ ದಿನ ಕೊಡಬೇಕು. ಇಚ್ಛಾಪಥ್ಯ. ಚಳದಿ ಪದಾರ್ಥ ವರ್ಜ್ಯ. ಇದರಿಂದ ಕೆಮ್ಮು, ಬಿಕ್ಕಳಿಕೆ, ಆಯಾಸ, ರಕ್ತಪಿತ್ಧ, ಕ್ಷತಕ್ಷಯ, ಉರಃಕ್ಷತ ಇವುಗಳು ಗುಣವಾಗುವುದು. ಬುದ್ಧಿಕುಶಲತೆ, ಜ್ಞಾಪಕಶಕ್ತಿ, ಬಲ, ಹೃದಯಕ್ಕೆ ಮೇಲನ್ನುಂಟುಮಾಡುವುದು.

೨೨. ಮಹಾಕೂಷ್ಮಾಂಡ ಲೇಹ್ಯ:—ಒಂದು ದೊಡ್ಡ ಬೂದಕುಂಬಳಕಾಯಿ ಮೇಲಿನಸಿಪ್ಪೆ ಮತ್ತು ಬೀಜ ತೆಗೆದುಹಾಕಿ ಅದನ್ನು ತುರುಬಿ ಒಂದು ಮಡಿಕೆಯಲ್ಲಿ ನೀರು ಹಾಕಿ ಬಾಯಿಗೆ ಬಟ್ಟೆಕಟ್ಟಿ ಅದರ ಮೇಲೆ ತುರುಬಿದ ಹಿಪ್ಪೆಯನ್ನು ಹಾಕಿ ಮುಚ್ಚಳ ಮುಚ್ಚಿ ಒಲೆಯಮೇಲಿಟ್ಟು ಉರಿಹಾಕಿ ಬೇಯಿಸುವುದು. ಅದನ್ನು ತೆಗೆದುಕೊಂಡು ಬಟ್ಟೆಯಲ್ಲಿ ಹಿಂಡಿ ರಸ ತೆಗೆದು ಬೇರೆ ಇಟ್ಟುಕೊಳ್ಳುವುದು. ಹಿಪ್ಪೆಯನ್ನು ತೆಗೆದುಕೊಂಡು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯ ಮೇಲಿಟ್ಟು ಕಾಯಿಸಿ ತುಪ್ಪಹಾಕಿ ಬೇಯಿಸುತ್ತಾ ಬರುವುದು. ಜೇನುತುಪ್ಪದ ಬಣ್ಣದಂತೆ ಆಗುವಹಾಗೆ ಬೇಯಿಸಿ ತೆಗೆದು ಇಟ್ಟುಕೊಳ್ಳುವುದು. ಮೇಲ್ಕಂಡ ಬೂದಕುಂಬಳಕಾಯಿ ರಸ, ಕಲ್ಲುಸಕ್ಕರೆ ೧೦ ಶೇರು, ಬಾದಾಮಿಬೀಜ ೮ ತೊಲೆ ನೀರಿನಲ್ಲಿ ನೆನೆಹಾಕಿ ಮೇಲಿನಹೊಟ್ಟು ತೆಗೆದು ಒರಳಿನಲ್ಲಿ ಹಾಕಿ ನೀರು ಹಾಕಿ ರುಬ್ಬಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ದ್ರಾಕ್ಷಿ ೮ ತೊಲೆ ಒರಳಲ್ಲಿ ಹಾಕಿ

ನೀರು ಹಾಕಿ ರುಬ್ಬಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಕೇಸರಿ ೧ತೊಲೆ ಖಲ್ವದಲ್ಲಿ ಹಾಕಿ ನೀರುಹಾಕಿ ಅರೆದ ಕೊಳ್ಳುವುದು. ಇವುಗಳೆಲ್ಲವನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಅಳಲೇಕಾಯಿ ಸಿಪ್ಪೆ ೨ ತೊಲೆ, ತಾರೇಕಾಯಿಸಿಪ್ಪೆ ೪ ತೊಲೆ, ನೆಲ್ಲೀಕಾಯಿ ೧೨ ತೊಲೆ, ಶುಂಠಿ ೨ ತೊಲೆ, ಹಿಪ್ಪಲಿ ೨ ತೊಲೆ, ಮೆಣಸು ೨ ತೊಲೆ, ಅತಿಮಧುರ ೨ ತೊಲೆ, ಜಟಾಮಾಂಸಿ ೨ ತೊಲೆ, ಜಾಕಾಯಿ ೨ ತೊಲೆ, ಜಾಪತ್ರೆ ೨ ತೊಲೆ, ಲವಂಗ ೨ ತೊಲೆ, ಲವಂಗಪತ್ರೆ ೨ ತೊಲೆ, ಯಾಲಕ್ಕಿ ೨ ತೊಲೆ, ಬಿಳೀಜೀರಿಗೆ ೪ ತೊಲೆ, ತುಂಗೇಗಡ್ಡೆ ೪ ತೊಲೆ, ಮಜ್ಜಿಗೆಗಡ್ಡೆ ೮ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಮೇಲ್ಕಂಡ ಬಾಂಡ್ಲಿಯಲ್ಲ ಹಾಕಿ ಬೂದ ಕುಂಬಳಕಾಯಿ ಹಿಪ್ಪೆಯನ್ನು ಹಾಕಿ ಜೇನುತುಪ್ಪ ೨॥ ಶೇರು ಹಾಕಿ ಚನ್ನಾಗಿ ಕಲಸಿ ಪಕ್ವವಾಗಿ ಲೇಹ್ಯವನ್ನು ಮಾಡಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ, ಅರ್ಧತೊಲೆ ಕೊಡುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೨೦-೪೦ ದಿನ ಕೊಡಬೇಕು. ಇಚ್ಛಾಪಥ್ಯ. ಚಲದಿಪದಾರ್ಥ ವರ್ಜ್ಯ. ಇದರಿಂದ ಕ್ಷಯ, ಕಾಸ, ಬಿಕ್ಕಳಿಕೆ, ಅರೋಚಕ, ಶ್ವಾಸ, ರಕ್ತಪಿತ್ಥ ಇವು ಗುಣವಾಗಿ ಜ್ಞಾಪಕಶಕ್ತಿಯನ್ನುಂಟುಮಾಡುವುದು. ಅಗ್ನಿಬಲ ಉಂಟಾದವನು ಸೇವಿಸಲು ದೇಹಪುಷ್ಟಿಯಹುದು. ಅಗ್ನಿಮಾಂದ್ಯವಿದ್ದವನಿಗೆ ದೀಪನ ಪಾಚನ ವುಂಟಾಗುವುದು

೨೩. ಶಿಗ್ರುಪುಷ್ಪ ರಸಾಯನ:—ನುಗ್ಗೇಹೂವು ೨೦ ತೊಲೆ, ನೆಲತಾಟಿ ಗಡ್ಡೆ ೪ ತೊಲೆ, ಶುದ್ಧಿಮಾಡಿದ ಅಶ್ವಗಂಧಿ ೪ ತೊಲೆ, ಮಜ್ಜಿಗೆಗಡ್ಡೆ ೨ ತೊಲೆ, ನಸುಗುನ್ನಿಬೀಜ ೧ ತೊಲೆ, ಜಾಕಾಯಿ ॥ ತೊಲೆ, ಲವಂಗ ೪ ತೊಲೆ, ದಾಲ ಚಿನ್ನಿ ೪ ತೊಲೆ, ಶ್ರೀಗಂಧದಚಕ್ಕೆ ೨ ತೊಲೆ, ಭೂಸಕ್ಕರೆಗಡ್ಡೆ ೨ ತೊಲೆ, ಅಕ್ಕಲಕರೆ ೪ ತೊಲೆ, ನೆಲ್ಲೀಕಾಯಿ ೬ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿಕೊಳ್ಳುವುದು. ಖರ್ಜೂರ ೬ ತೊಲೆ ಒರಳಲ್ಲಿ ಹಾಕಿ ನೀರು ಹಾಕಿ ರುಬ್ಬಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಕುಂಕುಮಕೇಸರಿ ೧ ತೊಲೆ ಖಲ್ವದಲ್ಲಿ ಹಾಕಿ ನೀರುಹಾಕಿ ಅರೆದುಕೊಳ್ಳುವುದು, ಇವೆರಡು ಒಂದು ಬಾಂಡ್ಲಿ ಯಲ್ಲಿ ಹಾಕಿ ಹಸುವಿನಹಾಲು ೩ ಶೇರು, ಸಕ್ಕರೆ ೫ ಶೇರು ಹಾಕಿ ಒಲೆಯ ಮೇಲಿಟ್ಟು ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಹಾಕಿ ಜೇನು ತುಪ್ಪ ॥ ಶೇರು, ಹಸುವಿನತುಪ್ಪ ೧ ಶೇರು ಹಾಕಿ ಕಲಸಿ ಪಕ್ವವಾಗಿ ರಸಾಯನ ಮಾಡಿಕೊಳ್ಳುವುದು. ಹೊತ್ತಿಗೆ ಕಾಲು ತೊಲೆ, ಅರ್ಧ ತೊಲೆ ತೆಗೆದುಕೊಳ್ಳು ವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೨೦ ದಿನಗಳು ತೆಗೆದುಕೊಳ್ಳಬೇಕು. ಹುಳಿ ವರ್ಜ್ಯ. ಇದರಿಂದ ಧಾತುಪುಷ್ಟಿ ಚೆನ್ನಾಗಿ ಆಗುವುದು.

# ನಲವತ್ತೆಂಟನೆಯ ಅಧ್ಯಾಯ.

## ಷರಬತ್ತುಗಳು—ಮುರಬ್ಬಗಳು.

### ಷರಬತ್ತುಗಳು.

೧. ನೇರಳೆಹಣ್ಣಿನ ಷರಬತ್ತು:—ನೇರಳೆಹಣ್ಣು ತಂದು ನೀರುಹಾಕಿ ಚನ್ನಾಗಿ ಹಿಸಿಕಿ ಬಟ್ಟೆಯಲ್ಲಿ ಶೋಧಿಸಿಕೊಂಡದ್ದು ೧ ಶೇರು, ಸಕ್ಕರೆ ೨ ಶೇರು ಶೇರಿಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಇಳಿಸಿ ಚನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿಟ್ಟುಕೊಂಡು ಹೊತ್ತಿಗೆ ೧॥ ತೊಲೆಯಷ್ಟು ಷರಬತ್ತನ್ನು ಸಮಭಾಗ ತಣ್ಣೀರಿನಲ್ಲಿ ಕಲಸಿ ಪ್ರಾತಃಕಾಲದಲ್ಲಿ ಮಾತ್ರ ಸೇವಿಸಲು ರಕ್ತಭೇದಿ, ಆಮಸಂಕೆ ಗುಣವಾಗುವುದು.

೨. ನಿಂಬೇಹಣ್ಣಿನ ಷರಬತ್ತು:—ನಿಂಬೇಹಣ್ಣು ರಸತೆಗದು ಶೋಧಿಸಿಕೊಂಡದ್ದು ೧ ಶೇರು, ಸಕ್ಕರೆ ೨ ಶೇರು ಶೇರಿಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಇಳಿಸಿ ಚನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿ ಇಟ್ಟುಕೊಂಡು ಹೊತ್ತಿಗೆ ೨ ತೊಲೆಯಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ಪಿತ್ಥ, ಶೂಲೆ, ಕಫ, ವಾತ, ಅರುಚಿ, ಹೃದ್ರೋಗ, ಅಗ್ನಿಮಾಂದ್ಯ ಗುಣವಾಗುವುವು.

೩. ಹೇರಳೆಹಣ್ಣಿನ ಷರಬತ್ತು:—ಹೇರಳೆಹಣ್ಣಿನ ರಸ ೧ ಶೇರು, ಹಸೀ ಶುಂಟೀ ರಸ ೧ ಪಾವು, ಸಕ್ಕರೆ ೨। ಶೇರು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿಟ್ಟುಕೊಂಡು ಹೊತ್ತಿಗೆ ೧॥ ತೊಲೆಯಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ಆಮ್ಲಪಿತ್ಥ, ಸಕಲ ಪಿತ್ಥವೂ ಗುಣವಾಗಿ ಹಸಿವನ್ನುಂಟುಮಾಡುವುದು.

೪. ಮಾದವಾಳದಹಣ್ಣಿನ ಷರಬತ್ತು:—ಮಾದವಾಳದ ಹಣ್ಣಿನ ರಸ ೧ ಶೇರು, ಗಾವುಜಬಾ (ಎತ್ತಿನ ನಾಲಿಗೆಸೊಪ್ಪಿನ ಧೃತಿ) ಧೃತಿ ೧। ಶೇರು, ಕುಂಕುಮಕೇಸರಿ ೨ ಆಣೆತೂಕ, ಸಕ್ಕರೆ ೪॥ ಶೇರು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿಟ್ಟುಕೊಂಡು ಹೊತ್ತಿಗೆ ೧॥ ತೊಲೆಯಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ಅನ್ನಾಶಯವನ್ನು ಹೃದಯವನ್ನು ಬಲಪಡಿಸುವುದು, ಪಿತ್ಥವನ್ನು ಉಷ್ಣವನ್ನು ನಿವಾರಣೆಮಾಡುವುದು.

ಶೂಲೆ, ಅಜೀರ್ಣ, ಮಲಬದ್ಧ, ಅಗ್ನಿಮಾಂದ್ಯ, ಕಫ, ವಾತ, ಅರುಚಿ, ಶ್ವಾಸ, ಖಾಸ ಗುಣವಾಗುವುದು.

೫. ದಾಳಿಂಬರೆಹಣ್ಣಿನ ಷರಬತ್ತು :—ಸಿಹಿದಾಳಿಂಬರೆ ಹಣ್ಣಿನ ರಸ ೧ ಶೇರು, ಯಾಲಕ್ಕಿ ಕಾಲುತೊಲೆ, ತವಕ್ಷೀರ ಕಾಲುತೊಲೆ, ಪಚ್ಚೆಕರ್ಪೂರ ೧ ಆಣೆತೂಕ, ಕುಂಕುಮಕೇಸರಿ ೨ ಆಣೆತೂಕ ಇವುಗಳನ್ನು ಪನ್ನೀರಿನಿಂದ ಅರೆದು ಮೇಲ್ಕಂಡ ಸಿಹಿದಾಳಿಂಬರೆ ಹಣ್ಣಿನ ರಸಕ್ಕೆ ಸಕ್ಕರೆ ೨ ಶೇರು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗಾದ ಮೇಲೆ ಶೀಸೆಯಲ್ಲಿಹಾಕಿಟ್ಟುಕೊಂಡು ಹೊತ್ತಿಗೆ ೧-೧॥ ತೊಲೆಯಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ಪಿತ್ಥವಿಕಾರಗಳು, ತಾಪ, ಉಷ್ಣ ಗುಣವಾಗುವುದು.

೬. ಹುಳಿದಾಳಿಂಬರೆಹಣ್ಣಿನ ಷರಬತ್ತು :—ಹುಳಿದಾಳಿಂಬರೆಹಣ್ಣಿನ ರಸ ೧ ಶೇರು, ಸಕ್ಕರೆ ೨ ಶೇರು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿಟ್ಟುಕೊಂಡು ಹೊತ್ತಿಗೆ ೧-೧॥ ತೊಲೆಯಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ಆಮಾಶಯಕ್ಕೆ ಬಲವನ್ನುಂಟುಮಾಡುವುದು, ವಾಂತಿಗಳನ್ನು ನಿಲ್ಲಿಸುವುದು, ಅಧಿಕವಾಗಿ ಮಲವಿಸರ್ಜನೆಯಾಗುವುದನ್ನು ಕಡಿಮೆಮಾಡುವುದು. ಈ ಷರಬತ್ತಿನಲ್ಲಿ ಸಿಹಿದಾಳಿಂಬರೆ ಹಣ್ಣಿನ ಷರಬತ್ತನ್ನು ಬೆರೆಸಿ ಸೇವಿಸಿದರೆ ಕರೇಗುಂಡಿಗೆಯಲ್ಲಿರುವ ಉಷ್ಣವನ್ನು ಅಜೀರ್ಣವನ್ನು ಹೋಗಲಾಡಿಸಿ ಮೂತ್ರಕಟ್ಟು ನಿವಾರಣೆ ಮಾಡುವುದು.

೭. ನೆಲ್ಲೀಕಾಯಿ ಷರಬತ್ತು :—ನೆಲ್ಲೀಕಾಯಿಗಳನ್ನು ತಂದು ಕುಟ್ಟಿ ೪ ಭಾಗ ನೀರುಹಾಕಿ ಚತುರ್ಥಾಂಶವಾಗಿ ಕಾಯಿಸಿದ ಕಷಾಯ ೧ ಶೇರು, ಸಕ್ಕರೆ ೨ ಶೇರು ಬೆರಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿ ಇಟ್ಟುಕೊಂಡು ಹೊತ್ತಿಗೆ ೧-೧॥ ತೊಲೆಯಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ರಕ್ತಪಿತ್ಥ, ವಾತ, ಪಿತ್ತ, ಕಫ ಇವುಗಳನ್ನು ಹೋಗಲಾಡಿಸಿ ಶುಕ್ರವನ್ನು ವೃದ್ಧಿಗೊಳಿಸುವುದು.

೮. ಬೇಲದಹಣ್ಣಿನ ಷರಬತ್ತು :—ಚನ್ನಾಗಿ ಹಣ್ಣಾಗಿರುವ ಬೇಲದ ಹಣ್ಣಿನ ಗುಜ್ಜನ್ನು ತೆಗೆದು ೮ ಭಾಗ ನೀರುಹಾಕಿ ಹಿಸಿಕಿ ಚತುರ್ಥಾಂಶವಾಗಿ ಕಾಯಿಸಿದ ಕಷಾಯ ಶೋಧಿಸಿದ್ದು ೧ ಶೇರು, ಸಕ್ಕರೆ ೨ ಶೇರು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿ ಇಟ್ಟುಕೊಂಡು ಹೊತ್ತಿಗೆ ೧-೨ ತೊಲೆಯಷ್ಟು ಷರಬತ್ತನ್ನು

ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ದಾಹ, ಪಿತ್ಥ, ಬಿಕ್ಕಳಿಕೆ, ಶ್ವಾಸ, ವಾಂತಿ, ವಾತ ನಿವಾರಣೆಮಾಡುವುದು.

೯. ಬಿಲ್ಪತ್ರೆಬೇರಿನ ಷರಬತ್ತು :—ಬಿಲ್ಪತ್ರೆಬೇರು ತಂದು ಕುಟ್ಟಿ ೮ ಭಾಗ ನೀರುಹಾಕಿ ಅಷ್ಟಾವಶೇಷವಾಗಿ ಕಾಯಿಸಿ ಶೋಧಿಸಿದ ಕಷಾಯ ೧ ಶೇರು, ಸಕ್ಕರೆ ೨ ಶೇರು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿಟ್ಟುಕೊಂಡು ಹೊತ್ತಿಗೆ ೧ ತೊಲೆಯೆಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ತ್ರಿದೋಷ, ವಾಂತಿ, ಶೂಲೆ, ಮೂತ್ರಕೃಚ್ಛ್ರ, ವಾತ, ಕಫ, ಪಿತ್ಥ ನಿವಾರಣೆಮಾಡುವುದು.

೧೦. ಚೇಪೇಹಣ್ಣು ಷರಬತ್ತು :—ಚನ್ನಾಗಿ ಹಣ್ಣಾಗಿರುವ ಚೇಪೇಹಣ್ಣುಗಳನ್ನು ನೀರುಹಾಕಿ ಚನ್ನಾಗಿ ಹಿಸಿಕಿ ಬಟ್ಟೆಯಲ್ಲಿ ಶೋಧಿಸಿದ ರಸ ೧ ಶೇರು, ಸಕ್ಕರೆ ೨ ಶೇರು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿಟ್ಟುಕೊಂಡು ಹೊತ್ತಿಗೆ ೧-೧॥ ತೊಲೆಯೆಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ರಕ್ತಭೇದಿ ಗುಣವಾಗಿ ಹೃದಯಕ್ಕೆ ಬಲವನ್ನುಂಟುಮಾಡುವುದು.

೧೧. ಗಾವುಜುಬಾ಼ ಷರಬತ್ತು :—ಗಾವುಜುಬಾ಼ ೯ ತೊಲೆ, ಬನಫಷಾ ೪॥ ತೊಲೆ, ಒಣಗಿದ ತುಳಸಿ ಎಲೆ ೩ ತೊಲೆ, ಅಳಲೇಕಾಯಿಸಿಪ್ಪೆ ೩ ತೊಲೆ, ಅಫ್ತಿಮೂ಼ ೩ ತೊಲೆ, ಬಿಸ್‌ಫಾಯಿಸ್ ೩ ತೊಲೆ, ಉಸ್ತುಖುದ್ದೂಸ್ ೩ ತೊಲೆ ಇವುಗಳನ್ನು ಕುಟ್ಟಿ ನಾಲ್ಕುಭಾಗ ನೀರುಹಾಕಿ ೧ ಭಾಗ ಇಳಿಯುವಹಾಗೆ ಕಷಾಯ ಕಾಯಿಸಿ ಶೋಧಿಸಿಕೊಂಡು ಸಕ್ಕರೆ ೨ ಶೇರು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿಟ್ಟುಕೊಂಡು ಹೊತ್ತಿಗೆ ೧-೧॥ ತೊಲೆಯೆಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ಕೊಡುವುದು. ಇದರಿಂದ ಸಕಲ ಪೈತ್ಯ, ಗುಂಡಿಗೆ ನೋವು, ಬಲಹೀನ, ಉನ್ಮಾದ ನಿವಾರಣೆಯಾಗುವುದು.

೧೨. ಹುಣಿಸೇಹಣ್ಣಿನ ಷರಬತ್ತು :—ಹಳೇಹುಣಿಸೇಹಣ್ಣು ನೀರುಹಾಕಿ ಚನ್ನಾಗಿ ಕಿವಿಚಿ ಬಟ್ಟೆಯಲ್ಲಿ ಶೋಧಿಸಿಕೊಂಡು ಒಂದು ಕಲಾಯಿಪಾತ್ರೆಯಲ್ಲಿ ಹಾಕಿ ಒಲೆಯಮೇಲಿಟ್ಟು ೨ ಕುದಿ ಬರುವವರಿವಿಗೂ ಕಾಯಿಸಿ ಕಲ್ಲುಸಕ್ಕರೆ ೨ ಶೇರು ಬೆರೆಸಿ ಜೇನುತುಪ್ಪದಂತೆ ಪಾಕಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿ ಇಟ್ಟುಕೊಂಡು ಹೊತ್ತಿಗೆ ೧ ತೊಲೆಯೆಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ವಾತ ಮತ್ತು ಪಿತ್ಥ ನಿವಾರಣೆ ಆಗುವುದು.

೧೩. ಬಿಳೀದಾಸವಾಳದಹೂವಿನ ಷರಬತ್ತು :—ಬಿಳೀದಾಸವಾಳದಹೂವು ೧ ಶೇರು ೪ ಶೇರು ನೀರುಹಾಕಿ ಬಟ್ಟೆಯಿಂದ ದ್ರಾವಕ ಇಳಿಸಿಕೊಂಡದ್ದು ೧ ಶೇರು, ಸಕ್ಕರೆ ೨ ಶೇರು ಬೆರೆಸಿ ಜೇನುತುಪ್ಪದಂತೆ ಪಾಕಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿ ಇಟ್ಟುಕೊಂಡು ಹೊತ್ತಿಗೆ ೧ ತೊಲೆಯಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃ ಕಾಲದಲ್ಲಿ ಸೇವಿಸಲು ಚುರುಕುಜಾಡ್ಯ, ರಕ್ತಭೇದಿ ಗುಣವಾಗುವುದು.

೧೪. ಗುಲಾಬಿಹೂವಿನ ಷರಬತ್ತು :—ಗುಲಾಬಿಹೂವು ೧ ಶೇರು ೪ ಶೇರು ನೀರುಹಾಕಿ ಬಟ್ಟೆಯಿಂದ ದ್ರಾವಕ ಇಳಿಸಿಕೊಂಡದ್ದು ೧ ಶೇರು, ಸಕ್ಕರೆ ೨ ಶೇರು ಬೆರೆಸಿ ಜೇನುತುಪ್ಪದಂತೆ ಪಾಕಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗೆ ಆದಮೇಲೆ ಶೀಸೆಯಲ್ಲಿ ಹಾಕಿ ಇಟ್ಟುಕೊಂಡು ಹೊತ್ತಿಗೆ ೧ ತೊಲೆಯಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ನಿರ್ಬಲತ್ವ, ಬಳಲಿಕೆ, ವಮನ, ಮುಖರೋಗ, ಶ್ವಾಸ, ಪಿತ್ಥ, ಅರುಚಿ, ಉಷ್ಣ, ಉರಿಮೂತ್ರ ಕಣ್ಣುರಿ ಇವುಗಳನ್ನು ಪರಿಹರಿಸುವುದು.

೧೫ ದವನದ ಷರಬತ್ತು :—ಒಣಗಿದ ದವನ ೧ ಶೇರು, ಒಣಗಿದ ಜಾತರಾಶಿ ೨ ತೊಲೆ, ಲಾವಂಚ ೧ ತೊಲೆ, ಪರ್ಪಾಟ್ಟಕ ೧ ತೊಲೆ, ಕಹಿಪಡವಲ ೧ ತೊಲೆ, ಶುದ್ಧಿಮಾಡಿದ ಅಶ್ವಗಂಧಿ ೧ ತೊಲೆ, ಶುಂಠಿ ೧ ತೊಲೆ, ಮೆಣಸು ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೪ ತೊಲೆ, ಅತಿಮಧುರ ೧ ತೊಲೆ, ವಾಯುವಿಳಂಗ ೧ ತೊಲೆ, ಲವಂಗಪತ್ರೆ ೧ ತೊಲೆ, ನಾಗಕೇಸರಿ ೧ ತೊಲೆ, ಪೋಡಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ೪ ಶೇರು ನೀರು ಹಾಕಿ ೧೨ ಘಂಟೆ ಹೊತ್ತು ನೆನೆಯಿಟ್ಟು ಚತುರ್ಥಾಂಶ ಕಷಾಯುವಿಟ್ಟು ಶೋಧಿಸಿ ೧ ಶೇರಿಗೆ ತೆಗೆದುಕೊಂಡು ಸಕ್ಕರೆ ೨ ಶೇರು ಬೆರೆಸಿ ಜೇನುತುಪ್ಪದಂತೆ ಪಾಕಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿ ಇಟ್ಟುಕೊಂಡು ಹೊತ್ತಿಗೆ ||-||| ತೊಲೆಯೆಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಬೆಳಿಗ್ಗೆ ಸಾಯಂ ಕಾಲ ಸೇವಿಸಲು ಮೇಹಗಳು, ಉಷ್ಣಕಾರಕ, ಪಿತ್ಥಕಾರಕ, ಚುರುಕು, ವಾಯು ಗುಣವಾಗುವುದು. ಇದಕ್ಕೆ ಪಥ್ಯ. ಹಸುವಿನ ಹಾಲು ಅನ್ನ ಅಥವಾ ತೊಗರೀ ಬೇಳೆ ಸಿಹಿಸಾರು ಅನ್ನ.

೧೬. ಸಕಲರೋಗಕ್ಕೆ ಷರಬತ್ತು :—ಒಣಗಿದ ತೊಂಡೇಸೊಪ್ಪು ೧ ಪಾವು, ಒಣಗಿದ ಗರುಗದಸೊಪ್ಪು ೧ ಪಾವು, ಒಣಗಿದ ಚುರುಚುರಿಕೆ ಸೊಪ್ಪು ೧ ಪಾವು, ಒಣಗಿದ ತಿನ್ನುವ ಅಲೇಸೊಪ್ಪು ೧ ಪಾವು, ಒಣಗಿದ ಹೊನ ಗೊನೆಸೊಪ್ಪು ೧ ಪಾವು, ಒಣಗಿದ ಹೊಮ್ಮುಗಳಿಸೊಪ್ಪು ೧ ಪಾವು, ಒಣಗಿದ ಕರೇಕಾಚಿಸೊಪ್ಪು ೧ ಪಾವು, ಒಣಗಿದ ಕಿರುನಲ್ಲಸೊಪ್ಪು ೧ ಪಾವು, ಒಣಗಿದ

ಅಚ್ಚೆಸೊಪ್ಪು ೧ ಪಾವು, ಯಾಲಕ್ಕಿ ॥ ತೊಲೆ, ಶುಂಠಿ ॥ ತೊಲೆ, ಲವಂಗ ॥ ತೊಲೆ, ದಾಲ್‌ಚಿನ್ನಿ ॥ ತೊಲೆ, ಸೋಪುಬೀಜ ॥ ತೊಲೆ, ಬಿಳೇಜೇರಿಗೆ ॥ ತೊಲೆ, ಕೊತ್ತುಂಬರಿಬೀಜ ॥ ತೊಲೆ, ತಾಳೀಸಪತ್ರೆ ॥ ತೊಲೆ, ಚಂಗಲ ಕೋಷ್ಟ ಕಾಲುತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ೧೦ ಶೇರು ನೀರು ಹಾಕಿ ೧೨ ಘಂಟೆ ಹೊತ್ತು ನೆನೆಯಿಟ್ಟು ಚತುರ್ಥಾಂಶ ಕಷಾಯವಿಟ್ಟು ಶೋಧಿಸಿ ೨॥ ಶೇರು ತೆಗೆದುಕೊಂಡು ಸಕ್ಕರೆ ೫ ಶೇರು, ಕಬ್ಬಿನ ರಸ ೧ ಪಾವು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗೆ ಆದಮೇಲೆ ಶೀಸೆಯಲ್ಲಿ ಹಾಕಿಟ್ಟುಕೊಂಡು ಹೊತ್ತಿಗೆ ॥-।॥ ತೊಲೆಯಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಬೆಳಿಗ್ಗೆ ಸಾಯಂಕಾಲ ಸೇವಿಸಲು ಪಾಂಡು ರೋಗ, ಒಣಕಾಮಾಲೆ, ಕಾಮಾಲೆ, ಚುರುಕು, ಮೇಹ, ವಾತಪಿತ್ಥ, ವಾತ ಗುಲ್ಮ, ಕೈಕಾಲು ಹೊಡೆತ ಇವು ಗುಣವಾಗುವುದು ಇದಕ್ಕೆ ಪಥ್ಯ. ತೊಗರೀ ಬೇಳೆ ಸಿಹಿಸಾರು ಅನ್ನ.

೧೭. ಅನಾನಸುಹಣ್ಣಿನ ಷರಬತ್ತು:—ಅನಾನಸುಹಣ್ಣು ಮೇಲಿನ ಹೊಟ್ಟು ತೆಗೆದು ಸಣ್ಣದಾಗಿ ಕತ್ತರಿಸಿ ನೀರುಹಾಕಿ ಚೆನ್ನಾಗಿ ಹಿಸಿಕಿ ಬಟ್ಟೆಯಲ್ಲಿ ಶೋಧಿಸಿದ ರಸ ೧ ಶೇರು, ಸಕ್ಕರೆ ೨ ಶೇರು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿಟ್ಟುಕೊಂಡು ಹೊತ್ತಿಗ ॥ ತೊಲೆಯಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ಹೃದಯಕ್ಕೆ ಹಿತವಾಗಿ ರಕ್ತ ಶುದ್ಧಿಯಾಗಿ ರಕ್ತ ವೃದ್ಧಿಯನ್ನುಂಟುಮಾಡುವುದು.

೧೮. ಸೊಗದೇಬೇರಿನ ಷರಬತ್ತು:—ಸೊಗದೇಬೇರು ೩ ಶೇರು, ಗುಲಾಬಿ ಹೂವು ೧ ಪಾವು, ನಾಗಕೇಸರಿ ೩ ತೊಲೆ, ಯಾಲಕ್ಕಿ ೧ ತೊಲೆ, ಶುಂಠಿ ೧ ತೊಲೆ, ತಾಳೀಸಪತ್ರೆ ೧ ತೊಲೆ, ಲವಂಗಪತ್ರೆ ೧ ತೊಲೆ, ಮಜ್ಜಿಗೆಗಡ್ಡೆ ೧ ಪಾವು ಇವುಗಳನ್ನು ಕುಟ್ಟಿ ಚೂರ್ಣಮಾಡಿ ೧೪ ಶೇರು ನೀರುಹಾಕಿ ೧೨ ಘಂಟೆ ಹೊತ್ತು ನೆನೆಯಿಸಿಟ್ಟು ಚತುರ್ಥಾಂಶ ಕಷಾಯವಿಟ್ಟು ೩॥ ಶೇರು ತೆಗೆದುಕೊಂಡು ಸಕ್ಕರೆ ೭ ಶೇರು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿಟ್ಟುಕೊಂಡು ಹೊತ್ತಿಗೆ ೧ ತೊಲೆಯಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಬೆಳಿಗ್ಗೆ ಸಾಯಂಕಾಲ ಸೇವಿಸಲು ಅಗ್ನಿಮಾಂದ್ಯ, ಅರುಚಿ, ವಾಂತಿ, ಕಾಸ, ದಾಹ, ತ್ರಿದೋಷ, ರಕ್ತದೋಷ, ಪ್ರದರರೋಗ, ಅತ್ಯುಷ್ಣ, ತಾಪ, ಮೇಹ, ವ್ರಣ, ನವೆ, ಪಿತ್ಥ ವಿಕಾರ, ಚರ್ಮರೋಗ ಇವು ನಿವಾರಣೆ ಆಗುವುದು.

೧೯. ತಾವರೇಹೂವಿನ ಷರಬತ್ತು:— ಒಣಗಿದ ತಾವರೇಹೂವು ೧ ಶೇರು ೪ ಶೇರು ನೀರುಹಾಕಿ ಬಟ್ಟಿಯಿಂದ ದ್ರಾವಕ ಇಳಿಸಿಕೊಂಡದ್ದು ೧ ಶೇರು, ಸಕ್ಕರೆ

೨ ಶೇರು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿನಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗೆ ಆದಮೇಲೆ ಶೀಸೆಯಲ್ಲಿ ಹಾಕಿ ಇಟ್ಟುಕೊಂಡು ಹೊತ್ತಿಗೆ ೧ ತೊಲೆಯೆಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ತಂಪನ್ನುಂಟುಮಾಡುವುದು, ಪಿತ್ಥ, ಶ್ಲೇಷ್ಮ, ರಕ್ತದೋಷ ಇವುಗಳನ್ನು ನಿವಾರಣೆಮಾಡಿ ಬಲವನ್ನುಂಟುಮಾಡುವುದು.

೨೦ ಪುದೀನ ಷರಬತ್ತು:—ಪುದೀನಸೊಪ್ಪಿನ ರಸ ೧ ಶೇರು, ನಿಂಬೇಹಣ್ಣಿನ ರಸ || ಶೇರು, ಸಕ್ಕರೆ ೩ ಶೇರು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿ ಇಟ್ಟುಕೊಂಡು ಹೊತ್ತಿಗೆ ೧ ತೊಲೆಯೆಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ಎದೆ, ಪಕ್ಕದ ಗುಂಡಿಗೆಯಲ್ಲಿರುವ ಕೆಟ್ಟನೀರನ್ನು ತೊಲಗಿಸಿ ಶರೀರವನ್ನು ಶುದ್ಧಿಮಾಡುವುದು. ಅಧಿಕವಾಗಿ ಬರುವ ತೇಗನ್ನು ಖಂಡಿಸುವುದು, ವಾಯುವನ್ನು ಹತಮಾಡುವುದು, ಮೂತ್ರವನ್ನು ಬೆವರನ್ನು ಹೆಚ್ಚುಮಾಡುವುದು. ಪಿತ್ಥ, ಎದೆವುರಿ ಇವುಗಳನ್ನು ನಿವಾರಣೆಮಾಡುವುದು. ಗರ್ಭಿಣಿಯರು ಇದನ್ನು ಉಪಯೋಗಿಸಬಾರದು.

೨೧. ಕಾಸಿನಿ ಷರಬತ್ತು:—ಕಾಸಿನಿಬೇರು || ಶೇರು, ಕಾಸಿನಿಬೀಜ || ಶೇರು, ಖರಬೂಜಬೀಜದ ಪೊಪ್ಪು || ಶೇರು, ಕುಷೂಸ್‌ಬೀಜ (ಅರಬಿಯಲ್ಲಿ ಇದಕ್ಕೆ ಬಜ್‌ರುಲ್ ಕುಷೂಸ್, ಹಿಂದೂಸ್ಥಾನಿಯಲ್ಲಿ ಅರಾತಾಕೀಪೇರಿಜ್ ಎಂದು ಹೇಳುವರು) ೧ ಪಾವು, ಇವುಗಳೆಲ್ಲವನ್ನು ೩ ಶೇರು ನೀರಿನಲ್ಲಿ ಚೆನ್ನಾಗಿ ಅರೆದು ಶೋಧಿಸಿಕೊಂಡದ್ದು ೨ ಶೇರು, ಸೀಮೆ ದ್ರಾಕ್ಷಿಕಾಡಿ (ಅಂದರೆ ವಿನಿಗರ್) ೩ ತೊಲೆ, ಸಕ್ಕರೆ ೨ ಶೇರು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗೆ ಆದಮೇಲೆ ಶೀಸೆಯಲ್ಲಿ ಹಾಕಿ ಇಟ್ಟುಕೊಂಡು ಹೊತ್ತಿಗೆ ೧ ತೊಲೆಯೆಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ಗುಂಡಿಗೆ ಅದರುವುದು, ಪಾಂಡುರೋಗ, ತಲೆ ತಿರುಗುವಿಕೆ, ಕರೇಗುಂಡಿಗೆಯಲ್ಲಿರುವ ಉಷ್ಣ, ವಿದಾಹ, ಜ್ವರ, ಗುಂಡಿಕಾಯಗಳ ದೌರ್ಬಲ್ಯವು, ಬಾಯಿಯಲ್ಲಿ ರಕ್ತಬರುವುದನ್ನು ಗುಣಪಡಿಸುವುದು.

೨೨. ದ್ರಾಕ್ಷೆಹಣ್ಣಿನ ಷರಬತ್ತು:—ಒಣಗಿದ ದ್ರಾಕ್ಷೆ ೨|| ಸೇರಿಗೆ ನೀರು ಹಾಕಿ ಚೆನ್ನಾಗಿ ಅರೆದು ಬಟ್ಟೆಯಲ್ಲಿ ಶೋಧಿಸಿಕೊಂಡದ್ದು ೧ ಶೇರು, ಪನ್ನೀರು ೧ ಪಾವು, ಸಕ್ಕರೆ ೨| ಶೇರು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿಟ್ಟುಕೊಂಡು ಹೊತ್ತಿಗೆ ೧-೧|| ತೊಲೆಯೆಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ಪಿತ್ಥವುಷ್ಣ, ಕೈಕಾಲು ಉರಿ ಗುಣಪಡಿಸಿ ಹೊಸ ರಕ್ತವನ್ನುಂಟುಮಾಡುವುದು.

೨೩. ಹಶೀಶುಂಠಿ ಷರಬತ್ತು:—೨॥ ಶೇರು ಹಶೀಶುಂಠಿ ಮೇಲಿನ ಹೊಟ್ಟು ಕೆರೆದು ತುಂಡುತುಂಡಾಗಿ ಕತ್ತರಿಸಿ ಒಂದು ಶೇರು ನೀರುಹಾಕಿ ರುಬ್ಬಿ ರಸ ತೆಗೆದು ಕೊಂಡು ಶೋಧಿಸಿ ೧ ಘಂಟೆ ಇಟ್ಟಿದ್ದು ಮೇಲಿನ ತಿಳಿ ತೆಗೆದುಕೊಂಡದ್ದು ೧ ಶೇರು, ಸಕ್ಕರೆ ೨ ಶೇರು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಚೆನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿಟ್ಟುಕೊಂಡು ಹೊತ್ತಿಗೆ ೧ ತೊಲೆಯಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ಮಂದಾಗ್ನಿ, ಅರುಚಿ, ಶ್ವಾಸಖಾಸ, ವಾಂತಿ, ಬಿಕ್ಕಳಿಕೆ, ವಾತ, ಶ್ಲೇಷ್ಮ,ಮಲಬದ್ಧ ನಿವಾರಣೆಮಾಡುವುದು.

೨೪. ಶ್ರೀಗಂಧದ ಷರಬತ್ತು :—ಶ್ರೀಗಂಧದಪುಡಿ ೧ ಶೇರು, ಜಾಕಾಯಿ ಕಾಲುತೊಲೆ, ಜಾಪತ್ರೆ ಕಾಲುತೊಲೆ, ಯಾಲಕ್ಕಿ ಕಾಲುತೊಲೆ, ಲವಂಗ ಕಾಲುತೊಲೆ ಇವುಗಳನ್ನು ೩ ಶೇರು ನೀರಿನಲ್ಲಿ ನೆನೆಹಾಕಿ ಎರಡನೆಯ ದಿನ ಕಷಾಯ ಕಾಯಿಸಿ ಮೂರರಲ್ಲೊಂದು ಭಾಗ ಉಳಿಯುವಂತೆ ಕಷಾಯ ಕಾಯಿಸಿದ್ದು ೧ ಶೇರು, ಕುಂಕುಮಕೇಸರಿ ೨ ಆಣೆ ತೂಕ ಪನ್ನೀರಿನಲ್ಲಿ ಅರೆದು ಕಷಾಯಕ್ಕೆ ಹಾಕಿ ಸಕ್ಕರೆ ೨ ಶೇರು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿಟ್ಟುಕೊಂಡು ಹೊತ್ತಿಗೆ ೧ ತೊಲೆಯಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ಶ್ಲೇಷ್ಮ, ದಾಹ, ಪಿತ್ಥ, ರಕ್ತದೋಷ, ವೈವುರಿ, ಎದೆನೋವು, ಪ್ರಮೇಹ, ಉರಿಮೂತ್ರ ಇವುಗಳನ್ನು ಹೋಗಲಾಡಿಸಿ ಶರೀರಕ್ಕೆ ಒಳ್ಳೇ ತೇಜಸ್ಸನ್ನೂ ಮತ್ತು ಆರೋಗ್ಯವನ್ನುಂಟುಮಾಡುವುದು.

೨೫. ಆಷಾಡಿಬೇರಿನ ಷರಬತ್ತು :—೨॥ ಶೇರು ಮಜ್ಜಿಗೆ ಗಡ್ಡೆ ಮೇಲಿನ ಸಿಪ್ಪೆತೆಗೆದು ಕುಟ್ಟಿ ರಸ ತೆಗೆದದ್ದು ೧ಶೇರು, ಸಕ್ಕರೆ ೨ ಶೇರು ಬೆರೆಸಿ ಜೇನುತುಪ್ಪದಂತೆಪಾಕ ಬರುವವರಿವಿಗೂ ಕಾಯಿಸಿ ಚೆನ್ನಾಗಿ ತಣ್ಣಗೆ ಆದಮೇಲೆ ಶೀಸೆಯಲ್ಲಿ ಹಾಕಿಟ್ಟುಕೊಂಡು ಹೊತ್ತಿಗೆ ೧ ತೊಲೆಯಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ವಾತ, ಪಿತ್ಥ, ರಕ್ತದೋಷ, ಊತ, ಧಾತುಕ್ಷೀಣತೆ, ಮೊಲೆಹಾಲು ಕಡಿಮೆಯಾಗಿರುವುದು ಇವುಗಳನ್ನು ನಿವಾರಣೆಮಾಡಿ ಆಯುರಾರೋಗ್ಯವನ್ನುಂಟ ಮಾಡುವುದು.

೨೬. ಅಂಜೂರದಹಣ್ಣಿನ ಷರಬತ್ತು:—ಒಳ್ಳೇ ಪಕ್ವವಾದ ಅಂಜೂರದ ಹಣ್ಣುಗಳನ್ನು ಹಸುವಿನಹಾಲು ಹಾಕಿ ರುಬ್ಬಿ ಶೋಧಿಸಿಕೊಂಡದ್ದು ೧ ಶೇರು, ಸಕ್ಕರೆ ೨ ಶೇರು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿ ಇಟ್ಟುಕೊಂಡು ಹೊತ್ತಿಗೆ ೧ ತೊಲೆಯಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ

ಸೇವಿಸಲು ಉಷ್ಣ, ಅರುಚಿ, ಪಿತ್ಥ, ರಕ್ತ, ವಾತ ಇವುಗಳನ್ನು ಪರಿಹರಿಸಿ ರಕ್ತ ಶುದ್ಧಿಯನ್ನುಂಟುಮಾಡುವುದು.

೨೭. ಮುಲ್ಲಂಗಿಗಡ್ಡೆ ಷರಬತ್ತು :—ಎಳೇ ಮುಲ್ಲಂಗಿಗಡ್ಡೆ ರಸ ತೆಗೆದು ಶೋಧಿಸಿಕೊಂಡದ್ದು ೧ ಶೇರು, ಸಕ್ಕರೆ ೨ ಶೇರು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿ ಇಟ್ಟುಕೊಂಡು ಹೊತ್ತಿಗೆ ೧ ತೊಲೆಯಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ಮೂತ್ರದೋಷ, ಮೂಲವ್ಯಾಧಿ, ಗುಲ್ಮ, ನೇತ್ರರೋಗ, ನಾಭಿಶೂಲೆ, ಕಂಠರೋಗ, ತ್ರಿದೋಷ, ಪೀನಸ, ವ್ರಣ ನಿವಾರಣೆಯಾಗುವುದು.

೨೮. ಷಾಜೀರಾ ಷರಬತ್ತು :—ಷಾಜೀರ ೧ ಶೇರು, ೪ ಶೇರು ನೀರುಹಾಕಿ ಬಟ್ಟಿಯಿಂದ ದ್ರಾವಕ ಇಳಿಸಿಕೊಂಡದ್ದು ೧ ಶೇರು, ಸಕ್ಕರೆ ೨ ಶೇರು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಚೆನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿ ಇಟ್ಟುಕೊಂಡು ಹೊತ್ತಿಗೆ ೧ ತೊಲೆಯಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ವಾಯು, ಹೊಟ್ಟೆ ವುಬ್ಬರ, ಅಜೀರ್ಣ, ಅಜೀರ್ಣದಿಂದುಂಟಾಗವ ಭೇದಿ ಹೋಗಲಾಡಿಸುವುದು. ಸೂತಕ ಕಟ್ಟಿರುವುದನ್ನು ಒಡಿಯುವುದು. ಮೂತ್ರಕೃಚ್ಛ್ರವನ್ನು ಹೋಗಲಾಡಿಸಿ ಮೂತ್ರವನ್ನು ಧಾರಾಳವಾಗಿ ವಿಸರ್ಜನೆಮಾಡಿಸುವುದು.

೨೯. ಅಜವೋದದ ಷರಬತ್ತು :—ಅಜವೋದ ೧ ಶೇರು, ೪ ಶೇರು ನೀರುಹಾಕಿ ಬಟ್ಟಿಯಿಂದ ದ್ರಾವಕ ಇಳಿಸಿಕೊಂಡದ್ದು ೧ ಶೇರು, ಸಕ್ಕರೆ ೨ ಶೇರು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿ ಇಟ್ಟುಕೊಂಡು ಹೊತ್ತಿಗೆ ೧ ತೊಲೆಯಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ಪುಡಿಕೆಮ್ಮು, ವಾಯು, ಉಬ್ಬಸ, ಅಶ್ಮರೀ, ಮಂದಾಗ್ನಿ ಇವುಗಳನ್ನು ನಿವಾರಣೆ ಮಾಡುವುದು.

೩೦. ಬಾದಾಮಿ ಷರಬತ್ತು :—ಒಳ್ಳೆ ಬಾದಾಮಿಬೀಜ ೧ ಶೇರು ನೀರಿನಲ್ಲಿ ನೆನೆಹಾಕಿ ಮೇಲಿನ ಹೊಟ್ಟುತೆಗೆದು ೧॥ ಶೇರು ಹಸುವಿನಹಾಲು ಹಾಕಿ ರುಬ್ಬಿ ಶೋಧಿಸಿಕೊಂಡದ್ದು ೧ ಶೇರು, ಸಕ್ಕರೆ ೨ ಶೇರು ಬೆರೆಸಿ ಜೇನುತುಪ್ಪದಂತೆ ಪಾಕ ಬರುವವರಿವಿಗೂ ಕಾಯಿಸಿ ಇಳಿಸಿ ಚೆನ್ನಾಗಿ ತಣ್ಣಗಾದಮೇಲೆ ಶೀಸೆಯಲ್ಲಿ ಹಾಕಿಟ್ಟುಕೊಂಡು ಹೊತ್ತಿಗೆ ೧ ತೊಲೆಯಷ್ಟು ಷರಬತ್ತನ್ನು ಸಮಭಾಗ ತಣ್ಣೀರು ಬೆರೆಸಿ ಪ್ರಾತಃಕಾಲದಲ್ಲಿ ಸೇವಿಸಲು ವಾತವನ್ನು ಹೋಗಲಾಡಿಸಿ ಬಲವನ್ನೂ, ಶುಕ್ರವೃದ್ಧಿಯನ್ನೂ ಮಾಡುವುದು.

### ಮುರಬ್ಬಗಳು.

೧. ಮಾದವಾಳದಕಾಯಿ ಮುರಬ್ಬ:—ಮಾದವಾಳದ ಕಾಯಿಯಮೇಲೆ ಇರುವ ಸಿಪ್ಪೆಯನ್ನು ಸಣ್ಣಸಣ್ಣ ತುಂಡುಗಳಾಗಿ ಕುಯಿದದ್ದು ೧ ಶೇರು ತುಂಡುಗಳನ್ನು ೧ ಶೇರು ಹಸುವಿನ ಹಾಲಿನಲ್ಲಿ ಕಾಯಿಸಿ ಇಟ್ಟುಕೊಳ್ಳುವುದು. ಯಾಲಕ್ಕಿ ಕಾಲುತೊಲೆ, ಸೋಪುಬೀಜ ಕಾಲುತೊಲೆ, ಷಾಜೀರಿಗೆ ೧ ತೊಲೆ ಇವು ಮೂರೂ ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ಸಕ್ಕರೆ ೨ ಶೇರು ಹಾಕಿ ನೀರುಹಾಕಿ ಒಲೆಯಮೇಲಿಟ್ಟು ಕಾಯಿಸಿ ಎಳೇಪಾಕ ಬಂದ ಕೂಡಲೇ ಮೇಲ್ಕಂಡ ತುಂಡುಗಳನ್ನೂ ಚೂರ್ಣವನ್ನೂ ಹಾಕಿ ಜೇನುತುಪ್ಪ ಅರ್ಧಶೇರು ಹಾಕಿ ಕಲಸಿಟ್ಟುಕೊಳ್ಳುವುದು. ಹೊತ್ತಿಗೆ ಅರ್ಧತೊಲೆ ಕೊಡಬೇಕು. ಇದರಿಂದ ಪಿತ್ಥ, ವಾಂತಿ, ಪಿತ್ಥಖಾಸ, ಮಂದಾಗ್ನಿ, ಆಮ್ಲಪಿತ್ಥ ಗುಣವಾಗುವುದು.

೨. ನೆಲ್ಲೀಕಾಯಿ ಮುರಬ್ಬ:—ಒಂದು ಶೇರು ಹಸೀ ನೆಲ್ಲೀಕಾಯಿಯನ್ನು ಈಚಲಮುಳ್ಳಿನಿಂದ ಚುಚ್ಚಿ ಹಸುವಿನ ಮಜ್ಜಿಗೆಯಲ್ಲಿ ೩ ದಿನ ನೆನೆಹಾಕುವುದು. (ಪ್ರತಿದಿನವೂ ಹೊಸ ಹೊಸ ಮಜ್ಜಿಗೆಯನ್ನು ಹಾಕಬೇಕು) ನಾಲ್ಕನೇ ದಿನ ೨ ತೊಲೆ ಪನ್ನೀರಿನಲ್ಲಿ ಕಾಲುತೊಲೆ ಕುಂಕುಮಕೇಸರಿಯನ್ನು ಅರೆದು ಒಂದು ಬಾಂಡ್ಲಿಯಲ್ಲಿ ಹಾಕಿ ಅರ್ಧಶೇರು ನೀರುಹಾಕಿ ಕಲ್ಲುಸಕ್ಕರೆ ೧ ಶೇರುಹಾಕಿ ಒಲೆಯಮೇಲಿಟ್ಟು ಕಾಯಿಸಿ ಎಳೇಪಾಕ ತೆಗೆದು ಅದರಲ್ಲಿ ಮೇಲ್ಕಂಡ ನೆಲ್ಲೀಕಾಯಿಗಳನ್ನು ಹಾಕಿ ಒಂದು ಕುದಿ ಬರುವವರೆಗೂ ಬೇಯಿಸಿ ಇಳಿಸಿಟ್ಟುಕೊಳ್ಳುವುದು. ಇದನ್ನು ಪ್ರತಿದಿನವೂ ಪ್ರಾತಃಕಾಲದಲ್ಲಿ ಒಂದೊಂದು ನೆಲ್ಲೀಕಾಯಿಯನ್ನು ಸೇವಿಸುತ್ತಾ ಬರುವುದರಿಂದ ವಾತ, ಪಿತ್ಥ, ತಲೆತಿರುಗುವಿಕೆ, ಬಾಯಿಯಲ್ಲಿ ನೀರುಪೂರುವುದು, ಉರಿಮೂತ್ರ, ಗ್ರಹಣಿ, ರಕ್ತಭೇದಿ, ಪಿತ್ಥದಿಂದುಂಟಾದ ಮೂರ್ಛೆ, ನೇತ್ರರೋಗ ಇವುಗಳನ್ನು ಪರಿಹರಿಸಿ ದೇಹಕ್ಕೆ ಕಾಂತಿಯನ್ನುಂಟುಮಾಡುವುದು.

---

## ನಲವತ್ತೊಂಭತ್ತನೆಯ ಅಧ್ಯಾಯ.

---

### ವಿರೇಚನೌಷಧಗಳು.

---

ವಿರೇಚನೌಷಧವನ್ನು ತೆಗೆದುಕೊಳ್ಳುವುದರಿಂದ ಇಂದ್ರಿಯಗಳಿಗೆ ಬಲವೂ, ಬುದ್ಧಿಗೆ ತಿಳಿವೂ, ಅಗ್ನಿಬಲವೂ, ಧಾತುಸ್ಥೈರ್ಯವೂ, ವಯೋದಾರ್ಢ್ಯವೂ ಸಹ ಉಂಟಾಗುವುದು.

ಜೀರ್ಣಜ್ವರದವರು, ವಿಷತಗುಲಿದವರು, ವಾತರಕ್ತ, ಭಗಂದರ, ಮೂಲ ವ್ಯಾಧಿ, ಪಾಂಡುರೋಗ, ಉದರಜಾಡ್ಯ, ಗ್ರಂಥಿಜಾಡ್ಯ, ಹೃದ್ರೋಗ, ಅರುಚಿ, ಯೋನಿರೋಗ, ಪ್ರಮೇಹ, ಗುಲ್ಮ, ಪ್ಲೀಹ, ವ್ರಣ, ವಿದ್ರಧಿ, ಛರ್ದಿ, ವಿಸ್ಫೋಟ, ವಿಷೂಚಿ, ಕುಷ್ಠ, ಕರ್ಣರೋಗ, ನಾಸಾರೋಗ, ಶಿರೋರೋಗ, ಮುಖರೋಗ, ಗುದರೋಗ, ಮೇಢ್ರರೋಗ, ಯಕೃದ್ರೋಗ, ಶೋಫೆ, ನೇತ್ರ ಜಾಡ್ಯ, ಕ್ರಿಮಿಜಾಡ್ಯ ಈ ರೋಗಗಳುಳ್ಳವರು, ಕ್ಷಾರಗಳಿಂದಲೂ ಬೆಂಕಿಯಿಂ ದಲೂ ಪೀಡಿಸಲ್ಪಟ್ಟವರು, ಶೂಲೆಯವರು, ಮೂತ್ರದ ತಡೆಯುಳ್ಳವರು ಇವ ರೆಲ್ಲರೂ ವಿರೇಚನಕ್ಕೆ ಅರ್ಹರು.

ವಿರೇಚನವನ್ನು ಮಾಡಿಸತಕ್ಕ ಸಂದರ್ಭಗಳು ಆವವೆಂದರೆ:—ಪಿತ್ತೋ ದ್ರೇಕ, ಆಮದೋಷದಿಂದ ಹುಟ್ಟಿದ ರೋಗಗಳು ಉದರಜಾಡ್ಯ, ಹೊಟ್ಟೆಯು ಬ್ಬರ ಇವುಗಳಲ್ಲೂ, ಮುಖ್ಯವಾಗಿ ಜಠರವು ಅಶುದ್ಧವಾಗಿರುವಾಗಲೂ ವಿರೇ ಚನವನ್ನು ಅಗತ್ಯವಾಗಿ ಮಾಡಿಸಬೇಕು.

## ವಿರೇಚನೌಷಧಗಳು.

೧. ವರ್ಷಾಕಾಲದಲ್ಲಿ:—ತಿಗಡೆ, ಕೊಡಸಿಗೆಬೀಜ, ಹಿಪ್ಪಲಿ, ಶುಂಠಿ ಇವು ಗಳ ಒಟ್ಟು ಚೂರ್ಣವನ್ನು ದ್ರಾಕ್ಷೆಯ ರಸದಲ್ಲಿ ಕದಡಿ ಜೇನುತುಪ್ಪವನ್ನು ಬೆರೆಸಿ ಕುಡಿಯುವುದು ತಕ್ಕ ವಿರೇಚನೌಷಧವು.

೨. ಶರತ್ಕಾಲಕ್ಕೆ:—ತಿಗಡೆ, ತುರುಚೆ, ಕೊನ್ನಾರಿಯಗಡ್ಡೆ, ಕಲ್ಲುಸಕ್ಕರೆ, ಶ್ರೀಗಂಧ, ಅತಿಮಧುರ ಇವನ್ನು ಒಟ್ಟಾಗಿ ಚೂರ್ಣಿಸಿ ದ್ರಾಕ್ಷೆಯ ಪಾನಕದಲ್ಲಿ ಕದಡಿ ಕುಡಿಯುವುದು, ತಕ್ಕ ತಂಪಾದ ವಿರೇಚನವು.

೩. ಹೇಮಂತ ಋತುವಿನಲ್ಲಿ:—ತಿಗಡೆ, ಚಿತ್ರಮೂಲ, ಅಗಳುಶುಂಠಿ, ಜೀ ರಿಗೆ, ಸರಳದೇವದಾರು, ಬಜೆ, ಹೇಮಕ್ಷೀರಿ (ಮುಳ್ಳುದತ್ತೂರಿ ಬೇರು) ಇವು ಗಳನ್ನು ಒಟ್ಟಾಗಿ ಚೂರ್ಣಿಸಿ, ಬಿಸಿನೀರಿನಲ್ಲಿ ಕದಡಿ ಕುಡಿಯುವುದು ತಕ್ಕ ವಿರೇಚ ನೌಷಧವು.

೪. ಶಿಶಿರಋತು ವಸಂತಋತುಗಳಲ್ಲಿ:— ಹಿಪ್ಪಲಿ, ಶುಂಠಿ, ಸೈಂಧವ ಲವಣ, ಸೊಗದೆಯಬೇರು, ತಿಗಡೆ ಇವುಗಳನ್ನು ಒಟ್ಟಾಗಿ ಚೂರ್ಣಿಸಿ ಜೇನು ತುಪ್ಪದಲ್ಲಿ ಕಲೆಸಿ ನೆಕ್ಕಿಕೊಳ್ಳುವುದು ತಕ್ಕ ವಿರೇಚನೌಷಧವು.

೫. ಗ್ರೀಷ್ಮ ಋತುವಿನಲ್ಲಿ:—ತಿಗಡೆಯನ್ನು ಪುಡಿಮಾಡಿ ಸಮಭಾಗ ಸಕ್ಕರೆ ಯನ್ನು ಬೆರೆಸಿ ತೆಗೆದುಕೊಳ್ಳುವುದು ಯೋಗ್ಯವಾದ ವಿರೇಚನೌಷಧವು.

೬. ವಿರೇಚನೌಷಧಗಳು:—ಹರಳೆಣ್ಣೆಯನ್ನು ದ್ವಿಗುಣವಾದ ತ್ರಿಫಲೆಯ ಕಷಾಯದೊಡನೆಯಾಗಲಿ, ಹಾಲಿನೊಡನೆಯಾಗಲಿ ಸೇರಿಸಿ ಕುಡಿದರೆ ಬೇಗನೆ ವಿರೇಚನವಾಗುವುದು.

೭. ಹಿಪ್ಪಲಿ, ಮೋಡಿ, ಅಳಲೇಕಾಯಿ ಇವುಗಳನ್ನು ಉತ್ತರೋತ್ತರ ಕ್ರಮವಿಡಿದು ದ್ವಿಗುಣವಾಗಿ ಹೆಚ್ಚಿಸಿಕೊಂಡು (ಅಂದರೆ ಹಿಪ್ಪಲಿ ೧ ಭಾಗ, ಮೋಡಿ ೨ ಭಾಗ, ಅಳಲೇಕಾಯಿ ೪ ಭಾಗ ಈರೀತಿಯಾಗಿ ಸೇರಿಸಿ) ಚೂರ್ಣಿಸಿ, ಆ ಚೂರ್ಣವನ್ನು ಮಿತವರಿತು ಬಿಸಿನೀರಿನಲ್ಲಿ ಕದಡಿ ಕುಡಿಯಲು ಆರೋಗ್ಯವುಳ್ಳವನಿಗೆ ಸುಖವಾಗಿ ವಿರೇಚನವಾಗುವುದು.

೮. ವಾತವಿಕಾರದಲ್ಲಿ ಹರಳೆಣ್ಣೆಯೂ, ಪಿತ್ಥವಿಕಾರದಲ್ಲಿ ದ್ರಾಕ್ಷೆಯ ಪಾನಕ ಮುಡಿವಾಳ ಆಕೆಳತುಪ್ಪ ಇವುಗಳೂ, ಕಫವಿಕಾರದಲ್ಲಿ ತ್ರಿಫಲೆಯ ಕಷಾಯಕ್ಕೆ ಸ್ವಲ್ಪ ಬೆಲ್ಲವನ್ನು ಹಾಕಿ ಕುಡಿಯುವುದು, ಮಲಬಂಧದಲ್ಲಿ ಹಾಲು ಅಳಲೆಯ ಕಾಯಿ ಇವುಗಳು ಉತ್ತಮವಾದ ವಿರೇಚನೌಷಧಗಳು.

೯. ಅಳಲೆಯಕಾಯಿ ಕಾಲುಭಾಗ, ತಿಗಡೆಯಬೇರು ೪ ಭಾಗ, ಸೈಂಧವ ಲವಣ ೨ ಭಾಗ ಇವುಗಳನ್ನು ಕುಟ್ಟಿ ಹಾಕಿ ಕಾಯಿಸಿದ ಕಷಾಯವು ರಾಜಯೋಗ್ಯವಾದ ವಿರೇಚನೌಷಧವು.

೧೦. ಅಳಲೇಕಾಯಿ, ಸೈಂಧವಲವಣ, ಹಿಪ್ಪಲಿ ಇವುಗಳನ್ನು ಸಮಭಾಗವಾಗಿ ಸೇರಿಸಿ ಚೂರ್ಣಮಾಡಿ ಬಿಸಿನೀರಿನಲ್ಲಿ ಕದಡಿ ಕುಡಿಯುವುದು. ಇದಕ್ಕೆ ನಾರಾಚಕವೆಂದು ಪ್ರಸಿದ್ಧಿ ಇದು ಹಿತವಾದ ವಿರೇಚನೌಷಧವು

೧೧. ಮೇಘನಾದ ರಸ:—ಶುದ್ಧಿಮಾಡಿದ ಇಂಗಲೀಕ, ಶುದ್ಧಿಮಾಡಿದ ಬೆಳಗಾರ, ಸೈಂಧವಲವಣ, ತ್ರಿಕಟುಕ, ತ್ರಿಫಲೆ, ದ್ರಾಕ್ಷೆ, ವಾಯುವಿಳಂಗ, ಹಿಂಗು, ಓಮ ಇವಿಷ್ಟನ್ನೂ ಸಮತೂಕವಾಗಿ ಹಾಕಿ, ಈ ಸಮುದಾಯದ ಅರ್ಧಾಂಶ ಶುದ್ಧಿಮಾಡಿದ ಜಾಪಾಳವನ್ನು ಸೇರಿಸಿ, ನಿಂಬೆಯಹುಳಿಯಿಂದ ಚೆನ್ನಾಗಿ ಅರೆದು, ಕಡಲೆಯಕಾಳಿನಗಾತ್ರಕ್ಕೆ ಒಂದೊಂದರಂತೆ ಮಾತ್ರೆಗಳನ್ನು ಮಾಡಿಟ್ಟುಕೊಳ್ಳುವುದು. ಇದನ್ನು ಬಿಸಿನೀರಿನ ಅನುಪಾನದಿಂದ ತೆಗೆದುಕೊಂಡರೆ ಕ್ರಿಮಿ ಆಮ ಸಹ ಹೋಗುವವರೆಗೂ ವಿರೇಚನವಾಗುವುದು. ಅದಕ್ಕಿಂತಲೂ ಹೆಚ್ಚಾಗಿ ವಿರೇಚನವಾದರೆ ಆ ಬಳಿಕ ಮೊಸರನ್ನವನ್ನು ಪಥ್ಯಕ್ಕೆ ಕೊಡಬೇಕು ಈ ಮೇಘನಾದರಸವು—ಉದರಜಾಡ್ಯ, ಪಾಂಡು, ಶೋಭೆ, ಶೋಪೋದರ, ಜಲೋದರ, ಸಕಲವಿಧವಾದ ವಿಷಮಜ್ವರಗಳು ಈ ರೋಗಗಳಲ್ಲೆಲ್ಲ ಬಹಳ ಪ್ರಶಸ್ತವಾದುದು.

೧೨. ಶುಂಠಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಮೋಡಿ ‖ ತೊಲೆ, ಅಳಲೇಕಾಯಿಸಿಪ್ಪೆ ೨ ತೊಲೆ, ನೆಲ್ಲಿಕಾಯಿ ೧ ತೊಲೆ, ಶುದ್ಧಿಮಾಡಿದ ವತ್ಸನಾಭಿ ಕಾಲುತೊಲೆ, ಶುದ್ಧಿಮಾಡಿದ ಎಣ್ಣೆಬೆಳಗಾರ ಅರಳುಮಾಡಿದ್ದು ‖ ತೊಲೆ, ತಾಳೀಸಪತ್ರೆ ‖ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಶುದ್ಧಿಮಾಡಿದ ಜಾಪಾಳ ೭||| ತೊಲೆ ಹಾಕಿ ನಿಂಬೇಹಣ್ಣಿನ ರಸದಲ್ಲಿ ಚನ್ನಾಗಿ ಅರೆದು ಗುರುಗಂಜಿ ಪ್ರಮಾಣ ಮಾತ್ರೆಮಾಡುವುದು. ದೊಡ್ಡವರಿಗೆ ೨-೩ ಮಾತ್ರೆ ಜೇನುತುಪ್ಪದಲ್ಲಿ ಕಲಸಿ ಕೊಡುವುದು. ಇದಕ್ಕೆ ಪಥ್ಯ.

ತೊಗರೀಬೇಳೆ ಸಾರು ಅನ್ನ. ಭೇದಿ ಜಾಸ್ತಿ ಆದರೆ ಮಜ್ಜಿಗೆ ಅನ್ನ, ಗಂಜಿ ಅನ್ನ ಕೊಡುವುದು. ಇದರಿಂದ ಕಫ, ಪಿತ್ಥ, ಶ್ಲೇಷ್ಮರೋಗಗಳು ಗುಣವಾಗುವುವು.

೧೩. ಸೈಂಧವಲವಣ ೨ ವರಹ ತೂಕ, ಶುದ್ಧಿಮಾಡಿದ ಜಾಪಾಳ ೨ ವರಹ ತೂಕ, ಚಿಟ್ಟೆಹರಳು ಪೊಪ್ಪು ೪ ವರಹ ತೂಕ, ಶುದ್ಧಿಮಾಡಿದ ಇಂಗಳೀಕ ೧ ವರಹ ತೂಕ, ಶುದ್ಧಿಮಾಡಿದ ಎಣ್ಣೆಬೆಳಗಾರ ಅರಳುಮಾಡಿದ್ದು ೧ ವರಹ ತೂಕ ಇವುಗಳನ್ನು ಖಲ್ವದಲ್ಲಿ ಹಾಕಿ ೨ ಜಾಮ ಮರ್ದನೆಮಾಡಿ ಇಟ್ಟುಕೊಳ್ಳುವುದು. ದೊಡ್ಡವರಿಗೆ ೧ ಗುರುಗಂಜಿ ಪ್ರಮಾಣ ಹಸೀಶುಂಠೀ ರಸದಲ್ಲಿ, ಬೆಲ್ಲದಲ್ಲಿ, ಮೆಣಸಿನ ಕಷಾಯದಲ್ಲಿ ಕೊಡುವುದು. ಕುಡಿಯುವದಕ್ಕೆ ಬಿಸಿನೀರು ಕೊಡುವುದು ಭೇದಿ ಜಾಸ್ತಿ ಆದರೆ ತಣ್ಣೀರಿನಲ್ಲಿ ಕೈಕಾಲು ತೊಳೆಯುವುದು. ಪಥ್ಯ. ತೊಗರೀಬೇಳೆ ಸಾರು ಅನ್ನ. ಭೇದಿ ಜಾಸ್ತಿ ಆಗಬೇಕಾದರೆ ಗಂಜಿ ಅನ್ನ ಬಿಸಿಬಿಸಿ ಊಟಮಾಡುವುದು. ಇದರಿಂದ ವಾಯು, ಪಿತ್ಥರೋಗಗಳು ಗುಣವಾಗುವುವು.

೧೪. ಶುದ್ಧಿಮಾಡಿದ ಲಾಲ್‌ಶಿಗಡು ೨ ತೊಲೆ, ಸುನ್ನಾಮುಖಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೋಡಿ ೧ ತೊಲೆ, ಶುಂಠಿ ೧ ತೊಲೆ, ಸೈಂಧವಲವಣ ೧ ತೊಲೆ, ಮೆಣಸು ೧ ತೊಲೆ, ತಾಳೀಸಪತ್ರೆ ೧ ತೊಲೆ, ಅಕ್ಕಲಕರೆ ॥ ತೊಲೆ, ಯಾಲಕ್ಕಿ ೧ ವರಹ ತೂಕ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಶುದ್ಧಿಮಾಡಿದ ಇಂಗಳೀಕ ॥ ತೊಲೆ ಇದನ್ನು ಒಳ್ಳೆ ತುಳಸೀಸೊಪ್ಪಿನ ರಸ, ನಾಯಿತುಳಸೀಸೊಪ್ಪಿನ ರಸ, ವಂದೆಲಗದಸೊಪ್ಪಿನ ರಸ, ಹೊನಮುಗಳಿ ಸೊಪ್ಪಿನ ರಸ, ಗರುಗದಸೊಪ್ಪಿನ ರಸ, ವೀಳೆಯದೆಲೆ ರಸ, ದೊಡ್ಡಪತ್ರೆ ರಸ ಇವುಗಳಲ್ಲಿ ಒಂದೊಂದು ದಿನ ಭಾವನೆಮಾಡಿ ಚನ್ನಾಗಿ ಅರೆದು ಅವರೇಕಾಳು ಗಾತ್ರ ಮಾತ್ರೆಮಾಡುವುದು. ದೊಡ್ಡವರಿಗೆ ೨ ಮಾತ್ರೆ ಜೇನುತುಪ್ಪದಲ್ಲಿ ಕಲಸಿ ಕೊಡುವುದು. ಭೇದಿ ಜಾಸ್ತಿ ಆದರೆ ಮಜ್ಜಿಗೆ ಅನ್ನ, ಗಂಜಿ ಅನ್ನ ಕೊಡುವುದು. ಪಥ್ಯ ತೊಗರೀಬೇಳೆ ಸಾರು ಅನ್ನ. ಇದರಿಂದ ವಾಯು, ಪಿತ್ಥ ವ್ಯಾಧಿಗಳು ಗುಣವಾಗುವುದು.

೧೫. ಶುದ್ಧಿಮಾಡಿದ ನಾಭಿ ೨ ತೊಲೆ, ಮೆಣಸು ೪ ತೊಲೆ, ಶುದ್ಧಿಮಾಡಿದ ಎಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ, ಶುದ್ಧಿಮಾಡಿದ ಇಂಗಳೀಕ ಕಾಲುತೊಲೆ, ಪಟ್ಲುಪ್ಪು ಕಾಲುತೊಲೆ, ಗೋರೋಜನ ಕಾಲುತೊಲೆ, ಕುಂಕುಮಕೇಸರಿ ಕಾಲುತೊಲೆ, ಶುದ್ಧಿಮಾಡಿದ ಜಾಪಾಳ ೮ ತೊಲೆ ಇವುಗಳನ್ನು ಖಲ್ವದಲ್ಲಿ ಹಾಕಿ ತಣ್ಣೀರಿನಿಂದ ಚನ್ನಾಗಿ ಅರೆದು ಗುರುಗಂಜಿಗಾತ್ರ ಮಾತ್ರೆಮಾಡುವುದು. ದೊಡ್ಡವರಿಗೆ ೧-೨ ಮಾತ್ರೆ ಜೇನುತುಪ್ಪದಲ್ಲಿ ಕಲಸಿಕೊಡುವುದು. ಭೇದಿ ಜಾಸ್ತಿ ಆದರೆ ಮಜ್ಜಿಗೆ ಅನ್ನ,

ಗಂಜಿ ಅನ್ನ ಕೊಡಬೇಕು. ಕುಡಿಯುವ್ರದಕ್ಕೆ ಬಿಸಿನೀರು ಉಪಯೋಗಿಸುವುದು. ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವಾಯು, ಪಿತ್ಥ ಗುಣವಾಗುವುದು.

೧೬. ಶುದ್ಧಿಮಾಡಿದ ಹವಳಸರಿ ಗಂಧಕ ೧ ತೊಲೆ,ಶುದ್ಧಿಮಾಡಿದ ಜಾಪಾಳ ೧ ತೊಲೆ, ಶುದ್ಧಿಮಾಡಿದ ಎಣ್ಣೆಬೆಳಗಾರ ಕುಪ್ಪೆಸೊಪ್ಪಿನ ರಸದಲ್ಲಿ ಚನ್ನಾಗಿ ಅರೆದು ಬಿಲ್ಲೆಮಾಡಿ ಕುಕ್ಕುಟಪುಟ ೨-೩ ಇಟ್ಟುಕೊಂಡದ್ದು ೧ ತೊಲೆ, ಇವು ಮೂರು ದಿನಸು ತ್ರಿಫಲೆ ಕಷಾಯದಲ್ಲಿ ಚನ್ನಾಗಿ ಮರ್ದಿಸಿ ಗುರುಗಂಜಿ ಪ್ರಮಾಣ ಮಾತ್ರೆ ಮಾಡುವುದು. ದೊಡ್ಡವರಿಗೆ ೧-೨ ಮಾತ್ರೆ ಹಸೀಶುಂಠಿ ರಸದಲ್ಲಿ, ಬೆಲ್ಲದ ಪಾನಕದಲ್ಲಿ ಕೊಡುವುದು. ಭೇದಿಜಾಸ್ತಿ ಆದರೆ ಮಜ್ಜಿಗೆ ಅನ್ನ, ಗಂಜಿ ಅನ್ನ ಕೊಡಬೇಕು. ಇದರಿಂದ ವಾಯು, ಪಿತ್ಥ ಗುಣವಾಗುವುದು.

೧೭. ಬೇವಿನಬೀಜದ ಪೊಪ್ಪು ೧ ತೊಲೆ, ಗಜ್ಜುಗದ ಪೊಪ್ಪು ೧ ತೊಲೆ, ಮುಸಾಂಬರ ೧ ತೊಲೆ, ಶುದ್ಧಿಮಾಡಿದ ಜಾಪಾಳ ೧ ತೊಲೆ, ಹೊಂಗೇಬೀಜ ೨ ಇದನ್ನು ತಣ್ಣೀರಿನಲ್ಲಿ ನೆನೆಹಾಕಿ ಸಿಪ್ಪೆತೆಗದು ಬಿಸಲಿನಲ್ಲಿ ಒಣಗಿಸಿ ಎಲ್ಲವನ್ನೂ ಚೆನ್ನಾಗಿ ಅರೆದು ಇಟ್ಟುಕೊಳ್ಳುವುದು. ದೊಡ್ಡವರಿಗೆ ಕಡಲೇ ಪ್ರಮಾಣ ಜೇನುತುಪ್ಪದಲ್ಲಿ, ಬಾಳೇಹಣ್ಣಿನಲ್ಲಿ ಕೊಡುವುದು. ಭೇದಿ ಜಾಸ್ತಿ ಆದರೆ ಮಜ್ಜಿಗೆ ಅನ್ನ, ಗಂಜಿ ಅನ್ನ ಕೊಡುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಅಂಡವಾಯು, ಮೇಹವಾಯು, ಮೇಹಭಳುಕು ಗುಣವಾಗುವುದು.

೧೮. ಹಾವುಮೆಕ್ಕೇಕಾಯಿ (ಬೀಜ ತೆಗೆದುಹಾಕಿದ ಒಳಗಿನ ತಿರಳು) ೧ ತೊಲೆ, ಶುದ್ಧಿಮಾಡಿದ ಲಾಲ್‌ತಿಗಡು ೧ ತೊಲೆ, ಶುದ್ಧಿಮಾಡಿದ ಮುಸಾಂಬರ ೧ ತೊಲೆ, ಸುನಾಮುಖಿ ೧ ತೊಲೆ, ಸಖಮುನಿಯಾ ೧ ತೊಲೆ, ಗುಲಾಬಿ ಹೂವು ೧ ತೊಲೆ, ಸೋಪುಬೀಜ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿ ಬಾದಾಮಿ ಎಣ್ಣೆ ೧ ತೊಲೆ ಹಾಕಿ ಚನ್ನಾಗಿ ಅರೆದು ಗುರುಗಂಜಿ ಪ್ರಮಾಣ ಮಾತ್ರೆಮಾಡುವುದು. ದೊಡ್ಡವರಿಗೆ ರಾತ್ರಿ ಊಟವಾದ ಅರ್ಧಘಂಟೆ ನಂತರ ೨-೩ ಮಾತ್ರೆಗಳು ಬಾಯಿಯಲ್ಲಿ ಹಾಕಿಕೊಂಡು ಸ್ವಲ್ಪ ಬಿಸಿನೀರು ಕುಡಿಯುವುದು. ಬೆಳಿಗ್ಗೆ ಭೇದಿ ಆಗುವುದು. ಇದಕ್ಕೆ ಪಥ್ಯ. ತೊಗರೀಬೇಳೆ ಸಾರು ಅನ್ನ. ಇದರಿಂದ ವಾಯು ಪಿತ್ಥ ಗುಣವಾಗುವುದು.

೧೯. ತುಖ್ಮೆಜಿರ್‌ಕಿ ಕೆಂಪಗೆ ಹುರಿದು ಜೇನುತುಪ್ಪದಲ್ಲಿ ಅರೆದು ೧-॥ ತೊಲೆ ಕೊಟ್ಟರೆ ಸುಖವಾಗಿ ಭೇದಿ ಆಗುವುದು. ಇದಕ್ಕೆ ಪಥ್ಯ. ತೊಗರೀಬೇಳೆ ಸಾರು ಅನ್ನ. ಭೇದಿ ಜಾಸ್ತಿ ಆದರೆ ಮಜ್ಜಿಗೆ ಅನ್ನ, ಗಂಜಿ ಅನ್ನ ಕೊಡಬೇಕು.

೨೦. ಮೇಘನಾದ ಮಾತ್ರೆ :—ಶುಂಠಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಓಮ ೧ ತೊಲೆ, ಖುರಾಸಾನಿವೋಮ ೧ ತೊಲೆ, ಬಜೆ ೧ ತೊಲೆ, ವಾಯುವಿಳಂಗ ೧ ತೊಲೆ, ಬಿಳೀಜೀರಿಗೆ ೧ ತೊಲೆ, ಚಂಗಲಕೋಷ್ಟ ೧ ತೊಲೆ, ಶುದ್ಧಿಮಾಡಿದ ಲಾಲ್‌ಚಿಗಡೆ ೪ ತೊಲೆ, ಯಾಲಕ್ಕಿ ೧ ತೊಲೆ, ಶುದ್ಧಿ ಮಾಡಿದ ಎಣ್ಣೆಬೆಳಗಾರ ಅರಳುಮಾಡಿದ್ದು ೨ ತೊಲೆ, ಸೈಂಧವಲವಣ ೪ ತೊಲೆ, ಲವಂಗ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಶುದ್ಧಿಮಾಡಿದ ಇಂಗಲೀಕ ೧ ತೊಲೆ, ಶುದ್ಧಿಮಾಡಿದ ಜಾಪಾಳ ೧ ಸೇರು ಇವೆರಡೂ ಚೆನ್ನಾಗಿ ಅರೆದು ಮೇಲ್ಕಂಡ ದಿನಸಿನ ಚೂರ್ಣಹಾಕಿ ಬಿಳೀಕೊಮ್ಮೇ ಸೊಪ್ಪಿನ ರಸದಲ್ಲಿ ಅರೆದು ಗುರುಗಂಜಿ ಪ್ರಮಾಣ ಮಾತ್ರೆಮಾಡುವುದು. ದೊಡ್ಡವರಿಗೆ ೨ ಮಾತ್ರೆ ಜೇನುತುಪ್ಪದಲ್ಲಿ ಕೊಡುವುದು. ಭೇದಿ ಜಾಸ್ತಿ ಆದರೆ ಮಜ್ಜಿಗೆ ಅನ್ನ ಅಥವಾ ಗಂಜಿ ಅನ್ನ ಕೊಡುವುದು. ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವಾಯು ಪಿತ್ಥ ಗುಣವಾಗುವುದು.

೨೧ ಲವಂಗಾದಿ ಮಾತ್ರೆ :—ಶುದ್ಧಿಮಾಡಿದ ಇಂಗಲೀಕ ॥ ತೊಲೆ, ಶುದ್ಧಿಮಾಡಿದ ರಸಕರ್ಪೂರ ಕಾಲುತೊಲೆ, ಶುದ್ಧಿಮಾಡಿದ ಎಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ, ಹಿಪ್ಪಲಿ ೧ ತೊಲೆ, ಲವಂಗ ೧ ತೊಲೆ, ಚಂಗಲ ಕೋಷ್ಟ ॥ ತೊಲೆ, ಗಂಟುಭಾರಂಗಿ ೪ ತೊಲೆ, ಮೆಣಸು ೧ ತೊಲೆ, ಶುಂಠಿ ೨ ತೊಲೆ, ದಾಲಚಿನ್ನಿ ೧ ತೊಲೆ, ಶುದ್ಧಿಮಾಡಿದ ಜಾಪಾಳ ೧೨ ತೊಲೆ ಇವು ಗಳಲ್ಲಿ ಅರೆಯುವ ದಿನಸುಗಳನ್ನು ಅರೆದು ಕುಟ್ಟುವ ದಿನಸುಗಳನ್ನು ಕುಟ್ಟಿ ಎಲ್ಲ ವನ್ನೂ ಸೇರಿಸಿ ಹಸೀಶುಂಠೀ ರಸದಲ್ಲಿ ೧ ದಿನ, ವಿಷ್ಣುಕ್ರಾಂತಿ ರಸದಲ್ಲಿ ೧ ದಿನ, ಬಿಳೀಕೊಮ್ಮೇಸೊಪ್ಪಿನ ರಸದಲ್ಲಿ ೧ ದಿನ ಅರೆದು ಗುರುಗಂಜಿ ಪ್ರಮಾಣ ಮಾತ್ರೆಮಾಡುವುದು. ದೊಡ್ಡವರಿಗೆ ೨ ಮಾತ್ರೆ ಜೇನುತುಪ್ಪದಲ್ಲಿ ಕೊಡು ವುದು. ಭೇದಿ ಜಾಸ್ತಿ ಆದರೆ ಹಸುವಿನಹಾಲು ಅನ್ನ ಅಥವಾ ಗಂಜಿ ಅನ್ನ ಕೊಡುವುದು. ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಕಲ ಜ್ವರ, ವಾಯು ಪಿತ್ಥ ಗುಣವಾಗುವುದು

೨೨. ನೀಲಕಂಠ ಭೇದಿಮಾತ್ರೆ :—ಶುಂಠಿ ೨ ತೊಲೆ, ಹಿಪ್ಪಲಿ ೨ ತೊಲೆ, ಮೆಣಸು ೧ ತೊಲೆ, ವಾಯುವಿಳಂಗ ೧ ತೊಲೆ, ದುಂಪರಾಸ್ಮೆ ೪ ತೊಲೆ, ಸಣ್ಣ ರಾಸ್ಮೆ ೪ ತೊಲೆ, ಬಿಳೀಜೀರಿಗೆ ॥ ತೊಲೆ, ಯಾಲಕ್ಕಿ ಕಾಲುತೊಲೆ, ಚಿಟ್ಟೆ ಹರಳು ಪೊಪ್ಪು ೧ ತೊಲೆ, ಶುದ್ಧಿಮಾಡಿದ ಜಾಪಾಳ ೧೨ ತೊಲೆ ಇವುಗಳನ್ನು ತುಳಸೀಸೊಪ್ಪಿನ ರಸದಲ್ಲಿ ಅರೆದು ಗುರುಗಂಜಿ ಪ್ರಮಾಣ ಮಾತ್ರೆಮಾಡು ವುದು. ದೊಡ್ಡವರಿಗೆ ೨ ಮಾತ್ರೆ ಜೇನುತುಪ್ಪದಲ್ಲಿ ಕೊಡುವುದು. ಭೇದಿ ಜಾಸ್ತಿ ಆದರೆ ಮಜ್ಜಿಗೆ ಅನ್ನ ಅಥವಾ ಗಂಜಿ ಅನ್ನ ಕೊಡಬೇಕು. ಇದಕ್ಕೆ

ಪಥ್ಯ. ತೊಗರೀಬೇಳೆ ಸಾರು ಅನ್ನ. ಇದರಿಂದ ವಾಯು ಪಿತ್ಥ ಗುಣ ವಾಗುವುದು.

೨೩. ಚಂದ್ರಪ್ರಭಾಕರ ಭೇದಿಮಾತ್ರೆ:—ಶುಂಠಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಲವಂಗ ೧ ತೊಲೆ, ದಂಪರಾಸ್ಕೆ ೧ ತೊಲೆ, ಲೋಧ್ರದ ಚಕ್ಕೆ ೧ ತೊಲೆ, ಮೋಡಿ ॥ ತೊಲೆ, ಜಾಪತ್ರೆ ॥ ತೊಲೆ, ಅಜಾ ಮೋದ ॥ ತೊಲೆ, ಶುದ್ಧಿಮಾಡಿದ ಪರಂಗಿಚಕ್ಕೆ ೨ ತೊಲೆ, ದೇವದಾರುಚಕ್ಕೆ ೧ ತೊಲೆ, ಶ್ರೀಗಂಧದಚಕ್ಕೆ ॥ ತೊಲೆ, ಕುಂಕುಮಕೇಸರಿ ಕಾಲುತೊಲೆ, ಗೋರೋಜನ ೨ ಗುರುಗಂಜಿ ತೂಕ, ಕಸ್ತೂರಿ ೨ ಗುರುಗಂಜಿ ತೂಕ, ಶುದ್ಧಿ ಮಾಡಿದ ಜಾಪಾಳ ೧೨ ತೊಲೆ ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಅರೆಯುವ ದಿನಸುಗಳನ್ನು ಖಲ್ವದಲ್ಲಿ ಹಾಕಿ ಅರೆದು ಎಲ್ಲವನ್ನು ಶೇರಿಸಿ ನಿಂಬೇಹಣ್ಣಿನ ರಸದಲ್ಲಿ ಅರೆದು ಗುರುಗಂಜಿ ಪ್ರಮಾಣ ಮಾತ್ರೆಮಾಡುವುದು. ದೊಡ್ಡವರಿಗೆ ೨ ಮಾತ್ರೆ ಜೇನುತುಪ್ಪದಲ್ಲಿ ಕೊಡು ವುದು. ಭೇದಿ ಜಾಸ್ತಿಆದರೆ ಮಜ್ಜಿಗೆ ಅನ್ನ ಅಥವಾ ಗಂಜಿ ಅನ್ನ ಕೊಡಬೇಕು ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಜ್ವರ, ವಾಯು, ಪಿತ್ಥ ಗುಣವಾಗುವುದು

೨೪. ಲವಂಗ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಶುಂಠಿ ೧ ತೊಲೆ, ಚಂಗಲಕೋಷ್ಟ ೧ ತೊಲೆ, ಬಿಳೀಜೀರಿಗೆ ೧ ತೊಲೆ, ವಾಯುವಿಳಂಗ ೧ ತೊಲೆ, ದುಂಪರಾಸ್ಮೆ ೧ ತೊಲೆ, ಕಟುಕರೋಹಿಣಿ ॥ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ಶುದ್ಧಿಮಾಡಿದ ರಸಕರ್ಪೂರ ॥ ತೊಲೆ, ಶುದ್ಧಿಮಾಡಿದ ಜಾಪಾಳ ೧೨ ತೊಲೆ ಇವುಗಳನ್ನು ಹಸೀಶುಂಠೀ ರಸದಲ್ಲಿ ಅರೆದು ಗುರುಗಂಜಿ ಪ್ರಮಾಣ ಮಾತ್ರೆ ಮಾಡುವುದು. ದೊಡ್ಡವರಿಗೆ ೨ ೩ ಮಾತ್ರೆ ಜೇನುತುಪ್ಪದಲ್ಲಿ ಕಲಸಿ ಕೊಡುವುದು. ಭೇದಿ ಜಾಸ್ತಿಆದರೆ ಮಜ್ಜಿಗೆ ಅನ್ನ ಅಥವಾ ಗಂಜಿ ಅನ್ನ ಕೊಡಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಾರು ಅನ್ನ. ಇದರಿಂದ ವಾಯು, ಪಿತ್ಥ ಗುಣವಾಗುವುದು.

೨೫. ವಿರೇಚನ ಕುಠಾರ:—ಅಳಲೇಕಾಯಿ ಚೂರ್ಣ ಮಾಡಿದ್ದು ೧ ತೊಲೆ ತೊಟ್ಲಸೊಪ್ಪಿನ ರಸದಲ್ಲಿ ಕಲಸಿ ಒಣಗಿಸಿಕೊಳ್ಳಬೇಕು. ಆಡು ಮುಟ್ಟದ ಬೇರು ೧ ತೊಲೆ, ಶುದ್ಧಿಮಾಡಿದ ಪರಂಗಿಚಕ್ಕೆ ೧ ತೊಲೆ, ಶುದ್ಧಿ ಮಾಡಿದ ಅಶ್ವಗಂಧಿ ೧ ತೊಲೆ, ಶುದ್ಧಿಮಾಡಿದ ಲಾಲ್‌ಶಿಗಡು ೧ ತೊಲೆ, ಸುನಾ ಮುಖಿ ೧ ತೊಲೆ, ಮರಾಟಿಮೊಗ್ಗು ॥ ತೊಲೆ, ಶುದ್ಧಿಮಾಡಿದ ಜಾಪಾಳ ೬॥ ತೊಲೆ, ೨೬ ತೊಲೆ ಜಳೀಬೆಲ್ಲ ಒಂದು ಬಾಂಡ್ಲಿಯಲ್ಲಿ ಹಾಕಿ ಸ್ವಲ್ಪ ನೀರು ಹಾಕಿ ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ದಿನಸುಗಳ ಚೂರ್ಣ ವನ್ನು ಹಾಕಿ ಪಕ್ವವಾಗಿ ಲೇಹ್ಯಮಾಡಿಟ್ಟುಕೊಳ್ಳುವುದು. ದೊಡ್ಡವರಿಗೆ ಹಸೀ

ಆವರೇಕಾಳು ಪ್ರಮಾಣ ಲೇಹ್ಯಕೊಡಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಾರು ಅನ್ನ. ಇದರಿಂದ ವಾಯು, ಪಿತ್ಥ ಗುಣವಾಗುವುದು.

೨೬. ಭೇದಿಗೆ ತಿರಬೂತ್ತು ಲೇಹ್ಯ:—ಶುದ್ಧಿಮಾಡಿದ ಲಾಲ್‌ತಿಗಡು ೧೦೦ ಮಿಸ್ಕಾ, ರಾಯಿಪುಡಿಸಕ್ಕರೆ ೧೦೦ ಮಿಸ್ಕಾ, ಷಕ್‌ಮೂನಿಯ ಮಷವ್ವಿ ೧೦ ದಿರಂ, ಯಾಲಕ್ಕಿ ೫ ದಿರಂ, ಬಡಿ ಇಲಾಚಿ ೫ ದಿರಂ, ಶುಂಠಿ ೫ ದಿರಂ, ದಾಲಚಿನ್ನಿ ೫ ದಿರಂ, ಖುಫ್ರಾ ೫ ದಿರಂ, ನಾರೆಮುತುಲಸೀಷಕ್‌ಕೆ ಬೀಂಜ್ ೫ ದಿರಂ, ಲವಂಗ ೫ ದಿರಂ, ಮಸ್ತಕಿ ೫ ದಿರಂ, ಕಾಲೀಮಿರ್ಚಿ ೫ ದಿರಂ, ಅಸಲ್ ಸಾಫ್ ಖರೀರೆ ಪಾಕ್‌ಕರಾಹುವಾ ಷಹತ್, ಮೇಲ್ಕಂಡ ರಾಯಿಪುಡಿಸಕ್ಕರೆ ಬಾಂಡ್ಲಿಯಲ್ಲಿ ಹಾಕಿ ನೀರು ಹಾಕಿ ಕಾಯಿಸಿ ತಂತುಪಾಕ ಬಂದಕೂಡಲೇ ಬಾಕಿ ದಿನಸುಗಳ ಚೂರ್ಣವನ್ನು ಹಾಕಿ ಶುದ್ಧಿಮಾಡಿದ ಜೇನುತುಪ್ಪ ಹಾಕಿ ಕಲಸಿ ಪಕ್ವವಾಗಿ ಲೇಹ್ಯಮಾಡಿಟ್ಟುಕೊಳ್ಳುವುದು. ದೊಡ್ಡವರಿಗೆ ೧-॥ ತೊಲೆ ಲೇಹ್ಯ ಕೊಡಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಾರು ಅನ್ನ. ಇದರಿಂದ ವಾಯು, ಪಿತ್ಥ ಗುಣವಾಗುವುದು.

೨೭. ಅಳಲೇಕಾಯಿಸಿಪ್ಪೆ ೧ ತೊಲೆ, ಮೆಣಸು ೧ ತೊಲೆ, ದೇಶಾವರ ಶುಂಠಿ ೧ ತೊಲೆ, ಲವಂಗಪತ್ರೆ ೧ ತೊಲೆ, ಹಿಪ್ಪಲಿ ೧ ತೊಲೆ, ವಾಯುವಿಳಂಗ ೧ ತೊಲೆ, ಶುದ್ಧಿಮಾಡಿದ ಲಾಲ್‌ತಿಗಡು ೬ ತೊಲೆ, ಶುದ್ಧಿಮಾಡಿದ ಜಾಪಾಳ ೩ ತೊಲೆ, ಕಲ್ಲುಸಕ್ಕರೆ ೬ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿಟ್ಟುಕೊಳ್ಳುವುದು. ದೊಡ್ಡವರಿಗೆ ೧ ಹಣತೂಕ ಜೇನುತುಪ್ಪದಲ್ಲಿ ಕಲಸಿ ಕೊಡುವುದು. ತಣ್ಣೀರು ಯಷ್ಟಾವರ್ತಿ ಕುಡಿದರೆ ಅಷ್ಟಾವರ್ತಿ ಭೇದಿಗಳು ಆಗುತ್ತೆ. ಬಿಸಿನೀರು ಕುಡಿದರೆ ಭೇದಿ ನಿಂತುಹೋಗುತ್ತೆ. ಇದಕ್ಕೆ ಪಥ್ಯ. ತೊಗರೀಬೇಳೆ ಸಾರು ಅನ್ನ. ಇದರಿಂದ ವಾಯು, ಪಿತ್ಥ ಗುಣವಾಗುವುದು.

೨೮. ಯೋಗಿನೀ ರಸ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ಎಣ್ಣೆಬೆಳಗಾರ ಅರಳು ಮಾಡಿದ್ದು ೧ ತೊಲೆ, ಶುದ್ಧಿಮಾಡಿದ ತಾಳಕ ೧ ತೊಲೆ, ಶುಂಠಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಶುದ್ಧಿಮಾಡಿದ ಜಾಪಾಳ ೧೦ ತೊಲೆ, ಇವುಗಳನ್ನು ಗರುಗದಸೊಪ್ಪಿನ ರಸದಲ್ಲಿ ೧ ದಿನ, ವಿಷ್ಣುಕ್ರಾಂತಿ ರಸದಲ್ಲಿ ೧ ದಿನ ಅರೆದು ಹೆಸರುಕಾಳು ಪ್ರಮಾಣ ಮಾತ್ರೆ ಮಾಡುವುದು. ದೊಡ್ಡವರಿಗೆ ೨ ಮಾತ್ರೆ ಜೇನುತುಪ್ಪದಲ್ಲಿ ಕಲಸಿ ಕೊಡುವುದು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಮಸ್ತ ವಾಯುಗಳು ಮತ್ತು ಛಳಿ ಜ್ವರಗಳು ಗುಣವಾಗುವುದು.

೨೯. ಇಚ್ಛಾಭೇದಿ ರಸ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿ ಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ಎಣ್ಣೆಬೆಳಗಾರ ಅರಳು ಮಾಡಿದ್ದು ೧ ತೊಲೆ, ಶುಂಠಿ ೧ ತೊಲೆ, ಮೆಣಸು ೧ ತೊಲೆ, ಶುದ್ಧಿಮಾಡಿದ ಜಾಪಾಳ ೧೦ ತೊಲೆ, ಇವುಗಳನ್ನು ಚೆನ್ನಾಗಿ ಅರೆದು ಗುರುಗಂಜಿ ಪ್ರಮಾಣ ಮಾತ್ರೆಮಾಡಿ ೧ ಮಾತ್ರೆ ತಣ್ಣೀರಿನಲ್ಲಿ ತೆಗೆದುಕೊಳ್ಳಲು ಸುಖವಾಗಿ ಭೇದಿ ಆಗುವುದು. ಎಷ್ಟುಸಲ ನೀರು ಕುಡಿದರೆ ಅಷ್ಟುಸಲ ಭೇದಿ ಆಗುವುದು. ಭೇದಿ ಜಾಸ್ತಿಯಾದರೆ ಮಜ್ಜಿಗೆ ಅನ್ನ ಅಥವಾ ಗಂಜಿ ಅನ್ನ ಕೊಡುವುದು.

೩೦. ಭೇದಿನೀ ರಸಾಯನ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿ ಮಾಡಿದ ಹವಳಸರಿಗಂಧಕ ೧ ತೊಲೆ, ಶುದ್ಧಿಮಾಡಿದ ಎಣ್ಣೆಬೆಳಗಾರ ಅರಳು ಮಾಡಿದ್ದು ೧ ತೊಲೆ, ಸೈಂಧವಲವಣ ೧ ತೊಲೆ, ಶುಂಠಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿ ಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಶುದ್ಧಿಮಾಡಿದ ಜಾಪಾಳ ೧೦ ತೊಲೆ ಇವುಗಳನ್ನು ಗರುಗದಸೊಪ್ಪಿನ ರಸದಲ್ಲಿ ಅರೆದು ಗುರುಗಂಜಿ ಪ್ರಮಾಣ ಮಾತ್ರೆ ಮಾಡುವುದು. ದೊಡ್ಡವರಿಗೆ ೨ ಮಾತ್ರೆ ಜೇನುತುಪ್ಪದಲ್ಲಿ ಕೊಡುವುದು. ಭೇದಿ ಜಾಸ್ತಿಯಾದರೆ ಮಜ್ಜಿಗೆ ಅನ್ನ ಅಥವಾ ಗಂಜಿ ಅನ್ನ ಕೊಡುವುದು. ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವಾಯು, ಪಿತ್ಥ ಗುಣವಾಗುವುದು.

೩೧. ಪಂಚಸಮ ಚೂರ್ಣ:—ಶುಂಠಿ, ಅಳಲೇಕಾಯಿಸಿಪ್ಪೆ, ಹಿಪ್ಪಲಿ, ಶುದ್ಧಿಮಾಡಿದ ಲಾಲ್‌ತಿಗಡೆ, ಸೌವರ್ಚಲವಣ ಇವು ಸಮಭಾಗ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹೊತ್ತಿಗೆ ಕಾಲುತೊಲೆಯಷ್ಟು ಚೂರ್ಣ ಬಿಸಿನೀರಿನಲ್ಲಿ ಸೇವಿಸುತ್ತಾ ಬಂದರೆ ಶೂಲೆ, ಹೊಟ್ಟೆ ಉಬ್ಬರ, ಅಗ್ನಿಮಾಂದ್ಯ, ಆಮವಾತ ಇವುಗಳು ಗುಣವಾಗುವುದು. ಇದಕ್ಕೆ ಪಥ್ಯ, ತೊಗರೀಬೇಳೆ ಸಿಹಿಸಾರು ಅನ್ನ.

೩೨. ಮಲಬದ್ಧಕ್ಕೆ ನಾರಾಚ ಚೂರ್ಣ:—ಹಿಪ್ಪಲಿ ೨ ತೊಲೆ, ಶುದ್ಧಿ ಮಾಡಿದ ಲಾಲ್‌ತಿಗಡೆ ೪ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ೪ ತೊಲೆ ಸಕ್ಕರೆ ಬೆರಸಿ ಹೊತ್ತಿಗೆ ೧-೨ ತೊಲೆ ಬಿಸಿನೀರಿನಲ್ಲಿ ತೆಗೆದುಕೊಂಡರೆ ಹೊಟ್ಟೆವುಬ್ಬರ, ಮಲಬದ್ಧ, ಹೊಟ್ಟೇನೋವು, ಕಫರೋಗ, ಪಿತ್ಥಶೂಲೆ ಇವು ಗಳು ಗುಣವಾಗುವುದು. ಇದಕ್ಕೆ ಪಥ್ಯ. ತೊಗರೀಬೇಳೆ ಸಾರು ಅನ್ನ.

೩೩. ಅತಿಮಧುರ ೧ ತೊಲೆ, ಅಕ್ಕಲಕರೆ ೨ ತೊಲೆ, ದುಂಪರಾಷ್ಟ್ರ ೨ ತೊಲೆ, ಹಿಪ್ಪಲಿ ೧ ತೊಲೆ, ಮೋಡಿ ೧ ತೊಲೆ, ವಾಯುವಿಳಂಗ ೧ ತೊಲೆ, ಕಸ್ತೂರಿ ಅರಿಸಿನ ೧ ತೊಲೆ, ಬಾಲಮೆಣಸು ೧ ತೊಲೆ, ಖುರಾಸಾನಿ ಓಮ ೧ ತೊಲೆ, ತವಕ್ಷೀರ ೧ ತೊಲೆ, ಗಂಟುಭಾರಂಗಿ ೩ ತೊಲೆ, ಶುದ್ಧಿಮಾಡಿದ ಪರಂಗಿಚಕ್ಕೆ ೪ ತೊಲೆ, ಅಳಲೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೧ ತೊಲೆ, ದಾಲ್‌ಚಿನ್ನಿ ೧ ತೊಲೆ, ಓಮ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ

[66]

ಶೋಧಿಸಿ, ಶುದ್ಧಿಮಾಡಿದ ಜಾಪಾಳ ೨೪ ತೊಲೆ ಚೆನ್ನಾಗಿ ಅರೆದು ಬೂರಾಸಕ್ಕರೆ ೨ ಶೇರು ಹಾಕಿ ಎಲ್ಲವನ್ನೂ ಕಲಸಿ ಇಟ್ಟುಕೊಳ್ಳುವುದು. ಹೊತ್ತಿಗೆ ಕಾಲು ತೊಲೆಯಿಂದ ಅರ್ಧತೊಲೆವರಿವಿಗೆ ಬಾಯಿಯಲ್ಲಿ ಹಾಕಿಕೊಂಡು ತಣ್ಣೀರು ಕುಡಿಯುವುದು. ಭೇದಿ ಜಾಸ್ತಿಯಾದರೆ ಬಿಸಿನೀರು ಕುಡಿಯುವುದು. ಇದಕ್ಕೆ ಪಥ್ಯ. ತೊಗರೀಬೇಳೆ ಸಾರು ಅನ್ನ. ಇದರಿಂದ ವಾಯು, ಪಿತ್ಥ, ಶ್ಲೇಷ್ಮ ಗುಣವಾಗುವುದು.

೩೪. ವಿರೇಚನ ಕುರಾರ:—ಶುದ್ಧಿಮಾಡಿದ ಪಾದರಸ ೧ ತೊಲೆ, ಶುದ್ಧಿಮಾಡಿದ ಹವಳಸರಿಗಂಧಕ ೨ ತೊಲೆ, ಶುದ್ಧಿಮಾಡಿದ ಎಣ್ಣೆಬೆಳಗಾರ ಅರಳು ಮಾಡಿದ್ದು ೮ ತೊಲೆ, ಮೆಣಸು ೪ ತೊಲೆ, ಶುಂಠಿ ೧೬ ತೊಲೆ, ಅಳಲೇಕಾಯಿ ಸಿಪ್ಪೆ ೩೨ ತೊಲೆ, ಶುದ್ಧಿಮಾಡಿದ ಜಾಪಾಳ ೬೦ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಗಿರಿಕರ್ಣಿಕೆಬೇರಿನ ಕಷಾಯದಲ್ಲಿ ಅರೆದು ಕಡಲೇ ಪ್ರಮಾಣ ಮಾತ್ರೆ ಮಾಡುವುದು. ೧ ಮಾತ್ರೆ ತೆಗೆದುಕೊಂಡು ಬಿಸಿನೀರು ಕುಡಿಯುವುದು. ಬಿಸಿನೀರು ಕುಡಿಯುತ್ತಾ ಇದ್ದರೆ ಭೇದಿಗಳಾಗುವುದು. ಭೇದಿ ನಿಲ್ಲಬೇಕಾದರೆ ತಣ್ಣೀರು ಕುಡಿಯುವುದು. ಅಥವಾ ಗಂಜಿ ಅನ್ನ ತಿನ್ನುವುದು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಜ್ವರ, ಗುಲ್ಮ, ವಾತ, ಶೂಲೆ ಇವುಗಳು ಗುಣವಾಗುವುದು.

೩೫. ಇತ್ರಿಫಲ್ (ತ್ರಿಫಲಾದಿ ಲೇಹ್ಯ) ೧ನೇ ವಿಧ:—ಹಲೀಲೆ ಕಾಬುಲಿ ೩ ತೊಲೆ, ಹಲೀಲೆ ಶಿಯಾ ೩ ತೊಲೆ, ಆಮಿಲಾ ೩ ತೊಲೆ, ಬಲೀಲಾ ೩ ತೊಲೆ, ಗುಲೇಸುರುಖ್ ೩ ತೊಲೆ, ಅಫ್ತಿಮೂರ್ ೧ ತೊಲೆ, ಅನಿಸೂರ್ ೧ ತೊಲೆ, ಬಾದ್ ರಂಜ್‌ಬೋಯ್ ೧ ತೊಲೆ, ಸೋಪುಬೀಜ ೬ ತೊಲೆ, ಮಾರಿಲಕಡಿ ೬ ತೊಲೆ, ಸುನಾಮುಖಿ ೬ ತೊಲೆ, ಸುರಂಜಾರ್ ೪ ತೊಲೆ, ಅಸಾರೂಕ್ ೪ ತೊಲೆ, ಉಸ್ತೆ ಖುದೂಸ್ ೨ ತೊಲೆ ಈ ದಿನಸುಗಳು ಚೆನ್ನಾಗಿ ಆರಿಸಿ ಕುಟ್ಟಿ ಚೂರ್ಣಮಾಡಿ ಶೋಧಿಸಿ ಇದರ ಸಮತೂಕ ಬೂರಾಸಕ್ಕರೆ ಹಾಕಿ ಕಲಸಿ ಇಟ್ಟುಕೊಳ್ಳುವುದು. ರಾತ್ರಿ ಊಟವಾದನಂತರ ಅರ್ಧತೊಲೆ ಚೂರ್ಣ ಹಸುವಿನತುಪ್ಪದಲ್ಲಿ ಕಲಸಿ ತೆಗೆದುಕೊಂಡರೆ ಬೆಳಿಗ್ಗೆ ಸುಖವಾಗಿ ಭೇದಿ ಆಗುವುದು. ಇದು ಕಣ್ಣುಗಳಿಗೆ ಮೇದಸ್ಸಿಗೆ ಬಹಳ ಗುಣಕಾರಿಯಾದದ್ದು.

೩೬. ಇತ್ರಿಫಲ್ (ತ್ರಿಫಲಾದಿ ಲೇಹ್ಯ) ೨ನೇ ವಿಧ:—ಅಳಲೇಕಾಯಿಸಿಪ್ಪೆ ೩ ತೊಲೆ, ಕಾಬೂಲಿಹಲ್ಡ ೩ ತೊಲೆ, ಬಾಲ್‌ಹಲ್ಡ ೩ ತೊಲೆ, ತಾರೇಕಾಯಿ ಸಿಪ್ಪೆ ೩ ತೊಲೆ, ನೆಲ್ಲೀಕಾಯಿ ೩ ತೊಲೆ, ಶುದ್ಧಿಮಾಡಿದ ಲಾಲ್‌ತಗಡು ೩ ತೊಲೆ, ಬಿಸ್‌ಫಾಯಿಸ್ ೩ ತೊಲೆ, ಉಸ್ತೆಖುದ್ದೂಸ್ ೩ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಬಾದಾಮಿ ಎಣ್ಣೆ ೯ ತೊಲೆ ಅಥವಾ ಹಸುವಿನ ತುಪ್ಪ ೯ ತೊಲೆ, ಕಲಸಿ ಜೇನುತುಪ್ಪ ೮೧ ತೊಲೆ ಇವುಗಳನ್ನೆಲ್ಲಾ ಚೆನ್ನಾಗಿ

ಕಲಸಿ ೩೦ ದಿನಗಳನಂತರ ಉಪಯೋಗಿಸತಕ್ಕದ್ದು. ರಾತ್ರಿ ಊಟವಾದ ಒಂದು ಘಂಟೆಯ ನಂತರ ಅವರವರ ಶರೀರ ಪ್ರಕೃತಿಯನ್ನು ಅನುಸರಿಸಿ ಅರ್ಧತೊಲೆ ಮೊದಲುಗೊಂಡು ೧ ತೊಲೆಯವರಿಗೆ ಸೇವಿಸಿದರೆ ಬೆಳಿಗ್ಗೆ ಸುಖವಾಗಿ ಭೇದಿ ಆಗುವುದು. ಇದು ಕಣ್ಣುಗಳಿಗೆ ಮೇದಸ್ಸಿಗೆ ಬಹಳ ಗುಣವನ್ನುಂಟುಮಾಡು ವುದು.

೩೭. ಯಾಲಕ್ಕಿ ಕಾಲುತೊಲೆ, ಬಿಳೇಜೀರಿಗೆ ೧ ತೊಲೆ, ಮೆಣಸು ೧ ತೊಲೆ, ತಾಳೀಸಪತ್ರೆ ೧ ತೊಲೆ, ಹಿಪ್ಪಲಿ ೧ ತೊಲೆ, ಲವಂಗ ೧ ತೊಲೆ, ದಾಲ್‌ಚಿನ್ನಿ ೧ ತೊಲೆ, ಶುಂಠಿ ೪ ತೊಲೆ, ಅಳಲೇಕಾಯಿಸಿಪ್ಪೆ ೨ ತೊಲೆ, ಅತಿ ಮಧುರ ೧ ತೊಲೆ, ಸುನಾಮುಖಿ ೪ ತೊಲೆ, ಶುದ್ಧಿಮಾಡಿದ ಲಾಲ್‌ಶಿಗಡು ೪ ತೊಲೆ, ಶುದ್ಧಿಮಾಡಿದ ಎಣ್ಣೆಬೆಳಗಾರ ಅರಳುಮಾಡಿದ್ದು ೧ ತೊಲೆ, ಚಿಟ್ಟೆ ರಳು ಬೇರು ೪ ತೊಲೆ, ಹೊಂಗೇಚಕ್ಕೆ ೨ ತೊಲೆ, ವಾಯುವಿಳಂಗ ೧ ತೊಲೆ, ಸೈಂಧವಲವಣ ೪ ತೊಲೆ, ಗಂಟುಭಾರಂಗಿ ೨ ತೊಲೆ, ಚಂಗಲಕೋಷ್ಠ ೧ ತೊಲೆ, ಮೋಡಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಕೊಳ್ಳುವುದು. ಶುದ್ಧಿಮಾಡಿದ ಬಿಳೇಧೂಪ ಚೂರ್ಣಮಾಡಿದ್ದು ೪ ತೊಲೆ, ಶುದ್ಧಿಮಾಡಿದ ಜಾಪಾಳ ೨೦ ತೊಲೆ ಖಲ್ವದಲ್ಲಿ ಹಾಕಿ ಅರೆದುಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ಹಳೇಬೆಲ್ಲ ೨॥ ಶೇರು ಹಾಕಿ ನೀರುಹಾಕಿ ಕಾಯಿಸಿ ತಂತು ಪಾಕ ಬಂದಕೂಡಲೇ ಮೇಲ್ಕಂಡ ದಿನಸುಗಳನ್ನೆಲ್ಲಾ ಹಾಕಿ ಜೇನುತುಪ್ಪ ೧। ಶೇರು ಕಲಸಿ ಪಕ್ವವಾಗಿ ಲೇಹ್ಯಮಾಡಿ ಇಟ್ಟುಕೊಳ್ಳುವುದು. ದೊಡ್ಡವರಿಗೆ ಕಡಲೇಗಾತ್ರ ಕೊಡುವುದು. ಭೇದಿ ಜಾಸ್ತಿಯಾದರೆ ಮಜ್ಜಿಗೆ ಅನ್ನ ಅಥವಾ ಗಂಜಿ ಅನ್ನ ಕೊಡಬೇಕು. ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದ ರಿಂದ ಸಮಸ್ತ ವಾಯುರೋಗಗಳು ಗುಣವಾಗುವುವು.

೩೮. ಭೇದಿ ಎಣ್ಣೆ:—ಚಿಟ್ಟೆರಳೆಣ್ಣೆ ೫ ಶೇರು, ಗೌರೀಬೀಜ (ಪಕ್ವವಾಗಿ ಹುರಿದು ಕುಟ್ಟಿ ಚೂರ್ಣಮಾಡಿ ಮರದಲ್ಲಿ ಹಾಕಿ ಕೇರಿ ಹೊಟ್ಟು ತೆಗೆದುಹಾಕಿ ಬೀಜ ತೆಗೆದುಕೊಂಡದ್ದು) ೩ ತೊಲೆ, ಸೈಂಧವಲವಣ ೧ ತೊಲೆ, ಶೀಮೇ ಭೇದಿವುಪ್ಪು ಕಾಲುತೊಲೆ, ಶುದ್ಧಿಮಾಡಿದ ಜಾಪಾಳ ೩ ತೊಲೆ, ಹಾವುಮೆಕ್ಕೇ ಕಾಯಿ ಒಣಗಿ ಬೀಜ ತೆಗೆದುಹಾಕಿದ್ದು ೧ ಕೆಂಪಗೆ ಹುರಿದು ಹಾಕುವುದು. ಶುದ್ಧಿಮಾಡಿದ ಮುತ್ತುಗದಬೀಜ ೪ ಒಣಗಿಸಿ ಚೂರ್ಣಮಾಡುವುದು. ಇವುಗಳ ನ್ನೆಲ್ಲಾ ಒಂದು ಪಾತ್ರೆಯಲ್ಲಿ ಕಾಯಿಸಿ ಶೋಧಿಸಿಕೊಳ್ಳುವುದು. ದೊಡ್ಡವರಿಗೆ ॥ ತೊಲೆ ಬಿಸಿನೀರಿನಲ್ಲಿ ಕೊಡುವುದು. ಭೇದಿ ಜಾಸ್ತಿಯಾದರೆ ಮಜ್ಜಿಗೆ ಅನ್ನ ಅಥವಾ ಗಂಜಿ ಅನ್ನ ಕೊಡಬೇಕು ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಿತ್ಥ, ವಾಯು ಗುಣವಾಗಿ ಕ್ರಿಮಿಗಳು ನಾಶನವಾಗುವುದು.

೩೯. ಭೇದಿ ಎಣ್ಣೆ ೨ನೇ ವಿಧ:—ಬಲಿತ ತೆಂಗಿನಕಾಯಿ ತುರುಬಿ ಬಿಸಿನೀರು ಹಾಕಿ ಶೋಧಿಸಿ ಹಾಲು ತೆಗದುಕೊಂಡದ್ದು ೪ ಶೇರು, ಬಿಳೇ ಈರುಳ್ಳಿ ರಸ ೧ ಶೇರು, ಹಸೀಶುಂಠಿ ರಸ ೧ ಶೇರು, ಹಾವುಮೆಕ್ಕೇಕಾಯಿನ ರಸ ೧ ಶೇರು, ಶುದ್ಧಿಮಾಡಿದ ಜಾಪಾಳ ॥ ಶೇರು ಇವುಗಳನ್ನು ಪಾತ್ರೆಯಲ್ಲಿ ಪಕ್ವವಾಗಿ ಕಾಯಿಸಿ ಎಣ್ಣೆ ಶೋಧಿಸಿಟ್ಟುಕೊಳ್ಳುವುದು. ದೊಡ್ಡವರಿಗೆ ಬಿಸಿನೀರಿನಲ್ಲಿ ೫-೬ ತೊಟ್ಟು ಹಾಕಿ ಕೊಡುವುದು. ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಭೇದಿ ಜಾಸ್ತಿ ಆದರೆ ಮಜ್ಜಿಗೆ ಅನ್ನ ಅಥವಾ ಗಂಜಿ ಅನ್ನ ಕೊಡಬೇಕು. ಇದರಿಂದ ವಾಯು, ಪಿತ್ಥ ಗುಣವಾಗುವುದು.

೪೦. ಭೇದಿ ಎಣ್ಣೆ ೩ನೇ ವಿಧ:—ಬಲಿತ ತೆಂಗಿನಕಾಯಿ ೨ ತಂದು ತುರದು ಬಿಸಿನೀರು ಹಾಕಿ ಹಾಲುಹಿಂಡಿ ಶೋಧಿಸಿಕೊಳ್ಳುವುದು. ಶುದ್ಧಿಮಾಡಿದ ಜಾಪಾಳ ೮ ತೊಲೆ, ಯಾಲಕ್ಕಿ ೧ ತೊಲೆ, ಹೊಂಗೇಮರದ ಚಕ್ಕೆ ೧ ತೊಲೆ, ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಅರಿಯುವ ದಿನಸುಗಳನ್ನು ಅರೆದು ಒಂದು ಪಾತ್ರೆಯಲ್ಲಿ ಹಾಕಿ ಒಲೆಯಮೇಲಿಟ್ಟು ಪಕ್ವವಾಗಿ ಕಾಯಿಸಿ ಎಣ್ಣೆ ಶೋಧಿಸಿಕೊಳ್ಳುವುದು. ದೊಡ್ಡವರಿಗೆ ೬-೭ ತೊಟ್ಟು ಬತ್ತಾಸಿನಲ್ಲಾಗಲಿ ಸಕ್ಕರೆಯಲ್ಲಾಗಲಿ ಕಾಫಿಯಲ್ಲಾಗಲಿ ಕೊಡುವುದು. ಭೇದಿ ಜಾಸ್ತಿ ಆದರೆ ಬಜೆ ಸುಟ್ಟುಕೊಡುವುದು ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವಾಯು ಗುಣವಾಗುವುದು.

೪೧. ಭೇದಿ ಎಣ್ಣೆ ೪ನೇ ವಿಧ:—ಚಿಟ್ಟೆರಳೆಣ್ಣೆ ೨ ಶೇರು, ಎಳನೀರು ೨ ಶೇರು, ಶುಂಠಿ ೧ ತೊಲೆ, ಕರೇ ಅಳಲೇಕಾಯಿ ೧ ತೊಲೆ, ಸುನಾಮುಖಿ ೩ ತೊಲೆ, ಬಿಳೇಜೀರಿಗೆ ೧ ತೊಲೆ, ಓಮ ೧ ತೊಲೆ, ಉತ್ತರೇಣಿಬೇರು ೧ ತೊಲೆ, ಸೋಪುಬೀಜ ೧ ತೊಲೆ, ಬಿಳೇಕೊಮ್ಮೇಬೇರು ೧ ತೊಲೆ, ಲವಂಗ ॥ ತೊಲೆ ಈ ದಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡು ಎಲ್ಲವನ್ನು ಪಾತ್ರೆಯಲ್ಲಿ ಪಕ್ವವಾಗಿ ಎಣ್ಣೆ ಕಾಯಿಸಿ ಶೋಧಿಸಿಕೊಳ್ಳುವುದು. ದೊಡ್ಡವರಿಗೆ ಬಿಸಿನೀರಿನಲ್ಲಾಗಲಿ ಅಥವಾ ಕಾಫಿಯಲ್ಲಾಗಲಿ ೩ ಕಾಸಿನ ಅಗಲ ಎಣ್ಣೆ ಕೊಡಬೇಕು. ಮಕ್ಕಳಿಗೆ ಮೊಲೆಹಾಲಿನಲ್ಲಿ ೩-೪ ತೊಟ್ಟು ಹಾಕಿ ಕೊಡುವುದು. ಇದಕ್ಕೆ ಪಥ್ಯ. ತೊಗರೀ ಬೇಳೆ ಸಿಹಿಸಾರು ಅನ್ನ. ದೊಡ್ಡವರಿಗೆ ಭೇದಿ ಹೆಚ್ಚಾದರೆ ಮಜ್ಜಿಗೆ ಅನ್ನ ಅಥವಾ ಗಂಜಿ ಅನ್ನ ಕೊಡುವುದು.

೪೨. ಯುನಾನಿ ಭೇದಿಕೋಳಂಬು:—ಹಲ್ಯಾ ೧ ಹೂ೯ ತೂಕ, ರಾಯ್ ೧ ಹೂ೯ ತೂಕ, ನಮ್ಮಕೆ ಬಂಗೆಡಿ ೧ ಹೂ೯ ತೂಕ, ಶುದ್ಧಿಮಾಡಿದ ಮನ್‌ಸಿಲ್, ಫರಾರ್, ನಮ್ಮಕೆ ಅಫ್‌ಕರ್, ಪಿಪ್ಪಲಿ, ಜೀರಾ, ಶುದ್ಧಿಮಾಡಿದ ಸರ್ಕಿಹಡತಾಲ್, ಕುಟ್ಕಿ, ಶುದ್ಧಿಮಾಡಿದ ಹೀರಾಹಿಂಗ್, ಸುಂಬುಲ್‌ಖಾರ್‌ಸಿಯ ಇವು ದಿನಸು

೧ಕ್ಕೆ ೧ ಹಣ ತೂಕ, ಶುದ್ಧಿಮಾಡಿದ ಜಾಪಾಳ ೧೨ ಹಣ ತೂಕ, ಈ ಜಾಪಾಳ ವನ್ನು ಅರೆಯುವ ವಿಧ :—ಜುಟ್ಟುವೇಸೊಪ್ಪಿನ ರಸದಲ್ಲಿ ಅರೆದು ತೆಂಗಿನಚಿಪ್ಪು ಸುಟ್ಟಿದ್ದು ೫ ಹಣ ತೂಕ ಸೇರಿಸಿಕೊಂಡು ೧ ದಿವಸ ಅರೆಯುವುದು. ಅನಂತರ ಮೇಲ್ಕಂಡ ದಿನಸು ಎಲ್ಲವನ್ನೂ ಸೇರಿಸಿ ಜುಟ್ಟುವೇಸೊಪ್ಪಿನ ರಸದಿಂದ ೧ ದಿವಸ ಅರೆಯುವುದು. ಅನಂತರ ಕೆಂಪು ಕಲ್ಲುಸಕ್ಕರೆ ೧ ಹಣ ತೂಕ ಸೇರಿಸಿ ಕೊಂಡು ಆದಮೇಲೆ ಕಡೆಯಲ್ಲಿ ತಿರಿಗಿ ೧ ಹಣ ತೂಕ ಕೆಂಪು ಕಲ್ಲುಸಕ್ಕರೆ ಸೇರಿಸಿ ಅರೆದು ತೊಗರೀಕಾಳಷ್ಟು ಮಾತ್ರೆಮಾಡಿ ಅನುಪಾನ ವಿಶೇಷಗಳಿಂದ ಕೊಟ್ಟಲ್ಲಿ ಸುಖವಾಗಿ ಭೇದಿಯಾಗಿ ಸಕಲ ರೋಗಗಳೂ ಗುಣವಾಗುವುವು.

೪೩. ಅಭಯಾದಿ ಮೋದಕ :—ಅಳಲೇಕಾಯಿಸಿಪ್ಪೆ ೧ ತೊಲೆ, ಮೆಣಸು ೧ ತೊಲೆ, ಶುಂಠಿ ೧ ತೊಲೆ, ವಾಯುವಿಳಂಗ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೋಡಿ ೧ ತೊಲೆ, ದಾಲ್‌ಚಿನ್ನಿ ೧ ತೊಲೆ, ಲವಂಗ ಪತ್ರೆ ೧ ತೊಲೆ, ತುಂಗೇಗಡ್ಡೆ ೧ ತೊಲೆ, ಶುದ್ಧಿಮಾಡಿದ ಲಾಲ್‌ತಿಗಡು ೮ ತೊಲೆ, ಶುದ್ಧಿಮಾಡಿದ ಜಾಪಾಳ ೧೦ ತೊಲೆ, ಸಕ್ಕರೆ ೧೨ ತೊಲೆ, ಇವು ಗಳನ್ನು ಕುಟ್ಟಿ ಚೂರ್ಣವಾಡಿ ಶೋಧಿಸಿ ಜೇನುತುಪ್ಪ ಹಾಕಿ ಅರೆದಿಟ್ಟು ಕೊಳ್ಳುವುದು. ಕಡಲೇ ಪ್ರಮಾಣ ಮಾತ್ರೆಮಾಡಿ ಅವರವರ ಶರೀರ ಪ್ರಕೃತಿ ಯನ್ನು ಅನುಸರಿಸಿ ೧-೨ ಮಾತ್ರೆಗಳನ್ನು ಸೇವಿಸಿ ತಣ್ಣೀರು ಕುಡಿಯುವುದು. ಇದರಿಂದ ಸುಖವಾಗಿ ಭೇದಿ ಆಗುವುದು. ಇದರಿಂದ ವಿಷಮಜ್ವರ, ಅಗ್ನಿ ಮಾಂದ್ಯ, ಪಾಂಡು, ಕೆಮ್ಮು, ಗುಲ್ಮ, ಹೊಟ್ಟೇನೋವು, ದಾಹ, ಪ್ಲೀಹ, ವಾಯು, ಹೊಟ್ಟೆ ಉಬ್ಬರ ಗುಣವಾಗುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಾರು ಅನ್ನ.

## ಜಾಪಾಳ ಸೇರಿದ ಔಷಧಗಳಿಂದ ಭೇದಿ ಜಾಸ್ತಿಯಾದರೆ ಭೇದಿ ನಿಲ್ಲಿಸುವ ವಿಧಾನ :—

೧. ಗಜ್ಜೀಕಾಯಿಪೊಪ್ಪು ತಣ್ಣೀರಿನಿಂದ ಅರೆದು ಅವರೇಕಾಳಿನಷ್ಟು ಹಸುವಿನ ಮಜ್ಜಿಗೆಯಲ್ಲಾಗಲಿ ತಣ್ಣೀರಿನಲ್ಲಾಗಲಿ ಕಲಸಿ ಕೊಟ್ಟರೆ ಭೇದಿ ನಿಲ್ಲುವುದು.

೨. ಎಮ್ಮೆಸಗಣಿ ನೀರುಹಾಕಿ ಕಲಸಿ ಬಟ್ಟೆಯಲ್ಲಿ ಶೋಧಿಸಿಕೊಟ್ಟರೆ ಭೇದಿ ನಿಲ್ಲುವುದು.

೩. ಬಜೆ ಸುಟ್ಟು ಕರುಕನ್ನು ಮೊಲೆಹಾಲಿನಲ್ಲಿ ಕೊಡುವುದು.

೪. ಒಂದು ಹಿಡಿ ಎಳೇ ನುಗ್ಗೇಕಡ್ಡಿಗಳನ್ನು ಕಷಾಯಮಾಡಿ ಕೊಟ್ಟರೆ ಭೇದಿ ನಿಲ್ಲುವುದು.

೫. ನಿಂಬೇಹಣ್ಣಿನ ರಸ ಅಥವಾ ಹಸುವಿನಹಾಲು ಕುಡಿದರೆ ಭೇದಿ ನಿಲ್ಲು ವುದು.

೬. ಹುಳಿ ಮಜ್ಜಿಗೆ ಕುಡಿದರೆ ಭೇದಿ ನಿಲ್ಲುವುದು.

೭. ಖರ್ಜೂರ ಬೆಂಬೂದಿಯಲ್ಲಿಟ್ಟು ಬೆಂದಮೇಲೆ ಬೀಜತೆಗೆದು ಅರೆದು ಹಸುವಿನಬೆಣ್ಣೆಯಲ್ಲಿ ಕಲಸಿಕೊಟ್ಟರೆ ಭೇದಿ ನಿಲ್ಲುತ್ತೆ.

೮. ಬಿಳೆನಾಮುವನ್ನು ತಣ್ಣೀರಿನಲ್ಲಿ ಕದರಿ ಕುಡಿಸುವುದು. ಹೀಗೆಯೆ ಕೆಂಪುಕಾವಿಯನ್ನು ಹಾಲಿನಲ್ಲಿ ಅಥವಾ ತಣ್ಣೀರಿನಲ್ಲಿ ಕದರಿ ಕುಡಿಸುವುದು.

---

## ಐವತ್ತನೆಯ ಅಧ್ಯಾಯ.

## ಶಿರೋರೋಗ—ಔಷಧಗಳು.

### ಶಿರೋರೋಗದ ಲಕ್ಷಣ.

ಶಿರಸ್ಸಿನಲ್ಲಿ ಹುಟ್ಟುವ ಶಿರೋರೋಗಗಳು ೧. ಅರ್ಧಾವಭೇದಕ, ೨. ವಾತಜ ಶಿರಸ್ತಾಪ, ೩. ಪಿತ್ಥಜಶಿರಸ್ತಾಪ, ೪. ಶ್ಲೇಷ್ಮಜಶಿರಸ್ತಾಪ, ೫. ರಕ್ತಜ ಶಿರಸ್ತಾಪ, ೬ ಸನ್ನಿಪಾತಜಶಿರಸ್ತಾಪ, ೭. ಸೂರ್ಯಾವರ್ತ, ೮. ಶಿರಃಕಂಪ, ೯. ಕ್ರಿಮಿಜಶಿರಸ್ತಾಪ, ೧೦. ಶಂಖಶಿರಸ್ತಾಪ ಎಂದು ಹತ್ತುವಿಧಗಳಾಗಿರುವುವು. ರೂಕ್ಷಪದಾರ್ಥಗಳನ್ನು ತಿನ್ನುವುದು, ಜೀರ್ಣವಾಗದೆ ಇರುವಾಗ ಊಟಮಾಡು ವುದು, ಹೆಚ್ಚಾಗಿ ಊಟಮಾಡುವುದು, ಪೂರ್ವದಿಕ್ಕಿನಿಂದ ಬೀಸುವ ಗಾಳಿಯನ್ನು ಸೇವಿಸುವುದು, ಮಂಜಿನಲ್ಲಿತುವುದು ಅಥವ ಹಿಮದಲ್ಲಿ ನೆನೆಯುವುದು, ಹೆಚ್ಚಾಗಿ ಸಂಭೋಗಮಾಡುವುದು, ಮಲಮೂತ್ರಗಳ ವೇಗವನ್ನು ತಡೆಯುವುದು, ಈ ಕಾರಣಗಳಿಂದ ಕೇವಲ ವಾಯುವಾಗಲಿ, ಕಫ ಸಹಿತವಾದ ವಾಯುವಾಗಲಿ, ಪ್ರಕೋಪವಾಗಿ ತಲೆಯ ಅರ್ಧ ಭಾಗವನ್ನು ಆವರಿಸಿಕೊಂಡು ಮನ್ಯಗಳು, ಸಿರೆ ಗಳು, ಕಣ್ಣುಗುಡ್ಡೆ, ಕಣ್ಣುಕುಣಿಕೆ, ಕಿವಿ, ಕಣ್ಣುಗಳು, ಹಣೆ ಇವುಗಳಲ್ಲಿ ಅರ್ಧಭಾಗ ಶಸ್ತ್ರಗಳಿಂದ ಕಡಿದಹಾಗೆ ತೀವ್ರವಾದ ಬಾಧೆಯನ್ನು ಹುಟ್ಟಿಸುವುದು ಅರ್ಧಾವಭೇದಕವೆಂಬುದು. ಇದನ್ನು ಉಪೇಕ್ಷೆಮಾಡಿ ಚಿಕಿತ್ಸೆಮಾಡದೆ ಹಾಗೆಯೇ ಬಿಟ್ಟರೆ ಇದರಿಂದ ಕಣ್ಣಾಗಲಿ ಕಿವಿಯಾಗಲಿ ನಾಶವಾಗಿ ಹೋಗುವುದು. ವಾತ ಪ್ರಕೋಪದಿಂದ ತಲೆನೋವು ಹುಟ್ಟಿ ರಾತ್ರಿ ಕಾಲದಲ್ಲಿ ಹೆಚ್ಚುತ್ತ ಬಟ್ಟೆಯನ್ನು ಕಟ್ಟಿದರೂ ಸ್ನೇಹಸ್ವೇದಾದಿಗಳನ್ನು ಮಾಡಿದರೂ ಶಾಂತವಾಗದೆ ಇರುವುದು ವಾತಜಶಿರಸ್ತಾಪವು. ಪಿತ್ಥಪ್ರಕೋಪದಿಂದ ತಲೆನೋವು ಹುಟ್ಟಿ ತಲೆಯಲ್ಲಿ ಕೆಂಡವನ್ನು ಸುರಿದಂತೆ ಇರುವುದು, ಕಣ್ಣುಕಿವಿಗಳಲ್ಲಿ ಹೊಗೆ ತುಂಬಿದಹಾಗಾಗು ವುದು, ರಾತ್ರಿಕಾಲದಲ್ಲಿ ನೂರು ಔಷಧಗಳಿಂದ ಚಿಕಿತ್ಸೆಮಾಡಿದರೂ ಶಮನವಾಗದೆ ಇರುವುದು ಈ ಲಕ್ಷಣದಿಂದ ಕೂಡಿದುದೇ ಪಿತ್ಥಜಶಿರಸ್ತಾಪವೆನ್ನಲ್ಪಡುವುದು.

ಕಫ ಪ್ರಕೋಪದಿಂದ ತಲೆಶೂಲೆಯುಂಟಾಗಿ ತಲೆಯು ಕಫಪೂರ್ಣವಾಗಿ ಭಾರವಾಗಿರುವುದು, ತಣ್ಣಗಿರುವುದು, ಮೂಗಿನ ಹೊಳ್ಳೆಗಳಲ್ಲಿ ಬಾವು ಕಾಣಿಸಿಕೊಳ್ಳುವುದು ಈ ಲಕ್ಷಣಗಳುಳ್ಳದ್ದು ಶ್ಲೇಷ್ಮಜ ಶಿರಸ್ತಾಪವೆನ್ನಲ್ಪಡುವುದು. ರಕ್ತ ಪ್ರಕೋಪದಿಂದ ತಲೆನೋವು ಹುಟ್ಟಿ ಪಿತ್ಥಲಕ್ಷಣಗಳನ್ನು ತೋರ್ಪಡಿಸುತ್ತ ಮುಟ್ಟುವುದಕ್ಕೆ ಶಕ್ಯವಾಗಿರುವ ಲಕ್ಷಣದಿಂದ ಕೂಡಿದುದು ರಕ್ತಜಶಿರಸ್ತಾಪವೆನ್ನಲ್ಪಡುವುದು. ತ್ರಿದೋಷ ಪ್ರಕೋಪದಿಂದ ಹುಟ್ಟಿದ ತಲೆನೋವು ವಾತಾದಿ ಲಕ್ಷಣಗಳನ್ನೆಲ್ಲ ತೋರ್ಪಡಿಸುತ್ತಿರುವುದು ಸನ್ನಿಪಾತಜ ಶಿರಸ್ತಾಪವೆನ್ನಲ್ಪಡುವುದು. ಸೂರ್ಯೋದಯಕಾಲಕ್ಕೆ ಸರಿಯಾಗಿ ಕಣ್ಣುಗುಡ್ಡೆಗಳಲ್ಲಿ ನೋವು ಹುಟ್ಟಿ ಸೂರ್ಯನು ಏರುತ್ತ ಬಂದಹಾಗೆಲ್ಲ ವೃದ್ಧಿಯಾಗಿ ಮಧ್ಯಾಹ್ನಕಾಲದಲ್ಲಿ ತೀವ್ರವಾಗುತ್ತ ಸೂರ್ಯನು ಇಳಿಯುತ್ತ ಬಂದಹಾಗೆಲ್ಲ ಕಡಿಮೆಯಾಗಿ ಸಾಯಂಕಾಲದ ಹೊತ್ತಿಗೆ ಸಂಪೂರ್ಣವಾಗಿ ನಾಶವಾಗುವುದು ಇದಕ್ಕೆ ಸೂರ್ಯಾವರ್ತವೆಂದು ಹೆಸರು. ಇದು ತ್ರಿದೋಷ ಪ್ರಕೋಪದಿಂದ ಹುಟ್ಟುವ ಕಾರಣ ಕಷ್ಟಸಾಧ್ಯವಾದುದು. ತಲೆಯಲ್ಲಿ ಕಫವೂ ರಕ್ತವೂ ಕ್ಷಯಿಸಿಹೋಗಿ ದಾರುಣವಾಗಿ ತಲೆ ಭಾರವಾಗಿರುವುದು. ಶೀನು ಬರುವ ಲಕ್ಷಣಗಿಂದ ಕೂಡಿದುದೇ ಶಿರಃಕಂಪವೆನ್ನಲ್ಪಡುವುದು. ತಲೆಯಲ್ಲಿ ಸೂಜಿಯಿಂದ ಚುಚ್ಚಿದಂತೆ ನೋವು, ಕ್ರಿಮಿಗಳಿಂದ ತಿನ್ನಲ್ಪಟ್ಟಹಾಗಿರುವುದು, ಶಿರಸ್ಸಿನ ಒಳಗಡೆ ಓಡಾಡಿದಂತೆ ಇರುವುದು, ಮೂಗಿನಿಂದ ಕೀವು ಸಹಿತವಾಗಿ ನೀರು ಸೋರುವುದು. ಈ ಲಕ್ಷಣಗಳುಳ್ಳದ್ದು ಕ್ರಿಮಿಜ ಶಿರಸ್ತಾಪವೆನ್ನಲ್ಪಡುವುದು. ರಕ್ತಪಿತ್ಥವಾತಗಳು ಪ್ರಕೋಪವಾಗಿ ಹಿಂದಲೆಯಲ್ಲಿ ನೋವು ಹುಟ್ಟಿ ಉರಿಯಿಂದ ಕೂಡಿ ರಕ್ತವರ್ಣವಾಗಿ ಊದಿಕೊಳ್ಳುವುದು. ಇವುಗಳಿಂದ ಕೂಡಿದ ರೋಗವು ವಿಷದಂತೆ ತಲೆಯನ್ನು ವ್ಯಾಪಿಸಿಕೊಂಡು ಕಂಠದ್ವಾರವನ್ನು ಅಡ್ಡಗಟ್ಟಿ ಮೂರು ದಿನಗಳಲ್ಲಿ ಪ್ರಾಣವನ್ನ ಆಹುತಿಯಾಗಿ ತೆಗೆದುಕೊಳ್ಳುವುದು ಇದಕ್ಕೆ ಶಂಖಕವೆಂದು ಹೆಸರು.

## ಶಿರೋರೋಗ ಚಿಕಿತ್ಸೆಗಳು.

೧. ತಲೇಶೂಲೆಗೆ ತೈಲ:—ಗರುಗದಸೊಪ್ಪಿನ ರಸ, ಆಡುಸೋಗೆಸೊಪ್ಪಿನ ರಸ, ಸೊಗದೇಬೇರಿನ ರಸ, ಬಿಳೇಕೊಮ್ಮೇಸೊಪ್ಪಿನ ರಸ, ಕುಪ್ಪೇಸೊಪ್ಪಿನ ರಸ, ಸುರಸುರಿಕೆಸೊಪ್ಪಿನ ರಸ, ಒಂದೆಲಗದಸೊಪ್ಪಿನ ರಸ, ತೊಟ್ಲೆಸೊಪ್ಪಿನ ರಸ, ಹಸೀಶುಂಠಿ ರಸ ಇವು ದಿನಸಿಗೆ ೧ ಪಾವು ರಸ ತೆಗೆದು ಇಟ್ಟುಕೊಳ್ಳುವದು. ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಅರಿಸಿನ, ಅಮೃತಬಳ್ಳಿ, ತಾಳೀಸಪತ್ರೆ, ಲವಂಗ, ಹಿಪ್ಪಲಿ, ಕುಂಕುಮಕೇಸರಿ, ಚಂಗಲಕೋಷ್ಠ, ತುಪ್ಪದ ದೇವದಾರು, ಮೋಡಿ, ಕರೇಮೆಣಸು, ಬಿಳೇಮೆಣಸು, ಓಮ, ಅತಿಮಧುರ, ಶ್ರೀಗಂಧದಚಕ್ಕೆ, ದೊಡ್ಡ ಯಾಲಕ್ಕಿ, ಅಗರು, ಜಟಾಮಾಂಸಿ, ಪೀತರೋಹಿಣಿ, ತುಂಗೇಗಡ್ಡೆ, ಗೌಲ, ಸಾಂಬ್ರಾಣಿ, ಕರ್ಕಾಟಕಶೃಂಗಿ ಇವು ದಿನಸಿಗೆ ೧ ತೊಲೆ

ಇವುಗಳನ್ನು ಕುಟ್ಟಿ ಚೂರ್ಣಮಾಡಿ ೪ ಶೇರು ನೀರುಹಾಕಿ ಕಾಯಿಸಿ ೧ ಶೇರು ಕಷಾಯ ಇಳಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಒಳ್ಳೆಣ್ಣೆ ೧೦ ಶೇರು ಇವುಗಳೆಲ್ಲವನ್ನು ಒಂದು ಪಾತ್ರೆಯಲ್ಲಿ ಹಾಕಿ ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವುದು. ಈ ತೈಲವನ್ನು ತಲೆಗೆ ಹಾಕಿಕೊಂಡು ಅಭ್ಯಂಗನಸ್ನಾನ ಮಾಡುತ್ತಾ ಬಂದರೆ ಅರೆತಲೆನೋವು, ಪೂರಾತಲೇನೋವು, ಉಷ್ಣದಿಂದುಂಟಾದ ಎಲ್ಲಾ ವಿಧ ರೋಗಗಳು, ಮೂಗಿನಲ್ಲಿ ಇರತಕ್ಕ ಎಲ್ಲಾ ವಿಧ ರೋಗಗಳು, ಕಣ್ಣುಕೆಂಪಗಿರುವಿಕೆ, ಕಣ್ಣಿನಲ್ಲಿ ನೀರು ಸುರಿಯುವದು ಗುಣವಾಗುವುದು.

೨. ಕುಮಾರಿ ತೈಲ:—ಲೋಳೆಸರದ ರಸ, ಹೊನಗೊನೆಸೊಪ್ಪಿನ ರಸ, ಗರುಗದಸೊಪ್ಪಿನ ರಸ, ತಾವರೆಯಲೆ ರಸ, ಸುರಸುರಿಕೆಸೊಪ್ಪಿನ ರಸ, ಒಂದೆಲಗದ ಸೊಪ್ಪಿನ ರಸ, ಆಡುಸೋಗೆ ಸೊಪ್ಪಿನ ರಸ, ಕಾಕಿತೊಂಡೇಸೊಪ್ಪಿನ ರಸ, ಲಕ್ಕಲಿ ಸೊಪ್ಪಿನ ರಸ, ಹೊಂಗೇಬೇರಿನ ರಸ, ತುಂಬೇಸೊಪ್ಪಿನ ರಸ, ತೊಟ್ಲೆಸೊಪ್ಪಿನ ರಸ ಇವು ದಿನಸಿಗೆ ೧ ಪಾವು ರಸ ತೆಗೆದು ಹಸುವಿನ ಹಾಲು ೧ ಶೇರು ಹಾಕಿ ಕಲಸಿಟ್ಟುಕೊಳ್ಳುವುದು. ಮಂಜಿಷ್ಟೆ, ಅತಿಮಧುರ, ತುಪ್ಪದ ದೇವದಾರು, ಮೋಡಿ, ಶ್ರೀಗಂಧದ ಚಕ್ಕೆ, ಯಾಲಕ್ಕಿ, ನಾಗಕೇಸರಿ, ಲವಂಗಚಕ್ಕೆ, ತಕ್ಕೋಲ, ಜಾಕಾಯಿ, ಶುಂಠಿ, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ತುಂಗೇಗಡ್ಡೆ, ವಾಯುವಿಳಂಗ, ಮರದರಿಸಿನ, ಜಟಾಮಾಂಸಿ, ಇಪ್ಪೇಹೂವು, ಅಗರು, ಚಂಗಲಕೋಷ್ಟ, ಕುಂಕುಮಕೇಸರಿ, ಬಿಳೇಮೆಣಸು, ಮರದರಿಸಿನ, ಕರ್ಕಾಟಿಕಶೃಂಗಿ, ಕಚೋರ, ಕಸ್ತೂರಿ ಅರಿಸಿನ ಇವು ದಿನಸಿಗೆ ೧ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ೪ ಶೇರು ನೀರುಹಾಕಿ ಕಷಾಯ ಕಾಯಿಸಿ ೧ ಶೇರು ಕಷಾಯ ಇಳಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಒಳ್ಳೆಣ್ಣೆ ೧೦ ಶೇರು ಇವುಗಳೆಲ್ಲವನ್ನು ಒಂದು ಪಾತ್ರೆಯಲ್ಲಿ ಹಾಕಿ ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವುದು. ಈ ತೈಲವನ್ನು ತಲೆಗೆ ಹಾಕಿಕೊಂಡು ಅಭ್ಯಂಗನಸ್ನಾನ ಮಾಡುತ್ತಾ ಬಂದರೆ ತಲೇನೋವು, ಉನ್ಮಾದ, ನೇತ್ರವಾಯು, ಪೀನಸ, ಅಶೀತಿ ವಾಯುಗಳು ಪೈತ್ಯರೋಗ ಮೊದಲಾದವು ಗುಣವಾಗುವುವು.

೩. ಯೋಗರಾಜ ತೈಲ:—ಸುರಸುರಿಕೆಸೊಪ್ಪಿನ ರಸ ೧ ಪಾವು, ಹೊನಗೊನೆಸೊಪ್ಪಿನ ರಸ ೧ ಪಾವು, ಶೀತೊಂಡೆಸೊಪ್ಪಿನ ರಸ ೧ ಪಾವು, ಅಂತರಗಂಗೆ ರಸ ೧ ಪಾವು, ಒಳ್ಳೆಣ್ಣೆ ೫ ಶೇರು, ಹಳೇತೆಂಗಿನಕಾಯಿ ತಂದು ರಂಧ್ರವನ್ನು ಮಾಡಿ ಹರಿವೇಸೊಪ್ಪಿನ ಬೀಜ ತೂಕದ ೧ ಪಾವು ಹಾಕಿ ೩ ದಿನ ನೆನೆಯಿಸಿ ಅನಂತರ ತೆಂಗಿನಕಾಯಿ ಒಳಗಿನ ಕೊಬರಿ ಮತ್ತು ಹರಿವೇಸೊಪ್ಪಿನ ಬೀಜ ಅದರಲ್ಲಿರುವ ನೀರು ಹಾಕಿ ಬೇರೆ ನೀರು ಹಾಕಿ ಒರಳಲ್ಲಿ ಚೆನ್ನಾಗಿ ರುಬ್ಬಿ ಹಾಲು ಹಿಂಡಿ ಶೋಧಿಸಿಟ್ಟುಕೊಳ್ಳುವುದು. ಬಿಳೇ ಜೀರಿಗೆ ೩ ತೊಲೆ, ಕರೇಜೀರಿಗೆ ೨ ತೊಲೆ, ಯಾಲಕ್ಕಿ ೨ ತೊಲೆ, ಮೆಣಸು ೩ ತೊಲೆ, ಬಾಲಮೆಣಸು ೩ ತೊಲೆ

ಈ ದಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಹಸುವಿನ ಹಾಲಿನಲ್ಲಿ ೩ ದಿನ ನೆನೆಹಾಕಿ ಒರಳಲ್ಲಿ ರುಬ್ಬಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಮೇಲ್ಕಂಡ ರಸ, ಎಣ್ಣೆ ಮತ್ತು ಹಾಲು ಇವುಗಳೆಲ್ಲವನ್ನೂ ಪಕ್ವವಾಗಿ ತೈಲ ಕಾಯಿಸಿ ಶೋಧಿಸಿಟ್ಟುಕೊಳ್ಳುವುದು. ಈ ತೈಲವನ್ನು ತಲೆಗೆ ಹಾಕಿಕೊಂಡು ಅಭ್ಯಂಗನಸ್ನಾನ ಮಾಡುತ್ತಾ ಬಂದರೆ ಉಷ್ಣದಿಂದ ಹುಟ್ಟಿದ ಶಿರೋರೋಗಗಳು, ಮೂಗು ಒಣಗುವುದು ಇವು ಗುಣವಾಗಿ, ಕಣ್ಣಿಗೆ ತೇಜಸ್ಸುಂಟಾಗಿ, ತಲೆಕೂದಲಿಗೆ ಮೆರಗು ಬರುವುದು.

೪. ಭೃಂಗಾಮಲಕ ತೈಲ:—ಗರುಗದಸೊಪ್ಪಿನ ರಸ ೩ ಶೇರು, ಹೊನಗೊನೆಸೊಪ್ಪಿನ ರಸ ೧ ಶೇರು, ನೆಲ್ಲೀಕಾಯಿ ರಸ ೧ ಶೇರು, ನೀಲಿಸೊಪ್ಪಿನ ರಸ ॥ ಶೇರು, ಶೀತೊಂಡೇಸೊಪ್ಪಿನ ರಸ ॥ ಶೇರು, ಒಳ್ಳೆಣ್ಣೆ ೧೫ ಶೇರು, ಅತಿಮಧುರ ೩ ತೊಲೆ, ಕಸ್ತೂರಿ ಅರಿಸಿನ ೩ ತೊಲೆ, ಜಂಗಲಕೋಷ್ಠ ೩ ತೊಲೆ, ಜಟಾಮಾಂಸಿ ೩ ತೊಲೆ, ಕಾರೇಕಾಯಿಸಿಪ್ಪೆ ೩ ತೊಲೆ, ವಾಯುವಿಳಂಗ ೧ ತೊಲೆ, ಶ್ರೀಗಂಧದ ಚಕ್ಕೆ ೩ ತೊಲೆ, ಕಚೋರ ೩ ತೊಲೆ, ಲಾವಂಚ ೧ ತೊಲೆ, ತುಪ್ಪದ ದೇವದಾರು ೨ ತೊಲೆ, ಸಂಪಿಗೆಮೊಗ್ಗು ೩ ತೊಲೆ, ತುಂಗೇಗಡ್ಡೆ ೩ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಮೇಲ್ಕಂಡ ರಸಗಳನ್ನೂ ಎಣ್ಣೆಯನ್ನೂ ಒಂದು ಪಾತ್ರೆಯಲ್ಲಿ ಹಾಕಿ ಪಕ್ವವಾಗಿ ತೈಲ ಕಾಯಿಸಿ ಶೋಧಿಸಿಟ್ಟುಕೊಳ್ಳುವುದು. ಈ ತೈಲವನ್ನು ತಲೆಗೆ ಹಾಕಿಕೊಂಡು ಅಭ್ಯಂಗನಸ್ನಾನ ಮಾಡುತ್ತಾಬಂದರೆ ತಲೆಶೂಲೆ, ತಲೆನೋವು, ಕಣ್ಣುಉರಿ, ಕಣ್ಣಿನಲ್ಲಿ ನೀರು ಸುರಿಯುವುದು ಇವು ಗುಣವಾಗುವುದು.

೫. ಮಹಾಭೃಂಗಾಮಲಕ ತೈಲ:—ಹೊನಗೊನೆಸೊಪ್ಪಿನ ರಸ ೪ ಶೇರು, ಗರುಗದಸೊಪ್ಪಿನ ರಸ ೪ ಶೇರು, ನೆಲ್ಲೀಕಾಯಿ ರಸ ೨ ಶೇರು, ಕೇರಳೆಹಣ್ಣಿನ ರಸ ೧ ಶೇರು, ಸುರಸುರಕೆಸೊಪ್ಪಿನ ರಸ ॥ ಶೇರು, ಶೀತೊಂಡೇಸೊಪ್ಪಿನ ರಸ ೧ ಶೇರು, ಎಳನೀರು ೧ ಶೇರು, ಹಸುವಿನ ಹಾಲು ೧ ಶೇರು, ಒಳ್ಳೆಣ್ಣೆ ೩೦ ಶೇರು, ಅತಿಮಧುರ ೨ ತೊಲೆ, ಬಿಳೇಮೆಣಸು ೨ ತೊಲೆ, ಶ್ರೀಗಂಧದ ಚಕ್ಕೆ ೨ ತೊಲೆ, ತುಂಗೇಗಡ್ಡೆ ೨ ತೊಲೆ, ಜಂಗಲಕೋಷ್ಠ ೨ ತೊಲೆ, ಜಟಾಮಾಂಸಿ ೨ ತೊಲೆ, ಗಾಲ ೨ ತೊಲೆ, ಬಾವಂಚಿಬೀಜ ೨ ತೊಲೆ, ಲಾವಂಚ ೨ ತೊಲೆ, ತುಪ್ಪದ ದೇವದಾರು ೨ ತೊಲೆ, ಅಗರುಚಕ್ಕೆ ೨ ತೊಲೆ, ಕಸ್ತೂರಿ ಅರಿಸಿನ ೨ ತೊಲೆ, ಕಚೋರ ೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ೪ ಶೇರು ನೀರುಹಾಕಿ ಕಷಾಯ ಕಾಯಿಸಿ ೧ ಶೇರು ಕಷಾಯ ಇಳಿಸಿ ಬಟ್ಟೆಯಲ್ಲಿ ಶೋಧಿಸಿ ಮೇಲ್ಕಂಡ ರಸ ಮತ್ತು ಎಣ್ಣೆಯನ್ನು ಒಂದು ಪಾತ್ರೆಯಲ್ಲಿ ಹಾಕಿ ಪಕ್ವವಾಗಿ ತೈಲ ಕಾಯಿಸಿ ಶೋಧಿಸಿಟ್ಟುಕೊಳ್ಳುವುದು. ಈ ತೈಲವನ್ನು ತಲೆಗೆ ಹಾಕಿಕೊಂಡು ಅಭ್ಯಂಗನ

ಸ್ನಾನ ಮಾಡುತ್ತಾಬಂದರೆ ಕಣ್ಣುರಿ, ತಲೆಶೂಲೆ, ತಲೆನೋವು ಗುಣವಾಗುವುದು.

೬. ಚಂದನಾದಿ ತೈಲ:—ಸುರಸುರಕೆಸೊಪ್ಪಿನ ರಸ ೧ ಪಾವು, ಒಂದೆಲಗದ ಸೊಪ್ಪಿನ ರಸ ೧ ಪಾವು, ಗರುಗದಸೊಪ್ಪಿನ ರಸ ೧ ಪಾವು, ದೊಡ್ಡಪತ್ರೆಸೊಪ್ಪಿನ ರಸ ೧ ಪಾವು, ಮಾಚಿಪತ್ರೆ ರಸ ೧ ಪಾವು, ವಿಷ್ಣುಕ್ರಾಂತಿಸೊಪ್ಪಿನ ರಸ ೧ ಪಾವು, ಬಿಳೇ ಈರುಳ್ಳಿ ರಸ ೧ ಪಾವು, ನೀಲಿಬೇರಿನ ರಸ ೧ ಪಾವು, ಹೊಂಗೇಬೇರಿನ ರಸ ೧ ಪಾವು, ಹಸುವಿನ ಹಾಲು ೧ ಶೇರು, ಒಳ್ಳೆಣ್ಣೆ ೧೨ ಶೇರು, ಶ್ರೀಗಂಧದ ಚಕ್ಕೆ || ಶೇರು, ಅರಸಿನ ೧ ತೊಲೆ, ಮರದರಿಸಿನ ೧ ತೊಲೆ, ರೇಣಿಕೆ ೧ ತೊಲೆ, ಸೊಗದೇಬೇರು ೨ ತೊಲೆ, ತುಪ್ಪದದೇವದಾರು ೪ ತೊಲೆ, ದೊಡ್ಡ ಹಾವುಮೆಕ್ಕೆ ಬೇರು ೨ ತೊಲೆ, ದೊಡ್ಡ ಯಾಲಕ್ಕಿ ೨ ತೊಲೆ, ಮಂಜಿಷ್ಠ ೧ ತೊಲೆ, ಚಂಗಲ ಕೋಷ್ಟ ೧ ತೊಲೆ, ಜಟಾಮಾಂಸಿ ೨ ತೊಲೆ, ಹೆಗ್ಗುಳ್ಳ ೨ ತೊಲೆ, ನೆಲಗುಳ್ಳ ೨ ತೊಲೆ, ಶುಂಠಿ ೨ ತೊಲೆ, ಅಗರುಚಕ್ಕೆ ೪ ತೊಲೆ, ತುಂಗೇಗಡ್ಡೆ ೪ ತೊಲೆ, ಕಚೋರ ೨ ತೊಲೆ, ಹಸೀ ಅರಗು ೪ ತೊಲೆ, ಚಿಟ್ಟಾಮುಟ್ಟೆ ೨ ತೊಲೆ, ಪೇರಾಮುಟ್ಟೆ ೨ ತೊಲೆ, ಕರ್ಕಾಟಕಶೃಂಗಿ ೨ ತೊಲೆ, ಮುಡಿವಾಳ ೧ ತೊಲೆ, ಅತಿಮಧುರ ೨ ತೊಲೆ, ಕುಂಕುಮಕೇಸರಿ || ತೊಲೆ, ಲಾವಂಚ ೨ ತೊಲೆ, ನೈದಿಲೆ ಗಡ್ಡೆ ೪ ತೊಲೆ, ಅಳಲೇಕಾಯಿ ಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೪ ತೊಲೆ, ಬಿಳೇಜೀರಿಗೆ ೧ ತೊಲೆ, ಕರೇಜೀರಿಗೆ ೧ ತೊಲೆ, ಸಣ್ಣ ಹಿಪ್ಪಲಿ ೨ ತೊಲೆ, ನಾಗಕೇಸರಿ ೧ ತೊಲೆ, ಪರ್ಪಾಷ್ಟಕ ೪ ತೊಲೆ, ಕಹಿಪಡವಲ ೪ ತೊಲೆ, ಅಶ್ವಗಂಧಿ ೪ ತೊಲೆ, ಗಾಲ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ೮ ಶೇರು ನೀರುಹಾಕಿ ಕಷಾಯ ಕಾಯಿಸಿ ೨ ಶೇರು ಕಷಾಯ ಇಳಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಮೇಲ್ಕಂಡ ರಸ, ಒಳ್ಳೆಣ್ಣೆ ಮತ್ತು ಕಷಾಯ ಇವುಗಳೆಲ್ಲವನ್ನೂ ಒಂದು ಪಾತ್ರೆಯಲ್ಲಿ ಹಾಕಿ ಪಕ್ವವಾಗಿ ತೈಲ ಕಾಯಿಸಿ ಶೋಧಿಸಿಟ್ಟುಕೊಳ್ಳುವುದು. ಈ ತೈಲವನ್ನು ತಲೆಗೆ ಹಾಕಿಕೊಂಡು ಅಭ್ಯಂಗನ ಸ್ನಾನ ಮಾಡುತ್ತಾ ಬಂದರೆ ಅಪಸ್ಮಾರ, ಉನ್ಮಾದ, ಶೋಣಿತವಾತ, ಕರಚರಣಾದ್ಯಂಗ ತಾಪ, ಶಿರಸ್ತಾಪ, ಮೈಉರಿ ಇವು ಗುಣವಾಗಿ ಶರೀರಕಾಂತಿಯಾಗುವದು, ಮಿದುಳಿಗೆ ತಂಪುಮಾಡಿ ಶಿರೋವ್ಯಾಧಿ ನಿವಾರಣೆಯಾಗುವುದು.

೭. ಬಿಲ್ವಾದಿ ತೈಲ:—೫೦ ಬಿಲ್ಪತ್ರೆಕಾಯಿ ಅರ್ಧ ಪಕ್ವವಾಗಿರುವುದು ಒಳಗಿನ ಗುಜ್ಜು ತೆಗೆದು ಒರಳಲ್ಲಿ ಹಾಕಿ ಚನ್ನಾಗಿ ಕುಟ್ಟಿ ಪಾತ್ರೆಯಲ್ಲಿ ಹಾಕಿ ೨೪ ಶೇರು ನೀರು ಹಾಕಿ ಕಲಸಿ ಕಷಾಯ ಕಾಯಿಸಿ ೬ ಶೇರು ಕಷಾಯ ಬರುವಷ್ಟು ಶೋಧಿಸಿಟ್ಟುಕೊಳ್ಳುವುದು. ಗರುಗದಸೊಪ್ಪಿನ ರಸ ೧ ಪಾವು, ಕಿರಿನೆಲ್ಲಿಸೊಪ್ಪಿನ ರಸ ೧ ಪಾವು, ಹೊನಗೊನೆಸೊಪ್ಪಿನ ರಸ ೧ ಪಾವು, ಕರೇಜಾಲಿಸೊಪ್ಪಿನಕುಡಿ ರಸ ೧ ಪಾವು, ಹಸುವಿನಹಾಲು ೧ ಶೇರು, ಒಳ್ಳೆಣ್ಣೆ ೨೦ ಶೇರು, ಅತಿಮಧುರ

೩ ತೊಲೆ, ಸೊಗದೇಬೇರು ೩ ತೊಲೆ, ಚಂಗಲಕೋಷ್ಠ ೧ ತೊಲೆ, ಜಟಾಮಾಂಸಿ ೧ ತೊಲೆ, ಬಿಳೇಮೆಣಸು ೧ ತೊಲೆ, ಲಾವಂಚ ೧ ತೊಲೆ, ಕಸ್ತೂರಿ ಅರಿಸಿನ ೧ ತೊಲೆ, ಕಚೋರ ೧ ತೊಲೆ, ತುಂಗೇಗಡ್ಡೆ ೩ ತೊಲೆ, ಪರ್ಪಾಟ್ಕ ೩ ತೊಲೆ, ಮರುಗ ೧ ತೊಲೆ, ಬಿಳೇಕೊಮ್ಮೇ ಬೇರು ೬ ತೊಲೆ, ಬಿಳೇಗರಿಕೇಬೇರು ೩ ತೊಲೆ, ತಾವರೇಗಡ್ಡೆ ೩ ತೊಲೆ, ಚಿಟ್ಟಾಮುಟ್ಟೆ ೧ ತೊಲೆ, ನೆಲ್ಲೀಕಾಯಿ ೩ ತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ೪ ಶೇರು ನೀರುಹಾಕಿ ಕಷಾಯ ಕಾಯಿಸಿ ೧ ಶೇರು ಕಷಾಯ ಇಳಿಸಿ ಶೋಧಿಸಿಕೊಳ್ಳುವುದು. ಮೇಲ್ಕಂಡ ಕಷಾಯ, ರಸ, ಎಣ್ಣೆ ಇವುಗಳೆಲ್ಲವನ್ನೂ ಪಾತ್ರೆಯಲ್ಲಿ ಹಾಕಿ ಪಕ್ವವಾಗಿ ತೈಲ ಕಾಯಿಸಿ ಶೋಧಿಸಿಕೊಳ್ಳುವುದು. ಈ ತೈಲವನ್ನು ತಲೆಗೆ ಹಾಕಿಕೊಂಡು ಅಭ್ಯಂಗನಸ್ನಾನಮಾಡುತ್ತಾ ಬಂದರೆ ಉಷ್ಣ ಪಿತ್ಥಕಾರಕಗಳಿಂದ ಹುಟ್ಟುವ ಶಿರೋವ್ಯಾಧಿಗಳು, ನೇತ್ರರೋಗಗಳು, ತಲೆನೋವು, ಅರ್ಧತಲೆನೋವು, ತಲೆ ಸುತ್ತುವುದು, ಕಣ್ಣುರಿ ಇವು ಗುಣವಾಗುವುದು.

೮. ಚಂದ್ರಕೇಸರಿ ತೈಲ:—ಗರುಗದ ಸೊಪ್ಪಿನ ರಸ, ಹೊನಗೊನೆ ಸೊಪ್ಪಿನ ರಸ, ಲೋಳೆಸರದ ರಸ, ಕಿರುನೆಲ್ಲಿ ಸೊಪ್ಪಿನರಸ, ಎಳನೀರು, ಹಸುವಿನಹಾಲು ಇವು ದಿನಸಿಗೆ ೧ ಶೇರು, ಹಸೀ ಪಚ್ಚೆತೆನೆ, ಹಸೀ ಮರುಗ, ಹಸೀ ದವನ, ಹಸೀ ಸಂಪಿಗೆ ಹೂವು, ಹಸೀ ಗುಲಾಬಿ ಹೂವು, ಹಸೀ ಸೊಗದೇಬೇರು ಇವು ಪ್ರತಿಯೊಂದೂ ೧ ಪಾವು, ಚಂಗಲಕೋಷ್ಠ, ಜಟಾಮಾಂಸಿ, ಲಾವಂಚ, ಬಾವಂಚಿಬೀಜ, ಕೃಷ್ಣಾಗರು, ತುಪ್ಪದದೇವದಾರು, ನಾಗಕೇಸರಿ, ಗೌಲ, ಕಚೋರ, ಕಸ್ತೂರಿ ಅರಿಸಿನ, ಕಿನ್ನೇರಿಪಟ್ಟೆ, ಮುಡಿವಾಳ, ಅನಾರಸುಹೂವು, ಮಲಾಗರು ಚಕ್ಕೆ, ಬಾಲಮೆಣಸು, ಕರೇಜೀರಿಗೆ, ಬಿಳೇಮೆಣಸು ಇವು ದಿನ ಸಿಗೆ ೩ ತೊಲೆ, ದಾಲಚಿನ್ನಿ ೧ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಯಾಲಕ್ಕಿ ೧ ತೊಲೆ, ತುಂಗೇಗಡ್ಡೆ ೧ ಪಾವು, ಶ್ರೀಗಂಧದಚಕ್ಕೆ ೧ ಪಾವು ಈ ದಿನಸುಗಳನ್ನು ಕುಟ್ಟಿ ಚೂರ್ಣಮಾಡಿ ೨೦ ಶೇರು ತಣ್ಣೀರುಹಾಕಿ ೩ ದಿವಸ ನೆನೆಯಿಟ್ಟು ಒಳ್ಳೆಣ್ಣೆ ೨೦ ಶೇರು, ಮೇಲ್ಕಂಡ ರಸ, ಹಸೀ ದಿನಸು, ಚೂರ್ಣ ನೆನೆಯಿಸಿಟ್ಟ ದಿನಸು ನೀರು ಎಲ್ಲವನ್ನೂ ಒಂದು ಕಲಾಯಿ ಪಾತ್ರೆಯಲ್ಲಿ ಹಾಕಿ ಬಾಯಿಮುಚ್ಚಿ ಸರಿಯಾಗಿ ಕೆಮ್ಮಣ್ಣುಬಟ್ಟೆ ಶೀಲುಮಾಡಿ ಒಲೆಯಮೇಲಿಟ್ಟು ತಟ್ಟೆಯ ಮೇಲೆ ಭಾರವಾದ ಕಲ್ಲನ್ನು ಇಟ್ಟು ೩ ಜಾವ ಕಾಯಿಸಿ ಶೀಲು ತೆಗೆದು ಮೇಲೆ ತೇಲುತ್ತಿರುವ ಎಣ್ಣೆಯನ್ನು ಬಟ್ಟೆಯಲ್ಲಿ ನೆನಸಿ ಹಿಂಡಿ ಶೋಧಿಸಿಕೊಳ್ಳು ವುದು. ಈ ತೈಲವನ್ನು ತಲೆಗೆ ಹಾಕಿಕೊಂಡು ಅಭ್ಯಂಗನಸ್ನಾನಮಾಡುತ್ತಾ ಬಂದರೆ ತಲೆನೋವು, ಅರ್ಧತಲೆನೋವು, ತಲೆ ಸುತ್ತುವುದು, ಕಣ್ಣುರಿ ಗುಣ ವಾಗುವುದು. ಇದಲ್ಲದೆ ಈ ತೈಲವನ್ನು ತಲೆಗೆ ಹಾಕಿ ಬಾಚಿಕೊಳ್ಳುವುದರಿಂದ ಕೇಶ ವೃದ್ಧಿಯಾಗುವುದು.

೯. ಭೃಂಗಾಮಲಕ ತೈಲ:—ಚಿಟ್ಟೆರಳೆಣ್ಣೆ ೩ ಶೇರು, ಹಸುವಿನಬೆಣ್ಣೆ ೧ ಶೇರು, ಒಳ್ಳೆಣ್ಣೆ ೩ ಶೇರು, ನಿಂಬೇಹಣ್ಣಿನ ರಸ ೧ ಶೇರು, ನೆಲ್ಲೀಕಾಯಿ ರಸ ೧ ಪಾವು, ಗರುಗದಸೊಪ್ಪಿನ ರಸ ೧ ಪಾವು, ಸುರಸುರಿಕೆಸೊಪ್ಪಿನ ರಸ ಅರ ಪಾವು, ಹೊನಗೊನೆಸೊಪ್ಪಿನ ರಸ ೧ ಪಾವು, ಇದಕ್ಕೆ ಕಲ್ಕದ್ರವ್ಯ:—ಕಚೋರ ೧ ತೊಲೆ, ಶುಂಠಿ ೧ ತೊಲೆ, ಕಸ್ತೂರಿ ಅರಿಸಿನ ೧ ತೊಲೆ, ಬಿಳೇಜೀರಿಗೆ ೧ ತೊಲೆ, ಕರೇಜೀರಿಗೆ ೧ ತೊಲೆ, ಅತಿಮಧುರ ೧ ತೊಲೆ, ಸಾಂಬ್ರಾಣಿ ೧ ತೊಲೆ ಇವುಗಳನ್ನು ಚೂರ್ಣಮಾಡಿ ಎಲ್ಲವನ್ನೂ ಪಾತ್ರೆಯಲ್ಲಿ ಹಾಕಿ ಪಕ್ವವಾಗಿ ಕಾಯಿಸಿಟ್ಟುಕೊಳ್ಳುವುದು. ಈ ತೈಲವನ್ನು ವಾರಕ್ಕೆ ೧ ಸಲ ತಲೆಗೆ ಹಾಕಿಕೊಂಡು ಅಭ್ಯಂಗನಸ್ನಾನ ಮಾಡುತ್ತಾಬರುವುದು. ಇದರಿಂದ ತಲೇನೋವು, ಅರತಲೇನೋವು, ತಲೇಶೂಲೆ, ಕಣ್ಣು ಮಂಜಾಗುವುದು, ಕಣ್ಣಿನಲ್ಲಿ ನೀರು ಸುರಿಯುವುದು ಮೊದಲಾದ ಉಷ್ಣಪಿತ್ಥ ಕಾರಕಗಳು ಗುಣವಾಗುವುದು.

೧೦ ಪಿತ್ಥರಕ್ಷಾಮೃತ ತೈಲ:—ಕಹಿಹೀರೇಸೊಪ್ಪಿನ ರಸ ೧ ಪಾವು, ಗರುಗದಸೊಪ್ಪಿನ ರಸ ೧ ಪಾವು, ಕಾಚೀಸೊಪ್ಪಿನ ರಸ ೧ ಪಾವು, ಹುಚ್ಚುಸೋರೇಕಾಯಿ ಸೊಪ್ಪಿನ ರಸ ೧ ಪಾವು, ಲೋಳೆಸರದ ರಸ ೧ ಪಾವು, ನೆಲ್ಲೀಕಾಯಿ ರಸ ೧ ಪಾವು, ಮೇಕೇಹಾಲು ೧ ಪಾವು, ಹಸುವಿನತುಪ್ಪ ೧ ಪಾವು, ಚಿಟ್ಟೆರಳೆಣ್ಣೆ ೧ ಪಾವು, ಒಳ್ಳೆಣ್ಣೆ ೫ ಶೇರು, ಇದಕ್ಕೆ ಕಲ್ಕದ್ರವ್ಯ:—ಲವಂಗಪತ್ರೆ ೨ ತೊಲೆ, ಚಂಗಲಕೋಷ್ಠ ೨ ತೊಲೆ, ಅಳಲೇಕಾಯಿಸಿಪ್ಪೆ ೨ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೨ ತೊಲೆ, ಯಷ್ಟಿಮಧುಕ ೨ ತೊಲೆ, ಲಾವಂಚ ೨ ತೊಲೆ, ಶ್ರೀಗಂಧದಚಕ್ಕೆ ೨ ತೊಲೆ, ಕೃಷ್ಣಾಗರು ೨ ತೊಲೆ, ಮಂಜಿಷ್ಠೆ ೨ ತೊಲೆ, ಯಾಲಕ್ಕಿ ೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಹಾಕುವುದು. ಪಾತ್ರೆಯಲ್ಲಿ ಮೇಲ್ಕಂಡ ದಿನಸುಗಳೆಲ್ಲವನ್ನು ಹಾಕಿ ಪಕ್ವವಾಗಿ ಕಾಯಿಸಿ ಶೋಧಿಸಿಟ್ಟುಕೊಳ್ಳುವುದು. ಈ ತೈಲವನ್ನು ವಾರಕ್ಕೆರಡುಸಾರಿ ತಲೆಗೆ ಹಾಕಿಕೊಂಡು ಅಭ್ಯಂಗನಸ್ನಾನ ಮಾಡುವುದರಿಂದ ಶಿರೋಭ್ರಮಣ, ನೇತ್ರರೋಗ, ಪೀನಸ ಗುಣವಾಗುವುದು.

೧೧. ಬಜೆ, ಶುಂಠಿ, ಹಿಪ್ಪಲಿ, ಮೆಣಸು, ಇವು ದಿನಸಿಗೆ ಒಂದು ತೊಗರೀಕಾಳಿನಷ್ಟು ಕುಟ್ಟಿ ಶೋಧಿಸಿ ತಣ್ಣೀರಿನಲ್ಲಿ ಅರೆದು ಬಟ್ಟೆಯಲ್ಲಿ ಶೋಧಿಸಿ ಎರಡು ಮೂಗಿಗೆ ಎರಡೆರಡು ಬೊಟ್ಟು ಬಿಟ್ಟರೆ ಅರ್ಧ ತಲೇನೋವು, ಪೂರಾ ತಲೇನೋವು ಗುಣವಾಗುವುದು.

೧೨. ತೊಟ್ಲೆಬೇರು ೧೦ ಫಲ, ಲಕ್ಕಲಿಬೇರು ೧೦ ಫಲ, ಬಿಳೇ ಉಪ್ಪೇಬೇರು ೧೦ ಫಲ, ಬಿಳೇ ಎಕ್ಕದಬೇರು ೧೦ ಫಲ, ಚಿಟ್ಟಾಮುಟ್ಟಿಬೇರು ೧೦ ಫಲ ಈ ಹಸೀಬೇರುಗಳನ್ನು ಚೆನ್ನಾಗಿ ಜಜ್ಜಿ ಕುಟ್ಟಿ ಪಾತ್ರೆಯಲ್ಲಿ ಹಾಕಿ ನೀರುಹಾಕಿ ಕಾಯಿಸಿ ಚತುರ್ಥಾಂಶ ಕಷಾಯ ಬರುವಂತೆ ಕಾಯಿಸಿ ೧ ಶೇರು ಶೋಧಿಸಿಕೊಳ್ಳು

ವುದು. ಹೆಣ್ಣುಎಕ್ಕದಯಲೆ ರಸ ೧ ಶೇರು, ಎಕ್ಕದಹೂವಿನ ರಸ ೧ ಶೇರು, ಒಳ್ಳೆಣ್ಣೆ ೪ ಶೇರು, ಬೇವಿನ ಎಣ್ಣೆ ೨ ಶೇರು, ಇದಕ್ಕೆ ಕಲ್ಕದ್ರವ್ಯ :—ಶುಂಠಿ ೧॥ ತೊಲೆ, ಮೆಣಸು ೧॥ ತೊಲೆ, ಹಿಪ್ಪಲಿ ೧॥ ತೊಲೆ, ಓಮ ೧॥ ತೊಲೆ, ಹೊಟ್ಟುಸುಲಿದ ಬೆಳ್ಳುಳ್ಳಿ ೧॥ ತೊಲೆ, ಬಜೆ ೧॥ ತೊಲೆ, ಯಾಲಕ್ಕಿ ೧॥ ತೊಲೆ, ಅರಿಸಿನ ೧॥ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡುವುದು. ಇವುಗಳನ್ನೆಲ್ಲಾ ಒಂದು ಪಾತ್ರೆಯಲ್ಲಿ ಹಾಕಿ ಒಲೆಯಮೇಲಿಟ್ಟು ಪಕ್ವವಾಗಿ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಟ್ಟುಕೊಳ್ಳುವುದು. ಈ ತೈಲವನ್ನು ತಲೆಗೆ ಹಾಕಿಕೊಂಡ ೧ ಘಂಟೆ ತರುವಾಯ ಇಪ್ಪೇ ಹಿಂಡಿ ಉಜ್ಜಿಕೊಂಡು ಬಿಸಿನೀರು ಸ್ನಾನಮಾಡುವುದು. ಈರೀತಿ ವಾರಕ್ಕೆರಡುಸಲ ಸ್ನಾನಮಾಡಬೇಕು. ಇದರಿಂದ ೪೮ ವಿಧ ಶಿರಶ್ಶೂಲೆ, ನೇತ್ರಶೂಲೆ, ಖಜ್ಜಿ, ಕರ್ಪಾಣಿ, ಕೈಕಾಲು ಛಳುಕು, ತಿಮಿರ ವಾಯು, ವಾತ ಗುಣವಾಗುವುದು.

೧೩. ಅಫೀಂ ೧ ವರಹ ತೂಕ, ಕಸ್ತೂರಿ ಅರಿಸಿನ ೨ ವರಹ ತೂಕ, ಎರೆಹುಳ ೧ ಪಾವು ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಅರೆಯುವ ದಿನಸುಗಳನ್ನು ಅರೆದು ಬಾಂಡ್ಲಿಯಲ್ಲಿ ಹಾಕಿ ಒಳ್ಳೆಣ್ಣೆ ೧ ಶೇರು ಶೇರಿಸಿ ಪಕ್ವವಾಗಿ ಕಾಯಿಸಿ ಶೋಧಿಸಿಕೊಂಡು ತಲೆಗೆ ಉಜ್ಜಿ ಬಿಸಿನೀರು ಹಾಕಿ ಸ್ನಾನಮಾಡಲು ೧೨ ಸಂವತ್ಸರದ ಶಿರೋಭಾರ, ತಲೆನೋವು ಗುಣವಾಗುವುದು.

೧೪. ಮೆಣಸಿನಕಾಯಿಸೊಪ್ಪು ಕುಟ್ಟಿ ಬಟ್ಟೆಯಲ್ಲಿ ಶೋಧಿಸಿ ಎಡಗಡೆ ತಲೆನೋವಿದ್ದರೆ ಬಲಗಡೆ ಮೂಗಿನಲ್ಲಿಯೂ ಬಲಗಡೆ ನೋವಿದ್ದರೆ ಎಡಗಡೆ ಮೂಗಿನಲ್ಲಿಯೂ ಬಿಟ್ಟರೆ ಪಾರ್ಶ್ವ ತಲೆನೋವು ಗುಣವಾಗುವುದು.

೧೫. ಹೆಣ್ಣುಎಕ್ಕದ ಎಲೆ, ಬೇವಿನಸೊಪ್ಪು ಇವು ಸಮಭಾಗ ಒರಳಲ್ಲಿ ಹಾಕಿ ಜೆಸ್ನಾಗಿ ಕಟ್ಟಿ ರೊಟ್ಟಿಯಂತೆ ಮಾಡಿ ಒಳ್ಳೆಣ್ಣೆ ॥ ಶೇರು ಹಾಕಿ ಪಕ್ವವಾಗಿ ಕಾಯಿಸಿ ಶೋಧಿಸಿ ತಲೆಗೆ ಹಚ್ಚಿಕೊಂಡು ತಕ್ಷಣವೇ ಬಿಸಿನೀರು ಸ್ನಾನ ಮಾಡಲು ತಲೆಶೂಲೆ ಗುಣವಾಗುವುದು.

೧೬. ಒಳ್ಳೆಣ್ಣೆ ೧ ಶೇರು, ಮೆಣಸು ೩ ತೊಲೆ, ಹೊಟ್ಟುಸುಲಿದ ಬೆಳ್ಳುಳ್ಳಿ ೩ ತೊಲೆ, ತುಂಬೇಹೂವು ೧ ತೊಲೆ, ಕಸ್ತೂರಿ ಅರಿಸಿನ ೧।। ತೊಲೆ ಇವುಗಳನ್ನು ಕುಟ್ಟಿ ಒಳ್ಳೆಣ್ಣೆಯಲ್ಲಿ ಹಾಕಿ ಪಕ್ವವಾಗಿ ಕಾಯಿಸಿ ಶೋಧಿಸಿಕೊಳ್ಳುವುದು. ತಲೆಗೆ ಹಚ್ಚಿಕೊಂಡು ಬಿಸಿನೀರು ಸ್ನಾನಮಾಡಿ ಕೂಡಲೇ ಊಟಮಾಡಿ ಮಲಗಿದರೆ ತಲೆಶೂಲೆ ಗುಣವಾಗುವುದು. ಇದಕ್ಕೆ ಪಥ್ಯ. ಹುಸವಲಕ್ಕಿ ಅನ್ನ ತೊಗರೀಬೇಳೆ ಸಾರು.

೧೭. ಒಳ್ಳೆ ತುಂಬೇಸೊಪ್ಪು ಕುಟ್ಟಿ ರಸ ತೆಗೆದು ಶೋಧಿಸಿಕೊಂಡದ್ದು ೧ ತೊಲೆ, ಮೇಕೇಹಾಲು ೧ ತೊಲೆ ಇವೆರಡು ಕಲಸಿ ಒಂದೇಹೊತ್ತು ಕುಡಿಯು

ವುದು. ಪಥ್ಯ ಹಸುವಿನಹಾಲು ಅನ್ನ. ಇದರಿಂದ ಪಾರ್ಶ್ವ ತಲೆನೋವು ಗುಣವಾಗುವುದು.

೧೮. ಗಾಂಧಾರಿನೊಪ್ಪಿನ ರಸ, ಜಟಾಮಾಂಸಿ ಸಮಭಾಗ ಹಸುವಿನ ತುಪ್ಪ ದಲ್ಲಿ ಹಾಕಿ ಕಾಯಿಸಿ ಶೋಧಿಸಿಕೊಂಡು ಎರಡು ಮೂಗಿಗೂ ೬ ತೊಟ್ಟು ಬಿಡು ವುದರಿಂದ ಅರತಲೆನೋವು ಗುಣವಾಗುವುದು.

೧೯. ಬಿಳೀಗರಿಕೆ, ಗಿರಿಕರ್ಣಿಕೆಬೇರು ಆದರ ಬೀಜಸಹ ನೀರಿನಲ್ಲರೆದು ಬಟ್ಟೆಯಲ್ಲಿ ಶೋಧಿಸಿ ಎರಡು ಮೂಗಿಗೂ ಮೂರುಮೂರು ತೊಟ್ಟು ಬಿಡುವುದ ರಿಂದ ಅರತಲೆನೋವು ಗುಣವಾಗುವುದು.

೨೦. ಕೆಂಪುಜಾಜಿಹೂವು ೧ ಹಿಡಿ, ಲವಂಗ ೪ ಮೊಲೆಹಾಲಿನಲ್ಲಿ ಚೆನ್ನಾಗಿ ಅರೆದು ಬಟ್ಟೆಯಲ್ಲಿ ಶೋಧಿಸಿ ಒಂದೊಂದು ಮೂಗಿಗೆ ಮೂರುಮೂರು ತೊಟ್ಟು ಬಿಟ್ಟರೆ ತಲೇನೋವು ಗುಣವಾಗುವುದು.

೨೧. ಹಾವುತೊಂಡೇಹಣ್ಣಿನ ರಸ, ಒಳ್ಳೆಣ್ಣೆಯಲ್ಲಿ ಕಲಸಿ ತಲೆಗೆ ಹಚ್ಚಿ ಕೊಂಡರೆ ತಲೆಶೂಲೆ ಗುಣವಾಗುವುದು.

೨೨ ಸಾಂಬ್ರಾಣಿ ೨ ತೊಲೆ, ಹುಚ್ಚುಹೀರೆಬೀಜ ೨ ತೊಲೆ ಚೆನ್ನಾಗಿ ಕುಟ್ಟಿ ಒಳ್ಳೆಣ್ಣೆ ॥ ಶೇರು ಹಾಕಿ ಪಕ್ವವಾಗಿ ಕಾಯಿಸಿ ಶೋಧಿಸಿ ತಲೆಗೆ ಹಚ್ಚಿ ಕೊಂಡು ಬಿಸಿನೀರು ಸ್ನಾನಮಾಡಿದರೆ ತಲೇನೋವು ಗುಣವಾಗುವುದು.

೨೩. ಸುರಸುರಕೆಸೊಪ್ಪು ಕುಟ್ಟಿ ರಸ ಶೋಧಿಸಿ ಎಡಗಡೆ ತಲೇನೋವಿ ದ್ದರೆ ಬಲಕಿವಿಯಲ್ಲಿಯೂ ಬಲಗಡೆ ತಲೆನೋವಿದ್ದರೆ ಎಡಕಿವಿಯಲ್ಲಿಯೂ ರಸ ಹಿಂಡಿದರೆ ತಲೇನೋವು ಗುಣವಾಗುವುದು.

೨೪ ಕರೇಹೂವಿನ ಕೋಲುತಗಸಿಸೊಪ್ಪಿನ ರಸ ೧ ಪಾವು, ಅಗಸೇ ಸೊಪ್ಪಿನ ರಸ ೧ ಪಾವು, ಕರೇಹತ್ತಿಸೊಪ್ಪಿನ ರಸ ೧ ಪಾವು, ಹೊನಗೊನೆ ಸೊಪ್ಪಿನ ರಸ ೧ ಪಾವು, ಗರುಗದಸೊಪ್ಪಿನ ರಸ ೧ ಪಾವು, ಹೇರಳೆಹಣ್ಣಿನ ರಸ ೧ ಪಾವು, ನಿಂಬೇಹಣ್ಣಿನ ರಸ ೧ ಪಾವು, ಒಳ್ಳೆಣ್ಣೆ ೨॥ ಶೇರು, ಚಿಟ್ಟರ ಳೆಣ್ಣೆ ೧। ಶೇರು ಒಂದು ಪಾತ್ರೆಯಲ್ಲಿ ಹಾಕಿ ಪಕ್ವವಾಗಿ ಕಾಯಿಸಿ ಶೋಧಿಸಿಟ್ಟು ಕೊಂಡು ತಲೆಗೆ ಹಾಕಿಕೊಂಡು ಅಭ್ಯಂಗನಸ್ನಾನ ಮಾಡುತ್ತಾ ಬಂದರೆ ತಲೆ ನೋವು, ತಲೆಶೂಲೆ, ಅರತಲೆನೋವು, ಪೂರಾ ತಲೆನೋವು ಗುಣವಾಗುವುದು.

೨೫. ತೊಟ್ಲೆಸೊಪ್ಪಿನ ರಸ ೧ ಪಾವು, ಗರುಗದಸೊಪ್ಪಿನ ರಸ ೧ ಪಾವು, ಲಕ್ಕಲಿನೊಪ್ಪಿನ ರಸ ಅರಪಾವು, ತುಳಸೀಸೊಪ್ಪಿನ ರಸ ಅರಪಾವು, ಹಸೀ ಅರಿ ಸಿನದ ರಸ ೧ ಪಾವು, ಚಿಟ್ಟರಳೆಣ್ಣೆ ೪ ಶೇರು, ಇದಕ್ಕೆ ಕಲ್ಕದ್ರವ್ಯ:—ಸಣ್ಣರಾಸ್ಮೆ ೨ ತೊಲೆ, ಹಾವುನಂಜಿನ ಬೀಜ ೨ ತೊಲೆ, ದೊಡ್ಡಮರದಚಕ್ಕೆ ೬ ತೊಲೆ, ಕಸ್ತೂರಿ ಅರಿಸಿನ ೪ ತೊಲೆ, ವಾಯುವಿಳಂಗ ೨ ತೊಲೆ ಇವು ಕುಟ್ಟಿ ಚೂರ್ಣ ಮಾಡಿ ಇವುಗಳನ್ನೆಲ್ಲಾ ಒಂದು ಪಾತ್ರೆಯಲ್ಲಿ ಹಾಕಿ ಪಕ್ವವಾಗಿ ಕಾಯಿಸಿ ಬಟ್ಟೆ

ಯಲ್ಲಿ ಶೋಧಿಸಿ ತೈಲವನ್ನು ತಲೆಗೆ ಹಾಕಿಕೊಂಡು ಬಿಸಿನೀರು ಸ್ನಾನಮಾಡುವುದರಿಂದ ತಲೆಶೂಲೆ, ತಲೆನೋವು ಗುಣವಾಗುವುದು.

೨೬. ಕರೀಲಕ್ಕಲಿಸೊಪ್ಪಿನ ರಸ ತೆಗೆದು ಬಲಪಾರ್ಶ್ವನೊಂದರೆ ಎಡಮೂಗಿನಲ್ಲಿಯೂ, ಎಡಪಾರ್ಶ್ವನೊಂದರೆ ಬಲಮೂಗಿನಲ್ಲಿಯೂ ೩-೪ ತೊಟ್ಟು ಬಿಡುವುದು ಈರೀತಿ ೩ ದಿನ ಮಾಡಿದರೆ ಅರತಲೆನೋವು ಗುಣವಾಗುವುದು.

೨೭. ಜಾಪತ್ರೆ ಕಾಲುತೊಲೆ, ಕುಂಕುಮಕೇಸರಿ ಕಾಲುತೊಲೆ, ತುಂಗೇಗಡ್ಡೆ ಕಾಲುತೊಲೆ, ಕರೇಶಾಮಂತಿಗೆ ಹೂವಿನ ರಸ ॥ ತೊಲೆ, ಬಾದಾಮಿ ಪೊಪ್ಪು ೧ ತೊಲೆ, ಹಸುವಿನತುಪ್ಪ ೪ ತೊಲೆ, ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಅರೆಯುವ ದಿನಸುಗಳನ್ನು ಅರೆದು ಬಾಂಡ್ಲಿಯಲ್ಲಿ ಹಾಕಿ ಕಾಯಿಸಿ ಒಟ್ಟೆಯಲ್ಲಿ ಶೋಧಿಸಿ ಮೂಗಿಗೆ ೩-೪ ತೊಟ್ಟು ೨ ಮೂಗಿಗೂ ಹಾಕುವುದರಿಂದ ಅರತಲೆನೋವು ಗುಣವಾಗುವುದು.

೨೮. ಕರೇಜೀರಿಗೆ ೧ ತೊಲೆ, ಗಜ್ಜೀಕಾಯಿ ಪೊಪ್ಪು ೧ ತೊಲೆ, ಕರೇಶಾಮಂತಿಗೆ ಹೂವು ೪ ತೊಲೆ, ಹಿಂಗು ಕಾಲುತೊಲೆ, ಗೋರೋಜನ ೧ ಆಣೆತೂಕ, ತುಂಗೇಗಡ್ಡೆ ೧ ತೊಲೆ, ಬೇವಿನ ಎಣ್ಣೆ ೧॥ ಶೇರು, ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಅರೆಯುವ ದಿನಸುಗಳನ್ನು ಅರೆದು ಬಾಂಡ್ಲಿಯಲ್ಲಿ ಹಾಕಿ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಈ ತೈಲವನ್ನು ತಲೇನೋವು ಇರುವ ಸ್ಥಳದಲ್ಲಿ ಲೇಪಿಸಿ ಬಿಸಿನೀರು ಸ್ನಾನಮಾಡುವುದು. ಈರೀತಿ ೯ ದಿವಸ ಸ್ನಾನಮಾಡಿದರೆ ಅರತಲೇ ನೋವು ಗುಣವಾಗುವುದು.

---

# ಐವತ್ತೊಂದನೆಯ ಅಧ್ಯಾಯ.

## ಕರ್ಣರೋಗ—ಔಷಧಗಳು.

### ಕರ್ಣರೋಗ ಲಕ್ಷಣ.

ಕರ್ಣ (ಕಿವಿ) ಗಳಲ್ಲಿ ಉಂಟಾಗುವ ರೋಗಗಳಲ್ಲಿ ವಾತಜ, ಪಿತ್ತಜ, ಶ್ಲೇಷ್ಮಜ, ರಕ್ತಜ, ಸನ್ನಿಪಾತಜ, ವಿದ್ರಧಿ, ಕರ್ಣಶೋಧ, ಅರ್ಬುಧ, ಪೂತಿಕರ್ಣ, ಕರ್ಣಾರ್ಶಃ, ಕರ್ಣಹಲ್ಲಿಕ, ಬಾಧಿರ್ಯ, ತಂತ್ರಿಕ, ಕಂಡು, ಸಷ್ಕಲಿ, ಕ್ರಿಮಿಕರ್ಣ, ಕರ್ಣನಾದ, ಪ್ರತೀನಾಹ ಎಂಬ ಭೇದಗಳಿಂದ ಹದಿನೆಂಟು ವಿಧವಾಗಿರುವುದು.

ವಾತಜ ಕರ್ಣರೋಗದಲ್ಲಿ:—ಕಿವಿಗಳಲ್ಲಿ ಕಾರಣವಿಲ್ಲದೆಯೇ ಧ್ವನಿ ಕೇಳಿಬರುವಿಕೆ, ಅಧಿಕವಾದ ಥಳುಕು, ಕಿವಿಗಳಲ್ಲಿ ಮಲವು ಶುಷ್ಕಿಸಿರುವಿಕೆ, ಸ್ವಲ್ಪವಾದ ಸ್ರಾವ ಉಂಟಾಗಿರುವಿಕೆ, ಈ ಲಕ್ಷಣಗಳಿರುವುವು.

ಪಿತ್ಥಜ ಕರ್ಣರೋಗದಲ್ಲಿ:—ಕಿವಿಯಲ್ಲಿರುವ ಊತವು ಕೆಂಪಗಿರುವಿಕೆ, ಒಡೆಯುವಿಕೆ, ಅಧಿಕವಾದ ಉರಿ, ದುರ್ಗಂಧದಿಂದೊಡಗೂಡಿ ಹಳದಿಯಾದ ಕೀವು ಸುರಿಯುವಿಕೆ ಈ ಲಕ್ಷಣಗಳಿರುವುವು.

ಶ್ಲೇಷ್ಮಜ ಕರ್ಣರೋಗದಲ್ಲಿ:—ಕಿವಿಗಳು ವಿರುದ್ಧವಾಗಿ ಕೇಳಿಸುವಿಕೆ, ತುರಿಷು, ಕಠಿಣವಾದ ಊತ, ಸ್ನಿಗ್ಧವಾಗಿ ಬೆಳ್ಳಗಿರುವ ಕೀವು ಬರುವಿಕೆ, ಬಾಧೆ ಸ್ವಲ್ಪವಾಗಿರುವಿಕೆ ಈ ಲಕ್ಷಣಗಳಿರುವುವು.

ರಕ್ತಜ ಕರ್ಣರೋಗದಲ್ಲಿ:—ಪಿತ್ಥಜ ಕರ್ಣರೋಗದ ಲಕ್ಷಣಗಳಿದ್ದು ರಕ್ತವು ಸ್ರವಿಸುತ್ತಿರುವುದು.

ಸನ್ನಿಪಾತ ಕರ್ಣರೋಗದಲ್ಲಿ:—ವಾತ ಪಿತ್ಥ, ಶ್ಲೇಷ್ಮಗಳ ಲಕ್ಷಣ ಗಳೆಲ್ಲವೂ ಕಂಡುಬರುವುದು.

ಕರ್ಣವಿದ್ರಧಿರೋಗದಲ್ಲಿ:—ಕಿವಿಗಳಲ್ಲಿ ಅಭಿಘಾತಾದಿಗಳಿಂದ ವಿದ್ರಧಿ ಹುಟ್ಟಿ ರಕ್ತವರ್ಣವಾಗಿ ಸ್ರಾವವುಂಟಾಗುವುದು.

ಕರ್ಣಶೋಥರೋಗದಲ್ಲಿ:—ವಾತಾದಿ ದೋಷಗಳಿಂದ ಕಿವಿಗಳಲ್ಲಿ ಊತವು ಮಾತ್ರ ಹುಟ್ಟುವುದು.

ಅರ್ಬುದಕರ್ಣರೋಗದಲ್ಲಿ:-ವಾತಾದಿ ದೋಷಗಳಿಂದ ಪ್ರತ್ಯೇಕ ಪ್ರತ್ಯೇಕ ವಾಗಿ ಕಿವಿಗಳಲ್ಲಿ ಅರ್ಬುದವು ಜನಿಸಿ ಮುಖರೋಗದಲ್ಲಿ ಹೇಳಲ್ಪಟ್ಟ ಲಕ್ಷಣಗಳುಂ ಟಾಗಿರುವುದು

ಪೂತಿಕರ್ಣರೋಗದಲ್ಲಿ:—ಕಿವಿಗಳ ರಂಧ್ರಗಳಲ್ಲಿರುವ ಶ್ಲೇಷ್ಮವು ಪಿತ್ಥದ ತೇಜಸ್ಸಿನಿಂದ ತಪಿಸಲ್ಪಟ್ಟು ನೋವುಂಟಾಗಿಯಾಗಲಿ, ನೋವಿಲ್ಲದೆಯಾಗಲಿ ಅಧಿಕ ಗಟ್ಟಿಯಾಗಿರುವ ದುರ್ಗಂಧದಿಂದ ಕೂಡಿ ಕೀವು ಸೋರುವುದು.

ಕರ್ಣಾರ್ಶರೋಗದಲ್ಲಿ:—ವಾತಾದಿದೋಷ ಪ್ರಕೋಪದಿಂದ ಕಿವಿಗಳಲ್ಲಿ ಮಾಂಸಾಂಕುರಗಳು ಹುಟ್ಟಿ ಶೂಲೆ,ಉರಿ,ತುರಿ, ಸುಸ್ರಾವ ಇವುಗಳುಂಟಾಗುವುದು.

ಕರ್ಣಹಲ್ಲಿಕರೋಗದಲ್ಲಿ:—ತೊಣಚಿ, ಜರಿಗಳು ಮೊದಲಾದುವು ಕಿವಿಯ ರಂಧ್ರಗಳಲ್ಲಿ ಪ್ರವೇಶಿಸಿದರೆ ಮನೋವ್ಯಾಕುಲತೆ, ಅತಿನೋವುಂಟಾಗುವುದು. ಇಂತಹ ಕ್ರಿಮಿಗಳು ಕಿವಿಗಳಲ್ಲಿ ಚಲಿಸುವಾಗ ಥಳುಕು, ಕಿವಿಯಲ್ಲಿ ಕೆರದಂತಾಗು ವಿಕೆ, ತೀವ್ರವಾದ ನೋವೂ ಸಂಭವಿಸುವುದು.

ಬಾಧಿರ್ಯ ಕರ್ಣರೋಗದಲ್ಲಿ:—ಕೇವಲ ವಾತವಾಗಲಿ, ಶ್ಲೇಷ್ಮದಿಂದ ಕೂಡಿದ ವಾತವಾಗಲಿ ಪ್ರಕೋಪವನ್ನು ಹೊಂದಿ ಕಿವಿಗಳಲ್ಲಿ ಶಬ್ದವಹ ಸ್ರೋತಸ್ಸು ಗಳನ್ನು ಆವರಿಸಿ ಕಿವಿ ಕೇಳಿಸದಿರುವುದು.

ತಂತ್ರಿಕ ಕರ್ಣರೋಗದಲ್ಲಿ:—ವಾತವು ಪ್ರಕುಪಿತವಾಗಿ ಕಫ, ರಕ್ತ, ಪಿತ್ಥಗಳಂ ಕಲೆತು ವೇಣುನಾದ (ಬಿದುರು ಮೆಳೆಯ ಶಬ್ದ)ಕ್ಕೆ ಸಮಾನವಾದ ಧ್ವನಿಯನ್ನು ಕಿವಿಗಳಲ್ಲುಂಟುಮಾಡುವುದು.

ಕರ್ಣಕಂಡುವಿನಲ್ಲಿ :—ಕಿವಿಗಳಲ್ಲಿ ತುರಿಸುಂಟಾಗುವುದು.

ಕರ್ಣಶುಷ್ಕಲಿರೋಗದಲ್ಲಿ :—ಶಿರಸ್ಸಿನಲ್ಲಭಿಘಾತವುಂಟಾಗುವಿಕೆ, ಜಲದಲ್ಲಿ ಮುಳುಗುವಿಕೆ, ವಿದ್ರಧಿಹುಟ್ಟಿ ಒಡೆಯುವಿಕೆ ಈ ಕಾರಣಗಳಿಂದ ಕರ್ಣವು ವಾತ ಪೀಡಿತವಾಗಿ ಕೀವನ್ನು ಸುರಿಸುವುದು.

ಕೃಮಿಕರ್ಣದಲ್ಲಿ :—ಕಿವಿಯಲ್ಲಿರುವ ಮಾಂಸವು, ರಕ್ತವು ಹಳಸಿ ಕ್ರಿಮಿಗಳು ಹುಟ್ಟಿ ಅನೇಕ ವಿಧಗಳಾದ ನೋವುಗಳನ್ನುಂಟುಮಾಡುವುದು.

ಕರ್ಣನಾದದಲ್ಲಿ :—ವಾತವು ಪ್ರಕುಪಿತವಾಗಿ ಕಿವಿಯ ರಂಧ್ರಗಳನ್ನು ಸೇರಿ ಭೇರಿ, ಮೃದಂಗ, ಶಂಖ ಮೊದಲಾದವುಗಳ ಶಬ್ದದಂತೆ ನಾನಾ ವಿಧವಾದ ಧ್ವನಿಯು ಕೇಳಬರುವುದು.

ಪ್ರತೀನಾಹ ಕರ್ಣರೋಗದಲ್ಲಿ :—ವಾತವು ಕಫದಿಂದೊಡಗೂಡಿ ಕಿವಿಗಳಲ್ಲಿ ತುರಿಯನ್ನುಂಟುಮಾಡುವುದು. ಪಿತ್ತೋಷ್ಣದಿಂದ ಕಫವು ಶೋಷಿಸಲ್ಪಟ್ಟು ಕಿವಿಗಳಲ್ಲಿ ಕರ್ಣಗೂಢವೆಂಬ ವ್ಯಾಧಿಯನ್ನುಂಟುಮಾಡುವುದು. ಆ ಮಲವು ಕರಗಿ ನಾಸಾರಂಧ್ರವನ್ನು ಮುಖವನ್ನು ಹೊಂದಿದಾಗ ಕಿವಿಗಳಲ್ಲಿ ಪ್ರತಿಧ್ವನಿಯುಂಟಾಗುವುದು. ಶಿರಸ್ಸಿನಲ್ಲಿ ಅರ್ಧಪಾಲು ಬಾಧೆಯುಂಟಾಗುವುದು.

## ಕರ್ಣಶೂಲೆ ರೋಗದಲ್ಲಿ ಅಸಾಧ್ಯ ಲಕ್ಷಣ.

ಮೂರ್ಛೆ, ದಾಹ, ಜ್ವರ, ಕೆಮ್ಮು, ಬಳಲಿಕೆ, ವಾಂತಿಗಳಿದ್ದರೆ ಅಸಾಧ್ಯವು.

## ಕರ್ಣಪಾಲೀ ರೋಗ ಲಕ್ಷಣ.

ಕರ್ಣಪಾಲೀ (ಕಿವಿತಟ್ಟು) ಗಳಲ್ಲಿ ಹುಟ್ಟುವ ರೋಗಗಳು ಉತ್ಪಾತ, ಪಾಲಿಶೋಷ, ವಿದಾರಿ, ದುಃಖವರ್ದನ. ಪರಿಪೋಟ, ಲೇಹಿ, ಪಿಪ್ಪಲಿ ಎಂಬ ಏಳು ಭೇದಗಳುಂಟಾಗಿರುವುದು. ಭಾರವಾದ ಆಭರಣಗಳನ್ನಿಡುವುದರಿಂದಲೂ ಹೊಡೆಯುವುದರಿಂದಲೂ, ಅಧಿಕವಾಗಿ ಉಜ್ಜುವುದರಿಂದಲೂ, ಕಣ್ಣುಗಳಲ್ಲಿ ಉರಿಯುಂಟಾಗಿ ಹುಣ್ಣಾಗಿರುವುದು. ಇದು ಉತ್ಪಾತವೆನ್ನಲ್ಪಡುವುದು, ಇದು ರಕ್ತಪಿತ್ಥದಿಂದ ಹುಟ್ಟುವುದು.

ವಾತಪ್ರಕೋಪದಿಂದ ಕಿವಿತಟ್ಟುಗಳು ಶೋಷಿಸಿ ಸುರುಟಿಕೊಂಡಿದ್ದರೆ ಪಾಲಿಶೋಷವೆನ್ನಲ್ಪಡುವುದು.

ಕರ್ಣಪಾಲಿಗಳು ಒಡೆದು ತುರಿಯುಂಟಾಗಿ ಸ್ರವಿಸುತ್ತಿದ್ದರೆ ವಿದಾರಿಯೆನ್ನಲ್ಪಡುವುದು.

ಕಿವಿಗಳನ್ನು ಬಲಾತ್ಕಾರವಾಗಿ ಬೆಳಸಿದ್ದಾದರೆ ವಾತವು ಪ್ರಕುಪಿತವಾಗಿ ಕಫದೊಡಗೂಡಿ ಸ್ತಬ್ಧವಾಗಿ ನೋವಿಲ್ಲದ ತುರಿಯಿಂದ ಕೂಡಿದ ಊತವನ್ನು ಹುಟ್ಟಿಸುವುದು. ಇದು ಪಿಪ್ಪಲಿಯನ್ನಲ್ಪಡುವುದು.

ಕಿವಿಗಳನ್ನು ವಿರುದ್ಧ ಸ್ಥಳಗಳಲ್ಲಿ ಚುಚ್ಚುವುದರಿಂದ ತುರಿಯೂ ಉರಿಯೂ ಉಳ್ಳ ಊತವು ಹುಟ್ಟುವುದು. ಇದು ದುಃಖವರ್ಧನವೆನ್ನಲ್ಪಡುವುದು.

ಶರೀರವು ಸುಕುಮಾರವಾಗಿರುವುದರಿಂದ ಚುಚ್ಚಿದ ಕಿವಿಗಳನ್ನು ಬೆಳೆಸದೆ ಬಹಳಕಾಲವಿದ್ದು ನಂತರ ಶೀಘ್ರವಾಗಿ ಬೆಳೆಸುವುದರಿಂದ ಕಿವಿಯ ತಟ್ಟುಗಳು ಒಡೆದು ಕೃಷ್ಣವರ್ಣವಾಗಿಯೂ ಅರುಣವರ್ಣವಾಗಿಯೂ ಉಳ್ಳ ಊತವನ್ನು ಉಂಟುಮಾಡುವುದು. ಇದು ಪರಿಪೋಟವೆನ್ನಲ್ಪಡುವುದು.

ಕರ್ಣಪಾಲಿಯಲ್ಲಿ ಕಫವು ರಕ್ತವೃದ್ಧಿಹೊಂದಿ ತುರಿಯೂ, ಉರಿಯೂ ನೋವೂ ಕೂಡಿ ಸಾಸುವೆಯಂತಹ ಹೊಕ್ಕುಗಳೆದ್ದು ಕಿವಿಗಳಲ್ಲೆಲ್ಲಾ ವ್ಯಾಪಿಸುವುದು ಇದು ಕಿವಿಯಲ್ಲಿ ವ್ಯಾಪಿಸಿ ಮಾಂಸವನ್ನು ತಿನ್ನುವುವು. ಇದು ಪರಿಲೇಹಿಯನ್ನಲ್ಪಡುವುದು.

## ಕರ್ಣರೋಗಕ್ಕೆ ಚಿಕಿತ್ಸೆಗಳು.

೧. ಗುಳ್ಳೆ ಶಂಖದಲ್ಲಿರುವ ಮಾಂಸ ೧ ತೊಲೆ, ಒಳ್ಳೆಣ್ಣೆ ೩ ತೊಲೆ ಇವುಗಳನ್ನು ಕಾಯಿಸಿ ಶೋಧಿಸಿ ತಣ್ಣಗಾದಮೇಲೆ ೩-೪ ತೊಟ್ಟು ಕಿವಿಗೆ ಬಿಡಲು ಕಿವಿಯಲ್ಲಿರುವ ಹುಣ್ಣು, ಕೀವು ಸುರಿಯುವುದು ಗುಣವಾಗುವುದು.

೨. ಹೊಟ್ಟುಸುಲಿದ ಬೆಳ್ಳುಳ್ಳಿ ೧ ತೊಲೆ ಚೆನ್ನಾಗಿ ಅರೆದು ಮೇಕೇಮೂತ್ರ ಅರಪಾವು ಇವೆರಡು ಕಾಯಿಸಿ ಶೋಧಿಸಿಕೊಂಡು ತಣ್ಣಗಾದಮೇಲೆ ಕಿವಿಗೆ ೩-೪ ತೊಟ್ಟು ೨-೩ ದಿವಸ ಹಾಕಿದರೆ ಕರ್ಣವಾಯು ಗುಣವಾಗುವುದು.

೩. ಕೆಂಪುಜಾಜೀಸೊಪ್ಪಿನ ಚಿಗರಿನ ರಸ ೧ ತೊಲೆ, ಹಿಂಗು ಕಾಲುತೊಲೆ, ಒಳ್ಳೆಣ್ಣೆ ೪ ತೊಲೆ ಇವುಗಳನ್ನು ಕಾಯಿಸಿ ಶೋಧಿಸಿಕೊಂಡು ತಣ್ಣಗಾದಮೇಲೆ ಕಿವಿಗೆ ೩-೪ ತೊಟ್ಟು ಹಾಕುವುದರಿಂದ ಕಿವಿಯಲ್ಲಿ ಕೀವು ಸುರಿಯುವುದು ಗುಣವಾಗುವುದು.

೪. ತೊಟ್ಲೆಸೊಪ್ಪು ಕುಟ್ಟಿ ರಸತೆಗೆದು ಕಿವಿಯಲ್ಲಿ ೪-೫ ತೊಟ್ಟು ಹಾಕಿದರೆ ಕಿವಿಯಲ್ಲಿರುವ ತೊಣಚಿ ಬಿದ್ದುಹೋಗುವುದು.

೫. ನಿರ್ಗುಂಡಿ ತೈಲ:—ಲಕ್ಕಲಿಸೊಪ್ಪಿನ ರಸ ೧ ಪಾವು, ಜಾಜೀಸೊಪ್ಪಿನ ರಸ ೧ ಪಾವು, ಹಣ್ಣುಯಕ್ಕದೆಲೆ ರಸ ೧ ಪಾವು, ಹೊಟ್ಟುತೆಗೆದಬೆಳ್ಳುಳ್ಳಿ ರಸ ೧ ಪಾವು, ಬಾಳೇಪಟ್ಟೆ ರಸ ೧ ಪಾವು, ನುಗ್ಗೇಸೊಪ್ಪಿನ ರಸ ೧ ಪಾವು, ಬಿಳೇ ಉಪ್ಪೆಸಮೂಲದ ರಸ ೧ ಪಾವು, ತುಳಸೀಸೊಪ್ಪಿನ ರಸ ೧ ಪಾವು, ಕೇದಿಗೆ ಮೊಳೆ ರಸ ೧ ಪಾವು, ತಾಟಪಟ್ಟೇ ರಸ ೧ ಪಾವು, ಹಸೀಶುಂಠೀ ರಸ ೧ ಪಾವು, ಹಾಗಲಸೊಪ್ಪಿನ ರಸ ೧ ಪಾವು, ಹಸೀ ಅರಿಸಿನದ ರಸ ೧ ಪಾವು, ವೀಳೆದೆಲೆ ರಸ ೧ ಪಾವು, ಗರುಗದಸೊಪ್ಪಿನ ರಸ ೧ ಪಾವು, ಹಸುವಿನಹಾಲು ೪ ಶೇರು, ಒಳ್ಳೆಣ್ಣೆ ೮ ಶೇರು, ಇದಕ್ಕೆ ಕಲ್ಕದ್ರವ್ಯ:—ಲವಂಗಪತ್ರೆ ೧ ತೊಲೆ, ದುಂಪರಾಸ್ಮೆ ೧ ತೊಲೆ, ಸಣ್ಣರಾಸ್ಮೆ ೧ ತೊಲೆ, ತುಪ್ಪದದೇವದಾರು ೧ ತೊಲೆ,

ವಾಯುವಿಳಂಗ ೧ ತೊಲೆ, ಅರಿಸಿನ ೧ ತೊಲೆ, ಅತಿಮಧುರ ॥ ತೊಲೆ, ಚಂಗಲಕೋಷ್ಠ ೧ ತೊಲೆ, ಚಿತ್ರಮೂಲ ॥ ತೊಲೆ, ಶುಂಠಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಮೋಡಿ ॥ ತೊಲೆ, ಬಜೆ ೨ ತೊಲೆ, ಹಿಂಗು ॥ ತೊಲೆ, ಸಾಸುವೆ ॥ ತೊಲೆ, ಪುನಗುಚೆಟ್ಟು ॥ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಎಲ್ಲವನ್ನೂ ಒಂದು ಪಾತ್ರೆಯಲ್ಲಿ ಹಾಕಿ ಪಕ್ವವಾಗಿ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡು ಧಾನ್ಯಪುಟದಲ್ಲಿ ೧೫ ದಿನ ಇಟ್ಟು ತೆಗೆದುಕೊಳ್ಳುವುದು. ಈ ತೈಲ ತಲೆಗೆ ಹಾಕಿಕೊಳ್ಳುವುದು, ಕಿವಿಗೂ ಹಾಕುವುದು, ಮೈಗೂ ಲೇಪಿಸುವುದು. ೩ ದಿನಕ್ಕೊಂದಾವರ್ತಿ ತಲೆಗೆ ಹಾಕಿಕೊಂಡು ಇಪ್ಪೇಹಿಂಡಿಯಿಂದ ಉಜ್ಜಿ ಬಿಸಿನೀರು ಸ್ನಾನಮಾಡುವುದರಿಂದ ನಾನಾವಿಧ ಕಿವುಡು, ಸಕಲವಿಧವಾದ ಶಿರೋರೋಗ, ವಿವಿಧ ಪೀನಸ, ಶರೀರದಲ್ಲಿರುವ ವಾಯು ಗುಣವಾಗುವುದು.

೬. ಮುಲ್ಲಂಗಿಗಡ್ಡೆ ರಸ ಕಾಲುತೊಲೆ, ಹೊಟ್ಟುತೆಗೆದ ಬೆಳ್ಳುಳ್ಳಿ ರಸ ಕಾಲುತೊಲೆ, ಮೇಕೆಮೂತ್ರ ೧ ತೊಲೆ ಇವುಗಳನ್ನು ಸುಮಾರಾಗಿ ಬೆಚ್ಚಗೆ ಮಾಡಿ ಕಿವಿಯಲ್ಲಿ ೨-೩ ತೊಟ್ಟು ಹಾಕಲು ಕಿವಿನೋವು ಗುಣವಾಗುವುದು.

೭. ರಸಸಿಂಧೂರ ಕಾಲುತೊಲೆ, ಮೇಕೆಮೂತ್ರ ೧ ತೊಲೆ ಇವುಗಳನ್ನು ಚೆನ್ನಾಗಿ ಅರೆದು ಕಿವಿಯಲ್ಲಿ ೩-೪ ತೊಟ್ಟು ಹಾಕುವುದರಿಂದ ಸರ್ವಶೂಲೆ, ಕೀವು, ರಕ್ತ ಸುರಿಯುವುದು ಗುಣವಾಗುವುದು.

೮. ತುಂಗಡಿಸೊಪ್ಪು ತಂದು ಕುಟ್ಟಿ ಬಟ್ಟೆಯಲ್ಲಿ ಶೋಧಿಸಿಕೊಂಡು ಕಿವಿಯಲ್ಲಿ ೪-೫ ತೊಟ್ಟು ಹಾಕಿದರೆ ಕಿವಿಯಲ್ಲಿರುವ ತೊಣಚಿ ಸತ್ತುಹೋಗುವುದು.

೯. ಶುಂಠಿ ೧ ತೊಲೆ, ಸೈಂಧವಲವಣ ೧ ತೊಲೆ, ಭದ್ರಮುಸ್ತೆ ೧ ತೊಲೆ, ಹಿಪ್ಪಲಿ ೧ ತೊಲೆ, ಚಂಗಲಕೋಷ್ಠ ೧ ತೊಲೆ, ಬಜೆ ೧ ತೊಲೆ, ಹೊಟ್ಟುಸುಲಿದ ಬೆಳ್ಳುಳ್ಳಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣವನ್ನೂ, ಹಣ್ಣುಯಕ್ಕದ ಎಲೆ ರಸ ೧ ತೊಲೆ, ನೀರು ೧೬ ತೊಲೆ, ಒಳ್ಳೆಣ್ಣೆ ೧೬ ತೊಲೆ ಇವುಗಳನ್ನೂ ನೀರು ಇಂಗುವವರಿವಿಗೂ ಕಾಯಿಸಿ ತಣ್ಣಗಾದಮೇಲೆ ಕಿವಿಯಲ್ಲಿ ೪-೫ ತೊಟ್ಟು ಹಾಕುವುದು. ಇದರಿಂದ ಕಿವಿಯಹುಣ್ಣು, ತಿನಿಸು, ಕಿವುಡು, ಕರ್ಣಶೂಲೆ ಇವು ಗುಣವಾಗುವುದು.

೧೦. ಹಣ್ಣು ಎಕ್ಕದ ಎಲೆ ರಸ ೧ ಪಾವು, ಗರುಗದ ಸೊಪ್ಪಿನ ರಸ ೧ ಪಾವು, ಹೊಂಗೆ ಎಲೆ ರಸ ೧ ಪಾವು, ಒಳ್ಳೆಣ್ಣೆ ೧ ಸೇರು, ಶುಂಠಿ ೧ ತೊಲೆ, ಹಿಪ್ಪಲಿ ೧ ತೊಲೆ, ತುಂಗೇಗಡ್ಡೆ ೧ ತೊಲೆ, ಚಂಗಲಕೋಷ್ಠ ೧ ತೊಲೆ, ಬಜೆ ೧ ತೊಲೆ, ಹೊಟ್ಟುಸುಲಿದ ಬೆಳ್ಳುಳ್ಳಿ ೧ ತೊಲೆ, ಸೈಂಧವ ಲವಣ ೧ ತೊಲೆ ಇವುಗಳ ಚೂರ್ಣವನ್ನೂ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ತಣ್ಣಗಾದಮೇಲೆ ಕಿವಿಯಲ್ಲಿ

೪-೫ ತೊಟ್ಟು ಹಾಕುವುದರಿಂದ ಕಿವಿಯ ಹುಣ್ಣು, ತಿನಿಸು, ಕಿವುಡು, ಕರ್ನಶೂಲೆ ಇವು ಗುಣವಾಗುವುದು.

೧೧. ಉತ್ತರೇಣಿ ಸಮೂಲ ಸುಟ್ಟ ಬೂದಿ ನೀರಿನಲ್ಲಿ ನೆನೆಹಾಕಿ ಇಟ್ಟಿದ್ದು ಎರಡನೇ ದಿವಸ ತಿಳಿನೀರನ್ನು ತೆಗೆದುಕೊಂಡು ಅದಕ್ಕೆ ಸಮ ಒಳ್ಳೆಣ್ಣೆ ಹಾಕಿ ಕಾಯಿಸಿ ಶೋಧಿಸಿ ತಣ್ಣಗಾದ ಮೇಲೆ ಕಿವಿಗೆ ೪-೫ ತೊಟ್ಟು ಕಿವುಡು ಗುಣವಾಗುವವರಿವಿಗೂ ಹಾಕುತ್ತಾ ಬರುವುದು.

೧೨. ಕರೇ ಉಮ್ಮತ್ತಿಸೊಪ್ಪಿನ ರಸ ೧ ತೊಲೆ, ಹೊಟ್ಟುಸುಲಿದ ಬೆಳ್ಳುಳ್ಳಿ ರಸ ೧ ತೊಲೆ, ಒಳ್ಳೆಣ್ಣೆ ೪ ತೊಲೆ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಕಿವಿಗೆ ೪-೫ ತೊಟ್ಟು ಹಾಕಿದರೆ ತೊಣಚಿ ಸತ್ತು ಹೋಗುವುದು.

೧೩. ಶುಂಠಿ ೧ ತೊಲೆ, ಹಿಪ್ಪಲಿ ೧ ತೊಲೆ, ವಾಯುವಿಳಂಗ ೧ ತೊಲೆ, ತಪಸಿಬೇರು ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ಸೈಂಧವಲವಣ ೧ ತೊಲೆ, ಹೊಟ್ಟು ಸುಲಿದ ಬೆಳ್ಳುಳ್ಳಿ ೧ ತೊಲೆ, ಹಣ್ಣು ಎಕ್ಕದ ಎಲೆ ರಸ ೧ ತೊಲೆ, ಒಳ್ಳೆಣ್ಣೆ ೧೨ ತೊಲೆ, ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಚೂರ್ಣ ಮಾಡಿ ಅರೆಯುವ ದಿನಸುಗಳನ್ನು ಅರೆದು ಎಲ್ಲವನ್ನೂ ಕಾಯಿಸಿ ಶೋಧಿಸಿದ ತೈಲವನ್ನು ಕಿವಿಗೆ ೪-೫ ತೊಟ್ಟು ಬಿಡುವುದರಿಂದ ಸಮಸ್ತವಾದ ಕರ್ನರೋಗಗಳೂ ಗುಣವಾಗುವುವು.

೧೪. ಒಳ್ಳೆಣ್ಣೆ ೪॥ ತೊಲೆ, ಹೊಟ್ಟುಸುಲಿದ ಬೆಳ್ಳುಳ್ಳಿ ರಸ ॥ ತೊಲೆ, ತುಳಸಿಬೀಜ ೧ ತೊಲೆ, ಹಿಂಗು ಕಾಲುತೊಲೆ, ಪಟಿಕ ಕಾಲುತೊಲೆ, ಕರೀಜೀರಿಗೆ ಕಾಲುತೊಲೆ, ಬಲಮುರಿಕಾಯಿ ೧ ತೊಲೆ, ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಅರೆಯುವ ದಿನಸುಗಳನ್ನು ಅರೆದು ಎಲ್ಲವನ್ನೂ ಕಾಯಿಸಿ ಶೋಧಿಸಿಟ್ಟುಕೊಳ್ಳುವುದು. ಈ ತೈಲವನ್ನು ಕಿವಿಗೆ ೩-೪ ತೊಟ್ಟು ಬಿಡುವುದರಿಂದ ಕಿವಿಯಲ್ಲಿ ಕೀವು ಸುರಿಯುವುದು ಗುಣವಾಗುವುದು.

೧೫. ತುಳಸಿಸೊಪ್ಪಿನ ರಸ ೧ ತೊಲೆ, ಹಣ್ಣು ಎಕ್ಕದ ಎಲೆ ರಸ ೧ ತೊಲೆ, ಹಸೀಶುಂಠಿ ರಸ ೧ ತೊಲೆ, ನುಗ್ಗೆಬೇರಿನ ರಸ ೧ ತೊಲೆ, ಜಾಜೀಸೊಪ್ಪಿನ ರಸ ೧ ತೊಲೆ, ಹೊಟ್ಟುತೆಗೆದ ಬೆಳ್ಳುಳ್ಳಿಯ ರಸ ೧ ತೊಲೆ, ಒಳ್ಳೆಣ್ಣೆ ೧೨ ತೊಲೆ ಇವುಗಳನ್ನು ಕಾಯಿಸಿ ಶೋಧಿಸಿದ ತೈಲವನ್ನು ಕಿವಿಗೆ ೩-೪ ತೊಟ್ಟು ಬಿಡುವುದರಿಂದ ಕಿವಿಯ ಶಬ್ದ, ಕೀವು ಸುರಿಯುವದು, ಕಿವುಡು ಇವು ಗುಣವಾಗುವುದು.

೧೬. ಲಕ್ಕಲಿಸೊಪ್ಪಿನ ರಸ ೧ ತೊಲೆ, ಜಾಜೀಸೊಪ್ಪಿನ ರಸ ೧ ತೊಲೆ, ಹಣ್ಣು ಎಕ್ಕದ ಎಲೆ ರಸ ೧ ತೊಲೆ, ಗರುಗದಸೊಪ್ಪಿನ ರಸ ೧ ತೊಲೆ, ಹಸೀಶುಂಠಿ ರಸ ೧ ತೊಲೆ, ಒಳ್ಳೆಣ್ಣೆ ೧೦ ತೊಲೆ, ಇವುಗಳನ್ನು ಕಾಯಿಸಿ ಶೋಧಿಸಿದ ತೈಲ

ವನ್ನು ಕಿವಿಗೆ ೩-೪ ತೊಟ್ಟು ಬಿಡುವುದರಿಂದ ಕರ್ಣಶೂಲೆ, ಕಿವಿನೋವು, ಕಿವುಡು ಗುಣವಾಗುವುದು.

೧೭. ಒಳ್ಳೆಣ್ಣೆ ೪ ತೊಲೆ, ಕೆಂಪುಜಾಜೀಸೊಪ್ಪಿನಚಿಗುರು ರಸ ೧ ತೊಲೆ, ಹಿಂಗು ಕಾಲುತೊಲೆ ಇವುಗಳನ್ನು ಕಾಯಿಸಿ ಶೋಧಿಸಿ ಕಿವಿಗೆ ೩-೪ ತೊಟ್ಟು ಬಿಡುವುದರಿಂದ ಕಿವಿಯಲ್ಲಿ ಕೀವು ಸುರಿಯುವುದು ಗುಣವಾಗುವುದು.

೧೮. ಬೇವಿನಯಣ್ಣೆ ೧ ಪಾವು, ಹಾಲುವಾಣದಸೊಪ್ಪಿನ ರಸ ೧ ಪಾವು, ಹಿಂಗು ೧ ಆಣೆ ತೂಕ, ಬಲಮುರಿಕಾಯಿ ಕಾಲುತೊಲೆ, ಹುಲಿಚರ್ಮ ಕಾಲು ತೊಲೆ ತಂದು ಬೆಂಕಿ ಕೆಂಡದಮೇಲೆ ಹಾಕಿ ಬೆಚ್ಚಗೆಮಾಡಿ ಚೂರ್ಣಮಾಡಿ ಕೊಳ್ಳುವದು ಇವುಗಳನ್ನು ಪಕ್ವವಾಗಿ ಕಾಯಿಸಿ ಶೋಧಿಸಿ ಪ್ರತಿದಿನವೂ ಕಿವಿಗೆ ೨ ತೊಟ್ಟು ಬಿಡುವುದರಿಂದ ಕರ್ಣವಾಯು, ಕಿವುಡು ಗುಣವಾಗುವುದು.

೧೯. ಕವಡೆಯನ್ನು ಕುಟ್ಟಿ ಚೂರ್ಣಮಾಡಿ ಬಟ್ಟೆಯಲ್ಲಿ ಶೋಧಿಸಿ ಕಿವಿಯಲ್ಲಿ ಒಂದು ಚಿಟಿಕೆಯಷ್ಟುಹಾಕಿ ಅದರ ಮೇಲೆ ನಿಂಬೇಹಣ್ಣಿನ ರಸ ೨-೩ ತೊಟ್ಟು ಕಿವಿಯಲ್ಲಿ ಗುಳ್ಳೆ ಒಡೆಯುವವರಿವಿಗೂ ಹಾಕುವುದು.

೨೦. ಶುಂಠಿ ಕಾಲುತೊಲೆ, ಬಜೆ ಕಾಲುತೊಲೆ, ಸೈಂಧವಲವಣ ಕಾಲು ತೊಲೆ, ಚಂಗಲಕೋಷ್ಠ ಕಾಲುತೊಲೆ, ಬೆಳ್ಳುಳ್ಳಿ ಕಾಲುತೊಲೆ, ಕರೀ ಆಡಿನ ಮೂತ್ರ ಕಾಲುತೊಲೆ, ಹಣ್ಣು ಎಕ್ಕದ ಎಲೆ ರಸ ಕಾಲುತೊಲೆ, ಹಿಪ್ಪಲಿ ಕಾಲು ತೊಲೆ ಈ ದಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಒಳ್ಳೆಣ್ಣೆ ೧ ಪಾವು ಹಾಕಿ ಪಕ್ವವಾಗಿ ಕಾಯಿಸಿ ಶೋಧಿಸಿ ಕಿವಿಯಲ್ಲಿ ೩-೪ ತೊಟ್ಟುಬಿಡುತ್ತಾಬಂದರೆ ಕರ್ಣವಾಯು ಗುಣವಾಗುವದು.

೨೧. ವಜ್ರನೀಲಿಬೇರು ೧ ತೊಲೆ, ನಾರುಂಬೇಳಿಬೇರು ೧ ತೊಲೆ, ಗೋರೋಜನ ೧ ಆಣೆ ತೂಕ, ಕುಂಕುಮಕೇಸರಿ ೧ ಆಣೆ ತೂಕ, ವಾಯುವಿಳಂಗ ॥ ತೊಲೆ, ಹೊಟ್ಟು ತೆಗೆದ ಬೆಳ್ಳುಳ್ಳಿ ॥ ತೊಲೆ, ಶುಂಠಿ ॥ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ೮ ತೊಲೆ ಒಳ್ಳೆಣ್ಣೆ ಹಾಕಿ ಪಕ್ವವಾಗಿ ಕಾಯಿಸಿ ಶೋಧಿಸಿ ಕಿವಿಯಲ್ಲಿ ೩-೪ ತೊಟ್ಟು ಬಿಡುತ್ತಾಬಂದರೆ ಕರ್ಣವಾಯು ಗುಣವಾಗುವುದು.

---

## ಐವತ್ತೆರಡನೆಯ ಅಧ್ಯಾಯ.

---

## ನೇತ್ರರೋಗ—ಔಷಧಗಳು.

### ನೇತ್ರರೋಗ ಲಕ್ಷಣ.

ಕಣ್ಣಿನಲ್ಲಿ ಹುಟ್ಟುವ ನೇತ್ರರೋಗಗಳು ತೊಂಭತ್ತುನಾಲ್ಕು ವಿಧಗಳಾಗಿರುವುವು. ಅವುಗಳಲ್ಲಿ ಕಣ್ಣುರೆಪ್ಪೆಗಳಲ್ಲಿ ಹುಟ್ಟುವ ರೋಗಗಳು:—೧. ಕೃಚ್ಛ್ರೋ

ನ್ಮೀಲನ, ೨. ಪಕ್ಷ್ಮಶಾತ, ೩. ಕಫೋತ್ಕ್ಲಿಷ್ಟ, ೪. ಲೋಹಿತ, ೫. ಅರುಬ್ನಿಮೇಷ, ೬. ರಕ್ತೋತ್ಕ್ಲಿಷ್ಟ, ೭. ಕುಕೂನಕ, ೮. ಪಕ್ಷ್ಮಾರ್ಶ, ೯. ಪಕ್ಷ್ಮರೋಧ, ೧೦. ಪಿತ್ತೋತ್ಕ್ಲಿಷ್ಟ, ೧೧. ಪೋಥಕಿ, ೧೨. ಕ್ಲಿಷ್ಟವರ್ತ್ಮ, ೧೩. ಬಹುಳ, ೧೪. ಪಕ್ಷ್ಮೋತ್ಸಂಗ, ೧೫. ಅರ್ಬುದ, ೧೬. ಕುಂಬಿಕ, ೧೭. ಸಿಕತಾವರ್ತ್ಮ, ೧೮. ಲಗಣ, ೧೯. ಅಂಜನನಾಮಿಕ, ೨೦. ಕರ್ದಮ, ೨೧ ಶ್ಯಾವವರ್ತ್ಮ, ೨೨. ಬಿಸವರ್ತ್ಮ, ೨೩. ಅಲಜಿ, ೨೪. ಉತ್ಕ್ಲಿಷ್ಟವರ್ತ್ಮ ಎಂದು ಇಪ್ಪತ್ತುನಾಲ್ಕು ವಿಧಗಳು.

## ನೇತ್ರರೋಗ ವಿವರಣೆ.

ಇವುಗಳಲ್ಲಿ ವಾತಾದಿದೋಷ ಪ್ರಕೋಪದಿಂದ ಕಣ್ಣಿನ ರೆಪ್ಪೆಗಳು ಮಡಿಸಿಕೊಂಡು ಕಣ್ಣುಬಿಡುವುದಕ್ಕೆ ಆಗದಂತೆ ಮಾಡುವ ಲಕ್ಷಣವುಳ್ಳದ್ದು ಕೃಛ್ರೋನ್ಮೀಲನವೆನ್ನಲ್ಪಡುವುದು ಪಿತ್ಥಪ್ರಕೋಪವಾಗಿ ಕಣ್ಣುರೆಪ್ಪೆಗಳ ಕೂದಲು ಉದುರಿಹೋಗಿ ನವೆಯನ್ನು ಉರಿಯನ್ನು ಹುಟ್ಟಿಸುವುದೇ ಪಕ್ಷ್ಮಶಾತವೆನ್ನಲ್ಪಡುವುದು. ನೋವಿಲ್ಲದೆ ಕಣ್ಣುರೆಪ್ಪೆಗಳ ಒಳಭಾಗದಲ್ಲಿ ಹಸಿಯ ಬಾವು ಹುಟ್ಟಿದರೆ ಕಫೋತ್ಕ್ಲಿಷ್ಟವೆನ್ನಲ್ಪಡುವುದು. ರೆಪ್ಪೆಯ ಮಧ್ಯಭಾಗದಲ್ಲಿ ಕೆಂಪಾಗಿ ಮೃದುವಾದ ಮಾಂಸವು ಬೆಳೆದು ಶಸ್ತ್ರಚಿಕಿತ್ಸೆಮಾಡಿದರೂ ಮರಳಿ ಮರಳಿ ಬೆಳೆಯುತ್ತಿರುವುದು ಲೋಹಿತವೆನ್ನಲ್ಪಡುವುದು. ಪ್ರಕೋಪವಾದ ವಾತವು ರೆಪ್ಪೆಗಳ ಒಳಭಾಗವನ್ನೂ ಗುಡ್ಡೆಗಳ ಮಧ್ಯಭಾಗವನ್ನೂ ಆಶ್ರಯಿಸಿಕೊಂಡು ಶಿರೆಗಳನ್ನು ಹೊಂದಿ ಕಣ್ಣುರೆಪ್ಪೆಗಳನ್ನು ಪದೇಪದೆ ಬಡಿಯುತ್ತಿರುವಂತೆ ಮಾಡುವುದೇ ಅರುಬ್ನಿಮೇಷವು. ತ್ರಿದೋಷದಿಂದ ಕಠಿನವಾಗಿ ಕರ್ಕಶವಾಗಿರುವ ಹುಣ್ಣಿನಂತೆ ಮಾಂಸವು ರೆಪ್ಪೆಯ ಒಳಗಡೆ ಹುಟ್ಟಿ ವೇದನೆಯಿಲ್ಲದಿರುವುದು ರಕ್ತೋತ್ಕ್ಲಿಷ್ಟವೆನ್ನಲ್ಪಡುವುದು. ದೋಷಪ್ರಕೋಪದಿಂದ ರೆಪ್ಪೆಗಳಲ್ಲಿ ನವೆ, ತೀಟೆ, ಉರಿಯುಂಟಾಗಿ ನೀರು ಸೋರುತ್ತಿರುವುದಕ್ಕೆ ಕುಕೂನಕವೆಂದು ಹೆಸರು. ತ್ರಿದೋಷ ಪ್ರಕೋಪದಿಂದ ಕಣ್ಣುರೆಪ್ಪೆಯ ಒಳಗಡೆ ಸವತೇಬೀಜದಂತೆ ಆಕಾರವುಳ್ಳ ಸ್ವಲ್ಪವಾದ ವೇದನೆಯನ್ನು ಕೊಡುವ ಕಠಿನವಾಗಿ ಶ್ಲಕ್ಷ್ಣವಾಗಿರುವ ಬೊಕ್ಕೆಗಳು ಹುಟ್ಟಿದರೆ ಅದಕ್ಕೆ ಪಕ್ಷ್ಮಾರ್ಶವೆಂದು ಹೆಸರು ರೆಪ್ಪೆಯಲ್ಲಿ ಸ್ವಲ್ಪವಾಗಿ ನೋವು ನವೆಯುಂಟಾಗಿ ಕಣ್ಣುಗಳನ್ನು ಬಿಡುವುದಕ್ಕಾಗದಂತಿದ್ದರೆ ಅದಕ್ಕೆ ಪಕ್ಷ್ಮರೋಧವೆಂದು ಹೆಸರು. ವಾತ ಪ್ರಕೋಪದಿಂದ ರೆಪ್ಪೆಯ ಕೂದಲುಗಳು ಚದರಿಹೋಗಿ ಕಣ್ಣಿನೊಳಗೆ ಪ್ರವೇಶಿಸುವುದರಿಂದ ಕಣ್ಣಿನ ಕರಿಯಗುಡ್ಡೆ ಬಿಳಿಯಗುಡ್ಡೆಗಳು ಬಾತುಕೊಳ್ಳುವುವು ಇಂಥ ರೋಗಕ್ಕೆ ಪಿತ್ತೋತ್ಕ್ಲಿಷ್ಟವೆಂದು ಹೆಸರು. ರೆಪ್ಪೆಗಳಲ್ಲಿ ಹೆಚ್ಚಾಗಿ ಕೀವು ಸುರಿಯುತ್ತ ನವೆಯುಂಟಾಗಿ ಗಟ್ಟಿಯಾಗಿ ಕೆಂಪಗೆ ಸಾಸುವೆಯ ಆಕಾರದ ಹಾಗಿರುವ ಬೊಕ್ಕೆ

ಗಳು ಹುಟ್ಟಿದರೆ ಅದಕ್ಕೆ ಪೋಥಃ ಎಂದು ಹೆಸರು. ಕಣ್ಣಿನ ರೆಪ್ಪೆಯೊಳಗೆ ನೋವಿಲ್ಲದೆ ಹಸಿಯದಾಗಿ ಊದಿಕೊಂಡಿದ್ದರೆ ಅದಕ್ಕೆ ಶ್ಲಿಷ್ಟವರ್ತ್ಮವೆಂದು ಸಂಜ್ಞೆ. ಚರ್ಮದ ವರ್ಣಕ್ಕೆ ಸಮಾನವಾದ ಬಣ್ಣವುಳ್ಳದ್ದಾಗಿ ಕಠಿನವಾಗಿರುವ ಬೊಬ್ಬೆಗಳಿಂದ ರೆಪ್ಪೆಯು ವ್ಯಾಪಿಸಿಕೊಂಡಿದ್ದರೆ ಆದಕ್ಕೆ ಬಹುಳವರ್ತ್ಮವೆಂದು ಹೆಸರು. ಕಣ್ಣುರೆಪ್ಪೆಯ ಒಳಗಡೆ ಅಂತರ್ಭಾಗದಲ್ಲಿ ಮುಖವಾಗಿ ರಕ್ತವರ್ಣವಾಗಿರುವ ಎಡಭಾಗದಲ್ಲಿ ಉಬ್ಬಿಕೊಂಡಿರುವ ಬೊಬ್ಬೆಯುಂಟಾಗಿ ದಪ್ಪವಾಗಿ ನವೆಯುಂಟಾಗಿದ್ದರೆ ಅದಕ್ಕೆ ಪ್ರಕ್ಷ್ಮೋತ್ಸಂಗವೆಂದು ಹೆಸರು ತ್ರಿದೋಷ ಪ್ರಕೋಪದಿಂದ ವಿಷಮಯುವಾದ ಗಂಟೆನಂತೆ ಸ್ವಲ್ಪ ನೋವುಂಟಾಗಿ ರಕ್ತವರ್ಣವಾಗಿ ಊದಿಕೊಂಡಿದ್ದರೆ ಅದು ಅರ್ಬುದವೆನ್ನಲ್ಪಡುವುದು. ಸನ್ನಿಪಾತದಿಂದ ರೆಪ್ಪೆಗಳ ಕೊನೆಯಲ್ಲಿ ಜಾಪಾಳದ ಬೀಜದಂತೆ ಆಕಾರವುಳ್ಳ ಬೊಬ್ಬೆಗಳು ಹುಟ್ಟಿ ಒಡೆದು ಕೀವನ್ನು ಸ್ರವಿಸುವುದು, ಮತ್ತು ತನಗೆ ತಾನೆ ಮೇಲಕ್ಕೆ ಉಬ್ಬುವುದು ಈ ಲಕ್ಷಣವುಳ್ಳದ್ದಕ್ಕೆ ಕುಂಭೀಕವೆಂದು ಹೆಸರು. ಸನ್ನಿಪಾತದಿಂದ ಕರ್ಕಶವಾಗಿ ಕಠಿನವಾಗಿ ಸ್ಥೂಲವಾಗಿರುವ ಹುಣ್ಣು ರೆಪ್ಪೆಯಲ್ಲಿ ಹುಟ್ಟಿ ಸುತ್ತಲೂ ಸೂಕ್ಷ್ಮವಾದ ಹುಣ್ಣುಗಳಿಂದ ವ್ಯಾಪ್ತವಾಗಿದ್ದರೆ ಅದಕ್ಕೆ ಸಿಕತಾವರ್ತ್ಮವೆಂದು ಹೆಸರು. ಕಫ ಪ್ರಕೋಪದಿಂದ ಕಠಿನವಾಗಿ ಸ್ಥೂಲವಾಗಿರುವ ಬೊಕ್ಕೆ ಕಣ್ಣುರೆಪ್ಪೆಗಳಲ್ಲಿ ಹುಟ್ಟಿ ಬಾಧೆಯುಂಟಾಗದಿದ್ದರೆ ಅದಕ್ಕೆ ಲಗಣವೆಂದು ಹೆಸರು. ರಕ್ತ ಪ್ರಕೋಪದಿಂದ ಕಣ್ಣುರೆಪ್ಪೆಗಳಲ್ಲಿ ಉರಿಯೂ, ಇರಿತವೂ ಹುಟ್ಟಿ ಕೆಂಪಗೆ ಮೃದುವಾಗಿ ಸ್ವಲ್ಪ ವೇದನೆಯುಳ್ಳ ಬೊಕ್ಕೆ ಹುಟ್ಟಿದರೆ ಅದಕ್ಕೆ ಅಂಜನನಾಮಿಕವೆಂದು ಹೆಸರು. ಪಿತ್ಥ ಪ್ರಕೋಪದಿಂದ ರಕ್ತವು ಕೆಟ್ಟುಹೋಗಿ ಕಣ್ಣುರೆಪ್ಪೆಗಳಲ್ಲಿ ಬೊಬ್ಬೆಯುಂಟಾಗುವುದು ಇದಕ್ಕೆ ಕರ್ದಮವೆಂದು ಹೆಸರು. ತ್ರಿದೋಷದಿಂದ ರೆಪ್ಪೆಯ ಒಳಭಾಗವೂ ಹೊರಭಾಗವೂ ನೀಲವರ್ಣವುಳ್ಳದ್ದಾಗಿ ನೋವು ವೇದನೆ ಸಹಿತವಾಗಿದ್ದರೆ ಅದಕ್ಕೆ ಶಾಮವರ್ತ್ಮವೆಂದು ಹೆಸರು. ತ್ರಿದೋಷ ಪ್ರಕೋಪದಿಂದ ರೆಪ್ಪೆಯ ಹೊರಭಾಗದಲ್ಲಿ ಊದಿಕೊಂಡು ಒಳಗಡೆಗೆ ರಂಧ್ರವನ್ನುಂಟುಮಾಡುವುದು. ಆ ರಂಧ್ರವು ತಾವರೆದಂಟಿನ ರಂಧ್ರಗಳಲ್ಲಿ ನೀರು ಸೋರುವಂತೆ ನೀರನ್ನು ಸುರಿವುದು ಇದಕ್ಕೆ ಬಿಸವರ್ತ್ಮವೆಂದು ಹೆಸರು. ರೆಪ್ಪೆಗಳ ಮೇಲುಭಾಗ ಕೆಳಭಾಗಗಳೆರಡೂ ಒಂದೇಕಾಲದಲ್ಲಿ ಕಾರಣವಿಲ್ಲದೆ ಮೃದುವಾಗುವುದು. ಸ್ವಲ್ಪ ವೇದನೆಯುಳ್ಳದ್ದಾಗಿ ಕೆಂಪಗೆ ರಕ್ತವರ್ಣವುಳ್ಳುದಾಗಿದ್ದರೆ ಉತ್ಕ್ಲಿಷ್ಟವರ್ತ್ಮವೆಂದು ಹೆಸರು ಇವೆಲ್ಲ ವರ್ತ್ಮಗತ ರೋಗಗಳು.

## ನೇತ್ರಸಂಧಿ ರೋಗ ವಿವರಣೆ.

ಇನ್ನು ನೇತ್ರಸಂಧಿಯಲ್ಲಿ ಹುಟ್ಟುವ ರೋಗಗಳು:—೧. ಜಲಸ್ರಾವ, ೨. ಕಫ

ಸ್ರಾವ, ೩. ರಕ್ತಸ್ರಾವ, ೪. ಪರ್ವಣಿ, ೫. ಪೂಯಸ್ರಾವ, ೬. ಕ್ರಿಮಿಗ್ರಂಧಿ, ೭. ಉಪನಾಹ, ೮. ಅಲಜಿ, ೯. ಪೂಯಾಲಸವೆಂದು ಒಂಭತ್ತು ವಿಧ.

ಅವುಗಳ ವಿವರಣೆ ಹೇಗೆಂದರೆ :—ನೇತ್ರಗಳ ಸಂಧಿಯಿಂದ ಹಸುರಿಗಾಗಲಿ ನೀರಿನಹಾಗಾಗಲಿ ಉಷ್ಣವಾದನೀರು ಸೋರುತ್ತಿದ್ದರೆ ಅದು ಪಿತ್ಥಜನ್ಯವಾದ ಜಲಸ್ರಾವವೆನ್ನಲ್ಪಡುವುದು. ಕಣ್ಣುಗಳ ಸಂಧಿಯಲ್ಲಿ ಬೆಳ್ಳಗೆ ಶುದ್ಧವಾದ ಕೀವು ಚೆನ್ನಾಗಿ ಸುರಿಯುತ್ತಿದ್ದರೆ ಅದಕ್ಕೆ ಶ್ಲೇಷ್ಮಸ್ರಾವವೆಂದು ಹೆಸರು. ರಕ್ತಪ್ರಕೋಪದಿಂದ ನೇತ್ರ ಸಂಧಿಗಳಲ್ಲಿ ರಕ್ತವು ಸ್ರವಿಸುತ್ತಿದ್ದರೆ ಅದಕ್ಕೆ ರಕ್ತಸ್ರಾವವೆಂದು ಹೆಸರು. ರಕ್ತಪ್ರಕೋಪದಿಂದ ಕಣ್ಣುಗಳ ಬಿಳಿಯ ಮತ್ತು ಕರಿಯ ಗುಡ್ಡೆಗಳ ಸಂದುಗಳಲ್ಲಿ ಸೂಕ್ಷ್ಮವಾಗಿ ರಕ್ತವರ್ಣವುಳ್ಳದ್ದಾಗಿ ಗುಂಡಗಿರುವ ಬಾವು ಹುಟ್ಟಿ ಉರಿ ನೋವು ನವೆಗಳನ್ನು ಹುಟ್ಟಿಸಿದರೆ ಅದಕ್ಕೆ ಪರ್ವಣಿ ಎಂದು ಹೆಸರು. ಸನ್ನಿಪಾತದಿಂದ ಕಣ್ಣಿನ ಸಂದುಗಳಲ್ಲಿ ಹುಣ್ಣು ಹುಟ್ಟಿ ಕೀವು ಸೋರುತ್ತಿದ್ದರೆ ಅದಕ್ಕೆ ಪೂಯಸ್ರಾವವೆಂದು ಹೆಸರು. ಇದು ಅಸಾಧ್ಯಕರವಾದುದು. ವಾತಶ್ಲೇಷ್ಮ ಪ್ರಕೋಪದಿಂದ ಕಣ್ಣಿನ ಬೊಂಬೆಗೂ ಕರಿಯ ಗುಡ್ಡೆಗೂ ಮಧ್ಯೆ ಇರುವ ಸಂಧಿಯಲ್ಲಿ ದೊಡ್ಡ ಆಕಾರವಾಗಿ ಸ್ವಲ್ಪವಾದ ಬೊಕ್ಕೆ ಹುಟ್ಟಿ ಜೆಚ್ಚ ನವೆಯುಂಟಾಗಿ ಅಲ್ಪವೇದನೆಯುಳ್ಳ ಗ್ರಂಧಿಯುಂಟಾಗುವುದು. ಇದಕ್ಕೆ ಉಪನಾಹವೆಂದು ಹೆಸರು. ಸನ್ನಿಪಾತದಿಂದ ಕಣ್ಣು ರೆಪ್ಪೆಗಳ ಒಳಗಡೆಗೂ ಬಿಳಿಯಗುಡ್ಡೆಗೂ ಮಧ್ಯೆ ಇರುವ ಸಂಧಿಯಲ್ಲಿ ಕ್ರಿಮಿಗಳು ಹುಳುಗಳು ಹುಟ್ಟಿ ರೆಪ್ಪೆಯ ಒಳಭಾಗಕ್ಕೆ ವ್ಯಾಪಿಸಿ ನವೆಯನ್ನುಂಟುಮಾಡಿ ದಿನೇದಿನೇ ಕಣ್ಣನ್ನು ತಿನ್ನುತ್ತ ಬರುವುದು. ಇದಕ್ಕೆ ಕ್ರಿಮಿಗ್ರಂಧಿಯೆಂದು ಹೆಸರು. ಇದು ಅಸಾಧ್ಯವಾದುದು. ನೇತ್ರ ಸಂಧಿಗಳಲ್ಲಿ ಮೇಲೆ ಹೇಳಿದ ಪರ್ವಣಿ ಲಕ್ಷಣಗಳಿಂದ ಕೂಡಿ, ಬೊಬ್ಬೆಯುಂಟಾದರೆ ಅದಕ್ಕೆ ಅಲಜಿ ಎಂದು ಹೆಸರು. ಸನ್ನಿಪಾತದಿಂದ ನಾಸಿಕಾ ಮೂಲಕ್ಕೆ ಸಮೀಪವಾಗಿರುವ ನೇತ್ರ ಸಂಧಿಯಲ್ಲಿ ಬಾವು ಹುಟ್ಟಿ ಪರಿಪಕ್ವವಾಗಿ ಇರಿತದಿಂದ ಕೂಡಿದ ದುರ್ಗಂಧಯುಕ್ತವಾದ ಕೀವು ಸುರಿಯುತ್ತಿದ್ದರೆ ಅದಕ್ಕೆ ಪೂಯಾಲಸವೆಂದು ಹೆಸರು. ಇದು ಸನ್ನಿಪಾತ ಜನ್ಯವಾದರೂ ಸಾಧ್ಯಕರವಾದುದು. ಇವೆಲ್ಲ ನೇತ್ರ ಸಂಧಿಗತರೋಗಗಳು.

## ಕಣ್ಣಿನ ಬಿಳಿಯ ಗುಡ್ಡೆಯಲ್ಲಿ ಹುಟ್ಟುವ ರೋಗಗಳು.

ಕಣ್ಣಿನ ಬಿಳಿಯ ಗುಡ್ಡೆಯಲ್ಲಿ ಹುಟ್ಟುವ ರೋಗಗಳು:—೧. ಸಿರೋತ್ಪಾತ, ೨. ಸಿರಾಹರ್ಷ, ೩. ಸಿರಾಜಾಲ, ೪. ಶುಕ್ತಿಕ, ೫. ಶುಕ್ಲಾರ್ಮ, ೬. ಅಧಿಮಾಂಸಾರ್ಮ, ೭. ಪ್ರಸ್ತಾರ್ವರ್ಮ, ೮. ಪಿಷ್ಟಕ, ೯. ಸಿರಾಜಪಿಟಕ, ೧೦. ಕಫ ಗ್ರಂಧಿಕ, ೧೧. ಅರ್ಜುನ, ೧೨. ಸ್ನಾಯ್ವರ್ಮ, ೧೩. ಶೋಣಿತಾರ್ಮ ಎಂದು ಹದಿಮೂರು ವಿಧವಾಗಿರುವುವು.

ಕಣ್ಣಿನಲ್ಲಿ ಕೆಂಪಗಿರುವ ರೇಖೆ ಹುಟ್ಟಿ ವೇದನೆಯುಳ್ಳದ್ದಾಗಿ ಆಗಲಿ, ವೇದನೆ ಇಲ್ಲದ್ದಾಗಿ ಆಗಲಿ ಇದ್ದರೆ ಅದಕ್ಕೆ ಸಿರೋತ್ಪಾತವೆಂದು ಹೆಸರು. ಮೇಲೆ ಹೇಳಿದ ಸಿರೋತ್ಪಾತಕ್ಕೆ ಚಿಕಿತ್ಸೆಮಾಡದೆ ಉಪೇಕ್ಷಿಸಿದರೆ ಕೆಂಪಾದ ದ್ರವವು ಕಣ್ಣಿನಿಂದ ಸುರಿದು ನೋಡುವುದಕ್ಕೆ ಅಶಕ್ಯವಾಗಿರುವುದು. ಇದಕ್ಕೆ ಸಿರಾಹರ್ಷವೆಂದು ಹೆಸರು. ಬಿಳಿಯ ಗುಡ್ಡೆಯಲ್ಲಿ ಹಲವು ತೆರನಾದ ಸಿರೆಗಳು ವ್ಯಾಪಿಸಿಕೊಂಡು ಗವಾಕ್ಷಿಯಂತೆ ಕಠಿಣವಾಗಿ ರಕ್ತವನ್ನು ಸುರಿಸುತ್ತಿದ್ದರೆ ಅದಕ್ಕೆ ಸಿರಾಜಾಲವೆಂದು ಸಂಜ್ಞೆ. ಇದು ರಕ್ತಪ್ರಕೋಪದಿಂದ ಹುಟ್ಟುವುದು. ಪಿತ್ಥ ಪ್ರಕೋಪದಿಂದ ಶ್ಯಾಮವರ್ಣವಾದ ಮಾಂಸದ ಮುದ್ದೆಯಂತೆ ಆಕಾರವುಳ್ಳದ್ದಾಗಿ ಮೀನಿನ ಚಿಪ್ಪಿನಂತೆ ಬಣ್ಣವುಳ್ಳ ಬೊಕ್ಕೆಗಳು ಬಿಳಿಯ ಗುಡ್ಡೆಯಲ್ಲಿ ಹುಟ್ಟಿದರೆ ಅದಕ್ಕೆ ಶುಕ್ತಿಕವೆಂದು ಹೆಸರು. ಬಿಳಿಯ ಗುಡ್ಡೆಗಳಲ್ಲಿ ಸ್ವಲ್ಪ ಬಿಳುಪಾಗಿ ಮೃದುವಾದ ಮಾಂಸದ ಪರೆಯಿಂದ ಕೂಡಿ ನಿಧಾನವಾಗಿ ಬೆಳೆಯುತ್ತ ಬರುವುದು. ಇದಕ್ಕೆ ಶುಕ್ಲಾರ್ಮವೆಂದು ಹೆಸರು. ಬಿಳಿಯ ಗುಡ್ಡೆಯಲ್ಲಿ ಅಗಲವಾಗಿ ಮೃದುವಾಗಿಯಕೃತ್ತಿನಂತೆ ಆಕಾರವುಳ್ಳದ್ದಾಗಿ ಕೆಂಪಗಿರುವ ಮಾಂಸವು ಬೆಳೆದರೆ ಅದಕ್ಕೆ ಅಧಿಮಾಂಸಾರ್ಮ ಎಂದು ಹೆಸರು. ಸನ್ನಿಪಾತದಿಂದ ಬಿಳಿಯ ಗುಡ್ಡೆಗಳಲ್ಲಿ ಸೂಕ್ಷ್ಮವಾಗಿ ವಿಸ್ತೀರ್ಣವಾಗಿ ಕೆಂಪಗಾಗಲಿ, ಕಪ್ಪಗಾಗಲಿ ಇರುವ ಪೊರೆ ಹುಟ್ಟಿದರೆ ಅದಕ್ಕೆ ಪ್ರಸ್ತಾರ್ಯರ್ಮವೆಂದು ಹೆಸರು. ಕಫವಾತ ಪ್ರಕೋಪದಿಂದ ಬಿಳಿಯ ಗುಡ್ಡೆಗಳಲ್ಲಿ ಹಿಟ್ಟಿನಹಾಗೆ ಬಿಳುಪಾಗಿ ಉನ್ನತವಾಗಿರುವ ಜಾರುಕಟ್ಟೆ ಕನ್ನಡಿಯ ಹಾಗೆ ಕಾಣುತ್ತಿದ್ದರೆ ಅದಕ್ಕೆ ಪಿಷ್ಟಕವೆಂದು ಹೆಸರು. ಸನ್ನಿಪಾತ ದೋಷದಿಂದ ಕರಿಯ ಗುಡ್ಡೆಯ ಹತ್ತಿರ ಬಿಳಿಯಗುಡ್ಡೆಯ ಮೇಲೆ ಬೆಳ್ಳಗಿರುವ ಬೊಬ್ಬೆಗಳುಂಟಾಗಿ ಸಿರೆಗಳಿಂದ ತುಂಬಿದ್ದರೆ ಅದಕ್ಕೆ ಸಿರಾಜಪಿಟಕವೆಂದು ಹೆಸರು. ಕಫವಾತ ಪ್ರಕೋಪದಿಂದ ಬಿಳಿಯಗುಡ್ಡೆಯಲ್ಲಿ ಕಂಚಿನಂತೆ ಸ್ವಲ್ಪ ಹಳದಿಯಾಗಿ ಕಠಿಣವಾಗಿ ನೀರಿನ ಹನಿಗಳಂತೆ ಗುಂಡಾದ ಬೊಬ್ಬೆಗಳು ಎದ್ದಿದ್ದರೆ ಅದಕ್ಕೆ ಕಫಗ್ರಂಥಿಕವೆಂದು ಹೆಸರು. ರಕ್ತಪ್ರಕೋಪದಿಂದ ಬಿಳಿಯಗುಡ್ಡೆಯಲ್ಲಿ ರಕ್ತವರ್ಣದಂತೆ ಕೆಂಪಾದ ಒಂದು ಚುಕ್ಕೆ ಹುಟ್ಟಿದರೆ ಅದಕ್ಕೆ ಅರ್ಜುನವೆಂದು ಹೆಸರು. ಸನ್ನಿಪಾತ ದೋಷದಿಂದ ಬಿಳಿಯಗುಡ್ಡೆಯಲ್ಲಿ ಕಠಿಣವಾಗಿ ಹೆಚ್ಚಾಗಿರುವ ಮಾಂಸದಿಂದ ಕೂಡಿ ಒಣಗಿ ಸ್ರಾವವಿಲ್ಲದೆ ಇರುವುದೇ ಸ್ನಾಯ್ವರ್ಮವೆನ್ನಲ್ಪಡುವುದು. ರಕ್ತಪ್ರಕೋಪದಿಂದ ಕೆಂಪುತಾವರೆ ಎಸಳಿನಂತೆ ಕೆಂಪಾದ ಮೃದುವಾಗಿರುವ ಮಾಂಸವು ಬಿಳಿಯಗುಡ್ಡೆಯಲ್ಲಿ ಹುಟ್ಟಿ ವೃದ್ಧಿಯಾಗುತ್ತ ಬಂದರೆ ಅದಕ್ಕೆ ಶೋಣಿತಾರ್ಮವೆಂದು ಹೆಸರು.

## ಕಣ್ಣಿನ ಕರಿಯಗುಡ್ಡೆಯಲ್ಲಿ ಹುಟ್ಟುವ ರೋಗಗಳ ವಿವರಣೆ.

ಕಣ್ಣಿನ ಕರಿಯ ಗುಡ್ಡೆಗಳಲ್ಲಿ ಹುಟ್ಟುವ ರೋಗಗಳು:—೧. ಶುದ್ಧಶುಕ್ಲ,

೨. ಸಿರಾಶುಕ್ಲ, ೩. ಕ್ಷತಶುಕ್ಲ, ೪. ಅಂಜನ, ೫. ಸಿರಾಸಂಗ ಎಂದು ಐದು ವಿಧಗಳು.

ಅಭಿಷ್ಯಂದ ವ್ಯಾಧಿಯಿಂದ ಕರಿಯಗುಡ್ಡೆಯಲ್ಲಿ ಶಂಖ, ಚಂದ್ರ, ಮಲ್ಲಿಗೆ ಮೊಗ್ಗುಗಳಂತೆ ಬಿಳಿಯಬಣ್ಣದ ಆ ಗುಡ್ಡೆಯ ಮಧ್ಯಭಾಗದಲ್ಲಿ ಬಿಳಿಯ ಚಿಹ್ನೆಯಂತೆ ಬೆಳ್ಳಗಿರುವ ಬೊಬ್ಬೆಯುಂಟಾಗಿ ದೋಷಯುಕ್ತವಾಗಿದ್ದರೆ ಅದಕ್ಕೆ ಶುದ್ಧಶುಕ್ಲವೆಂದು ಹೆಸರು. ಕರಿಯಗುಡ್ಡೆಯಲ್ಲಿ ಕೆಂಪಾದ ಜವೆ ಕಾಳಿನಂತೆ ಗುಂಡಾಗಿ ಸೂಜಿಯಿಂದ ಚುಚ್ಚಿದಹಾಗೆ ವ್ರಣವಾಗಿ ನೀರು ಸೋರುತ್ತಿದ್ದರೆ ಅದಕ್ಕೆ ಕ್ಷತಶುಕ್ಲವೆಂದು ಹೆಸರು. ಕರಿಯಗುಡ್ಡೆಯ ತುಂಬ ಸಿರೆಗಳು ವ್ಯಾಪಿಸಿ ಕೊಂಡು ದೃಷ್ಟಿಯನ್ನು ಅಡ್ಡಗಟ್ಟುತ್ತಿದ್ದರೆ ಅದಕ್ಕೆ ಸಿರಾಶುಕ್ಲವೆಂದು ಹೆಸರು. ಒಣಗಿದ ಆಡಿನ ಹಿಕ್ಕೆಯಂತೆ ಇದು ಪಿಚ್ಚಲವಾಗಿ ಕಣ್ಣೀರು ಸುರಿಯುತ್ತಿರುವ ಬೊಬ್ಬೆಗೆ ಆಜಿಕೆ ಎಂದು ಹೆಸರು. ಸನ್ನಿಪಾತ ದೋಷದಿಂದ ಕಣ್ಣಿನಲ್ಲಿ ಬಿಳುಪು ಹುಟ್ಟಿ ಕರಿಯಗುಡ್ಡೆಯನ್ನೆಲ್ಲ ವ್ಯಾಪಿಸಿಕೊಂಡಿದ್ದರೆ ಅದಕ್ಕೆ ಸಿರಾಸಂಗವೆಂದು ಹೆಸರು.

## ಕಾಚಬಿಂದು ರೋಗ ವಿವರಣೆ.

ಕಾಚಬಿಂದು ರೋಗವು ವಾತ, ಪಿತ್ಥ, ಕಫ, ರಕ್ತ, ಸನ್ನಿವಾತ ಸಂಸರ್ಗ ದಿಂದ ಉತ್ಪನ್ನವಾಗಿ ಐದುವಿಧವಾಗಿ ನೇತ್ರಗಳ ಮೂರನೆಯ ಪಟಲವನ್ನು ಆಶ್ರಯಿಸಿಕೊಂಡಿರುವುದರಿಂದ ಇದಕ್ಕೆ ಕಾಚಬಿಂದು ರೋಗವೆಂದು ಹೆಸರು. ರೂಪಸಹಿತವಾದ ವಸ್ತುಗಳೆಲ್ಲ ತಿರುಗುತ್ತಿರುವಹಾಗೂ, ಮಲಿನವಾಗಿ ಕೆಂಪಗೆ ಓರೆಕೋರೆಯಾಗಿ ಕಾಣುತ್ತಿದ್ದರೆ ಅದು ವಾತಜ ಕಾಚಬಿಂದುವೆನ್ನಲ್ಪಡುವುದು. ಕಣ್ಣಿಗೆ ಸೂರ್ಯನಹಾಗೆ, ಮಿಣುಕು ಹುಳಗಳಹಾಗೆ, ನಾಟ್ಯವಾಡುತ್ತಿರುವ ನವಿಲಿನ ಹಾಗೆ ಕಾಮನಬಿಲ್ಲಿನಂತೆ ರೂಪಗಳು ಕಾಣಬರುವುವು. ಉಳಿದ ವಸ್ತ್ರಾದಿಗಳೆಲ್ಲ ಕಪ್ಪಗೆ ಕಾಣಬರುವುದು. ಹೀಗಿದ್ದರೆ ಪಿತ್ಥಜ ಕಾಚಬಿಂದುವೆಂದು ಹೆಸರು. ವಸ್ತುಗಳೆಲ್ಲ ಸ್ನಿಗ್ಧವಾಗಿ ಬೆಳ್ಳಗೆ ನೀರಿನಲ್ಲಿ ನೆನಸಿದಂತೆ ಕಾಣಬರುವುದು. ಮತ್ತು ಆಕಾಶವು ಮೇಘರಹಿತವಾಗಿದ್ದರೂ, ಮೋಡಗಳಿಂದ ಕೂಡಿಕೊಂಡಿರು ವಂತೆ ಕಾಣುವುದು ಇದು ಕಫಜ ಕಾಚಬಿಂದುವೆನ್ನಲ್ಪಡುವುದು. ಕಣ್ಣುಗಳಿಗೆ ಕತ್ತಲೆಯು ಕೂಡ ಕೆಂಪಾಗಿಯೂ, ಉಳಿದ ಎಲ್ಲ ವಸ್ತುಗಳೂ ಕೆಂಪಗೂ ಕಾಣು ತ್ತಿದ್ದರೆ ಅದಕ್ಕೆ ರಕ್ತಜ ಕಾಚಬಿಂದುವೆಂದು ಹೆಸರು. ಕಣ್ಣಿಗೆ ನಾನಾ ವಿಧವಾಗಿ ಸಮಸ್ತ ವಸ್ತುಗಳೂ, ಒಂದೆರಡಾಗಿಯೂ, ಅನೇಕ ಭೇದದಿಂದ ಕಾಣಬರುತ್ತಿ ದ್ದರೆ ಅದಕ್ಕೆ ಸನ್ನಿವಾತಜ ಕಾಚಬಿಂದುವೆಂದು ಹೆಸರು. ಪಿತ್ಥವು ರಕ್ತದೊಡನೆ ಕೂಡಿ ವಸ್ತುಗಳನ್ನು ಹಚ್ಚಗೆ ಹಳದಿಯಾಗಿಯೂ, ಸೂರ್ಯನು ಹಳದಿ ವರ್ಣ ವಾಗಿರುವಂತೆಯೂ, ಗಿಡಗಳೆಲ್ಲವೂ ಮಿಣುಕುಹುಳುಗಳಿಂದ ವ್ಯಾಪ್ತವಾಗಿರುವಂತೆ ಕಾಣಬರುವುದು. ಇದಕ್ಕೆ ಸಂಸರ್ಗಜ ಕಾಚಬಿಂದುವೆಂದು ಹೆಸರು.

## ತಿಮಿರ ರೋಗ ವಿವರಣೆ.

ತಿಮಿರ ರೋಗವು ವಾತ, ಪಿತ್ಥ, ಶ್ಲೇಷ್ಮ, ರಕ್ತ, ಸಂಸರ್ಗ, ಸನ್ನಿಪಾತಗಳಿಂದ ಉತ್ಪನ್ನವಾಗಿ ಆರು ವಿಧವಾಗಿರುವುದು. ಇವುಗಳ ಲಕ್ಷಣಗಳು ದೋಷಾನುಸಾರವಾಗಿ ಕಾಚಬಿಂದು ಲಕ್ಷಣಗಳಂತೆಯೇ ಕಂಡುಬರುವುದು.

## ನೇತ್ರರೋಗ ಚಿಕಿತ್ಸೆಗಳು.

೧. ಒಂದು ಕಲಾಯಿಪಾತ್ರೆಯಲ್ಲಿ ೧ ಪಾವು ಹುಳಿದಾಳಿಂಬರೆ ಹಣ್ಣಿನ ರಸ, ಕೊಡಿಯಾಲ ಕಲ್ಲುಸಕ್ಕರೆ ೧ ಶೇರು, ಪಚ್ಚಕರ್ಪೂರ ಕಾಲುವರಹ ತೂಕ, ಕುಂಕುಮಕೇಸರಿ ಕಾಲುವರಹ ತೂಕ ಇವುಗಳನ್ನು ಖಲ್ವದಲ್ಲಿ ಅರೆದು ಒಲೆಯ ಮೇಲಿಟ್ಟು ತಂಗಡಿಸೌದೆಯಿಂದ ಉರಿಹಾಕಿ ಜೇನುತುಪ್ಪದ ಪಾಕದಲ್ಲಿ ಕಾಯಿಸಿ ಶೀಷಾಯಿಯಲ್ಲಿ ಇಟ್ಟುಕೊಳ್ಳುವುದು. ಕಣ್ಣಿಗೆ ೨-೩ ತೊಟ್ಟು ಹಾಕುವುದರಿಂದ ರೆಪ್ಪೆವುದರುವುದು, ನವೆ, ಮೋಹಕಾರಕದ ಕಣ್ಣು, ಕಣ್ಣುಕೆಂಪು, ಕಣ್ಣಿನಲ್ಲಿ ನೀರು ಸುರಿಯುವುದು, ಕಣ್ಣುಪಂಜು, ಅಂಬರಗಳು, ತಲೆ ತಿರುಗುವುದು, ತಲೆನೋವು, ಜ್ವರದ ತಲೆನೋವು, ಮೈ ಕೈ ಕತ್ತರಿಸುವುದು, ಛಳಿಛಳಿಯಾಗುವುದು ಇವು ಗುಣವಾಗುವುದು. ಬಾಣಂತಿಯರ ಕಣ್ಣಿಗೂ ಸಹಾ ಹಾಕಬಹುದು.

೨. ಪಟಿಕೆ ೧ ತೊಲೆ ಬೆಂಕಿ ಕೆಂಡದಮೇಲೆ ಹಾಕಿ ಅರಳುಮಾಡಿಕೊಂಡು ಇದಕ್ಕೆ ಕೋಳಿಮೊಟ್ಟೆ ಬಿಳೇಜನಿ ತಾಂಬ್ರದ ತಟ್ಟೆಯಲ್ಲಿ ಹಾಕಿ ತಾಂಬ್ರದ ಪಂಚಪಾತ್ರೆಯಿಂದ ಚೆನ್ನಾಗಿ ಕಿಲುಬು ಬರುವಹಾಗೆ ಅರೆದು ಬಟ್ಟೆಯಲ್ಲಿ ಶೋಧಿಸಿಕೊಂಡು ಕಣ್ಣಿಗೆ ಹಚ್ಚುವುದು. ೩ ದಿನ ಮಾಡಲು ಕಣ್ಣುನೋವು, ಕಣ್ಣು ಕೆಂಪಗಿರುವುದು ಗುಣವಾಗುವುದು.

೩. ಸುರ್ಮಾ:—ಖುರಾಸಾನಿ ಓಮ ಕಾಲುತೊಲೆ, ಬಿಳೇಸುರ್ಮಾಕಲ್ಲು ಕಾಲುತೊಲೆ, ಪನ್ನೀರು ಕಾಲುತೊಲೆ ಖಲ್ವದಲ್ಲಿ ಹಾಕಿ ಚೆನ್ನಾಗಿ ಅರೆದು ಕಣ್ಣಿಗೆ ಹಚ್ಚುತ್ತಾಬಂದರೆ ಕಣ್ಣುಕೆಂಪಗಿರುವುದು, ಕಣ್ಣಿನಲ್ಲಿ ನೀರು ಸುರಿಯುವುದು, ಕಣ್ಣಿನಪರೆ, ಕಣ್ಣಿನಲ್ಲಿ ದುರ್ಮಾಂಸ ಬೆಳೆಯುವುದು ಇವು ಗುಣವಾಗುವುದು. ಇದಕ್ಕೆ ಪಥ್ಯ ಮೆಣಸಿನಕಾಯಿ, ಮಾಂಸ ವರ್ಜ್ಯ.

೪. ಚಾಕಸೂಬೀಜ (ಅಮರದ ಬೀಜ) ಒಳ್ಳೇ ಬಿಳೀಬಟ್ಟೆಯಲ್ಲಿ ಗಂಟು ಕಟ್ಟಿ ಒಂದು ಹೊಸ ಮಡಿಕೆಯಲ್ಲಿ ಬೇವಿನಸೊಪ್ಪು ನೀರು ಹಾಕಿ ಮೇಲ್ಕಂಡ ಗಂಟು ಅದರಲ್ಲಿಟ್ಟು ಬೇಯಿಸಿ ಈಚಿಗೆ ತೆಗೆದುಕೊಂಡು ಆರಿಸಿ ಬೀಜಸುಲಿದು ಬಿಸಲಿನಲ್ಲಿ ಒಣಗಿಸಿ ಚೂರ್ಣಮಾಡಿ ಶೋಧಿಸಿ ಸಮಭಾಗ ಕೊಡಿಯಾಲ ಕಲ್ಲುಸಕ್ಕರೆ ಹಾಕಿ ಅರೆದು ಇಟ್ಟುಕೊಳ್ಳುವುದು. ಪ್ರಯೋಗ:—೧ ಹೆಸರುಬೇಳೆಯಷ್ಟು ಕಣ್ಣಿಗೆ ೨-೩ ದಿನ ಹಾಕುವುದರಿಂದ ಕಣ್ಣುನೋವು, ಅಮರಕಣ್ಣು, ಗುಣವಾಗುವುದು.

೫. ಪಟಿಕೆ ೧ ತೊಲೆ ಬಾಂಡ್ಲಿಯಲ್ಲಿ ಹಾಕಿ ಬೆಂಕಿಯಮೇಲಿಟ್ಟು ಅರಳು ಮಾಡಿಕೊಂಡು ಖಲ್ವದಲ್ಲಿ ಹಾಕಿ ಚೆನ್ನಾಗಿ ಅರೆದು ಪನ್ನೀರು ಹಾಕಿ ಕಲಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಈ ನೀರನ್ನು ಕಣ್ಣುಗಳಿಗೆ ಹಾಕುತ್ತಾಬರುವುದರಿಂದ ಕಣ್ಣುನೋವು ಗುಣವಾಗುವುದು.

೬. ಪಟಿಕೆ ೩ ತೊಲೆ ಬಾಂಡ್ಲಿಯಲ್ಲಿ ಹಾಕಿ ಬೆಂಕಿಯಮೇಲಿಟ್ಟು ಅರಳು ಮಾಡಿಕೊಂಡು ಖಲ್ವದಲ್ಲಿ ಹಾಕಿ ಕುಂಕುಮದಂತೆ ಚೆನ್ನಾಗಿ ಅರೆದು ಅನಂತರ ಒಂದು ಬಟ್ಟಲಿನಲ್ಲಿ ಒಂದು ಕೋಳಿಮೊಟ್ಟೆ ಬಿಳೀಜನಿ ಹಾಕಿ ಮರದ ಕಡ್ಡಿಯಲ್ಲಿ ಮಜ್ಜಿಗೆ ಕಡೆದಂತೆ ಕಡೆದರೆ ಬುರುಗು ಬರುತ್ತದೆ. ಆ ಬುರುಗನ್ನು ತೆಗೆದುಕೊಂಡು ಹಸುವಿನ ಬೆಣ್ಣೆಯಲ್ಲಿ ಕಲಸಿ ಕಣ್ಣಿಗೆ ಹಚ್ಚುವುದರಿಂದ ಉಷ್ಣದಿಂದ ಕೆಂಪಗಿರುವ ಕಣ್ಣು, ಮಕ್ಕಳ ಕಣ್ಣುನೋವು ಇವು ಗುಣವಾಗುವುದು.

೭. ಬಾಡುಬಕ್ಕಾ (ಯುನಾನಿ ಹೆಸರು) ಸೊಪ್ಪು ತಂದು ಸುಮಾರಾಗಿ ನೀರು ಹಾಕಿ ಕುಟ್ಟಿ ರಸ ಹಿಂಡಿಕೊಂಡು ಕಲಾಯಿ ಬಟ್ಟಲಿನಲ್ಲಾಗಲಿ ಅಥವಾ ತೆಂಗಿನಚಿಪ್ಪಿನಲ್ಲಿಟ್ಟು ಅದರಮೇಲೆ ಬಟ್ಟೆಕಟ್ಟಿ ರಾಗಿಯಲ್ಲಿ ಒಂದು ವಾರ ಇಡುವುದು. ಅನಂತರ ಬಟ್ಟೆ ತೆಗದುನೋಡಿದರೆ ನಾವು ಹಾಕಿದ ನೀರು ಸುತ್ತು ಇದ್ದು ಮಧ್ಯೆ ಬೆಳ್ಳಗೆ ಗಡ್ಡೆಯಹಾಗಿರುತ್ತದೆ. ಸದರಿ ಆ ಗಡ್ಡೆಯಲ್ಲಿ ಒಂದೊಂದು ಮೆಣಸಿನಗಾತ್ರ ಒಂದೊಂದು ಕಣ್ಣಿಗೆ ಹಾಕಿ ಅಂಗತ್ತಲಾಗಿ ಮಲಗಿಕೊಂಡು ಸ್ವಲ್ಪ ಹೊತ್ತಿನಮೇಲೆ ಕಣ್ಣು ತೆರೆದುಬಿಡುವುದು. ಹೀಗೆ ೨-೩ ದಿವಸ ಹಾಕುವುದರಿಂದ ಚುರುಕಿನ ಕಣ್ಣಾಗಲಿ, ಎಳೇಪರೇ ಇರಲಿ, ಕಣ್ಣುಕೆಂಪು ಇವುಗಳು ಗುಣವಾಗುವುದು.

೮. ಸೈಂಧವಲವಣ, ಹಿಪ್ಪಲಿ, ಪೀತರೋಹಿಣಿ ಇವು ಸಮತೂಕ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ನಂದಿಬಟ್ಟಲು ಹೂವಿನ ರಸದಲ್ಲಿ ಅರೆದು ಕೋಪಿನಂತೆ ಮಾತ್ರೆ ಮಾಡುವುದು. ಮೊಲೆಹಾಲಿನಲ್ಲಿ ಅಥವಾ ನಂದಿಬಟ್ಟಲು ಹೂವಿನ ರಸದಲ್ಲಿ ಮೇಲ್ಕಂಡ ಕೋಪನ್ನು ಗಂಧ ತೆಗೆದು ಕಣ್ಣಿಗೆ ಹಾಕಿದರೆ ಕಣ್ಣಿನ ಪರೆ ಮೊದಲಾದ ಕಣ್ಣಿನ ರೋಗಗಳೆಲ್ಲ ಗುಣವಾಗುವುದು. ಕಣ್ಣುಕೆಂಪಗಿರುವುದು, ಮಂದದೃಷ್ಟಿ ಪರಿಹಾರವಾಗುವುದು.

೯. ಕುಚ್ಚುಮೀನು ತಲೆಯಲ್ಲಿರುವ ಕಲ್ಲನ್ನು ಗುಂಡೀಸೊಪ್ಪಿನ ರಸದಲ್ಲಿ ಗಂಧ ತೆಗೆದು ಕಣ್ಣಿಗೆ ಹಚ್ಚುವುದು. ಈರೀತಿ ೧೧-೧೫-೨೧ ದಿನ ಹಚ್ಚಿದರೆ ಇರಳುಕಣ್ಣು ಗುಣವಾಗುವುದು.

೧೦. ಬಿಳೀಕೊಮ್ಮೇಬೇರು ಹಸೀದು ಒಂದು ಹೊಸಮಡಿಕೆಯಲ್ಲಿ ಹಾಕಿ ಹಸುವಿನ ಹಾಲಿನಿಂದ ಬೇಯಿಸಿ ನೆರಳಿನಲ್ಲಿ ಒಣಗಿಸಿಟ್ಟುಕೊಳ್ಳುವುದು. ಮೊಲೆಹಾಲಿನಲ್ಲಿ ಗಂಧ ತೇದು ಸ್ವಲ್ಪ ಜೇನುತುಪ್ಪ ಹಾಕಿ ಕಲಸಿ ಕಣ್ಣಿಗೆ ಹಚ್ಚಿದರೆ ಕಣ್ಣುಕೆಂಪಗಾಗಿ ಹೂವು ಕಮ್ಮಿಯಾಗುತ್ತೆ. ಈರೀತಿ ೩ ದಿನ ಮಾಡುವುದು.

೧೧. ಚಿಟ್ಟೆರಳುಪೊಪ್ಪನ್ನು ಮೊಲೆಹಾಲಿನಲ್ಲಿ ಗಂಧ ತೇದು ಕಣ್ಣುಗಳಿಗೆ ಹಚ್ಚಿದರೆ ಕಣ್ಣುಗಳು ಕೆಂಪಗಾಗಿ ೩ ದಿನದೊಳಗೆ ಬೆಳ್ಳಗಾಗುತ್ತೆ. ಇದೇರೀತಿ ೩ ದಿನ ಹಚ್ಚಬೇಕು. ದಿನವಹಿ ಹೊಸದಾಗಿ ಗಂಧ ತೇದು ಹಚ್ಚಬೇಕು. ಇದರಿಂದ ಅಸಾಧ್ಯವಾದ ಕಣ್ಣಿನ ಹೂವು ಮೊದಲಾದ ರೋಗಗಳು ಗುಣವಾಗುವುದು.

೧೨. ಹಸುವಿನ ಬೆಣ್ಣೆ ೧ ಶೇರು ತಂದು ಬಿಳೀಬಟ್ಟೆಯಲ್ಲಿ ಶೋಧಿಸಿಕೊಂಡು ದೊಡ್ಡದಾಗಿರುವ ನಿಂಬೇಹಣ್ಣು ತಂದು ಅದರಮೇಲೆ ಈ ಬೆಣ್ಣೆಯನ್ನು ಮೆತ್ತಿ ಹೊಸ ಮಡಿಕೆಯಲ್ಲಿ ನೀರು ಹುಯಿದು ಅದರಲ್ಲಿ ಈ ಉಂಡೆ ಇಟ್ಟು ಹೊಸ ಮುಚ್ಚಳ ಮುಚ್ಚಿಡಬೇಕು. ಪ್ರತಿದಿನವೂ ಹೊಸಹೊಸ ನೀರು ಹಾಕುತ್ತಾ ಹಳೇನೀರು ಬಿಸಾಡುತ್ತಾ ಈರೀತಿ ೨೧ ದಿನ ಮಾಡಬೇಕು. ಅನಂತರ ನಿಂಬೇಹಣ್ಣಿನ ಮೇಲಿರುವ ಬೆಣ್ಣೆ ಇದೇ ನಿಂಬೇಹಣ್ಣಿನ ರಸ ಹಾಕಿ ಖಲ್ವದಲ್ಲಿ ಚೆನ್ನಾಗಿ ಅರೆದು ತಾಂಬ್ರದ ಭರಣಿಯಲ್ಲಿ ಇಟ್ಟುಕೊಳ್ಳಬೇಕು. ಭರಣಿಗೆ ತಗಲಿರುವ ಕಿಲುಬುಸಹಿತವಾಗಿ ಚನ್ನಾಗಿ ಕಲಸಿ ಕಣ್ಣುಗಳಿಗೆ ಇಟ್ಟರೆ ಮೇಹಸಂಬಂಧದಿಂದ ಕಣ್ಣು ಕೆಂಪಗಿರುವುದು, ಕಣ್ಣಿನ ಪರೆಗಳು, ಕಣ್ಣುಮಂಜು ಇವು ಗುಣವಾಗುವುವು. ಈ ಔಷಧವನ್ನು ರಾತ್ರಿಕಾಲದಲ್ಲಿ ಇಡಬೇಕು.

೧೩. ಪಟಿಕ ೧ ತೊಲೆ, ಬೆಳ್ಳುಳ್ಳಿ ಹೊಟ್ಟು ತೆಗೆದದ್ದು ಒಂದುಗಡ್ಡೆ ಅದರಲ್ಲಿರುವ ಮೊಳಿಕೆ ತೆಗೆದು ಇವೆರಡೂ ಕಬ್ಬಿಣದ ಸೌಟಿನಲ್ಲಿ ಹಾಕಿ ಬೆಂಕಿಯ ಮೇಲಿಟ್ಟು ಚೆನ್ನಾಗಿ ಬೆಂದಮೇಲೆ ತಾಂಬ್ರದ ತಟ್ಟೆಯಲ್ಲಿ ಹಾಕಿ ಶೀತೊಂಡೇ ಹೂವು ೨ ತೊಲೆ, ಪಚ್ಚಕರ್ಪೂರ ೨ ಆಣೆ ತೂಕ, ಹಸುವಿನ ಬೆಣ್ಣೆ ೪ ತೊಲೆ ಇವುಗಳನ್ನು ತಾಂಬ್ರದ ಪಂಚಪಾತ್ರೆಯಿಂದ ಅರೆದು ತಾಂಬ್ರದ ಭರಣಿಯಲ್ಲಿ ಇಟ್ಟುಕೊಳ್ಳುವುದು. ವಾಯು ಕಣ್ಣುಗಳಿಗೆ ಬಿಳೇಕೊಮ್ಮೇಬೇರಿನ ಗಂಧ ತೆಗೆದು ಅದರಲ್ಲಿ ಕಪ್ಪು ಕಲಸಿ ಹಚ್ಚುವುದು. ರೆಪ್ಪೆಕೂದಲು ಉದುರುವುದಕ್ಕೆ ತಾರೇಕಾಯಿ ಗಂಧ ತೆಗೆದು ಅದರಲ್ಲಿ ಕಪ್ಪುಹಾಕಿ ಕಲಸಿ ಹಚ್ಚುವುದು. ಪಥ್ಯ ಬದನೇಕಾಯಿ, ಶಿಹಿಪದಾರ್ಥಗಳು ತಿನ್ನಕೂಡದು.

೧೪. ಚಂದ್ರೋದಯಾಂಜನ ಮಾತ್ರೆ:—ಪಚ್ಚಕರ್ಪೂರ ಕಾಲುತೊಲೆ, ರಸಾಂಜನ (ಅಂದರೆ ಮರದರಿಸಿನ ತಂದು ಕುಟ್ಟಿ ಚೂರ್ಣಮಾಡಿ ಮೇಕೆಹಾಲಿನಲ್ಲಿ ಕಾಯಿಸಿ ಬಿಸಲಿನಲ್ಲಿ ಒಣಗಿಸಿ ಚೂರ್ಣ ಮಾಡಿದ್ದು) ೧ ತೊಲೆ, ಶುದ್ಧಿಮಾಡಿದ ಮೈಲತುತ್ತ ೧ ಆಣೆ ತೂಕ, ಕಟುಕರೋಹಿಣಿ ಕಾಲುತೊಲೆ, ಗವೆ (ಕವಡೆ) ೨ ಆಣೆ ತೂಕ, ಶುಂಠಿ ಕಾಲುತೊಲೆ, ಹಿಪ್ಪಲಿ ಕಾಲುತೊಲೆ, ಮೆಣಸು ಕಾಲುತೊಲೆ, ಅತಿಮಧುರ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಮಾದವಾಳದಹಣ್ಣಿನ ರಸದಲ್ಲಿ ಚೆನ್ನಾಗಿ ಅರೆದು ಮಾತ್ರೆಮಾಡಿಟ್ಟುಕೊಳ್ಳುವುದು. ಮಾತ್ರೆಯನ್ನು ಗಂಧ ತೇದು ಕಣ್ಣಿಗೆ ಕಲ್ಕ

ಹಾಕುವುದರಿಂದ ರಾತ್ರಿಹೊತ್ತು ಕಣ್ಣು ಕಾಣದಿರುವಿಕೆ, ಕಣ್ಣುತಿಮಿರ, ಪೊರೆ ಮೊದಲಾದ ರೋಗಗಳು ಗುಣವಾಗುವುವು.

೧೫. ಬೇವಿನ ಎಣ್ಣೆ ೧ ಪಾವು, ಪಚ್ಚಕರ್ಪೂರ ೧ ಆಣೆ ತೂಕ ಇವೆರಡೂ ತಾಂಬ್ರದ ತಟ್ಟೆಯಲ್ಲಿ ಹಾಕಿ ತಾಂಬ್ರದ ಪಂಚಪಾತ್ರೆಯಿಂದ ಕಾಡಿಗೆಯ ಹಾಗೆ ಅರೆದು ೧ ಉದ್ದಿನಕಾಳು ಪ್ರಮಾಣ ಕಣ್ಣಿಗೆ ಇಡುತ್ತಾ ಬಂದರೆ ಹುಳುಕು ಕಣ್ಣು, ಕೂದಲು ಉದರುವುದು ಗುಣವಾಗುವುದು.

೧೬. ಕೊಡಿಯಾಲ ಕಲ್ಲುಸಕ್ಕರೆ ೨ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ಕೆಂಪುಕಾವೀಕಲ್ಲು ೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ೨ ತೊಲೆ ಹಸುವಿನಬೆಣ್ಣೆಯಿಂದ ಚೆನ್ನಾಗಿ ಅರೆದು ತಾಂಬ್ರದ ಭರಣಿಯಲ್ಲಿಟ್ಟುಕೊಳ್ಳುವುದು. ೧ ಗುರುಗಂಜಿಗಾತ್ರ ಕಣ್ಣಿಗೆ ಹಚ್ಚುತ್ತಾ ಬಂದರೆ ಕಣ್ಣುರೆಪ್ಪೆಯ ಕೂದಲು ಹುಳು ತಿನ್ನುತ್ತಿರುವುದು ಗುಣವಾಗುವುದು.

೧೭. ಹುಣಿಸೇ ಎಲೆ ರಸ ಅರಪಾವು, ೨ ನಿಂಬೇಹಣ್ಣಿನ ರಸ, ಮರದರಿಸಿನ ೫ ತೊಲೆ, ಶುಂಠಿ ಹುಳಿದಾಳಿಂಬರೆ ಹಣ್ಣಿನ ರಸದಲ್ಲಿ ಗಂಧ ತೆಗೆದದ್ದು ೨ ತೊಲೆ, ಮೆಣಸು ॥ ತೊಲೆ, ಪಟಿಕೆ ೪ ತೊಲೆ ಅರಳುಮಾಡಿದ್ದು, ಕೊಡಿಯಾಲದ ಕಲ್ಲು ಸಕ್ಕರೆ ೨ ತೊಲೆ, ಖರ್ಜೂರದ ಬೀಜ ೪ ಹುಳಿದಾಳಿಂಬರೆ ಹಣ್ಣಿನ ರಸದಲ್ಲಿ ಗಂಧ ತೆಗದು ಹಾಕುವುದು, ಲವಂಗದ ಮೊಗ್ಗು ತೆಗೆದದ್ದು ॥ ತೊಲೆ, ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಶೋಧಿಸಿ ಎಲ್ಲವನ್ನು ತಾಂಬ್ರದ ತಟ್ಟೆಯಲ್ಲಿ ಹಾಕಿ ತಾಂಬ್ರದ ಪಂಚಪಾತ್ರೆಯಿಂದ ಚನ್ನಾಗಿ ಅರೆದಿಟ್ಟುಕೊಳ್ಳುವುದು. ೧ ಗುರಗಂಜಿಗಾತ್ರ ಕಣ್ಣಿಗೆ ಹಚ್ಚುತ್ತಾಬಂದರೆ ಕಾಯಿಕಣ್ಣು, ಪೊರೆಕಣ್ಣು ಗುಣವಾಗುವುದು.

೧೮. ಪಟಿಕೆ ಬೆಂಕಿಯಮೇಲೆ ಅರಳುಮಾಡಿದ್ದು ॥ ತೊಲೆ, ಹಸನು ಯಾಲಕ್ಕಿ ದೊಡ್ಡಕಾಯಿ ೫ ತಂದು ಒಂದೊಂದುಕಾಯಿ ಸೂಜಿಯಿಂದ ಚುಚ್ಚಿ ದೀಪದಿಂದ ಉರಿಸಿ ಕರಕುಮಾಡಿಕೊಳ್ಳುವುದು, ಪಚ್ಚಕರ್ಪೂರ ೨ ಆಣೆ ತೂಕ ಹಸುವಿನಬೆಣ್ಣೆ ಅರಪಾವು ಇವುಗಳನ್ನೆಲ್ಲಾ ತಾಂಬ್ರದ ತಟ್ಟೆಯಲ್ಲಿ ಹಾಕಿ ತಾಂಬ್ರದ ಪಂಚಪಾತ್ರೆಯಿಂದ ಚೆನ್ನಾಗಿ ಅರೆದು ತಾಂಬ್ರದ ಡಬ್ಬಿಯಲ್ಲಿ ಇಟ್ಟು ಕೊಳ್ಳುವುದು. ಇದನ್ನು ೧ ಗುರುಗಂಜಿ ಪ್ರಮಾಣ ಕಣ್ಣಿಗೆ ಹಾಕುತ್ತಾ ಬರುವುದರಿಂದ ಕಣ್ಣುಮಂಜು, ಕಣ್ಣಿನಪೊರೆ ಗುಣವಾಗುವುದು.

೧೯. ಹಸುವಿನ ಬೆಣ್ಣೆ ೨ ತೊಲೆ ಗೋಡೆಯಮೇಲೆ ಹಾಕಿ ಮೂರುದಿನ ಬಿಟ್ಟು ನಾಲ್ಕನೆಯ ದಿನ ತೆಗೆದುಕೊಂಡು ಅದರಲ್ಲಿ ಕಡ್ಡಿಕಸಯಿಲ್ಲದಂತೆ ನೋಡಿ ಕಂಚಿನ ತಟ್ಟೆಗೆ ಹಾಕಿ ಪಟಿಕೆ ಬೆಂಕಿಯಲ್ಲಿ ಅರಳುಮಾಡಿದ್ದು ೧ ತೊಲೆ, ಕೃಷ್ಣ ತುಳಸೀರಸ ೪-೫ ತೊಟ್ಟು ಹಾಕಿ ತಾಂಬ್ರದ ಪಂಚಪಾತ್ರೆಯಿಂದ ಎರಡು ಘಳಿಗೆ ಮರ್ದಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡು ತಾಂಬ್ರದ ಭರಣಿಯಲ್ಲಿಟ್ಟುಕೊಳ್ಳುವುದು.

ಮೋಹಕಾರಕದ ಕಣ್ಣಿಗಾಗಲಿ ಇತರ ಕಣ್ಣಿನರೋಗಗಳಿಗಾಗಲಿ ೧ ಗುರುಗಂಜಿ ಗಾತ್ರ ಕಣ್ಣಿಗೆ ಹಾಕಬೇಕು. ಇದಕ್ಕೆ ಪಥ್ಯ. ಶಲದಿಪದಾರ್ಥ ಪರ್ಜ್ಯ.

೨೧. ಒಂದು ಶೀಸೆಯಲ್ಲಿ ಅರಪಾವು ನೀರು ಒಂದು ಕೋಳಿಮೊಟ್ಟೆಯಲ್ಲಿರ ತಕ್ಕ ಬಿಳೀಜನಿ ಕಾಲುತೊಲೆ ಪಟಿಕೆ ಅರಳು ಅರೆದು ಹಾಕಿ ಚೆನ್ನಾಗಿ ಕಲಿಯುವ ವರೆಗೂ ಅಲ್ಲಾಡಿಸಿಟ್ಟುಕೊಂಡು ದಿನಕ್ಕೆ ೩ ಸಲ ಬೆಳಿಗ್ಯೆ, ಮಧ್ಯಾಹ್ನ, ಸಾಯಂ ಕಾಲ ಕಣ್ಣಿನಲ್ಲಿ ೪-೫ ತೊಟ್ಟು ಮೇರೆಗೆ ೭ ದಿನ ಹಾಕಬೇಕು. ಇದರಿಂದ ರಕ್ತ ಕಣ್ಣು, ಕೆಂಪಾಗಿ ನೀರುಸುರಿಯುವುದು ಗುಣವಾಗುವುದು.

೨೧. ಪಚ್ಚಕರ್ಪೂರ ಕಾಲುತೊಲೆ, ಪಟಿಕೆ ಬೆಂಕಿಯಲ್ಲಿ ಅರಳುಮಾಡಿದ್ದು ॥ ತೊಲೆ, ಶೀತೊಂಡೇಹೂವು ೪, ನಂದಿವರ್ಧನದ ಹೂವಿನ ಗರಿಗಳು ೪-೫, ಮೊದಲು ಹೂವುಗಳನ್ನು ಒಂದು ಸೌಟಿನಲ್ಲಿ ಹಾಕಿ ತೇವಾ ಹೋಗುವ ಪರಿ ಯಂತರ ಬೆಂಕಿಕೆಂಡದಿಂದ ಕಂಚಿನ ತಟ್ಟೆಯಲ್ಲಿ ಹಾಕಿ ಮೇಲ್ಕಂಡ ದಿನಸುಗಳು ಹಸುವಿನ ಬೆಣ್ಣೆ ೨ ತೊಲೆ ಹಾಕಿ ತಾಂಬ್ರದ ಪಂಚಪಾತ್ರೆಯಿಂದ ಚನ್ನಾಗಿ ಅರೆದು ತಾಂಬ್ರದ ಭರಣಿಯಲ್ಲಿಟ್ಟುಕೊಳ್ಳುವುದು. ಇದನ್ನು ಕಣ್ಣುಗಳಿಗೆ ೧ ಗುರುಗಂಜಿ ಗಾತ್ರ ಹಾಕಬೇಕು. ಇದರಿಂದ ಕಣ್ಣುಮಂಜು ಗುಣವಾಗಿ ನೇತ್ರದೃಷ್ಟಿಯು ಚನ್ನಾಗಿ ಅಗುವುದು.

೨೨. ಹಸುವಿನಹಾಲು ೪ ಶೇರು ಒಂದು ಪಾತ್ರೆಯಲ್ಲಿ ಹಾಕಿ ಹೊನಗೊನೆ ಸೊಪ್ಪು ನಾಲ್ಕು ಹಿಡಿ ಹಾಕಿ ಎಂಟು ಘಳಿಗೆ ಬೇಯಿಸಿ ಇಳಿಸಿ ಹೆಪ್ಪುಹಾಕಿ ಬೆಣ್ಣೆ ತೆಗೆದುಕೊಳ್ಳುವುದು. ಅಳಲೇಕಾಯಿಸಿಪ್ಪೆ ೧ ತೊಲೆ, ಬೇವಿನಬೀಜದ ಪೊಪ್ಪು ೧ ತೊಲೆ, ಶುಂಠಿ ೧ ತೊಲೆ, ಮೆಣಸು ॥ ತೊಲೆ, ಹಿಪ್ಪಲಿ ॥ ತೊಲೆ, ಕಸ್ತೂರಿ ಅರಿಸಿನ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಕೊಳ್ಳುವುದು. ಚಿಳ್ಳೀಬೀಜ ೧ ತೊಲೆ ತಂದು ಹೊನಗೊನೆ ಸೊಪ್ಪಿನರಸದಲ್ಲಿ ಗಂಧ ತೇದುಕೊಳ್ಳುವುದು. ಮೇಲ್ಕಂಡ ದಿನಸುಗಳು ಮತ್ತು ಬೆಣ್ಣೆ ಸಹಾ ಖಲ್ವದಲ್ಲಿ ಹಾಕಿ ಅರೆದಿಟ್ಟುಕೊಳ್ಳುವುದು. ಕಣ್ಣಿಗೆ ೧ ಗುರುಗಂಜಿಗಾತ್ರ ಹಾಕು ವುದು. ಇದರಿಂದ ರಕ್ತಕಣ್ಣು, ಕಣ್ಣಿನಲ್ಲಿ ಹೂವು, ಕಣ್ಣಿನಪೊರೆ, ಕಣ್ಣಿನಲ್ಲಿ ನೀರುಬರುವುದು, ನೇತ್ರವಾಯು ಗುಣವಾಗುವುದು.

೨೩. ನಾರಿಕೇಳಾಂಜನ :—ಎಳನೀರು ೪ ಶೇರು ಒಂದು ಹೊಸ ಮಡಿಕೆ ಯಲ್ಲಿ ಹಾಕಿ ಮರದರಿಸಿನ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇ ಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಅತಿಮಧುರ ೧ ತೊಲೆ, ಲವಂಗ ೧ ತೊಲೆ, ಸೈಂಧವಲವಣ ॥ ತೊಲೆ ಇವುಗಳು ಕುಟ್ಟಿದ ಚೂರ್ಣ ವನ್ನೂ ಮಡಿಕೆಯಲ್ಲಿ ಹಾಕಿ ೩ ದಿನ ನೆನೆಯಿಸಿ ಒಲೆಯಮೇಲಿಟ್ಟು ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಒಂದು ಕಲಾಯಿಪಾತ್ರೆಯಲ್ಲಿ ಹಾಕಿ ಜೇನುತುಪ್ಪ ೧ ಶೇರು, ಕುಂಕುಮಕೇಸರಿ ಕಾಲುತೊಲೆ, ಪಚ್ಚಕರ್ಪೂರ ಕಾಲುತೊಲೆ ಇವುಗಳನ್ನು

ಖಲ್ವದಲ್ಲಿ ಚೆನ್ನಾಗಿ ಅರೆದು ಪಾತ್ರೆಯಲ್ಲಿ ಹಾಕಿ ತೈಲ ಪಕ್ವವಾಗಿ ಕಾಯಿಸಿಟ್ಟು ಕೊಳ್ಳುವುದು. ಕಣ್ಣುಗಳಿಗೆ ೨-೩ ತೊಟ್ಟು ಹಾಕುವುದು. ಇದರಿಂದ ನೇತ್ರವಾಯು, ಕಣ್ಣುಕೆಂಪು, ಕಣ್ಣಿನಲ್ಲಿ ನೀರುಸುರಿಯುವುದು ಕಣ್ಣುನೋವು ಗುಣವಾಗುವುದು.

೨೪. ಪುಷ್ಪಾಂಜನ:—ನಂದಿಬಟ್ಟಲು ಹೂವಿನ ರಸ ೪ ತೊಲೆ, ಪಚ್ಚ ಕರ್ಪೂರ ॥ ತೊಲೆ, ಕುಂಕುಮಕೇಸರಿ ೨ ಆಣೆ ತೂಕ ಇವು ಮೂರೂ ಖಲ್ವ ದಲ್ಲಿ ಹಾಕಿ ಚೆನ್ನಾಗಿ ಅರೆದು ಮೂರು ದಿವಸ ಭಾವನೆಮಾಡುವುದು. ಹಸು ವಿನಬೆಣ್ಣೆ ೪ ತೊಲೆ ಗೋಡೆಯಮೇಲೆ ಹಾಕಿ ಬಟ್ಟೆಯಲ್ಲಿ ಶೋಧಿಸಿಕೊಳ್ಳು ವುದು. ಮೇಲ್ಕಂಡ ದಿನಸುಗಳೆಲ್ಲವನ್ನೂ ತಾಂಬ್ರದ ತಟ್ಟೆಯಲ್ಲಿ ಹಾಕಿ ಕಂಚಿನ ಬಟ್ಟಲಿನಿಂದ ಚೆನ್ನಾಗಿ ಅರೆದು ತಾಂಬ್ರದ ಭರಣಿಯಲ್ಲಿಟ್ಟುಕೊಂಡು ೧ ಗುರು ಗಂಜಿಗಾತ್ರ ಕಣ್ಣಿಗೆ ಹಾಕುವುದು. ಇದರಿಂದ ಕಣ್ಣುಕೆಂಪು, ಕಣ್ಣಿನಲ್ಲಿ ನೀರು ಸುರಿಯುವುದು, ಕಣ್ಣುನೋವು, ನೇತ್ರವಾಯು ಗುಣವಾಗುವುದು.

೨೫. ಕರ್ಪೂರಾಂಜನ:—ಪಚ್ಚಕರ್ಪೂರ ಕಾಲುತೊಲೆ, ಯಾಲಕ್ಕಿ ಕಾಲು ತೊಲೆ, ತುಂಬೇಹೂವು ||| ತೊಲೆ, ಬಿಳೇಮೆಣಸು ಕಾಲುತೊಲೆ ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಶೋಧಿಸಿ ಅರೆಯುವ ದಿನಸುಗಳನ್ನು ಅರೆದು ಎಲ್ಲವನ್ನೂ ಶೇರಿಸಿ ಹಸುವಿನಬೆಣ್ಣೆ ೧॥ ತೊಲೆ, ಸೇರಿಸಿ ಚೆನ್ನಾಗಿ ಅರೆದು ತಾಂಬ್ರದ ಭರಣಿಯಲ್ಲಿಟ್ಟುಕೊಳ್ಳುವುದು. ೧ ಗುರುಗಂಜಿಗಾತ್ರ ಕಣ್ಣಿಗೆ ಹಾಕು ವುದರಿಂದ ಉಷ್ಣದಿಂದ ಹುಟ್ಟಿದ ಕಣ್ಣಿನ ರೋಗಗಳು ಗುಣವಾಗುವುವು.

೨೬. ಅಳಲೇಕಾಯಿಬೀಜದಲ್ಲಿರುವ ಪೊಪ್ಪು ೧ ವರಹ ತೂಕ, ಸಮುದ್ರ ಪಾಲಕಾಯಿ ೧ ವರಹ ತೂಕ, ಹಿಪ್ಪಲಿ ೧ ವರಹ ತೂಕ, ಬಿಳೀಕೊಮ್ಮೆಬೇರು ೧ ವರಹ ತೂಕ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹಸುವಿನ ಹಾಲು ೧ ಶೇರು ಹಾಕಿ ಚೆನ್ನಾಗಿ ಅರೆದು ಹೆಪ್ಪುಹಾಕಿ ಬೆಣ್ಣೆತೆಗೆದು ಕಂಚಿನ ತಟ್ಟೆ ಯಲ್ಲಿ ಹಾಕಿ ತಾಂಬ್ರದ ಪಂಚಪಾತ್ರೆಯಿಂದ ೧ ಜಾವ ಅರೆದಿಟ್ಟುಕೊಳ್ಳುವುದು. ಕಣ್ಣಿಗೆ ೧ ಗುರುಗಂಜಿಗಾತ್ರ ಹಾಕುವುದರಿಂದ ನೇತ್ರವಾಯು, ಶಿರೋಭಾರ ಗುಣವಾಗುವುದು.

೨೭. ನಯನಾಮೃತ:—ಹೂವುತೆಗೆದ ಲವಂಗ ೧ ತೊಲೆ, ಮರದರಿಸಿನ ॥ ತೊಲೆ, ಕಲ್ಲುಸಕ್ಕರೆ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಹುಳಿದಾಳಿಂಬರೆಹಣ್ಣಿನ ರಸದಲ್ಲಿ ಕಲಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಹುಳಿದಾಳಿಂಬರೇಹಣ್ಣಿನ ರಸ ೬ ತೊಲೆ, ಜೇನುತುಪ್ಪ ೧೨ ತೊಲೆ, ಕುಂಕುಮ ಕೇಸರಿ ಕಾಲುತೊಲೆ, ಪಚ ಕರ್ಪೂರ ೨ ಆಣೆ ತೂಕ ಇವುಗಳನ್ನೆಲ್ಲಾ ಚೆನ್ನಾಗಿ ಅರೆದು ಕಲಾಯಿಪಾತ್ರೆಯಲ್ಲಿ ಹಾಕಿ ಪಕ್ವವಾಗಿ ಕಾಯಿಸಿಟ್ಟುಕೊಳ್ಳುವುದು.

ಕಣ್ಣಿಗೆ ೨-೩ ತೊಟ್ಟು ಹಾಕುವುದು. ಇದರಿಂದ ಕಣ್ಣುಮಂಜು, ಕಣ್ಣಿನಲ್ಲಿ ನೀರುಸುರಿಯುವುದು, ಕಣ್ಣುಕೆಂಪು, ಕಣ್ಣಿನ ಅಂಬರಗಳು ಗುಣವಾಗುವುವು.

೨೮. ಪುಷ್ಪಾಂಜನ:—ಪಚ್ಚಕರ್ಪೂರ, ಕುಂಕುಮಕೇಸರಿ ಸಮತೂಕ ಖಲ್ವದಲ್ಲಿ ಹಾಕಿ ಚೆಂಡುಮಲ್ಲಿಗೆಸೊಪ್ಪಿನ ರಸದಲ್ಲಿ ೨ ದಿನ ಅರೆದು ಒಣಗಿಸಿ ಹಸುವಿನಬೆಣ್ಣೆಯಲ್ಲಿ ಅರೆದಿಟ್ಟುಕೊಳ್ಳುವುದು. ಕಣ್ಣುಗಳಿಗೆ ೧ ಗುರುಗಂಜಿ ಗಾತ್ರ ಹಾಕುವುದರಿಂದ ಕಣ್ಣು ತಣ್ಣಗೆ ಆಗಿ ನೇತ್ರರೋಗಗಳು ಗುಣ ವಾಗುವುವು.

೨೯. ಅಳಲೇಕಾಯಿ ತಂದು ಮೊಲೆಹಾಲಿನಲ್ಲಿ ಗಂಧತೇಯು ರಾತ್ರಿ ಮಲಗಿ ಕೊಳ್ಳುವಾಗ್ಗೆ ಕಣ್ಣಿಗೆ ೧-೨ ತೊಟ್ಟು ಹಾಕಿಕೊಳ್ಳುವುದರಿಂದ ಕಣ್ಣಿನ ಉರಿ ಗುಣವಾಗುವುದು.

೩೦. ಪಟಿಕೆ ಬೆಂಕಿಯಲ್ಲಿಟ್ಟು ಅರಳುಮಾಡಿದ್ದು ಕಾಲುತೊಲೆ, ಕೆಂಪು ಕಲ್ಲುಸಕ್ಕರೆ ಕಾಲುತೊಲೆ, ಬಿಳೀಜೀರಿಗೆ ಕಾಲುತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಬಟ್ಟೆಯಲ್ಲಿ ಗಂಟುಕಟ್ಟಿ ತಣ್ಣೀರಿನಲ್ಲಿ ನೆನೆಯಿಸಿ ಕಣ್ಣಿಗೆ ೩-೪ ತೊಟ್ಟು ಹಾಕುತ್ತಾಬಂದರೆ ಕಣ್ಣುನೋವು ಗುಣವಾಗುವುದು.

೩೧. ಹಸುವಿನ ಮೂತ್ರ ಅಳತೆ ೧ ಶೇರು, ಪುರಾತನ ಬೇವಿನಮರದ ಸೊಪ್ಪು ೧ ಹಿಡಿ ಒಂದು ಕಲಾಯಿಪಾತ್ರೆಯಲ್ಲಿ ಹಾಕಿ ೧ ಪಾವು ಹಸುವಿನ ಮೂತ್ರ ಉಳಿಯುವಂತೆ ಕಾಯಿಸಿ ಚೆನಾಗಿ ಕಿವಿಚಿ ಬಟ್ಟೆಯಲ್ಲಿ ಶೋಧಿಸಿ ಕೊಂಡು ಪುನಃ ಅದನ್ನು ಕಾಸಿದರೆ ಘಟ್ಟಿಯಾಗುತ್ತೆ. ಅದನ್ನು ಭರಣಿಗೆ ತೆಗೆದಿಟ್ಟುಕೊಂಡು ೧ ಗುರುಗಂಜಿಗಾತ್ರ ಕಣ್ಣಿಗೆ ಹಾಕುತ್ತಾಬರುವುದರಿಂದ ಕಣ್ಣುರೆಪ್ಪೆ ಉದುರಿಹೋಗುವುದು, ಸುಳುಕುಕಣ್ಣು ಗುಣವಾಗುವುದು.

೩೨. ಪಚ್ಚಕರ್ಪೂರ ೧ ವರಹ ತೂಕ, ಮಸಗು ೧ ವರಹ ತೂಕ, ಶೀ ತೊಂಡೇಹೂವು ೫ ಹಣ ತೂಕ, ಒಂದು ಕರೇಕೋಳಿ ಕಲೀಜಾದಲ್ಲಿರುವ ಪಿತ್ಥ, ಹಸುವಿನಬೆಣ್ಣೆ ೨ ತೊಲೆ ಇವುಗಳನ್ನು ಕಂಚಿನ ತಟ್ಟೆಯಲ್ಲಿ ಹಾಕಿ ತಾಂಬ್ರದ ಪಂಚಪಾತ್ರೆಯಿಂದ ಚೆನ್ನಾಗಿ ಅರೆದು ತಾಂಬ್ರದ ಭರಣಿಯಲ್ಲಿಡುವುದು. ಇದನ್ನು ೧ ಗುರುಗಂಜಿಗಾತ್ರ ಕಣ್ಣಿಗೆ ಹಾಕುತ್ತಾಬರುವುದರಿಂದ ಕಣ್ಣುಮಂಜು, ಕಣ್ಣಿ ನಲ್ಲಿ ನೀರುಸುರಿಯುವುದು ಗುಣವಾಗುವುದು.

೩೩. ಚಂದ್ರಾಂಜನ:—ಶುಂಠಿ ಕಾಲುತೊಲೆ, ಹಿಪ್ಪಲಿ ಕಾಲುತೊಲೆ, ಮೆಣಸು ಕಾಲುತೊಲೆ, ಅಳಲೇಕಾಯಿಸಿಪ್ಪೆ ಕಾಲುತೊಲೆ, ತಾರೇಕಾಯಿಸಿಪ್ಪೆ ಕಾಲು ತೊಲೆ, ನೆಲ್ಲೀಕಾಯಿ ಕಾಲುತೊಲೆ, ಬಿಳೀ ಲೋಧ್ರದಚಕ್ಕೆ ಕಾಲುತೊಲೆ, ಕವಡೆ (ಗವೆ) ಕಾಲುತೊಲೆ, ಪಚ್ಚಕರ್ಪೂರ ೧ ಆಣೆ ತೂಕ ಎಲ್ಲವನ್ನೂ ಚೂರ್ಣ ಮಾಡಿ ಶೋಧಿಸಿ ಕಂಚಿನ ತಟ್ಟೆಯಲ್ಲಿ ಹಾಕಿ ಜೇನುತುಪ್ಪ ೪ ತೊಲೆ ಹಾಕಿ ತಾಂಬ್ರದ ಪಂಚಪಾತ್ರೆಯಿಂದ ಚೆನ್ನಾಗಿ ಅರೆದಿಟ್ಟುಕೊಳ್ಳುವುದು. ೧ ಗುರುಗಂಜಿ

ಗಾತ್ರ ಕಣ್ಣುಗಳಿಗೆ ಹಾಕುವುದರಿಂದ ಇರಳುಕಣ್ಣು, ಕಣ್ಣಿನ ಅಮರಗಳು, ಕಣ್ಣಿನ ಹೂವು ಗುಣವಾಗುವುದು.

೩೪. ಹಾಗಲಸೊಪ್ಪು ತಂದು ಕುಟ್ಟಿ ರಸ ತೆಗೆದು ಶೋಧಿಸಿಕೊಂಡದ್ದು ೧ ಭಾಗ, ಜೇನುತುಪ್ಪ ೧ ಭಾಗ ಇವು ಎರಡು ಕಲಸಿ ೧ ಗುರುಗಂಜಿಗಾತ್ರ ಕಣ್ಣು ಗಳಿಗೆ ಇಟ್ಟರೆ ಇರಳುಕಣ್ಣು ಗುಣವಾಗುವುದು.

೩೫. ದಿವ್ಯಾಂಜನ (ಕಪ್ಪು):—ಹೊನಗೊನೆಬೇರು ೬ ತೊಲೆ ತಂದು ಚನ್ನಾಗಿ ಕುಟ್ಟಿ ಹೊಸಮಡಿಕೆಯಲ್ಲಿ ಹಾಕಿ ಹಸುವಿನಹಾಲು ೨ ಶೇರು ಹಾಕಿ ಕಾಯಿಸುವುದು. ಆ ಹಾಲಿಗೆ ಹೆಪ್ಪುಹಾಕಿ ಬೆಣ್ಣೆತೆಗೆದು, ಬೆಣ್ಣೆಯನ್ನು ನಿಂಬೇಹಣ್ಣುಗಳಿಗೆ ಮೆತ್ತಿ ಒಂದು ಹೊಸಮಡಿಕೆಗೆ ತಣ್ಣೀರು ಹಾಕಿ ಅದರಲ್ಲಿ ಬೆಣ್ಣೆ ಮೆತ್ತಿರುವ ನಿಂಬೇಹಣ್ಣುಗಳನ್ನು ಹಾಕಿ ಮುಚ್ಚಳ ಮುಚ್ಚಿಡಬೇಕು. ಪ್ರತಿದಿನವೂ ಹೊಸಹೊಸ ನೀರು ಹಾಕುತ್ತಾ ಹಳೇನೀರು ಬಿಸಾಡುತ್ತಾ ಈ ರೀತಿ ೫ ದಿನ ಇಟ್ಟು ಅನಂತರ ನಿಂಬೇಹಣ್ಣುಗಳಿಗೆ ಮೆತ್ತಿರುವ ಬೆಣ್ಣೆಯನ್ನು ತೆಗೆದುಕೊಂಡು ತಾಂಬ್ರದ ತಟ್ಟೆಯಲ್ಲಿ ಹಾಕಿ ಅದಕ್ಕೆ ಪೀತರೋಹಿಣಿ ಕಾಲು ತೊಲೆ, ಪಟಿಕ ಅರಳು ಕಾಲುತೊಲೆ, ಪಚ್ಚಕರ್ಪೂರ ಕಾಲುತೊಲೆ ಹಾಕಿ ತಾಂಬ್ರದ ಪಂಚಪಾತ್ರೆಯಿಂದ ೧ ದಿನವೆಲ್ಲಾ ಅರೆದು ಮಲ್ಲುಬಟ್ಟೆಯನ್ನು ತೊಳೆದು ಈ ಬಟ್ಟೆಯಲ್ಲಿ ಹಾಕಿ ಶೋಧಿಸಿ ಗಾಜಿನ ಭರಣಿಯಲ್ಲಿಟ್ಟುಕೊಳ್ಳುವುದು. ಕಣ್ಣುಗಳಿಗೆ ೧ ಗುರುಗಂಜಿಗಾತ್ರ ಹಾಕುವುದರಿಂದ ಎಲ್ಲಾವಿಧವಾದ ಕಣ್ಣಿನ ರೋಗಗಳು ಗುಣವಾಗುವುದು. ಹುಳಿ ಚಲದಿ ಕೂಡದು. ಹಾಲು ತುಪ್ಪ ಸಾರು ಅನ್ನ ಊಟಮಾಡುವುದು.

೩೬. ಹಸುವಿನಬೆಣ್ಣೆ ೩ ತೊಲೆ ತಂದು ಕೆಮ್ಮಣ್ಣಿನ ಗೋಡೆಯಮೇಲೆ ಹಾಕಿ ನೀರು ಹೀರಿದನಂತರ ತೆಗೆದು ಬೆಳ್ಳಿ ಬಟ್ಟಲಲ್ಲಿ ಹಾಕಿ ಪಚ್ಚಕರ್ಪೂರ ೧ ಆಣೆ ತೂಕ ಬೆಣ್ಣೆಯಲ್ಲಿ ಕಲಸಿ ಆ ಬೆಣ್ಣೆ ಆಲದಮರದ ಹತ್ತಿರ ತೆಗೆದು ಕೊಂಡುಹೋಗಿ ಸುಮಾರು ೧ ತೊಲೆ ಆಲದಹಾಲು ಹಾಕಿ ಚನ್ನಾಗಿ ಕಲಸಿ ತಾಂಬ್ರದತಟ್ಟೆಯಲ್ಲಿ ಹಾಕಿ ತಾಂಬ್ರದ ಪಂಚಪಾತ್ರೆಯಿಂದ ೧ ಜಾವ ಅರೆದಿಟ್ಟು ಕೊಳ್ಳುವುದು. ೧ ಗುರುಗಂಜಿಗಾತ್ರ ಕಣ್ಣಿಗೆ ಹಾಕುವುದರಿಂದ ಉಷ್ಣದಿಂದ ಹುಟ್ಟಿದ ಕಣ್ಣಿನ ರೋಗಗಳು, ಉಷ್ಣ ಪಿತ್ಥಕಾರಕದಿಂದ ಹುಟ್ಟಿದ ಕಣ್ಣಿನ ರೋಗಗಳು ಗುಣವಾಗುವುವು.

೩೭. ಪಟಿಕ ೧ ತೊಲೆ ತಂದು ಮೊಲೆಹಾಲಿನಲ್ಲಿ ಶುದ್ಧಿಮಾಡುವುದು, ಹುಳಿದಾಳಿಂಬರೆಹಣ್ಣಿನ ರಸದಲ್ಲಿ ಶುದ್ಧಿಮಾಡುವುದು, ಪಚ್ಚಕರ್ಪೂರ ೨ ಆಣೆ ತೂಕ, ಶೀತೊಂಡೇಹೂವು ೪ ಆಣೆ ತೂಕ, ಹಸುವಿನಬೆಣ್ಣೆ ಮುಕ್ಕಾಲು ತೊಲೆ ಇವುಗಳನ್ನೆಲ್ಲಾ ತಾಂಬ್ರದ ತಟ್ಟೆಯಲ್ಲಿ ಹಾಕಿ ತಾಂಬ್ರದ ಪಂಚಪಾತ್ರೆ ಯಿಂದ ಚೆನ್ನಾಗಿ ಅರೆದಿಟ್ಟುಕೊಂಡು ಕಣ್ಣುಗಳಿಗೆ ೧ ಗುರುಗಂಜಿಗಾತ್ರ

ಹಾಕುವುದರಿಂದ ಕಣ್ಣುಮಂಜು, ಕಣ್ಣಿನಲ್ಲಿ ನೀರುಸುರಿಯುವುದು ಇವುಗಳು ಗುಣವಾಗುವುವು.

೩೮. ಒಳ್ಳೇ ಬೇವಿನಸೊಪ್ಪಿನಕುಡಿ, ಯಳಚಿಸೊಪ್ಪು ಸುಮಾರಾಗಿ ಹುರಿದುಕೊಳ್ಳುವುದು. ಇವೆರಡೂ ಸಮಭಾಗ ಹಸುವಿನಬೆಣ್ಣೆಯಿಂದ ಚೆನ್ನಾಗಿ ಅರೆದಿಟ್ಟುಕೊಳ್ಳುವುದು. ಕಣ್ಣುಗಳಿಗೆ ೧ ಗುರುಗಂಜಿಗಾತ್ರ ಹಾಕುವುದರಿಂದ ಹುಳುಕುಕಣ್ಣು ಗುಣವಾಗುವುದು.

೩೯. ತಾರೇಕಾಯಿ ಬೀಜದಲ್ಲಿರುವ ಪೊಪ್ಪು ಮೊಲೆಹಾಲಿನಲ್ಲಿ ಗಂಧತೇದು ಕಣ್ಣಿಗೆ ಹಚ್ಚುತ್ತಾಬಂದರೆ ಇರಳುಕಣ್ಣು, ರಾತ್ರಿ ಕಾಣದೆ ಇರುವುದು ಗುಣವಾಗುವುದು.

೪೦. ಹೂವಿರುವ ಕಣ್ಣಿಗೆ ಬಿಳೇಕೊಮ್ಮೇಬೇರು ಹಸುವಿನತುಪ್ಪದಲ್ಲಿ ಗಂಧತೇದು ಹಾಕುವುದು. ನೀರು ಕಣ್ಣಿಗೆ ಬಿಳೇಕೊಮ್ಮೇಬೇರು ಹಸುವಿನ ಬೆಣ್ಣೆಯಲ್ಲಿ ಗಂಧತೇದು ಹಾಕುವುದು. ಕಣ್ಣಿನಲ್ಲಿ ನವೆ ಆಗುವದಕ್ಕೆ ಬಿಳೇಕೊಮ್ಮೇಬೇರು ಗರುಗದಸೊಪ್ಪಿನ ರಸದಲ್ಲಿ ಗಂಧತೇದು ಹಾಕುವುದು. ಇರಳುಕಣ್ಣಿಗೆ ಬಿಳೇಕೊಮ್ಮೇಬೇರು ಹಾಗಲಸೊಪ್ಪಿನ ರಸದಲ್ಲಿ ಗಂಧತೇದು ಹಾಕುವುದು. ದುರ್ಮಾಂಸ ಬೆಳೆದಿರುವ ಕಣ್ಣುಗಳಿಗೆ ಬಿಳೇಕೊಮ್ಮೇಬೇರು ಮೊಲೆಹಾಲಿನಲ್ಲಿ ಗಂಧತೇದು ಹಾಕುವುದು, ಅಥವಾ ಹಸೀಅರಿಸಿನರಸದಲ್ಲಿ ಗಂಧತೇದು ಹಾಕುವುದು. ಸನ್ನಿಪಾತಕಗಳಿಗೆ ಬಿಳೇಕೊಮ್ಮೇಬೇರು ವೀಳೇದೆಲೆಯ ರಸದಲ್ಲಿ ಗಂಧತೇದು ಹಾಕುವುದು. ಬಿಳೇಕೊಮ್ಮೇಬೇರು ನೇತ್ರರೋಗಗಳನ್ನೆಲ್ಲಾ ಗುಣವನ್ನುಂಟುಮಾಡುವುದು.

೪೧. ಹುಣಿಸೇಸೊಪ್ಪಿನ ರಸದಲ್ಲಿ ತಿನ್ನುವ ಉಪ್ಪಿನೊಳಗಿರುವ ಕರೀಮಣ್ಣನ್ನು ನುಣ್ಣಗೆ ಅರೆದು ಕುಡುಹುಮಾಡಿ ಮೊಸರು ನೀರಿನಿಂದ ಅರೆದು ಕಣ್ಣಿಗೆ ಹಚ್ಚಲು ವ್ರಣ, ತಿನಿಕು, ಮಂಜು, ಮಾಂಸಗ್ರಂಥಿ ಇವೆಲ್ಲವೂ ಗುಣವಾಗುವುವು.

---

## ಐವತ್ತುಮೂರನೆಯ ಅಧ್ಯಾಯ.

---

## ನಾಸಾರೋಗ—ಔಷಧಗಳು.

---

### ನಾಸಾರೋಗ ಲಕ್ಷಣ.

ನಾಸಾರೋಗದಲ್ಲಿ ವಾತಪ್ರತಿಶ್ಯಾಯ, ಪಿತ್ಥಪ್ರತಿಶ್ಯಾಯ, ಶ್ಲೇಷ್ಮಪ್ರತಿಶ್ಯಾಯ, ರಕ್ತಪ್ರತಿಶ್ಯಾಯ, ಸನ್ನಿಪಾತಪ್ರತಿಶ್ಯಾಯ, ಅಪೀನಸ, ಪೂತಿನಾಸ,

ನಾಸಾರ್ಶ, ಭ್ರಂಶಥು, ಕ್ಷವಥು, ನಾಸಾನಾಹ, ಪೂತಿರಕ್ತ, ಅರ್ಬುದ, ದುಷ್ಟ, ಪೀನಸ, ನಾಸಾಶೋಷ, ಘ್ರಾಣಪಾಕ, ಪೂಯಸ್ರಾವ, ದೀಪ್ತಕಗಳೆಂದು ಹದಿನೆಂಟು ವಿಧವಾಗಿರುವುದು.

ನಾಸಾರಂಧ್ರಗಳು ಬಿಗಿದು ಮುಚ್ಚಿದಂತಿರುವಿಕೆ, ತೆಳ್ಳನೆಯ ಶ್ಲೇಷ್ಮವು ಸ್ರವಿಸುವಿಕೆ, ಕಂಠವು, ತಾಲುಗಳು, ತುಟಿಗಳು ಒಣಗುವಿಕೆ, ಕಣ್ಣುಪಾರ್ಶ್ವಗಳಲ್ಲಿ ಛಳುಕು, ಅಧಿಕವಾದ ಶೀನುಗಳು, ಕಂಠಸ್ವರವು ಹೀನವಾಗುವಿಕೆ, ಇವು ವಾತ ಪ್ರತಿಶ್ಯಾಯ ಲಕ್ಷಣಗಳು.

ನಾಸಾರಂಧ್ರದಿಂದ ಉಷ್ಣವಾಗಿಯೂ, ಸ್ವಲ್ಪ ಹಳದಿಯಾಗಿರುವ ಶ್ಲೇಷ್ಮವು ಹೊರಡುವಿಕೆ, ಶರೀರವು ಸವೆದು ಪಾಂಡುವರ್ಣವುಂಟಾಗಿರುವಿಕೆ, ಸಂತಾಪ ವುಂಟಾಗುವಿಕೆ, ಬಾಯಿಯಿಂದ ಬೆಂಕಿಯನ್ನು ವಾಂತಿಮಾಡಿದಂತಿರುವಿಕೆ, ಇವು ಪಿತ್ಥಜಪ್ರತಿಶ್ಯಾಯ ಲಕ್ಷಣಗಳು.

ನಾಸಾರಂಧ್ರದಿಂದ ಶೀತಲವೂ, ಬಿಳುಪುವರ್ಣವೂ ಉಳ್ಳ ಕಫವು ಅಧಿಕ ವಾಗಿ ಸ್ರವಿಸುವಿಕೆ, ದೇಹವು ಬಿಳುಪಾಗುವಿಕೆ, ಶಿರೋಭಾರ, ಕಂಠ ತಾಲು, ಶಿರಸ್ಸು, ಇವುಗಳಲ್ಲಿ ಅಧಿಕ ತಿನಸು (ಕೆರೆತ) ಇವು ಕಫಜಪ್ರತಿಶ್ಯಾಯ ಲಕ್ಷಣಗಳು.

ನಾಸಾರಂಧ್ರದಿಂದ ರಕ್ತವು ಸ್ರವಿಸುವಿಕೆ, ಕಣ್ಣುಗಳು ಕೆಂಪಗಾಗುವಿಕೆ, ಉರಃಕ್ಷತವು, ಶ್ವಾಸವು ದುರ್ಗಂಧವಾಗಿರುವಿಕೆ, ವಾಸನೆ ತಿಳಿಯದಿರುವಿಕೆ, ಇವು ರಕ್ತಜಪ್ರತಿಶ್ಯಾಯ ಲಕ್ಷಣಗಳು.

ಪ್ರತಿಶ್ಯಾಯವು ಪಕ್ವವಾಗಿಯಾದರೂ, ಪಕ್ವವಾಗದಿದ್ದರೂ ಮಾತು ಮಾತಿಗೂ ಹುಟ್ಟಿ, ಚಿಕಿತ್ಸೆ ಮಾಡದಿದ್ದರೂ ನಶಿಸಿ ಮತ್ತು ಜನಿಸುತ್ತಿದ್ದರೆ ಅದು ಸನ್ನಿಪಾತಜಪ್ರತಿಶ್ಯಾಯ ಲಕ್ಷಣಗಳು ಇದು ಅಸಾಧ್ಯವು.

ಮೂಗಿನಲ್ಲಿ ವಾಯುವು ಪ್ರಕೋಪಿಸಿ ಕಫವನ್ನು ಶೋಷಿಸಿ ಶ್ವಾಸವು ಹೊರಡದೆ ಇರುವಿಕೆ, ಮೂಗಿನಲ್ಲಿ ದ್ರವವುಂಟಾಗಿರುವಿಕೆ, ಉರಿಯುಂಟಾಗುವಿಕೆ, ಇಂದ್ರಿಯಗಳಿಗೆ ಸ್ವಸ್ವ ವಿಷಯಜ್ಞಾನವು ಇಲ್ಲದಿರುವಿಕೆ, ಇದು ಪೀನಸ ವೆನ್ನಲ್ಪಡುವುದು.

ಉಷ್ಣದಿಂದ ಪಾಕವಾಗಿ ಪಿತ್ಥ, ಕಫ, ರಕ್ತಗಳು ಮೂರರಿಂದಲೂ ಕಂಠವು, ತಾಲುಗಳು ಇವುಗಳಲ್ಲಿ ವಾತವು ವೃದ್ಧಿಹೊಂದಿ ನಾಸಾರಂಧ್ರಗಳಿಂದಲೂ ಮುಖದಿಂದಲೂ, ದುರ್ಗಂಧದಿಂದೊಡಗೂಡಿದ ಸ್ರಾವವನ್ನುಂಟುಮಾಡುವುದು. ಇದು ಪೂತಿನಾಸವೆನ್ನಲ್ಪಡುವುದು.

ನಾಸಾರಂಧ್ರಗಳಲ್ಲಿ ಮಾಂಸಾಂಕುರಗಳು ಹುಟ್ಟಿ, ದೋಷಭೇದಗಳಿಂದ ಮೂಲ ರೋಗದಲ್ಲಿ ಹೇಳಲ್ಪಟ್ಟಿರುವ ಲಕ್ಷಣಗಳುಂಟಾಗಿರುವುದು. ಇದು ನಾಸಾಶ ವೆನ್ನಲ್ಪಡುವುದು.

ಕಫವು ಶಿರಸ್ಸಿನಲ್ಲಿ ವೃದ್ಧಿಹೊಂದಿ ಘನೀಭೂತವಾಗಿ ಪರಿಪಕ್ವವಾಗಿ ಲವಣರೂಪವನ್ನು ಹೊಂದಿ ನಾಸಾದ್ವಾರದಿಂದ ಹೊರಡುವುದು. ಇದು ಭ್ರಂಶಥುವೆನ್ನಲ್ಪಡುವುದು.

ನಾಸಿಕಾಮರ್ಮದಲ್ಲಿ ವಾತವು ದುಷ್ಟವಾಗಿ ಕಫದೊಡಗೂಡಿ ನಾಸಾರಂಧ್ರದಿಂದ ಅತಿ ತೀವ್ರವಾದ ಶಬ್ದವನ್ನುಂಟುಮಾಡಿದರೆ ಅದು ಕ್ಷವಥುವೆನ್ನಲ್ಪಡುವುದು. ಇದೆ ದೋಷಜಕ್ಷವಥುವೆಂತಲೂ ಹೇಳಲ್ಪಡುವುದು.

ಕಾರ ಮೊದಲಾದ ಪದಾರ್ಥಗಳು ಒಳಗೆ ಪ್ರವೇಶಿಸಿದಾಗ ಉಂಟಾಗುವ ಶೀನುಗಳು, ಆಗಂತುಕ ಕ್ಷುವಥುವೆನ್ನಲ್ಪಡುವುದು.

ಕಫವು ವಾತದೊಡನೆ ಕೂಡಿ ಮೂಗಿನಲ್ಲಿರುವ ಶ್ವಾಸಮಾರ್ಗವನ್ನಡ್ಡಗಿಸಿದರೆ ಅದು ನಾಸಾನಾಹವೆನ್ನಲ್ಪಡುವುದು.

ಪಿತ್ಥ ರಕ್ತಗಳು ವೃದ್ಧಿಹೊಂದಿಯಾದರೂ, ನೊಸಲಿಗೆ ಏಟುಬಿದ್ದಾಗಲಿ, ವಾತಾದಿ ದೋಷಗಳನ್ನು ವೃದ್ಧಿಹೊಂದಿಸಿ ಪರಿಪಾಕವನ್ನು ಹೊಂದಿ ನಾಸಾರಂಧ್ರದಿಂದ ರಕ್ತದಿಂದೊಡಗೂಡಿದ ಕೀವು ದುರ್ಗಂಧಯುಕ್ತವಾಗಿ ಸ್ರವಿಸುವುದು. ಇದು ಪೂತಿರಕ್ತವೆನ್ನಲ್ಪಡುವುದು.

ವಾತಾದಿದೋಷ ಪ್ರಕೋಪದಿಂದ ಮೂಗಿನಲ್ಲಿ ಉರುಗಳು ಹುಟ್ಟಿ ಅರ್ಬುದಕ್ಕೆ ಸಮಾನವಾದ ಲಕ್ಷಣಗಳುಂಟಾಗಿದ್ದರೆ ಅದು ನಾಸಾರ್ಬುದವೆನ್ನಲ್ಪಡುವುದು.

ಪ್ರತಿಶ್ಯಾಯವ್ಯಾಧಿ ಜನಿಸಿದಾಗ ನಾಸಾರಂಧ್ರಗಳೊಂದೊಂದುವೇಳೆ ಆರ್ದ್ರಗಳಾಗಿಯೂ, ಒಂದೊಂದುವೇಳೆ ಶುಷ್ಕಗಳಾಗಿಯೂ, ಶ್ಲೇಷ್ಮದಿಂದ ಅಡ್ಡಗಿಸಲ್ಪಟ್ಟ ದುರ್ಗಂಧದೊಡಗೂಡಿದ ನಿಶ್ವಾಸವು ಹೊರಹೊರಡುತ್ತಿದ್ದು, ಗಂಧಾಧಿಗಳು ತಿಳಿಯದಿದ್ದರೆ ಅಂತಹ ಪ್ರತಿಶ್ಯಾಯವೇ ದುಷ್ಟಪೀನಸವೆನ್ನಲ್ಪಡುವುದು.

ನಾಸಿಕವನ್ನಾಶ್ರಯಿಸಿದ ಸ್ರೋತಸ್ಸುಗಳು ವಾತಪ್ರಕೋಪದಿಂದ ಶೋಷಿಸಿ ಪಿತ್ಥದಿಂದ ತಪಿಸಿದ್ದಾದರೆ ನಾಸಿಕದಲ್ಲಿರುವ ಕಫವು ಶೋಷಿಸುವುದು. ಅದರಿಂದ ಉಚ್ಛ್ವಾಸನಿಶ್ವಾಸಗಳು ಕಷ್ಟದಿಂದುಂಟಾಗುತ್ತಿರುವುದು. ಇದು ನಾಸಾಶೋಷವೆನ್ನಲ್ಪಡುವುದು.

ಪಿತ್ಥಪ್ರಕೋಪದಿಂದ ಮೂಗಿನಲ್ಲಿ ವ್ರಣಗಳುಂಟಾಗುವುವು. ಅಂತಹ ವ್ರಣಗಳು ಆರ್ದ್ರಗಳಾಗಿ ದುರ್ಗಂಧದಿಂದೊಡಗೂಡಿದ್ದರೆ ಅದು ಘ್ರಾಣಪಾಕವೆನ್ನಲ್ಪಡುವುದು.

ನಾಸಾದ್ವಾರದಿಂದ ಅತಿಮಂದವಾಗಿ ಹಳದಿ, ಬಿಳಪು, ವರ್ಣಗಳುಳ್ಳ ಕಫವು ಸ್ರವಿಸುತ್ತಿದ್ದರೆ ಅದು ನಾಸಾಸ್ರಾವವೆನ್ನಲ್ಪಡುವುದು.

ಮೂಗಿನಲ್ಲಿ ಅಧಿಕವಾದ ಉರಿಯು ಹುಟ್ಟಿ ಹೊಗೆ ಹೊರಡುವಂತೆ ಮೇಲುಸುರು ಹೋಗುತ್ತಿದ್ದರೆ ಮೂಗು ಅಗ್ನಿಜ್ವಾಲೆಗಳಂತೆ ಉರಿಯುತ್ತಿದ್ದರೆ ಅದು ದೀಪ್ತಕವೆನ್ನಲ್ಪಡುವುದು.

### ಪೀನಸರೋಗಕ್ಕೆ ಚಿಕಿತ್ಸೆಗಳು.

೧. ಹಾವುನಂಜಿನಸೊಪ್ಪಿನಲ್ಲಿ ಇರುವ ಹಸುರುಹುಳ ೩, ಬಾದಾಮಿ ಎಣ್ಣೆ ಅರಪಾವು ಇವೆರಡು ಒಂದು ಬಾಂಡ್ಲಿಯಲ್ಲಿ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಕೊಂಡು ೨ ಮೂಗಿಗೂ ೨-೩ ತೊಟ್ಟು ಗುಣವಾಗುವವರಿವಿಗೂ ಹಾಕು ವುದು. ಇದರಿಂದ ರಕ್ತಪೀನಸ ಮೊದಲಾದ ಎಲ್ಲಾ ವಿಧವಾದ ಪೀನಸಗಳು ಗುಣವಾಗುವುದು.

ಹಸುವಿನಬೆಣ್ಣೆ ೧ ಪಾವು ತಂದು ತುಪ್ಪಮಾಡಿಟ್ಟುಕೊಳ್ಳುವುದು. ಜಂಗಲಿಬಾದಾಮಿ ೧೦ ಬಿಳೀದಾಗಿರುವ ಪೊಪ್ಪು ತೆಗೆದುಕೊಂಡು ಖಲ್ವದಲ್ಲಿ ಹಾಕಿ ಚೆನ್ನಾಗಿ ಅರೆದು ಮೇಲ್ಕಂಡ ತುಪ್ಪ ಹಾಕಿ, ಕುಂಕುಮಕೇಸರಿ ಕಾಲು ತೊಲೆ ಹಾಕಿ ಚೆನ್ನಾಗಿ ಅರೆದಿಟ್ಟುಕೊಳ್ಳುವುದು. ಮೇಲ್ಕಂಡ ಔಷಧವನ್ನು ಬೆಂಕಿಯಮೇಲಿಟ್ಟು ಬಿಸಿಮಾಡಿ ಐದು ತೊಟ್ಟು ಎರಡು ಮೂಗಿಗೂ ಗುಣವಾಗುವ ವರಿವಿಗೂ ಬೆಳಿಗ್ಗೆ ಸಾಯಂಕಾಲ ಹಾಕುವುದು. ಮೇಲ್ಕಂಡ ಔಷಧವನ್ನು ಮೂಗಿನಮೇಲೆ ಬೆಳಿಗ್ಗೆ ಸಾಯಂಕಾಲ ಸವರುತ್ತಿರುವುದು. ಇಚ್ಛಾಪತ್ಯ. ಚಲದಿಪದಾರ್ಥ ವರ್ಜ್ಯ. ಇದರಿಂದ ಸಕಲವಿಧ ಪೀನಸ, ಅಂಗಳದಲ್ಲಿ ರಂಧ್ರ ವಾಗಿರುವದು ಇವು ಗುಣವಾಗುವುದು.

೩. ಎಳೇ ಅಳಲೇಕಾಯಿ ೧ ತೊಲೆ, ಲವಂಗ ೧ ತೊಲೆ, ಅರತಿಕರ್ಪೂರ ೧ ಆಣೆ ತೂಕ, ಮುತ್ತುಗದಬೀಜ ೧ ತೊಲೆ, ಜಾಕಾಯಿ ॥ ತೊಲೆ, ದೊಡ್ಡ ಯಾಲಕ್ಕಿ ॥ ತೊಲೆ, ಕುಂಕುಮಕೇಸರಿ ಕಾಲುತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಒಂದು ಬಾಂಡ್ಲಿಯಲ್ಲಿ ಹಾಕಿ ಒಳ್ಳೆಣ್ಣೆ ೭॥ ತೊಲೆ, ಎಣ್ಣೆಗೆ ಸಮನೀರು ಹಾಕಿ ನೀರು ಇಂಗುವವರಿವಿಗೂ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಟ್ಟು ಕೊಳ್ಳುವುದು. ಒಂದು ಹಂಚೀಕಡ್ಡಿಗೆ ಅರಳೆ ಸುತ್ತಿ ಅದರಲ್ಲಿ ಈ ತೈಲವನ್ನು ತೆಗೆದು ೨ ಮೂಗಿಗೂ ಗುಣವಾಗುವವರಿವಿಗೂ ಸವರುತ್ತಲೂ ಬೆಳಿಗ್ಯೆ ಸಾಯಂ ಕಾಲ ಮೂಗಿಗೆ ಹಾಕುತ್ತಲೂ ಇರುವುದು. ಇದರಿಂದ ಮೂಗಿನಲ್ಲಿ ದುರ್ಮಾಂಸ ಬೆಳೆಯುವ ಪೀನಸ ಗುಣವಾಗುವುದು.

೪. ಕೆಂಪುಗಣಗಲಹೂವಿನ ರಸ, ತುಂಬೇಸೊಪ್ಪಿನ ರಸ, ಲಕ್ಕಿಸೊಪ್ಪಿನ ರಸ ಇವು ಮೂರೂ ಸಮಭಾಗ ಒಂದು ಬಾಂಡ್ಲಿಯಲ್ಲಿ ಹಾಕಿ ಒಳ್ಳೆಣ್ಣೆ ಹಾಕಿ ಕಾಯಿಸಿ ಶೋಧಿಸಿಕೊಂಡು ಎರಡು ಮೂಗಿಗೂ ೩-೪ ತೊಟ್ಟು ಬೆಳಿಗ್ಗೆ ಸಾಯಂ ಕಾಲ ಗುಣವಾಗುವವರಿವಿಗೂ ಹಾಕುತ್ತಾ ಬರುವುದು. ಇದರಿಂದ ಸಕಲವಿಧ ವಾದ ಪೀನಸ ಗುಣವಾಗುವುದು.

೫. ಹುಣಿಸೇಸೊಪ್ಪು ಕುಟ್ಟಿ ರಸ ತೆಗೆದು ಮೂಗಿಗೆ ೩-೪ ತೊಟ್ಟು ಹಾಕುವುದು. ಈರೀತಿ ಎರಡು ಮೂಗಿಗೂ ಗುಣವಾಗುವವರಿವಿಗು ಹಾಕುತ್ತಾ ಬರುವುದು. ಹುಣಿಸೇ ಎಲೆಯ ರಸ ಹರಳೆಣ್ಣೆ ಇವೆರಡು ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡು ತಲೆಗೆ ೭ ದಿನ ಹಚ್ಚಬೇಕು. ಇದರಿಂದ ರಕ್ತಪೀನಸ ಗುಣವಾಗುವುದು.

೬. ಎಕ್ಕದಹೂವು ಸುಟ್ಟ ಕರುಕು, ಕಸ್ತೂರಿ, ಕುಂಕುಮಕೇಸರಿ, ದಾಳಿಂಬೆಹೂವಿನ ರಸ, ಹಸೀಅರಿಸಿನದ ರಸ ಇವುಗಳನ್ನು ಖಲ್ವದಲ್ಲಿ ಹಾಕಿ ಮೇಕೆ ಮೂತ್ರದಿಂದ ಅರೆದು ಒಂದು ಬಾಂಡ್ಲಿಯಲ್ಲಿ ಒಳ್ಳೆಣ್ಣೆ ಮತ್ತು ನೀರು ಹಾಕಿ ಕಾಯಿಸಿ ಶೋಧಿಸಿ ೨ ಮೂಗಿಗೂ ೩-೪ ತೊಟ್ಟು ಬೆಳಿಗ್ಗೆ ಸಾಯಂಕಾಲ ೨ ಹೊತ್ತು ಗುಣವಾಗುವವರಿವಿಗೂ ಹಾಕಬೇಕು. ಇದರಿಂದ ಸಕಲವಿಧ ಪೀನಸ ಗುಣವಾಗುವುದು.

೭. ಅಫೀಂ ತಂದು ಮೂಗಿನಲ್ಲಿ ವಾಸನೆ ನೋಡಿದರೆ ಗುಣವಾಗುವುದು. ಅಶ್ವತ್ಥದ ಎಲೆ ರಾತ್ರಿಹೊತ್ತು ತಲೆಗೆ ಕಟ್ಟುವುದು. ಬಂದರಿಸೊಪ್ಪು ರಾತ್ರಿ ಹೊತ್ತು ತಲೆಗೆ ಕಟ್ಟಿದರೆ ಮೂಗಿನಲ್ಲಿ ನೀರು ಸುರಿಯುವ ಪೀನಸ ಗುಣವಾಗುವುದು. ಬಿಳೀಜೀರಿಗೆ ಕಾಲುತೊಲೆ, ಯಾಲಕ್ಕಿ ಕಾಲುತೊಲೆ, ಕುಂಕುಮಕೇಸರಿ ಕಾಲುತೊಲೆ ಇವು ಮೂರು ಖಲ್ವದಲ್ಲಿ ಅರೆದಿಟ್ಟುಕೊಂಡು ಎರಡು ಮೂಗಿಗೂ ಒಂದೊಂದು ಚಿಟಿಕೆ ನಸ್ಯ ಹಾಕುತ್ತಾ ಬರುವುದು. ಈರೀತಿ ೪೦ ದಿವಸ ಬೆಳಿಗ್ಗೆ ಸಾಯಂಕಾಲ ಹಾಕುತ್ತಾ ಬರಲು ಪೀನಸ ಗುಣವಾಗಿ ಹುಳು ಸತ್ತುಹೋಗುವುದು.

೮. ಬಾದಾಮಿಪೊಪ್ಪು ೧ ಪಾವು ಖಲ್ವದಲ್ಲಿ ಹಾಕಿ ಬಿಸಿನೀರಿನಿಂದ ಅರೆದು ಒಂದು ಬಾಂಡ್ಲಿಯಲ್ಲಿ ಹಾಕುವುದು. ಕುಂಕುಮಕೇಸರಿ ೧ ಆಣೆ ತೂಕ, ಗೋರೋಜನ ೧ ಆಣೆ ತೂಕ, ಕೆಂಪು ಅಗಸೇಹೂವಿನ ರಸ ೩ ತೊಲೆ, ಯಾಲಕ್ಕಿ ಕಾಲುತೊಲೆ, ಆರತಿ ಕರ್ಪೂರ ೧ ಆಣೆ ತೂಕ ಇವು ಖಲ್ವದಲ್ಲಿ ಅರೆದು ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಕಾಯಿಸಿ ಶೋಧಿಸಿಕೊಳ್ಳುವುದು. ಎರಡು ಮೂಗಿಗೂ ೩-೪ ತೊಟ್ಟು ಬೆಳಿಗ್ಗೆ ಸಾಯಂಕಾಲ ಗುಣವಾಗುವವರಿವಿಗೂ ಹಾಕಬೇಕು. ಇದರಿಂದ ಪೀನಸ ಗುಣವಾಗುವುದು.

೯. ಜುಟ್ಟುವೇಸೊಪ್ಪಿನ ಹಾಲು ಅಥವಾ ಜುಟ್ಟುವೇಸೊಪ್ಪಿನ ರಸವಾದರೂ ಸರಿಯೆ ಎರಡು ಮೂಗಿಗೂ ೩-೪ ತೊಟ್ಟು ಬೆಳಿಗ್ಗೆ ಹೊತ್ತು ಗುಣವಾಗುವವರಿವಿಗೂ ಹಾಕಬೇಕು. ಇದರಿಂದ ಪೀನಸ ಗುಣವಾಗುವುದು.

೧೦. ಷಡ್ಬಿಂದು ಘೃತ:—ಮರದರಿಸಿನ ಕಾಲುತೊಲೆ, ತುಪ್ಪದದೇವದಾರು ಕಾಲುತೊಲೆ, ಅಗರುಚಕ್ಕೆ ಕಾಲುತೊಲೆ, ವಾಯುವಿಳಂಗ ಕಾಲುತೊಲೆ, ಅತಿಮಧುರ ಕಾಲುತೊಲೆ, ದೊಡ್ಡಯಾಲಕ್ಕಿ ಕಾಲುತೊಲೆ, ಚಂಗಲಕೋಷ್ಠ

ಕಾಲುತೊಲೆ ಇವು ಕುಟ್ಟಿ ಚೂರ್ಣಮಾಡಿಕೊಳ್ಳುವುದು. ಅಫೀಂ ೧ ಅಣೆ ತೂಕ, ಗರುಗದಸೊಪ್ಪಿನ ರಸ ೩ ತೊಲೆ, ಆರತಿ ಕರ್ಪೂರ ೧ ಅಣೆ ತೂಕ ಇವು ಮೂರು ಖಲ್ವದಲ್ಲಿ ಅರೆದುಕೊಳ್ಳುವುದು. ಇವುಗಳೆಲ್ಲವನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ಹಸುವಿನತುಪ್ಪ ೧೨ ತೊಲೆ ಹಾಕಿ ಘೃತಪಕ್ವವಾಗಿ ಕಾಯಿಸಿಟ್ಟುಕೊಳ್ಳುವುದು. ಎರಡು ಮೂಗಿಗೂ ಈ ಘೃತವನ್ನು ಬೆಳಿಗ್ಗೆ ಸಾಯಂಕಾಲ ೨ ಹೊತ್ತು ಗುಣವಾಗುವವರಿವಿಗೂ ಸವರುತ್ತಾ ಬರುವುದು. ಇದರಿಂದ ಸಕಲ ಪೀನಸಗಳೂ ನಿವಾರಣೆಯಾಗುವುವು.

೧೧. ಕುಪ್ಪೇಸೊಪ್ಪಿನ ರಸ, ಹೊಟ್ಟುಸುಲಿದ ಬೆಳ್ಳುಳ್ಳಿ ಹಿಲಕು ೧, ಮೆಣಸು ೧ ಇವು ಖಲ್ವದಲ್ಲಿ ಅರೆದು ಬಟ್ಟೆಯಲ್ಲಿ ಶೋಧಿಸಿಕೊಂಡು ಎರಡು ಮೂಗಿಗೂ ೩-೪ ತೊಟ್ಟು ಬೆಳಿಗ್ಗೆ ಹೊತ್ತು ೧ ದಿನ ಹಾಕಿದರೆ ಪೀನಸ ಗುಣ ವಾಗುವುದು.

೧೨. ಪಾಪಟಿಬೇರು, ಮೆಣಸು ಇವೆರಡು ಖಲ್ವದಲ್ಲಿ ಹಾಕಿ ಹಸುವಿನತುಪ್ಪ ದಲ್ಲಿ ಅರೆದು ಒಂದು ಬಾಂಡ್ಲಿಯಲ್ಲಿ ಹಾಕಿ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ಕೊಳ್ಳುವುದು. ಎರಡು ಮೂಗಿಗೂ ೩-೪ ತೊಟ್ಟು ಬೆಳಿಗ್ಗೆ ಸಾಯಂಕಾಲ ಗುಣವಾಗುವವರಿವಿಗೂ ಹಾಕುತ್ತ ಬರುವುದು. ಇದರಿಂದ ಮೂಗಿನಲ್ಲಿ ನೀರು ಸುರಿಯುವ ಪೀನಸ ಗುಣವಾಗುವುದು.

೧೩. ತಪಸಿಚಕ್ಕೆ ಒಳಗಿನ ಕಂಡೆ, ಚಿತ್ರಮೂಲದಬೇರಿನ ತಿಗಡು ಇವು ಎರಡೂ ಚನ್ನಾಗಿ ಕುಟ್ಟಿ ಒಂದು ಬಾಂಡ್ಲಿಯಲ್ಲಿ ತಕ್ಕಷ್ಟು ಹಸುವಿನಬೆಣ್ಣೆ ಹಾಕಿ ಪಕ್ವವಾಗಿ ಕಾಯಿಸಿ ಶೋಧಿಸಿಟ್ಟುಕೊಳ್ಳುವುದು. ಅರಳೆ ಬತ್ತಿಮಾಡಿ ವೇಲ್ಕಂಡತುಪ್ಪದಲ್ಲಿ ನೆನೆಯಿಸಿ ಎರಡು ಮೂಗಿಗೂ ಬೆಳಿಗ್ಗೆ ಹೊತ್ತು ಗುಣವಾಗು ವವರಿವಿಗೂ ಬತ್ತಿಹಾಕಬೇಕು. ಇದರಿಂದ ಪೀನಸ ಗುಣವಾಗುವುದು.

೧೪ ದಾಳಿಂಬೆಹೂವಿನ ರಸ, ಗರಿಕೆಬೇರಿನ ರಸ, ಯಷ್ಟಿಮಧುಕ, ಮಾವಿನ ಬೀಜದ ಪೊಪ್ಪು ಇವು ನಾಲ್ಕು ಸಮಭಾಗ ಖಲ್ವದಲ್ಲಿ ಹಾಕಿ ಅಕ್ಕಿತೊಳೆದ ನೀರಿ ನಿಂದ ಅರೆದು ಬಟ್ಟೆಯಲ್ಲಿ ಶೋಧಿಸಿ ಎರಡು ಮೂಗಿಗೂ ೪-೫ ತೊಟ್ಟು ಹಾಕುತ್ತಾ ಬಂದರೆ ಮೂಗಿನಲ್ಲಿ ರಕ್ತ ಸುರಿಯುವುದು ಗುಣವಾಗುತ್ತೆ.

೧೫. ಲಾವಂಚದಬೇರು ತಂದು ನೀರುಹಾಕಿ ಅರೆದು ಬಟ್ಟೆಯಲ್ಲಿ ಶೋಧಿಸಿ ಕೊಂಡದ್ದು ೧ ತೊಲೆ, ಕಾವೀಕಲ್ಲು ಕಾಲುತೊಲೆ ಕುಟ್ಟಿ ಚೂರ್ಣಮಾಡಿ ಶೋಧಿಸಿ ವೇಲ್ಕಂಡೆ ರಸದಲ್ಲಿ ಕಲಸಿ ಬೆಳಿಗ್ಗೆ ಹೊತ್ತು ೩ ದಿನ ಕುಡಿಯಬೇಕು. ಇದಕ್ಕೆ ಪಥ್ಯ. ಹಸುವಿನಹಾಲು ಅನ್ನ. ಇದರಿಂದ ಮೂಗಿನಲ್ಲಿ ರಕ್ತ ಸುರಿಯು ವುದು ಗುಣವಾಗುವುದು.

೧೬. ಆಡುಸೋಗೇಸೊಪ್ಪು ಕುಟ್ಟಿ ರಸತೆಗೆದು ಸ್ವಲ್ಪ ಹಸುವಿನಹಾಲು ಹಾಕಿ ಕಾಯಿಸಿ ಬೆಳಿಗ್ಗೆ ಹೊತ್ತು ೩ ದಿನ ಕುಡಿಯಬೇಕು. ಇದಕ್ಕೆ ಪಥ್ಯ.

ಹಸುವಿನಹಾಲು ಅನ್ನ. ಇದರಿಂದ ಮೂಗಿನಲ್ಲಿ ರಕ್ತಸುರಿಯುವುದು ಗುಣ ವಾಗುವುದು.

೧೭. ಉಪ್ಪೇಸೊಪ್ಪಿನ ರಸ ಎರಡು ಮೂಗಿಗೆ ೪-೫ ತೊಟ್ಟು ಹಾಕಿದರೆ ಹುಳ ಸತ್ತು ಪೀನಸ ಗುಣವಾಗುವುದು.

೧೮. ಶುಂಠಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಅಳಲೇ ಕಾಯಿಸಿಪ್ಪೆ ೪ ತೊಲೆ, ತಾರೇಕಾಯಿಸಿಪ್ಪೆ ೪ ತೊಲೆ, ನೆಲ್ಲೀಕಾಯಿ ೪ ತೊಲೆ, ತುಪ್ಪದದೇವದಾರು ೪ ತೊಲೆ, ಶ್ರೀಗಂಧದಚಕ್ಕೆ ೨ ತೊಲೆ, ಮರದರಿಸಿನ ೪ ತೊಲೆ, ಕರ್ಕಾಟಕಶೃಂಗಿ ೨ ತೊಲೆ, ಅಮೃತಬಳ್ಳಿ ೪ ತೊಲೆ, ಶುದ್ಧಿಮಾಡಿದ ಪರಂಗಿಚಕ್ಕೆ ೪ ತೊಲೆ, ಮಂಜಿಷ್ಠ ೪ ತೊಲೆ, ದೊಡ್ಡಯಾಲಕ್ಕಿ ೧ ತೊಲೆ, ಲವಂಗಪತ್ರೆ ೧ ತೊಲೆ, ಕಚೋರ ೧ ತೊಲೆ, ಕಸ್ತೂರಿ ಅರಿಶಿನ ೧ ತೊಲೆ, ಲಾಮಂಚ ೧ ತೊಲೆ, ವಾಯುವಿಳಂಗ ೧ ತೊಲೆ, ಚಂಗಲಕೋಷ್ಠ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಟ್ಟುಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ಹಳೆಬೆಲ್ಲ ೧|| ಶೇರು ಹಾಕಿ ನೀರುಹಾಕಿ ತಂತುಪಾಕ ಬಂದ ಕೂಡಲೇ ಮೇಲ್ಕಂಡ ಚೂರ್ಣಹಾಕಿ ಜೇನುತುಪ್ಪ ೧ ಪಾವು, ಹಸುವಿನತುಪ್ಪ || ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯವನ್ನು ಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ, ಅರ್ಧತೊಲೆ ಬೆಳಿಗ್ಗೆ ಸಾಯಂಕಾಲ ೭-೧೪ ದಿನ ಕೊಡ ಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸಕಲ ಪೀನಸಗಳೂ ಗುಣವಾಗುವುವು.

೧೯. ಬಿಳೇಹಾಲುವಾಣದಸೊಪ್ಪಿನ ರಸ ೧ ತೊಲೆ, ಕೊಬರಿ ಎಣ್ಣೆ ೧ ತೊಲೆ, ಆರತಿಕರ್ಪೂರ ೨ ಆಣೆ ತೂಕ ಇವು ಮೂರು ಖಲ್ವದಲ್ಲಿ ಅರೆದು ಇಟ್ಟುಕೊಳ್ಳು ವುದು. ಕೋಳಿಗರಿಯಿಂದ ಮೂಗಿಗೆ ಹಾಕುವುದು. ಇದರಿಂದ ಗುಣ:— ಮೂಗಿನಲ್ಲಿ ಹೊಕ್ಕುಕಟ್ಟುವುದು, ಪೀನಸ, ಮೂಗಿನಹುಣ್ಣು ಗುಣವಾಗುವುದು. ತಲೆಯಲ್ಲಿ ಹುಳುಗಳಿದ್ದರೂ ಬಿದ್ದುಹೋಗುತ್ತೆ.

೨೦. ಕಹಿಹೀರೆಬೀಜ ದಪ್ಪವಾಗಿರುವದು ೨ ಆಣೆ ತೂಕ, ಜಾಕಾಯಿ ೧ ಆಣೆ ತೂಕ, ಜಾಪತ್ರೆ ೧ ಆಣೆ ತೂಕ, ಯಾಲಕ್ಕಿ ೧ ಆಣೆ ತೂಕ ಇವು ಗಳನ್ನು ಕುಟ್ಟಿ ಚೂರ್ಣಮಾಡುವುದು. ಕುಂಕುಮಕೇಸರಿ ೧ ಆಣೆ ತೂಕ ಖಲ್ವದಲ್ಲಿ ಅರೆದುಕೊಳ್ಳುವುದು. ಇವುಗಳೆಲ್ಲವನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ಹಸುವಿನತುಪ್ಪ ೧೬ ತೊಲೆ ಹಾಕಿ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಟ್ಟುಕೊಳ್ಳು ವುದು. ಎರಡು ಮೂಗಿಗೂ ೩-೪ ತೊಟ್ಟು ಬೆಳಿಗ್ಗೆ ಹೊತ್ತು ಗುಣವಾಗುವವರಿ ವಿಗು ಹಾಕುತ್ತಾಬರುವುದು. ಇದರಿಂದ ನಾಸಾರ್ಶಸ್ಸೆಲ್ಲಾ ಗುಣವಾಗುವುದು. ಮೂಗಿನಲ್ಲಿ ಹೊಕ್ಕುಕಟ್ಟುವುದೂ ಗುಣವಾಗುವುದು. ತೊಟ್ಲೆಕಾಯಿ ಒಳಗಿನ

ತಿರಳು ಬಟ್ಟೆಗೆ ಸವರಿ ಮೂಗಿನಹತ್ತಿರ ಹಿಡಿದು ೨-೩ ಸಲ ಮೂಸಿನೋಡಿದರೆ ಹುಳವು ಬಿದ್ದುಹೋಗಿ ಪುನಃ ಹೊಕ್ಕು ಕಟ್ಟುವುದಿಲ್ಲ.

೨೧. ಜಿಂಕೆಚರ್ಮ ೧ ವರಹ ತೂಕ, ನವಿಲುಗರಿಕಣ್ಣು ೧ ವರಹ ತೂಕ, ಹಸುವಿನತುಪ್ಪ ೨ ವರಹ ತೂಕ ಇವು ಮೂರು ಸೌಟಿನಲ್ಲಿ ಹಾಕಿ ಬೆಂಕಿಯ ಮೇಲಿಟ್ಟು ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡು ಇಟ್ಟುಕೊಳ್ಳುವುದು. ೩-೪ ತೊಟ್ಟು ಎರಡು ಮೂಗಿಗೂ ಹಾಕುವುದು. ಈರೀತಿ ಬೆಳಿಗ್ಗೆಹೊತ್ತು ಗುಣವಾಗುವವರಿವಿಗು ಹಾಕುತ್ತಿರುವುದು. ಇದರಿಂದ ರಕ್ತಪೀನಸ, ಮೂಗು ಕಟ್ಟಿಕೊಳ್ಳುವ ಪೀನಸ ಗುಣವಾಗುವುದು.

೨೨ ರಾಮಗುಳ್ಳದಸೊಪ್ಪು, ಚೌಡಂಗಿಸೊಪ್ಪು, ಬೇವಿನಸೊಪ್ಪು, ಬಿಳೇಹಾಲುವಾಣದಸೊಪ್ಪು ಇವು ನಾಲ್ಕು ಒಣಗಿಸಿ ಚೂರ್ಣಮಾಡಿ ಶೋಧಿಸಿ ೨ ಮೂಗಿಗೆ ಒಂದೊಂದು ನಶ್ಯದ ಚುಟಕಿಯಷ್ಟು ನಸ್ಯ ಹಾಕುವುದು. ಈರೀತಿ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ಗುಣವಾಗುವವರಿವಿಗು ಹಾಕುತ್ತಿರುವುದು. ಇದರಿಂದ ನೀರು ಪೀನಸ, ಹೊಕ್ಕು ಪೀನಸ, ರಕ್ತ ಪೀನಸ ಗುಣವಾಗುವುದು.

೨೩. ಚೌಡಂಗಿಸೊಪ್ಪು ಹಸುವಿನ ಹಾಲಿನೊಂದಿಗೆ ರುಬ್ಬಿ ಬಟ್ಟೆಯಲ್ಲಿ ಶೋಧಿಸಿಕೊಂಡು ೨ ಮೂಗಿಗೂ ೫ ತೊಟ್ಟು ರಸ ಹಾಕುವುದು. ಹೊಟ್ಟೆಗೆ ೨ ತೊಲೆ ರಸ ಕುಡಿಸುವುದು. ಬೆಳಿಗ್ಗೆ ಸಾಯಂಕಾಲ ೩ ದಿವಸ ಕೊಡುವುದು. ಮೂಗಿಗೆ ಬೆಳಿಗ್ಯೆ ಸಾಯಂಕಾಲ ೩ ದಿವಸ ಹಾಕಬೇಕು. ಇದಕ್ಕೆ ಪಥ್ಯ. ಹಸುವಿನಹಾಲು ಅನ್ನ. ಮೂಗಿನಲ್ಲಿರುವ ಹುಳು ಬಿದ್ದುಹೋಗಿ ಪೀನಸ ಗುಣವಾಗುವುದು

೨೪. ಸಾಂಬ್ರಾಣಿ, ಜಟಾಮಾಂಸಿ, ಚಂಗಲಕೋಷ್ಠ, ಬಜೆ, ಶುಂಠಿ ಸಮತೂಕ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ೨ ಮೂಗಿಗೂ ಒಂದೊಂದು ನಸ್ಯದ ಚಿಟಕೆಯಷ್ಟು ನಸ್ಯ ಬೆಳಿಗ್ಗೆ ಸಾಯಂಕಾಲ ಗುಣವಾಗುವವರಿವಿಗು ಹಾಕುತ್ತಾ ಬರುವುದು. ಇದರಿಂದ ಮೂಗಿನವಾಸನೆ ದಿಂಡುನೋವು ಗುಣವಾಗುವುದು.

೨೫. ಕರೇಲಕ್ಕಲಿಸೊಪ್ಪಿನ ರಸ, ನಾರುಂಬೇಳೆಸೊಪ್ಪಿನ ರಸ ಇವೆರಡು ನೇರಿಸಿ ಮೂಗಿಗೆ ೩-೪ ತೊಟ್ಟು ೨ ಮೂಗಿಗೂ ೨ ದಿನ ಹಾಕಿ ೩ನೇ ದಿನ ಚೇಳುಕೊಂಡಿಸೊಪ್ಪುಹೂವು ಸಮೇತ ಚನ್ನಾಗಿ ಕುಟ್ಟಿ ರಸ ತೆಗೆದು ಎರಡು ಮೂಗಿಗೂ ೩-೪ ತೊಟ್ಟು ಹಾಕಿದರೆ ಅಸಾಧ್ಯವಾದ ಪೀನಸ ಗುಣವಾಗುವುದು.

೨೬. ಶೊಂಠಿ ೧ ತೊಲೆ, ವಾಯುವಿಳಂಗ ೧ ತೊಲೆ, ಗುಗ್ಗುಳ ೧ ತೊಲೆ, ಕರ್ಕಾಟಕಶೃಂಗಿ ೧ ತೊಲೆ, ಜಟಾಮಾಂಸಿ ೧ ತೊಲೆ, ಬಜೆ ೧ ತೊಲೆ, ಕುಂಕುಮಕೇಸರಿ ಕಾಲುತೊಲೆ ಇವುಗಳು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಈ ಚೂರ್ಣವನ್ನು ನಸ್ಯ ಹಾಕುತಾ ಬಂದರೆ ಪೀನಸ ಗುಣವಾಗುವದು.

೨೭. ಮಂಜಿಷ್ಠ ೧ ತೊಲೆ, ಕುಂಕುಮಕೇಸರಿ ಕಾಲುತೊಲೆ, ಗೋರೋಜನ ೧ ಆಣೆ ತೂಕ ಹಸುವಿನಬೆಣ್ಣೆ ೪ ತೊಲೆ ಖಲ್ವದಲ್ಲಿ ಚನ್ನಾಗಿ ಅರೆದು ಒಂದು ಗಾಜಿನ ಬಟ್ಟಲಿನಲ್ಲಿ ಹಾಕಿ ಬಿಸಲಿನಲ್ಲಿಟ್ಟು ತುಪ್ಪ ಆದಮೇಲೆ ಮೂಗಿಗೆ ೩-೪ ತೊಟ್ಟು ೨ ಮೂಗಿಗೂ ಬೆಳಿಗ್ಗ ಸಾಯಂಕಾಲ ಗುಣವಾಗುವವರಿವಿಗು ಹಾಕುವುದು. ಇದರಿಂದ ಪೀನಸ ಗುಣವಾಗುವುದು.

೨೮. ಓಮ || ತೊಲೆ, ಅರಿಸಿನ ಕಾಲುತೊಲೆ ಇವು ಕುಟ್ಟಿ ಚೂರ್ಣ ಮಾಡಿ ಶೋಧಿಸಿ ಬೇವಿನ ಎಣ್ಣೆ ೧|| ತೊಲೆ ಇವುಗಳನ್ನೆಲ್ಲಾ ಬಾಂಡ್ಲಿಯಲ್ಲಿ ಹಾಕಿ ಕಾಯಿಸಿ ಶೋಧಿಸಿಟ್ಟುಕೊಂಡು ಮೂಗಿಗೆ ೩-೪ ತೊಟ್ಟು ೨ ಮೂಗಿಗೂ ಗುಣವಾಗುವವರಿವಿಗು ಹಾಕುವುದು. ಇದರಿಂದ ಮೂಗಿನಲ್ಲಿ ನೀರುಸುರಿಯುವ ಪೀನಸ ಗುಣವಾಗುವುದು.

೨೯. ಮೆಣಸುಚೂರ್ಣ ಕಾಲುತೊಲೆ, ಹಸುವಿನತುಪ್ಪ ೨ ತೊಲೆ ಇವುಗಳನ್ನು ಬಾಂಡ್ಲಿಯಲ್ಲಿ ಕಾಯಿಸಿ ಶೋಧಿಸಿಟ್ಟುಕೊಂಡು ಮೂಗಿಗೆ ೩-೪ ತೊಟ್ಟು ೨ ಮೂಗಿಗೂ ಗುಣವಾಗುವವರಿವಿಗು ಹಾಕುತ್ತಾಬರುವುದು. ಇದರಿಂದ ಮೂಗಿನಲ್ಲಿ ನೀರುಸುರಿಯುವ ಪೀನಸ ಗುಣವಾಗುವುದು.

# ಐವತ್ತುನಾಲ್ಕನೆಯ ಅಧ್ಯಾಯ.

## ದಂತರೋಗ—ಔಷಧಗಳು.

### ದಂತರೋಗ ಲಕ್ಷಣ.

ದಂತರೋಗಗಳು :—ದಂತಚಲನ, ಕ್ರಿಮಿದಂತ, ದಂತಹರ್ಷ, ವಾತದಂತ, ಶರ್ಕರಾದಂತ, ಶ್ಯಾವದಂತ, ಹನುದಂತ, ಕಪಾಲದಂತವೆಂದು ಎಂಟು ಪ್ರಕಾರವು.

ದಂತಚಲನವೆಂಬ ದಂತರೋಗದಲ್ಲಿ ಹಲ್ಲುಗಳು ಅಲ್ಲಾಡುವುವು, ವಾಯುವಿನಿಂದ ಮಹಾ ವೇದನೆಯುಂಟಾಗಿಹುದು. ಕ್ರಿಮಿದಂತವೆಂಬ ರೋಗದಲ್ಲಿ ಹಲ್ಲುಗಳು ಕಪ್ಪಾಗಿ ರಂಧ್ರಗಳುಂಟಾಗಿ ಆ ರಂಧ್ರಗಳಿಂದ ಕೀವೂ ರಕ್ತವೂ ಸುರಿವುದು. ದಂತಹರ್ಷವೆಂಬ ದಂತರೋಗದಲ್ಲಿ ಹಲ್ಲುಗಳು ತಣ್ಣೀರು ಸಹಿಸದು, ಶಿರಸ್ಸಿನಲ್ಲಿಯೂ ಮುಖದಲ್ಲಿಯೂ ಜುಮ್ಮೆಂದೆತ್ತಿ ಮಹಾ ವೇದನೆಯುಂಟಾಗಿಹುದು. ವಾತದಂತವೆಂಬ ದಂತರೋಗದಲ್ಲಿ ದಂತಗಳು ಸಡಲಿಬೀಳುವುದು, ಮಹಾ ವೇದನೆಯುಂಟಾಗಿಹುದು, ಇದ್ದ ಹಲ್ಲುಗಳೂ ಡೊಂಕಾಗಿಹವು, ಇದು ಶ್ಲೇಷ್ಮ ವಾತ

ಗಳಿಂದ ಉಂಟಾಗತಕ್ಕುದು. ಶುಷ್ಕವಾದ ಶ್ಲೇಷ್ಮದೋಷಗಳಿಂದ ಉಂಟಾದ ಶರ್ಕರಾದಂತವೆಂಬ ದಂತರೋಗದಲ್ಲಿ ಸುಣ್ಣದಕಲ್ಲಿನಂತೆ ಕಠಿನವಾಗಿ ಸ್ಥಿರವಾಗಿ ದಂತಗಳು ತುಮುರುತುಮುರಾಗಿ ಉದುರುವುದು. ಶ್ಯಾವದಂತವೆಂಬ ದಂತ ರೋಗದಲ್ಲಿ ಹಲ್ಲುಗಳು ಪಿತ್ಥ ರಕ್ತದೋಷಗಳಿಂದ ಬೆಂದು ಕಂದುವಕಾರಣ ಕಂಟಾಗಿಹವು, ಆದಕಾರಣ ಶ್ಯಾವದಂತವೆಂಬ ಹೆಸರು. ಹನುದಂತವೆಂಬ ದಂತ ರೋಗದಲ್ಲಿ ಹಲ್ಲುಗಳು ಕಟವಾಯಿ ಸಂದುಗಳಲ್ಲಿ ವಾತದಿಂದ ಅತ್ಯಂತ ವಕ್ರ ವಾಗಿ ಮುಖವನ್ನು ವಕ್ರವಾಗಿ ಮಾಡುವುದು. ದಂತಕಪಾಲಿಕೆ ಎಂಬ ದಂತ ರೋಗದಲ್ಲಿ ಹಲ್ಲುಗಳು ತನಗೆತಾನೆ ಒಡೆದು ದಂತಗಳು ನಷ್ಟವಾಗಿ ಹೋಗುವುವು, ಈ ಎಂಟು ಪ್ರಕಾರವಾದ ದಂತರೋಗಗಳಲ್ಲಿ ದಂತಹರ್ಷವೆಂಬ ದಂತರೋಗ ಯಾಪ್ಯ, ಶ್ಯಾವದಂತವೆಂಬ ದಂತರೋಗವೂ, ವಾತದಂತವೆಂಬ ದಂತರೋಗವೂ ಅಸಾಧ್ಯಂಗಳು.

ದಂತಮೂಲ ರೋಗಂಗಳು ಹದಿನೈದು ಪ್ರಕಾರ ಅದೆಂತೆನೆ:—ಶೀತದಂತ, ದಂತವೇಷ್ಟ, ಚಲದಂತ, ಪುಪ್ಪುಟ, ಸೌಷಿರ, ಮಹಾಸೌಷಿರ, ವಿವರ್ಧನ, ವೈದರ್ಭ, ಉಪಕುಶ, ಪ್ರವಿಧಾನ, ಅಧಿಮಾಂಸ ಎಂದು ಇವು ೧೧ ಪ್ರಕಾರವು. ದಂತಗಳ ವ್ರಣ ನಾಲ್ಕುತೆರ, ಅಂತೂ ದಂತಮೂಲರೋಗಗಳು ಹದಿನೈದು. ದಂತಗಳಿಗೆ ಆಧಾರವಾದ ಮಾಂಸ ಕೆಟ್ಟು, ಕಪ್ಪಾಗಿ, ಮೃದುವಾಗಿ, ದುರ್ಗಂಧ ಸಹಿತವಾಗಿ ರಕ್ತ ಸುರಿಯುತಲಿದ್ದರೆ ಶೀತದಂತವೆನ್ನಿಸಿಕೊಳ್ಳುಂಬುದು. ಶ್ಲೇಷ್ಮ ರಕ್ತದಿಂದ ಹುಟ್ಟುವುದು. ದಂತಗಳಿಂದ ರಕ್ತ ಸುರಿಯುತ ನಾತವುಂಟಾಗಿ ದಂತ ಗಳು ಅಲ್ಲಾಡುತ್ತಿದ್ದರೆ ದಂತವೇಷ್ಟವೆನ್ನಿಸಿಕೊಂಬುದು. ಈ ರೋಗ ರಕ್ತ ದೋಷದಿಂದ ಹುಟ್ಟುವುದು ಉಯ್ಯಾಲದಂತೆ ದಂತಗಳು ತೂಗಲಾಡುತ, ಮುಟ್ಟದರೆ ಮುಟ್ಟಸಲೀಯದೆ ಬಹಳನೋವು ಕೂಡಿದ್ದರೆ ಚಲದಂತವೆನ್ನಿಸಿ ಕೊಂಬುದು, ಇದು ಶ್ಲೇಷ್ಮರಕ್ತಗಳಿಂದ ಹುಟ್ಟುವುದು. ಯಳಚೇಬೀಜದ ಆಕಾರದೊಳು ಯುಣರುಗಳಲ್ಲಿ ಗಂಟುಗಳು ಕಟ್ಟಿ ಬಾತುಕೊಂಡು ಮಹಾ ವೇದನೆ ಯುಂಟಾಗಿ ಎರಡುಹಲ್ಲು ಮೂರುಹಲ್ಲುಗಳಾದರೂ ಬೆಂದಹಾಗೆ ಕಂದಿಕೊಂಡು ವಿವರ್ಣವಾಗಿದ್ದರೆ ದಂತಪುಪ್ಪುಟವೆನಿಸುವುದು. ಶ್ಲೇಷ್ಮ ರಕ್ತಗಳಿಂದ ಯುಣರು ಬಾತುಕೊಂಡು ತೀವ್ರವಾದ ನೋವಿನೊಡನೆ ತಿಮಿರುಂಟಾಗಿ ಬಾಯಲ್ಲಿ ವಿಶೇಷ ಜೊಲ್ಲುಸುರಿಯುತ್ತಿದ್ದರೆ ಸೌಷಿರವೆನ್ನಿಸುವುದು. ಮಹಾಸೌಷಿರವೆಂಬ ದಂತ ಮೂಲರೋಗದಲ್ಲಿ ಹಲ್ಲುಗಳು ಅಲ್ಲಾಡುವುದು, ಕಟವಾಯಿಗಳೊಡೆಯುವವು, ಕೀವೂ ರಕ್ತವೂ ಸುರಿಯುವುದು ಈ ರೋಗ ದೋಷತ್ರಯದಿಂದ ಹುಟ್ಟು ವುದು. ವಿವರ್ಧನವೆಂಬ ದಂತ ಮೂಲರೋಗ ವಾತಾಧಿಕ್ಯದಿಂದುಂಟಾಗಿ ದಂತ ಗಳು ಬಹಳ ನೀಟವಾಗಿ ವೇದನೆಯೊಡನೆ ಯುಣರುಗಳಲ್ಲಿ ನೋವುಂಟಾಗುವುದು.

ವೈದರ್ಭವೆಂಬ ದಂತ ಮೂಲರೋಗ ರಕ್ತವಾತಗಳಿಂದ ಹುಟ್ಟುವುದು, ಯಣರುಗಳಲ್ಲಿ ಮಹಾ ವೇದನೆ ಉಂಟಾಗಿಹುದು, ದಂತಗಳು ಸಡಲಿ ಅಲ್ಲಾಡುವುವು, ಹಲ್ಲುಗಳು ಬೀಳುವುವು, ಯಣರುಗಳು ಬೆಂದಹಾಗೆ ಕಂದಿಕೊಂಡು ವಿವರ್ಣವಾಗಿ ಉರಿತವುಂಟಾಗಿಹವು. ಉಪಕುಶವೆಂಬ ದಂತ ಮೂಲರೋಗದಲ್ಲಿ ರಕ್ತ ಸುರಿದುಹೋದರೂ ಬಾವು ತಗ್ಗದು, ಬಾಯಿ ದುರ್ಗಂಧಯುಕ್ತವಾಗಿಹುದು, ಇದು ರಕ್ತಪಿತ್ಥದಿಂದ ಹುಟ್ಟುವುದು. ಪರಿಧರವೆಂಬ ದಂತ ಮೂಲರೋಗದಲ್ಲಿ ಯಣರುಗಳು ಒಡೆದು ಯಾವಾಗಲೂ ರಕ್ತಸುರಿವುದು ಈ ರೋಗವು ಶ್ಲೇಷ್ಮ ಪಿತ್ಥ ರಕ್ತಗಳಿಂದ ಹುಟ್ಟುವುದು. ಅಧಿಮಾಂಸವೆಂಬ ದಂತ ಮೂಲರೋಗದೊಳು ದಾಡೆಗಳ ಮೂಲೆಗಳ ಸಂದುಗಳಲ್ಲಿ ಬಾತುಕೊಂಡು ವೆಗ್ಗಳವಾಗಿ ನೋವು ಉಂಟಾಗಿ ಜೊಲ್ಲುಸುರಿವುದು ಈ ರೋಗ ಶ್ಲೇಷ್ಮದೋಷಗಳಿಂದ ಹುಟ್ಟುವುದು. ಸಿತದಂತ ಮೊದಲಾದ ದಂತ ಮೂಲರೋಗಗಳನ್ನು ಶೀಘ್ರವಾಗಿ ಚಿಕಿತ್ಸೆಯಿಂದ ಸಾಧ್ಯಮಾಡಬೇಕು, ಉಪೇಕ್ಷೆಮಾಡಿದರೆ ನಾಳಿ ಬಿದ್ದು ನೂತಿಯಹವು. ಆ ನೂತಿಗಳು ವಾತದಿಂದಲೂ, ಪಿತ್ಥದಿಂದಲೂ, ಶ್ಲೇಷ್ಮದಿಂದಲೂ, ದೋಷತ್ರಯದಿಂದಲೂ ಈ ನಾಲ್ಕು ವಿಧವಾಗಿ ನಾಳೀ ವ್ರಣವಹುದು. ನಾಳೀ ವ್ರಣವೇ ನೂತಿಯೆನ್ನಿಸಿಕೊಂಬುದು.

ಆಸ್ಯಪಾಕವೆಂಬ ರೋಗ ವಾತಜನ್ಯ, ಪಿತ್ಥಜನ್ಯ, ಶ್ಲೇಷ್ಮಜನ್ಯ, ರಕ್ತಜನ್ಯ, ತ್ರಿದೋಷಜನ್ಯವೆಂದು ೫ ಪ್ರಕಾರ. ಬಾಯಿತುಂಬ ಬೊಕ್ಕೆಗಳುಂಟಾಗಿ ಬೆವರುತ ಮುಟ್ಟಿದರೆ ಬಿರುಸಾಗಿರುವುದು ಇದು ವಾತದಿಂದುಂಟಾಗುವದು. ನಾಲಿಗೆಯಲ್ಲಿಯೂ ತುಟಿಯಲ್ಲಿಯೂ ಸ್ಫೋಟಿಕಗಳುಂಟಾಗಿ, ರಕ್ತಕೂಡಿ ಉರಿಯುಂಟಾಗಿ ಶೀತದ್ರವ್ಯದಮೇಲೆ ಇಚ್ಛೆ ಹುಟ್ಟಿದ್ದರೆ ಪಿತ್ಥಜನ್ಯವೆಂದು ತಿಳಿವುದು. ಶ್ಲೇಷ್ಮದಿಂದ ಹುಟ್ಟಿದ ಆಸ್ಯಪಾಕದಲ್ಲಿ ಬಾಯೊಳು ಬೊಕ್ಕೆ ತಿಮಿರಸಹಿತವಾಗಿ ನೋವಿಲ್ಲದೆಯಿಹುದು. ರಕ್ತದಿಂದ ಹುಟ್ಟಿದ ಆಸ್ಯಪಾಕದಲ್ಲಿ ಬಾಯಲ್ಲಿ ಬೊಕ್ಕೆವುಂಟಾಗಿ ರಕ್ತವನ್ನು ಸುರಿಯುತಲಿಹುದು. ಸನ್ನಿಪಾತದಿಂದ ಹುಟ್ಟಿದ ಆಸ್ಯಪಾಕದಲ್ಲಿ ಎಲ್ಲ ಲಕ್ಷಣಗಳೂ ಕೂಡಿ ಬಾಯೊಳಗೆ ಬೊಕ್ಕೆಗಳು ತುಂಬಿಕೊಂಡಿಹವು.

ಕೆಲವರು ಆಚಾರ್ಯರುಗಳು ಐದುತೆರನಾದ ಆಸ್ಯಪಾಕವಲ್ಲದೆ ಮತ್ತೂ ಮೂರು ವ್ಯಾಧಿಗಳು ಮುಖದಲ್ಲಿ ಉಂಟೆಂದು ಹೇಳುವರು. ಅದೆಂತೆನೆ :—ಅರ್ಶಗುಲ್ಮಾದಿಗಳಿಂದ ವಾಯು ಅಪಾನಮಾರ್ಗದಲ್ಲಿ ತಡೆಯಲ್ಪಟ್ಟಿದ್ದು ಊರ್ಧ್ವಮುಖವಾಗಿ ಮೇಲಕ್ಕೈದಿಮುಖದಲ್ಲಿ ದುರ್ಗಂಧವನ್ನುಂಟುಮಾಡುವದು. ಅದು ಊರ್ಧ್ವಗುದವೆನ್ನಿಸಿಕೊಂಬುದು. ದವಡೆಗಳಲ್ಲಿ ಶ್ಲೇಷ್ಮದೋಷದಿಂದ ತಿಮಿರಸಹಿತ ಬೊಕ್ಕೆವುಂಟಾಗಿ ಅದು ಕಪೋಲಾರ್ಬುದವೆಂಬ ರೋಗವನ್ನುಂಟುಮಾಡುವುದು. ಆ ಕಪೋಲಾರ್ಬುದವೆಂಬ ರೋಗವು ಛೇದನಾದಿಗಳಿಂದ ಹೆಚ್ಚಿ

ಅಸಾಧ್ಯ ರೋಗಕ್ರಮದಲ್ಲಿ ಮುಖವಂ ಕೆಡಿಸುವುದು, ರಕ್ತದೊಡನೆ ಕೂಡಿದ ದೋಷತ್ರಯಗಳಿಂದ ಮುಖದಲ್ಲಿ ಬಹಳ ದುರ್ಗಂಧವುಂಟಾಗಿ ಪೂತಿಗಂಧವೆನ್ನಿಸಿ ಕೊಂಬುದು. ದಂತಕಾಷ್ಠ ಮೊದಲಾದವುಗಳಲ್ಲಿ ದ್ವೇಷವುಂಟಾಗುವುದು, ಈ ೩ ರೋಗಗಳಲ್ಲಿ ಊರ್ಧ್ವಗುದವೆನ್ನಿಸಿಕೊಳ್ಳುವ ರೋಗವೂ, ಕಪೋಲಾರ್ಬುದ ವೆನ್ನಿಸಿಕೊಳ್ಳುವ ರೋಗವೂ ಅಸಾಧ್ಯಗಳಾಗಿಹವು. ಓಷ್ಠರೋಗ ಮೊದಲಾದ ಈ ನಾಲ್ಕು ರೋಗಂಗಳೊಳಗಾಗಿಯೂ ಸಾಧಾರಣ ಚಿಕಿತ್ಸೆಯಂಮಾಡುವುದು.

## ದಂತರೋಗ ಚಿಕಿತ್ಸೆಗಳು.

೧. ಕೂಗಟೇಕಾಯಿ ಒಳಗಿನಪೊಪ್ಪು ತೆಗೆದುಕೊಂಡು ಕೆಂಪಾಗಿ ಹುರಿದು ಇದಕ್ಕೆ ಸಮತೂಕ ಕಲ್ಲುಪ್ಪು ಹಾಕಿ ಅರೆದು ಇಟ್ಟುಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ಈ ಚೂರ್ಣದಿಂದ ಹಲ್ಲುಗಳಿಗೆ ಉಜ್ಜುತ್ತಾ ಬಂದರೆ ಹಲ್ಲುಗಳು ಗಟ್ಟಿಯಾಗುವುದು.

೨. ಮಾಯಿಫಳದಕಾಯಿ ‖ ತೊಲೆ, ಕೆಂಪುಕಾಚು ೨ ತೊಲೆ, ಸೂರ್ತಿಬೆಳ ಗಾರ ಅರಳುಮಾಡಿದ್ದು ‖ ತೊಲೆ, ತಿನ್ನುವ ಉಪ್ಪು ಸುಟ್ಟಿದ್ದು ‖ ಪಾವು, ಮೆಣಸು ೧ ತೊಲೆ, ಗೇರುಬೀಜ ೧ ಪಾವು ತಂದು ಬೆಂಕಿಯಮೇಲೆ ಹಾಕಿ ಸುಟ್ಟು ಕರುಕುಮಾಡಿಕೊಳ್ಳುವುದು. ಜಾಲೀಚಕ್ಕೆ ಒಣಗಿದ್ದು ೧‖ ಶೇರು ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಅರೆಯುವ ದಿನಸುಗಳನ್ನು ಅರೆದು ಎಲ್ಲವನ್ನೂ ಕಲಸಿ ಇಟ್ಟುಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ಈ ಚೂರ್ಣದಿಂದ ಹಲ್ಲುಗಳಿಗೆ ಉಜ್ಜಿ ಬಿಸಿನೀರಿನಿಂದ ಬಾಯಿ ತೊಳೆದುಕೊಳ್ಳುವುದು. ಇದರಿಂದ ಹಲ್ಲುನೋವು ಗುಣವಾಗಿ ಹಲ್ಲು ಗಟ್ಟಿ ಯಾಗುತ್ತೆ.

೩. ಹಾವುತೊಂಡೆಗಡ್ಡೆ, ಓಮ ಸುಮಾರಾಗಿ ಹುರದದ್ದು ಇವೆರಡು ಸಮ ಭಾಗ ಶೇರಿಸಿ ಅರೆದು ಹಲ್ಲುನೋವಿಗೆ ಇಡಲು ಗುಣವಾಗುವುದು.

೪. ಗೋಟು ಅಡಿಕೆ ಸುಟ್ಟಕರಕು ೨ ತೊಲೆ, ಕರೇಜಾಲೀಚಕ್ಕೆ ಸುಟ್ಟ ಕರುಕು ೨ ತೊಲೆ, ಮೈಲತುತ್ತ ಬೆಂಕಿಯಲ್ಲಿಸುಟ್ಟಿದ್ದು ೧ ಆಣೆ ತೂಕ, ಪಟಿಕ ಬೆಂಕಿಯಲ್ಲಿ ಸುಟ್ಟು ಅರಳುಮಾಡಿದ್ದು ‖ ತೊಲೆ, ಕೆಂಪುಕಾಚು ಕಾಲುತೊಲೆ, ಮೆಣಸು ಕಾಲುತೊಲೆ, ಕಲ್ಲುಪ್ಪು ೨ ಆಣೆ ತೂಕ, ಎಕ್ಕದಹೂವು ಸುಟ್ಟ ಕರುಕು ೨ ತೊಲೆ ಇವುಗಳನ್ನು ಚನ್ನಾಗಿ ಅರೆದು ಇಟ್ಟುಕೊಳ್ಳುವುದು. ಈ ಚೂರ್ಣದಿಂದ ಪ್ರತಿದಿನ ಪ್ರಾತಃಕಾಲ ಹಲ್ಲುಗಳಿಗೆ ಉಜ್ಜುತ್ತಾಬಂದರೆ ಹಲ್ಲು ನೋವು ಗುಣವಾಗುವುದು.

೫. ಹಣ್ಣುಬಿಲ್ಪತ್ರೆ ತಂದು ಎರಡುಭಾಗಮಾಡಿ ಒಳಗಿರುವ ಗುಜ್ಜು ತೆಗೆದು ಹಾಕಿ ಇದರಲ್ಲಿ ತಿನ್ನುವ ಉಪ್ಪುತುಂಬಿ ಯಕ್ಕದಹಾಲು ಹುಯಿದು ಎರಡು ಒಪ್ಪುಗಳನ್ನು ಒಂದಾಗಿ ಶೇರಿಸಿ ಕೆಮ್ಮಣ್ಣುಬಟ್ಟೆ ಶೀಲುಮಾಡಿ ಬಿಸಲಿನಲ್ಲಿ

ಚನ್ನಾಗಿ ಒಣಗಿಸಿ ೬ ಅಥವಾ ೧೦ ಬೆರಣಿಯಲ್ಲಿ ಪುಟಹಾಕಿ ವಳಗಿರುವ ಉಪ್ಪನ್ನು ತೆಗೆದುಕೊಂಡು ಅರೆದಿಟ್ಟುಕೊಳ್ಳುವುದು. ಈ ಭಸ್ಮವನ್ನು ಒಂದು ಚಿಟಕೆ ಹಲ್ಲುಗಳಿಗೆ ಹಚ್ಚಿದರೆ ಹಲ್ಲುನೋವು, ಹಲ್ಲುವೂತ ಗುಣವಾಗುವುದು. ಒಂದೇ ದಿನ ಹಚ್ಚಬೇಕು.

೬. ಮುಳ್ಳುಮುತ್ತುಗದ ಚಿಗರು ಎಲೆ ರಸ, ರಾಮಗುಳ್ಳದಸೊಪ್ಪಿನ ರಸ, ಬೇವಿನ ಚಿಗರು ಎಲೆ ರಸ, ಇವು ಮೂರು ಸಮಭಾಗ ಶೇರಿಸಿ ಬಾಯಿಯಲ್ಲಿ ಹಾಕಿಕೊಂಡು ಹುಳುಕು ಮತ್ತು ಹುಳುಯಿರತಕ್ಕ ಹಲ್ಲಿನಕಡೆ ಇಟ್ಟುಕೊಂಡು ಕಾಲು ಘಂಟೆ ಆದಮೇಲೆ ಉಗಿದು ನೋಡಿದರೆ ಹಲ್ಲಿನಲ್ಲಿದ್ದ ಹುಳುಗಳು ಬೀಳುವುದು. ಈರೀತಿ ಪ್ರತಿದಿನವು ಒಂದು ಸಲ ೨-೩ ದಿವಸ ಮಾಡುವುದು. ಇದರಿಂದ ಹುಳುಕುಹಲ್ಲು ಮುಂತಾದ ಹಲ್ಲಿನ ರೋಗಗಳು ಗುಣವಾಗುವುದು.

೭. ಕಬಾಬ್‌ಯೆಕಂದಾ ೩ ಶೇರು, ಲವಂಗ ೪|| ತೊಲೆ, ಮೆಣಸು ೪|| ತೊಲೆ, ಕಾಡುಯಾಲಕ್ಕಿ ೪|| ತೊಲೆ, ಅಕ್ಕಲಕರೆ ೧|| ತೊಲೆ, ಇದರ ಸಮ ಸಂಗೆಜರಾತ್ ಇವೆಲ್ಲವನ್ನೂ ಕುಟ್ಟಿ ಚೂರ್ಣಮಾಡಿಕೊಳ್ಳುವುದು. ಈ ಚೂರ್ಣವನ್ನು ಪ್ರತಿದಿನ ಪ್ರಾತಃಕಾಲ ಹಲ್ಲುಗಳಿಗೆ ಉಜ್ಜುತ್ತಾಬಂದರೆ ಹಲ್ಲಿನ ರೋಗಗಳು ಗುಣವಾಗುವುದು.

೮. ಹಸೀಅಡಿಕೆ ೨ ತೊಲೆ ಸುಟ್ಟುಕೊಳ್ಳುವುದು, ಹವಳದಬಳ್ಳಿ ೨ ತೊಲೆ ಲೋಳಿಸರದಪಟ್ಟೆಯಲ್ಲಿಟ್ಟು ಕೆಮ್ಮಣ್ಣುಬಟ್ಟೆ ಶೀಲುಮಾಡಿ ಅರ್ಧಗಜ ಪುಟ ಹಾಕಲು ಭಸ್ಮವಾಗುವುದು ಇದು ೨ ತೊಲೆ, ಗುಲೆಅನಾರ್ ೨ ತೊಲೆ, ತಿನ್ನುವ ಉಪ್ಪು ಸುಟ್ಟದ್ದು ೨ ತೊಲೆ, ನಾಗರಮೋಥ ೨ ತೊಲೆ, ಸಮುದ್ರನೊರೆ ೨ ತೊಲೆ, ಸಮಾಕ್ ೨ ತೊಲೆ, ಕುಂದರ್ || ತೊಲೆ, ಬೀಕೆಅಂಜಿಬಾರ್ ೪|| ತೊಲೆ, ಊದೆಗರ್ಕಿ ೪|| ಮಾಷ, ಅಜ್‌ಗರ್ || ತೊಲೆ, ದಾಲ್‌ಚಿನ್ನಿ ೧ ತೊಲೆ, ತವಕ್ಷೀರ ೧ ತೊಲೆ, ಗುಲಾಬಿಹೂವು ೧ ತೊಲೆ, ಸೈಂಧವಲವಣ ೧ ತೊಲೆ, ಪಟಕಡಿ ೧ ತೊಲೆ, ಅಕ್ಕಲಕರೆ ೧ ತೊಲೆ, ಮಾಯಿಃ ೪|| ಮಾಷ, ತಾರೇಕಾಯಿಸಿಪ್ಪೆ ೪|| ಮಾಷ, ಸಂದಲ್‌ಸುಫೇದ್ ೪|| ಮಾಷ, ಅಕಾಕಿಯಾ ೪|| ಮಾಷ, ಪೋಸ್ತೆತುರಂಜ್ ೪|| ಮಾಷ, ಲವಂಗ ೪|| ಮಾಷ, ಷೋಕ್ತಾಷಾಕ್‌ಗೌಜಾ ೪|| ಮಾಷ, ದವಾಲಿಪಿಯರೂಃ ೪|| ಮಾಷ, ಪೋಸ್ತನೀಂ ೪|| ಮಾಷ, ಪೋಸ್ತೆಡಿವಿಡಿವಿ ೬ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ಈ ಚೂರ್ಣದಿಂದ ಹಲ್ಲುಗಳಿಗೆ ಉಜ್ಜುತ್ತಾಬಂದರೆ ಹಲ್ಲುನೋವು, ಹಲ್ಲಿನಲ್ಲಿ ಕೀವು ಬರುವುದು ಗುಣವಾಗುವುದು.

೯. ಅಳಲೇಕಾಯಿಸಿಪ್ಪೆ ೧ ತೊಲೆ, ಬಾಲಹರಡಾ ೧ ತೊಲೆ, ಶುಂಠಿ ೧ ತೊಲೆ, ಮೆಣಸು ೧ ತೊಲೆ, ಲವಂಗ ೧ ತೊಲೆ, ಯಾಲಕ್ಕಿ ೧ ತೊಲೆ,

ಹಿಪ್ಪಲಿ ೧ ತೊಲೆ, ಕಲ್ಲುನಾರು ೧ ತೊಲೆ, ಪಟಿಕೆ ಅರಳುಮಾಡಿದ್ದು ೧ ತೊಲೆ, ಆರತಿಕರ್ಪೂರ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ಮಾಯಿಫಳದಕಾಯಿ ೧ ತೊಲೆ, ಸೈಂಧವಲವಣ ೧ ತೊಲೆ, ಸಮುದ್ರ ಉಪ್ಪು ಹುರದದ್ದು ೧ ತೊಲೆ, ಬಾದಾಮಿಸಿಪ್ಪೆ ಸುಟ್ಟು ಕರುಕುಮಾಡಿದ್ದು ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿಕೊಳ್ಳುವುದು. ಪ್ರತಿದಿನ ಪ್ರಾತಃಕಾಲ ಈ ಚೂರ್ಣದಿಂದ ಹಲ್ಲುಗಳನ್ನು ಉಜ್ಜುತ್ತಾಬಂದರೆ ಹಲ್ಲುನೋವು, ಹುಳುಕುಹಲ್ಲು ಗುಣವಾಗಿ ಹಲ್ಲುಗಳನ್ನು ಘಟ್ಟಿಮಾಡುವುದು.

೧೦. ಹಳೇತೆಂಗಿನಕಾಯಿ ಜುಟ್ಟು ಕಿತ್ತು ಕಣ್ಣು ತೂತುಮಾಡಿ ನೀರನ್ನು ಬಿಸಾಡಿ ಅದರತುಂಬಾ ಎಕ್ಕದಹಾಲು ತುಂಬಿ ಒಂದು ರಾತ್ರಿ ಇಟ್ಟಿದ್ದರೆ ಎಕ್ಕದ ಹಾಲು ವಿಶಿಷ್ಟವೂ ಹೀರಿಕೊಳ್ಳುತ್ತೆ. ಆದರತುಂಬಾ ಬಿಡಾಲವಣ ಚೂರ್ಣ ಮಾಡಿ ಚನ್ನಾಗಿ ತುಂಬಿ ಆದರ ಜೊತೆಗೆ ಅರ್ಧತೊಲೆ ಸೈಂಧವಲವಣವನ್ನು ಶೇರಿಸಿ ತುಂಬಬೇಕು. ನೆಲದಲ್ಲಿ ಗುಂಡಿತೆಗದು ಆ ಹಳ್ಳದಲ್ಲಿ ಕೆಳಗೆ ಅರ್ಧ ಶೇರು ಗೇರುಬೀಜಹಾಕಿ ಅದರಮೇಲೆ ತೆಂಗಿನಕಾಯಿ ಇಟ್ಟು ಸುತ್ತಲು ಬಾದಾಮಿ ಹೊಟ್ಟು, ಗೋಟು ಅಡಿಕೆ ಸಹಾ ಇಟ್ಟು ಅದರಮೇಲೆ ಬೋಕಿಹೆಂಚುಗಳು ಜೋಡಿಸಿ ಅದರಮೇಲೆ ೫೦-೬೦ ಬೆರಣಿ ಜೋಡಿಸಿ ಪುಟಹಾಕಬೇಕು. ಬೆರಣಿ ಬೂದಿ ಬಾದಾಮಿ ವಗೈರೆ ಬೆರೆಯದೆಇರಲು ಬೋಕಿಗಳು ಮುಚ್ಚಬೇಕಾಗಿ ಯಿರುತ್ತೆ ಹೊರ್ತು ಅದರಿಂದ ಮತ್ತೇನೂ ಉಪಯೋಗವಿಲ್ಲ. ಪುಟ ಚನ್ನಾಗಿ ಹಾಕಿ ಸಾಂಗಶೀತಳವಾದಮೇಲೆ ಗೇರುಬೀಜ, ಬಾದಾಮಿಹೊಟ್ಟು, ಅಡಿಕೆ, ತೆಂಗಿನಕಾಯಿ ಇವೆಲ್ಲ ಕರುಕು, ಆರತಿಕರ್ಪೂರ ಕಾಲುತೊಲೆ, ಯಾಲಕ್ಕಿ ಕಾಲುತೊಲೆ, ಶುಂಠಿ ಕಾಲುತೊಲೆ ಇವೆಲ್ಲವನ್ನು ಕಲಸಿ ಚೂರ್ಣಮಾಡಿಕೊಳ್ಳು ವುದು. ಈ ಚೂರ್ಣದಿಂದ ಪ್ರತಿದಿನ ಪ್ರಾತಃಕಾಲ ಹಲ್ಲುಗಳನ್ನು ಉಜ್ಜುವುದ ರಿಂದ ದಂತಶೂಲೆ, ಹಲ್ಲುನೋವು, ಬಾಯಿ ದುರ್ವಾಸನೆ ಗುಣವಾಗುವುದು.

೧೧. ಸಮುದ್ರಪಾಲಕಾಯಿ ನಿಂಬೇಹಣ್ಣಿನ ರಸದಲ್ಲಿ ಗಂಧತೆಗೆದು ಹಲ್ಲು ಗಳಿಗೆ ಉಜ್ಜಿದರೆ ಹಲ್ಲುನೋವು ಗುಣವಾಗುವುದು.

೧೨. ಅಕ್ಕಿಯನ್ನು ಅರಸಿನದ ನೀರಿನಲ್ಲಿ ಕಲಸಿ ಬಿಸಲಿನಲ್ಲಿ ಒಣಗಿಸಿ ಎಕ್ಕದಹಾಲಿನಲ್ಲಿ ಕಲಸಿ ಬಿಸಲಿನಲ್ಲಿ ಒಣಗಿಸಿ ಬಾಂಡ್ಲಿಯಲ್ಲಿ ಹಾಕಿ ಕೆಂಪು ಧಾತು ವಾಗಿ ಹುರಿದು ಕುಟ್ಟಿ ಚೂರ್ಣಮಾಡಿಕೊಳ್ಳುವುದು. ಈ ಚೂರ್ಣದಿಂದ ಹಲ್ಲು ಗಳಿಗೆ ಉಜ್ಜುತ್ತಾಬಂದರೆ ಹಲ್ಲಿನ ಇಗುರುನೋವು, ಹುಳುಕುಹಲ್ಲು ಗುಣ ವಾಗುವುದು.

೧೩. ಮಾಯಿಫಳದಕಾಯಿ ಕುಟ್ಟಿ ಚೂರ್ಣಮಾಡಿ ಹಲ್ಲುಗಳಿಗೆ ಉಜ್ಜುತ್ತಾ ಬಂದರೆ ಹುಳುಕುಹಲ್ಲು ಗುಣವಾಗುವುದು.

೧೪. ಮುಳ್ಳುಹರಿವೇಸೊಪ್ಪಿನ ಬೇರು ತಂದು ಬೆಂಬೂದಿಯಲ್ಲಿಟ್ಟು ಸುಟ್ಟು ಹಲ್ಲಿಗೆಯಿಟ್ಟರೆ ಹಲ್ಲುನೋವು ಗುಣವಾಗುವುದು.

೧೫. ಅನ್ನಭೇದಿ ಕಾಲುತೊಲೆ, ಮೆಣಸು ೧ ತೊಲೆ, ದೇಶಾವರಶುಂಠಿ ೧ ತೊಲೆ, ಬಿಳೇಕಾಂಚು ೨ ತೊಲೆ, ಲವಂಗ ೧ ತೊಲೆ, ವೈಲತುತ್ತ ಬೆಂಕಿಯಲ್ಲಿ ಸುಟ್ಟಿದ್ದು ೧ ಹಣ ತೂಕ, ಕೊತ್ತುಂಬರಿಬೀಜ ೨ ತೊಲೆ, ಸೈಂಧವ ಲವಣ ೧ ತೊಲೆ, ಮುತ್ತುಗದ ಎಲೆ ಚಿಗುರು ಒಣಗಿದ್ದು ೧ ತೊಲೆ, ಮಾಯಿ ಫಳ ೧ ತೊಲೆ, ಲೋರ್ಚ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಈ ಚೂರ್ಣದಿಂದ ಹಲ್ಲುಗಳಿಗೆ ಉಜ್ಜುತ್ತಾಬಂದರೆ ಹಲ್ಲು ನೋವು ಗುಣವಾಗುವುದು.

೧೬. ಶುಂಠಿ ೩ ತೊಲೆ, ಮೆಣಸು ೩ ತೊಲೆ, ದಾಲ್‌ಚಿನ್ನಿ ೩ ತೊಲೆ, ಲವಂಗ ೩ ತೊಲೆ, ಯಾಲಕ್ಕಿ ೩ ತೊಲೆ, ಅಕ್ಕಲಕರೆ ೩ ತೊಲೆ, ಹಿಪ್ಪಲಿ ೩ ತೊಲೆ, ಪಟಿಕೆ ಅರಳುಮಾಡಿದ್ದು ೧|| ತೊಲೆ, ಸೈಂಧವಲವಣ ೧|| ತೊಲೆ, ಶೀಗೇಕಾಯಿ ೯ ತೊಲೆ, ಅಳಲೇಕಾಯಿಸಿಪ್ಪೆ ೯ ತೊಲೆ, ಜಾಲೀಕಾಯಿ ೯ ತೊಲೆ, ಇವು ಮೂರು ದಿನಸು ಕೆಂಪಗೆ ಹುರಿದುಕೊಳ್ಳುವುದು. ಇದರೊಂದಿಗೆ ಬಾದಾಮಿ ಸಿಪ್ಪೆ ಸುಟ್ಟಕರಕು ೧೮ ತೊಲೆ ಸೇರಿಸಿ ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಹಲ್ಲಿನ ಇಗರುಗಳು ಬಾತಿದ್ದರೆ ೧ ತೊಲೆ ಚೂರ್ಣಕ್ಕೆ ೧ ಹಣ ತೂಕ ಆರತಿಕರ್ಪೂರ ಬೆರೆಸಿ ಹಲ್ಲುಗಳಿಗೆ ಉಜ್ಜುವುದು. ಇದರಿಂದ ಹಲ್ಲುನೋವು ಗುಣವಾಗುವುದು.

೧೭. ಜಾಜೀಸೊಪ್ಪು, ಬಿಳೀಕೊಮ್ಮೇಬೇರು, ಹಿಪ್ಪಲಿ, ಮುಳ್ಳು ಗೋರಂಟಸೊಪ್ಪು, ಚಂಗಲಕೋಷ್ಠ, ಬಜೆ, ಶುಂಠಿ, ಓಮ, ಅಳಲೇಕಾಯಿ ಸಿಪ್ಪೆ ಇವು ಸಮಭಾಗ ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಈ ಚೂರ್ಣವನ್ನು ಹಲ್ಲಿನಮೇಲೆ ೨ ಘಳಿಗೆ ಇಟ್ಟು ಅನಂತರ ಬಿಸಿನೀರಿನಲ್ಲಿ ಬಾಯಿ ತೊಳೆದುಕೊಳ್ಳುವುದು. ಇದರಿಂದ ದಂತವಾಯು, ಹಲ್ಲು ಅಲ್ಲಾಡುವುದು, ಹಲ್ಲು ನೋವು ಇವು ಗುಣವಾಗುವುದು.

೧೮. ತೊಗರೀಬೇಳೆ ೧೨ ತೊಲೆ, ಗೇರುಬೀಜ ೬ ತೊಲೆ, ಇವೆರಡೂ ಒಂದು ಮಡಿಕೆಯಲ್ಲಿ ಹಾಕಿ ಒಲೆಯಮೇಲಿಟ್ಟು ಸುಟ್ಟರೆ ಮಸಿಯಂತಾಗುತ್ತೆ. ಸೈಂಧವ ಲವಣ ೩ ತೊಲೆ, ಪಟಿಕೆ ಅರಳುಮಾಡಿದ್ದು ೩ ತೊಲೆ, ದಾಲ್‌ಚಿನ್ನಿ ೩ ತೊಲೆ, ಆರತಿಕರ್ಪೂರ ೧ ತೊಲೆ ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿ ಅರೆಯುವ ದಿನಸುಗಳನ್ನು ಖಲ್ವದಲ್ಲಿ ಅರೆದು ಎಲ್ಲವನ್ನೂ ಕಲಸಿ ಇಟ್ಟುಕೊಳ್ಳುವುದು. ಈ ಚೂರ್ಣದಿಂದ ಪ್ರತಿದಿನ ಪ್ರಾತಃಕಾಲ ಹಲ್ಲು ಗಳನ್ನು ಉಜ್ಜುತ್ತಾಬಂದರೆ ಹಲ್ಲುನೋವು, ಹುಳುಕುಹಲ್ಲು ಗುಣವಾಗುವುದು.

೧೯. ದತ್ತೂರಿಗಿಡ ಸಮೂಲ ತೂಕದ ೫ ಶೇರು ಚನ್ನಾಗಿ ಕುಟ್ಟಿ ಒಂದು ಮಡಿಕೆಯಲ್ಲಿ ಅರ್ಧ ಹಾಕಿ ಅದರಮೇಲೆ ತಿನ್ನುವ ಉಪ್ಪು ಅಳೆಯುವ ಒಂದು ಪಾವು ಹಾಕಿ ಅದರಮೇಲೆ ದತ್ತೂರಿಸೊಪ್ಪು ಅರ್ಧ ಹಾಕಿ ಮುಚ್ಚಳ ಮುಚ್ಚಿ ಕೆಮ್ಮಣ್ಣುಬಟ್ಟೆ ಸೀಲುಮಾಡಿ ಒಂದು ಮೊಳ ಪುಟವಿಡುವುದು. ಸಾಂಗ ಶೀತಳವಾದನಂತರ ಮಡಿಕೆಯಲ್ಲಿರುವ ಉಪ್ಪನ್ನು ಖಲ್ವದಲ್ಲಿ ಚನ್ನಾಗಿ ಅರೆದು ೨-೩ ಚಿಟಿಕೆ ಚೂರ್ಣ ಹಲ್ಲುನೋವುಗಳಿಗೆ ಉಜ್ಜಿ ಎಂಜಲನ್ನು ಒಂದು ತಟ್ಟೆಯಲ್ಲಿ ಉಗಿಯುತ್ತಾ ಬರಲು ಹಲ್ಲಿನ ಒಳಗಿರುವ ಹುಳು ಗಳು ಈಚೆಗೆ ಬರುವುದು. ಇದನ್ನೇ ಪ್ರತಿದಿನ ಹಲ್ಲು ಉಜ್ಜುತ್ತಾಬರಲು ಸಮಸ್ತ ಹಲ್ಲುನೋವುಗಳೂ ಗುಣವಾಗುವುದು.

---

# ಐವತ್ತೈದನೆಯ ಅಧ್ಯಾಯ.

## ಜಿಹ್ವಾರೋಗ, ದವಡೆರೋಗ, ಕಂಠರೋಗಗಳು.

### ಜಿಹ್ವಾರೋಗ ಲಕ್ಷಣ.

ಮೊದಲು ಪೀನಸರೋಗದಲ್ಲಿ ಆದಾನದಿಂದ ವಾತ ಮೊದಲಾದ ದೋಷಂ ಗಳು ದುಷ್ಟವಾಗಿ ಮುಖದಲ್ಲಿ ಏಳುರಾವಿನಲ್ಲಿ ೬೯ ತೆರಗಳನ್ನುಂಟುಮಾಡು ವುವು. ಆ ಏಳು ರಾವಾವೆಂದರೆ:—ಜಿಹ್ವೆ, ಕಟವಾಯಿ, ಕೊರಳು, ತುಟಿ ಗಳು, ದಂತಗಳು, ಬಾಯಿ ಎಂದು ಏಳು ಸ್ಥಾನಂಗಳು. ಯಾವ ಯಾವ ಸ್ಥಳ ಗಳಲ್ಲಿ ಎಷ್ಟೆಷ್ಟು ರೋಗಂಗಳೆನೆ:—

ಜಿಹ್ವಾರೋಗಗಳು ೬, ಕಟವಾಯಲ್ಲಿ ಹುಟ್ಟುವ ರೋಗ ೮, ಕೊರಳಲ್ಲಿ ಹುಟ್ಟುವ ರೋಗ ೧೮, ತುಟಿಯಲ್ಲಿ ಹುಟ್ಟುವ ರೋಗ ೯, ದಂತಮೂಲಗಳಲ್ಲಿ ಹುಟ್ಟುವ ರೋಗ ೧೫, ಆಸ್ಯರೋಗ ೫, ಅಂತು ಮುಖದಲ್ಲಿ ಹುಟ್ಟುವ ರೋಗ ೬೯ (ಅವುಗಳೊಳು ಮೊದಲು ಜಿಹ್ವಾರೋಗ ಲಕ್ಷಣಗಳು ಹೇಳಲ್ಪಡುತ್ತವೆ)

ನಾಸಾರೋಗಗಳಲ್ಲಿ ಹೇಳಿದ ಆದಾನಗಳಿಂದ ಜಿಹ್ವೆಯಲ್ಲಿ ಆರು ತೆರನಾಗಿ ರೋಗಂಗಳು ಹುಟ್ಟುವುವು. ಅವು ಯಾವುವೆಂದರೆ:—ಜಿಹ್ವಾಲಸ, ಅಧಿಜಿಹ್ವೆ, ಉಪಜಿಹ್ವೆ, ವಾತಜಿಹ್ವೆ, ಪಿತ್ಥಜಿಹ್ವೆ, ಶ್ಲೇಷ್ಮಜಿಹ್ವೆಯೆಂದು ಆರು ತೆರ.

ನಾಲಿಗೆಯ ಮೇಲಣ ಪ್ರದೇಶದಲ್ಲಿ ಶೋಫೆಯು ಶ್ಲೇಷ್ಮ ರಕ್ತಗಳಿಂದ ಉಂಟಾಗುವುದು, ಅದನ್ನು ಜಿಹ್ವಾಲಸವೆಂಬರು. ಅದು ಬಲಿತರೆ ಹೊಲಸು ನಾರುವುದು.

ಪಿತ್ಥ ರಕ್ತ ಶ್ಲೇಷ್ಮಗಳಿಂದ ಅಧಿಜಿಹ್ವೆಯೆಂಬ ಜಿಹ್ವಾರೋಗವುಂಟಾಗುವುದು, ನಾಲಿಗೆ ಬಾತುಕೊಂಬುದು, ಜೊಲ್ಲುಸುರಿವುದು, ಮಾತನಾಡಿಸಲೀಯದು, ನಾಲಿಗೆ ಬಹಳ ದಪ್ಪವಾಗಿರುವುದು.

ಶ್ಲೇಷ್ಮ ರಕ್ತಗಳಿಂದ ಜಿಹ್ವೆಯ ಮೂಲದ ಮೇಲಣಪ್ರದೇಶದಲ್ಲಿ ಬಾವು ಉಂಟಾಗಿ ನಾಲಿಗೆ ತಿರುಗದೆ ಬಿರಿತುಕೊಂಡು ಮಾತನಾಡಿಸಲೀಯದೆ ನಾಲಿಗೆಯ ಆಕಾರದಲ್ಲಿಯಿಹುದು, ಬಾಯಿಯಲ್ಲಿ ಬಹುವಾಗಿ ನೀರು ಸುರಿಯುವುದು. ಈ ಪ್ರಕಾರ ದಲ್ಲಿರುವುದು ಉಪಜಿಹ್ವೆಯೆನಿಸಿಕೊಂಬುದು.

ವಾತಜಿಹ್ವೆಯೆಂಬುದು ಮರದಯೆಲೆಯ ಹಾಗೆ ನೀಲವರ್ಣವಾಗಿ ಬಹಳ ಒಡೆದುಕೊಂಡಿಹುದು.

ಪಿತ್ಥ ಜಿಹ್ವೆಯೆಂಬದು ಹಳದೀವರ್ಣವಾಗಿ ಬೆಂದಹಾಗೆಯಿಹುದು, ಕೆಂಪಾದ ಮಾಂಸದ ಅಂಕುರಗಳುಂಟಾಗಿಹುದು.

ಬೂರುಗದಮರದ ಮುಳ್ಳಿನಹಾಗೆ ಮುಳ್ಳುವುಂಟಾಗಿಹುದು, ಇದು ಶ್ಲೇಷ್ಮ ಜಿಹ್ವೆಯೆನ್ನಿಸಿಕೊಂಬುದು. (ಇದು ಆತ್ರೇಯಮತ)

ವಾತ ಪಿತ್ಥ ಶ್ಲೇಷ್ಮಗಳಿಂದ ಮುಳ್ಳು ಉಂಟಾಗಿರುವ ಜಿಹ್ವಾರೋಗಂಗಳು ಮೂರು, ಜಿಹ್ವಾಲಸೆ, ಉಪಜಿಹ್ವೆಯೆಂದು ಎರಡು, ಅಂತೂ ಕೂಡಿ ಜಿಹ್ವಾ ರೋಗ ಅಯಿದು ತೆರನಾಗಿರುತ್ತದೆಂದು ಸುಶ್ರುತಾಚಾರ್ಯರಿಂದ ಹೇಳಲ್ಪಟ್ಟಿ ರುತ್ತದೆ.

## ಜಿಹ್ವಾರೋಗ ಚಿಕಿತ್ಸೆ.

ಆರು ಪ್ರಕಾರವಾದ ಜಿಹ್ವಾರೋಗಗಳಲ್ಲಿ, ಜಿಹ್ವಾಲಸವನ್ನೂ, ಪಕ್ವವಾದ ಉಪಜಿಹ್ವಿಕೆಯನ್ನೂ ತ್ಯಜಿಸಿಬಿಡುವುದು. ವಾತದಿಂದುಂಟಾದ ಮುಳ್ಳುಗಳಲ್ಲಿ ವಾತಪ್ರಕೋಪಕ್ಕೆ ಹೇಳಿದ ಚಿಕಿತ್ಸೆಯನ್ನು ಮಾಡುವುದು. ಪಿತ್ಥದಿಂದುಂಟಾದ ಮುಳ್ಳುಗಳಲ್ಲಿ ಪಿತ್ಥಹರವಾದ ದ್ರವ್ಯಗಳಿಂದ ಉಜ್ಜಿ, ಆಮೇಲೆ ರಕ್ತವನ್ನು ತೆಗ ಯಿಸಿದ ಬಳಿಕ ಮಧುರವಾದ ದ್ರವ್ಯಗಳಿಂದ ಪ್ರತಿಸಾರಣ, ಗಂಡೂಷ, ನಸ್ಯಗಳನ್ನು ಮಾಡಿಸುವುದು. ಶ್ಲೇಷ್ಮದಿಂದುಂಟಾದ ಮುಳ್ಳುಗಳಲ್ಲಿ ತ್ರಿಕಟುಕ ಮೊದಲಾದ ದ್ರವ್ಯಗಳಿಂದ ಘರ್ಷಣವ ಮಾಡಿಸುವುದು.

ಶ್ಲೇಷ್ಮದಿಂದುಂಟಾದ ಜಿಹ್ವೆಯ ಕಂಟಕಗಳಲ್ಲಿ ಮೊದಲು ಚನ್ನಾಗಿ ಉಜ್ಜಿ ರಕ್ತವಂ ಹೋಗಲಾಡಿಸಿ ಬಳಿಕ ಹಿಪ್ಪಲಿ, ಶುಂಠಿ, ಮೆಣಸುಗಳನ್ನು ಸಣ್ಣನಾಗಿ ಚೂರ್ಣಿಸಿ ಜೇನುತುಪ್ಪದಲ್ಲಿ ಕಲಿಸಿ ಜಿಹ್ವೆಗೆ ತೊಡೆಯಲು ಶ್ಲೇಷ್ಮದಿಂದುಂಟಾದ ಮುಳ್ಳುಗಳೆಲ್ಲ ಶಮನವಹವು. ಬಿಳೇಸಾಸುವೆ ಸೈಂಧವಗಳನ್ನೂ ಇಡಿದು ತುಪ್ಪ ದಲ್ಲಿ ಕಲೆಸಿ ಕವಳವ ಕೊಡಿಸಲು ಜಿಹ್ವೆಯಲ್ಲುಂಟಾದ ಮುಳ್ಳುಗಳು ಶಮನ ವಹವು.

ಹೊಂಗೆಪೊಳನಾರು, ತವಸದನಾರು, ಲಕ್ಕೀಸೊಪ್ಪು, ತುಳಸೀಸೊಪ್ಪು, ತುಪ್ಪದದೇವದಾರು, ಸಣ್ಣಹಿಪ್ಪಲಿ, ದೊಡ್ಡಹಿಪ್ಪಲಿ, ಗಜಹಿಪ್ಪಲಿ, ಹೆಸರು ಇಷ್ಟನ್ನೂ ಕಷಾಯ ಕಾಯಿಸಿ ಕೊಡಿಸಲು ಜಿಹ್ವಾರೋಗ ಶಮನವಹುದು.

ತ್ರಿಫಲೆ, ಕಗ್ಗಲಿಚಕ್ಕೆ, ಬಿಳೀಕಗ್ಗಲಿಕೆಚ್ಚು, ಕೊಮ್ಮೆಬೇರು ಇವುಗಳನ್ನು ಪ್ರತ್ಯೇಕ ೪ ವರಹ ತೂಕಗಳಂ ೨ ಮಾನ ನೀರಲ್ಲಿ ಕಷಾಯವೆತ್ತಿ ಚಾತುರ್ಭಾಗವಶೇಷಿತವಾಗಿ ಕಾಯಿಸಿ ಕುಡಿಯಕೊಡಲು ಜಿಹ್ವೆಯಲ್ಲಿರುವ ಮುಳ್ಳುಗಳು ಶಮನವಹವು.

ಹೊಸದಾದ ಜಿಹ್ವಾಲಸವೆಂಬ ಜಿಹ್ವಾರೋಗದಲ್ಲಿ ತೀಕ್ಷ್ಣವಾದ ಓಷಧಿಗಳಿಂದ ಪ್ರತಿಸಾರಣವನ್ನು ಮಾಡುವುದು, ಪ್ರತಿಸಾರಣವೆಂಬುದು ಜಿಹ್ವಾಲೇಪ.

ಕಲ್ಲುಮದ, ಮರದರಿಸಿನ, ಸೈಂಧವಲವಣ, ಯವಕ್ಷಾರ, ಅರಿಸಿನ, ತ್ರಿಫಲೆ ಇವುಗಳನ್ನು ಸಣ್ಣನಾಗಿ ಚೂರ್ಣಿಸಿ ಹಸುವಿನತುಪ್ಪ ಜೇನುತುಪ್ಪಗಳಂ ಕೂಡಿಸಿ, ೪ ತೂಕವಂ ಕೊಡಿಸಲು ದಂತಮೂಲವೆಂಬ ದಂತವ್ಯಾಧಿ, ದಂತರೋಗ, ಕಂಠರೋಗ, ಜಿಹ್ವಾರೋಗ, ಓಷ್ಠರೋಗ. ತಾಲುರೋಗಗಳು ಕೂಡಲೇ ಶಮನ.

ಆಳಲೇಕಾಯಿಸಿಪ್ಪೆ, ಕೊಮ್ಮೇಬೇರು, ಮೆಣಸು, ಶುಂಠಿ ಇವುಗಳನ್ನು ಪ್ರತ್ಯೇಕ ೬ ವರಹ ತೂಕವನ್ನು ೨ ಮಾನ ಗೋಮೂತ್ರದಲ್ಲಿ ಚಾತುರ್ಭಾಗವಶೇಷಿತವಾಗಿ ಕಾಯಿಸಿ ಗಂಡೂಷವ ಮಾಡಿಸಲು ಮಾಂಸಕಂಟಕಗಳು ಶಮನವಹವು.

ಜಿಹ್ವಾರೋಗದಲ್ಲಿ ನರಗಳಂ ನೋಡಿ ವೇಧಿಸುವುದು ಪ್ರಶಸ್ತ. ಶಸ್ತ್ರಕರ್ಮವಾಗದು. ಅಧಿಜಿಹ್ವೆಯೆಂಬುದರಲ್ಲಿ ಮುಖವ ಮೇಲಕ್ಕೆತ್ತಿ ಕೂಡಿಸಲು ನಾಲಿಗೆಯಮೇಲೆ ಕಿರುನಾಲಿಗೆ ಬಿದ್ದುಕೊಂಡಿಹುದು, ಅದನ್ನು ಕತ್ತರಿಯಿಂದ ಅಗ್ರವನ್ನು ಕತ್ತರಿಸುವುದು. ಉಪಜಿಹ್ವೆಯೆಂಬದನ್ನು ತೆಂಗಿನಯಲೆಯಿಂದ ಉಜ್ಜಿಸುವುದು. ಯವಕ್ಷಾರವನ್ನೂ ಜೇನುತುಪ್ಪವನ್ನೂ ನಾಲಿಗೆಗೆ ತೊಡೆಯಿಸುವುದು. ಜಿಹ್ವಾರೋಗದಲ್ಲಿ ಶಿರಾವೇಧೆಗಳಿಂದಲೂ ಜಿಗಳೆಗಳಿಂದಲೂ ರಕ್ತವಂ ತೆಗೆಯಿಸುವುದು.

ಲೊಕ್ಕೀಸೊಪ್ಪಿನ ರಸ ೧ ಬಳ್ಳ, ಬೆಲ್ಲಗಣಿಕೆಸೊಪ್ಪಿನ ರಸ ೧ ಬಳ್ಳ, ಗರಗದಸೊಪ್ಪಿನ ರಸ ೧ ಬಳ್ಳ, ಜಾಜೀಸೊಪ್ಪಿನ ರಸ ೧ ಬಳ್ಳ, ಅಂತು ೧ ಕೊಳಗ ರಸದಲ್ಲಿ ೧ ಬಳ್ಳ ಯೆಣ್ಣೆಯಂ ಹನಿಸಿ ಕಾಯಿಸುವಾಗ ಅದಕ್ಕೆ ಹಾಕುವ ಕಲ್ಕದ್ರವ್ಯ:—ಬಜೆ, ಗಂಟುಭಾರಂಗಿ, ಹಿಪ್ಪಲಿ, ಹಿಂಗು, ಶುಂಠಿ, ನುಗ್ಗೇಬೇರಿನತೊಕ್ಕು, ಬಿಳೀಸಾಸುವೆ, ಅಗಳುಶುಂಠಿ, ಚಿತ್ರಮೂಲದ ಬೇರಿನ ತೊಕ್ಕು, ನರುವಲಬೇರು, ಕುಂಕುಮಕೇಸರ, ಸೈಂಧವಲವಣ ಇವುಗಳನ್ನು ಪ್ರತ್ಯೇಕ ೮ ವರಹ ತೂಕಗಳನ್ನು ಚೂರ್ಣಿಸಿ ಹಾಕಿ ಕಾಯಿಸಿ ಹದದಲ್ಲಿಯಿಳುಹಿ

ಪಾನ, ಗಂಡೂಷಗಳಂ ಮಾಡಿಸಲು ಸಕಲ ಜಿಹ್ವಾರೋಗಂಗಳೂ ಶಮನವಹವು. ಅರವತ್ತೆಂಟು ಪ್ರಕಾರವಾದ ಮುಖರೋಗಂಗಳೂ ಶಮನವಹವು.

## ತಾಲು (ದವಡೆ) ಲಕ್ಷಣ.

ಗಳಶುಂಠಿ, ತುಂಡಿಕೇರಿ, ಪಿಟಕಾರ್ಬುದ, ಕಚ್ಛಪ, ಮಾಂಸಸಂಘಾತ, ತಾಲುಪರ್ಪಟಿ, ತಾಲುಶೋಷ, ತಾಲುಪಾಕಗಳೆಂದು, ಕಟವಾಯಲ್ಲಿ ಹುಟ್ಟುವ ರೋಗಗಳು ಎಂಟು ಪ್ರಕಾರವಾಗಿಹವು.

ರಕ್ತಶ್ಲೇಷ್ಮಗಳಿಂದ ಕಟವಾಯ ಮೂಲದಲ್ಲಿ ಶೋಫೆವುಂಟಾಗುವುದು, ಛರ್ದಿಶ್ಲೇಷ್ಮಗಳುಂಟಾಗಿರುವುದು, ಕಿಬ್ಬೊಟ್ಟೆಯಲ್ಲಿ ಊದುವುಂಟಾಗಿರುವುದು, ಈ ಲಕ್ಷಣಗಳು ಕೂಡಿಯಿರುವುದು ಗಳಶುಂಠಿಯೆನ್ನಿಸಿಕೊಂಬುದು.

ಉರಿ, ನೋವು, ಬಾಕುಗಳಿಂದ ಕೂಡಿದ್ದರೆ ತುಂಡಿಕೇರಿ ತಾಲುರೋಗವು.

ಕಟವಾಯಿ ನಡುವಣ ಪ್ರದೇಶದಲ್ಲಿ ಬಾಕುತೋರುವುದು, ಶ್ಲೇಷ್ಮಗಳಿಂದ ಪೊಕ್ಕೆಗಳುಂಟಾಗಿರುವುದು, ಅನ್ನಪಾನಂಗಳು ಹೋಗಲೀಸದೆ ಕೊರಳು ಬಂಧಿಸಿಕೊಂಡಿರುವುದು ಹೀಗಿರುವುದು ಪಿಟಕಾರ್ಬುದವೆನ್ನಿಸಿಕೊಂಬುದು.

ಕಟವಾಯಿ ಮೂಲದಲ್ಲಿ ಮಹಾ ವೇದನೆಯುಂಟಾಗಿರುವುದೂ, ಗಂಟಲ ಕಟ್ಟೆ ಶೋಫೆಯುಂಟಾಗುವುದೂ, ಶ್ಲೇಷ್ಮಾಧಿಕ್ಯದಿಂದವುಂಟಾಗಿರುವುದೂ, ಬಾಯಿ ತೆರಿಯಲೀಸದೆಯಿರುವುದೂ ಕಚ್ಛಪವೆನ್ನಿಸಿಕೊಂಬುದು.

ಶ್ಲೇಷ್ಮದಿಂದ ಕಟವಾಯಿ ಪ್ರದೇಶದಲ್ಲಿ ಮಾಂಸಗ್ರಂಥಿವುಂಟಾಗಿರುವುದು ಮಾಂಸಸಂಘಾತವೆಂಬ ತಾಲುರೋಗವೆಂದರಿವುದು.

ಯಳಚೀಕಾಯಿನಹಾಗೆ ಕಟವಾಯಲ್ಲಿ ಬಾಕುವುಂಟಾಗಿರುವುದು ತಾಲು ಪರ್ಪಟವೆಂಬ ತಾಲುರೋಗವೆಂದರಿವುದು.

ಕಟವಾಯಿವುರಿವಣ, ದಪ್ಪವಾಗಿ ಬಾತುಕೊಂಡಿರುವಣ ಇದು ವಾತ ಪಿತ್ಥಗಳಿಂದುಂಟಾಗುವುದು, ಅದನ್ನು ತಾಲುಶೋಫೆ ಎಂಬ ತಾಲುರೋಗವೆಂದರಿವುದು.

ಪಿತ್ಥದಿಂದ ಕಟವಾಯಿನಲ್ಲಿ ಬೊಕ್ಕೆಗಳುಂಟಾಗಿರುವದನ್ನೂ, ಕೀವು ಸುರಿವುದನ್ನೂ ತಾಲುಪಾಕವೆಂಬ ತಾಲುರೋಗವೆಂದರಿವುದು.

ಈ ೮ ತೆರದ ತಾಲುರೋಗಂಗಳಲ್ಲಿ ಕಚ್ಛಪವೆಂಬುದೂ, ಪಿಟಕಾರ್ಬುದವೆಂಬುದೂ ಅಸಾಧ್ಯವೆಂದರಿವುದು.

ಕಟುಕರೋಹಿಣಿ, ತ್ರಿಕಟುಕ, ಸೈಂಧವಲವಣ, ಚಿತ್ರಮೂಲ, ಗಂಗುಂಗೇಬೀಜ, ಅರಿಸಿನ, ರಾಷ್ಮೆ, ಇಲ್ಲಣ ಇವುಗಳನ್ನು ಸಮಾಂಶವಾಗಿ ಜೇನುತುಪ್ಪದಿಂದ ಅರೆದು ಕಲ್ಕವಮಾಡಿ ಕಟವಾಯಿಗೆ ಉಜ್ಜಿಸಲು ಗಳಶುಂಠಿಯೆಂಬ ತಾಲುರೋಗ ಶಮನವಹುದು.

ಮಾದಳದಹಣ್ಣಿನ ರಸವನ್ನು, ತುಪ್ಪ, ಜೇನುತುಪ್ಪಗಳೊಡನೆ ಕೂಡಿಸಿ ಲೇಹ್ಯವ ಮಾಡಿಸಲು ತಾಲುಶೋಷೆ ಶಮನವಹುದು.

## ಕಂಠರೋಗ ಲಕ್ಷಣಗಳು.

ಕಂಠರೋಗಗಳು ವಾತಜನ್ಯ, ಪಿತ್ಥಜನ್ಯ, ಶ್ಲೇಷ್ಮಜನ್ಯ, ರಕ್ತಜನ್ಯ, ಸನ್ನಿಪಾತಜನ್ಯವೆಂದು ೫ ವಿಧ, ಅದಲ್ಲದೆ ಬೇರೆ ರೋಹಿಣೀ, ಕಂಠಶಾಲೂಕ, ಅಧಿಜಿಹ್ವೆ, ಬಲಾಸಕ, ವಲಯ, ವೃತ್ತಾಖ್ಯ, ಶತಘ್ನಿ, ಗಳಾಯು, ಸ್ವರಘ್ನ, ಗಳವಿದ್ರುಧಿ, ಗಳಘೋಷ, ಮಾಂಸತಾನ, ಬಿದಾರಿಯೆಂದು ೧೩ ವಿಧ, ಅಂತೂ ಹಿಂದೆ ಹೇಳಿದ ಐದೂ ಕೂಡಿ, ಕಂಠರೋಗ ೧೮ ವಿಧಗಳು.

ಈ ೧೮ ಕಂಠರೋಗಂಗಳಲ್ಲಿ ಕೊರಳು ಬಾತುಕೊಂಡು ತೀವ್ರವಾಗಿ ವೇದನೆಯುಂಟಾಗಿರುವುದು ವಾತದಿಂದುಂಟಾದದ್ದೆಂದರಿವುದು. ಪಿತ್ಥದಿಂದುಂಟಾದ ಕಂಠರೋಗಂಗಳಲ್ಲಿ ಕೊರಳೊಳಗೆ ಬಹಳ ಬೊಕ್ಕೆಗಳುಂಟಾಗಿ ಅದರಿಂದ ಉಣ್ಣುವದಕ್ಕಾಗದೆಯಿರುವುದು ಶ್ಲೇಷ್ಮದಿಂದುಂಟಾದ ಕಂಠರೋಗಂಗಳಲ್ಲಿ ಶ್ಲೇಷ್ಮದಗಂಟು ಗಂಟಲೊಳಗೆ ಬಾಧೆಪಡಿಸುವುದು. ರಕ್ತದಿಂದುಂಟಾದ ಕಂಠ ರೋಗಂಗಳಲ್ಲಿ ಕೊರಳು ಒಡೆದು ರಕ್ತ ಗಂಧೆಗಂಧೆಯಾಗಿ ಬಾಯಲ್ಲಿ ಸುರಿವುದು. ತ್ರಿದೋಷದಿಂದುಂಟಾದ ಕಂಠರೋಗಂಗಳಲ್ಲಿ ವಾತ ಪಿತ್ಥ ಶ್ಲೇಷ್ಮಗಳ ಮೂರರ ಲಕ್ಷಣಗಳೂ ಕೂಡಿರುವುವು.

ಪಿತ್ಥಾಧಿಕ್ಯದಿಂದುಂಟಾಗಿ, ಕೊರಳ ನರಂಗಳಂ ಬಿಗಿದು ಬಾಯಾರಿಕೆ, ತಾಪ, ಬಳಲಿಕೆ ಇವುಗಳಂ ಉಂಟುಮಾಡುವುದು ರೋಹಿಣೀ ಎಂಬ ಕಂಠರೋಗ ವೆಂದರಿವುದು.

ಎಳಚೀಹಣ್ಣಿನಂತೆ ಕೊರಳವೊಳಗೆ ಶ್ಲೇಷ್ಮಾಧಿಕ್ಯದಿಂದ ಗ್ರಂಥಿ ಕಠಿಣ ವಾಗಿ ಸ್ಥಿರವಾಗಿದ್ದರೆ, ಅದು ಕಂಠಶಾಲೂಕವೆನ್ನಿಸಿಕೊಂಬುದು, ಅದು ಶಸ್ತ್ರದಿಂದ ಸಾಧ್ಯವಹುದು.

ಜಿಹ್ವಾಗ್ರ ಶೋಷಿಸಿ ಒಣಗುವುದೂ, ಜಿಹ್ವೆಗೂ ಕೊರಳಿಗೂ ಸಮೀಪದಲ್ಲಿ ಗ್ರಂಥಿಯುಂಟಾಗಿಹುದೂ, ಅಧಿಜಿಹ್ವಕವೆನ್ನಿಸಿಕೊಂಬುದು, ಅದು ಬಲಿತರೆ ಅಸಾಧ್ಯ ವಾಗುವುದು.

ವಾತ ಶ್ಲೇಷ್ಮಗಳು ಕೊರಳಲ್ಲಿ ಉನ್ನತವಾಗಿ ಗ್ರಂಥಿಯುಂಟುಮಾಡು ವುದು. ಆ ಗ್ರಂಥಿ ಬಲಾಸಕವೆನ್ನಿಸಿಕೊಂಬುದು, ಅದು ಮರ್ಮಭೇದಿಯಾದ ಕಾರಣ ದುಸ್ತರವಾಗಿಹುದು.

ಕೊರಳ ಹೊರಗೂ ಒಳಗೂ ದಪ್ಪವಾಗಿ, ಉನ್ನತವಾಗಿ ಗಂಟುಕಟ್ಟಿಕೊಂಡು ಅದರಿಂದ ಜ್ವರ ಮೂರ್ಛೆ ವೇದನೆಗಳುಂಟಾದರೆ ಅದು ವಲಯವೆಂಬ ಕಂಠರೋಗ ಅದು ಸ್ಥಿರವಾದದ್ದು.

ಕೊರಳ ಒಳಗೆ ಕೆಳಗೂ ಮೇಲೂ ವೃತ್ತಾಕಾರವಾಗಿ ಬಾತುಕೊಂಡು, ದಪ್ಪವಾಗಿ ತೀವ್ರವಾದ ನೋವು ವುಂಟುಮಾಡುತ್ತಾ, ಅತ್ಯುನ್ನತವಾಗಿ ಗ್ರಂಥಿಯುಂಟಾದರೆ ಅದು ವೃತ್ತಾಖ್ಯೆಯೆಂಬ ಕಂಠರೋಗ, ಅದು ವಿದಾಹವನ್ನೂ ಜ್ವರವನ್ನೂ ವುಂಟುಮಾಡುವುದು. ಅದು ಕಷ್ಟಸಾಧ್ಯ.

ಅಂಜನ ಕುಡುಹಿನ ಆಕಾರದಲ್ಲಿ ಗಂಟುಗಂಟಾಗಿ ಮಾಂಸಗಳ ಅಂಕುರಗಳು ಕಲ್ಲಿನಂತೆ ಕಠಿಣವಾಗಿ ಅವು ಕೊರಳಂ ಕಟ್ಟಿಕೊಂಡು ಅತ್ಯಂತ ವೇದನೆಯುಂಟುಮಾಡುತ ಅನ್ನಪಾನಗಳು ಹೋಗಲಿಸದೆಯಿರುವುದು ಶತಘ್ನಿಯೆನ್ನಿಸಿಕೊಂಬುದು. ಅದು ತ್ರಿದೋಷಜನ್ಯವಾದದ್ದು, ಅಸಾಧ್ಯ.

ಶ್ಲೇಷ್ಮ ರಕ್ತಗಳಿಂದ ಕೊರಳೊಳಗೆ ದಪ್ಪವಾಗಿ, ಗಂಟುಗಳು ಕಟ್ಟಿಕೊಂಡು ಶ್ವಾಸವಂ ತಡೆದು, ಸ್ವರಕ್ಷಯವಾದಕಾರಣ ಸ್ವರಭಂಗವಾಗಿ ಮಾತನಾಡಿಸುವುದು ಗಳಾಯುವೆನ್ನಿಸಿಕೊಂಬುದು, ಇದು ಕಷ್ಟಸಾಧ್ಯ.

ಕೊರಳಂ ಎಲ್ಲ ಪ್ರದೇಶವನ್ನೂ ವ್ಯಾಪಿಸಿಕೊಂಡು, ತ್ರಿದೋಷಗಳಿಂದ ಸಕಲ ಉಪದ್ರವಗಳೊಡನೆ ಕೂಡಿ ಗ್ರಂಥಿಯುಂಟಾಗಿರುವುದು ಗಳವಿದ್ರಧಿಯೆನ್ನಿಸಿಕೊಂಬುದು, ಆ ವ್ಯಾಧಿ ದುಸ್ತರವಾಗಿಹುದು.

ರಕ್ತ ಶ್ಲೇಷ್ಮಗಳಿಂದ ಕೊರಳಲ್ಲಿ ಬಾಕುವುಂಟಾಗಿ ಪಾನಾಹಾರಂಗಳು ಹೋಗಲೀಸದೆ, ಶ್ವಾಸವಂ ತಡೆವುದು ಗಳೌಘವೆನ್ನಿಸಿಕೊಂಬುದು, ಅದು ವೇದನೆಯೊಡನೆ ಕೂಡಿಹುದು, ಕಷ್ಟಸಾಧ್ಯ.

ಬಹಳ ತಾಪವುಂಟಾಗಿ, ಕೊರಳು ಬಿಗಿದು ಹಿಡಿದುಕೊಂಡು, ಗ್ರಂಥಿ ಕೊರಳೊಳಗೆ ನೇಲುತ್ತಿದ್ದರೆ ಮಾಂಸತಾನವೆನ್ನಿಸಿಕೊಂಬುದು. ಇದು ಮನುಷ್ಯರಂ ಕೊಲ್ಲುವುದು. ಕೊರಳೊಳಗೆ ಪಿತ್ಥದಿಂದ ಗಂಟುಗಳುಂಟಾಗಿ ಅಡ್ಡಡ್ಡಲಾಗಿ, ದೇಹದಲ್ಲಿ ಸೆಖೆ, ಬಾಯಾರಿಕೆ, ಬಹಳ ವೇದನೆಗಳುಂಟುಮಾಡುವುದು ಮಾಂಸವಿದಾರಿಯೆನ್ನಿಸಿಕೊಂಬುದು. ಇದು ಕಷ್ಟಸಾಧ್ಯ.

## ಗಂಟಲಿನಲ್ಲಿ ಬರತಕ್ಕ ಗಡ್ಡೆಗಳಿಗೆ ಚಿಕಿತ್ಸೆ.

ಸೇಗೊಡತಿಸೊಪ್ಪು ಸುಮಾರು ದೊಡ್ಡದಾಗಿ ಇರುವ ತೆಂಗಿನಕಾಯಿನಷ್ಟು, ಬಿಳೇ ಈರುಳ್ಳಿ ರಸ ೬ ತೊಲೆ ಇವೆರಡೂ ಚನ್ನಾಗಿ ಕುಟ್ಟಿ ರಸ ಶೋಧಿಸಿಕೊಂಡು ಬೆಳಿಗ್ಗೆ ಒಂದುಹೊತ್ತು ಕುಡಿಯುವುದು. ಹೀಗೆ ಬೆಳಿಗ್ಗೆ ೩ ದಿನ ಕೊಡಬೇಕು. ಗಡ್ಡೆಗಳಿಗೆ ಕಪ್ಪೆಚಿಪ್ಪುಸುಟ್ಟು ಭಸ್ಮಮಾಡಿ ನಿಂಬೇಹಣ್ಣಿನ ರಸದಲ್ಲಿ ಅರೆದು ಪಟ್ಟುಹಾಕಿದರೆ ಗುಣವಾಗುವುದು.

ಕತ್ತಿನಕೆಳಗೆ ಗಡ್ಡೆ ಆಗುವದಕ್ಕೆ:—ಮೂಗಿನ ಎರಡು ಹೊಳ್ಳೆಯಲ್ಲಿ ಯಕ್ಕದಹೂವುಯಿಟ್ಟು ಸುಮಾರು ಮೂಗಿನಮೇಲೆ ಬೆರಳಿನಿಂದ ಹೊಡದರೆ ರಕ್ತ ಬಿದ್ದರೆ ವಾಶಿ ಆಗುತ್ತೆ. ಬಾಳೆಗಡ್ಡೆ ತಂದು ಗಡ್ಡೆಗಳಿಗೆ ಕಟ್ಟಿದರೆ ಕರಗಿಹೋಗುತ್ತೆ.

## ಓಷ್ಠರೋಗಂಗಳ ಲಕ್ಷಣ.

ಓಷ್ಠರೋಗಂಗಳು :—ವಾತಜನ್ಯ, ಪಿತ್ಥಜನ್ಯ, ತ್ರಿದೋಷಜನ್ಯ, ರಕ್ತಜನ್ಯ, ಮಾಂಸಜನ್ಯ, ಮೇದೋಜನ್ಯ, ಕ್ಷತಜನ್ಯವೆಂದು ೮ ತೆರ. ಆಗಂತುವೆಂಬದು ವಿಷಪ್ರಯೋಗಗಳಿಂದ ವುಂಟಾಗತಕ್ಕದ್ದು. ಈ ಆಗಂತು ವಾತಾದಿ ದೋಷ ಜನ್ಯಗಳು ಕೂಡಿ, ಓಷ್ಠರೋಗ ೯ ತೆರ. ಅದೆಂತೆಂದರೆ :—ವಾತದಿಂದುಂಟಾದ ಓಷ್ಠರೋಗದಲ್ಲಿ ತುಟಿಗಳು ಬಿರುಸಾಗಿಹುದು, ಧಾರೆಯಾಗಿ ಬಿರುದಿರುವುದು. ಪಿತ್ಥದಿಂದುಂಟಾದ ಓಷ್ಠರೋಗದಲ್ಲಿ ತುಟಿಗಳು ನೀಲವರ್ಣವಾಗಿ, ಉರಿತವುಂಟಾಗಿಹವು. ಶ್ಲೇಷ್ಮದಿಂದುಂಟಾದ ಓಷ್ಠರೋಗದಲ್ಲಿ ತುಟಿಗಳು ಬೊಕ್ಕೆಗಳುಳ್ಳವಾಗಿ ಅಂಟು ಅಂಟಾಗಿ ದಪ್ಪವಾಗಿಹುದು, ಶೀಟಿಯೊಡನೆ ಕೂಡಿಹುದು. ತ್ರಿದೋಷದಿಂದುಂಟಾದ ಓಷ್ಠರೋಗದಲ್ಲಿ ತುಟಿಗಳು, ವಾತ ಪಿತ್ಥ ಶ್ಲೇಷ್ಮಗಳಲ್ಲಿ ಹೇಳಿದ ಲಕ್ಷಣತ್ರಯದಿಂದಲೂ ಕೂಡಿಹುದು. ರಕ್ತದಿಂದುಂಟಾದ ಓಷ್ಠರೋಗದಲ್ಲಿ ತುಟಿ ಕೆಂಪಾಗಿವೊಡೆದು ರಕ್ತ ಸುರಿವುದು.

ಮಾಂಸದಿಂದುಂಟಾದ ಓಷ್ಠರೋಗದಲ್ಲಿ ತುಟಿಗಳು ಬಹಳ ದಪ್ಪವಾಗಿ ಮಾಂಸದ ಮುದ್ದೆಯಂತೆ ಇಹುದು, ವೇದನೆಯುಂಟಾಗಿಹುದು.

ಮೇದಸ್ಸುಗಳಿಂದುಂಟಾದ ಓಷ್ಠರೋಗದಲ್ಲಿ ತುಟಿಗಳು ಮಹಾ ಮೃದುವಾಗಿ ಹೊಳಿಯುತ ಬಿಳುಪು ಛಾಯೆ ಶೀಟಿಗಳೊಡನೆ ಕೂಡಿಹುದು.

ದಂತಕ್ಷತಾದಿಗಳಿಂದುಂಟಾದ ಓಷ್ಠರೋಗದಲ್ಲಿ ತುಟಿಗಳು ವೊಡೆದು ಶೀಟಿಗೂಡಿರುವುದು.

ಜಟಿ, ಮದ್ದುಮಾಯೆಗಳಿಂದ ಉಂಟಾದ ಓಷ್ಠರೋಗದಲ್ಲಿ ಆಗಂತುಕವೆನ್ನಿಸಿಕೊಂಬುದು. ಅದರಲ್ಲಿ ತುಟಿಗಳು ಒಡೆದು ವೇದನೆಯೊಡನೆ ಕೂಡಿಹವು.

೯ ಪ್ರಕಾರವಾದ ಓಷ್ಠರೋಗಗಳಲ್ಲಿ ರಕ್ತಜನ್ಯವಾದ ಓಷ್ಠರೋಗವೂ,ಸನ್ನಿಪಾತದಿಂದುಂಟಾದ ಓಷ್ಠರೋಗವೂ ಅಸಾಧ್ಯಗಳು, ಮಿಕ್ಕ ಓಷ್ಠರೋಗಗಳು ಶಸ್ತ್ರೌಷಧಗಳಿಂದ ಸಾಧ್ಯವಹವು.



# ಐವತ್ತಾರನೆಯ ಅಧ್ಯಾಯ.

## ಜಂಗಮ ವಿಷ—ಔಷಧಗಳು.

### ಜಂಗಮ ವಿಷ ವಿವರ.

ಅತಿ ಬಿಳುಪಾಗಿರುವ ಸರ್ಪ ಬ್ರಾಹ್ಮಣಜಾತಿ ಎಂತಲೂ, ಕೆಂಪಾಗಿರುವ ಸರ್ಪ ಕ್ಷತ್ರಿಯಜಾತಿ ಎಂತಲೂ, ಹಳದೀವರ್ಣವುಳ್ಳ ಸರ್ಪ ವೈಶ್ಯಜಾತಿ ಎಂತಲೂ, ಕಪ್ಪುವರ್ಣವುಳ್ಳ ಸರ್ಪ ಶೂದ್ರಜಾತಿ ಎಂತಲೂ ತಿಳಿವುದು.

ಅನಂತ, ಗುಳಿಕ, ವಾಸುಕಿ, ಶಂಖಪಾಲ, ತಕ್ಷಕ, ಮಹಾಪದ್ಮ, ಕರ್ಕೋಟಕ, ಪದ್ಮ ಎಂದು ಸರ್ಪಗಳ ಕುಲ ೮ ವಿಧ. ನಾಗಕುಲ ಲಕ್ಷಣಂಗಳು ಶಿವನಿಂದ ಹೇಳಲ್ಪಟ್ಟವು, ಅದೆಂತೆನೆ:—

ಶಿರಸ್ಸಿನಲ್ಲಿಯೂ ಬೆನ್ನಿನಲ್ಲಿಯೂ ಬಿಳೀದಾದ ಪದ್ಮವುಳ್ಳದ್ದು ಅನಂತನು, ಶಿರಸ್ಸಿನಲ್ಲಿ ಶಂಖವುಳ್ಳದ್ದು ಶೇಷ, ಬೆನ್ನಿನಲ್ಲಿ ನೈದಿಲಾಕಾರವಾಗಿರುವುದು ವಾಸುಕಿ, ಬೆನ್ನಿನಲ್ಲಿ ಮುಕ್ಕಣ್ಣಿನ ಲಾಂಛನವುಳ್ಳದ್ದು ಕರ್ಕೋಟಕ, ಬೆನ್ನಿನಲ್ಲಿ ಸ್ವಸ್ತಿಕಲಾಂಛನವುಳ್ಳದ್ದು ತಕ್ಷಕ, ಬೆನ್ನಿನಲ್ಲಿ ತ್ರಿಶೂಲ, ಅರ್ಧ ಚಂದ್ರಾಕೃತಿಯಾದ ಲಾಂಛನವುಳ್ಳದ್ದು ಶಂಖಪಾಲ, ರಾಜಾವರ್ತದ ವರ್ಣವುಳ್ಳ ಬಿಂದುಗಳು ಬೆನ್ನಿನಲ್ಲಿವುಳ್ಳದ್ದು ಮಹಾಪದ್ಮ, ಬೆನ್ನಿನಲ್ಲಿ ರಕ್ತವರ್ಣವಾದ ಐದು ಬಿಂದುಗಳುಳ್ಳದ್ದು ಪದ್ಮ ಎಂದು ಶಿವನಿಂದ ಹೇಳಲ್ಪಟ್ಟ ಜಾತಿ ಹೆಸರು ಗುರುತುಗಳನ್ನು ಅರಿತವನಿಗೆ ಮಂತ್ರೌಷಧಗಳೆಲ್ಲವೂ ಸಿದ್ಧಿಸುವುವು. ಇಲ್ಲದಿದ್ದರೆ ಸಿದ್ಧಿಸದು. ಸರ್ಪ ಮೊದಲಾದುವು ಆತನಕಂಡರೆ ಗರುಡನಂ ಕಂಡಂತೆ ಅಂಜುವುವು.

ಪೂರ್ವದಲ್ಲಿ ಶಿವನಿಂದ ಹೇಳಲ್ಪಟ್ಟ ದಂಶಭೇದವು ತಿಳಿಸಲ್ಪಡುತ್ತದೆ.

ಸರ್ಪದಂಶ ಹತ್ತುತೆರ ಅದೆಂತೆನೆ:—ಸರ್ಪನು ಭಯಪಟ್ಟು ಕಚ್ಚುವಣ, ಹುಚ್ಚುಹಿಡಿದು ಕಚ್ಚುವಣ, ಹಸಿತು ಕಚ್ಚುವಣ, ಮೆಟ್ಟಿದರೆ ಕಚ್ಚುವಣ, ವಿಷ ಕೊಬ್ಬಿ ಕಚ್ಚುವಣ, ಆಹಾರವ ತಕೊಂಡು ಸಂಚರಿಸುವಾಗ ಕಂಡು ಕಚ್ಚುವಣ ಬಾಯಾರಿಕಂಗೆಟ್ಟು ಕಚ್ಚುವಣ, ತನ್ನ ಸ್ಥಾನವನ್ನು ಕಾದುಕೊಂಡಿರುವಲ್ಲಿ ಅದಕ್ಕೆ ವಿಘಾತಮಾಡಿದರೆ ಕಚ್ಚುವಣ, ಪೂರ್ವದ ವೈರದಿಂದ ಕಚ್ಚುವಣ, ಮೃತ್ಯುವಿನಿಂದ ಪ್ರೇರಿತವಾಗಿ ಕಚ್ಚುವಣ ಹೀಗೆ ಹತ್ತು ಪ್ರಕಾರ.

ಉದ್ಯಾನವನ, ಹಾಳುಭಾವಿ, ಆಲದಮರ, ಮುಗ್ಗಡ್ಡೆ, ಕಮ್ಮಾರರ ಕೊಟ್ಟಿಗೆ, ಒಣಗಿದಮರ, ಸ್ಮಶಾನ, ತಾರೇಮರ, ಚಳ್ಳೇಮರ, ನುಗ್ಗೇಮರ, ದೇವಸ್ಥಾನ, ಹಾಳುಮನೆ, ಖರ್ಜೂರ ವೃಕ್ಷ, ಕರಿಬೇವಿನ ಮರ ಈ ಸ್ಥಾನಂಗಳಲ್ಲಿರುವ ಸರ್ಪಂಗಳು ಕಚ್ಚಿದರೆ ಬದುಕುವದಿಲ್ಲವೆಂದು ತಿಳಿವುದು.

ಹುಬ್ಬಿನ ಮಧ್ಯ, ಅಧರೋಷ್ಠ, ಶಿರಸ್ಸು, ಹಣೆ, ಕಣ್ಣು, ಹುಬ್ಬುಗಳು, ಕೊರಳು, ಗಡ್ಡ, ಹೆಗ್ಗತ್ತು, ಹಸ್ತ, ಮಧ್ಯ, ಕಟವಾಯಿ, ಮೊಳಕಾಣ್ಣು, ಮುಡುಹುಗಳು, ಹೊಟ್ಟೆ, ಶಿಶ್ನ, ವೃಷಣ, ಹೊಕ್ಕಳು, ಮರ್ಮದ ಸಂದು ಗಳು ಈ ಸ್ಥಾನಗಳಲ್ಲಿ ಸರ್ಪದಷ್ಟವಾದರೆ ಬದುಕುವದಿಲ್ಲವೆಂದರಿವುದು.

ಆದಿತ್ಯವಾರ, ಮಂಗಳವಾರ, ಶನಿವಾರಗಳಲ್ಲಿ ಸರ್ಪದಂಶವಾದ ಮನುಷ್ಯನು ಬದುಕನು.

ಅಷ್ಟಮಿ, ಪಂಚಮಿ, ಪೌರ್ಣಮಿ, ಅಮಾವಾಸ್ಯಾ, ಚತುರ್ದಶೀ ಇವು ಅಶುಭ ತಿಥಿಗಳು, ಇವುಗಳಲ್ಲಿ ಸರ್ಪದಂಶವಾದರೆ ಆ ಮನುಷ್ಯನು ಬದುಕುವದಿಲ್ಲ.

ಕೃತ್ತಿಕೆ, ಶ್ರವಣ, ಮೂಲ, ವಿಶಾಖೆ, ಭರಣಿ, ಮಖೆ, ಪೂರ್ವಾಷಾಢ, ಪೂರ್ವಾಭಾದ್ರ, ಹುಬ್ಬೆ, ಚಿತ್ತ, ಆಶ್ಲೇಷ ಇವು ಸರ್ಪದಂಶಕ್ಕೆ ಪಾಪ ನಕ್ಷತ್ರಂಗಳು. ಈ ನಕ್ಷತ್ರಗಳಲ್ಲಿ ಸರ್ಪದಷ್ಟವಾದರೆ ಆ ಮನುಷ್ಯನು ಬದುಕನು.

ಮಧ್ಯಾಹ್ನ, ಸಾಯಂಕಾಲ, ಅರ್ಧರಾತ್ರಿ, ರಾತ್ರಿಯ ಕಡೇ ಭಾಗ ಈ ಸಮಯಗಳಲ್ಲಿ ಸರ್ಪದಂಶವಾದರೆ ಆ ಮನುಷ್ಯನು ಜೀವಿಸುವುದಿಲ್ಲವೆಂದರಿವುದು.

ಸರ್ಪನ ಕಟವಾಯಿಯಲ್ಲಿ ಶೀಗೆಮುಳ್ಳಿನಂತೆ ಹಲ್ಲುಗಳಿರುತ್ತವೆ, ಅವು ಗಳಿಂದ ಘೋರವಾದ ವಿಷವಂ ಉಗುಳುವುದರಿಂದ ಕಾಲಮೃತ್ಯುವೆಂದು ಹೇಳಲ್ಪಡುವುದು. ಒಂದು ಹಲ್ಲು ನೆಟ್ಟರೆ ವಿಷವಿಲ್ಲ, ಎರಡು ಹಲ್ಲು ನೆಟ್ಟರೆ ಮಂತ್ರಸಾಧ್ಯ, ಮೂರು ಹಲ್ಲು ನೆಟ್ಟರೆ ಔಷಧಸಾಧ್ಯ ನಾಲ್ಕು ಹಲ್ಲು ನೆಟ್ಟರೆ ಜೀವಿಸುವದಿಲ್ಲವೆಂದರಿವುದು.

ಪರ್ವತ, ಉದ್ಯಾನವನಗಳಲ್ಲಿರುವ ಸರ್ಪನು ಬ್ರಾಹ್ಮಣ ಜಾತಿ; ಕೋಟೆ, ಆಟ್ಟ, ಚೌಬೀದಿ, ಹೊರಬಾಗಿಲು, ದೊಡ್ಡ ಉಪ್ಪರಿಗೆಗಳಲ್ಲಿರುವ ಸರ್ಪಗಳು ಕ್ಷತ್ರಿಯ ಜಾತಿ; ಕಮ್ಮಾರರ ಕೊಟ್ಟಿಗೆ, ದನದಹಟ್ಟಿ, ಜಲದಾರಿ, ಬಚ್ಚಲು ಗಳಲ್ಲಿರುವ ಸರ್ಪಂಗಳು ವೈಶ್ಯ ಜಾತಿ; ಅಡವಿ, ನೀರು, ಕಲ್ಲುಸಂದು ಮೊದಲಾದ ವಿಷಮಸ್ಥಾನಗಳಲ್ಲಿರುವ ಸರ್ಪಂಗಳು ಶೂದ್ರಜಾತಿಯೆಂದರಿವುದು.

ಆಷಾಢಮಾಸದಲ್ಲಾದರೂ, ಶ್ರಾವಣಮಾಸದಲ್ಲಾದರೂ, ನಾಭಿಸ್ಥಾನದಲ್ಲಿ ಉಂಟಾದ ಗರ್ಭದಿಂದ ಬೆಳೆಯುವ ಹೆಣ್ಣುಸರ್ಪವು, ಕಾರ್ತೀಕಮಾಸದಲ್ಲಾದರೂ ಮಾರ್ಗಶಿರಮಾಸದಲ್ಲಾದರೂ ತನಗೆ ಪ್ರಸೂತಿಯುಂಟಾದ ದಿನದಲ್ಲಿ ೯ ಅಥವಾ ೭ ಮೊಟ್ಟೆಗಳನ್ನು ಇಕ್ಕುವುದು. ಅವು ೧೫ ದಿನಗಳಿಗೆ ಒಡೆಯುವುವು. ಆ ಹಾವಿನ ಮರಿಗಳು ಕೆಂಪಾದ ಕಂಬಳಿಕೂದಲಂತೆ ಕಾಣುವುವು. ೫ ಅಂಗುಲ ನೀಟವಾಗಿ, ತಲೆಯಲ್ಲಿ ಕಪ್ಪಿನೊಡನೆ ನಿಶ್ಚೇಷ್ಟಿತವಾಗಿ ವಿಷವಿಲ್ಲದಿಹವು. ಇವು ಗಳನ್ನು ಕ್ರಮದಿಂದ ಆ ಹೆಣ್ಣುಸರ್ಪ ಒಂದೊಂದಾಗಿ ಭಕ್ಷಿಸುವುದು. ಅವುಗಳ ಪೈಕಿ ೩ ಮರಿಗಳು ಉಳಿಯುವುವು. ಅವುಗಳಲ್ಲಿ ೧ ಹೆಣ್ಣು, ೧ ಗಂಡು, ೧ ನಪುಂಸಕ

ಗಳಾಗುವುವು. ಮತ್ತೇಳು ದಿನಗಳಿಗೆ ಬಿಳುಪುವರ್ಣ ತಿರಿಗಿ, ಮತ್ತೇಳು ದಿನಗಳಿಗೆ ಚೈತನ್ಯವೂ ಜ್ಞಾನವೂ ಉಂಟಾಗುವುವು, ತರುವಾಯ ಏಳು ದಿವಸ ಗಳಮೇಲೆ ಮೊಟ್ಟೆಯೊಡೆದು ೨೧ ದಿನಗಳಿಗೆ ದಂತಗಳುಂಟಾಗುವುವು. ಮೊಟ್ಟೆ ಯೊಡೆದ ೩೦ ದಿನಕ್ಕೆ ಕಣ್ಣು ಬಿಟ್ಟು ಚಲನವೂ ಕರಿಯಾಲೆಯೂ ಉಂಟಾಗಿ ಆದಿತ್ಯ ಮಂಡಲವನ್ನು ನೋಡುವುವು. ಆಗ ವಿಷೋತ್ಪತ್ತಿಯಾಗುವುದು. ಕೆಲವು ಸರ್ಪಗಳು ಕಾರ್ತೀಕಮಾಸದಲ್ಲಿ ಹುಟ್ಟುತ್ತವೆ, ಅವು ಸ್ವಲ್ಪ ಪರಾ ಕ್ರಮ ವಿಷಗಳುಂಟಾಗಿಹವು, ಮಾರ್ಗಶಿರಮಾಸದಲ್ಲಿ ಹುಟ್ಟಿದವು ವಿಶೇಷ ಬಲ ವಿಷಗಳುಳ್ಳವಾಗಿಹವು. ಆಮೇಲೆ ಒಂದು ತಿಂಗಳು ತಾಯಿಯೊಂದಿಗೂ ತರು ವಾಯ ಎಡೆಯಾಗಿಯೂ ಸಂಚರಿಸುವುವು, ಆರು ತಿಂಗಳಿಗೆ ಒಂದಾವರ್ತಿ ಸೋಲೆ ಗಳೆಯುವುವು, ಆಗ ಮರಣಾವಸ್ಥೆಯಂತೆ ಪ್ರಯಾಸಪಡುವುವು.

ನವಿಲು, ಗಿಡಗ, ಮೂಗುರಿ, ಬೆಕ್ಕು, ತೋಳ, ಕಾಡುಹಂದಿ, ದನಗಳ ಕಾಲಕೊಳಗು, ಶಿಡಿಲು, ಕಾಡಗಿಚ್ಚು ಮುಂತಾದವುಗಳಿಂದಲೂ ಯೆಡೆಯಾಂತರ ದಲ್ಲಿಯೂ ಆ ಸರ್ಪಗಳಿಗೆ ಮರಣವಿಲ್ಲದಿದ್ದರೆ ನೂರುವರ್ಷ ಬದುಕುವುವು.

ಸರ್ಪಂಗಳ ಹೆಡೆಯ ಉಭಯಪಾರ್ಶ್ವಂಗಳಲ್ಲೆಲ್ಲಾ ಕೂಡಿ ೨೨೦ ದಂತ ಗಳುಂಟಾಗಿಹವು. ಕಾಳರಾತ್ರಿ, ಕರಾಳಿ, ಯಮದೂತಿ, ವಿಭೀಷಣಿ, ಭದ್ರ ಕಾಳಿ, ಮುಖರಿ, ಸರ್ಪಧೂತಿ, ಉಗ್ರಭೀಷಣಿ, ಅತ್ಯುಗ್ರಭೀಷಣಿ ಎಂದು ಒಂಭತ್ತು ವಿಷಹಲ್ಲುಗಳುಂಟು. ಎಡದದಾಡೆಯಲ್ಲಿ ಕಾಳರಾತ್ರಿ, ಕರಾಳಿ, ಯಮ ದೂತಿ, ವಿಭೀಷಣಿ ಎಂಬ ೪ ಹಲ್ಲುಗಳಿಹವು. ಭದ್ರಕಾಳಿ, ಮುಖರಿ, ಸರ್ಪ ದಂತಿ, ಉಗ್ರಭೀಷಣಿ ಎಂಬ ೪ ಹಲ್ಲುಗಳು ಬಲದ ದಾಡೆಯಲ್ಲಿಹವು. ಅತ್ಯುಗ್ರ ಭೀಷಣಿಯೆಂಬ ಹಲ್ಲು ಮುಖದ ಮುಂಗಡೆಯಲ್ಲಿಹುದು. ಅದರಲ್ಲಿ ಕೆಲವು ಹಲ್ಲು ಗಳಿಂದ ಕಚ್ಚುವುವು, ಕಚ್ಚಿದ ಘಾಯ ೪ ವಿಧವಾಗಿಹವು ಅದನ್ನು ಅರಸಿ ಕಾಣ ಬೇಕು. ಅದೆಂತೆನೆ:—ಸರ್ಪದಂಶ, ಅವಲುಪ್ತ, ದಷ್ಟ, ವಿದ್ಧ, ಖಂಡಿತ ವೆಂದು ೪ ತೆರ. ೧ ಘಾಯವಿಲ್ಲದೆ ಸುಮ್ಮನೆ ಕಚ್ಚಿದ್ದು ಅವಲುಪ್ತವೆಂತಲೂ, ೨ ಹಲ್ಲು ನೆಟ್ಟ ಘಾಯವಾದದ್ದು ದಷ್ಟವೆಂತಲೂ, ೩ ಹಲ್ಲು ನೆಟ್ಟದ್ದು ವಿದ್ಧ ವೆಂತಲೂ, ೪ ಹಲ್ಲು ನೆಟ್ಟದ್ದು ಖಂಡಿತವೆಂತಲೂ ತಿಳಿಯುವುದು. ಅವುಗಳಲ್ಲಿ ಮೂರು ಮಂತ್ರೌಷಧಗಳಿಂದ ಸಾಧ್ಯ, ೪ ನೆಯದಾದ ಖಂಡಿತವೆಂಬುದು ಅಸಾಧ್ಯ ವೆಂದರಿವುದು.

ಸರ್ಪ ಕಚ್ಚಿದರೆ ಅದಕ್ಕೆ ೭ ವೇಗಗಳುಂಟು ಮೊದಲನೇವೇಗ ರೋಮಾಂಚ ವನ್ನೂ, ಕಣ್ಣು ಬಾಯಿ ದೇಹಗಳಲ್ಲಿ ಕೃಷ್ಣವರ್ಣವನ್ನೂ, ೨ನೇ ವೇಗ ವೆಗ್ಗಳ ವಾದ ಬೆವರನ್ನೂ, ಆಸ್ಯಶೋಷಣವನ್ನೂ, ೩ನೇ ವೇಗ ದೇಹದಲ್ಲಿ ವಿವರ್ಣ ವನ್ನೂ, ಕಣ್ಣುಗತ್ತಲೆಯನ್ನೂ, ೪ನೇ ವೇಗ ಛರ್ದಿಯನ್ನೂ ದೇಹದಲ್ಲಿ ನಡುಕ ವನ್ನೂ, ೫ನೇ ವೇಗ ಎದೆನೋವು ಬಿಕ್ಕಟ್ಟುಗಳನ್ನೂ, ೬ನೇ ವೇಗ ಊರ್ಧ್ವ

ಶ್ವಾಸವನ್ನೂ ದೇಹದಲ್ಲಿ ಭಾರವನ್ನೂ, ೭ನೇ ವೇಗ ಮರಣವನ್ನೂ ಉಂಟು ಮಾಡುವುದು.

## ಮಂಡಲದ ವಿಷವೇಗಗಳು.

ಮಂಡಲ ವಿಷಕ್ಕೆ ಆರು ವೇಗ. ಅದರಲ್ಲಿ ಮೊದಲನೇ ವೇಗ ಮುಖದಲ್ಲಿಯೂ ದೇಹದಲ್ಲಿಯೂ ಹಳದೀವರ್ಣವನ್ನೂ, ಮೈಯಲ್ಲಿ ಬಾಕನ್ನೂ; ೨ನೇ ವೇಗ ಕಚ್ಚಿದ ಘಾಯದಲ್ಲಿ ರಕ್ತಸುರಿಯುವಿಕೆಯೂ, ೩ನೇ ವೇಗ ಬೆವರನ್ನೂ, ಬಾಯಾರಿಕೆಯನ್ನೂ; ೪ನೇ ವೇಗ ಜ್ವರವನ್ನೂ; ೫ನೇ ವೇಗ ದೇಹದಲ್ಲಿ ತಾಪವನ್ನೂ; ೬ನೇ ವೇಗ ಮರಣವನ್ನೂ ಉಂಟುಮಾಡುವುದು.

## ರಾಜಿಲ ವಿಷವೇಗಗಳು.

ರಾಜಿಲ ಸರ್ಪನಿಂದ ಉಂಟಾದ ಮೊದಲನೇ ವೇಗದಿಂದ ಮೈಮೇಲೆ ನರಗಳು ಏಳುವುದು; ೨ನೇ ವೇಗ ದೇಹದಲ್ಲಿ ಭಾರವನ್ನೂ; ೩ನೇ ವೇಗ ಬಾಯಿ, ಮೂಗು, ಕಣ್ಣು, ಕಚ್ಚಿದ ಘಾಯ ಇವುಗಳಲ್ಲೆಲ್ಲ ರಕ್ತವನ್ನೂ; ೪ನೇ ವೇಗ ದಾಡಾಭಂಗವನ್ನೂ, ಮಂಡೆ ಭಾರವನ್ನೂ; ೫ನೇ ವೇಗ ಶೀತಜ್ವರವನ್ನೂ, ವಾಗ್ಬಂಧನವನ್ನೂ; ೬ನೇ ವೇಗ ಮರಣವನ್ನೂ ಉಂಟುಮಾಡುವುದು.

## ಸರ್ಪವಿಷ ಚಿಕಿತ್ಸೆಗಳು.

೧. ಕಚ್ಚಿದ ಮಾತ್ರದಲ್ಲೇ ಶೀಘ್ರವಾಗಿ ಹಸುವಿನ ಸಗಣೀ ರಸವನ್ನೂ ಹಸುವಿನ ತುಪ್ಪವನ್ನೂ ಕೂಡಿಸಿ ಕುಡಿಯಕೊಡುವುದು. ಇದು ಹೃದಯಾವರ್ಣವೆನ್ನಿಸಿಕೊಂಬುದು. ಜೀವ ರಕ್ಷಣಕರವಹುದು.

೨. ೪ ಪಲ ಮೆಣಸನ್ನೂ ೪ ಪಲ ಹಸುವಿನತುಪ್ಪವನ್ನೂ ಕೂಡಿಸಿ ಕೊಡಿಸಲು ಸರ್ಪವಿಷ ಪರಿಹರವಹುದು. ದರ್ವೀಕರ, ಮಂಡಲ, ರಾಜಿಗಳೆಂಬ ಮೂರು ವಿಧವಾದ ಸರ್ಪವಿಷಂಗಳಲ್ಲಿಯೂ ಬಿಳೇ ಸಟ್ಟುಗದ ಬೇರನ್ನು ನೀರಲ್ಲಿ ಅರೆದು ಕೊಡಿಸಲು ವಿಷ ಪರಿಹರವಹುದು.

೩. ಒಂದು ಪಲ ಬಿಳಿಗಾರವನ್ನು ತಣ್ಣೀರಿನಲ್ಲಿ ಅರೆದು ಪಾನನಸ್ಯಗಳಂ ಮಾಡಿಸಲು ಸಕಲವಾದ ಸರ್ಪವಿಷ ಪರಿಹರವಹುದು. ಇದು ರಹಸ್ಯ ಪ್ರಯೋಗ.

೪. ಬಾಗೆಮರದ ಪುಷ್ಪ, ಎಲೆ, ತ್ವಕ್ಕು, ಕಾಯಿ, ಬೇರು ಈ ಪಂಚಾಂಗಗಳನ್ನು ನೀರಲ್ಲೆರದು ಕಲ್ಕವಮಾಡಿ ಕುಡಿಯಕೊಡಿಸಲು ಸ್ಥಾವರ ಜಂಗಮ ವಿಷವೆಲ್ಲವೂ ಪರಿಹರವಹವು. ಇದರ ಹೆಸರು ಪಂಚಶಿರೀಷ ಪ್ರಯೋಗವು. ಇದು ಸಿದ್ಧಾಂತವಾದ ಪ್ರಯೋಗದ ಔಷಧವು.

೫. ನೀಲೀಬೇರು, ಬೆಳ್ಳುಳ್ಳಿ, ಅರಿಸಿನ, ಉದಿಯಮರದ ಬೇರು ಇವುಗಳನ್ನು ನಿಂಬೇಹುಳಿಯಲ್ಲಿ ಅರೆದು ಆ ರಸದಲ್ಲೇ ಕದಡಿ ಕುಡಿಸಿ ನಸ್ಯವಂ ಮಾಡಿಸಲು ಸರ್ಪದಂಶದಿಂದ ಎಚ್ಚರತಪ್ಪಿದವನಾದರೂ ಜೀವಿಸುವನು.

೬. ಬಿಳೀಯಕ್ಕದಬೇರು, ಕೊಡಶಿಗನಬೀಜ, ಕಹಿಹೀರೇಬೀಜ, ಹಿಂಗು, ಬಾಗೇಬೀಜ, ಶುಂಠಿ, ಮೆಣಸು, ಹಿಪ್ಪಲಿ ಇವಿಷ್ಟನ್ನೂ ಆಡಿನ ಮೂತ್ರದಲ್ಲಿ ಅರೆದು ವಮನ ನಸ್ಯಗಳಂ ಮಾಡಿಸಲು ಕಾಲಕೂಟವಿಷವಾದರೂ ಶಮನ ವಹುದು.

೭. ಬಿಲ್ಲವತ್ತ್ಯದಬೇರು, ಲೊಕ್ಕಿಯಸೊಪ್ಪು, ಹೊಂಗೇಬೀಜ, ಗ್ರಂಥಿಕ ತಗರ, ದೇವದಾರು, ತ್ರಿಫಲೆ, ತ್ರಿಕಟುಕ, ಅರಿಸಿನ, ಮರದರಿಸಿನ ಇವುಗಳನ್ನು ಸಮಾಂಶವಾಗಿ ಆಡಿನ ಮೂತ್ರದಿಂದ ಸಣ್ಣನಾಗಿ ಅರೆದು ಅಂಜನ ಕುಡಿಹು ಗಳಂಮಾಡಿ ನಿಂಬೇಹಣ್ಣಿನ ರಸದಿಂದಲಾದರೂ ತಣ್ಣೀರಿಂದಲಾದರೂ ಅಂಜನ ಪಾನ ನಸ್ಯಗಳಂಮಾಡಿಸಲು ಹಾವು, ಜೇಡರಹುಳ, ಇಲಿ, ಚೇಳು ಇವುಗಳ ವಿಷಗಳು ಶಮನವಹವು.

೮. ಬಾಗೇಸೊಪ್ಪಿನ ರಸದಲ್ಲಿ ತಿಗಣೆಯ ರಕ್ತವನ್ನು ಕೂಡಿಸಿ ನಸ್ಯವಂ ಮಾಡಿಸಲು ಹಾವುಕಚ್ಚಿ ಮೂರ್ಛೆಹೊಂದಿದ್ದ ಮನುಷ್ಯನು ಜೀವಿಸುವನು.

೯. ಗರುಗದಸೊಪ್ಪಿನ ರಸದಿಂದ ನಸ್ಯವಂಮಾಡಿಸಲು ಸರ್ವವಿಷ ಶಮನ ವಹುದು.

೧೦. ಚಿಲುಕೀರೇಬೇರು, ತಿಗಡೆ ಇವುಗಳನ್ನು ಸಮಾಂಶವಾಗಿ ಚೂರ್ಣಿಸಿ ಹಸುವಿನತುಪ್ಪದಲ್ಲಿ ಕೊಡಲು ಸರ್ಪವಿಷ ಶಮನವಹುದು.

೧೧. ಕೊಮ್ಮೇಸೊಪ್ಪಿನ ರಸದಿಂದ ನಸ್ಯವಂಮಾಡಿಸಲು ಸರ್ಪವಿಷ ಶಮನವಹುದು.

೧೨. ಒಳ್ಳೇದಾಗಿರುವ ಹೊಗೇಸೊಪ್ಪು ೧ ತೊಲೆ ತಂದು ನೀರಿನಿಂದ ಅರೆದು ಬಟ್ಟೆಯಲ್ಲಿ ಶೋಧಿಸಿ ಕುಡಿಸಿದರೆ ವಾಂತಿಯಾಗಿ ವಿಷ ಇಳಿಯುವುದು.

೧೩. ಭಾನುವಾರ ಅಥವಾ ಅಮಾವಾಸ್ಯೆಯದಿನ ತನ್ನ ನೆರಳು ಬೀಳದಂತೆ ಅಂಕೋಲೆಗಿಡದ ಬೇರುತಂದು ನೀರಿನಲ್ಲಿ ಅರೆದು ಗಂಧತೆಗೆದು ೧ ದಿರಂನಷ್ಟು ಹೊಟ್ಟೆಗೆ ಕುಡಿಸುವುದು ಮತ್ತು ಕಚ್ಚಿದ ಸ್ಥಳಕ್ಕೆ ಇದೇಗಂಧ ಹಚ್ಚುವುದರಿಂದ ಹಾವಿನ ವಿಷ ಗುಣವಾಗುವುದು.

೧೪. ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ ಇವು ಸಮ ಭಾಗ ಹಸುವಿನ ಮೂತ್ರದಲ್ಲಿ ೩ ದಿನ ನೆನೆಹಾಕಿ ಬಿಸಲಿನಲ್ಲಿ ಒಣಗಿಸಿ ಕುಟ್ಟಿ ಚೂರ್ಣಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಕಡಲೇಕಾಳು ಪ್ರಮಾಣ ಹಸು ವಿನ ಬೆಣ್ಣೆಯಲ್ಲಿ ಕಲಸಿ ಕೊಡಲು ಹಾವಿನ ವಿಷ ಗುಣವಾಗುವುದು.

೧೫. ಮಂಡಲದಹಾವು ಕಚ್ಚಿದ್ದಕ್ಕೆ:—ಹಸಿ ಅಟಿಕೆಮಾವಿನಡಿಬೇರು ಅಡಿಕೆ ಪುಟ್ಟೆನಬೇರು ಒರಳಲ್ಲಿ ಹಾಕಿ ಹಸುವಿನ ಮೂತ್ರದಿಂದ ಚನ್ನಾಗಿ ಕುಟ್ಟಿ ಬಟ್ಟೆ ಯಲ್ಲಿ ಶೋಧಿಸಿ ಕುಡಿಸಲು ಮಂಡಲದಹಾವಿನ ವಿಷ ಗುಣವಾಗುವುದು.

ವಿಷಕ್ಕೆ ಅಪಥ್ಯ:—ಹಗಲುನಿದ್ರೆ, ಸ್ತ್ರೀಸಂಗ, ವ್ಯಾಯಾಮ, ಕ್ರೋಧ, ಬಿಸಿಲು, ಮದ್ಯ, ಎಳ್ಳು, ಹುರಳಿ ಇವುಗಳನ್ನು ವಿಷತಾಕಿದವರು ವರ್ಜಿಸುವುದು.

ವಿಷಕ್ಕೆ ಪಥ್ಯ:—೬೦ ದಿನಕ್ಕೆ ಬೆಳೆದು ಬರುವ ಭತ್ತದ ಅಕ್ಕೀ ಅನ್ನ, ಹಳೇಬರಗಿನ ಅಕ್ಕಿ ಅನ್ನ, ನವಣಕ್ಕಿಅನ್ನ, ಹೆಸರು, ರೇಣುಕಾ, ತೊಗರಿ, ಪಡವಲದಕಾಯಿ, ಚಿತ್ತದಕುಡಿ, ಚಿಲುಕೀರೆ, ಸೀಹಾಲೆಸೊಪ್ಪು, ಚಕ್ರವರ್ತಿ, ಪುಳ್ಳಂಪುರುಚೆ, ಜಾಂಗಲಮಾಂಸ, ದಾಳಿಂಬರಹಣ್ಣು, ನೆಲ್ಲೀಕಾಯಿ, ಬೇಲದ ಕಾಯಿ, ಸೈಂಧವಲವಣ ಇವು ಪಥ್ಯಗಳು.

## ವೃಶ್ಚಿಕ ವಿಷಕ್ಕೆ.

ಚೇಳು ಕಚ್ಚಿದರೆ ಆದಿಯಲ್ಲಿ ಬೆಂಕಿ ತಗಲಿದಂತೆ ಉರಿವುದು, ಶೀಘ್ರವಾಗಿ ಮೇಲಕ್ಕೇರಿ ಇಳಿದು ಕಚ್ಚಿದಸ್ಥಳದಲ್ಲಿಯೇ ಇರುವುದು. ಆ ಘಾಯ ಅತಿವೇದನೆ ಯೊಡನೆ ಧೂಮ್ರವರ್ಣವಾಗಿ ಬಿರಿದೀತೋ ಎಂಬಹಾಗಿಹುದು.

ಕುಂದುರುಜ, ರಕ್ತಪುಚ್ಛ, ಯೆಮ್ಮೆಚೇಳು, ಶುಕ್ಲಕೀಟ ಎಂಬದಾಗಿ ಚೇಳು ನಾಲ್ಕುವಿಧ, ಅವು ಉತ್ತರೋತ್ತರ ವಿಷಾಧಿಕ್ಯವುಳ್ಳವಾಗಿಹವು.

## ವೃಶ್ಚಿಕ ವಿಷ ಚಿಕಿತ್ಸೆಗಳು.

೧. * ಕಾಸಮರ್ದದಬೇರು ಎಕ್ಕದಹಾಲಿನಲ್ಲಿ ೪೦ ದಿನ ನೆನೆಹಾಕಿ ಚಿಟ್ಟೆರ ಳಣ್ಣೆಯಲ್ಲಿ ಹಾಕಿ ಇಟ್ಟಿರುವುದು. ಚೇಳು ಕಚ್ಚಿದ್ದಕ್ಕೆ ಮೇಲ್ಕಂಡ ಬೇರು ಈರುಳ್ಳಿ ರಸದಲ್ಲಿ ಗಂಧತೆಗೆದು ಹಚ್ಚಿ ಬೆಂಕಿಶಖೆ ತೋರಿಸಿದರೆ ಉರಿ, ಚಳುಕು ನಿಲ್ಲುವುದು.

೨. ಪಾದರಸ || ತೊಲೆ, ಜಾಪಾಳ || ತೊಲೆ, ಸಜ್ಜಕ್ಷಾರ || ತೊಲೆ ಇವು ಗಳನ್ನು ಖಲ್ವದಲ್ಲಿ ಬಿಳೇಯಕ್ಕದಹಾಲಿನಲ್ಲಿ ೩ ದಿನ ಅರೆದು ಕೋಳವೆಮಾಡಿಟ್ಟು ಕೊಳ್ಳುವುದು. ಚೇಳು ಕಚ್ಚಿದ್ದಕ್ಕೆ ಕೋಳವೆಯನ್ನು ತಣ್ಣೀರಿನಲ್ಲಿ ಗಂಧತೆಗೆದು ಹಚ್ಚಿದರೆ ಚಳುಕು, ಉರಿ ನಿಲ್ಲುವುದು.

೩. ವತ್ಸನಾಭಿಯಂ ನೀರಿನಿಂದ ಅರೆದು ಆ ಘಾಯಕ್ಕೆ ಇಕ್ಕಲು ವಿಷ ಹರವಹುದು.

೪ ಯಕ್ಕದಬೇರನ್ನಾದರೂ, ಉಮ್ಮತ್ತದಬೇರನ್ನಾದರೂ ತಣ್ಣೀರಿನಲ್ಲಿ ಅರೆದು ಕುಡಿಸಲು ವೃಶ್ಚಿಕ ವಿಷಪರಿಹರ.

೫. ಯಲುವಸಂಧಿ ಬೇರನ್ನು ಅಂಬಿಲದಲ್ಲಿ ಅರೆದು ಕದಡಿ ಕುಡಿಯಕೊಟ್ಟು ಕಚ್ಚಿದ ಘಾಯಕ್ಕೆ ಲೇಪನವಮಾಡಿಸಲು ವೃಶ್ಚಿಕ ವಿಷ ಶಮನವಹುದು.

೬. ಪುತ್ರಜೀವಿಯತಿರಳು, ಮಾತ್ತುಗಬೀಜದತಿರಳು, ಹೊಂಗೇಬೀಜದ ತಿರಳು ಈ ಮೂರನ್ನೂ ಸಮಾಂಶವಾಗಿ ನೀರಿನಿಂದ ಅರೆದು ದಂಶಸ್ಥಾನಕ್ಕೆ ಲೇಪಿ ಸಲು ವೃಶ್ಚಿಕವಿಷ ಹರವಹುದು.

---

* ಇದನ್ನು ತೆಲುಗಿನಲ್ಲಿ ತೀಟಕಸಿವಿಂಡವೇರು ಎಂತಲೂ, ಸಂಸ್ಕೃತದಲ್ಲಿ ಕಾಸಾರಿ ಯೆಂತಲೂ, ಹಿಂದಿಯಲ್ಲಿ ಕಸೌಂದೀ ಎಂತಲೂ ಹೇಳುವರು.

೭. ಜೇನುಮೇಣವನ್ನು ಯುಕ್ಕದಹಾಲು, ಮುಂಡಗಳ್ಳಿಹಾಲು ಇವುಗಳಿಂದ ಏಳು ಭಾವನೆಯುಂಮಾಡಿರಿಸಿಕೊಂಡು ವೃಶ್ಚಿಕದಂಶವಾದಾಗ ದಂಶಸ್ಥಾನಕ್ಕೆ ಆ ಮೇಣವಂ ಕಾಯಿಸಿ ಒತ್ತಲು ಆ ವಿಷದವುಳ್ಳು ಆ ಮೇಣದಲ್ಲಿ ಹತ್ತಿಕೊಂಡು ಬರುವುದಲ್ಲದೆ ವಿಷ ಸಹ ಶಮನವಹುದು.

೮. ಎಲೆಹುರೀಬೇರನ್ನೂ ಬಜೆಯನ್ನೂ ಬೇವಿನ ಸೊಪ್ಪನ್ನೂ ಬಾಯಿಯಲ್ಲಿ ಹಾಕಿಕೊಂಡು ಅಗಿದು ವೃಶ್ಚಿಕದಂಶವಾದವನ ಕಿವಿಯಲ್ಲಿ ಉರುಹಲು ವಿಷವು ಇಳಿವುದು.

ಆದಿತ್ಯವಾರದ ದಿನದಲ್ಲಿ ಮೌನವಾಗಿ ಹಂಸಪಾದೀಮೂಲವಂ ತಂದಿರಿಸಿಕೊಂಡು ಚೇಳು ಕಚ್ಚಿದರೆ ಆ ಬೇರನ್ನು ಬಾಯಲ್ಲಿ ಹಾಕಿಕೊಂಡು ಅಗಿದು ಕಿವಿಯಲ್ಲಿ ಉರುಬಲು ವಿಷ ಪರಿಹರ. ಇದು ಸಿದ್ಧ ಪ್ರಯೋಗ

೧೦. ಚೇಳು ದೇಹದ ಬಲಪಾರ್ಶ್ವದಲ್ಲಿ ಕಚ್ಚಿದರೆ ಕೆಂಪುಹಾಲುವಾಣದ ಸೊಪ್ಪಿನ ರಸವನ್ನು ಎಡ ಕಿವಿಯಲ್ಲಿಯೂ, ಎಡಪಾರ್ಶ್ವದಲ್ಲಿ ಕಚ್ಚಿದರೆ ಬಲ ಕಿವಿಯಲ್ಲಿಯೂ ಬಿಡುವುದು. ಮತ್ತು ಕಚ್ಚಿದಸ್ಥಳಕ್ಕೆ ಲೇಪಿಸಿ ಬೆಂಕಿಸೆಕೆ ತೋರಿಸುವುದು. ಇದರಿಂದ ವೃಶ್ಚಿಕ ವಿಷ ಗುಣವಾಗುವುದು.

## ಮೂಷಕ (ಇಲಿ) ವಿಷ.

ಇಲಿಗಳು ಲಾಲನೆ, ಚಪಲೆಯೆಂಬ ಹೆಸರುಳ್ಳವೇ ಮೊದಲಾಗಿ ೧೮ ತೆರನಾಗಿಹವು. ಆ ಇಲಿಗಳು ಸಂಯೋಗವಮಾಡಿ ಒಂದೊಂದು ಹೋರಾಡಿಕೊಂಡು ಮನುಷ್ಯರಮೇಲೆಬಿದ್ದು ಅದರಶುಕ್ಲ ಎಲ್ಲಿ ತಾಕುವುದೋ ಆ ಸ್ಥಳದಲ್ಲಿ ರಕ್ತ ಕೆಟ್ಟು ಪಾಂಡುವರ್ಣವುಂಟಾಗಿ ಆಮೇಲೆ ಗಂಟುಗಳೆದ್ದು ಬಾಕು ವುಂಟಾಗುವುದು. ಬೊಕ್ಕೆಗಳೂ ಬಟುಬಟುವಾಗಿ ಗಂಧೆಗಳೂ ಏಳುವುವು. ಭ್ರಮೆ, ಅರೋಚಕ, ಶೀತಜ್ವರ, ಮೈನೋವು, ಬಳಲಿಕೆ, ನಡುಕ, ಸಂದುಗಳನೋವು, ರೋಮಾಂಚ, ಬೇಸರಿಕೆ, ಮೂರ್ಛೆ, ದೀರ್ಘಕಾಲಾನುಬಂದಿಯಾದ ಶ್ಲೇಷ್ಮ ಇವುಗಳನ್ನುಂಟು ಮಾಡುವುದು. ಇಲಿಯ ಆಕಾರದಲ್ಲಿ ಮೈಮೇಲೆ ಗಂಟುಗಳು, ಬಾಯಾರಿಕೆ, ಇಷ್ಟು ಲಕ್ಷಣಂಗಳೂ ಉಂಟಾಗಿಹವು.

ಹೋರಾಡಿ ಸಂಗಮಾಡಿದ ಇಲಿಯವಿಷ ಬಹಳ ಪ್ರಕೋಪಿಸಿದ್ದು ಮತ್ತೂ ಪ್ರಕೋಪಿಸುವುದು, ಆದುದರಿಂದ ಕೆಳಹೊಟ್ಟೆ ಬೆನ್ನಿಗೆಹತ್ತಿ ತುಟಿ ವಿವರ್ಣವಾಗಿ, ಮೈಮೇಲೆ ಇಲಿಯ ಆಕಾರದಲ್ಲಿ ಗಂಟುಗಳೆದ್ದು, ಮೈಯಲ್ಲಿ ಪುನಗಿನ ಗಂಧವುಂಟಾಗಿಹುದು. ಹೀಗಿರುವ ಇಲಿಯ ವಿಷ ಅಸಾಧ್ಯವಾದದ್ದು.

ಮೂರ್ಛೆ, ಮೈಯಲ್ಲಿ ಬಾಕು, ದೇಹದಲ್ಲಿ ವಿವರ್ಣ, ಬೆವರು, ಕಿವಿಕೇಳಿಸದಿರುವಣ, ಜ್ವರ, ಮಂಡೆಭಾರ, ಬಾಯಿಯಲ್ಲಿ ಜೊಲ್ಲುಸುರಿಯುವಿಕೆ, ರಕ್ತ ಗಂಡೆ ಗಂಡೆಯಾಗಿರುವಣ, ಕಾರುವಣ ಈ ಲಕ್ಷಣಗಳುಳ್ಳ ಇಲಿಯವಿಷ ಅಸಾಧ್ಯವೆಂದರಿವುದು.

## ಇಲಿಯ ವಿಷಕ್ಕೆ ಚಿಕಿತ್ಸೆಗಳು.

೧. ಇಲೀ ಕಚ್ಚಿದ ಕ್ಷಣದಲ್ಲಿಯೇ ಕಚ್ಚಿದ ಘಾಯದಲ್ಲಿ ಕಬ್ಬಿಣದ ಸರಳಿಂದ ರಕ್ಷೆಯಂ ಹಾಕಿಸುವುದು. ಆಮೇಲೆ ಇಲ್ಲಣ, ಮಂಜಿಷ್ಠೆ, ಅರಸಿನ ಸೈಂಧವಲವಣ ಈ ನಾಲ್ಕನ್ನೂ ಸಮಾಂಶವಾಗಿ ನೀರಿನಿಂದ ಘಾಯಕ್ಕೆ ಲೇಪಿಸಲು ಇಲಿಯ ವಿಷ ಪರಿಹರ. ನರದಮೇಲೆ ರಕ್ಷೆಯಂ ಹಾಕಿ ರಕ್ತವಂ ತೆಗೆಯಿಸಲು ವಿಷಹರ.

೨. ಸುಣ್ಣ ನೀರು ಹಾಕಿ ಬೇಯಿಸಿ ತೆಳುವಾದ ಸುಣ್ಣ ತೆಗೆದುಕೊಂಡು ಬಟ್ಟೆಯಲ್ಲಿ ಹಿಂಡಿಕೊಂಡದ್ದು ನೆಲ್ಲೀಕಾಯಿನಷ್ಟು ಬೆಲ್ಲದಲ್ಲಿ ಇಟ್ಟು ನುಂಗಿಸುವುದು. ಹೀಗೆ ಬೆಳಿಗ್ಗೆ ಹೊತ್ತು ೫ ದಿನ ಕೊಡಬೇಕು. ಇದಕ್ಕೆ ಪಥ್ಯ ಬಿಸಿನೀರು ಅನ್ನ. ಇದರಿಂದ ಸುಂಡಿಲಿ ವಿಷ, ಹೆಗ್ಗಣದ ವಿಷ ಗುಣವಾಗುವುದು.

೩. ಕುಪ್ಪೇಸೊಪ್ಪಿನ ರಸ ೩ ತೊಲೆ ಹೊಟ್ಟೆಗೆ ಕುಡಿಯುವುದು. ಕುಸುವಲಕ್ಕಿ ಬಾಯಲ್ಲಿ ಹಾಕಿಕೊಂಡು ಬೆನ್ನಿನ ಹತ್ತಿರ ಚಿಟ್ಟರಳೆಣ್ಣೆ ಸವರುವುದು. ಬಿಸಲಿನಲ್ಲಿದ್ದರೆ ವಾಂತಿ ಆಗುವುದು. ಬಿಸಲಿನಲ್ಲಿ ನಿಲ್ಲಲು ಆಗದೇ ಇದ್ದರೆ ನೆರಳಿನಲ್ಲಿ ಕರೆತಂದು ಬಿಸಿನೀರು ಕುಡಿಸಿದರೆ ವಾಂತಿ ಆಗುವುದು. ಪಥ್ಯ ಕುಸುವಲಕ್ಕಿ ಅನ್ನ. ಹರಿವೇಸೊಪ್ಪು ಹಾಕಿ ತೊಗರೀಬೇಳೆ ಸಿಹಿಸಾರು ಅನ್ನ ಊಟ ಮಾಡುವುದು. ಮೇಲ್ಕಂಡ ಔಷಧವನ್ನು ಎರಡನೆಯದಿನ ಕೊಡುವುದು. ಇದರಿಂದ ಇಲಿಕಚ್ಚಿದ ವಿಷ ಗುಣವಾಗುವುದು.

೪. ಬಿಳೀಕೊಮ್ಮೇಬೇರು ಹಸುವಿನಮಜ್ಜಿಗೆ ಒರಳಲ್ಲಿ ಹಾಕಿ ಚನ್ನಾಗಿ ರುಬ್ಬಿ ಬಟ್ಟೆಯಲ್ಲಿ ಶೋಧಿಸಿಕೊಂಡು ಅರಪಾವಿನಷ್ಟು ಕುಡಿಯುವುದು. ಹೀಗೆ ಬೆಳಿಗ್ಗೆ ಹೊತ್ತು ೭ ದಿವಸ ಕೊಡುವುದು. ಇದಕ್ಕೆ ಪಥ್ಯ ಹಸುವಿನಮಜ್ಜಿಗೆ ಅನ್ನ. ಇದರಿಂದ ಇಲಿ ಕಚ್ಚಿದ ವಿಷ ಗುಣವಾಗುವುದು.

೫. ಮುಕ್ಕಡಿಬೇರು ಚಕ್ಕೆ ಪೂರ್ವಕ್ಕೆ ಹೋಗಿರುವುದನ್ನು ತಂದು ನೀರಿನಲ್ಲಿ ಗಂಧ ತೆಗೆದು ಕಚ್ಚಿದ ಸ್ಥಳದಲ್ಲಿ ಲೇಪಿಸಿದರೆ ಇಲಿ ಕಚ್ಚಿದ ವಿಷ ಗುಣವಾಗುವುದು.

೬. ಕಿಡುಗೆರಶಿ ಸಮೂಲ ಸಣ್ಣ ತುಂಡುಗಳಾಗಿ ಕತ್ತರಿಸಿ ಒಂದು ಮಡಿಕೆಯಲ್ಲಿ ಹಾಕಿ ನೀರು ೧ ಶೇರು ಹುಯಿದು ಅರಪಾವು ಅವರೇಕಾಳು ಹಾಕಿ ಕಮಲಾಗ್ನಿಯಿಂದ ೪ ಜಾವ ಬೇಯಿಸಿ ಅದರಲ್ಲಿ ಅರ್ಧಶೇರು ನೀರು ಇರುವಾಗ ಇಳಿಸಿ ಅವರೇಕಾಳನ್ನು ತೆಗೆದು ಒಣಗಿಸಿಟ್ಟುಕೊಳ್ಳುವುದು. ಹೊತ್ತಿಗೆ ೭ ಅವರೇಕಾಳು ತಿನ್ನುವುದು. ಈರೀತಿ ಬೆಳಿಗ್ಗೆ ೯ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಸುಂಡಿಲಿ ಕಚ್ಚಿದ ವಿಷ ಇಳಿಯುವುದು ಮತ್ತು ಶರೀರ ಊತವಿದ್ದರೂ ಗುಣವಾಗುವುದು.

೭. ತಿಗಡೆ, ನೀಲೀಬೇರು, ತ್ರಿಫಲೆ ಇವುಗಳನ್ನು ಸಮಾಂಶವಾಗಿ ಕೂಡಿಸಿ ಅರೆದು ಕಲ್ಕವಮಾಡಿ ಕುಡಿಸಲು ವಿರೇಚನವಾಗಿ ಇಲಿಯ ವಿಷ ಪರಿಹರವಹುದು.

೮. ಬೇಲದಸೊಪ್ಪು ತಂದು ಅಷ್ಟಾವಶೇಷವಾಗಿ ಕಷಾಯ ಕಾಯಿಸಿ ೩ ದಿನ ಕುಡಿಯ ಕೊಡಲು ಇಲಿಯ ವಿಷ ಪರಿಹರವಹುದು.

೯. ಬಳ್ಳೀಸೊಂಡೇಸೊಪ್ಪಿನ ರಸವನ್ನೂ ಎಳ್ಳೆಣ್ಣೆಯನ್ನೂ ಬೆರೆಸಿ ೩ ದಿನ ಕುಡಿಯ ಕೊಡಲು, ತೆಗೆದುಕೊಂಡವನಿಗೆ ಜನ್ಮಾಂತರದಲ್ಲಿಯೂ ಮೂಷಕ ವಿಷ ಬಾಧೆ ಇಲ್ಲವೆಂದರಿವುದು.

## ಶ್ವಾನ (ನಾಯಿ) ವಿಷಕ್ಕೆ ಚಿಕಿತ್ಸೆಗಳು.

ಉತ್ತರೇಣಿಬೇರು ೪ ವರಹ ತೂಕವನ್ನು ನೀರಿನಲ್ಲಿ ಅರೆದು ೪ ವರಹ ತೂಕ ಜೇನುತುಪ್ಪ ಕೂಡಿಸಿ ಕೊಡಲು ಶ್ವಾನ ವಿಷ ಪರಿಹರವಹುದು.

## ಹುಚ್ಚುನಾಯಿ ಕಚ್ಚಿದರೆ.

೧. ಲೋಳಿಸರದ ಹಳಿಯನ್ನೂ ಸೈಂಧವಲವಣವನ್ನೂ ಕೂಡಿಸಿ ಬಿಸಿ ಮಾಡಿ ಕಟ್ಟಿಸಲು ಹುಚ್ಚುನಾಯಿ ವಿಷ ಪರಿಹರವಹುದು.

೨. ತುಪ್ಪದಿಂದ ಚಿಲಕೀರೆಯ ಬೇರನ್ನಾದರೂ, ತುಳಸಿಬೇರನ್ನಾದರೂ ಅರೆದು ಅಕ್ಕೀಗಚ್ಚಿನಲ್ಲಿ ಕದಡಿ ಕುಡಿಯ ಕೊಡಲು ದುಷ್ಟ ಕೀಟ ವಿಷ ಪರಿಹರವಹುದು.

## ಭೇಕ (ಕಪ್ಪೆ) ವಿಷಕ್ಕೆ.

ಬಾಗೇಸೊಪ್ಪನ್ನು ಆಡಿನಹಾಲಿನಲ್ಲಿ ಅರೆದು ಕುಡಿಯ ಕೊಡಲು ಕಪ್ಪೆ ವಿಷ ಶಮನವಹುದು. ಶುಂಠಿ, ಮೆಣಸು, ಹಿಪ್ಪಲಿಗಳನ್ನು ತುಪ್ಪದಲ್ಲಾದರೂ ಮೆಲ್ಲಿಸಲು ಕಪ್ಪೇ ಮತ್ಸ್ಯಗಳ ವಿಷ ಪರಿಹರವಹುದು. ಚಿಲಕೀರೆ ಬೇರನ್ನಾದರೂ ತುಪ್ಪದಲ್ಲಿ ಕೊಡೆ ಕಪ್ಪೆ, ಮತ್ಸ್ಯಗಳ ವಿಷ ಪರಿಹರ.

## ವ್ಯಾಘ್ರಾದಿ (ಹುಲಿ) ಮೊದಲಾದ ಮೃಗಗಳ ವಿಷಕ್ಕೆ.

ತೋಳ, ಚಿರತೆ, ನರಿ, ಕರಡಿ, ಹೆಬ್ಬುಲಿ, ಕುಡುಕೋಲಬರಗ, ಕುದುರೆ ಇವು ಕಚ್ಚಿದರೆ ಆ ಘಾಯದಿಂದ ರಕ್ತವಂ ತೆಗೆಯಿಸುವುದು. ಆ ಕ್ಷಣದಲ್ಲೀ ಕಬ್ಬಿಣದ ಸಲಾಕೆಯಿಂದ ರಕ್ಷೆ ಹಾಕಿಸುವುದು. ಆಮೇಲೆ ಬಿಳೀಕೊಮ್ಮೇ ಬೇರನ್ನು ನೀರಿನಿಂದ ಅರೆದು ಗಾಯಕ್ಕೆ ಲೇಪವಂ ಮಾಡಿಸುವುದು. ವಿಶೇಷ ಹೇಳಲೇಕೆ, ಪುತ್ರಜೀವಿ ತಿರಳನ್ನು ತಣ್ಣೀರಿನಿಂದ ಅರೆದು ೧ ವರಹತೂಕ ನಸ್ಯ, ಲೇಪನಂಗಳಂ ಮಾಡಿಸಲು ಸಕಲ ವಿಷಗಳೂ ಶಮನವಹವು.

ಬಂಜೆಹಾಗಲಗಡ್ಡೆಯನ್ನು ನೀರಿನಿಂದ ಅರೆದು ೪ ವರಹ ತೂಕ ಕುಡಿಯ ಕೊಡಲು ಸರ್ಪ, ಇಲಿ, ಬೆಕ್ಕು, ನಾಯಿ, ನರಿ ಇವು ಮೊದಲಾದ ವಿಷಗಳು ಪರಿಹರವಹವು.

## ಹಲ್ಲಿಯ ವಿಷಕ್ಕೆ.

ನವಿಲಗರಿ, ಬೆಳ್ಳಕ್ಕಿಯ ಯಿಲುವು, ಸಾಸುವೆ, ಶ್ರೀಗಂಧ, ತುಪ್ಪ ಇಷ್ಟನ್ನೂ ಕೂಡಿಸಿ ತಾನು ಮಲಗಿಕೊಂಬುವ ಮನೆಯಲ್ಲಿ ಧೂಪವನ್ನು ಹಾಕಿಸಲು ಅದರ ಆಘ್ರಾಣದಿಂದ ಅದು ದೇಹವೆಲ್ಲ ವ್ಯಾಪಿಸಿ ದೇಹದಲ್ಲಿರುವ ಸಕಲ ವಿಷವನ್ನೂ ಪರಿಹರಿಸುವುದು

## ವಿಷದ ಹುಳುಗಳು ಕಡಿದ ವಿಷದಿಂದ ದೇಹದಲ್ಲಿ ಹುಣ್ಣುಗಳಾದರೆ.

ನಾಗಮಲ್ಲಿಬೇರು ನಿಂಬೇಹಣ್ಣಿನ ರಸದಿಂದ ಅರದು ಗಜ್ಜೀಕಾಯಿಗಾತ್ರ ಹೊಟ್ಟೆಗೆ ಕುಡಿಸುವುದು. ನಾಗಮಲ್ಲಿಬೇರು, ತಗರಿನೆಬೀಜ ಇವು ಸಮಭಾಗ ಹಸುವಿನಮಜ್ಜಿಗೆಯಲ್ಲಿ ಅರೆದು ಒಂದು ದಿನ ಹಾಗೆಯೇ ಇಟ್ಟು ಎರಡನೆಯ ದಿನ ಮಜ್ಜಿಗೆಯಲ್ಲಿ ೩ ದಿನ ನೆನೆಹಾಕಿ ಶರೀರಕ್ಕೆ ಬೆಳಿಗ್ಗೆ ಲೇಪಿಸಿ ಸಾಯಂಕಾಲ ಬಿಸಿನೀರು ಸ್ನಾನಮಾಡುವುದು. ಈರೀತಿ ಶರೀರಕ್ಕೆ ೩ ದಿನ ಲೇಪಿಸಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವಿಷದ ಹುಳುಗಳು ಕಡಿದ ವ್ರಣಗಳು ಗುಣವಾಗುವುದು.

## ಕೃತ್ರಿಮ ವಿಷ ಚಿಕಿತ್ಸೆ.

ಅನೇಕವಿಧವಾದ ವಿಷ ಜಂತುಗಳ ಚೂರ್ಣಗಳು ಕೆಲವು ಉಪವಿಷಗಳೊಡನೆ ಕೂಡಿದರೂ, ದಂತ ನಖ ಕೇಶಗಳ ಚೂರ್ಣಗಳೊಡನೆ ಕೂಡಿದರೂ, ಲೋಹಂಗಳ ಚೂರ್ಣಗಳೊಡನೆ ಕೂಡಿದರೂ, ಅದು ಕೃತ್ರಿಮವಿಷವೆನಿಸಿಕೊಂಬುದು. ಮಹಾ ಉಗ್ರವಾಗಿ ಒಂದು ಪಕ್ಷಕಾಲವಾದರೂ ಒಂದು ಮಾಸಕಾಲವಾದರೂ ಶರೀರವನ್ನು ವೇಧಿಸಿ ಬಾಧೆಯನ್ನುಂಟುಮಾಡುವುದು.

ಆಲಸ್ಯ, ವೈಭಾರ, ಶ್ವಾಸಕಾಸಗಳು, ಮೂಗಿನಲ್ಲಿಯೂ, ಬಾಯಿಯಲ್ಲಿಯೂ, ಅಪಾನದ್ವಾರದಲ್ಲಿಯೂ, ರಕ್ತ ಸುರಿಯುವಣ, ಜ್ವರ, ಶೋಭೆ, ವೈಪರಿತ, ಬಳಲಿಕೆ, ದೇಹಕಾಂತಿ ಗುಂದುವಣ, ಕಪ್ಪೆಯ ವೈವರ್ಣ, ಕಣ್ಣು, ಉಗುರು, ಚರ್ಮಗಳು ಹಳದೀವರ್ಣವಾಗಿರುವಣ, ಎದೆ ಕೈಕಾಲು ಕಣ್ಣುಗಳುರಿಯುವಣ, ಮಂಡೆಕೂದಲು ಉದುರಿಹೋಗುವಣ, ಹುಡಿಗೆಮ್ಮುಲು, ಪ್ರಲಾಪ, ಅರೋಚಕ, ಭ್ರಮೆ, ಸರ್ವಾಂಗವೂ ಅರಿಸಿನ ವರ್ಣವಾಗಿರುವಣ ಹೀಗಿದ್ದರೆ ಕೃತ್ರಿಮ ವ್ಯಾಧಿಯೆಂದರಿವುದು.

## ಕೃತ್ರಿಮ ವಿಷ ಪರೀಕ್ಷೆ.

ಎಲೆಹುರೀಗಿಡದ ಬೇರಿನಮೇಲೆ ಕೃತ್ರಿಮ ಶಂಕೆಯುಳ್ಳವನು ರಾತ್ರಿ ಮೂತ್ರಿಸಲು ಬೆಳಗಾಗುವದರೊಳಗೆ ಆ ಗಿಡವು ಕಂದಿದರೆ ಮದ್ದುತಾಗಿದೆಯೆಂದು ತಿಳಿಯುವುದು. ಶೀಗೇಕಾಯಿಬೀಜ ರಾತ್ರಿ ಮಲಗುವಾಗ ೫ ಬೀಜ ದವಡೆಯಲ್ಲಿಟ್ಟುಕೊಂಡು ಮಲಗಿಕೊಂಡು ಬೆಳಿಗ್ಗೆ ಮೆತ್ತಗೆ ಇದ್ದರೆ ಮದ್ದೀಡು ತಗಲಿದೆ

ಎಂದು ತಿಳಿದುಕೊಳ್ಳುವುದು. ಗಟ್ಟಿಯಾಗಿದ್ದರೆ ಮದ್ದೀಡು ಇಲ್ಲವೆಂದು ತಿಳಿದುಕೊಳ್ಳುವುದು.

## ಮದ್ದೀಡು ಚಿಕಿತ್ಸೆಗಳು.

೧. ಪುತ್ರಜೀವಿಯ ತಿರಳನ್ನು ೧ ವರಹ ತೂಕ ಹಸುವಿನಹಾಲಿನಲ್ಲಿ ಅರೆದು ಕುಡಿಸಲು ನಾನಾವಿಧ ವಿಷಗಳು ಪರಿಹರವಹವು.

೨. ಯಾಲಕ್ಕಿ, ತಾಳೀಸಪತ್ರೆ, ತ್ರಿಕಟುಕ,ಜೀರಿಗೆ ಇವಿಷ್ಟನ್ನೂ ಸಮಾಂಶ ವಾಗಿ ಚೂರ್ಣಿಸಿ ಇಮ್ಮಡಿ ಶರ್ಕರೆವೆರಸಿ ಉದಯಕಾಲದಲ್ಲಿ ಸೇವಿಸಲು ಕೃತ್ರಿಮ ವಿಷ ಪರಿಹರವಹುದು.

೩. ನೀಲೀಬೇರನ್ನಾದರೂ, ಹಿರೀಮದ್ದಿನಬೇರನ್ನಾದರೂ ಕೊಮ್ಮೀ ಬೇರನ್ನಾದರೂ, ನಾಲ್ಕುವರಹ ತೂಕ ತಣ್ಣೀರಿನಲ್ಲಿ ಅರೆದು ಕುಡಿಯ ಕೊಡಲು ಕೃತ್ರಿಮ ವಿಷ ಶಮನವಹುದು.

೪. ಅಂಕೋಲೆಬೇರಿನ ತೊಕ್ಕನ್ನು ಚೂರ್ಣವಮಾಡಿ ೪ ವರಹಾ ತೂಕ ವನ್ನು ನಿಂಬೇಹಣ್ಣಿನ ರಸದಲ್ಲಿ ಕಲೆಸಿ ಕೊಡಿಸಲು ಏಳುದಿನಕ್ಕೆ ಕೃತ್ರಿಮ ವಿಷ ಪರಿಹರವಹುದು. ಮಜ್ಜಿಗೆ ಅನ್ನ ಪಥ್ಯ.

೫. ಚಿತ್ರಮೂಲದಬೇರಿನ ತೊಕ್ಕನ್ನು ಹಸುವಿನಹಾಲಿನಿಂದ ಅರೆದು ಪರಮಾನ್ನ ಮಾಡಿ ಉಣ್ಣಲು ಕೃತ್ರಿಮ ವಿಷ ನಿವೃತ್ತಿಯಹುದು.

೬. ಇಂಗಳದಬೇರು ೪ ವರಹ ತೂಕವನ್ನು ನಿಂಬೇಹಣ್ಣಿನ ರಸದಲ್ಲಿ ನುಣ್ಣಗೆ ಮರ್ದಿಸಿ ಅದನ್ನು ನಿಂಬೇಹಣ್ಣಿನ ರಸದಲ್ಲಿಯೇ ಕದಡಿ ಕುಡಿಯ ಕೊಡಲು ಸಮಸ್ತ ಕೃತ್ರಿಮವಿಷಗಳೂ ನಿಶ್ಚಯವಾಗಿ ಶಮನವಹವು.

೭. ಬಿಳೀಸಟ್ಟುಗದಬೇರು ೪ ವರಹಾ ತೂಕ ತಣ್ಣೀರಿನಿಂದಲಾದರೂ ನಿಂಬೇಹುಳಿಯಿಂದಲಾದರೂ ಅರೆದು ಅದರಲ್ಲಿಯೇ ಕದಡಿ ಕೊಡಲು ಸ್ಥಾವರ ಜಂಗಮ ಕೃತ್ರಿಮವೆಂಬ ಮೂರು ತೆರನಾದ ವಿಷಗಳೂ ಪರಿಹರವಹವು.

೮. ಕೋಲುತಗಸಿಬೇರು ತಣ್ಣೀರಿನಲ್ಲಿ ಗಂಧ ತೆಗೆದದ್ದು ೧ ತೊಲೆ ತೆಗೆದು ಕೊಳ್ಳುವುದು. ಈರೀತಿ ಬೆಳಿಗ್ಗೆಹೊತ್ತು ೫ ದಿನ ಕೊಡುವುದು. ಇದರಿಂದ ಪ್ರತಿದಿನ ೪ ಸಲ ಭೇದಿ ಆಗುವುದು. ಮದ್ದೀಡು ಭೇದಿಯಲ್ಲಿ ಕರಗಿಹೋಗು ವುದು.

೯. ಅರ್ಧಶೇರು ಯಾಲಕ್ಕಿ ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು ೩ ಪೊಟ್ಟಣ ಕಟ್ಟಿ ಬೆಳಗಿನಹೊತ್ತು ೧ ಪೊಟ್ಟಣ ಶ್ರೀ ತುಳಸೀರಸ ೧ ಪಾವು ಇವೆರಡು ಕಲಸಿ ಕುಡಿಯುವುದು. ಈರೀತಿ ಬೆಳಿಗ್ಗೆಹೊತ್ತು ೩ ದಿವಸ ಕೊಡಬೇಕು. ಇದರಿಂದ ಎಂಥಾ ಮದ್ದೀಡಾದರೂ ಗುಣವಾಗುವುದು.

೧೦. ಕಾಕಿಮಾರಿಗಡ್ಡೆ ಬಲತದ್ದು ಕುಟ್ಟಿ ಶೋಧಿಸಿದ ರಸ ||| ತೊಲೆ, ಹಸುವಿನಹಾಲು ||| ತೊಲೆ, ಹಸುವಿನತುಪ್ಪ ||| ತೊಲೆ ಇವು ಮೂರು ಕಲಸಿ

ತೆಗೆದುಕೊಳ್ಳುವುದು. ವಾಂತಿಯಾಗುತ್ತೆ. ಭೇದಿ ೨ ಸಲ ಆಗಿ ಮದ್ದೀಡು ಭೇದಿಯಲ್ಲಿ ಬಿದ್ದುಹೋಗುತ್ತೆ. ಮದ್ದೀಡು ತೆಗೆದುಕೊಳ್ಳುವ ಮೊದಲನೆಯ ದಿನ ರಾತ್ರಿ ಅನ್ನಕ್ಕೆ ಹಸುವಿನತುಪ್ಪ ಜಾಸ್ತಿಯಾಗಿ ಹಾಕಿಕೊಂಡು ಊಟಮಾಡ ಬೇಕು. ಇದಕ್ಕೆ ಪಥ್ಯ ಹುರಳೀಕಟ್ಟು ಸಾರು ಅನ್ನ.

೧೧. ಬೇವಿನಬೀಜದ ಪೊಪ್ಪು ಕಾಲುತೊಲೆ, ಸೈಂಧವಲವಣ ಕಾಲುತೊಲೆ, ಮೆಣಸು ಚೂರ್ಣಮಾಡಿದ್ದು ಕಾಲುತೊಲೆ ಇವುಗಳನ್ನು ಖಲ್ವದಲ್ಲಿ ಚನ್ನಾಗಿ ಅರೆದು ಹಸುವಿನತುಪ್ಪದಲ್ಲಿ ಕಲಸಿ ಕೊಡಲು ಮದ್ದೀಡು ಗುಣವಾಗುವುದು.

೧೨. ಚಿಟ್ಟರಳೆಣ್ಣೆ ೧ ಪಾವು, ಬಿಳೀಈರುಳ್ಳಿ ರಸ ೧ ಪಾವು, ಹಾವು ಮೆಕ್ಕೇಬೇರು ೧ ದುಡ್ಡು ತೂಕ ಇವುಗಳನ್ನು ಬಾಂಡ್ಲಿಯಲ್ಲಿ ಹಾಕಿ ಕಾಯಿಸಿ ಶೋಧಿಸಿಕೊಳ್ಳುವುದು. ಬೆಳಿಗ್ಗೆಹೊತ್ತು ಅರಪಾವು ಕುಡಿಯುವುದು. ಇದ ರಿಂದ ದೇಹದಲ್ಲಿರುವ ಕಶ್ಮಲ, ಮದ್ದೀಡು ಬಿದ್ದುಹೇಗುವುದು.

೧೩. ಬ್ರಹ್ಮದಂಡಿಯಲೆ ೧ ಗೂಡೆ ಒಂದು ಗುಡಾಣಕ್ಕೆ ಹಾಕಿ ಸ್ವಲ್ಪನೀರು ಹಾಕಿ ಕಾಯಿಸಿದರೆ ಕೆಳಗೆ ಗಂಜಿಯಾಗಿ ನಿಲ್ಲುವದು. ಮೇಗಳ ನೀರೆಲ್ಲ ಬಸಿದು ಬಿಟ್ಟು ಅಂಬಲಿಯಂತಾಗೆ ಇರುವುದು ೨ ತೊಲೆ, ಹಸುವಿನತುಪ್ಪ ೨ ತೊಲೆ ಇವೆರಡು ಕಲಸಿ ತೆಗೆದುಕೊಂಡರೆ ಸಮಸ್ತವಾದ ಮದ್ದೀಡು ಗುಣವಾಗುವುದು.

೧೪. ಒಣಗಿದ ಕಹಿಹೀರೇಕಾಯಿ ಒಳಗಿನ ಪುಡಿ ೧ ತೊಲೆ ಮೊಸರನ್ನು ಬಟ್ಟೆಯಲ್ಲಿ ನೇತಾಡಗಟ್ಟಿ ನೀರೆಲ್ಲಾ ಸೋರಿಹೋದದ್ದು ದಿಂಡು ಮಾತ್ರ ಅರಿ ಯುವದಕ್ಕೆ ತಕ್ಕಂತೆ ಖಲ್ವಕ್ಕೆ ಹಾಕಿ ಕಡಲೇಕಾಳು ಪ್ರಮಾಣ ಮಾತ್ರೆ ಮಾಡಿ ೧ ಮಾತ್ರೆ ಅಕ್ಕಿ ತೊಳದ ನೀರಿನಲ್ಲಾಗಲಿ ಅಥವಾ ಕಾಯಿಸಿದ ಹಸುವಿನ ಮಜ್ಜಿಗೆ ಯಲ್ಲಾಗಲಿ ಕೊಡಲು ವಾಂತಿಯಾಗಿ ಮದ್ದು ಬೀಳುವುದು. ಪಥ್ಯ ಹಸುವಿನ ಮಜ್ಜಿಗೆ ಅನ್ನ.

೧೫. ಕಕ್ಕೆ ಎಲೆ ಸಣ್ಣಗೆ ಕುಯಿದು ಹುರಿಗಡಲೆ ಸೇರಿಸಿ ತುಪ್ಪದಲ್ಲಿ ಹುರಿದು ಕೊಂಡು ರಾತ್ರಿ ಮಲಗಿಕೊಳ್ಳುವಾಗ ॥ ತೊಲೆ ಚೂರ್ಣ ಬಾಯಲ್ಲಿ ಹಾಕಿಕೊಂಡು ಬಿಸಿನೀರು ಕುಡಿಯುವುದು. ಪುನಃ ಬೆಳಿಗ್ಗೆ ಇದೇರೀತಿ ॥ ತೊಲೆ ಚೂರ್ಣ ಬಿಸಿನೀರಿನಲ್ಲಿ ತೆಗೆದುಕೊಂಡು ಅನಂತರ ಎಲೆ ಅಡಿಕೆ ಹಾಕಿಕೊಂಡರೆ ವಾಂತಿಯಾಗಿ ಮದ್ದೀಡು ಬೀಳುವುದು.

೧೬. ಕರೇಭತ್ತದ ಅಕ್ಕಿ ಹಸಿಟ್ಟು ೧ ಪಾವು, ತಪಸಿಸೊಪ್ಪು ೭ ಹಿಡಿ, ಬೆಲ್ಲ ೧ ಶೇರು ಇವುಗಳನ್ನು ವರಳಲ್ಲಿ ಹಾಕಿ ಕುಟ್ಟಿ ಒಂದು ಹೊಸ ಮಡಿಕೆಯಲ್ಲಿ ಇಟ್ಟುಕೊಳ್ಳುವುದು. ಹೊತ್ತಿಗೆ ನಿಂಬೀಹಣ್ಣಿನಗಾತ್ರ ಔಷಧ ಹಸುವಿನ ತುಪ್ಪದಲ್ಲಿ ಕಲಸಿ ಕೊಡುವುದು. ಹೀಗೆ ಪ್ರತಿದಿನ ತಿನ್ನುತ್ತಾಬಂದರೆ ಮದ್ದೀಡು ಬೀಳುವುದು.

೧೭. ನುಗ್ಗೇಸೊಪ್ಪಿನ ರಸ ಅರಪಾವು, ಹಸುವಿನಹಾಲು ಹಸೇರು ೧ ಪಾವು ಇವು ಎರಡು ಕಲಸಿ ಕುಡಿಯುವುದು. ವಾಂತಿಯಾಗಿ ಮದ್ದೀಡು ಬೀಳುವುದು. ಪಥ್ಯ ಮೊಸರು ಅನ್ನ, ಗಂಜಿ ಊಟಮಾಡುವುದು.

೧೮. ಕರೇತುಂಬೇ ಚಕ್ಕೆ ೨ ತೊಲೆ ವರಳಲ್ಲಿ ಹಾಕಿ ಅಕ್ಕಿತೊಳದ ನೀರಿನಿಂದ ಚನ್ನಾಗಿ ರುಬ್ಬಿ ಬಟ್ಟೆಯಲ್ಲಿ ಶೋಧಿಸಿಕೊಂಡು ಕುಡಿಯುವುದು. ವಾಂತಿಯಾಗಿ ಮದ್ದೀಡು ಬೀಳುವುದು.

೧೯. ಹೆಗ್ಗುಳ್ಳದಬೇರು ॥ ತೊಲೆ, ಗಿರಿಕರ್ಣಿಕೆ ಬೇರಿನ ಪಟ್ಟೆ ॥ ತೊಲೆ, ಅಂಕೋಲೆ ಬೇರಿನ ಪಟ್ಟೆ ॥ ತೊಲೆ ಇವುಗಳನ್ನು ವರಳಲ್ಲಿ ಹಾಕಿ ಚನ್ನಾಗಿ ಕುಟ್ಟಿ ೧ ಸೊಲಿಗೆ ಮೇಕೆಹಾಲು ಹಾಕಿ ಚನ್ನಾಗಿ ರುಬ್ಬಿ ಬಟ್ಟೆಯಲ್ಲಿ ಶೋಧಿಸಿ ಕುಡಿಯುವುದು. ಇದರಿಂದ ವಾಂತಿಯಾಗಿ ಮದ್ದೀಡು ಬಿಳುವುದು.

---

# ಐವತ್ತೇಳನೆಯ ಅಧ್ಯಾಯ.

## ಭೂತ ಚಿಕಿತ್ಸಾ ವಿಚಾರ.

### ಭೂತ ಚಿಕಿತ್ಸೆಗಳು.

ಪೂರ್ವದಲ್ಲಿ ಈಶ್ವರನು ಕಾಲನನ್ನು ಸಂಹಾರಮಾಡುವ ಸಮಯದಲ್ಲಿ ಕಾಲಾಂತಕನಾದ ಪರಮೇಶ್ವರನು ಕೋಪಾವಿಷ್ಟನಾಗಿ, ಮತ್ತ್ಯಾರಿಂದಲೂ ಜಯಿಸಲು ಶಕ್ಯವಿಲ್ಲದಿದ್ದ ಗ್ರಹಗಳನ್ನು ಸೃಷ್ಟಿಸಿದನು. ಆಗಲಾ ಗ್ರಹಗಳು ಪರಮೇಶ್ವರನ ಶರೀರದಿಂದ ಹುಟ್ಟಿದುವು, ಅವು ಕಾಮರೂಪಿಗಳಾಗಿಹವು ಅನೇಕ ಕೋಟಿ ವಿಭಾಗದಿಂದ ಈ ಚರಾಚರಗಳನ್ನು ನುಂಗಿಕೊಂಡು ಸಂಚರಿಸುತ್ತಿಹವು. ಪರಮೇಶ್ವರನ ವಾಮ ಶರೀರ ಭಾಗದಿಂದ ಪುರುಷ ಗ್ರಹಗಳು ಹುಟ್ಟಿದುವು. ಇದಲ್ಲದೆ ಮುಖ, ತೋಳುಗಳು, ತೊಡೆಗಳು, ಪಾದಗಳು ಇವುಗಳಿಂದಲೂ, ಅಸಂಖ್ಯಾಕವಾದ ಗ್ರಹಗಳು ಹುಟ್ಟಿದುವು. ಆ ಗ್ರಹಗಳು ವರ್ಣಗಳಿಂದಲೂ ಸೌಮ್ಯಾಸೌಮ್ಯ ಸ್ವರೂಪಗಳಿಂದಲೂ, ಶುಭಾಶುಭ ಲಕ್ಷಣಗಳಿಂದಲೂ ನಾನಾ ರೂಪಿಗಳಾದುವು. ಅವುಗಳ ಸ್ವರೂಪವನ್ನು ಆದ್ಯಂತವಾಗಿ ಹೇಳಲಿಕ್ಕೆ ಪರಮೇಶ್ವರನೊಬ್ಬನು ಹೊರತಾಗಿ ಮಿಕ್ಕವನಾವನೂ ಸಮರ್ಥನಲ್ಲವು. ಆದಕಾರಣ ಸಂಕ್ಷೇಪದಿಂದ ಹೇಳುವೆನು ಅದೆಂತೆನೆ:—ದೇವಗ್ರಹ, ರಾಕ್ಷಸಗ್ರಹ, ನಾಗಗ್ರಹ, ಭೂತಗ್ರಹ, ಅಸುರಗ್ರಹ, ಕೃಶಗ್ರಹ, ಗಂಧರ್ವಗ್ರಹ, ಪಿತೃಗ್ರಹ, ಹಿಂಸಗ್ರಹ, ಪಿಶಾಚಗ್ರಹ, ಬ್ರಹ್ಮರಾಕ್ಷಸಗ್ರಹ, ವೈನಾಯಕಗ್ರಹ, ಕುಮಾರ

ಗ್ರಹ, ನಿಸ್ತೇಜಗ್ರಹ, ಭಸ್ಮಗ್ರಹ, ಪ್ರಲಾಪಗ್ರಹ, ಕಶ್ಮಲಗ್ರಹ ಎಂದು ಗ್ರಹಗಳು ಹದಿನೆಂಟುತೆರನಾದ ಜಾತಿಯುಳ್ಳವು. ಮಹಾ ಗ್ರಹಗಳು ತಮಗೆ ಇಷ್ಟಬಂದಾಗ ಲೋಕಗಳಲ್ಲಿ ಕೋಟಿ ಭೇದಗಳುಳ್ಳವಾಗಿ ಕ್ರೀಡಿಸುತ ಲಿರುವುವು.

## ಗ್ರಹಗಳಿರುವ ಸ್ಥಾನ.

ಉಪವನಂಗಳು, ಉದ್ಯಾನವನಂಗಳು, ಪೊಕ್ಕರಣಿ ಭಾವಿಗಳು, ಪರ್ವತ ಕೋಡುಕಲ್ಲುಗಳು, ನದೀತೀರಂಗಳು, ಉಪ್ಪರಿಗೆಗಳು, ಅಟ್ಟಾಳಿಕೆಗಳು, ಹಾಳು ಮನೆಗಳು, ಗುಹೆಗಳು, ದನಹಟ್ಟಿಗಳು, ನದಿಗಳ ಸುಳುಹುಗಳು, ಯೆಲ್ಲಿಕಟ್ಟಿನ ಸ್ಥಳಗಳು, ಸ್ಮಶಾನಗಳು, ಪ್ರಸಿದ್ಧವಾದ ಸರಕ್ಷೇತ್ರಗಳು, ಭಾವಿಗಳು ಇವುಗಳಲ್ಲಿ ನಿತ್ಯವೂ ಪರಮೇಶ್ವರನ ಅಧೀನವಾದಂಥಾ ಭೂತ ಗಣಗಳು ವಾಸವಾಗಿರುವ ಭೂಮಿಯಲ್ಲಿ ಸಂಚಾರಮಾಡುವುವು.

## ಗ್ರಹಗಳು ಮನುಷ್ಯರನ್ನು ಹಿಡಿಯುವದಕ್ಕೆ ಕಾರಣ.

ಗ್ರಹಗಳು ಬಲಿ ಪೂಜೆಯ ಅಪೇಕ್ಷೆಯಿಂದಲಾದರೂ ಕೊಂದುಹಾಕಬೇಕೆಂಬ ಇಚ್ಛೆಯಿಂದಲಾದರೂ ಮತ್ಯಾವ ಮನ್ನಣೆಯಿಂದಲಾದರೂ ಮನುಷ್ಯರನ್ನು ಹಿಡಿಯುವುವು. ಅವುಗಳ ಗುಣಗಳನ್ನು ಮುಂದೆ ಹೇಳುವೆನು.

ಲೋಭವುಳ್ಳವನನ್ನೂ, ಕೋಪಿಷ್ಠನನ್ನೂ, ಭಯಪಟ್ಟಿರುವನನ್ನೂ, ಬಹಳ ಹರುಷವುಳ್ಳಾತನನ್ನೂ, ಅತ್ಯಂತ ಹುಸಿಗಾರರನ್ನೂ, ಪೂರ್ವಜನ್ಮದ ವೈರವುಳ್ಳವನನ್ನೂ, ದ್ರವ್ಯವನ್ನು ನಾಶನಪಡಿಸುವಂಥಾವನನ್ನೂ, ಸ್ತ್ರೀಯಗಲಿದವನನ್ನೂ, ಅನ್ಯರಿಂದಪಹರಿಸಲ್ಪಟ್ಟವನನ್ನೂ, ಆಚಾರಭ್ರಷ್ಟನನ್ನೂ, ನಿಂದೆಯವನನ್ನೂ, ಅಶುಚಿಯಾಗಿರುವನನ್ನೂ, ಆಸನ್ನಮೃತ್ಯುವಾಗಿರುವವನನ್ನೂ, ರೋಗಗ್ರಸ್ತನಾಗಿರುವನನ್ನೂ, ಬಹು ಅಟ್ಟಹಾಸವುಳ್ಳಾತನನ್ನೂ, ಮಹಾ ಚಂದವುಳ್ಳಾತನನ್ನೂ, ನಿಧಿಯಂಕಿತ್ತಾತನನ್ನೂ, ಕಂಗೆಟ್ಟಿದ್ದಾತನನ್ನೂ, ಕಟಕಮಕುಟಾದ್ಯಲಂಕಾರವುಳ್ಳವನನ್ನೂ, ರಾತ್ರಿಯಲ್ಲಿ ಒಬ್ಬನೇ ಸಂಚರಿಸುತಲಿರುವನನ್ನೂ, ಪುರುಷನನ್ನೂ ಪರಮೇಶ್ವರನ ಅಧೀನವಾದ ಗ್ರಹಂಗಳು ಹಿಡಿಯುವುವು.

ಸ್ತ್ರೀಯರುಗಳನ್ನೂ, ಅಭ್ಯಂಗಮಾಡಿಕೊಂಡವಳನ್ನೂ, ಹೆತ್ತಿರುವವಳನ್ನೂ, ನೂತನ ಸುರತಕ್ರೀಡೆಯುಳ್ಳವಳನ್ನೂ, ಮದ್ಯಮಾಂಸಗಳನ್ನು ಸೇವಿಸುವಂಥವಳನ್ನೂ, ನಿರ್ವಾಣವಾಗಿರುವ ಸ್ತ್ರೀಯನ್ನೂ, ಗರ್ಭಿಣೀ ಸ್ತ್ರೀಯನ್ನೂ,, ಮನ್ಮಥೋದ್ರೇಕವುಳ್ಳ ಸ್ತ್ರೀಯನ್ನೂ, ಅತಿ ಕ್ರೀಡಾಸಕ್ತೆಯಾದ ಸ್ತ್ರೀಯನ್ನೂ ಬೀದಿಬೀದಿ ತಿರುಗುತ್ತಿರುವವಳನ್ನೂ, ಚೌಬೀದಿ ಕೂಡಿದ ಸ್ಥಳದಲ್ಲಿಯಿರುವವಳನ್ನೂ, ಋತುಸಮಯದಲ್ಲಿರುವ ಸ್ತ್ರೀಯನ್ನೂ, ವ್ಯಭಿಚಾರಾರ್ಥವಾಗಿ ಸಂಚರಿಸುವವಳನ್ನೂ, ಯಾವಾಗಲೂ ಅಳುತಿರುವವಳನ್ನೂ, ಒಬ್ಬಳೇ ಒಂದು ಮನೆ

ಯಲ್ಲಿರುವವಳನ್ನೂ, ಮಹಾ ಅಂದವಾದ ಶರೀರವುಳ್ಳವಳನ್ನೂ, ವಿಷಮವಾಗಿರುವ ಗುಹ್ಯಕ ಗ್ರಹಂಗಳು ಸೋಂಕುವುವು.

## ಗ್ರಹಗಳ ಸ್ವರೂಪ.

ಸೌಮ್ಯವಾಗಿ, ಮುಖಕೆಂಪಾಗಿ, ಹರ್ಷವುಳ್ಳವನಾಗಿ, ಪ್ರೌಢವಾಕ್ಯುಳ್ಳವನಾಗಿ, ಶುಚಿಯಾಗಿ. ಸ್ವಲ್ಪ ಮಲಮೂತ್ರವುಳ್ಳವನಾಗಿ ಧಟ್ಟನಾಗಿದ್ದರೆ ದೇವ ಗ್ರಹವೆಂದರಿವುದು.

ತನ್ನ ಮೈಯ ಮಾಂಸವನ್ನು ತಾನೇ ಕಚ್ಚಿತಿಂಬುವಣ, ಮದ್ಯಪಾನದಲ್ಲಿಯೇ ಪ್ರಿಯವುಂಟಾಗಿರುವಣ, ಅಶುಚಿಯಾಗಿರುವಣ, ಯಾವಾಗಲೂ ಹಾಳುಮನೆಯಲ್ಲಿಯೇ ಇರುವಣ,ಧಟ್ಟವಾಗಿ ಮಹಾ ಬಲವಂತನಾಗಿರುವಣ ಹೀಗೆಯಿದ್ದರೆ ರಾಕ್ಷಸ ಗ್ರಹವೆಂದು ತಿಳಿವುದು.

ಧಟ್ಟನಾಗಿರುವಣ, ಶೀಲನಾಗಿರುವಣ, ತನ್ನ ಮನಸ್ಸು ಬಂದಹಾಗೆ ಸಂಚಾರಮಾಡಿಕೊಂಡಿರುವಣ, ಮುಖವು ಕಣ್ಣುಗಳು ಕೆಂಪಾಗಿ ಸ್ತ್ರೀ ಸಂಭೋಗದಲ್ಲಿಯೇ ಆಸಕ್ತಿ ಉಂಟಾಗಿರುವಣ, ವಾತಾಹಾರವಂ ಮಾಡಿಕೊಂಡಿರುವಣ, ಕ್ಷಮೆಯುಂಟಾಗಿರುವಣ ಈ ಪ್ರಕಾರದಲ್ಲಿದ್ದರೆ ಯಕ್ಷ ಗ್ರಹವೆನ್ನಿಸಿಕೊಂಬುದು.

ಹಾಲಿನಲ್ಲಿಯೂ ಪುಷ್ಪಮಾಲಿಗಳಲ್ಲಿಯೂ ಪ್ರೀತಿಯುಂಟಾಗಿರುವಣ, ನಾಲಿಗೆಯನ್ನೀಡುವಣ, ಓಡಿಹೋಗಿ ಮರವನ್ನೇರುವಣ, ಬೆಟ್ಟಕ್ಕೆ ಓಡಿಹೋಗುವಣ, ಕಣ್ಣುಗಳು ಕೆಂಪಾಗಿರುವಣ, ನದಿಯ ನೀರಿನಲ್ಲಿಯೇ ಅಪೇಕ್ಷೆಯುಂಟಾಗಿರುವಣ, ವಕ್ರನಾಗಿಯೇ ನಡೆಯುವಣ ಈ ರೀತಿಯಲ್ಲಿದ್ದರೆ ನಾಗ ಗ್ರಹವೆಂದರಿವುದು.

ಯಾವಾಗಲೂ ಪರಿಹಾಸವನ್ನೇ ಮಾಡುವಣ, ಯಾವಾಗಲೂ ತೂಗಡಿಸುವಣ, ಭೋಜನದಲ್ಲಿ ಪ್ರೀತಿಯುಂಟಾಗಿರುವಣ, ಓಡಿಹೋಗಿ ಮರವನ್ನೇರುವಣ, ಯಾವಾಗಲೂ ದುರ್ಭಾಷೆಯನ್ನೇ ನುಡಿಯುವಣ, ಮಹಾಕೋಪವುಂಟಾಗಿರುವಣ, ಈ ಪ್ರಕಾರದಲ್ಲಿದ್ದರೆ ಭೂತ ಗ್ರಹವೆಂದರಿವುದು.

ಕ್ರೂರದೃಷ್ಟಿಯುಂಟಾಗಿ ಭಯವಿಲ್ಲದೆ ಕೊಬ್ಬಿ ಆಡುವಣ, ಬಹಳ ಅನ್ನವನ್ನುಂಬುವಣ, ಐಶ್ವರ್ಯಪಡುವಣ, ಬ್ರಾಹ್ಮಣರುಗಳಲ್ಲಿಯೂ, ವೈದ್ಯರುಗಳಲ್ಲಿಯೂ, ದೇವತೆಗಳಲ್ಲಿಯೂ ದ್ವೇಷವುಂಟಾಗಿರುವಣ, ಗರ್ವದಿಂದ ಯೇನೇನೂ ಸಡ್ಡೆ ಮಾಡದೆಯಿರುವಣ ಹೀಗಿದ್ದರೆ ಅಸುರ ಗ್ರಹವೆಂದರಿವುದು.

ಏಕಾಂತಸ್ಥಳದಲ್ಲಿ ವಾಸವಾಗಿರುವಣ, ದೇಹ ಒಣಗಿಹೋಗುವಣ, ಭೋಜನದಲ್ಲಿ ಇಚ್ಛೆಯುಂಟಾಗಿರುವಣ, ಭಯಂಕರವಾದ ಧ್ವನಿಯುಂಟಾಗಿರುವಣ, ನಾನಾ ದಿಕ್ಕುಗಳಲ್ಲಿ ಸಂಚಾರವುಂಟಾಗಿರುವಣ, ಉದ್ಭ್ರಮಿಯಾಗಿ ಒಬ್ಬರ ಸಂಗಡಲೂ ಮಾತನಾಡದೆಯಿರುವಣ ಹೀಗಿದ್ದರೆ ಕೃಶ ಗ್ರಹವೆಂದರಿವುದು.

ಗಂಧಮಾಲೆಗಳಲ್ಲಿ ಪ್ರೀತಿಯುಂಟಾಗಿರುವಣ, ಯಾವಾಗಲೂ ಸಂತುಷ್ಟನಾಗಿರುವಣ, ಹಾಲಿನಲ್ಲಿ ಪ್ರೀತಿಯುಂಟಾಗಿರುವಣ, ನೃತ್ಯಗೀತಗಳಲ್ಲಿ ಪ್ರಿಯವುಂಟಾಗಿರುವಣ, ಸ್ತ್ರೀಸಂಗದಲ್ಲಿ ಪ್ರೀತಿಯುಂಟಾಗಿರುವಣ ಹೀಗಿದ್ದರೆ ಗಂಧರ್ವ ಗ್ರಹವೆನ್ನಿಸಿಕೊಂಬುದು.

ಎಳ್ಳು, ಉದ್ದು, ಬೆಲ್ಲ ಇವುಗಳಲ್ಲಿ ಪ್ರೀತಿಯುಂಟಾಗಿರುವಣ, ಅಪರಕಾರ್ಯಗಳಲ್ಲಿ ಆಸಕ್ತಿ ಉಂಟಾಗಿರುವಣ, ಶಾಂತನಾಗಿರುವಣ, ಪೂರ್ವಾಣ್ಹದಲ್ಲಿ ಸುಮ್ಮನೆಯಿದ್ದು ಅಪರಾಣ್ಹದಲ್ಲಿಯೇ ಸಂಚಾರಮಾಡುವ ಈ ಲಕ್ಷಣ ಉಂಟಾಗಿದ್ದರೆ ಪಿತೃ ಗ್ರಹವೆಂದರಿವುದು.

ಪ್ರಲಾಪವುಂಟಾಗಿರುವಣ, ನಿಷ್ಠುರ ಭಾಷೆಯನ್ನಾಡುವಣ, ಭಯಂಕರವಾಗಿರುವಣ, ಶೂನ್ಯವಾದ ರತಿಯುಳ್ಳವನಾಗಿರುವಣ, ಮಹಾ ಶುಚಿಯಾಗಿರುವಣ ಹೀಗಿದ್ದರೆ ಬ್ರಹ್ಮರಾಕ್ಷಸ ಗ್ರಹವೆಂದು ತಿಳಿವುದು.

ಯಾವಾಗಲೂ ಚೀತ್ಕಾರವಂ ಮಾಡುತ, ಗಜಕರಣವಮಾಡಿಕೊಂಡು, ಕಾಲುಗಳಲ್ಲಿ ಧೂಳುಂಟಾಗಿ, ಮಹಾಬಲವುಂಟಾಗಿ, ಹಲ್ಲನೆರನೆರನೆ ಕಚ್ಚುತ ಶೂರನಾಗಿದ್ದರೆ ವೈನಾಯಕ ಗ್ರಹವೆಂದು ತಿಳಿವುದು

ತೊಡೆಯಲ್ಲಿ ಮಲಗಿಕೊಳ್ಳುವದರಲ್ಲಿ ಪ್ರೀತಿಯುಂಟಾಗಿರುವಣ, ಸ್ನೇಹಗೂಡಿದ ಮಾತುಂಟಾಗಿರುವಣ, ಮಹೋತ್ಸಾಹವುಳ್ಳವನಾಗಿರುವಣ, ಮೃದು ಪ್ರಕೃತಿಯುಂಟಾಗಿರುವಣ ಹೀಗಿದ್ದರೆ ಕುಮಾರ ಗ್ರಹವೆಂದರಿವುದು.

ದೇಹದಲ್ಲಿ ಕಾಂತಿ ಕುಂದುವುದು, ನುಡಿವುಂಟಾಗಿರುವುದು, ಯವೆಹೊಳಚದೆ ದೃಷ್ಟಿಸಿನೋಡುವುದು, ವೈದ್ಯರುಗಳ ಮಾತನ್ನು ನಿರಾಕರಿಸುವುದು ಹೀಗಿದ್ದರೆ ನಿಸ್ತೇಜ ಗ್ರಹವೆಂದರಿವುದು.

ದೇಹದಲ್ಲಿ ಎಲ್ಲಿನೋಡಿದರೂ ಅಸ್ಥಿಚರ್ಮ ಮಾತ್ರವೇ ಉಂಟಾಗಿರುವಣ, ಬಹಳ ಅನ್ನವನ್ನುಂಬುವಣ, ನೈತಣ್ಣಗಿರುವಣ, ಅಡ್ಡಲಾಗಿ ನೋಟವುಂಟಾಗಿರುವಣ, ನಗೆಗೂಡಿದ ನುಡಿಯುಂಟಾಗಿರುವುದು ಶುಚಿಯಾಗಿರುವುದು ಹೀಗಿದ್ದರೆ ಭಸ್ಮ ಗ್ರಹವೆಂದರಿವುದು.

ಕುಣಿದಾಡುವಣ, ಅಡಿಗಡಿಗೆ ನಗುವಣ, ಬಹುವಾಗಿ ಹರಟುವಣ, ಬಹು ಅನ್ನವನ್ನುಂಬುವಣ, ನೈತಾರಿಕ್ಕೊಂಬುವಣ, ಆಕಳಿಕೆಯುಂಟಾಗಿರುವಣ ಹೀಗಿದ್ದರೆ ಪ್ರಲಾಪ ಗ್ರಹವೆಂದರಿವುದು

ಅನುರಾಗವುಳ್ಳವನಾಗಿರುವಣ, ಪರದ್ರವ್ಯಾಪಹಾರವಂ ಮಾಡುವಣ, ಕೋಪಿಷ್ಠನಾಗಿರುವಣ, ಸ್ತ್ರೀದ್ರೋಹವುಳ್ಳವನಾಗಿರುವಣ, ಕಲಹಪ್ರಿಯನಾಗಿರುವಣ, ಹೇರಳವಾಗಿ ಅನ್ನ ತಿಂಬುವಣ, ಅತ್ಯಂತ ಲೋಭವುಂಟಾಗಿರುವಣ ಹೀಗಿದ್ದರೆ ಕಶ್ಮಲ ಗ್ರಹವೆಂದು ತಿಳಿವುದು.

ಹೀಗೆ ಹದಿನೆಂಟು ತರದ ಗ್ರಹಗಳ ಲಕ್ಷಣಗಳು ಹೇಳಲ್ಪಟ್ಟವು. ಆ ಲಕ್ಷಣ ಗಳಿಂದ ಗ್ರಹಗಳ ಜಾತಿಭೇದವನ್ನು ತಿಳಿದು ಆಮೇಲೆ ಚಿಕಿತ್ಸೆಯಂಮಾಡುವುದು.

ಮೇಲೆ ಹೇಳಿದ ಹದಿನೆಂಟು ತರದ ಗ್ರಹಗಳು ಬೇರೆಬೇರೆ ಕೋಟಿ ಪರಿವಾರ ಗಳೊಡನೆ ಕೂಡಿಹವು. ಮಾಂತ್ರಿಕನಾಗಿರುವವನು ಸಮಸ್ತ ಗ್ರಹಗಳಲ್ಲಿಯೂ ಪ್ರತಿಕೂಲವನ್ನು ಆಚರಿಸಲಾಗದು. ಪ್ರತಿಕೂಲವಂ ಮಾಡಿದ ವೈದ್ಯನು, ಗ್ರಹಗ್ರಸ್ತನಾದ ಪುರುಷನನ್ನು ಕೈಯಿಂದ ಕೊಂದವನಾಗುತ್ತಾನೆ ಅದಕ್ಕೆ ಕಾರಣವೇನಂದರೆ, ಆ ಗ್ರಹಗಳು ಕೋಪಗೊಂಡರೆ ಮಹಾಪರಾಕ್ರಮವುಳ್ಳವು ಗಳಾದುದರಿಂದ ವಿಪರೀತವನ್ನೇ ಮಾಡುವುವು, ಮಿಕ್ಕಾದ ಯಂತ್ರ, ತಂತ್ರ, ಅಂಜನ, ನಸ್ಯಾದಿಗಳನ್ನು ಶಾಸ್ತ್ರದಲ್ಲಿ ಹೇಳಿರುವಪ್ರಕಾರ ನೋಡಿಕೊಂಬುದು. ಇಲ್ಲಿ ಗ್ರಂಥ ವಿಸ್ತಾರದ ಭಯದಿಂದ ಹೇಳಲಿಲ್ಲವು.

ಅಂಜನ ನಸ್ಯ:—ಸ್ಮಶಾನದಲ್ಲಿರುವ ವಜ್ರನೀಲಿಯನ್ನು ಕೃಷ್ಣಪಕ್ಷದ ಚತುರ್ದಶೀ ದಿನ ರಾತ್ರಿಯಲ್ಲಿ ತಂದು ಸಾಸುವೆ ಎಣ್ಣೆಯಲ್ಲಿ ತೇದು ಕಣ್ಣಿಗೆ ಹಚ್ಚಲು ಸಕಲ ಭೂತಗ್ರಹ ಸಕಲ ಗ್ರಹಂಗಳೂ ಬಿಟ್ಟುಹೋಗುವುವು. ಕಹಿ ಸೋರೇಬೀಜದ ತೈಲದಿಂದ ಹಿಪ್ಪೇಬೇರನ್ನು ತೇದು ನಸ್ಯವಮಾಡಲು ಭೂತಾ ಪಸ್ಮಾರ ಗ್ರಹಗಳು ಶಮನವಹವು.

ಕಪ್ಪಾದ ಕತ್ತೆಯ ಮೂತ್ರವನ್ನು ಕಾಯಿಸಿದರೆ ಘಟ್ಟಿಯಾಗುವುದು, ಅದರಲ್ಲಿ ಮೂಗಿಲಿಯ ಚೂರ್ಣವಹಾಕಿ ತಿಲಕವಿಟ್ಟುಕೊಂಡು ಹೋಗಲು ಆತನ ಮುಖವಂಕಂಡರೆ ಬ್ರಹ್ಮರಾಕ್ಷಸ ವೊದಲಾದ ಗ್ರಹಗಳು ತೊಲಗಿಹೋಗುವುವು.

ನಿರ್ಗುಂಡೀ ಸೊಪ್ಪಿನ ರಸದಲ್ಲಿ ಹಿಂಗುವಿನ ನಸ್ಯವಮಾಡಿಸಲು ಅಪಸ್ಮಾರ ಶಮನವಹುದು.

ಸಾಸುವೆ, ಬೇವಿನಸೊಪ್ಪು, ಭುಜಪತ್ರೆ, ಬಜೆ, ತುಪ್ಪ, ಕುದುರೆಕೊಳಗು ಇವಿಷ್ಟನ್ನೂ ಸಮಾಂಶವಾಗಿ ಚೂರ್ಣಿಸಿ ಹೊಗೆಯಂಹಾಕಲು ಸರ್ವಗ್ರಹಗಳೂ ನಿವಾರಣವಾಗುವವು.

# ಐವತ್ತೆಂಟನೆಯ ಅಧ್ಯಾಯ.

## ವಿವಿಧ ಔಷಧಗಳು.

೧. ಬಿಲ್ವಾದಿ ಲೇಹ್ಯ:—ಬಿಲ್ವಪತ್ರೆಬೇರು ೨೦ ತೊಲೆ ತಂದು ಕುಟ್ಟಿ ನೀರು ಹಾಕಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳು ವುದು. ಇದನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ಹಳೇಬೆಲ್ಲ ೨ ಶೇರು ಹಾಕಿ

ತಂತುಪಾಕ ಬಂದಕೂಡಲೇ ಶುಂಠಿ ೨ ತೊಲೆ, ಹಿಪ್ಪಲಿ ೪ ತೊಲೆ, ಮೆಣಸು ೨ ತೊಲೆ, ಚವ್ಯ ೧ ತೊಲೆ, ತಾಳೀಸಪತ್ರೆ ೪ ತೊಲೆ, ನಾಗಕೇಸರಿ ೧ ತೊಲೆ, ಮೋಡಿ ೧ ತೊಲೆ, ಚಿತ್ರಮೂಲ ೧ ತೊಲೆ, ದಾಲ್‌ಚಿನ್ನಿ ೨ ತೊಲೆ, ಲವಂಗ ಪತ್ರೆ ೧ ತೊಲೆ, ಬಿಳೀಜೀರಿಗೆ ೧ ತೊಲೆ, ಯಾಲಕ್ಕಿ ॥ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಜೇನುತುಪ್ಪ ॥ ಶೇರು ಹಾಕಿ ಪಕ್ವವಾಗಿ ಲೇಹ್ಯವನ್ನು ಮಾಡಿಟ್ಟುಕೊಳ್ಳುವುದು. ಹೊತ್ತಿಗೆ ॥ ತೊಲೆ ಪ್ರಮಾಣ ಕೊಡಬೇಕು. ಹೀಗೆ ಬೆಳಿಗ್ಗೆ ಸಾಯಂಕಾಲ ೨೦-೪೦ ದಿನ ಕೊಡುವುದು. ಇಚ್ಛಾಪಥ್ಯ ಚಲದಿ ಪದಾರ್ಥ ವರ್ಜ್ಯ. ಇದರಿಂದ ಕೆಮ್ಮು, ಉಬ್ಬಸ, ಶ್ವಾಸಕಾಸ, ಹೊಟ್ಟೆವುಬ್ಬರ, ಪಾಂಡು, ಕಾಮಾಲೆ ಗುಣವಾಗುವುದು.

೨. ಖಂಡಾದ್ರ್ರಕ ಲೇಹ್ಯ:—ಹಸೀಶುಂಠಿ ತಂದು ಮೇಲಿನ ಸಿಪ್ಪೆ ಕೆರದು ಹಾಕಿ ಕುಟ್ಟಿ ರಸ ಶೋಧಿಸಿಕೊಂಡದ್ದು ೧ ಶೇರು, ಸುರಸುರಿಕೆಸೊಪ್ಪಿನ ರಸ ॥ ಶೇರು ಒಂದು ಬಾಂಡ್ಲಿಯಲ್ಲಿ ಹಾಕಿ ರಾಯಿಪುಡಿಸಕ್ಕರೆ ೫ ಶೇರು ಹಾಕಿ ಒಲೆಯಮೇಲಿಟ್ಟು ತಂತುಪಾಕ ಬಂದಕೂಡಲೇ ಒಣಗಿದ ಬಿಲ್ಪತ್ರೆಬೇರು ೧೦ ತೊಲೆ, ಚಿಟ್ಟಾಮುಟ್ಟಿ ೨ ತೊಲೆ, ಶ್ರೀಗಂಧದಚಕ್ಕೆ ೧ ತೊಲೆ, ಹಿಪ್ಪಲಿ ೪ ತೊಲೆ, ಯಾಲಕ್ಕಿ ॥ ತೊಲೆ, ಲವಂಗ ೨ ತೊಲೆ, ದಾಲ್‌ಚಿನ್ನಿ ೨ ತೊಲೆ, ನಾಗಕೇಸರಿ ೧ ತೊಲೆ, ಲವಂಗಪತ್ರೆ ೧ ತೊಲೆ, ತುಂಗೇಗಡ್ಡೆ ೨ ತೊಲೆ, ಮೋಡಿ ೧ ತೊಲೆ, ಬಿಳೀಜೀರಿಗೆ ೧ ತೊಲೆ, ಓಮ ೧ ತೊಲೆ, ಜಾಪತ್ರೆ ೧ ತೊಲೆ, ಜಾಕಾಯಿ ೧ ತೊಲೆ ಮೆಣಸು ೨ ತೊಲೆ, ಶುಂಠಿ ೧ ತೊಲೆ, ಸಣ್ಣರಾಸ್ಮೆ ೧ ತೊಲೆ, ಚವ್ಯ ೧ ತೊಲೆ, ಅತಿಮಧುರ ೧ ತೊಲೆ, ವಾಯುವಿಳಂಗ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೧ ತೊಲೆ, ನೆಲ್ಲೀಕಾಯಿ ೧ ತೊಲೆ, ಕೊತ್ತುಂಬರಿಬೀಜ ೧ ತೊಲೆ, ತಾಳೀಸಪತ್ರೆ ೪ ತೊಲೆ, ಅತಿಬಜೆ ॥ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಜೇನುತುಪ್ಪ ॥ ಶೇರು ಹಾಕಿ ಪಕ್ವವಾಗಿ ಲೇಹ್ಯವನ್ನು ಮಾಡಿ ಇಟ್ಟುಕೊಳ್ಳುವುದು. ಹೊತ್ತಿಗೆ ॥ ತೊಲೆ ಪ್ರಮಾಣ ಬೆಳಿಗ್ಗೆ ಸಾಯಂಕಾಲ ೨೦-೪೦ ದಿನ ಕೊಡುವುದು. ಇಚ್ಛಾಪಥ್ಯ. ಚಲದಿಪದಾರ್ಥ ವರ್ಜ್ಯ. ಇದರಿಂದ ಕಾಸಶ್ವಾಸ, ಅನ್ನದ್ವೇಷ, ಪೈತ್ಯ, ಮೂತ್ರಕೃಚ್ಛ್ರ, ಕೈಕಾಲು ಉರಿಯುವುದು ಗುಣವಾಗುವುದು.

೩. ಮಹಾಬಿಲ್ವಾದಿಲೇಹ್ಯ:—ಬಿಲ್ಪತ್ರೆಬೇರು ೫ ಶೇರು ತಂದು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡದ್ದು ೧ ಶೇರು, ಹಸೀಶುಂಠಿ ರಸ ೧ ಪಾವು, ನೆಲ್ಲೀಕಾಯಿ ರಸ ೧ ಪಾವು, ಕಬ್ಬಿನ ರಸ ೧ ಪಾವು, ದಾಳಿಂಬರೇಹಣ್ಣಿನ ರಸ ೧ ಪಾವು, ನಿಂಬೇಹಣ್ಣಿನ ರಸ ೧ ಪಾವು, ಹಳೇಬೆಲ್ಲ ೪ ಶೇರು ಇವುಗಳನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ತಂತುಪಾಕ ಬಂದಕೂಡಲೇ

ಈ ಚೂರ್ಣ ಹಾಕುವುದು :—ಮೆಣಸು ೨ ತೊಲೆ, ಹಿಪ್ಪಲಿ ೨ ತೊಲೆ, ಚವ್ಯ || ತೊಲೆ, ಶುಂಠಿ ೨ ತೊಲೆ, ಯಾಲಕ್ಕಿ || ತೊಲೆ, ಲವಂಗ || ತೊಲೆ, ಕರ್ಕಾಟಕಶೃಂಗಿ ೧ ತೊಲೆ, ತಾಳೀಸಪತ್ರೆ ೪ ತೊಲೆ, ಸಣ್ಣರಾಸ್ಮೆ ೨ ತೊಲೆ, ಅತಿಮಧುರ ೨ ತೊಲೆ, ಚಂಗಲಕೋಷ್ಟ || ತೊಲೆ, ದುಂಪರಾಸ್ಮೆ ೨ ತೊಲೆ, ಅಕ್ಕಲಕರೆ ೨ ತೊಲೆ, ಜಾಕಾಯಿ || ತೊಲೆ, ಜಾಪತ್ರೆ || ತೊಲೆ, ಮೋಡಿ || ತೊಲೆ, ಚಿತ್ರಮೂಲ || ತೊಲೆ, ನಾಗಕೇಸರಿ ೧ ತೊಲೆ, ಲವಂಗಪತ್ರೆ || ತೊಲೆ, ಬಿಳೀಜೀರಿಗೆ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಜೇನುತುಪ್ಪ ೧ ಶೇರು ಹಾಕಿ ಪಕ್ವವಾಗಿ ಲೇಹ್ಯಮಾಡಿ ಇಟ್ಟುಕೊಳ್ಳುವುದು. ಹೊತ್ತಿಗೆ ಎಳಚೇಬೀಜದ ಪ್ರಮಾಣ ಬೆಳಿಗ್ಗೆ ಸಾಯಂಕಾಲ ೨೦-೪೦ ದಿನ ಕೊಡಬೇಕು. ಇಚ್ಛಾಪಥ್ಯ. ಚಲದಿ ಪದಾರ್ಥ ವರ್ಜ್ಯ. ಇದರಿಂದ ಕ್ಷಯ, ಪಾಂಡು, ಕಾಮಾಲೆ, ಕೆಮ್ಮು, ಪೈತ್ಯ, ಜ್ವರ, ರಕ್ತಕಾಸ ಗುಣವಾಗುವುದು.

೪. ಜವಾರಿಷೆ ಮುನಕ್ಕು :—ಅತಿಮಧುರ ೧ ಪಾವು ತಂದು ಕುಟ್ಟಿ ನೀರು ಹಾಕಿ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿ ದ್ರಾಕ್ಷಿ ೧ ಶೇರು ಹಾಕಿ ಕಷಾಯದೊಂದಿಗೆ ರುಬ್ಬಿ ಬಟ್ಟೆಯಲ್ಲಿ ಶೋಧಿಸಿಕೊಂಡು ಒಂದು ಬಾಂಡ್ಲಿಯಲ್ಲಿ ಹಾಕಿ ಸಕ್ಕರೆ ೨|| ಶೇರು ಹಾಕಿ ಕಾಯಿಸಿ ತಂತುಪಾಕ ಬಂದಕೂಡಲೆ ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೪ ತೊಲೆ, ಕಚೋರ ೧ ತೊಲೆ,ತಾಳೀಸಪತ್ರೆ ೨ ತೊಲೆ, ಅಸಾರ್ಜು ೧ ತೊಲೆ, ಸೋಪುಬೀಜ ೧ ತೊಲೆ, ಲವಂಗ ೧ ತೊಲೆ, ಜಾಕಾಯಿ || ತೊಲೆ, ಕುಂಕುಮಕೇಸರಿ || ತೊಲೆ, ದೇಶಾವರದಶುಂಠಿ ೪ ತೊಲೆ, ಯಾಲಕ್ಕಿ ೧ ತೊಲೆ, ಬಿಳೀಜೀರಿಗೆ ೧ ತೊಲೆ, ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಶೋಧಿಸಿ ಅರಿಯುವ ದಿನಸುಗಳನ್ನು ಅರೆದು ಎಲ್ಲವನ್ನೂ ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಜೇನುತುಪ್ಪ ೧ ಶೇರು ಹಾಕಿ ಪಕ್ವವಾಗಿ ರಸಾಯನ ಮಾಡಿಕೊಳ್ಳುವುದು. ಹೊತ್ತಿಗೆ ಕಾಲುತೊಲೆ, || ತೊಲೆಮೇರಿಗೆ ಬೆಳಿಗ್ಗೆ ಸಾಯಂಕಾಲ ೭-೧೪ ದಿನ ಕೊಡಬೇಕು. ಇಚ್ಛಾಪಥ್ಯ. ಚಲದಿ ಪದಾರ್ಥ ವರ್ಜ್ಯ. ಇದರಿಂದ ಉಷ್ಣಸಂಬಂಧವಾದ ಹೊಟ್ಟೆಕೋಸಿನ ರೋಗಗಳು, ಜ್ವರ, ಅಜೀರ್ಣ ಗುಣವಾಗಿ ಭೇದಿ ಸಲೀಸಾಗಿ ಆಗುವುದು.

೫. ಸೊಗದೇಬೇರು ಲೇಹ್ಯ :—ಬಿಳೀಸೊಗದೇಬೇರು, ಕರೇಸೊಗದೇಬೇರು, ಲಾವಂಚ, ಬಿಳೀಜೀರಿಗೆ, ಓಮ, ಕರೇ ಅಳಲೇಕಾಯಿ, ಲೋಧ್ರದಚಕ್ಕೆ, ಆಲದಚಕ್ಕೆ, ಅಶ್ವತ್ಥದಚಕ್ಕೆ, ಕಚೋರ, ತಾವರೆಕುಸುಮ, ಮುಡಿವಾಳ, ವಿಷಬೊದ್ದಿ, ಅಮೃತಬಳ್ಳಿ, ಲಾವಂಚ, ಶ್ರೀಗಂಧದಚಕ್ಕೆ, ರಕ್ತಚಂದನ, ಖುರಾಸಾನಿಓಮ, ಕಟುಕರೋಹಿಣಿ, ಲವಂಗಪತ್ರೆ, ದೊಡ್ಡ ಯಾಲಕ್ಕಿ, ಚಿಕ್ಕ

ಯಾಲಕ್ಕಿ, ಚಂಗಲಕೋಷ್ಠ, ಸುನಾಮುಖಿ, ಅಳಲೇಕಾಯಿಸಿಪ್ಪೆ, ನೆಲ್ಲೀಕಾಯಿ ಇವು ದಿನಸಿಗೆ ೨ ತೊಲೆ ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ಸಕ್ಕರೆ ೪|| ಶೇರು ಹಾಕಿ ನೀರುಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಜೇನುತುಪ್ಪ ೧ ಶೇರು, ಹಸುವಿನತುಪ್ಪ ||-ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯಮಾಡಿಟ್ಟು ಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಪ್ರಕಾರ ಬೆಳಿಗ್ಗೆ ಸಾಯಂಕಾಲ ೨೦ ದಿವಸ ಕೊಡಬೇಕು. ಇಚ್ಛಾಪಥ್ಯ. ಚಲದಿಪದಾರ್ಥ ವರ್ಜ್ಯ. ಇದರಿಂದ ಮೇಹ, ವಾತರಕ್ತ, ರಕ್ತಸಂಬಂಧವಾದ ರೋಗಗಳು, ಚರ್ಮಸಂಬಂಧವಾದ ರೋಗಗಳು ಗುಣವಾಗುವುವು.

೬. ಮಂಜಿಷ್ಠಾದಿ ಲೇಹ್ಯ :—ಮಂಜಿಷ್ಠ ೪ ತೊಲೆ, ಅತಿಮಧುರ, ಬಜೆ, ಮರದರಿಸಿನ, ಅಮೃತಬಳ್ಳಿ, ಬೇವಿನಚಕ್ಕೆ, ಕಟುಕರೋಹಿಣಿ, ತಾವರೇಗಡ್ಡೆ, ರಾಮಗುಳ್ಳ, ಹೆಗ್ಗುಳ್ಳ, ರೇಣುಕೆ, ಕಹಿಪಡವಲ, ಮೋಡಿ, ಚಂಗಲಕೋಷ್ಠ, ಅರಸಿನ, ನೆಲಕುಂಬಳಗಡ್ಡೆ, ಕಹಿತೊಂಡೆ, ಶುಂಠಿ, ಮೆಣಸು, ಹಿಪ್ಪಲಿ, ಲೋಧ್ರದಚಕ್ಕೆ, ವಾಯುವಿಳಂಗ ಇವು ದಿನಸಿಗೆ ೧ ತೊಲೆ ತಂದು ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ಸಕ್ಕರೆ ೨ ಶೇರು ಹಸುವಿನಹಾಲು ೧ ಶೇರು ಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಜೇನುತುಪ್ಪ || ಶೇರು ಹಸುವಿನತುಪ್ಪ ೧ ಪಾವು ಹಾಕಿ ಕಲಸಿ ಪಕ್ವವಾಗಿ ಲೇಹ್ಯಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಮೇರಿಗೆ ಬೆಳಿಗ್ಗೆ ಸಾಯಂಕಾಲ ೨೦ ದಿವಸ ಕೊಡಬೇಕು. ಇಚ್ಛಾಪಥ್ಯ. ಚಲದಿ ಪದಾರ್ಥ ವರ್ಜ್ಯ. ಇದರಿಂದ ಪಿತ್ಥ, ವಾತರಕ್ತ, ವಿಸರ್ಪ ಇವು ಗುಣವಾಗಿ ರಕ್ತಶುದ್ಧಿಯನ್ನುಂಟುಮಾಡುವುದು.

೭. ತಾಳೀಸಾದಿ ಲೇಹ್ಯ :—ತಾಳೀಸಪತ್ರೆ ೪ ತೊಲೆ, ಚವ್ಯ ೧ ತೊಲೆ, ಮೋಡಿ ೧ ತೊಲೆ, ಚಿತ್ರಮೂಲ ೧ ತೊಲೆ, ಶುಂಠಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಬಿಳೀ ಜೀರಿಗೆ ೧ ತೊಲೆ, ವಾಯುವಿಳಂಗ || ತೊಲೆ, ಚಂಗಲಕೋಷ್ಠ || ತೊಲೆ, ಸಣ್ಣದ್ರಾಕ್ಷೆ ೧ ತೊಲೆ, ನಾಗಕೇಸರಿ || ತೊಲೆ, ಲವಂಗ ೧ ತೊಲೆ, ಶ್ರೀಗಂಧದಚಕ್ಕೆ ೧ ತೊಲೆ, ದಾಲ್‌ಚಿನ್ನಿ ೧ ತೊಲೆ, ತುಂಗೇ ಗಡ್ಡೆ ೧ ತೊಲೆ, ಯಾಲಕ್ಕಿ || ತೊಲೆ, ಕೊತ್ತುಂಬರಿಬೀಜ ೧ ತೊಲೆ, ಲಾವಂಚ || ತೊಲೆ ಇವು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಗೋರೋಜನ ೨ ಆಣೆ ತೂಕ ಖಲ್ವದಲ್ಲಿ ಹಾಕಿ ಅರೆದು ಇಟ್ಟುಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ೨ ಶೇರು ರಾಯಿಪುಡಿ ಸಕ್ಕರೆ, ಹಸುವಿನಹಾಲು ೧ ಶೇರು ಹಾಕಿ ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣವನ್ನು ಹಾಕಿ ಜೇನುತುಪ್ಪ || ಶೇರು, ತುಪ್ಪ ೧ ಪಾವು ಅರದಿರುವ ಔಷಧವನ್ನು ಸೇರಿಸಿ ಪಕ್ವವಾಗಿ

ಲೇಹ್ಯ ಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ, || ತೊಲೆ ಮೇರೆಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೨೦ ದಿವಸ ಕೊಡಬೇಕು. ಇಚ್ಛಾಪಥ್ಯ. ಚಲದಿ ಪದಾರ್ಥ ವರ್ಜ್ಯ. ಇದರಿಂದ ಪೈತ್ಯ, ಹೊಟ್ಟೆವುರಿ, ಉಷ್ಣವಾಯು, ನಚ್ಚುಜ್ವರ, ಸನ್ನಿ ಗುಣವಾಗುವುದು.

೮. ಅಂಗಾರದಬೀಜ, ಒಳ್ಳೆ ತುಳಸಿಬೀಜ, ತಂಗಡಿಬೀಜ, ಸೌತೇಬೀಜದ ಪೊಪ್ಪು, ಜಟಾಮಾಂಸಿ, ಚಂಗಲಕೋಷ್ಟ, ಅತಿಮಧುರ, ಅತಿಬಜೆ, ಶುಂಠಿ, ತಾಳೀಸಪತ್ರೆ, ಕಚೋರ, ಮರದರಿಸಿನ, ಬಿಳೀ ಜೀರಿಗೆ, ಲವಂಗ, ಜಾಕಾಯಿ, ಜಾಪತ್ರೆ, ಮರಾಟಿಮೊಗ್ಗು, ಕೊಳವಳಿಕೆಬೀಜ, ನೆಲಕುಂಬಳಗಡ್ಡೆ, ಲಾವಂಚ, ದಾಲ್‌ಚಿನ್ನಿ, ಶ್ರೀಗಂಧದ ಚಕ್ಕೆ, ನುಗ್ಗೇಹೂವು, ನಾಗಕೇಸರಿ, ಯಾಲಕ್ಕಿ, ನುಗ್ಗೇಬೀಜ, ಮಜ್ಜಿಗೆಗಡ್ಡೆ, ನೆಲತಾಟಿಗಡ್ಡೆ, ಬಾಲಮೆಣಸು, ಸೋಪುಬೀಜ ಇವು ದಿನಸಿಗೆ ೧ ತೊಲೆ, ರಕ್ತಪುರುಷ ೬ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ಬಿಳೀ ಕಲ್ಲುಸಕ್ಕರೆ ೫ ಶೇರು ಹಾಕಿ ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣವನ್ನು ಹಾಕಿ ಪಕ್ವವಾಗಿ ಲೇಹ್ಯ ಮಾಡಿಟ್ಟುಕೊಳ್ಳುವುದು. ಹೊತ್ತಿಗೆ ೧ ಗಜ್ಜುಗದ ಪ್ರಮಾಣದಂತೆ ಬೆಳಿಗ್ಗೆ ಸಾಯಂಕಾಲ ೭-೯-೧೧ ದಿನ ಕೊಡಬೇಕು. ಇಚ್ಛಾಪಥ್ಯ. ಚಲದಿ ಪದಾರ್ಥ ವರ್ಜ್ಯ. ಬಹಳ ಹಳೇರೋಗವಾದರೆ ೨೧ ದಿನ ಕೊಡಬೇಕು. ಇದರಿಂದ ಮೇಹ, ಮೂತ್ರ ಉರಿಯುವುದು, ಮೂತ್ರ ಕಟ್ಟುವುದು ಗುಣವಾಗುವುದು.

೯. ಚಂದ್ರಕಾಂತಿ ರಸಾಯನ :—ನೆಲಕುಂಬಳಗಡ್ಡೆ ೨ ತೊಲೆ, ಆನೇನೆಗ್ಗಿಲು ೨ ತೊಲೆ, ಸಣ್ಣನೆಗ್ಗಿಲು ೨ ತೊಲೆ, ಬಿಳೀ ಜೀರಿಗೆ ೧ ತೊಲೆ, ಮಜ್ಜಿಗೆಗಡ್ಡೆ ೨ ತೊಲೆ, ಗರುಗದಬೇರು ೨ ತೊಲೆ, ಶುದ್ಧಿಮಾಡಿದ ಹಿರೇಮದ್ದಿನಗಡ್ಡೆ ೨ ತೊಲೆ, ಕೊಳವಳಿಕೆಬೀಜ ೨ ತೊಲೆ, ಅತಿಮಧುರ ೨ ತೊಲೆ, ತಾವರೆಗಡ್ಡೆ ೨ ತೊಲೆ, ಲವಂಗಚಕ್ಕೆ ೨ ತೊಲೆ, ಯಾಲಕ್ಕಿ ೧ ತೊಲೆ, ಲವಂಗ ೧ ತೊಲೆ, ಚಂಗಲಕೋಷ್ಟ ೧ ತೊಲೆ, ಖರ್ಜೂರ ೨ ತೊಲೆ, ದ್ರಾಕ್ಷಿ ೨ ತೊಲೆ, ತವಕ್ಷೀರ ೧ ತೊಲೆ, ತಕ್ಕೋಲ ೧ ತೊಲೆ, ಬೂರಗದ ಬಂಕೆ ೨ ತೊಲೆ, ಕರ್ಪೂರಶಿಲಾಜಿತು ಭಸ್ಮ ೨ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೪ ತೊಲೆ, ಶುಂಠಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಮರದರಿಸಿನ ೨ ತೊಲೆ, ತುಪ್ಪದದೇವದಾರು ೨ ತೊಲೆ, ಲವಂಗಪತ್ರೆ ೨ ತೊಲೆ, ನಾಗಕೇಸರಿ ೨ ತೊಲೆ, ಜಾಕಾಯಿ ೧ ತೊಲೆ, ಬಿಳೀ ಹಿಂಡಿಬೇರು ೨ ತೊಲೆ, ಚಂದ್ರಕಾಂತಿಸೊಪ್ಪು ೨ ತೊಲೆ, ಹೊನಗೊನೆಬೇರು ೨ ತೊಲೆ, ಭೂಸಕ್ಕರೆಗಡ್ಡೆ ೨ ತೊಲೆ, ಇಪ್ಪೆಹೂವು ೨ ತೊಲೆ, ಸೊಗದೇಬೇರು ೨ ತೊಲೆ, ನೈದಿಲೆಗಡ್ಡೆ ೨ ತೊಲೆ, ತುಂಗೇಗಡ್ಡೆ ೨ ತೊಲೆ, ಅಮೃತಬಳ್ಳಿ

ಸತ್ತು ೪ ತೊಲೆ, ಇಸಬ್‌ಗೋಲ್‌ಬೀಜ ೧ ತೊಲೆ, ಶುದ್ಧಿಮಾಡಿದ ಪರಂಗಿಚಕ್ಕೆ ೨ ತೊಲೆ, ತಂಗಡಿಬೀಜ ೨ ತೊಲೆ, ತಾವರೆಕುಸುಮ ೨ ತೊಲೆ, ಕೊತ್ತುಂಬರಿ ಬೀಜ ೨ ತೊಲೆ, ಲಾವಂಚ ೨ ತೊಲೆ, ಅರಿಸಿನ ೧ ತೊಲೆ, ಕರೇ ಜಾಲಿಬಂಕೆ ೨ ತೊಲೆ, ಮುಳ್ಳು ಶಾವಂತಿಗೆಹೂವು ೨ ತೊಲೆ, ಕುಂಕುಮಕೇಸರಿ ೧ ತೊಲೆ, ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಶೋಧಿಸಿಕೊಂಡು ಅರೆಯುವ ದಿನಸುಗಳನ್ನು ಅರೆದು ಇಟ್ಟುಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ೬ ಶೇರು ಸಕ್ಕರೆ ಹಾಕಿ ನೀರುಹಾಕಿ ಕಲಸಿ ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಮತ್ತು ಅರೆದಿರುವ ಔಷಧವನ್ನು ಜೇನುತುಪ್ಪ ೧॥ ಶೇರು ಹಾಕಿ ಕಲಸಿ ಪಕ್ವವಾಗಿ ರಸಾಯನ ಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ, ಅರ್ಧತೊಲೆಯಂತೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೨೦-೪೦ ದಿನ ಕೊಡಬೇಕು. ಇಚ್ಛಾಪಥ್ಯ. ಚಲದಿ ಪದಾರ್ಥ ವರ್ಜ್ಯ. ಇದರಿಂದ ಮೇಹ ರೋಗದಿಂದ ಶರೀರ ಕ್ಷೀಣಿಸಿರುವುದು, ಮೂತ್ರಕೃಚ್ಛ್ರ, ಉರಿಮೂತ್ರ ಗುಣ ವಾಗುವುದು.

೧೦. ಪುದೀನಾ ಲೇಹ್ಯ:—ಪುದೀನ ರಸತೆಗೆದು ಶೋಧಿಸಿಕೊಂಡದ್ದು ೧ ಶೇರು, ಹಳೇ ಬೆಲ್ಲ ೨ ಶೇರು ಇವೆರಡು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯ ಮೇಲಿಟ್ಟು ಉರಿಹಾಕಿ ತಂತುಪಾಕ ಬಂದಕೂಡಲೇ ಶೊಂಟಿ ೧ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೧ ತೊಲೆ, ಬಿಳೀ ಜೀರಿಗೆ ೨ ತೊಲೆ, ಯಾಲಕ್ಕಿ ೧ ತೊಲೆ, ತುಂಗೇಗಡ್ಡೆ ೧ ತೊಲೆ, ನೋಪುಬೀಜ ೧ ತೊಲೆ, ಲಾವಂಚ ೧ ತೊಲೆ, ಕೊತ್ತುಂಬರಿಬೀಜ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಜೇನುತುಪ್ಪ ॥ ಶೇರು ಹಾಕಿ ಪಕ್ವವಾಗಿ ಲೇಹ್ಯ ಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಮೇರೆಗೆ ಬೆಳಿಗ್ಗೆ ಸಾಯಂ ಕಾಲ ೭-೧೪ ದಿನ ಕೊಡಬೇಕು. ಇಚ್ಛಾಪಥ್ಯ. ಚಲದಿ ಪದಾರ್ಥ ವರ್ಜ್ಯ. ಇದರಿಂದ ವಾತಪಿತ್ಥ, ವಾಕರಿಕೆ, ತಲೆತಿರುಗು, ಅರುಚಿ ಗುಣವಾಗುವುದು.

೧೧. ತ್ರಿಸುಗಂಧಾದಿ ಲೇಹ್ಯ:—ಯಾಲಕ್ಕಿ, ನಾಗಕೇಸರಿ, ದಾಲ್‌ಚಿನ್ನಿ, ಲವಂಗಪತ್ರೆ, ತಾಳೀಸಪತ್ರೆ, ಶೊಂಠಿ, ಹಿಪ್ಪಲಿ, ಮೆಣಸು, ಅಳಲೇಕಾಯಿ ಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಚಿತ್ತದಬೇರು, ಲಾವಂಚ, ಮುಡಿ ವಾಳ, ಗ್ರಂಥಿಕತಗರ, ನಸುಗುನ್ನಿಬೀಜ, ತಾವರೆಕುಸುಮ, ಮಜ್ಜಿಗೆಗಡ್ಡೆ, ನೆಲಾವರಿಕೆ, ರೇಣುಕೆ, ಕಚೋರ, ದಾಳಿಂಬೆಸಿಪ್ಪೆ, ಮಾವಿನಬೀಜದ ಪೊಪ್ಪು ಮಯೂರಶಿಖಿ, ನೆಗ್ಗಲುಕಾಯಿ, ಕೊನ್ನಾರಿಗಡ್ಡೆ, ಖರ್ಜೂರ, ದ್ರಾಕ್ಷಿ, ಜಾಕಾಯಿ, ಜಾಪತ್ರೆ, ಲವಂಗ ಇವು ದಿನಸಿಗೆ ೧ ತೊಲೆ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇದಕ್ಕೆರಡು ತೂಕ ರಾಯಪುಡಿ ಸಕ್ಕರೆ ಒಂದು ಬಾಂಡಿಯಲ್ಲಿಹಾಕಿ ನೀರುಹಾಕಿ ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ

ಚೂರ್ಣ, ಕುಂಕುಮಕೇಸರಿ ೧ ತೊಲೆ, ಪಂಗಭಸ್ಮ ೧ ತೊಲೆ, ಜೇನುತುಪ್ಪ ೨ ಸೊಲಿಗೆ, ಹಸುವಿನತುಪ್ಪ ೧ ಸೊಲಿಗೆ ಹಾಕಿ ಕಲಸಿ ಪಕ್ವವಾಗಿ ಲೇಹ್ಯ ಮಾಡಿಟ್ಟುಕೊಳ್ಳುವುದು ಹೊತ್ತಿಗೆ ಯಳಚೀಬೀಜದ ಪ್ರಮಾಣ ಬೆಳಿಗ್ಗೆ ಸಾಯಂಕಾಲ ೭ ದಿನ ಕೊಡಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿ ಸಾರು ಅನ್ನ. ಇದರಿಂದ ಅತಿಸಾರ, ಅಗ್ನಿಮಾಂದ್ಯ, ವಾತ ಪಿತ್ಥ ಗುಣವಾಗುವುದು.

೧೨. ಬಾದಾಮಿ ಲೇಹ್ಯ:—ಬಾದಾಮಿಬೀಜ ೪ ಶೇರು ಖರ್ಜೂರ ॥ ಶೇರು, ಚಾರುಪೊಪ್ಪು ॥ ಶೇರು, ಗೋಧೀ ೧ ಪಾವು ಒರಳಿನಲ್ಲಿ ಹಾಕಿಕೊಂಡು ಗಂಧದ ಹಾಗೆ ತಿರುವಿ ನೀರಿನಲ್ಲಿ ಕಲಿಸಿದರೆ ಪಾತ್ರೆ ಕೆಳಗೆ ಸುಣ್ಣ ಕಟ್ಟು ಕೂತುಕೊಳ್ಳುತ್ತೆ ಆ ನೀರೆಲ್ಲಾ ಆಚೆಗೆ ಚೆಲ್ಲಿ ಅದೆಲ್ಲಾ ಗೀಚಿಕೊಂಡು ಒಣಗಿಸಿಟ್ಟುಕೊಳ್ಳುವುದು. ಇದೇ ಗೋಧಿಹಾಲಿನ ಸಕ್ಕರೆಯೆಂದು ಹೇಳುತ್ತಾರೆ. ಸಕ್ಕರೆ ೧ ಪಾವು, ಸಾಲಾಮಿಸ್ರಿ ೧ ತೊಲೆ, ಮಜ್ಜಿಗೆಗಡ್ಡೆ ೧ ಪಾವು, ಬೀಜಬಂದು ॥ ಶೇರು, ಸೋಪುಬೀಜ ೩ ತೊಲೆ, ಸೌತೇಬೀಜದ ಪೊಪ್ಪು ೧ ತೊಲೆ, ಖರ್ಜೂರ ೩ ತೊಲೆ, ಶೀದಾಳಂಬರೆಬೀಜ ೧ ತೊಲೆ, ಬಾದಾಮಿಗೋಂದು ೧ ತೊಲೆ, ಕಾರೋಬಾ ॥ ತೊಲೆ ಪನ್ನೀರಿನಲ್ಲಿ ಅರೆದುಕೊಳ್ಳುವುದು, ಮುತ್ತಿನ ಭಸ್ಮ ಕಾಲು ತೊಲೆ, ಗುಲ್ಕಂ ॥ ಶೇರು, ಪನ್ನೀರು ೧ ಶೇರು, ಕುಂಕುಮಕೇಸರಿ ೧ ತೊಲೆ, ಪಚ್ಚಕರ್ಪೂರ ॥ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಲವಂಗ ೧ ತೊಲೆ, ಶುಂಠಿ ೧ ತೊಲೆ, ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಶೋಧಿಸಿಕೊಳ್ಳುವುದು, ಅರೆಯುವ ದಿನಸುಗಳನ್ನು ಅರೆದು ಇಟ್ಟುಕೊಳ್ಳುವುದು. ಬಾದಾಮಿಬೀಜ ಬಿಸಿನೀರಿನಲ್ಲಿ ನೆನೆಹಾಕಿ ಹೊಟ್ಟುತೆಗೆದು ಒರಳಲ್ಲಿ ಹಾಕಿ ನೀರು ಹಾಕಿ ರುಬ್ಬಿ ಹಾಲು ಶೋಧಿಸಿಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ಮೇಲ್ಕಂಡ ಪನ್ನೀರು ೧ ಶೇರು ಹಾಕಿ ಬಾದಾಮಿಹಾಲು ಹಾಕಿ ಹಸುವಿನಹಾಲು ॥ ಶೇರು ಹಾಕಿ ಒಟ್ಟು ಚೂರ್ಣಕ್ಕೆ ಎರಡರಷ್ಟು ರಾಯಪುಡಿ ಸಕ್ಕರೆ ಹಾಕಿ ಕಾಯಿಸಿ ತಂತುಪಾಕ ಬಂದಕೂಡಲೇ ಚೂರ್ಣ, ಗುಲ್ಕಂ ಮೊದಲಾದ ಎಲ್ಲಾ ದಿನಸುಗಳನ್ನು ಶೇರಿಸಿ ೨ ಶೇರು ಜೇನುತುಪ್ಪ, ೧ ಶೇರು ಹಸುವಿನತುಪ್ಪ ಹಾಕಿ ಕಲಸಿ ಪಕ್ವವಾಗಿ ಲೇಹ್ಯಮಾಡಿ ಇಟ್ಟುಕೊಳ್ಳುವುದು. ಈ ಲೇಹ್ಯವನ್ನು ಒಂದು ಜಾಡಿಯಲ್ಲಿ ಹಾಕಿ ಧಾನ್ಯಪುಟದಲ್ಲಿ ೫ ದಿವಸವಿಟ್ಟು ಹೊತ್ತಿಗೆ ॥ ತೊಲೆ ಮೇರೆಗೆ ೨೦ ದಿವಸ ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ. ಹುಳಿ ವರ್ಜಿತ. ಇದರಿಂದ ವ್ರಣಜಾಡ್ಯ, ೨೦ ವಿಧ ಮೇಹ, ಅಗ್ನಿಮಾಂದ್ಯ ಇವು ಗುಣವಾಗಿ ಅಗ್ನಿವೃದ್ಧಿ, ವೀರ್ಯವೃದ್ಧಿ, ದೇಹಕಾಂತಿ ಉಂಟಾಗಿ ತೇಜಃಪುಂಜರಾಗುತ್ತಾರೆ.

೧೩. ಜಂಬೀರಾದಿ ರಸಾಯನ:—ಲವಂಗ, ಜಾಪತ್ರೆ, ಬಿಳೇಜೀರಿಗೆ, ಜಾಕಾಯಿ, ತುಂಗೇಗಡ್ಡೆ, ಒಡುಗದಬಂಕೆ, ಜಾಲೀಬಂಕೆ, ಮುಲ್ಲಂಗಿಬೀಜ,

ಬಂದರಿಬೀಜ, ಸಮುದ್ರಸೋಗೇಬೀಜ, ತಂಗಡಿಬೀಜ, ನಾಗಕೇಸರಿ, ಜಟಾ ಮಾಂಸಿ, ಲಾವಂಚ, ನೆಲತಾಟಿಗಡ್ಡೆ, ರಕ್ತಚಂದನ ಇವು ದಿನಸಿಗೆ ೨ ತೊಲೆ, ಕುಂಕುಮಕೇಸರಿ ೧ ತೊಲೆ, ಇದಕ್ಕೆ ಸಮ ಅಮೃತಬಳ್ಳಿ ಸತ್ತು, ತವಕ್ಷೀರ ೩ ತೊಲೆ, ಯಾಲಕ್ಕಿ ೩ ತೊಲೆ ಇಷ್ಟಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ೨೫ ನಿಂಬೇಹಣ್ಣಿನರಸ, ಸಕ್ಕರೆ ೫ ಶೇರು, ನೀರುಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಹಾಕಿ ಜೇನುತುಪ್ಪ ೨ ಸೊಲಿಗೆ, ಹಸುವಿನತುಪ್ಪ ೧ ಸೊಲಿಗೆ ಹಾಕಿ ಕಲಸಿ ಪಕ್ವವಾಗಿ ರಸಾಯನಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ, ಅರ್ಧ ತೊಲೆಯಂತೆ ಬೆಳಿಗ್ಗೆ ಸಾಯಂಕಾಲ ೭-೧೪ ದಿವಸ ಕೊಡಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಿತ್ತಾತಿಸಾರ, ಅರುಚಿ, ತಲೆತಿರುಗು, ಪಿತ್ಥಸಂಕಟ, ಬಾಯಾರಿಕೆ ಗುಣವಾಗುವುದು.

೧೪. ಮಹಾ ಸೌಭಾಗ್ಯ ಶುಂಠಿ ಲೇಹ್ಯ:— ಹಸೀಶುಂಠಿ ೧|| ಶೇರು ತಂದು ಸುಣ್ಣದ ನೀರಿನಲ್ಲಿ ೧ ಘಂಟೆ ನೆನೆಹಾಕಿ ತೆಗೆದು ತಣ್ಣೀರಿನಲ್ಲಿ ತೊಳೆದು ಮೇಲಿನ ಸಿಪ್ಪೆಯನ್ನು ಕೆರೆದು ಸಣ್ಣಗೆ ಕತ್ತರಿಸಿ ಕರೇ ಲಕ್ಕಲಿಸೊಪ್ಪಿನ ರಸದಲ್ಲಿ ೧ ದಿನ ಭಾವನೆಮಾಡಿ ಒಣಗಿಸುವುದು, ಗರುಗದಸೊಪ್ಪಿನ ರಸದಲ್ಲಿ ೧ ದಿನ ಭಾವನೆಮಾಡಿ ಒಣಗಿಸುವುದು, ತುಳಸೀಸೊಪ್ಪಿನ ರಸದಲ್ಲಿ ೧ ದಿನ ಭಾವನೆ ಮಾಡಿ ಒಣಗಿಸುವುದು, ಸುರಸುರಿಕೆಸೊಪ್ಪಿನ ರಸದಲ್ಲಿ ೧ ದಿನ ಭಾವನೆಮಾಡಿ ಒಣಗಿಸುವುದು, ಕರೇ ಉಪ್ಪಿಚಕ್ಕೆ ರಸದಲ್ಲಿ ೧ ದಿನ ಭಾವನೆಮಾಡಿ ಒಣಗಿಸುವುದು, ಬಿಳೇಕೊಮ್ಮೆಸೊಪ್ಪಿನ ರಸದಲ್ಲಿ ೧ ದಿನ ಭಾವನೆಮಾಡಿ ಒಣಗಿಸುವುದು. ಮೆಣಸು ೧ ತೊಲೆ, ಮೋಡಿ ೧ ತೊಲೆ, ಖುರಾಸಾನಿ ಓಮ ೧ ತೊಲೆ, ನಾಗಕೇಸರಿ ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ಲವಂಗಪತ್ರೆ ೧ ತೊಲೆ, ದಾಲ್‌ಚಿನ್ನಿ ೧ ತೊಲೆ, ಗಂಟುಭಾರಂಗಿ ೧ ತೊಲೆ, ಸಣ್ಣರಾಸ್ಮೆ ೧ ತೊಲೆ, ಬಿಳೇಜೀರಿಗೆ ೧ ತೊಲೆ, ಲವಂಗ ೧ ತೊಲೆ, ಜಾಪತ್ರೆ ೧ ತೊಲೆ, ಯಾಲಕ್ಕಿ ೧ ತೊಲೆ, ಜಾಕಾಯಿ ೧ ತೊಲೆ, ಹಿಪ್ಪಲಿ ೧ ತೊಲೆ, ಚವ್ಯ ೧ ತೊಲೆ, ಕರ್ಕಾಟಕಶೃಂಗಿ ೧ ತೊಲೆ, ಗಜಹಿಪ್ಪಲಿ ೧ ತೊಲೆ, ಕೊತ್ತುಂಬರಿಬೀಜ ೧ ತೊಲೆ, ಚಿತ್ರಮೂಲ ೧ ತೊಲೆ, ಅತಿಬಜೆ ೧ ತೊಲೆ, ಅಡಿಕೆಚಿಟ್ಟಿದಬೇರು ೧ ತೊಲೆ, ವಾಯುವಿಳಂಗ ೧ ತೊಲೆ, ಸೈಂಧವಲವಣ ೧ ತೊಲೆ, ತಾಳೀಸಪತ್ರೆ ೧ ತೊಲೆ, ಅಗಿಲುಶುಂಠಿ ೧ ತೊಲೆ, ಓಮ ೧ ತೊಲೆ, ಅತಿಮಧುರ ೧ ತೊಲೆ, ಚಂಗಲ ಕೋಷ್ಠ ೧ ತೊಲೆ, ಸೋಪುಬೀಜ ೧ ತೊಲೆ ಇವುಗಳನ್ನೆಲ್ಲಾ ಕುಟ್ಟಿ ಚೂರ್ಣ ಮಾಡಿ ಶೋಧಿಸಿಕೊಳ್ಳುವುದು. ಕುಂಕುಮಕೇಸರಿ ಕಾಲುತೊಲೆ, ಗೋರೋಜನ ೨ ಆಣೆ ತೂಕ, ಕಸ್ತೂರಿ ೧ ಆಣೆ ತೂಕ ಇವು ಮೂರೂ ಖಲ್ವದಲ್ಲಿ ಅರೆದು ಇಟ್ಟುಕೊಳ್ಳುವುದು. ಒಂದು ಬಾಂಡ್ಲಿಯಲ್ಲಿ ೫ ಶೇರು ತಾಟಿಬೆಲ್ಲ ಹಾಕಿ

ನೀರು ಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣವನ್ನು ಹಾಕಿ ಅನಂತರ ಕುಂಕುಮಕೇಸರಿ, ಗೋರೋಜನ, ಕಸ್ತೂರಿ ಹಾಕಿ ಕಲಸಿ ಪಕ್ವವಾಗಿ ಲೇಹ್ಯಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆಯಷ್ಟು ಬೆಳಿಗ್ಗೆ ಸಾಯಂಕಾಲ ೨೦-೩೦ ದಿನಗಳು ಕೊಡುವುದು. ಇಚ್ಛಾಪಥ್ಯ ಚಲದಿ ಪದಾರ್ಥ ವರ್ಜ್ಯ. ಇದರಿಂದ ಸೂತಿಕಾವಾಯು, ಸೂತಿಕಾ ಪಾಂಡು, ಕ್ಷಯ, ಸನ್ನಿ, ಶೋಭೆ, ಪಿತ್ಥ, ಅಡಿಹೊಟ್ಟೆ, ಎದೆ, ನೆತ್ತಿ ಇವುಗಳ ಶೂಲೆ, ನಿದ್ರಾರಾಹಿತ್ಯ, ಬೆವರು, ಅರೋಚಕ, ನೋವು, ಮೈಭಾರ, ನಡುಕ, ಬಾಯಾರಿಕೆ, ಜ್ವರ, ನಿಶ್ಶಕ್ತಿ ಇವುಗಳನ್ನು ಗುಣಮಾಡುವುದು

೧೫ ನುಸ್ಖಾ ಹಕೀಂ ಅಬ್ದುಲ್ ಮಲ್ಲಿಕ್ ಸಾಹೇಬ್‌ರ:—ಬರ್‌ಗೆಸೆನಾ ೨೦ ತೊಲೆ, ಜೀರಾಸುಫೇದ್ ೧ ತೊಲೆ, ಜೀರಾಸಿಯಾ ೧ ತೊಲೆ, ಲವಂಗ್ ೧ ತೊಲೆ, ವಿಲಾಯಿತಿಕಲ್‌ನಾರ್ ೧ ತೊಲೆ, ಅವುಲ್‌ತಾಸಕಾಚಕಲಾ ೩ ತೊಲೆ, ದಾಲ್‌ಚಿನ್ನಿ ೧ ತೊಲೆ, ಇಲಾಚೀಕೇದಾನೇ ೧॥ ತೊಲೆ, ಸೋಫ್ ೧ ತೊಲೆ, ಗುಲಾಬ್‌ಕೆಕಲ್ಲಿ ೫ ತೊಲೆ, ಗಾವುಜಬಾ‌ನ್ ೫ ತೊಲೆ, ಬಾಲ್‌ಹಲ್ಡಾ ೪ ತೊಲೆ, ಆವಲ್‌ಘಟ್ಟಿ ೨ ತೊಲೆ, ಮಿಟ್ಟಿಲಕಡಿ ೧ ತೊಲೆ, ಅಕ್ಕಲ್‌ಖೋರಾ ೧ ತೊಲೆ, ಕುಚ್‌ಲೇಕಾಬೀಂಜ್ ೧ ತೊಲೆ, ಚಿಲ್‌ಕೆಬೀಂಜ್ ೧ ತೊಲೆ, ತಡವಡ್‌ಕೆಫೂಲ್ ೪ ತೊಲೆ, ಈಶ್ವರಿಕೆಜಡ್ ೨ ತೊಲೆ, ಜಂಗ್ಲಿಕಾಲೀಮಿರ್ಚೀ ಛಾಲ್ ೧ ತೊಲೆ, ಚಿತ್ತೂರ್‌ಮೂಲ್‌ಕೆ ಜಡ್‌ಕಿಛಾಲ್ ೧ ತೊಲೆ, ರೂಮಿಮಸ್ತಕಿ ೧ ತೊಲೆ, ಇಸಂದಾರ್‌ಕಿಜಡ್‌ಕಿಛಾಲ್ ೧ ತೊಲೆ, ಸುಕ್ಕಾ ಇಂದ್ರಾವರ್ನ ೧ ತೊಲೆ, ಅಚ್ಛೆ ನೀಂಕಿಛಾಲ್ ೧ ತೊಲೆ, ಕರಂಜ್‌ಕಿಛಾಲ್ ೧ ತೊಲೆ, ಸತ್ತ್ರಗುಲ್ ೬ ತೊಲೆ, ತಬಾಷಿರ್ ೬ ತೊಲೆ, ಕಾಲೀಮಿರ್ಚಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣ ಮಾಡಿ ಶೋಧಿಸಿಕೊಳ್ಳುವುದು. ಬಾದಾಮಿಬೀಜ ೧ ಶೇರು ತಂದು ನೀರಿನಲ್ಲಿ ನೆನೆಹಾಕಿ ಮೇಲಿನ ಹೊಟ್ಟು ತೆಗೆದು ಒರಳಲ್ಲಿ ಹಾಕಿ ನೀರುಹಾಕಿ ರುಬ್ಬಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಲೋಳಿಸರದ ತಿರಳು ೧೦ ಶೇರು ೭ ಸಲ ತಣ್ಣೀರಿನಲ್ಲಿ ತೊಳೆದು ಒಂದು ಕಂಚಿನ ತಟ್ಟೆಯಲ್ಲಿ ಹಾಕಿ ಇದಕ್ಕೆ ಅಳಲೇಕಾಯಿ ಚೂರ್ಣ ಹಾಕಿ ತಣಿಗೆ ಮಾರೆಮಾಡಿ ಇಟ್ಟರೆ ನೀರು ಇಳಿಯುವುದು. ಈ ನೀರನ್ನು ಬಟ್ಟೆಯಲ್ಲಿ ಹಾಕಿ ಶೋಧಿಸಿ ಬಾಂಡ್ಲಿಯಲ್ಲಿ ಹಾಕಿ ಅದಕ್ಕೆ ಮೇಲ್ಕಂಡ ಬಾದಾಮಿಬೀಜದ ಹಾಲುಹಾಕಿ ರಾಯಿಪುಡಿ ಸಕ್ಕರೆ ೧೮ ಶೇರು ಹಾಕಿ ಒಲೆಯ ಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಜೇನುತುಪ್ಪ ೧ ಶೇರು, ಹಸುವಿನತುಪ್ಪ ೩ ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯ ಮಾಡಿಟ್ಟುಕೊಳ್ಳುವುದು. ಹೊತ್ತಿಗೆ ॥ ತೊಲೆ ಮೇರಿಗೆ ಬೆಳಿಗ್ಗೆ ಸಾಯಂಕಾಲ ೨೦ ದಿವಸ ಕೊಡಬೇಕು. ಇಚ್ಛಾ ಪಥ್ಯ. ಚಲದಿ ಪದಾರ್ಥ ವರ್ಜ್ಯ. ಇದರಿಂದ ಮೇಹಸಂಬಂಧವಾದ ರೋಗ, ಮೇಹೋಷ್ಣ, ಪಡೆ, ವಾಯು, ಮೂಲರೋಗ ಇವು ಗುಣವಾಗುವುವು.

೧೬. ಕದಳೀಘೃತ:—ಯಾಲಕ್ಕಿ ೧ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಲವಂಗ ೧ ತೊಲೆ, ಲವಂಗಪತ್ರೆ ೧ ತೊಲೆ, ಶುಂಠಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೪ ತೊಲೆ, ತಾವರೇಗಡ್ಡೆ ೨ ತೊಲೆ, ತಾವರೇಕುಸುಮ ೨ ತೊಲೆ, ಸೊಗದೇಬೇರು ೪ ತೊಲೆ, ಅತಿಮಧುರ ೨ ತೊಲೆ, ಕಸ್ತೂರಿ ಅರಿಸಿನ ೨ ತೊಲೆ, ಲಾವಂಚ ೨ ತೊಲೆ, ಮರದರಿಸಿನ ೨ ತೊಲೆ, ತುಂಗೇಗಡ್ಡೆ ೧ ತೊಲೆ, ಶ್ರೀಗಂಧದಚಕ್ಕೆ ೧ ತೊಲೆ, ತುಪ್ಪದದೇವದಾರು ೨ ತೊಲೆ, ಅಮೃತಬಳ್ಳಿ ೪ ತೊಲೆ, ಮಜ್ಜಿಗೆಗಡ್ಡೆ ೪ ತೊಲೆ, ಪರ್ಪಾಟಕ ೨ ತೊಲೆ, ಜಟಾಮಾಂಸಿ ೧ ತೊಲೆ, ತಂಗಡಿಬೀಜ ೨ ತೊಲೆ, ಬಾಲಮೆಣಸು ೨ ತೊಲೆ ಇವುಗಳನ್ನು ಕುಟ್ಟಿ ಅಷ್ಟಾವಶೇಷ ಕಷಾಯವನ್ನು ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಕುಂಕುಮಕೇಸರಿ ೧ ತೊಲೆ ಕಷಾಯದಲ್ಲಿ ಅರೆದು ಕೊಳ್ಳುವುದು. ರಸಬಾಳೇ ಹೂವು ೧೬ ತಂದು ಕುಟ್ಟಿ ನೀರುಹಾಕಿ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಂಡದ್ದು ೨ ಶೇರು, ಹಸುವಿನಹಾಲು ೨ ಶೇರು ಹಸುವಿನತುಪ್ಪ ೧ ಶೇರು ಮೇಲ್ಕಂಡ ಕಷಾಯ, ಇವೆಲ್ಲವನ್ನೂ ಒಂದು ಬಾಂಡ್ಲಿ ಯಲ್ಲಿ ಹಾಕಿ ಒಲೆಯಮೇಲಿಟ್ಟು ಘೃತಪಕ್ವವಾಗಿ ಕಾಯಿಸಿ ತೆಗೆದಿಟ್ಟುಕೊಳ್ಳು ವುದು. ಹೊತ್ತಿಗೆ ‖ ತೊಲೆಯಂತೆ ಬೆಳಿಗ್ಗೆ ಸಾಯಂಕಾಲ ೭-೧೪ ದಿನ ತೆಗೆದು ಕೊಳ್ಳುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ೨೦ ವಿಧ ಪ್ರಮೇಹ, ಮೂತ್ರಕೃಚ್ಛ್ರ, ಉರಿಮೂತ್ರ, ಹೆಂಗಸರ ಬಿಳೀ ಸೆರಗು, ಕೆಂಪು ಸೆರಗು ಸಹ ಗುಣವಾಗುವುದು.

೧೭. ಸಂತಾನ ಕಲ್ಯಾಣಘೃತ:—ಅಳಲೇಕಾಯಿಸಿಪ್ಪೆ ೧ ಪಾವು, ತಾರೇ ಕಾಯಿಸಿಪ್ಪೆ ೧ ಪಾವು, ನೆಲ್ಲೀಕಾಯಿ ೧ ಪಾವು, ಪಾಪಟೆಬೇರು ೧ ಪಾವು, ತುಪ್ಪದ ದೇವದಾರು ಚಕ್ಕೆ ೧ ತೊಲೆ, ಸುರಸುರಿಕೆಬೇರು ೧ ಪಾವು, ಸೊಗದೇಬೇರು ೧ ಪಾವು, ಮಾವಿನಯಳೆಚಿಗುರು ೧ ಪಾವು, ಶ್ರೀಗಂಧದಚಕ್ಕೆ ೧ ಪಾವು, ಅಮೃತಬಳ್ಳಿ ೧ ಪಾವು ಇವುಗಳನ್ನು ಚನ್ನಾಗಿ ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿಕೊಳ್ಳುವುದು. ಹಸುವಿನಹಾಲು ೧ ಪಾವು, ನಿಂಬೇಹಣ್ಣಿನ ರಸ ೧ ಪಾವು, ನೆಲ್ಲೀಕಾಯಿ ರಸ ೧ ಪಾವು, ಎಳನೀರು ೧ ಪಾವು, ಕಬ್ಬಿನ ರಸ ೧ ಪಾವು, ಮಜ್ಜಿಗೆಗಡ್ಡೆ ರಸ ೧ ಪಾವು, ಬಾಳೆಗಡ್ಡೆ ರಸ ೧ ಪಾವು, ಬೂರುಗದ ಚಕ್ಕೆ ರಸ ೧ ಪಾವು, ಲೋಳೆಸರದ ರಸ ೧ ಪಾವು, ಹಸುವಿನತುಪ್ಪ ೧೦ ಶೇರು ಇವುಗಳನ್ನೆಲ್ಲಾ ಒಂದು ಕಲಾಯಿ ಪಾತ್ರೆಯಲ್ಲಿ ಹಾಕಿ ಒಲೆಯಮೇಲಿಟ್ಟು ಘೃತ ಪಕ್ವವಾಗಿ ಕಾಯಿಸಿ ಅನಂತರ ಈ ಕೆಳಗಿನ ಚೂರ್ಣವನ್ನು ಹಾಕುವುದು. ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ, ಯಾಲಕ್ಕಿ, ಮೋಡಿ, ಚಂಗಲಕೋಷ್ಟ, ಮಂಜಿಷ್ಠೆ, ನಾಗಕೇಸರಿ, ತಾಳೀಸಪತ್ರೆ, ವಾಯುವಿಳಂಗ,

ಜಾಕಾಯಿ, ಜಾಪತ್ರೆ, ಜಾಜಿಮೊಗ್ಗು, ನೈದಿಲೆಮೊಗ್ಗು, ಬಿಳೇ ಗಿರಿಕರ್ಣಿಕೆ ಸಮೂಲ, ತಾವರೇಗಡ್ಡೆ, ಶ್ರೀಗಂಧದಚಕ್ಕೆ ಇವು ದಿನಸಿಗೆ ಒಂದೊಂದು ತೊಲೆ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಮೇಲ್ಕಂಡ ಘೃತಕ್ಕೆ ಹಾಕಿ ಕಲಸಿ ಒಂದು ಜಾಡಿಯಲ್ಲಿ ಹಾಕಿ ಧಾನ್ಯಪುಟದಲ್ಲಿ ೭ ದಿವಸವಿಟ್ಟು ತೆಗೆದುಕೊಳ್ಳುವುದು. ಹೊತ್ತಿಗೆ ಕಾಲುತೊಲೆಯಂತೆ ಬೆಳಿಗ್ಗೆ ಹೊತ್ತು ೨೦-೪೦ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕ್ಷಯ, ಕೆಮ್ಮು, ಸ್ವಾಸಕಾಸ, ಉಬ್ಬಸ, ಪಾಂಡು, ಕಾಮಾಲೆ, ಮೂರ್ಛೆ, ಪ್ರಮೇಹ ಇವು ಗುಣವಾಗಿ ಋತುವಾಗದೆ ಇರುವವರು ಋತುವಾಗುವರು. ಸಂತಾನ ಇಲ್ಲದೆ ಇರುವವರಿಗೆ ಸಂತಾನವಾಗುವುದು.

೧೮. ಕಳಿಂಗಾದಿ ಲೇಹ್ಯ:—ಒಣಗಿದ ಹಾವುಮೆಕ್ಕೇಕಾಯಿ ನಾಲ್ಕು ತಂದು ಬೀಜ ತೆಗೆದುಹಾಕುವುದು. ಗಾಜುಲವಣ ೧ ತೊಲೆ, ಬಿಡಾಲವಣ ೧ ತೊಲೆ, ಸೈಂಧವಲವಣ ೧ ತೊಲೆ, ಚೌಳುಪ್ಪು ೧ ತೊಲೆ, ಸಮುದ್ರಲವಣ ೧ ತೊಲೆ, ಸೌವರ್ಚಲವಣ ೧ ತೊಲೆ, ಇಂದ್ರಜವೆ ೧ ತೊಲೆ, ಶುಂಠಿ ೧ ತೊಲೆ, ಶುದ್ಧಿಮಾಡಿದ ಹಾಲುಹಿಂಗು ೧ ತೊಲೆ, ಹಿಪ್ಪಲಿ ೧ ತೊಲೆ, ಲವಂಗ ೧ ತೊಲೆ, ಕಟುಕರೋಹಿಣಿ ೧ ತೊಲೆ, ಸುನಾಮುಖಿ ೧ ತೊಲೆ, ಬಿದುರುಪ್ಪು ೧।। ತೊಲೆ, ನೆಲತಾಟಿಗಡ್ಡೆ ೧ ತೊಲೆ, ಕರ್ಕಾಟಕಶೃಂಗಿ ೧ ತೊಲೆ, ದಾಲಚಿನ್ನಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು ಒಂದು ಬಾಂಡ್ಲಿಯಲ್ಲಿ ಹಳೇಬೆಲ್ಲ ೧।। ಶೇರು, ಹಸುವಿನಹಾಲು ।। ಶೇರು ಹಾಕಿ ಒಲೆಯ ಮೇಲಿಟ್ಟು ತಂತುಪಾಕ ಬಂದಕೂಡಲೇ ಮೇಲ್ಕಂಡ ಚೂರ್ಣ ಜೇನುತುಪ್ಪ ।। ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯಮಾಡಿ ಜಾಡಿಯಲ್ಲಿ ಹಾಕಿ ೧೨ ದಿನ ರಾಗಿಯಲ್ಲಿ ಪುಟವನ್ನು ಇಡಬೇಕು. ಹೊತ್ತಿಗೆ ಕಾಲುತೊಲೆ ಬೆಳಿಗ್ಗೆ ಹೊತ್ತು ೫-೭ ದಿನ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಹೊಟ್ಟೆಯೊಳಗಿನ ಗಡ್ಡೆ, ಮಹೋದರ, ಜಲೋದರ, ಗುಲ್ಮ, ಶೋಭೆ ಗುಣವಾಗುವುದು.

೧೯. ಮಹಾ ಪಂಚಕಲ್ಯಾಣಿ ರಸಾಯನ:—ಸೊಗದೇಬೇರು ೧ ಶೇರು, ನೆಲಬೇವು ।। ಶೇರು, ಲಾಮಂಚ ೧ ಪಾವು, ಅಳಲೇಕಾಯಿಸಿಪ್ಪೆ ೩ ತೊಲೆ, ತಾರೇಕಾಯಿಸಿಪ್ಪೆ ೬ ತೊಲೆ, ನೆಲ್ಲೀಕಾಯಿ ೧೨ ತೊಲೆ, ಯಾಲಕ್ಕಿ ೧ ತೊಲೆ, ಶ್ರೀಗಂಧದಚಕ್ಕೆ ೨ ತೊಲೆ ಇವುಗಳನ್ನು ಕುಟ್ಟಿ ಅಷ್ಟಾವಶೇಷ ಕಷಾಯ ಕಾಯಿಸಿ ಶೋಧಿಸಿಕೊಂಡದ್ದು ೧ ಶೇರು, ಹಸುವಿನಹಾಲು ೧ ಪಾವು, ನೆಲ್ಲೀಕಾಯಿ ರಸ ೧ ಪಾವು, ಬೂದಕುಂಬಳಕಾಯಿ ರಸ ೧ ಪಾವು, ಎಳನೀರು ೧ ಪಾವು, ಹೇರಳೆಕಾಯಿ ರಸ ೧ ಪಾವು, ಕಬ್ಬಿನಹಾಲು ೧ ಪಾವು, ದ್ರಾಕ್ಷಿ ೬ ತೊಲೆ, ಖರ್ಜೂರ ೩ ತೊಲೆ, ಇವೆರಡು ಒರಳಲ್ಲಿ ಹಾಕಿ ನೀರುಹಾಕಿ ರುಬ್ಬಿ

ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಇವೆಲ್ಲವನ್ನೂ ಒಂದು ಬಾಂಡ್ಲಿಯಲ್ಲಿ ಹಾಕಿ ರಾಯಪುಡಿ ಸಕ್ಕರೆ ೫ ಶೇರು ಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತು ಪಾಕ ಬಂದಕೂಡಲೇ ಈ ಚೂರ್ಣವನ್ನು ಹಾಕುವುದು:—ಆನೆನೆಗ್ಗಿಲು ೩ ತೊಲೆ, ಅತಿಮಧುರ ೧ ತೊಲೆ, ಭೂಸಕ್ಕರೆಗಡ್ಡೆ ೩ ತೊಲೆ, ನಾಗಕೇಸರಿ ೨ ತೊಲೆ, ಹಿಪ್ಪಲಿ ೩ ತೊಲೆ, ಲವಂಗ ೧ ತೊಲೆ, ದಾಲ್‌ಚಿನ್ನಿ ೧ ತೊಲೆ, ಲವಂಗಪತ್ರೆ ೧ ತೊಲೆ, ಕಚೋರ ೧ ತೊಲೆ, ಬಿಳೀ ಜೀರಿಗೆ ೩ ತೊಲೆ, ಕೊತ್ತುಂಬರಿಬೀಜ ೧ ತೊಲೆ, ಚಿತ್ರಮೂಲ ೧ ತೊಲೆ, ಶುಂಠಿ ೧ ತೊಲೆ, ಮೆಣಸು ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಜೇನುತುಪ್ಪ ‖ ಶೇರು, ಹಸುವಿನತುಪ್ಪ ೧ ಶೇರು ಹಾಕಿ ಪಕ್ವವಾಗಿ ಲೇಹ್ಯ ಮಾಡಿ ಧಾನ್ಯಪುಟದಲ್ಲಿ ೧೫ ದಿವಸವಿಟ್ಟು ತೆಗೆದುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಮೇರೆಗೆ ಬೆಳಗ್ಗೆ ಸಾಯಂಕಾಲ ೨೦-೪೦ ದಿನ ಕೊಡುವುದು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಉನ್ಮಾದ, ಸ್ಮೃತಿ ಭ್ರಮಣ, ಸ್ವಪ್ನಗಳು, ಖಾಸ, ಪಾಂಡು, ಮೂತ್ರಕೃಚ್ಛ್ರ, ಮದ್ದುಯಿಕ್ಕಿದ ದೋಷ, ಇಂದ್ರಿಯನಷ್ಟ, ನೀರುಕಟ್ಟು, ಕಲ್ಲುಕಟ್ಟು, ಕ್ಷಯ, ಉಷ್ಣ, ಶೋಭೆ, ಪುರಾಣಜ್ವರ, ಮೇಹಗ್ರಂಥಿ, ವಿಂಶತಿಮೇಹ, ಒಂದು ಶಿಶುವು ಆಗಿ ಪುನಃ ಇಲ್ಲದವರಿಗೆ, ಬಂಜೆಸ್ತ್ರೀಯರಿಗೆ, ಮಂದಬುದ್ಧಿಗಳಿಗೆ ಈ ಲೇಹ್ಯವು ಗುಣವನ್ನುಂಟುಮಾಡುವುದು.

೨೦. ಮೇಹಕುಲಾಂತಕ ರಸಾಯನ:—ರಾಮಗುಳ್ಳ, ಹೆಗ್ಗುಳ್ಳ, ಸೊಗದೇಬೇರು, ಈಚಲಬೇರು, ದೊಡ್ಡ ಪಾಪಟಿಬೇರು, ಕಿರಕಸಾಲೆಬೇರು, ಅಗುಳು ಶುಂಠಿ, ಮಂಜಿಷ್ಠೆ, ಗುಬ್ಬಚ್ಚಿಬೇರು, ವಿಷ್ಣುಕ್ರಾಂತಿ, ಶುದ್ಧಿಮಾಡಿದ ಹಿರೇ ಮದ್ದಿನಗಡ್ಡೆ, ಕಿರುನೆಲ್ಲಿ, ಕರೇಉಪ್ಪಿ, ಬಿಳೇಉಪ್ಪಿ, ಬಿಳೇಗರಿಕೆ, ಚಿಟ್ಟಾ ಮುಟ್ಟಿ, ಪೇರಾಮುಟ್ಟಿ, ಕೊಳವಳಿಕೆಬೇರು, ಅಮೃತಬಳ್ಳಿ, ಚಿತ್ರಮೂಲದ ಬೇರು, ತುಂಗೇಗಡ್ಡೆ, ಆನೇನೆಗ್ಗಿಲಬೇರು, ಬಿಳೇಹಿಂಡಿಬೇರು, ಕರೇಹಿಂಡಿ ಬೇರು ಇವು ದಿನಸಿಗೆ ೩ ತೊಲೆ ತಂದು ಕುಟ್ಟಿ ಚತುರ್ಥಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿದ್ದು ೧ ಶೇರು, ಹಸೀಶುಂಠೀ ರಸ ೧ ಪಾವು, ಮಾದವಾಳದಹಣ್ಣಿನ ರಸ ೧ ಪಾವು, ದಾಳಿಂಬರೆಹಣ್ಣಿನ ರಸ ೧ ಪಾವು ಇವುಗಳನ್ನೆಲ್ಲಾ ಒಂದು ಬಾಂಡ್ಲಿಯಲ್ಲಿ ಹಾಕಿ ಹಳೇಜೆಲ್ಲ ೭‖ ಶೇರು ಹಾಕಿ ನೀರು ಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಶುಂಠಿ ೨ ತೊಲೆ, ಮೆಣಸು ೧ ತೊಲೆ, ಹಿಪ್ಪಲಿ ೨ ತೊಲೆ, ಅಳಲೇಕಾಯಿಸಿಪ್ಪೆ ೨ ತೊಲೆ, ತಾರೇ ಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೨ ತೊಲೆ, ತಾಳೀಸಪತ್ರ ೨ ತೊಲೆ, ಚವ್ಯ ೧ ತೊಲೆ, ಅತಿಮಧುರ ೧ ತೊಲೆ, ಅಕ್ಕಲಕರೆ ೧ ತೊಲೆ, ಕೊತ್ತುಂಬರಿಬೀಜ ೧ ತೊಲೆ, ನಾಗಕೇಸರಿ ೧ ತೊಲೆ, ಬಿಳೇಜೀರಿಗೆ ೨ ತೊಲೆ, ಸುನಾಮುಖಿ

೪ ತೊಲೆ, ಶುದ್ಧಿಮಾಡಿದ ಲಾಲ್‌ಶಿಗಡೆ ೪ ತೊಲೆ, ಖುರಾಸಾನಿ ಓಮು ೧ ತೊಲೆ, ನಸುಗುನ್ನಿಬೀಜ ೧ ತೊಲೆ; ತವಕ್ಷೀರ ೧ ತೊಲೆ, ಯಾಲಕ್ಕಿ ೧ ತೊಲೆ, ಲವಂಗಪತ್ರೆ ೧ ತೊಲೆ, ದಾಲ್‌ಚಿನ್ನಿ ೧ ತೊಲೆ, ಜಟಾಮಾಂಸಿ ೧ ತೊಲೆ, ಮಜ್ಜಿಗೆಗಡ್ಡೆ ೨ ತೊಲೆ, ನೆಲತಾಟಿಗಡ್ಡೆ ೨ ತೊಲೆ, ರೂಮಿಮಸ್ತಕಿ ೧ ತೊಲೆ, ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ದ್ರಾಕ್ಷಿ ೪ ತೊಲೆ, ಖರ್ಜೂರ ೪ ತೊಲೆ, ಕುಂಕುಮಕೇಸರಿ ಕಾಲುತೊಲೆ, ಗೋರೋಜನ ೧ ಆಣೆ ತೂಕ, ಇವುಗಳಲ್ಲಿ ಕುಟ್ಟುವ ದಿನಸುಗಳನ್ನು ಕುಟ್ಟಿ ಶೋಧಿಸಿ ಅರೆಯುವ ದಿನಸುಗಳನ್ನು ಅರೆದು ಎಲ್ಲವನ್ನೂ ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಜೇನುತುಪ್ಪ ೧|| ಶೇರು, ಹಸುವಿನತುಪ್ಪ ||| ಶೇರು ಹಾಕಿ ಪಕ್ವವಾಗಿ ಲೇಹ್ಯಮಾಡಿಟ್ಟು ಕೊಳ್ಳುವುದು. ಹೊತ್ತಿಗೆ ಕಾಲುತೊಲೆ, ಅರ್ಧತೊಲೆ ಮೇರಿಗೆ ಬೆಳಿಗ್ಗೆ ಸಾಯಂಕಾಲ ೨೦-೪೦ ದಿವಸ ಕೊಡಬೇಕು. ಇಚ್ಛಾಪಥ್ಯ. ಚಲದಿಪದಾರ್ಥ ವರ್ಜ್ಯ. ಇದರಿಂದ ಸಮಸ್ತ ಮೇಹಕಾರಕಾದಿಗಳು ಗುಣವಾಗುವುದು.

೨೧. ಖಂಡಾದ್ರಕ ಘೃತ:—ಹಸೀಶುಂಠಿ ಮೇಲಿನ ಸಿಪ್ಪೆಯನ್ನು ಕೆರೆದು ಒರಳಲ್ಲಿ ಹಾಕಿ ನೀರುಹಾಕಿ ರುಬ್ಬಿ ಬಟ್ಟೆಯಲ್ಲಿ ಶೋಧಿಸಿಕೊಂಡದ್ದು ೧ ಶೇರು, ನಿಂಬೇಹಣ್ಣಿನ ರಸ ೧ ಶೇರು, ಸಕ್ಕರೆ ೨ ಶೇರು ಇವು ಮೂರು ಒಂದು ಬಾಂಡ್ಲಿಯಲ್ಲಿ ಹಾಕಿ ಒಲೆಯಮೇಲಿಟ್ಟು ತಂತುಪಾಕ ಬಂದಕೂಡಲೇ ಈ ಚೂರ್ಣವನ್ನು ಹಾಕುವುದು:—ಮೋಡಿ ||| ತೊಲೆ, ಬಿಳೇಜೀರಿಗೆ ||| ತೊಲೆ, ಕೊತ್ತುಂಬರಿಬೀಜ ||| ತೊಲೆ, ನೆಲ್ಲೀಕಾಯಿ ||| ತೊಲೆ, ನಾಗಕೇಸರಿ ||| ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಹಸುವಿನತುಪ್ಪ ೧ ಶೇರು, ಜೇನುತುಪ್ಪ || ಶೇರು ಹಾಕಿ ಘೃತ ಪಕ್ವವಾಗಿ ಕಾಯಿಸಿಟ್ಟುಕೊಳ್ಳುವುದು. ಹೊತ್ತಿಗೆ || ತೊಲೆ ಮೇರಿಗೆ ಬೆಳಿಗ್ಗೆ ಸಾಯಂಕಾಲ ೭-೧೪ ದಿನ ಕೊಡಬೇಕು ಇಚ್ಛಾಪಥ್ಯ. ಚಲದಿಪದಾರ್ಥ ವರ್ಜ್ಯ. ಇದರಿಂದ ಪೈತ್ಯ, ಮೇಹ, ಅಪಸ್ಮಾರ. ಮೂರ್ಛೆ, ಭ್ರಮೆ, ಇವುಗಳು ಗುಣವಾಗುವುವು.

೨೨. ಮಹಾಕಲ್ಯಾಣ ಲೇಹ್ಯ:—ಎಳನೀರು ೧ ಪಾವು, ಬೂದಕುಂಬಳಕಾಯಿ ರಸ ೧ ಪಾವು, ಕಬ್ಬಿನ ರಸ ೧ ಪಾವು, ಹೊನಗೊನೆಸೊಪ್ಪಿನ ರಸ ೧ ಪಾವು, ಬಾಳೇಗಡ್ಡೆ ರಸ ೧ ಪಾವು, ನೆಗ್ಗಿಲು ಸಮೂಲದ ರಸ ೧ ಪಾವು, ಅಮೃತಬಳ್ಳಿ ರಸ ೧ ಪಾವು, ಕೊಳವಳಿಕೆಸೊಪ್ಪಿನ ರಸ ೧ ಪಾವು, ಒಂದೆಲಗದಸೊಪ್ಪಿನ ರಸ ೧ ಪಾವು, ಹೆಸ್ಗುಳ್ಳದ ರಸ ೧ ಪಾವು ಇವುಗಳನ್ನು ಒಂದು ಬಾಂಡ್ಲಿಯಲ್ಲಿ ಹಾಕಿ ರಾಯಪುಡಿಸಕ್ಕರೆ ೯ ಶೇರು ಹಾಕಿ ಒಲೆಯಮೇಲಿಟ್ಟು ಕಾಯಿಸಿ ತಂತುಪಾಕ ಬಂದಕೂಡಲೇ ಈ ಚೂರ್ಣ ಹಾಕುವುದು:—ದ್ರಾಕ್ಷಿ, ಅತಿ ಮಧುರ, ಖರ್ಜೂರ, ಇಪ್ಪೇಹೂವು, ಶ್ರೀಗಂಧದಚಕ್ಕೆ, ಪದ್ಮಕೇಸರಿ, ರಕ್ತಚಂದನ, ಲಾವಂಚ,

ಜಟಾಮಾಂಸಿ, ಚೆಂಗಲಕೋಷ್ಟ, ಯಾಲಕ್ಕಿ, ಲವಂಗಪತ್ರಿ, ಲವಂಗ, ದಾಲ್ ಚಿನ್ನಿ, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ಸಣ್ಣರಾಸ್ಮೆ, ನೆಲ್ಲೀಕಾಯಿ, ಬಿಳೇ ಜೀರಿಗೆ, ಕರೇಜೀರಿಗೆ, ಕಟೆ ಕರೋಹಿಣಿ, ಸೈಂಧವಲವಣ, ಸೌವರ್ಚಲವಣ, ಕಕ್ಕೋಲ, ಅರಿಸಿನ, ಮರದರಿಸಿನ, ಗಂಟುಭಾರಂಗಿ, ತಾಳೀಸಪತ್ರಿ, ಕಲ್ಲುಹೂವು, ಕುಪ್ಪದದೇವದಾರು, ಕೊತ್ತುಂಬರಿಬೀಜ, ಸೂರ್ತಿಬೆಳಗಾರ ಅರಳುಮಾಡಿದ್ದು, ಜಾಜಿಹೂವು, ಧಾತಕೀಕುಸುಮ, ನೋಡಿ ತಾವರೆಸಮೂಲ, ಕೊಡಸಿಗೆಬೀಜ, ಅತಿ ಬಜೆ, ಬೂರಗದಬಂಕೆ ಇವು ದಿನಸಿಗೆ ೧ ತೊಲೆ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿ ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ, ಕುಂಕುಮಕೇಸರಿ ೧ ತೊಲೆ, ಕಸ್ತೂರಿ ೧ ಹಣ ತೂಕ, ಜೇನುತುಪ್ಪ ‖ ಶೇರು, ಹಸುವಿನತುಪ್ಪ ೧ ಶೇರು ಹಾಕಿ ಕಲಸಿ ಪಕ್ವವಾಗಿ ಲೇಹ್ಯಮಾಡಿಟ್ಟುಕೊಳ್ಳುವುದು. ಹೊತ್ತಿಗೆ ಕಾಲು ತೊಲೆ, ‖ ತೊಲೆ, ಬೆಳಿಗ್ಗೆ ಸಾಯಂಕಾಲ ೭-೧೪ ದಿನ ಕೊಡುವುದು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕುಕ್ಷಿರೋಗ, ಮಂದಾಗ್ನಿ, ಪಿತ್ಥ, ದಾಹ, ಪಿತ್ಥಗುಲ್ಮ, ಪಿತ್ಥರಕ್ತ, ಶೂಲೆ, ಕ್ರಿಮಿ, ಜಂಘಾದಾಹ, ವಿಂಶತಿ ಮೇಹ, ಕ್ಷಯ, ಪಾಂಡು, ಕಾಮಾಲೆ, ಅಪಾಯಶೂಲೆ, ಇವು ಗುಣವಾಗಿ ಪುಷ್ಟಿ ಬಲ ಕೊಡುವುದು.

೨೩. ಚಿಂಚಲ್ಯಾದಿ ಲೇಹ್ಯ:—ಹಳೇಕಿಟ್ಟ ೧ ಶೇರು, ಹುಣಿಸೇಎಲೆ ೨ ಶೇರು ಒಂದು ಮಡಿಕೆಗೆ ಹಾಕಿ ಇದಕ್ಕೆ ೮ ಭಾಗ ನೀರು ಹಾಕಿ ಅಷ್ಟಾವಶೇಷ ಕಷಾಯ ಕಾಯಿಸಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಇದನ್ನು ಒಂದು ಬಾಂಡ್ಲಿ ಯಲ್ಲಿ ಹಾಕಿ ಹಳೇಬೆಲ್ಲ ೧‖ ಶೇರು ಹಾಕಿ ಒಲೆಯಮೇಲಿಟ್ಟು ತಂತುಪಾಕ ಬಂದ ಕೂಡಲೇ ಶುಂಠಿ ೧ ತೊಲೆ, ಹಿಪ್ಪಲಿ ೧ ತೊಲೆ, ಮೆಣಸು ೧ ತೊಲೆ, ಚಿತ್ರ ಮೂಲ ೧ ತೊಲೆ, ಬಿಳೇಜೀರಿಗೆ ೧ ತೊಲೆ, ನೋಡಿ ೧ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಬಾಂಡ್ಲಿಯಲ್ಲಿ ಹಾಕಿ ಪಕ್ವವಾಗಿ ಲೇಹ್ಯವನ್ನುಮಾಡಿ ಜೇನುತುಪ್ಪ ೧ ಪಾವು ಹಾಕಿ ಕಲಸಿಟ್ಟುಕೊಳ್ಳುವುದು. ಧಾನ್ಯಪುಟದಲ್ಲಿ ೧೫ ದಿನ ಇಡುವುದು. ಹೊತ್ತಿಗೆ ‖ ತೊಲೆಯಂತೆ ಬೆಳಿಗ್ಗೆ ಸಾಯಂಕಾಲ ೭-೧೪ ದಿನ ಕೊಡ ವುದು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಪಾಂಡು, ಕಾಮಾಲೆ, ಕ್ಷಯ, ಶೋಭೆ, ಗುಲ್ಮ, ಹೊಟ್ಟೆನೋವು ಗುಣವಾಗುವುದು.

೨೪. ಕುಮಾರಿ ಲೇಹ್ಯ:—ಶುದ್ಧಿಮಾಡಿದ ಲೋಳೆಸರದ ರಸ ೧ ಶೇರು, ಬಿಳೇಈರುಳ್ಳಿ ರಸ ‖ ಶೇರು, ಕಲ್ಲುಸಕ್ಕರೆ ೩ ಶೇರು ಇವುಗಳನ್ನು ಒಂದು ಬಾಂಡ್ಲಿ ಯಲ್ಲಿ ಹಾಕಿ ಒಲೆಯಮೇಲಿಟ್ಟು ತಂತುಪಾಕ ಬಂದಕೂಡಲೇ ಜಾಕಾಯಿ ೧ ತೊಲೆ, ಜಾಪತ್ರೆ ೧ ತೊಲೆ, ಲವಂಗ ೧ ತೊಲೆ, ಲವಂಗಪತ್ರೆ ೧ ತೊಲೆ, ಯಾಲಕ್ಕಿ ‖ ತೊಲೆ, ಅಳಲೇಕಾಯಿಸಿಪ್ಪೆ ೧ ತೊಲೆ, ತಾರೇಕಾಯಿಸಿಪ್ಪೆ ೨ ತೊಲೆ, ನೆಲ್ಲೀಕಾಯಿ ೪ ತೊಲೆ, ಅತಿಮಧುರ ೧ ತೊಲೆ, ಜಟಾಮಾಂಸಿ ೧ ತೊಲೆ,

ಕಲ್ಲುಸಾರುಭಸ್ಮ ೧ ತೊಲೆ, ಕುಂಕುಮಕೇಸರಿ ಕಾಲುತೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಮೇಲ್ಕಂಡ ಬಾಂಡ್ಲಿಯಲ್ಲಿ ಹಾಕಿ ಪಕ್ವವಾಗಿ ಲೇಹ್ಯವನ್ನು ಮಾಡಿ ಜೇನುತುಪ್ಪ ॥ ಪಾವು, ಹಸುವಿನತುಪ್ಪ ೧ ಪಾವು ಹಾಕಿ ಕಲಸಿ ಇಟ್ಟುಕೊಳ್ಳುವುದು, ಹೊತ್ತಿಗೆ ೧ ಗಜ್ಜುಕಾಯಿಗಾತ್ರ ಬೆಳಿಗ್ಗೆ ಸಾಯಂಕಾಲ ೨೦ ದಿವಸ ತೆಗೆದುಕೊಳ್ಳಬೇಕು. ಇದಕ್ಕೆ ಚಲದಿಪದಾರ್ಥ ವರ್ಜ್ಯ. ಇದರಿಂದ ಮೇಹ ಸಂಬಂಧವಾದ ರೋಗಗಳು ಗುಣವಾಗಿ ರಕ್ತವೃದ್ಧಿಯನ್ನುಂಟುಮಾಡುವುದು.

೨೫. ಮಧುಸ್ನುಹಿಕ ರಸಾಯನ:—ಶುದ್ಧಿಮಾಡಿದ ಪರಂಗಿಚಕ್ಕೆ ೩ ತೊಲೆ, ಶುಂಠಿ, ಹಿಪ್ಪಲಿ, ಮೆಣಸು, ದಾಲ್‌ಚಿನ್ನಿ, ಲವಂಗಪತ್ರೆ, ಯಾಲಕ್ಕಿ, ನಾಗಕೇಸರಿ, ತಾವರೆಗಡ್ಡೆ, ಖುರಾಸಾನಿ ಓಮ, ವಾಯುವಿಳಂಗ, ದುಂಪರಾಸ್ಮೆ, ಗಂಟುಭಾರಂಗಿ, ಬಿಳೀಜೀರಿಗೆ, ಕರೀಜೀರಿಗೆ, ಮೋಡಿ, ಕರ್ಕಾಟಕಶೃಂಗಿ, ತುಪ್ಪದ ದೇವದಾರು, ಚಂಗಲಕೋಷ್ಠ, ಲವಂಗ, ಜಾಕಾಯಿ, ಅಕ್ಕಲಕರೆ, ಲಾವಂಚ, ಅತಿಮಧುರ, ಕಚೋರ, ತುಂಗಮುಸ್ತೆ, ತಕ್ಕೋಲ, ಕೊತ್ತುಂಬರಿಬೀಜ, ಸೋಪುಬೀಜ, ನೇತಾಟಿಗಡ್ಡೆ, ಕರ್ಪೂರಶಿಲಾಜಿತ್ತು ಭಸ್ಮ, ಭೂಸಕ್ರೆಗಡ್ಡೆ, ಅಳಲೇಕಾಯಿಸಿಪ್ಪೆ, ತಾರೇಕಾಯಿಸಿಪ್ಪೆ, ನೆಲ್ಲೀಕಾಯಿ ಇವು ದಿನಸಿಗೆ ೧ ತೊಲೆಯಂತೆ ತಂದು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಕುಂಕುಮ ಕೇಸರಿ ॥ ತೊಲೆ ಖಲ್ವದಲ್ಲಿ ಹಾಕಿ ನೀರು ಹಾಕಿ ಅರೆದು ಒಂದು ಬಾಂಡ್ಲಿಯಲ್ಲಿ ಹಾಕುವುದು ಕಲ್ಲುಸಕ್ಕರೆ ೩ ಶೇರು, ಸಿಹಿದಾಳಿಂಬರೆ ಹಣ್ಣಿನ ರಸ ೧ ಪಾವು ಇವುಗಳನ್ನೂ ಬಾಂಡ್ಲಿಯಲ್ಲಿ ಹಾಕಿ ನೀರು ಹಾಕಿ ಒಲೆಯಮೇಲಿಟ್ಟು ತಂದು ಪಾಕ ಬಂದ ಕೂಡಲೇ ಮೇಲ್ಕಂಡ ಚೂರ್ಣಹಾಕಿ ಜೇನುತುಪ್ಪ ೧ ಪಾವು, ಹಸುವಿನತುಪ್ಪ ॥ ಶೇರು ಹಾಕಿ ಕಲಸಿಟ್ಟುಕೊಳ್ಳುವುದು. ಹೊತ್ತಿಗೆ ೧ ಗಜ್ಜುಗದ ಪ್ರಮಾಣ ಬೆಳಿಗ್ಗೆ ಸಾಯಂಕಾಲ ೧೦-೨೦ ದಿವಸ ತೆಗೆದುಕೊಳ್ಳುವುದು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಮೇಹಕಾರಕ ಸಂಬಂಧವಾದ ರೋಗಗಳು ಗುಣವಾಗುವುದು.

೨೬. ಕ್ಷಾರಗಳನ್ನು ಮಾಡುವ ಕ್ರಮ:—ಅವ ಮೂಲಿಕೆಯ ಕ್ಷಾರವು ಬೇಕಾಗುವುದೋ ಆ ಮೂಲಿಕೆಯ ಕಾಷ್ಠ (ಕಟ್ಟಿಗೆ) ಗಳನ್ನು ತಂದು ಒಣಗಿಸಿ ಸುಟ್ಟು ಬೂದಿಯಮಾಡಿ, ಆ ಬೂದಿಯನ್ನೂ ಅದರ ನಾಲ್ಕರಷ್ಟು ನೀರನ್ನೂ ಒಂದು ಮಡಕೆಯಲ್ಲಿಹಾಕಿ ಕಿವುಚಿ ಒಂದು ರಾತ್ರಿ ಇರಿಸಿದ್ದು, ಬೆಳಗ್ಗೆ ಅದರ ತಿಳಿಯನ್ನೂ ಹನಿಸಿಕೊಂಡು ನೀರೆಲ್ಲ ಇಂಗುವಂತೆ ಕಾಯಿಸಿದರೆ ಆ ಪಾತ್ರದಲ್ಲಿ ಬೆಳ್ಳಗೆ ಉಪ್ಪು ಆಗುವುದು ; ಅದೇ ನಮಗೆ ಬೇಕಾದ ಕ್ಷಾರ. ಅದನ್ನು ಕೆರೆದು ತೆಗೆದಿಟ್ಟುಕೊಳ್ಳುವುದು. ಹಾಗೆ ಕಾಯಿಸುವಲ್ಲಿ ನೀರೆಲ್ಲ ನಿಶ್ಶೇಷವಾಗಿ ಇಂಗಿ ಹೋಗಿ ಕ್ಷಾರವು ಚೂರ್ಣದಂತೆ ಪುಡಿಪುಡಿಯಾಗಿ ನಿಲ್ಲುವುದೊಂದು ವಿಧ; ಆ ಕ್ಷಾರಕ್ಕೆ ಪ್ರತಿಸಾರ್ಯವೆಂದು ಸಂಜ್ಞೆ. ನೀರು ನಿಶ್ಶೇಷವಾಗಿ ಇಂಗಿಹೋಗದೆ

ಮಂದವಾಗಿ ಕಷಾಯದಂತೆ ಉಳಿವುದೊಂದುವಿಧ; ಇದು ತೇಜಸವೆಂದು ಸಂಜ್ಞೆ, ಈ ಎರಡು ಬಗೆಯ ಕ್ಷಾರಗಳನ್ನೂ ಬುದ್ಧಿಶಾಲಿಯಾದ ವೈದ್ಯನು ಯಥೋಚಿತವಾಗಿ ಪ್ರಯೋಗಿಸಬೇಕು.

೨೭. ಬಟ್ಟಗೆ ಚಿಕಿತ್ಸೆಗಳು :—ಮಾವಿನಚಕ್ಕೆ ತಂದು ನೀರುಹಾಕಿ ಕುಟ್ಟಿ ರಸ ಶೋಧಿಸಿದ್ದು ಅರಪಾವು, ಶೋಧಿಸಿದ ಸುಣ್ಣದ ತಿಳಿನೀರು ೧ ತೊಲೆ ಇವೆರಡು ಕಲಸಿ ಬೆಳಗ್ಗೆ ಹೊತ್ತು ಕುಡಿಸುವುದು. ಗುರುವಾರ ೧ ಹೊತ್ತು, ಭಾನುವಾರ ೧ ಹೊತ್ತು, ಪುನಹ ಗುರುವಾರ ೧ ಹೊತ್ತು ಈರೀತಿ ೩ ವಾರ ಕೊಡಬೇಕು. ಪಥ್ಯ—ಔಷಧ ಕೊಟ್ಟದಿನ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಬಟ್ಟೆ ಸರಿಯಾದ ಸ್ಥಳಕ್ಕೆ ಬಂದುಬಿಡುವುದು.

೨೮. ಭಾನುವಾರ ಅಥವಾ ಅಮಾವಾಸ್ಯೆಯ ದಿನ ಉತ್ತರೇಣಿ ಗಿಡಕ್ಕೆ ಅರ್ಚನೆಮಾಡಿ ಗಿಡವನ್ನು ತಂದು ಗೆಣ್ಣುಗಳು ಕತ್ತರಿಸಿ ಅರಸಿನದ ದಾರ ಕಟ್ಟಿದರೆ ಬಟ್ಟೆ ಗುಣವಾಗುವುದು. ತುತ್ತಿಬೇರು ತಂದು ಅರಸಿನದ ದಾರ ಕಟ್ಟಿ ಕೈಗೆ ಕಟ್ಟಿದರೆ ಬಟ್ಟೆ ಗುಣವಾಗುವುದು.

೨೯. ಮಂಡೆ ಕೂದಲು ಉದುರುವುದಕ್ಕೆ :—ಉಮ್ಮತ್ತದಸೊಪ್ಪಿನ ರಸ ೧ ಬಳ್ಳದಲ್ಲಿ ಒಂದು ಮಾನಯೆಣ್ಣೆಯನ್ನು ಹನಿಸಿ, ೧ ತೂಕ ಉಮ್ಮತ್ತದ ಬೀಜವನ್ನು ಸೂಕ್ಷ್ಮವಾಗಿ ಚೂರ್ಣಿಸಿ ಹಾಕಿ ಕಾಯಿಸಿ ಹದದಲ್ಲಿ ಇಳುಹಿ ಮಂಡೆಗೆ ಯಿಕ್ಕಿಸಲು ತಿಮಿರ, ಮಂಡೆಕೂದಲು ಉದುರುವುದು ನಿಲ್ಲುವುದು ಮತ್ತು ಕೂದಲು ಬೆಳೆಯುವುದು.

೩೦. ಕೆಟ್ಟರಾಗಿಯನ್ನು ತಿಂದು ಹೊಟ್ಟೆ ಉಬ್ಬರವಾದವರಿಗೆ :—ಚವುಳು ಹೂವು ಅರ್ಧತೊಲೆ ತಂದು ಒಂದು ಪಾವು ತಣ್ಣೀರು ಒಂದು ಕಂಚಿನ ಕಲಾಯಿ ಪಾತ್ರೆಯಲ್ಲಿಹಾಕಿ ಈ ಚೌಳನ್ನು ಹಾಕಿ ಕಲಸಿ ನಿಂಬೇಹಣ್ಣಿನ ರಸ ೨ ವರಹ ತೂಕ ಸೇರಿಸಿ ಸ್ವಲ್ಪಹೊತ್ತು ಹಾಗೆಯೇ ಇಟ್ಟು ಮೇಲಿನ ತಿಳಿಯನ್ನು ಮಾತ್ರ ಕುಡಿಸುವುದು. ಪುನಃ ೨ ಘಂಟೆ ಹೊತ್ತುಬಿಟ್ಟು ಮೇಲ್ಕಂಡ ರೀತಿಮಾಡಿ ಕುಡಿಸುವುದು. ಉಬ್ಬರ ಗುಣವಾಗುತ್ತೆ. ಇದಕ್ಕೆ ಪಥ್ಯ ಗಂಜಿ ಅನ್ನ.

೩೧ ಸೀತೋಪಲಾದಿ ಚೂರ್ಣ :—ತವಕ್ಷೀರ ೧೬ ತೊಲೆ, ಹಿಪ್ಪಲಿ ೮ ತೊಲೆ, ಯಾಲಕ್ಕಿ ೪ ತೊಲೆ, ದಾಲಚಿನ್ನಿ ೨ ತೊಲೆ, ಕಲ್ಲುಸಕ್ಕರೆ ೩೨ ತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಹೊತ್ತಿಗೆ ಕಾಲು ತೊಲೆ ಚೂರ್ಣ ಹಸುವಿನ ತುಪ್ಪ ಅಥವಾ ಜೇನುತುಪ್ಪದಲ್ಲಿ ಕಲಿಸಿ ಬೆಳಿಗ್ಗೆ ಸಾಯಂಕಾಲ ೭ ದಿನ ಕೊಡಬೇಕು. ಇದಕ್ಕೆ ಪಥ್ಯ—ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಕೆಮ್ಮು, ಆಯಾಸ, ಕ್ಷಯ, ಮೈಉರಿ, ಅಗ್ನಿಮಾಂದ್ಯ, ಪಾರ್ಶ್ವಶೂಲೆ, ಅರುಚಿ, ಜ್ವರ, ರಕ್ತಪಿತ್ಥ ಇವು ಗುಣವಾಗುವುವು.

೩೨. ಪಿತ್ಥದಿಂದ ಹುಚ್ಚುಹಿಡಿದವರಿಗೆ:—* ಕುರ್ಕುರಿಕಾ ಸಮೂಲವನ್ನು ತಂದು ಚನ್ನಾಗಿಕುಟ್ಟಿ ನೀರುಹಾಕಿ ಕಿವಿಚಿ ಬಟ್ಟೆಯಲ್ಲಿ ಶೋಧಿಸಿಕೊಂಡದ್ದು ಅರಪಾವು ಕುಡಿಸುವುದು. ಇಪ್ಪತ್ತುಸಲ ತಲೆಗೆ ತಣ್ಣೀರು ಹುಯ್ಯುವುದು. ಇದಕ್ಕೆ ಪಥ್ಯ—ಹೆಸರುಬೇಳೆ ಅಕ್ಕಿಸೇರಿಸಿ ಗಂಜಿಮಾಡಿ ಕೊಡುವುದು. ಅನಂತರ ಮೊಸರುಅನ್ನ ತುಪ್ಪ ನೀರುಹಾಕಿ ಕಲಸಿ ಕುಡಿಯುವುದು. ಈರೀತಿ ೩ ದಿನ ಕೊಡುವುದು. ಪಿತ್ಥದಿಂದ ಹುಚ್ಚುಹಿಡಿದಿರುವುದು ಗುಣವಾಗುವುದು.

೩೩. ಶೀತದಿಂದ ತಲೇನೋವು, ಶ್ಲೇಷ್ಮ ಗಟ್ಟಿಯಾಗಿ ಮಂಕಾಗಿ ಇರುವಿಕೆ, ಧನುರ್ವಾಯು ಸರಾ ಎಂಬ ವಾಯುವಿಗೆ:—ಕೊಗಟೆಕಾಯಿ ಒಂದು ತಂದು ರಾತ್ರಿ ತಣ್ಣೀರಿನಲ್ಲಿ ನೆನೆಹಾಕಿ ಬೆಳಿಗ್ಗೆ ಚನ್ನಾಗಿ ಕಿವಚಿ ಬಟ್ಟೆಯಲ್ಲಿ ಶೋಧಿಸಿಕೊಳ್ಳುವುದು. ಈ ನೀರಿನಲ್ಲಿ ೪ ಅಂಗುಲದ ಒಟ್ಟೆ ನೆನೆಯಿಸಿ ಬಿಸಲಿನಲ್ಲಿ ಒಣಗಿಸುವುದು. ಈರೀತಿ ೪-೫ ಸಲ ನೆನೆಯಿಸಿ ಒಣಗಿಸಿಕೊಳ್ಳುವುದು. ಮೊಲೆಹಾಲಿನಲ್ಲಿ ಮೇಲ್ಕಂಡ ಬಟ್ಟೆ ನೆನೆಯಿಸಿ ಮೂಗಿಗೆ ೩ ೪ ತೊಟ್ಟು ೨ ಮೂಗಿಗೂ ಹಾಕುವುದು. ಹೀಗೆ ೨-೩ ದಿನ ಬೆಳಿಗ್ಗೆ ಹೊತ್ತು ಹಾಕಬೇಕು. ಇದರಿಂದ ಶೀತದ ತಲೇನೋವು, ಶ್ಲೇಷ್ಮ ಗಟ್ಟಿಯಾಗಿ ಮಂಕಾಗಿ ಇರುವಿಕೆ, ಧನುರ್ವಾಯು, ಸರಾ ಎಂಬ ವಾಯು ಗುಣವಾಗುವುದು.

೩೪. ಅತಿಮಧುರದಚೂರ್ಣ:—ಲವಂಗ ಕಾಲುತೊಲೆ, ಯಾಲಕ್ಕಿ || ತೊಲೆ, ಹಿಪ್ಪಲಿ ೧ ತೊಲೆ, ತವಕ್ಷೀರ ೨ ತೊಲೆ, ಅತಿಮಧುರ ೪ ತೊಲೆ ಇವ್ರುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ರಾಯಿಪುಡಿ ಸಕ್ಕರೆ ೮ ತೊಲೆ ಹಾಕಿ ಕಲಸಿ ಶಂಖುಭಸ್ಮ ಕಾಲುತೊಲೆ, ಹವಳದಭಸ್ಮ ಕಾಲುತೊಲೆ ಹಾಕಿ ಎಲ್ಲವನ್ನೂ ಶೇರಿಸಿ ಕಲಿಸಿಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಚೂರ್ಣ ಜೇನು ತುಪ್ಪದಲ್ಲಿ ಕಲಿಸಿ ಬೆಳಿಗ್ಯೆ ಸಾಯಂಕಾಲ ೭ ದಿವಸ ಕೊಡಬೇಕು. ಇದಕ್ಕೆ ಪಥ್ಯ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಉಷ್ಣವಾಯು, ಉಷ್ಣದಿಂದ ಹುಟ್ಟಿದ ಕೆಮ್ಮು ಗುಣವಾಗುವುದು.

೩೫. ಅಗಸ್ತ್ಯರ ಕೊಳಂಬು:—ಶುದ್ಧಿಮಾಡಿದ ಕರೇಹಿಂಗು || ತೊಲೆ, ಕಟುಕರೋಹಿಣಿ || ತೊಲೆ, ಸೈಂಧವಲವಣ || ತೊಲೆ, ಶುದ್ಧಿಮಾಡಿದ ಪಾದರಸ || ತೊಲೆ, ಶುದ್ಧಿಮಾಡಿದ ನಾಭಿ || ತೊಲೆ, ಶುದ್ಧಿಮಾಡಿದ ಎಣ್ಣೆ ಬೆಳಗಾರ ಅರಳುಮಾಡಿದ್ದು || ತೊಲೆ, ಶುದ್ಧಿಮಾಡಿದ ಮಣಿಸಿಲೆ || ತೊಲೆ, ಓಮ || ತೊಲೆ, ಶುದ್ಧಿಮಾಡಿದ ತಾಳಕ || ತೊಲೆ, ಕರೇಜೀರಿಗೆ || ತೊಲೆ, ಶುದ್ಧಿಮಾಡಿದ ಜಾಪಾಳ ೪|| ತೊಲೆ, ಹಿಂಗು ಹಸುವಿನತುಪ್ಪದಲ್ಲಿ ಹುರಿದು ಶುದ್ಧಿಮಾಡುವುದು, ಕರೇಜೀರಿಗೆ ಸ್ವಲ್ಪ ಹುರಿಯುವದು, ಕಟುಕರೋಹಿಣಿ ಸ್ವಲ್ಪ

* ಸಂಸ್ಕೃತದಲ್ಲಿ ದೀನಾ, ಕುರ್ಕುರಿಕಾ, ತೆಲುಗು ಕಕ್ಕುಪಾಲ, ಕುಕ್ಕಪಾಲ ಎಂದು

ಹುರಿಯುವದು, ಎಣ್ಣೆ ಬೆಳಗಾರ ಯಮ್ಮೆ ಸಗಣಿಯಲ್ಲಿ ಶುದ್ಧಿಮಾಡಿ ಅರಳು ಮಾಡುವುದು. ಈ ದಿನಸುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿ ಇಟ್ಟು ಕೊಳ್ಳುವುದು. ಶುದ್ಧಿಮಾಡಿದ ಪಾದರಸ, ಶುದ್ಧಿಮಾಡಿದ ಮಣಿಸಿಲೆ, ಶುದ್ಧಿ ಮಾಡಿದ ತಾಳಕ, ಶುದ್ಧಿಮಾಡಿದ ನಾಭಿ ಇವುಗಳನ್ನು ಖಲ್ವದಲ್ಲಿಹಾಕಿ ಚನ್ನಾಗಿ ಅರೆದು ಮೇಲ್ಕಂಡ ಚೂರ್ಣವನ್ನುಹಾಕಿ ಶುದ್ಧಿಮಾಡಿದ ಜಾಪಾಳ ಶೇರಿಸಿ ಚನ್ನಾಗಿ ಅರೆದು ಇಟ್ಟುಕೊಂಡು ಕೆಳಗಿನ ಅನುಪಾನಗಳಲ್ಲಿ ಸೇವಿಸಿದರೆ ಅನೇಕ ರೋಗಗಳು ಗುಣವಾಗುವುದು. ಭೇದೀಗೆ ಅಗಸ್ತ್ಯರ ಕೊಳಂಬು ಮೆಣಸು ಕಾಳಷ್ಟು ಬಾಯಲ್ಲಿಹಾಕಿಕೊಂಡು ಬಿಸಿನೀರು ಕುಡಿಯುವುದು. ಭೇದಿ ಜಾಸ್ತಿ ಆದರೆ ಮಜ್ಜಿಗೆಅನ್ನ ಕೊಡುವುದು. ಇದಕ್ಕೆ ಪತ್ಯ ತೊಗರೀಬೇಳೆ ಸಿಹಿಸಾರು ಅನ್ನ. ಜ್ವರಕ್ಕೆ ಮೆಣಸಿನಕಾಳಿನಷ್ಟು ಕೊಳಂಬು ಶುಂಠಿ ಕಷಾಯದಲ್ಲಿ ಕೊಡು ವುದು, ಕೆಮ್ಮಲಿಗೆ ಅಳಲೇಕಾಯಿ ಗಂಧತೆಗೆದು ಕೊಳಂಬು ಶೇರಿಸಿಕೊಡುವುದು, ಪ್ರತಿಯೊಂದು ಅನುಪಾನದಲ್ಲಿ ಮೆಣಸಿನಕಾಳಷ್ಟು ಅಗಸ್ತ್ಯರ ಕೊಳಂಬು ಶೇರಿಸಿಕೊಡುವುದು, ಪಿತ್ಥಜ್ವರಕ್ಕೆ ಅಳಲೇಕಾಯಿ ಕಷಾಯದಲ್ಲಿ ಕೊಡುವುದು, ಶ್ಲೇಷ್ಮಜ್ವರಕ್ಕೆ ಸಣ್ಣ ಹಿಪ್ಪಲಿ ಕಷಾಯದಲ್ಲಿ ಕೊಡುವುದು, ಛಳಿಜ್ವರಕ್ಕೆ ಶುಂಠಿ ಮೆಣಸು ಕಷಾಯದಲ್ಲಿ ಕೊಡುವುದು, ರಕ್ತಮೂಲಕ್ಕೆ ಹಸುವಿನತುಪ್ಪದಲ್ಲಿ ಕೊಡುವುದು, ಪಾಂಡುವಿಗೆ ಹಸುವಿನಹಾಲಿನಲ್ಲಿ ಕೊಡುವುದು, ಮಹೋದರಕ್ಕೆ ಮೆಣಸು ಚೂರ್ಣ, ಬೆಳ್ಳುಳ್ಳಿಯಲ್ಲಿ ಶೇರಿಸಿ ಕೊಡುವುದು, ಸನ್ನಿಗೆ ಹಸೀ ಶುಂಠೀ ರಸದಲ್ಲಿ ಜೇನುತುಪ್ಪ ಬೆರಸಿಕೊಡುವುದು, ವಾಯುವಿಗೆ ಶುಂಠಿ, ಲಕ್ಕಲಿಸೊಪ್ಪು ಸಹ ಶೇರಿಸಿ ಕಷಾಯಮಾಡಿ ಕೊಡುವುದು, ಉರಿಮೂತ್ರ, ಮೂತ್ರಕೃಚ್ಛ್ರ, ಮೂತ್ರಾಶ್ಮರೀ ಇವುಗಳಿಗೆ ವಿಷಮುದಾರಿ ಸೊಪ್ಪಿನರಸ ಅಥವಾ ಸೂರ್ತಿ ಬೆಳ ಗಾರ ಅರಳುಮಾಡಿದ್ದು, ಮೆಣಸುಚೂರ್ಣ, ಕಲ್ಲುಸಕ್ಕರೆ ಇವುಗಳನ್ನು ಚೂರ್ಣ ಮಾಡಿ ಹಸುವಿನ ತುಪ್ಪದಲ್ಲಿ ಬೆರೆಸಿಕೊಡುವುದು ಅಥವಾ ಎಳೇಸೌತೇಕಾಯಿ ರಸದಲ್ಲಿಯಾದರೂ ಎಳನೀರಿನಲ್ಲಿಯಾದರೂ ಕೊಡುವುದು, ಸನ್ನಿಪಾತ ಜ್ವರಕ್ಕೆ ಬೆಳ್ಳುಳ್ಳಿರಸದಲ್ಲಿಯಾದರೂ ಅಥವಾ ಬೆಳ್ಳುಳ್ಳಿ, ಗಜ್ಜುಗದ ಪಪ್ಪು, ಸುರಸುರಿಕೆ ಸೊಪ್ಪು ಇವುಗಳ ಕಷಾಯದಲ್ಲಿಯಾದರೂ ಕೊಡುವುದು, ಚೇಳು ಕಚ್ಚಿದಕ್ಕೆ ಈರುಳ್ಳಿರಸದಲ್ಲಿ ಹೊಟ್ಟೆಗೆ ಕೊಡುವುದು ಮತ್ತು ಮೇಲೆಯು ಹಚ್ಚುವುದು, ಪಿತ್ಥಕ್ಕೆ ಹಸುವಿನಹಾಲಿನಲ್ಲಿ ಕೊಡುವುದು, ಸನ್ನಿಪಾತಕಕ್ಕೆ ಪಂಚಮೂಲ ಕಷಾಯದಲ್ಲಿ ಕೊಡುವುದು, ಗುಲ್ಮಕ್ಕೆ ಹಸೀಶುಂಠಿರಸದಲ್ಲಿ ಕೊಡುವುದು, ತಾಪ ಜ್ವರಕ್ಕೆ ಬೆಲ್ಲದಲ್ಲಿ ಕೊಡುವುದು, ವಾತಜ್ವರಗಳಿಗೆ ಲಕ್ಕಲಿಸೊಪ್ಪಿನರಸದಲ್ಲಿ ಕೊಡುವುದು, ಹೊಟ್ಟೆಶೂಲೆಗಳಿಗೆ ಬೆಲ್ಲದಲ್ಲಿ ಕೊಡುವುದು, ಸೂತಕವಾಯುವಿಗೆ ಹಸುವಿನವೊಸರಿನಲ್ಲಿ ಕೊಡುವುದು, ಸರ್ವವಿಷಗಳಿಗೆ ವೀಳೆದೆಲೆಯ ರಸದಲ್ಲಿ ಕೊಡುವುದು, ಅಸಾಧ್ಯವಾದ ಜ್ವರಕ್ಕೆ ಜಾಕಾಯಿಚೂರ್ಣದಲ್ಲಿ

ಸನ್ನಿ ಬಾಯಿಗಡೆ ಹಾಕಿಕೊಂಡರೆ ಎಳ್ಳಿನಕಾಳಷ್ಟು ಅಗಸ್ತ್ಯರ ಕೊಳಂಬು ಬೇವಿನ ಎಣ್ಣೆ ಕಲಸಿ ಕಣ್ಣಿಗೆ ಹಚ್ಚುವುದು, ಕಣ್ಣುವುರಿ ಜಾಸ್ತಿಆದರೆ ಬಿಸಿ ಅನ್ನ, ಮೊಸರು, ಶ್ರೀಗಂಧ ಇವು ಮೂರನ್ನು ಕಲಸಿ ಕಣ್ಣಿಗೆ ಕಟ್ಟಲು ಕಣ್ಣಿನ ಬಾಧೆ ಕಡಿಮೆ ಆಗುವುದು.

೩೬. ಕೋಸು ಕೊಳಂಬು ಯೂಸಾನಿ :—ಹಲ್ದಾ, ಕರ್ದಿಲ್, ನಮ್ಮಕೆ ಸೇಂದಾ, ಶುದ್ಧಿಮಾಡಿದ ಹೀರಾಹಿಂಗ್, ಸುವಾಗಾ ಅರಳುಮಾಡಿದ್ದು, ಶುದ್ಧಿ ಮಾಡಿದ ಪಾದರಸ, ಶುದ್ಧಿಮಾಡಿದ ಮಣಿಸಿಲೆ, ಪಿಪ್ಪಿಲಿಯಾ, ಶುದ್ಧಿಮಾಡಿದ ಹಡತಾಳ, ಕುಟ್ಕಿ, ಕರೇಜೀರಿಗೆ, ಶುದ್ಧಿಮಾಡಿದ ವತ್ಸನಾಭಿ, ಶುದ್ಧಿಮಾಡಿದ ಜಾಪಾಳ ಇವು ದಿನಸು ೧ಕ್ಕೆ ೧ ಹುನ್‌ತೂಕ, ತೆಂಗಿನಚಿಪ್ಪು ಸುಟ್ಟದ್ದು ೫ ಹುನ್‌ತೂಕ, ಕೆಂಪು ಕಲ್ಲುಸಕ್ಕರೆ ೫ ಹುನ್‌ತೂಕ ಇವುಗಳೆಲ್ಲವನ್ನೂ ಗರುಗದ ಸೊಪ್ಪಿನ ರಸದಲ್ಲಿ ೩ ಘಂಟೆ ಅರಿಯಬೇಕು. ತೆಂಗಿನಕಾಯಿ ನೀರಾಗಲಿ ಎಳ ನೀರಿನಲ್ಲಿ ಆಗಲಿ ೩ ಘಂಟೆ ಅರಿಯಬೇಕು. ತೊಗರೀಕಾಳಷ್ಟು ಮಾತ್ರೆ ಕಟ್ಟು ವುದು. ಶೀತ ಮತ್ತು ಉಷ್ಣಜ್ವರಕ್ಕೆಮಾತ್ರೆ ಶುಂಠಿ ಕಷಾಯದಲ್ಲಿ ಕೊಡು ವುದು. ಬಾಯಾರಿಕೆಗೆ ಕರೇಮೆಣಸಿನ ಕಷಾಯದಲ್ಲಿ ಕೊಡುವದು. ಪಿತ್ಥಕ್ಕೆ ನಿಂಬೇಹಣ್ಣಿನ ರಸದಲ್ಲಿ ಕೊಡಬೇಕು. ಕುಟ್ ಎಂಬ ರೋಗಕ್ಕೆ ಮೊಲೆಹಾಲಿ ನಲ್ಲಿ ಕೊಡಬೇಕು. ಎಲ್ಲಾತರಹ ವಾಯುವಿಗೆ ಕಸಂದಿರಸದಲ್ಲಿ ಕೊಡಬೇಕು. ಪಿತ್ಥ ಜಾಸ್ತಿಆಗಿ ಎದೆಯಲ್ಲಿ ಉರಿಯುವದಕ್ಕೆ ಹಸುವಿನಹಾಲಿನಲ್ಲಿ ಅರ್ಧತೊಲೆ ಸಕ್ಕರೆ ಶೇರಿಸಿಕೊಡಬೇಕು. ಎಲ್ಲಾ ತರಹ ಬವಾಸೀರ್‌ಗೆ ಹಸುವಿನಹಾಲಿನಲ್ಲಿ ಕೊಡಬೇಕು. ತೊಡೆಬಾಳೆ, ಟಾಕಿ, ಮುಸುಕು, ಭಗಂತರ್, ಮೇಹಕ್ಕೆ, ನಾರೂ ಇವುಗಳಿಗೆ ಈ ಮಾತ್ರೆಯನ್ನು ಯಕ್ಕದ ಹಾಲಿನಲ್ಲಿಕಲಸಿ ಹುಣ್ಣುಗಳಿಗೆ ಹಚ್ಚು ವುದು. ಮೂಗಿನ ಪೀನಸಿಗೆ ಎಕ್ಕದ ಹಾಲಿನಲ್ಲಿ ಈ ಮಾತ್ರೆ ಅರೆದು ಬತ್ತಿಮಾಡಿ ಹೊಗೆ ಕೊಡಬೇಕು. ಹೊಟ್ಟೆನೋವಿಗೆ ಉತ್ತರೇಣಿಕೆ ಸೊಪ್ಪಿನ ರಸದಲ್ಲಿ ಕೊಡ ಬೇಕು. ಹೊಟ್ಟೆಶೂಲೆಗೆ ಷಂಬಾಲೆರಸದಲ್ಲಿ ಕೊಡಬೇಕು. ಇಸ್ತಿಸ್ಕಾಕ್ಕೆ ಮಾತ್ರೆ ತಿನ್ನಿಸಿ ಹರಳೆಣ್ಣೆ ೬ ತೊಲೆ, ನಿಂಬೇಹಣ್ಣಿನ ರಸ ೬ ತೊಲೆ ಶೇರಿಸಿ ಕುಡಿಸಬೇಕು. ಪಥ್ಯ ಸ್ವಬುದ್ಧಿಯಿಂದ ನೋಡಿ ಇಡುವುದು.

೩೭. ಗುಂಡಿಗೆಶೂಲೆ, ಬಟ್ಟೆಶೂಲೆಗೆ :—ಹಣ್ಣುಎಕ್ಕದ ಎಲೆ ನೂರು ತಂದು ಒಂದು ಮಡಿಕೆಯಲ್ಲಿ ೫೦ ಯಲೆ ಹರಡಿ ಅದರಮೇಲೆ ಶುದ್ಧಿಮಾಡಿದ ಹಿಂಗು ೧| ತೊಲೆ, ಬಜೆ ೧|| ತೊಲೆಹಾಕಿ ಅದರಮೇಲೆ ೫೦ ಎಕ್ಕದ ಹಣ್ಣೆಲೆ ಹಾಕಿ ಮೇಲೆ ಮುಚ್ಚಳಮುಚ್ಚಿ ಕೆಮ್ಮಣ್ಣುಬಟ್ಟೆ ಸೀಲುಮಾಡಿ ಒಲೆಯ ಮೇಲಿಟ್ಟು ಎರಡುಜಾವ ಉರಿಹಾಕಿ ಒಳಗಿರುವ ಕರುಕನ್ನು ತೆಗೆದುಕೊಳ್ಳು ವುದು. ಹಿಪ್ಪಲಿ ೧|| ತೊಲೆ, ಶುಂಠಿ ೧|| ತೊಲೆ, ಮೆಣಸು ೧|| ತೊಲೆ, ಪಂಚ ಕೊಲೆ, ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಂಡು

ಮೇಲ್ಕಂಡೆ ಕರುಕು ಖಲ್ವದಲ್ಲಿಹಾಕಿ ಹಸೀ ಶುಂಠೀ ರಸದಲ್ಲಿ ಅರೆದು ಕಡಲೇ ಪ್ರಮಾಣ ಮಾತ್ರೆ ಮಾಡುವುದು. ಮೊದಲು ಹೊಟ್ಟುಸುಲಿದ ಬೆಳ್ಳುಳ್ಳಿ ಗಜ್ಜೀ ಕಾಯಿಗಾತ್ರ ಅರೆದು ಹಸುವಿನ ತುಪ್ಪದಲ್ಲಿಟ್ಟುಕೊಡುವುದು. ಅನಂತರ ಹಸೀ ಶುಂಠೀ ರಸದಲ್ಲಾಗಲಿ ಅಥವಾ ಹಿಪ್ಪಲಿ ಚೂರ್ಣದಲ್ಲಾಗಲಿ ಮಾತ್ರೆಯನ್ನು ಕೊಡುವುದು. ಇದಕ್ಕೆ ಪಥ್ಯ—ಹಸುವಿನತುಪ್ಪ ಅನ್ನಕೊಡುವುದು. ಮಾತ್ರೆ ಯನ್ನು ಬೆಳಿಗ್ಗೆಹೊತ್ತು ೫ ದಿನ ಕೊಡಬೇಕು. ಇದರಿಂದ ಗುಂಡಿಗೆಶೂಲೆ, ಬಟ್ಟೆಶೂಲೆ ಗುಣವಾಗುವುದು.

೩೮. ಗುಂಡಿಗೆ ಶೂಲೆಗೆ :—ಅರಳೀಬೀಜ ೧ ತೊಲೆ, ಹತ್ತಿಬೀಜ ೧ ಪಾವು ತಂದು ನೀರುಹಾಕಿ ರುಬ್ಬಿ ರಸತೆಗೆದುಕೊಳ್ಳುವುದು. ಹಸುವಿನಹಾಲು ೧ ಪಾವು, ಸಕ್ಕರೆ ೩ ತೊಲೆ, ಹಸುವಿನತುಪ್ಪ ೩ ತೊಲೆ, ಯಾಲಕ್ಕಿ ೧ ತೊಲೆ ಇವುಗಳೆಲ್ಲ ವನ್ನು ಕೀರುಮಾಡಿದಂತೆ ಕಾಯಿಸಿ ಮಧ್ಯಾಹ್ನಮಾಡಿದ್ದು ರಾತ್ರಿವೂಟಮಾಡಿ ದರೆ ಗುಂಡಿಗೆಶೂಲೆ ಗುಣವಾಗುವುದು.

೩೯. ಹತ್ತಿಬೀಜ ತಂದು ತಣ್ಣೀರಿನಲ್ಲಿ ನೆನೆಯಿಸಿ ಒರಳಲ್ಲಿಹಾಕಿ ರುಬ್ಬಿ ಶೋಧಿಸಿದಹಾಲು ೧ ಸೊಲಿಗೆ, ಹಸುವಿನಹಾಲು ೧ ಸೊಲಿಗೆ, ತೆಂಗಿನಕಾಯಿ ಹಾಲು ೧ ಸೊಲಿಗೆ, ಸಕ್ಕರೆ ೩ ತೊಲೆ, ಅಕ್ಕಿ ೩ ತೊಲೆ, ಯಾಲಕ್ಕಿಚೂರ್ಣ ೧ ತೊಲೆ ಇವುಗಳನ್ನು ಒಂದು ಮಡಿಕೆಯಲ್ಲಿ ಹಾಕಿ ಒಲೆಯಮೇಲಿಟ್ಟು ಕಾಯಿಸಿ ಕೀರಿನಂತೆ ಮಾಡಿ ರಾತ್ರಿ ಕುಡಿದರೆ ಎದೆಶೂಲೆ ಗುಣವಾಗುವುದು.

೪೦. ಪಶ್ಚಿಮಕ್ಕೆ ಹರಿದ ಉಪ್ಪೇಗಿಡದ ಬೇರಿಗೆ ಧೂಪದೀಪನೈವೇದ್ಯ ಮಾಡಿ ಅಗೆದುತಂದು ನೆಲ್ಲೀಕಾಯಿ ಪ್ರಮಾಣ ಹಸುವಿನಹಾಲು ಹಸೀದರಲ್ಲಿ ಕಲಿಸಿಕೊಡಲು ಗುಂಡಿಗೆಶೂಲೆ ಗುಣವಾಗುವುದು.

೪೧. ಮೇಹ ಗಡ್ಡೆಗೆ:—ಶುದ್ಧಿಮಾಡಿದ ಪರಂಗಿಚಕ್ಕೆ ೧॥ ಶೇರು, ಹಾವು ತೊಂಡೇ ಗಡ್ಡೆ ೧॥ಶೇರು, ಕಾಡುಕುಂಬಳಗಡ್ಡೆ ೧॥ಶೇರು, ಶುದ್ಧಿಮಾಡಿದ ಅಶ್ವ ಗಂಧಿ ೧॥ ಶೇರು, ಬಂದರೀಗಿಡದ ಸಮೂಲ ೧ ಪಾವು ಇವು ಕುಟ್ಟಿ ಚೂರ್ಣಮಾಡಿ ಶೋಧಿಸಿ ಖಲ್ವದಲ್ಲಿ ಹಾಕಿ ಗೋರೋಜನ ಕಾಲುತೊಲೆ, ಹಾಕಿ ಕರೇಲಕ್ಕಲಿ ಸೊಪ್ಪಿನ ರಸದಲ್ಲಿ ೧ ದಿನ ಭಾವನೆ, ಹೊಮ್ಮುಗಳಿಸೊಪ್ಪಿನ ರಸದಲ್ಲಿ ೧ ದಿನ ಭಾವನೆ, ವಂದೆಲಗದಸೊಪ್ಪಿನ ರಸದಲ್ಲಿ ೧ ದಿನ ಭಾವನೆ, ಗರುಗದಸೊಪ್ಪಿನ ರಸ ದಲ್ಲಿ ೧ ದಿನ ಭಾವನೆ, ಗಾಂಧಾರಿಸೊಪ್ಪಿನ ರಸದಲ್ಲಿ ೧ ದಿನ ಭಾವನೆಮಾಡಿ ಬಿಸಲಿ ನಲ್ಲಿ ಒಣಗಿಸಿ ಕುಟ್ಟಿ ಚೂರ್ಣಮಾಡಿ ಶೋಧಿಸಿಕೊಳ್ಳುವುದು. ಹೊತ್ತಿಗೆ ಕಾಲು ತೊಲೆ ಚೂರ್ಣ ಬಾಯಿಯಲ್ಲಿ ಹಾಕಿಕೊಂಡು ಬಿಸಿನೀರು ಕುಡಿಯುವುದು. ಹೀಗೆ ಬೆಳಿಗ್ಗೆ ಸಾಯಂಕಾಲ ೨ ಹೊತ್ತು ೭-೧೪ ದಿನ ಕೊಡಬೇಕು. ಇದಕೆ ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ಮೇಹಗಡ್ಡೆ ಗುಣವಾ

೪೨. ಶುಂಠಿ ೨ ತೊಲೆ, ಹಿಪ್ಪಲಿ ೨ ತೊಲೆ, ಮೆಣಸು ೨ ತೊಲೆ, ಯವ ಕ್ಷಾರ ೧ ತೊಲೆ, ಸಜ್ಜಕ್ಷಾರ ೧ ತೊಲೆ, ಸೈಂಧವಲವಣ ೧ ತೊಲೆ, ಗಾಜು ಲವಣ ೧ ತೊಲೆ, ಬಿಡಾಲವಣ ೧ ತೊಲೆ, ಬಿಳೀಜೀರಿಗೆ ೨ ತೊಲೆ, ಕರೇ ಜೀರಿಗೆ ೨ ತೊಲೆ, ಅಜಾಮೋದ ೧ ತೊಲೆ, ಮೋಡಿ ೧ ತೊಲೆ, ಕರ್ಕಾಟಕ ಶೃಂಗಿ ೧ ತೊಲೆ, ಅಳಲೇಕಾಯಿಸಿಪ್ಪೆ ೨ ತೊಲೆ, ಓಮ ೧ ತೊಲೆ, ಶುದ್ಧಿ ಮಾಡಿದ ಹಿಂಗು ಕಾಲುತೊಲೆ ಇವುಗಳನ್ನು ಕುಟ್ಟಿ ಚೂರ್ಣಮಾಡಿ ಶೋಧಿ ಸಿಟ್ಟುಕೊಳ್ಳುವುದು. ಹೊತ್ತಿಗೆ ಕಾಲುತೊಲೆ ಚೂರ್ಣ ಬಿಸಿನೀರಿನಲ್ಲಿ ಬೆಳಗ್ಗೆ ಸಾಯಂಕಾಲ ೭-೧೪ ದಿನ ಕೊಡಬೇಕು. ಇದಕ್ಕೆ ಪಥ್ಯ. ತೊಗರೀಬೇಳೆ ಸಿಹಿಸಾರು ಅನ್ನ. ಇದರಿಂದ ವಾತ, ಗುಲ್ಮ, ಶ್ಲೇಷ್ಮ, ಜ್ವರದ ಗಡ್ಡೆ, ಮೇಹದ ಗಡ್ಡೆ ಗುಣವಾಗುವುದು.

೪೩. ಮೇಹಗಡ್ಡೆ ಕರಗುವುದಕ್ಕೆ :—ಹೊಟ್ಟುತೆಗೆದ ಬೆಳ್ಳುಳ್ಳಿ, ಮೆಣಸು ಚೂರ್ಣಮಾಡಿದ್ದು ಇವು ಎರಡು ಸಮಭಾಗ ತಂದು ಖಲ್ವದಲ್ಲಿ ಹಾಕಿ ದತ್ತೂರಿ ಸೊಪ್ಪಿನ ರಸ ಹಾಕಿ ಚೆನ್ನಾಗಿ ಅರೆದು ಗಡ್ಡೆಗಳಿಗೆ ಕಟ್ಟುವುದು. ಈರೀತಿ ಮೂರಾವರ್ತಿ ಕಟ್ಟಿದರೆ ಗಡ್ಡೆ ಕರಗುವುದು.

೪೪. ಜಲಮಲ ಕಟ್ಟಿದ್ದಕ್ಕೆ :—ಆನೇನೆಗ್ಗಿಲು ಸಮೂಲ, ಬಿಳೀಜೀರಿಗೆ, ಯಾಲಕ್ಕಿ ಇವುಗಳನ್ನು ಸಮಭಾಗ ತಂದು ತಣ್ಣೀರಿನಿಂದ ಅರೆದು ಬಟ್ಟೆಯಲ್ಲಿ ಶೋಧಿಸಿಕೊಂಡು ಸಕ್ಕರೆ ಹಾಕಿ ಕಲಸಿಕೊಟ್ಟರೆ ಮೂತ್ರ ಸರಾಗವಾಗಿ ಆಗು ವುದು.

೪೫. ಒಂದು ನಿಂಬೇಹಣ್ಣು ತಂದು ಅದರಲ್ಲಿರುವ ಬೀಜಗಳನ್ನು ತೆಗೆದು ಹಾಕಿ ಪೆಟ್ಲುಪ್ಪು ಕಾಲುತೊಲೆ, ಕಲ್ಲುಸಕ್ಕರೆ ॥ ತೊಲೆ ಹಾಕಿ ಬೆಂಕಿಯ ಮೇಲಿಟ್ಟು ಕಾಯಿಸಿ ತಣ್ಣಗೆ ಆದಮೇಲೆ ನಿಂಬೇಹಣ್ಣಿನಲ್ಲಿರುವ ಔಷಧವನ್ನು ತಿಂದು ಸಿಪ್ಪೆ ಬಿಸಾಡುವುದು. ಇದರಿಂದ ಜಲಮಲ ಸರಾಗವಾಗಿ ಆಗುವುದು.

೪೬. ಒಳ್ಳೇಸೋರೇಕಾಯಿ ತಂದು ಕುಟ್ಟಿ ಶೋಧಿಸಿದ ರಸ ಅರಪಾವು ಬಿಳೀಜೀರಿಗೆ ಚೂರ್ಣ ॥ ತೊಲೆ, ಸಕ್ಕರೆ ॥ ತೊಲೆ ಇವು ಮೂರನ್ನೂ ಕಲಸಿ ಕುಡಿಯಲು ಜಲಮಲ ಸರಾಗವಾಗಿ ಆಗುವುದು.

೪೭. ಕೊತ್ತುಂಬರಿಬೀಜ ಕಾಲುತೊಲೆ ಅಗೆದು ತಿನ್ನುವುದು. ಈರೀತಿ ೩ ದಿನ ಮಾಡುವುದು. ಇದರಿಂದ ಕೆಮ್ಮಿದ್ದರೆ ರಕ್ತಬೀಳುವುದು, ಕ್ಯಾಕರಿಸಿದರೆ ರಕ್ತಬೀಳುವುದು ಗುಣವಾಗುವುದು.

೪೮. ಪೆಟ್ಟಿನ ನೋವಿಗೆ:—ಒಳ್ಳೆಣ್ಣೆ ೧ ಶೇರು ಕಬ್ಬಿಣದ ಕಡಾಯಿನಲ್ಲಿ ಹಾಕಿ ಒಲೆಯಮೇಲಿಟ್ಟು ಕಾಯಿಸುತ್ತಿರುವಾಗ್ಗೆ ತೊಟ್ಲುಸೊಪ್ಪು ಒಂದು ಹಿಡಿ ತಂದು ಎಣ್ಣೆಯಲ್ಲಿ ಸ್ವಲ್ಪಸ್ವಲ್ಪ ಸೊಪ್ಪು ಹಾಕಿ ಕಾಯಿಸಿ ಈಚೆಗೆ ತೆಗೆದು ವುದು. ಇದೇಮೇರಿಗೆ ಸೊಪ್ಪೆಲ್ಲಾ ಕೆಂಪಗೆ ಕಾಯಿಸಿ ತೆಗೆದು ಎಣ್ಣೆ

ಯನ್ನು ಎತ್ತಿಟ್ಟುಕೊಳ್ಳುವುದು. ಪ್ರಯೋಗ ದಿನ ೧ಕ್ಕೆ ೩ ಸಲ ಹಚ್ಚಬೇಕು. ಅಥವಾ ಎಣ್ಣೆಯನ್ನು ಬಟ್ಟೆಗೆ ಹಚ್ಚಿಸಿ ನೋವಿರುವಸ್ಥಳಕ್ಕೆ ಸುತ್ತಬೇಕು. ಇದರಿಂದ ಪೆಟ್ಟುತಗಲಿದ ನೋವು, ಮೂಳೆ ಮುರಿದುಹೋಗಿರುವುದು, ಕತ್ತಿ ಘಾಯ, ಹೊಸನೋವೇ ಆಗಲಿ ಅಥವಾ ಹಳೇನೋವೇ ಆಗಲಿ ಹಚ್ಚುತ್ತಾ ಬಂದರೆ ಗುಣವಾಗುವುದು.

೪೯. ಎತ್ತರವುಳ್ಳ ಸ್ಥಳಗಳಿಂದಾಗಲಿ, ಎಡವಿಯಾಗಲಿ ಬಿದ್ದು ಕೈಕಾಲು ಕಟ್ಟಿಕೊಂಡಿರುವವರಿಗೆ:—ಕಾಡುನುಗ್ಗೇಸೊಪ್ಪನ್ನು ತಂದು ಕುಟ್ಟಿ ರಕ್ತ ಕಟ್ಟಿರುವ ಸ್ಥಳಕ್ಕೆ ಬಿಲ್ಲೇಮಾಡಿ ಕಟ್ಟುವುದು. ಬಿಸಿನೀರನ್ನು ಒಂದು ಪಾತ್ರೆಯಲ್ಲಿ ಹಾಕಿ ಅದರಲ್ಲಿ ರಕ್ತಕಟ್ಟಿರುವ ಭಾಗವನ್ನು ಇಟ್ಟುಕೊಳ್ಳುವುದು. ನೀರೆಲ್ಲಾ ರಕ್ತವರ್ಣವಾಗುವುದು. ಉರಿಯಾಗ... ...ೀ ತೆಗೆದು ಬಿಚ್ಚಿಹಾಕುವುದು. ನೋವು ಕಟ್ಟಿರುವುದು ಸಹ ಗುಣವಾಗುವು... .

೫೦. ಮೂಳೆ ಮುರಿದದ್ದಕ್ಕೆ ಚಿಕಿತ್ಸೆ:—ವೈದಾಲಕಡಿ, ವಾಯುವಿಳಂಗ; ದಾಲ್‌ಚಿನ್ನಿ ಇವು ಮೂರನ್ನೂ ಕುಟ್ಟಿ ಶೋಧಿಸಿ ಕೋಳೀಮೊಟ್ಟೆ ಬಿಳೇಜ... ಯಿಂದ ಅರೆದು ಬಟ್ಟೆಗೆ ಸವರಿ ಮುರಿದಿರುವಸ್ಥಳಕ್ಕೆ ತಕ್ಕ ದೆಬ್ಬೆಗಳನ್ನು ಇಟ್ಟು ಬಟ್ಟೆಯಿಂದ, ಕಟ್ಟಿ ಗುಣವಾಗುವವರಿವಿಗೂ ಬಿಚ್ಚಬಾರದು. ಮೂಳೆ ಸರಿಯಾಗುತ್ತೆ.

೫೧ ಬೆಪ್ಪಾಲೆಚಕ್ಕೆ ತಿಗಡು ಮೇಕೇಹಾಲ್ಲಿನಲ್ಲಿ ಅರೆದು ಬಟ್ಟೆಗೆ ಸವರಿ ಮುರಿದಿರುವಸ್ಥಳಕ್ಕೆ ಸುತ್ತಿ ದೆಬ್ಬೆಗಳನ್ನು ಕಟ್ಟುವುದು. ಮೂರುದಿನ... ಮೇಲೆ ತೆಗೆಯುವುದು. ಇನ್ನೊಂದುಸಲ ಕಟ್ಟಿದರೆ ಪುನಃ ಬಿಚ್ಚಬೇಕಾ... ಲೀ ಲಿಗೆ ವಾಸಿಯಾಗುವುದು.

೫೨. ಪೆಟ್ಟುತಗಲಿದ ನೋವಿಗೆ:—ಮೊಸರನ್ನು ಬಟ್ಟೆಯಲ್ಲಿ ನೇತಾಡಗ... ಕಲ ನೀರೆಲ್ಲಾ ಸೋರಿಹೋದದ್ದು ದಿಂಡು, ಸುಣ್ಣ ಇವೆರಡನ್ನೂ ನುಣ್ಣಗೆ ಅರೆದು ನೋವಿರುವಸ್ಥಳದಲ್ಲಿ ಪಟ್ಟುಹಾಕುವುದು ನೋವು ನಿಲ್ಲುವುದು.

೫೩. ರಾಗಿ ಬೇಯಿಸಿ ಕರುಕುಮಾಡಿ, ಓಮವನ್ನು ಕರುಕುಮಾಡಿ... ಉಪ್ಪನ್ನುಹಾಕಿ ಗಂಜಿಯ ತಿಳಿಯನ್ನುಬಿಟ್ಟುಕೊಂಡು ಅರೆದು ಪಟ್ಟುಹಾಕುವುದು. ನೋವು ಗುಣವಾಗುವುದು.

೫೪. ರಕ್ತಗಡ್ಡೆ ಕಟ್ಟಿರುವ ನೋವಿಗೆ:—ಮಹಿಸಾಕ್ಷಿಗುಗ್ಗುಳ ೫ ತೊಲೆ, ಸಾಂಬ್ರಾಣಿ ೧ ತೊಲೆ, ಬಿಳೇಕಾಚು ೧ ತೊಲೆ, ಮಾಯಿಪಾಳದಕಾಯಿ ೧ ತೊಲೆ ಮೇಣ ೫ ತೊಲೆ, ದಾಚಿನಪುಡಿ ೧ ತೊಲೆ, ಮುಸಾಂಬರ ೧ ತೊಲೆ, ಈ ದಿನಸುಗಳಲ್ಲಿ ಮಹಿಸಾಕ್ಷಿಗುಗ್ಗುಳ ಮತ್ತು ಮೇಣ ಇವೆರಡನ್ನೂ ಕಬ್ಬಿಣದ ಸೌಟಿನಲ್ಲಿ ಹಾಕಿ ಬೆಂಕಿಯಮೇಲಿಟ್ಟು ಕರಗಿಸಿ ನಂತರ ಬಾಕಿ ದಿನಸುಗಳೆಲ್ಲವನ್ನೂ ಕುಟ್ಟಿ ಶೋಧಿಸಿ ನಿಂಬೇಹಣ್ಣಿನ ರಸದಿಂದ ಅರೆದು ಮೇಲ್ಕಂಡ ಔಷಧ ಕಬಿ

ಭ್ರಮಣೆ, ಅನ್ನ ಆರೋಗ್ಯವಾಗದೆ ಇರುವುದು. ಕಾಲು ಬಳಲಿಕೆ, ವಾಂತಿ ಗುಣ ವಾಗುವುದು.

೯೩. ಲವಂಗಾದಿ ಸಪ್ತೆ ಔಷಧ:—ಲವಂಗ ೧ ಹಿಡಿ, ಗಜ್ಜುಗದಸೊಪ್ಪು ೧ ಹಿಡಿ, ಕರೇಮೇಕೇಹಿಕ್ಕೆ ೭ ಇವುಗಳನ್ನು ಕರೇಮೇಕೆ ಮೂತ್ರದಲ್ಲಿ ಅರೆದು ೧೪ ಮಾತ್ರೆಯನ್ನು ಮಾಡುವುದು. ಬೆಳಿಗ್ಗೆ ೧ ಮಾತ್ರೆ, ಸಾಯಂಕಾಲ ೧ ಮಾತ್ರೆ ಜೇನುತುಪ್ಪದಲ್ಲಿ ಕಲಸಿ ೭ ದಿವಸ ಕೊಡುವುದು. ಇದಕ್ಕೆ ಪಥ್ಯ. ಹಸುವಿನಹಾಲು ಅನ್ನ. ಇದರಿಂದ ಕ್ಷಯ, ಕಾಮಾಲೆ, ಶೋಭೆ ಗುಣವಾಗು ವುದು.

೯೪. ಕಫದೋಷವು ಹೆಚ್ಚಿದ್ದಾಗ ವಮನಕ್ಕೆ:— ಹಿಪ್ಪಲಿ, ಮಗ್ಗಾರೆ ಕಾಯಿ, ಸೈಂಧವಲವಣ ಇವನ್ನು ಬಿಸಿನೀರಿನೊಡನೆ ಸೇರಿಸಿ ಕುಡಿಯಬೇಕು.

೯೫. ಪಿತ್ಥವು ಹೆಚ್ಚಿದ್ದಾಗ ವಮನಕ್ಕೆ:—ಕಹಿಪಡವಲ, ಆಡುಸೋಗೆ, ಬೇವು ಇವುಗಳನ್ನು ತಣ್ಣೀರಿನೊಡನೆ ಕುಡಿಯಬೇಕು.

೯೬. ಶ್ಲೇಷ್ಮದೊಡನೆ ಕೂಡಿದ ವಾತವಿಕಾರದಲ್ಲಿ ವಮನಕ್ಕೆ:—ಮಗ್ಗಾ ರೆಯನ್ನು ಹಾಲಿನೊಡನೆ ಕುಡಿಯಬೇಕು.

೯೭. ಅಜೀರ್ಣದಲ್ಲಿ ವಮನ :—ಸೈಂಧವಲವಣವನ್ನು ಬಿಸಿನೀರಿ ನಾಕಿ ಕುಡಿಯಬೇಕು.

೯೮. ಆಮ್ಲಪಿತ್ಥರೋಗದಲ್ಲಿ ವಮನಕ್ಕೆ:—ಕಹಿಪಡವಲ, ಬೇವು ಶೀತಕಷಾಯವು ಉತ್ತಮವಾದುದು. ಸೈಂಧವಲವಣವನ್ನು ತು ಸಿ ನೆಕ್ಕಿಕೊಂಡರೆ ಸುಖವಾಗಿ ವಮನವಾಗುವುದು.

ಕಂ॥ ಶ್ರೀ ವೇಂಕಟೇಶ ಕೃಪೆಯಿಂ।
ಭಾವಿಸಿ ರಚಿಸಿರ್ಪ ನೆಸೆವ ಕನ್ನಡನುಡಿಯಿಂ॥
ಗೋವಿಂದರಾಜ ನೀ ಶುಭ।
ಮಾವನು ಭವವೈದ್ಯರತ್ನ ಮೆನಿಸಿಹ ಕೃತಿಯಂ॥

**ಸಂಪೂರ್ಣವು.**

